# ॥ ॐ ॥

॥ ಓಂ ಶ್ರೀಃ ಓಂ ॥

# ಶ್ರೀಮದ್ಭಗವದ್ಗೀತಾ.

## ಗೀತಾಭಾಷ್ಯ—ಗೀತಾತಾತ್ಪರ್ಯಸಹಿತಾ.

ಲಕ್ಷ್ಮೀನಾರಾಯಣಂ ನತ್ವಾ ಪೂರ್ಣಬೋಧಾನ್ ಗುರೂನಪಿ ।
ಕುರ್ಮಃ ಶ್ರೀಕೃಷ್ಣಗೀತಾಯಾ ಭಾಷ್ಯಾದ್ಯುಕ್ತಾರ್ಥಸಂಗ್ರಹಂ ॥ ೧ ॥
ಗುಣಗಣನಿಲಯಂ ಪತಿಂ ರಮಾಯಾಃ
ಜಗದಘದಹನಂ ಚ ವಾಸವೀಸೂನುಂ ।
ಮುನಿಕುಲತಿಲಕಂ ಚ ಪೂರ್ಣಬೋಧಂ
ಗುರುಮಪಿ ಪರಮಂ ಗುರುಂ ಚ [illegible] ವಂದೇ ॥ ೨ ।
ಆನಂದತೀರ್ಥಭಗವತ್ಪಾದಾಚಾರ್ಯವಿನಿರ್ಮಿತಂ ।
ವ್ಯಾಖ್ಯಾಸ್ಯೇ ಭಗವದ್ಗೀತಾಭಾಷ್ಯಂ ತತ್ಕರುಣಾಬಲಾತ್ ॥ ೩ ॥
ಇಂದಿರಾವದನಾಂಭೋಜರಾಜಹಂಸಾಯ ವಿಷ್ಣವೇ ।
ಅಮಂದಾನಂದಸಂದೋಹಸುಂದರಾಕೃತಯೇ ನಮಃ ॥ ೪ ॥
ಧರ್ಮವಿಜ್ಞಾನವೈರಾಗ್ಯಪರಮೈಶ್ವರ್ಯಶಾಲಿನಃ ।
ಆನಂದತೀರ್ಥಭಗವತ್ಪಾದಾನ್ವಂದೇ ನಿರಂತರಂ ॥ ೫ ॥
ಪ್ರಣಮ್ಯ ಚರಣದ್ವಂದ್ವಂ ಗುರೂಣಾಂ ತತ್ಕೃಪಾಬಲಾತ್ ।
ವ್ಯಾಕರಿಷ್ಯೇ ಯಥಾಬೋಧಂ ಗೀತಾತಾತ್ಪರ್ಯನಿರ್ಣಯಂ ॥ ೬ ॥
ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇ (ಭಾರತ) ॥ ೭ ॥

ಶ್ರೀಕೃಷ್ಣಮಾನಮ್ಯ ಸುಮಧ್ವಪೂರ್ವಗುರೂಂಶ್ಚ ನಾರಾಯಣತಂತ್ರಿಶರ್ಮಾ ।
ಸಭಾಷ್ಯತಾತ್ಪರ್ಯಲಸತ್ಸುಗೀತಾಕರ್ನಾಟಟೀಕಾಂ ಲಲಿತಾಂ ತನೋಮಿ ॥ ೮ ॥

ಶ್ರೀಮದ್ವಸುಮದ್ವೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

ಗೀತಾಭಾಷ್ಯ ॥ ಓಂ ॥ ದೇವಂ ನಾರಾಯಣಂ ನತ್ವಾ ಸರ್ವದೋಷವಿವರ್ಜಿತಂ ।
ಪರಿಪೂರ್ಣಂ ಗುರೂಂಶ್ಚಾನ್ ಗೀತಾರ್ಥಂ ವಕ್ಷ್ಯಾಮಿ ಲೇಶತಃ ॥ ೧ ॥

**ಅರ್ಥ** ॥ ವಿಶೇಷವಾಗಿ ಸರ್ವಥಾ ಅಜ್ಞಾನವೊದಲಾದ ಯಾವ ದೋಷಗಳೂ ಇಲ್ಲದವನೂ, ಸರ್ವ
ದೇಶಗಳಲ್ಲಿ ವ್ಯಾಪಿಸಿಕೊಂಡಿರುವವನೂ, ಸರ್ವಕಾಲಗಳಲ್ಲಿರುವವನೂ, ಸರ್ವ ಗುಣಪರಿಪೂರ್ಣನೂ, ಭಗ

ದ್ಗೀತಾಪ್ರತಿಪಾದ್ಯನೂ ಆದ ಶ್ರೀ ನಾರಾಯಣನನ್ನೂ, ಗುರುಗಳಾದ ಶ್ರೀ ವೇದವ್ಯಾಸರನ್ನೂ ಭಕ್ತಿ ಪೂರ್ವಕವಾಗಿ ನಮಸ್ಕರಿಸಿ ಭಗವದ್ಗೀತೆಯ ಮುಖ್ಯಾರ್ಥಗಳಲ್ಲಿ ಕೆಲವರ್ಥವನ್ನೇ ಹೇಳುತ್ತೇನೆ

**ವಿಶೇಷಾಂಶ** ॥ (1) ಶ್ರೀಮದಾಚಾರ್ಯರು ಸದಾಚಾರವನ್ನು ತಿಳಿಸುವುದಕ್ಕಾಗಿ ಗ್ರಂಥಾರಂಭದಲ್ಲಿ ನಮಸ್ಕಾರರೂಪ ಮಂಗಲವನ್ನು ಮಾಡಿರುವರು (2) "ಅ, ಆ, ಅಂ, ಅಃ ಪುರಾಣರ್ಷಿಃ ವ್ಯಾಸಶ್ಯಾಖಾ ಸಹಸ್ರಕೃತ್" ಎಂಬ ವಾಸುದೇವಸಹಸ್ರನಾಮ ಪ್ರಮಾಣದಿಂದ ಆನ್ ಎಂಬುದಕ್ಕೆ ವೇದವ್ಯಾಸರನ್ನು ಎಂದರ್ಥವು (3) ಯದ್ಯಪಿ **ದಶಾರ್ಥಾಸ್ಸರ್ವಭಾರತೇ** ಎಂಬ ಪ್ರಮಾಣದ್ದಿಂದ ಭಾರತಕ್ಕೆ ಅನೇಕಾರ್ಥ ಗಳಿವೆ ಭಾರತದ ಸಾರಭೂತವಾದ ಗೀತೆಗೆ ಅದಕ್ಕಿಂತಲೂ ಹೆಚ್ಚು ಅರ್ಥಗಳಿವೆ ಅಷ್ಟು ಅರ್ಥಗಳನ್ನು ಹೇಳಲಿಕ್ಕೆ ನಾನು ಶಕ್ತನಾಗಿದ್ದರೂ ಶ್ರೋತೃಗಳ ಬುದ್ಧಿಯನ್ನನುಸರಿಸಿ ಕೆಲವರ್ಥವನ್ನೇ ಹೇಳುತ್ತೇನೆಂಬ ಅಭಿಪ್ರಾಯದಿಂದ **ಲೇಶತಃ** ಎಂದು ಹೇಳಿರುವರು ॥ ೧ ॥

**ಗೀತಾತಾತ್ಪರ್ಯ** ॥ **ಸಮಸ್ತಗುಣಸಂಪೂರ್ಣಂ ಸರ್ವದೋಷವಿವರ್ಜಿತಂ ।**
**ನಾರಾಯಣಂ ನಮಸ್ಕೃತ್ಯ ಗೀತಾತಾತ್ಪರ್ಯಮುಚ್ಯತೇ ॥ ೧ ॥**

**ಅ** ॥ ಎಲ್ಲಾ ಗುಣಗಳಿಂದ ಪರಿಪೂರ್ಣನೂ, ಯಾವ ದೋಷಗಳಿಲ್ಲದವನೂ ಆದ ಶ್ರೀ ನಾರಾಯಣ ನನ್ನು ನಮಸ್ಕರಿಸಿ ಗೀತಾತಾತ್ಪರ್ಯವನ್ನು ಹೇಳುತ್ತೇನೆ

ವಿ ॥ (1) ಸರ್ವಪುರುಷಾರ್ಥಗಳಿಗೆ ಕಾರಣವಾದ ಶ್ರೀಮದ್ಭಗವದ್ಗೀತೆಗೆ ಇತರರು ಸ್ವೇಚ್ಛಾನುಸಾರ ಅರ್ಥ ಹೇಳಿದ ಕಾರಣ ಶ್ರೀಮದಾಚಾರ್ಯರು ಯೋಗ್ಯವಾದ ಅರ್ಥವನ್ನು ಹೇಳಲಿಚ್ಛಿಸುತ್ತಾ ತನಗೆ ವಿಘ್ನಗಳಿಲ್ಲದಿದ್ದರೂ ಆದಿಯಲ್ಲಿ ಮಂಗಲಾಚರಣ ಮಾಡುವುದಾವಶ್ಯಕವೆಂದು ಶಿಷ್ಯರಿಗೆ ತಿಳಿಸುವುದ ಕ್ಕಾಗಿ ಮಂಗಲಾಚರಣೆ ಮಾಡಿರುತ್ತಾರೆ (2) ಸರ್ವೋತ್ತಮನಾದ ಶ್ರೀ ನಾರಾಯಣನಿಗೇನೇ ಅಭೀಷ್ಟ ಗಳನ್ನು ಕೊಡತಕ್ಕ ಸಾಮರ್ಥ್ಯವಿರುವುದು ಆದಕಾರಣ ಶ್ರೀ ನಾರಾಯಣನಿಗೇನೇ ನಮಸ್ಕರಿಸಿದುದು ಯುಕ್ತವು. (3) ಭಗವಂತನಲ್ಲಿ ಪ್ರತಿಗುಣಗಳೂ ಪೂರ್ಣಗಳೆಂದು ತಿಳಿಸುವುದಕ್ಕಾಗಿ **ಸಂಪೂರ್ಣಂ** ಎಂದೂ, ದೋಷಗಳೇನೂ ಇಲ್ಲವೆಂದು ತಿಳಿಸುವುದಕ್ಕಾಗಿ **ವಿವರ್ಜಿತಂ** ಎಂದೂ ಹೇಳಿರುವರು. (4) ಶ್ರುತಿಗೀತಾ ಮೊದಲಾದ ಅನೇಕಗೀತೆಗಳಲ್ಲಿ ಭಗವದ್ಗೀತೆಯೇ ಶ್ರೇಷ್ಠವೆಂದು ತಿಳಿಸುವುದಕ್ಕಾಗಿ ವಿಶೇಷಣ ಕೊಡದೆ **ಗೀತಾ** ಎಂದೇ ಹೇಳಿರುವರು (5) ತಾವೇ ಗೀತಾಭಾಷ್ಯವನ್ನು ಮಾಡಿದ್ದರೂ ಗೀತೆಯ ಅರ್ಥವು ಶಿಷ್ಯರ ಬುದ್ಧಿಯಲ್ಲಿ ದೃಢವಾಗಿ ನಿಲ್ಲುವುದಕ್ಕಾಗಿ ಪದಗಳನ್ನೆತ್ತದೆ ಅವುಗಳ ತಾತ್ಪರ್ಯವನ್ನೇ ಹೇಳುವುದಕ್ಕಾಗಿ ಗೀತಾತಾತ್ಪರ್ಯವನ್ನೂ ಮಾಡಿರುತ್ತಾರೆ ॥ ೧ ॥

# ಒಂದನೇ ಅಧ್ಯಾಯವು.

**ಗೀತಾ** ॥ **ಧೃತರಾಷ್ಟ್ರ ಉವಾಚ**

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ ।**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥ ೧ ॥**

**ಅ** ॥ ಧೃತರಾಷ್ಟ್ರನು ಪ್ರಶ್ನೆಮಾಡುತ್ತಾನೆ. ಸಂಜಯ = ಎಲೋ ಸಂಜಯನೇ, ಧರ್ಮಕ್ಷೇತ್ರೇ = ಧರ್ಮಗಳಿಗೆ ಸಾಧನಭೂಮಿಯಾದ, ಕುರುಕ್ಷೇತ್ರೇ = ಕುರುಕ್ಷೇತ್ರದಲ್ಲಿ, ಯುಯುತ್ಸವ ಏವ = ಯುದ್ಧಮಾ ಡಲಿಕ್ಕೆ ಇಚ್ಛಿಸುವವರಾಗಿಯೇ, ಸಮವೇತಾಃ = ಭೂಮಂಡಲದಲ್ಲಿದ್ದ ಎಲ್ಲಾ ರಾಜರೂ ಎರಡು ತಂಡ

ಗಳಾಗಿ ಒಟ್ಟಿಗೆ ಸೇರಿರುವ, ಮಾಮಕಾಃ= ನನ್ನ ಮಕ್ಕಳಾದ ದುರ್ಯೋಧನಾದಿಗಳೂ, ಪಾಂಡವಾಶ್ಚ= ಪಾಂಡುರಾಜನ ಮಕ್ಕಳಾದ ಧರ್ಮರಾಜಾದಿಗಳೂ, ಕಿಮಕುರ್ವತ= ಏನು ಮಾಡುತ್ತಿರುತ್ತಾರೆ

ವಿ || (1) ಶ್ರೀ ಕೃಷ್ಣನು ಅರ್ಜುನನಿಗೆ ಬೋಧಿಸಲಿಕ್ಕೆ ಕಾರಣವನ್ನು ತೋರಿಸುವುದಕ್ಕಾಗಿ ೧ನೇ ಅಧ್ಯಾಯ ಮತ್ತು ೨ನೇ ಅಧ್ಯಾಯದ ೧೦ ಶ್ಲೋಕಗಳು ಹೊರಟಿವೆ (2) ಪಾಂಡವರು ಶ್ರೀ ಕೃಷ್ಣನಿಗೆ ಪ್ರಿಯರೆಂಬುವುದು ಎಲ್ಲರಿಗೆ ತಿಳಿದಿದ್ದರೂ ಅದನ್ನು ಆಗ ಧೃತರಾಷ್ಟ್ರನು ತಿಳಿಯದೆ ತನ್ನ ಮಕ್ಕಳಿಗೆ ಜಯವಾಗಬೇಕೆಂಬ ಇಚ್ಛೆಯಿಂದ ಸಂಜಯನೊಡನೆ ಪ್ರಶ್ನೆ ಮಾಡಿದನು || ೧ ||

ಗೀ || ಸಂಜಯ ಉವಾಚ

**ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ |**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ || ೨ ||**

ಅ || ಸಂಜಯ ಉವಾಚ—(ಧೃತರಾಷ್ಟ್ರನ ಪ್ರಶ್ನೆಗೆ) ಸಂಜಯನು (ಒಂಭತ್ತು ಶ್ಲೋಕಗಳಿಂದ) ಉತ್ತರವನ್ನು ಹೇಳಿದನು (ಎಂದು ವೈಶಂಪಾಯನಾಚಾರ್ಯರು ಜನಮೇಜಯರಾಜನಿಗೆ ಹೇಳಿದರು) ದುರ್ಯೋಧನಸ್ತು ರಾಜಾ= ರಾಜನಾದ ದುರ್ಯೋಧನನಾದರೂ, ತದಾ= ಯುದ್ಧಮಾಡಲಿಕ್ಕೆ ಸೇರಿದ ಸಮಯದಲ್ಲಿ, ವ್ಯೂಢಂ= ಗುಂಪುಗುಂಪಾಗಿರುವ, ಪಾಂಡವಾನೀಕಂ= ಪಾಂಡವರ ಸೈನ್ಯವನ್ನು, ದೃಷ್ಟ್ವಾ ತು= ನೋಡಿದೊಡನೆಯೇ, (ಧೈರ್ಯವು ತಪ್ಪಿಹೋಗಿ) ಆಚಾರ್ಯಂ= ದ್ರೋಣಾಚಾರ್ಯರ ಬಳಿಗೆ, ಉಪಸಂಗಮ್ಯ= ಬಂದು, ವಚನಂ= ಮಾತನ್ನು, ಅಬ್ರವೀತ್= ಹೇಳಿದನು || ೨ ||

**ಗೀ || ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಂ |**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ || ೩ ||**

ಅ || ಆಚಾರ್ಯ= ಎಲೋ ದ್ರೋಣಾಚಾರ್ಯರೇ, ತವ= ನಿಮ್ಮ, ಶಿಷ್ಯೇಣ= ಶಿಷ್ಯನಾದ, ಧೀಮತಾ= ಬುದ್ಧಿಶಾಲಿಯಾದ, ದ್ರುಪದಪುತ್ರೇಣ= ದ್ರುಪದರಾಜನ ಮಗನಾದ ಧೃಷ್ಟದ್ಯುಮ್ನನಿಂದ, ವ್ಯೂಢಾಂ= ವ್ಯೂಹವಾಗಿ ನಿರ್ಮಿಸಲ್ಪಟ್ಟ, ಪಾಂಡುಪುತ್ರಾಣಾಂ= ಪಾಂಡುರಾಜನ ಮಕ್ಕಳಾದ ಧರ್ಮರಾಜಾದಿಗಳ, ಮಹತೀಂ= ದೊಡ್ಡದಾದ, ಏತಾಂ ಚಮೂಂ= ಈ ಸೈನ್ಯವನ್ನು, ಪಶ್ಯ= ನೋಡು || ೩ ||

**ಗೀ || ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ |**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ || ೪ ||**
**ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್ |**
**ಪುರುಜಿತ್ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ || ೫ ||**
**ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ |**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ || ೬ ||**

ಅ || ಅತ್ರ= ಈ (ಪಾಂಡವರ) ಸೈನ್ಯದಲ್ಲಿ, ಮಹೇಷ್ವಾಸಾಃ= ದೊಡ್ಡದೊಡ್ಡ ಬಿಲ್ಲುಗಳುಳ್ಳ, ಯುಧಿ= ಯುದ್ಧದಲ್ಲಿ, ಭೀಮಾರ್ಜುನಸಮಾಃ= ಭೀಮಾರ್ಜುನರಿಗೆ ಸಮಾನರಾದ, ಶೂರಾಃ= ಪರಾ

ಕ್ರಮಿಗಳು, ಸಂತಿ= ಇರುತ್ತಾರೆ (ಅವರು ಯಾರೆಂದರೆ) ಮಹಾರಥಃ= ಮಹಾರಥಿಕನಾದ, ಯುಯುಧಾನಃ= ಸಾತ್ಯಕಿಯು, ವಿರಾಟಶ್ಚ= ವಿರಾಟಮಹಾರಾಜನೂ, ದ್ರುಪದಶ್ಚ= ದ್ರುಪದಮಹಾರಾಜನೂ, ಧೃಷ್ಟಕೇತುಃ= ಶಿಶುಪಾಲನ ಪುತ್ರನಾದ ಧೃಷ್ಟಕೇತುರಾಜನು, ಚೇಕಿತಾನಃ= ಚೇಕಿತಾನನು, ವೀರ್ಯವಾನ್= ಅತಿಬಲಿಷ್ಠನಾದ, ಕಾಶಿರಾಜಃ= ಕಾಶಿರಾಜನು, ನರಪುಂಗವಃ= ಮನುಷ್ಯರಲ್ಲಿ ಶ್ರೇಷ್ಠನಾದ, ಪುರುಜಿತ್ = ಪುರುಜಿದ್ರಾಜನೂ, ಕುಂತಿಭೋಜಃ = ಕುಂತಿಭೋಜನು, ಶೈಬ್ಯಶ್ಚ= ಶೈಬ್ಯರಾಜನೂ. ವಿಕ್ರಾಂತಃ=ಪರಾಕ್ರಮಶಾಲಿಯಾದ, ಯುಧಾಮನ್ಯುಶ್ಚ= ಯುಧಾಮನ್ಯುವೂ, ವೀರ್ಯವಾನ್= ಮಹಾಸಾಮರ್ಥ್ಯವುಳ್ಳ, ಉತ್ತಮೌಜಾಃ= ದ್ರುಪದರಾಜನ ಮಗನಾದ ಉತ್ತಮೌಜನೂ, ಸೌಭದ್ರಃ= ಸುಭದ್ರಾದೇವಿಯ ಮಗನಾದ ಅಭಿಮನ್ಯುವು ದ್ರೌಪದೇಯಾಶ್ಚ= ದ್ರೌಪದೀದೇವಿಯ ಪುತ್ರರಾದ ಪ್ರತಿವಿಂಧ್ಯ ಶ್ರುತಸೋಮ ಶ್ರುತಕೀರ್ತಿ ಶ್ರುತಾನೀಕ ಶ್ರುತಕರ್ಮರೆಂಬೀ ಐವರು, ಸರ್ವ ಏವ= ಇವರೆಲ್ಲರೂ, ಮಹಾರಥಾಃ= ಮಹಾರಥಿಕರು.

ವಿ || ಏಕೋ ದಶಸಹಸ್ರಾಣಾಂ ಯೋಧಯೇದ್ಯಸ್ತು ಧನ್ವಿನಾಂ । ಶಸ್ತ್ರಶಾಸ್ತ್ರಪ್ರವೀಣಶ್ಚ ಮಹಾರಥ ಇತಿ ಸ್ಮೃತಃ || ಶಸ್ತ್ರಶಾಸ್ತ್ರಗಳಲ್ಲಿ ಪ್ರವೀಣನಾಗಿದ್ದು ಒಬ್ಬನೇ ೧೦೦೦೦ ಮಂದಿ ಧನುರ್ಧಾರಿಗಳೊಡನೆ ಯುದ್ಧಮಾಡುವವನು ಮಹಾರಥಿಕನೆನಿಸುತ್ತಾನೆ || ೪ || ೫ || ೬ ||

ಗೀ || ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।
ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ಬ್ರವೀಮಿ ತೇ || ೭ ||

ಅ || ದ್ವಿಜೋತ್ತಮ= ಬ್ರಾಹ್ಮಣಶ್ರೇಷ್ಠರಾದ ದ್ರೋಣಾಚಾರ್ಯರೇ, ಅಸ್ಮಾಕಂ ತು= ನಮ್ಮ ಸೈನ್ಯಗಳಲ್ಲಿ, ಯೇ = ಯಾರು, ವಿಶಿಷ್ಟಾಃ= ಬಲಿಷ್ಠರೋ ಮಮ= ನನ್ನ, ಸೈನ್ಯಸ್ಯ= ಸೈನ್ಯಕ್ಕೆ, ನೇತಾರಃ= ಸೇನಾಧಿಪತಿಗಳೋ, ತಾನ್= ಅವರನ್ನು ನಿಬೋಧ= ತಿಳಿಯಿರಿ ತೇ= ನಿಮಗೆ ಸಂಜ್ಞಾರ್ಥಂ= ಚೆನ್ನಾಗಿ ತಿಳಿದುಕೊಳ್ಳುವುದಕ್ಕಾಗಿ, ತಾನ್= ಆ ಸೇನಾಧಿಪತಿಗಳನ್ನು, ಬ್ರವೀಮಿ=ಹೇಳುತ್ತೇನೆ || ೭ ||

ಗೀ || ಭವಾನ್ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।
ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ || ೮ ||
ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತಜೀವಿತಾಃ ।
ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ . || ೯ ||

ಅ || ಸಮಿತಿಂಜಯಃ= ಯುದ್ಧದಲ್ಲಿ ಜಯಶೀಲರಾದ, ಭವಾನ್= ನೀವು, ಭೀಷ್ಮಶ್ಚ= ಭೀಷ್ಮಾಚಾರ್ಯರೂ ಕರ್ಣಶ್ಚ= ಕರ್ಣನೂ, ಕೃಪಃ= ಕೃಪಾಚಾರ್ಯರೂ ಅಶ್ವತ್ಥಾಮಾ= ಅಶ್ವತ್ಥಾಮಾಚಾರ್ಯರೂ, ವಿಕರ್ಣಶ್ಚ=ವಿಕರ್ಣನೂ, ತಥೈವ ಚ=ಹಾಗೆಯೇ, ಸೌಮದತ್ತಿಃ=ಸೋಮದತ್ತನ ಮಗನಾದ ಭೂರಿಶ್ರವನೂ, ಅನ್ಯೇ ಚ=ಇತರರಾದ, ಬಹವಃ=ಬಹುಮಂದಿ, ಶೂರಾಃ ಚ=ಬಹು ಪರಾಕ್ರಮಶಾಲಿಗಳಾದವರೇ, ಮದರ್ಥೇ ಚ=ನನಗೋಸ್ಕರವೇ, ತ್ಯಕ್ತಜೀವಿತಾಃ=ತಂತಮ್ಮ ಪ್ರಾಣಗಳನ್ನು ಬಿಡಲಿಕ್ಕೆ ನಿಶ್ಚಯಿಸಿದವರಾಗಿರುತ್ತಾರೆ ಸರ್ವೇ= ಇವರೆಲ್ಲರೂ ನಾನಾಶಸ್ತ್ರಪ್ರಹರಣಾಃ= ಅನೇಕವಿಧಗಳಾದ ಶಸ್ತ್ರಗಳೂ ಆಯುಧಗಳೂ ಉಳ್ಳವರು, ಯುದ ವಿಶಾರದಾಃ= ಯುದ್ಧದಲ್ಲಿ ನಿಪುಣರಾದವರು || ೮ || ೯ ||

ಪೀ—ಎರಡು ಸೈನ್ಯಗಳಲ್ಲಿ ಬಲಿಷ್ಠರನ್ನು ಎಣಿಕೆಮಾಡುವಾಗ ಪಾಂಡವರನ್ನು ಗೆಲ್ಲಲಿಕ್ಕೆ ನನಗೆ ಸಂದೇಹವಿರುವಕಾರಣ ನೀವೆಲ್ಲರೂ ಚೆನ್ನಾಗಿ ಸಿದ್ಧರಾಗಿರಬೇಕೆಂಬ ಅಭಿಪ್ರಾಯದಿಂದ ಹೇಳುತ್ತಾನೆ—

**ಗೀ ॥ ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಂ ।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಂ ॥ ೧೦ ॥**

ಅ ॥ (ಆದರೂ) ಭೀಷ್ಮಾಭಿರಕ್ಷಿತಂ=ಸೇನಾಧಿಪತಿಗಳಾದ ಭೀಷ್ಮಾಚಾರ್ಯರಿಂದ ರಕ್ಷಿಸಲ್ಪಟ್ಟ, ಅಸ್ಮಾಕಂ=ನಮ್ಮ, ತದ್ಬಲಂ=ಬಲಿಷ್ಠವಾದ ಆ ಸೈನ್ಯವು, ಅಪರ್ಯಾಪ್ತಂ=ಪಾಂಡವರನ್ನು ಗೆಲ್ಲಲಿಕ್ಕೆ ಅಸಮರ್ಥವಾಗಿ ತೋರುತ್ತದೆ ಭೀಮಾಭಿರಕ್ಷಿತಂ=ಭೀಮಸೇನನಿಂದ ಚೆನ್ನಾಗಿ ರಕ್ಷಿಸಲ್ಪಟ್ಟ, ಏತೇಷಾಂ=ಪಾಂಡವರ ಇದಂ ಬಲಂ ತು=ಈ ಸೈನ್ಯವಾದರೂ, ಪರ್ಯಾಪ್ತಂ=ನಮ್ಮನ್ನು ಗೆಲ್ಲಲಿಕ್ಕೆ ಸಮರ್ಥವಾಗಿ ತೋರುತ್ತದೆ ॥ ೧೦ ॥

ಪೀ—ಹೀಗೆ ಪಾಂಡವರ ಸೈನ್ಯವು ಬಲಿಷ್ಠವಾಗಿದ್ದರೂ ಸಂಧಾನವನ್ನಿಚ್ಛಿಸದೆ ತನಗೆ ಜಯವು ಬರಬೇಕೆಂದು ಪ್ರಯತ್ನಿಸುತ್ತಾ ದ್ರೋಣಾದಿಗಳನ್ನು ಪ್ರಾರ್ಥಿಸುತ್ತಾನೆ—

**ಗೀ ॥ ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।**
**ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ ॥ ೧೧ ॥**

ಅ ॥ ಹಿ=ಪಾಂಡವರ ಸೈನ್ಯವು ಬಲಿಷ್ಠವಾದ ಪ್ರಯುಕ್ತ, ಭವಂತಃ ಸರ್ವ ಏವ=ನೀವೆಲ್ಲರೂ, ಸರ್ವೇಷು ಅಯನೇಷು ಚ=ಎಲ್ಲಾ ವ್ಯೂಹಪ್ರವೇಶ ಮಾರ್ಗಗಳಲ್ಲಿಯೂ, ಯಥಾಭಾಗಂ=ನಿಮಗೆ ನಿಯಮಿಸಿದ ಸ್ಥಾನಗಳನ್ನು ಬಿಡದೆ ಅಲ್ಲಲ್ಲಿಯೇ, ಅವಸ್ಥಿತಾಃ=ನಿಂತವರಾಗಿ, ಭೀಷ್ಮಮೇವ=ಭೀಷ್ಮಾಚಾರ್ಯರನ್ನೇ ಅಭಿರಕ್ಷಂತು=ರಕ್ಷಿಸಿಕೊಂಡಿರಿ ಭೀಷ್ಮಾಚಾರ್ಯರು ಯುದ್ಧ ಮಾಡುತ್ತಿರುವಾಗ ಶತ್ರುಗಳು ಹಿಂದಿನಿಂದ ಹೊಡೆಯದಂತೆ ಕಾಪಾಡಿರಿ ಎಂದು ದ್ರೋಣಾಚಾರ್ಯರಿಗೆ ಹೇಳಿ ದುರ್ಯೋಧನನು ವಿಷಾದಹೊಂದಿದನು ॥ ೧೧ ॥

**ಗೀ ॥ ಸಂಜಯ ಉವಾಚ**

**ತಸ್ಯ ಸಂಜನಯನ್ಹರ್ಷಂ ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥ ೧೨ ॥**

ಅ ॥ (ಆಗ) ತಸ್ಯ=ದುಃಖಿಸುತ್ತಿರುವ ದುರ್ಯೋಧನನಿಗೆ, ಹರ್ಷಂ=ಹೆಚ್ಚು ಉತ್ಸಾಹವನ್ನು ಸಂಜನಯನ್=ಹುಟ್ಟಿಸುವುದಕ್ಕಾಗಿ, ಪ್ರತಾಪವಾನ್=ಬಹು ಪರಾಕ್ರಮಗಳುಳ್ಳ, ಕುರುವೃದ್ಧಃ—ಕುರುವಂಶದಲ್ಲಿ ಮುದುಕರಾದ ಪಿತಾಮಹಃ=ಭೀಷ್ಮಾಚಾರ್ಯರು ಸಿಂಹನಾದಂ=ಸಿಂಹದ ಗರ್ಜನೆಯಂತೆ ಗರ್ಜನೆಯನ್ನು, ಉಚ್ಚೈಃ=ಗಟ್ಟಿಯಾಗಿ ವಿನದ್ಯ=ಮಾಡಿ ಶಂಖಂ=ಶಂಖವನ್ನು, ದಧ್ಮೌ=ಊದಿದರು. ॥ ೧೨ ॥

**ಗೀ ॥ ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।**
**ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ॥ ೧೩ ॥**

ಅ || ತತಃ=ಭೀಷ್ಮಾಚಾರ್ಯರು ಶಂಖವನ್ನು ಊದಿದೊಡನೆಯೇ, ಶಂಖಾಶ್ಚ=ಶಂಖಗಳೂ, ಭೇರ್ಯಶ್ಚ=ನಗಾರಿಗಳೂ, ಪಣವಾನಕಗೋಮುಖಾಃ=ಪಣವ (ಒಂದು ಬಗೆಯ ಡೋಲು) ಆನಕ (ಪಟಾವ್) ಗೋಮುಖ (ತಮಟೆ) ಮೊದಲಾದ ಅನೇಕ ವಾದ್ಯವಿಶೇಷಗಳೂ, ಸಹಸೈವ=ಅದೇ ಕ್ಷಣದಲ್ಲಿ ಏಕಕಾಲದಲ್ಲಿಯೇ, ಅಭ್ಯಹನ್ಯಂತ=ಊದಲ್ಪಟ್ಟವು, ಬಾರಿಸಲ್ಪಟ್ಟವು ಸ ಶಬ್ದಃ=ಆ ಧ್ವನಿಯು, ತುಮುಲಃ ಅಭವತ್=ರಣಾಂಗಣದಲ್ಲಿ ಎಲ್ಲಾ ಪ್ರದೇಶಗಳಲ್ಲಿಯೂ ತುಂಬಿತು || ೧೩ ||

ಗೀ || ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ |
ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ || ೧೪ ||

ಅ || ತತಃ=ದುರ್ಯೋಧನಾದಿಗಳು ಶಂಖಧ್ವನಿ ಮಾಡಿದಮೇಲೆ, ಮಾಧವಃ=ಶ್ರೀಕೃಷ್ಣನು, ಪಾಂಡವಶ್ಚ=ಅರ್ಜುನನೂ ಕೂಡ, ಶ್ವೇತೈಃ=ಬಿಳಿದಾದ, ಹಯೈಃ=ಕುದುರೆಗಳಿಂದ, ಯುಕ್ತೇ=ಕೂಡಿದ, ಮಹತಿ=ಶ್ರೇಷ್ಠವಾದ, ಸ್ಯಂದನೇ=ರಥದಲ್ಲಿ, ಸ್ಥಿತೌ=ಕುಳಿತವರಾಗಿಯೇ, ದಿವ್ಯೌ=ಶ್ರೇಷ್ಠಗಳಾದ (ಅಲೌಕಿಕಗಳಾದ), ಶಂಖೌ=ಶಂಖಗಳನ್ನು, ಪ್ರದಧ್ಮತುಃ=ಊದಿದರು || ೧೪ ||

ಗೀ || ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ |
ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ||೧೫||

ಅ || ಹೃಷೀಕೇಶಃ=ಶ್ರೀಕೃಷ್ಣನು, ಪಾಂಚಜನ್ಯಂ=ಪಾಂಚಜನ್ಯವೆಂಬ ಶಂಖವನ್ನೂ, ಧನಂಜಯಃ=ಅರ್ಜುನನು, ದೇವದತ್ತಂ=ದೇವದತ್ತವೆಂಬ ಶಂಖವನ್ನೂ, ಭೀಮಕರ್ಮಾ=ಭಯಂಕರವಾದ ಕರ್ಮವುಳ್ಳ, ವೃಕೋದರಃ=ಭೀಮಸೇನನು, ಪೌಂಡ್ರಂ=ಪೌಂಡ್ರವೆಂಬ, ಮಹಾಶಂಖಂ=ದೊಡ್ಡ ಶಂಖವನ್ನೂ, ದಧ್ಮೌ=ಊದಿದನು || ೧೫ ||

ಗೀ || ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ |
ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ || ೧೬ ||

ಅ || ಕುಂತೀಪುತ್ರಃ=ಕುಂತೀದೇವಿಯ ಮಗನಾದ, ಯುಧಿಷ್ಠಿರಃ ರಾಜಾ=ಧರ್ಮರಾಜನು, ಅನಂತವಿಜಯಂ=ಅನಂತವಿಜಯವೆಂಬ ಶಂಖವನ್ನು, ನಕುಲಃ ನಕುಲನು ಸಹದೇವಶ್ಚ=ಸಹದೇವನು, ಸುಘೋಷಮಣಿಪುಷ್ಪಕೌ=ಸುಘೋಷ ಮಣಿಪುಷ್ಪಕಗಳೆಂಬ ಶಂಖಗಳನ್ನು, (ದಧ್ಮುಃ=ಊದಿದರು) || ೧೬ ||

ಗೀ || ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ |
ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ || ೧೭ ||

ಅ || ಪರಮೇಷ್ವಾಸಃ=ಅತಿಶ್ರೇಷ್ಠವಾದ ಬಿಲ್ಲುಳ್ಳ ಕಾಶ್ಯಃ=ಕಾಶಿರಾಜನು, ಮಹಾರಥಃ=ಮಹಾರಥಿಕನಾದ, ಶಿಖಂಡೀ ಚ=ಶಿಖಂಡಿಯು, ಧೃಷ್ಟದ್ಯುಮ್ನಃ=ಧೃಷ್ಟದ್ಯುಮ್ನನು, ವಿರಾಟಶ್ಚ=ವಿರಾಟರಾಜನೂ, ಅಪರಾಜಿತಃ=ಸೋಲದಿರುವ, ಸಾತ್ಯಕಿಶ್ಚ=ಸಾತ್ಯಕಿಯೂ (ಎಲ್ಲರೂ ತಮ್ಮತಮ್ಮ ಶಂಖಗಳನ್ನು ಊದಿದರು) || ೧೭ ||

ಗೀ || ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ |
ಸೌಭದ್ರಶ್ಚ ಮಹಾಬಾಹುಃ ಶಂಖಾನ್ದಧ್ಮುಃ ಪೃಥಕ್ಪೃಥಕ್ || ೧೮ ||

ಅ || ಪೃಥಿವೀಪತೇ=ಭೂಪತಿಯಾದ ಎಲೋ ಧೃತರಾಷ್ಟ್ರ ಮಹಾರಾಜನೇ, ದ್ರುಪದಃ=ದ್ರುಪದ ಮಹಾರಾಜನೂ, ಸರ್ವಶಃ=ಎಲ್ಲಾ, ದ್ರೌಪದೇಯಾಶ್ಚ=ದ್ರೌಪದೀದೇವಿಯ ಮಕ್ಕಳೂ, ಮಹಾಬಾಹುಃ=ತೋಳುಬಲವುಳ್ಳ ಸೌಭದ್ರಃ=ಸುಭದ್ರಾದೇವಿಯ ಮಗನಾದ ಅಭಿಮನ್ಯುವು, (ಎಲ್ಲರೂ) ಪೃಥಕ್ಪೃಥಕ್=ಬೇರೆಬೇರೆ, ಏಕಕಾಲದಲ್ಲಿಯೇ, ಶಂಖಾನ್=ಶಂಖಗಳನ್ನು, ದಧ್ಮುಃ=ಊದಿದರು || ೧೮ ||

ಗೀ || ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ |
ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ || ೧೯ ||

ಅ || ಸ ಘೋಷಃ=ಆ ಧ್ವನಿಯು, ತುಮುಲಃ=ಎಲ್ಲಾ ಕಡೆಗಳಲ್ಲಿ ತುಂಬಿದ್ದಾಗಿ, ನಭಶ್ಚ=ಆಕಾಶವನ್ನು, ಪೃಥಿವೀಂ ಚ=ಭೂಮಿಯನ್ನೂ ಕೂಡ, ವ್ಯನುನಾದಯನ್ನೇವ=ಅಲ್ಲಲ್ಲಿ ಪ್ರತಿಧ್ವನಿಯನ್ನು ಹುಟ್ಟಿಸುತ್ತಲೇ ಅಥವಾ ಪ್ರತಿಧ್ವನಿಗಳಿಂದ ಪೂರ್ಣೀಕರಿಸಿದುದಾಗಿ, ಧಾರ್ತರಾಷ್ಟ್ರಾಣಾಂ=ನಿನ್ನ ಮಕ್ಕಳಾದ ದುರ್ಯೋಧನಾದಿಗಳ, ಹೃದಯಾನಿ=ಮನಸ್ಸುಗಳನ್ನು, ವ್ಯದಾರಯತ್=ಸೀಳಿತು. (ಈಗಲೇ ನಮ್ಮ ವಂಶವೇ ನಾಶಹೊಂದಿತೆಂದು ನಿನ್ನ ಮಕ್ಕಳು ತಿಳಿದುಕೊಂಡರು) || ೧೯ ||

ಪೀ—ಹಿಂದೆ ಹೇಳಿದ ಪ್ರಕಾರ ಎರಡು ಸೈನ್ಯಗಳ ವ್ಯಾಪಾರಗಳನ್ನು ಹೇಳಿ ಈಗ ಅರ್ಜುನನಿಗೆ ತತ್ತ್ವವನ್ನುಪದೇಶಿಸುವುದಕ್ಕೆ ಕಾರಣಗಳಾದ ಅರ್ಜುನನ ವ್ಯಾಪಾರಗಳನ್ನು ನಾಲ್ಕು ಶ್ಲೋಕಗಳಿಂದ ಹೇಳುತ್ತಾರೆ—

ಗೀ || ಅಥ ವ್ಯವಸ್ಥಿತಾನ್ದೃಷ್ಟ್ವಾ ಧಾರ್ತರಾಷ್ಟ್ರಾನ್ಕಪಿಧ್ವಜಃ |
ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ || ೨೦ ||
ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ |

ಅರ್ಜುನ ಉವಾಚ

ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ || ೨೧ ||

ಅ || ಮಹೀಪತೇ=ಧೃತರಾಷ್ಟ್ರನೇ ಅಥ=ಶಂಖಧ್ವನಿಗಳಾದ ಮೇಲೆ, ಕಪಿಧ್ವಜಃ=ಹನುಮಂತನು ಧ್ವಜದಲ್ಲಿರುವ ಪಾಂಡವಃ=ಅರ್ಜುನನು ವ್ಯವಸ್ಥಿತಾನ್=ಯುದ್ಧ ಮಾಡುವುದೆಂದು ನಿಶ್ಚಯಿಸಿ ರಣರಂಗದಲ್ಲಿ ಸನ್ನದ್ಧರಾಗಿ ನಿಂತಿರುವ, ಧಾರ್ತರಾಷ್ಟ್ರಾನ್=ದುರ್ಯೋಧನಾದಿಗಳನ್ನು, ದೃಷ್ಟ್ವಾ=ನೋಡಿ, ಶಸ್ತ್ರಸಂಪಾತೇ ಪ್ರವೃತ್ತೇ=ಬಾಣಗಳನ್ನು ಬಿಡಲಿಕ್ಕೆ ಉದ್ಯೋಗ ಮಾಡುತ್ತಿರಲು, ಧನುಃ=ಬಿಲ್ಲನ್ನು, ಉದ್ಯಮ್ಯ=ಎತ್ತಿಕೊಂಡು, ಇದಂ ವಾಕ್ಯಂ=ಮುಂದೆ ಹೇಳುವ ವಾಕ್ಯವನ್ನು, ತದಾ=ಶಸ್ತ್ರಗಳನ್ನು ಬಿಡುವ ಮೊದಲೇ, ಹೃಷೀಕೇಶಂ=ಸರ್ವೇಂದ್ರಿಯಗಳಿಗೆ ಪ್ರೇರಕನಾದ ಶ್ರೀಕೃಷ್ಣನಿಗೆ, ಆಹ=ಹೇಳಿದನು || ೨೦ || ೨೧ ||

ಗೀ || ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ |
ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ರಣಸಮುದ್ಯಮೇ || ೨೨ ||
ಯೋತ್ಸ್ಯಮಾನಾನವೇಕ್ಷ್ಯೇಽಹಂ ಯ ಏತೇಽತ್ರ ಸಮಾಗತಾಃ |
ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ || ೨೩ ||

ಅ || ಅರ್ಜುನನು ಪ್ರಾರ್ಥಿಸುತ್ತಾನೆ ಅಚ್ಯುತ=ನಾಶವಿಲ್ಲದ ಶ್ರೀಕೃಷ್ಣನೇ, ದುರ್ಬುದ್ಧೇಃ=ಕೆಟ್ಟಬುದ್ಧಿಯುಳ್ಳ, ಧಾರ್ತರಾಷ್ಟ್ರಸ್ಯ=ದುರ್ಯೋಧನನಿಗೆ, ಯುದ್ಧೇ=ಕದನದಲ್ಲಿ, ಪ್ರಿಯಚಿಕೀರ್ಷವಃ=ಇಷ್ಟವನ್ನು ಮಾಡಲಿಚ್ಛಿಸುತ್ತಾ, ಯ ಏತೇ=ಯಾರುಯಾರು ಅತ್ರ=ರಣಾಂಗಣಕ್ಕೆ, ಸಮಾಗತಾಃ=ಬಂದಿರುತ್ತಾರೋ, ಏತಾನ್=ಈದಾವ, ಯೋದ್ಧುಕಾಮಾನ್=ಯುದ್ಧಮಾಡಲಿಕ್ಕಿಚ್ಛಿಸುತ್ತಾ, ಅವಸ್ಥಿತಾನ್=ಸನ್ನದ್ಧರಾಗಿ ನಿಂತಿರುವ ಶತ್ರುಪಕ್ಷದವರನ್ನು, ಯಾವತ್=ಎಷ್ಟುಕಾಲದ ಪರ್ಯಂತ ನಿರೀಕ್ಷೇ=ನೋಡುತ್ತಿರುವೆನೋ, (ಅಷ್ಟುಕಾಲದ ವರೆಗೂ) ಉಭಯೋಃ ಸೇನಯೋಃ=ಕುರುಪಾಂಡವ ಎರಡುಸೈನ್ಯಗಳ, ಮಧ್ಯೇ=ಮಧ್ಯದಲ್ಲಿ, ಮೇ=ನನ್ನ, ರಥಂ=ತೇರನ್ನು ಸ್ಥಾಪಯ=ರಕ್ಷಿಸುತ್ತಾ ನಿಲ್ಲಿಸು (ನೀನು ರಕ್ಷಿಸುತ್ತಿದ್ದರೆ ನನಗೆ ಭಯಲೇಶವೂ ಬರಲಾರದು ಮತ್ತು ಹೇಗೆ ರಥವನ್ನು ನಿಲ್ಲಿಸಿದರೆ ರಣಾಂಗಣದಲ್ಲಿ ನಿಂತವರೆಲ್ಲರನ್ನು ನೋಡುವೆನೋ ಹಾಗೆ ರಥವನ್ನು ನಿಲ್ಲಿಸು) ಅಸ್ಮಿನ್=ಈದಾವ, ರಣಸಮುದ್ಯಮೇ=ಯುದ್ಧಾರಂಭದಲ್ಲಿ, ಮಯಾ=ನನ್ನಿಂದ. ಕೈಸ್ಸಹ=ಯಾರೊಡನೆ, ಯೋದ್ಧವ್ಯಂ=ಯುದ್ಧಮಾಡಲ್ಪಡಬೇಕು, (ಏಕೆಂದರೆ) ಅತ್ರ=ಈ ರಣಾಂಗಣದಲ್ಲಿ ಈ ಶತ್ರುಸೈನ್ಯದಲ್ಲಿ, ಯೇ ಸಮಾಗತಾಃ=ಯಾರುಯಾರು ಬಂದಿರುತ್ತಾರೋ, (ಅವರೆಲ್ಲರನ್ನೂ) ಯೋತ್ಸ್ಯಮಾನಾನ್=ಯುದ್ಧಮಾಡುವವರನ್ನಾಗಿಯೇ, ಅಹಂ=ನಾನು, ಅವೇಕ್ಷ್ಯೇ=ನೋಡುವೆನು ಆದಕಾರಣ ಯಾರೊಡನೆ ಯುದ್ಧಮಾಡಬೇಕು? (ಎಲ್ಲಾ ರಾಜರೂ ದುರ್ಯೋಧನನಿಗೆ ಪ್ರೀತಿಯಾಗಬೇಕೆಂಬ ಉದ್ದೇಶದಿಂದಲೇ ಯುದ್ಧಕ್ಕೆ ಸನ್ನದ್ಧರಾಗಿ ನಿಂತಿರುತ್ತಾರೆ. ಆದಕಾರಣ ಮೊದಲು ಪ್ರಬಲರೊಡನೆ ಯುದ್ಧಮಾಡಬೇಕೋ, ದುರ್ಬಲರೊಡನೆ ಯುದ್ಧಮಾಡಬೇಕೋ? ಎಂದು ಪ್ರಶ್ನೆಯ ಅಭಿಪ್ರಾಯವು) || ೨೨ || ೨೩ ||

ಗೀ || ಸಂಜಯ ಉವಾಚ

ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ |
ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಂ ||೨೪||
ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಂ |
ಉವಾಚ ಪಾರ್ಥ ಪಶ್ಯೈತಾನ್ಸಮವೇತಾನ್ಕುರೂನಿತಿ || ೨೫ ||

ಅ || ಸಂಜಯನು ಹೇಳುತ್ತಾನೆ—ಭಾರತ=ಧೃತರಾಷ್ಟ್ರರಾಜನೇ ಗುಡಾಕೇಶೇನ=ನಿದ್ರೆಗೆ ನಿಯಾಮಕನಾದ (ಅಂದರೆ ನಿದ್ರೆಯನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುವ) ಅರ್ಜುನನಿಂದ ಏವಂ=ಹಿಂದೆ ಹೇಳಿದ ಪ್ರಕಾರ, ಉಕ್ತಃ=ಹೇಳಿಸಿಕೊಳ್ಳಲ್ಪಟ್ಟ, ಹೃಷೀಕೇಶಃ=ಶ್ರೀಕೃಷ್ಣನು, ಉಭಯೋಸ್ಸೇನಯೋಃ=ಎರಡು ಸೈನ್ಯಗಳ, ಮಧ್ಯೇ=ಮಧ್ಯದಲ್ಲಿ, ಭೀಷ್ಮದ್ರೋಣಪ್ರಮುಖತಃ=ಭೀಷ್ಮಾಚಾರ್ಯರೂ ದ್ರೋಣಾಚಾರ್ಯರೂ ಇವರಿಗೆ ಅಭಿಮುಖವಾಗಿಯೇ, ಸರ್ವೇಷಾಂ ಮಹೀಕ್ಷಿತಾಂ ಚ=ಎಲ್ಲಾ ರಾಜಾಧಿರಾಜರಿಗೆ ಅಭಿಮುಖವಾಗಿಯೂ, ರಥೋತ್ತಮಂ=ಶ್ರೇಷ್ಠವಾದ ವಿಜಯರಥವನ್ನು, ಸ್ಥಾಪಯಿತ್ವಾ=ನಿಲ್ಲಿಸಿ,

ಪಾರ್ಥ=ಎಲೋ ಅರ್ಜುನನೇ, ಸಮವೇತಾನ್=ಇಲ್ಲಿ ಯುದ್ಧಕ್ಕಾಗಿ ಸೇರಿದ, ಏತಾನ್=ಇದಿರಿರುವ, ಕುರೂನ್=ಕೌರವರನ್ನು ಪಶ್ಯ=ನೋಡು, ಇತಿ=ಹೀಗೆ, ಉವಾಚ=ಹೇಳಿದನು

ವಿ || (1) ಶತ್ರುಸೈನ್ಯದವರು ಕೆಲವರು ಅಸುರರು ಕೆಲವರಲ್ಲಿ ಅಸುರಾವೇಶವಿದೆ ಆದಕಾರಣ ಎಲ್ಲರೊಡನೆಯೂ ಯುದ್ಧಮಾಡಬೇಕು (2) ಅಥವಾ ಕುರುಸೈನ್ಯದಲ್ಲಿಯೂ ಶರಣಾಗತರಾದವರನ್ನು ರಕ್ಷಿಸು, ಬೇರೆಯವರನ್ನು ಸಂಹರಿಸು—ಎಂದು ಶ್ರೀಕೃಷ್ಣನು ಉತ್ತರಿಸಿದನು || ೨೪ || ೨೫ ||

ಗೀ || ತತ್ರಾಪಶ್ಯತ್ಸ್ಥಿತಾನ್ಪಾರ್ಥಃ ಪಿತೄನಥ ಪಿತಾಮಹಾನ್ |
ಆಚಾರ್ಯಾನ್ಮಾತುಲಾನ್ಭ್ರಾತೄನ್ಪುತ್ರಾನ್ಪೌತ್ರಾನ್ಸಖೀಂಸ್ತಥಾ || ೨೬ ||
ಶ್ವಶುರಾನ್ಸುಹೃದಶ್ಚೈವ ಸೇನಯೋರುಭಯೋರಪಿ |

ಅ || ಅಥ=ಮೇಲೆ, ತತ್ರ=ಆಗ, ಪಾರ್ಥಃ=ಅರ್ಜುನನು ತತ್ರ ಉಭಯೋಃ ಸೇನಯೋಃ=ಆ ಪಾಂಡವಕುರುಸೈನ್ಯಗಳಲ್ಲಿ, ಸ್ಥಿತಾನ್=ಇರತಕ್ಕ, ಪಿತೄನ್=ಪಿತೃಗಳಿಗೆ ಸಮಾನಿಕರಾದ ಭೂರಿಶ್ರವನೇ ಮೊದಲಾದವರನ್ನೂ, ಪಿತಾಮಹಾನ್=ಭೀಷ್ಮಾಚಾರ್ಯ ಸೋಮದತ್ತ ಮೊದಲಾದವರನ್ನೂ, ಅಥ=ಪ್ರಪಿತಾಮಹರಾದ ಬಾಹ್ಲೀಕಾದಿಗಳನ್ನೂ, ಆಚಾರ್ಯಾನ್=ಗುರುಗಳಾದ ದ್ರೋಣಾಚಾರ್ಯ ಮೊದಲಾದವರನ್ನೂ, ಮಾತುಲಾನ್=ಸೋದರಮಾವಂದಿರಾದ ಶಲ್ಯ ಶಕುನಿ ಮೊದಲಾದವರನ್ನೂ, ಭ್ರಾತೄನ್=ಸಹೋದರರಾದ ಭೀಮ ದುರ್ಯೋಧನಾದಿಗಳನ್ನೂ, ಪುತ್ರಾನ್=ಮಕ್ಕಳಾದ ಅಭಿಮನ್ಯು ಲಕ್ಷಣ ಮೊದಲಾದವರನ್ನೂ, ಪೌತ್ರಾನ್=ಘಟೋತ್ಕಚನ ಪುತ್ರಾದಿಗಳನ್ನೂ, ತಥಾ—ಹಾಗೆಯೇ, ಸಖೀನ್=ಗೆಳೆಯರಾದ ಅಶ್ವತ್ಥಾಮ ಮೊದಲಾದವರನ್ನೂ, ಶ್ವಶುರಾನ್=ಮಾವಂದಿರಾದ ದ್ರುಪದರಾಜ ಮೊದಲಾದವರನ್ನೂ, ಸುಹೃದಶ್ಚ=(ನಿಮಿತ್ತವಿಲ್ಲದೆ ಉಪಕಾರಮಾಡತಕ್ಕ) ಮಿತ್ರರಾದ ವಿರಾಟರಾಜ ಮೊದಲಾದವರನ್ನೂ, ಅಪಶ್ಯತ್=ನೋಡಿದನು || ೨೬ ||

ಗೀ || ತಾನ್ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ಬಂಧೂನವಸ್ಥಿತಾನ್ || ೨೭ ||
ಕೃಪಯಾ ಪರಯಾऽऽವಿಷ್ಟೋ ವಿಷೀದನ್ನಿದಮಬ್ರವೀತ್ |

ಅ || ಸಃ ಕೌಂತೇಯಃ=ಆ ಅರ್ಜುನನು ಅವಸ್ಥಿತಾನ್=ರಣಾಂಗಣದಲ್ಲಿ ಯುದ್ಧಕ್ಕಾಗಿ ಸನ್ನದ್ಧರಾಗಿ ನಿಂತಿರುವ ಸರ್ವಾನ್=ಎಲ್ಲಾ ತಾನ್ ಬಂಧೂನ್=ಆ ಬಾಂಧವರನ್ನು, ಸಮೀಕ್ಷ್ಯೈವ=ನೋಡಿದೊಡನೆಯೇ, ಪರಯಾ ಕೃಪಯಾ=ಅತ್ಯಧಿಕವಾದ ದಯೆಯಿಂದ, ಆವಿಷ್ಟಃ=ಕೂಡಿದವನಾಗಿ, ವಿಷೀದನ್=ಖೇದವನ್ನು ಹೊಂದುತ್ತಾ ಇದಂ=ಮುಂದೆ ಹೇಳುವ ಮಾತನ್ನು, ಅಬ್ರವೀತ್=ಹೇಳಿದನು.

ವಿ || ವಿಷಾದವೆಂದರೆ ಮೋಹದಿಂದುಂಟಾಗುವ ಶೋಕದಿಂದ ಮನಸ್ಸಿನಲ್ಲಿ ದೌರ್ಬಲ್ಯವು. ಅದು ಇದ್ದರೆ ಯಾವುದೊಂದು ವ್ಯಾಪಾರವೂ ಸರ್ವಥಾ ಆಗಲಾರದು || ೨೭ ||

ಗೀ || ಅರ್ಜುನ ಉವಾಚ

ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಂ || ೨೮ ||
ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ |
ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ || ೨೯ ||

ಅ ॥ ಅರ್ಜುನನು ಶ್ರೀಕೃಷ್ಣನೊಡನೆ ಹೇಳುತ್ತಾನೆ—ಕೃಷ್ಣ=ಸರ್ವಲೋಕಕ್ಕೆ ನಿಯಾಮಕನಾದ ಶ್ರೀಕೃಷ್ಣನೇ, ಯುಯುತ್ಸುಂ=ಯುದ್ಧಮಾಡಬೇಕೆಂದು ಇಚ್ಛಿಸುತ್ತಿರುವ, ಸಮುಪಸ್ಥಿತಂ=ರಣಾಂಗಣದಲ್ಲಿ ಸನ್ನದ್ಧರಾಗಿ ನಿಂತಿರುವ, ಇಮಂ ಸ್ವಜನಂ=ಈ ಬಾಂಧವರನ್ನು, ದೃಷ್ಟ್ವಾ=ನೋಡಿದೊಡನೆಯೇ, ಮಮ=ನನ್ನ, ಗಾತ್ರಾಣಿ=ಕೈ ಕಾಲು ಮೊದಲಾದ ಅಂಗಗಳು, ಸೀದಂತಿ=ಶಿಥಿಲಗಳಾಗುತ್ತವೆ ಮುಖಂ ಚ=ಮೋರೆಯೂ, ಪರಿಶುಷ್ಯತಿ=ಬಾಡಿಹೋಗುತ್ತದೆ ಮೇ=ನನ್ನ, ಶರೀರೇ=ದೇಹದಲ್ಲಿ, ವೇಪಥುಃ=ನಡುಕವೂ, ರೋಮಹರ್ಷಶ್ಚ=ರೋಮಾಂಚವೂ ಕೂಡ ಜಾಯತೇ=ಹುಟ್ಟುತ್ತದೆ ॥೨೮,೨೯॥

ಗೀ ॥ ಗಾಂಡೀವಂ ಸ್ರಂಸತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ ।
ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥ ೩೦ ॥

ಅ ॥ ಗಾಂಡೀವಂ=ಗಾಂಡೀವವೆಂಬ ನನ್ನ ಧನುಸ್ಸು, ಹಸ್ತಾತ್=ಕೈಯಿಂದ ಸ್ರಂಸತೇ=ಜಾರಿ ಬೀಳುತ್ತದೆ, ತ್ವಕ್ಚ=ಚರ್ಮವಾದರೂ, ಪರಿದಹ್ಯತೇ ಏವ=ಸುಡಲ್ಪಡುತ್ತದೆ (ಸುತ್ತುಮುತ್ತಲೂ ಚೆನ್ನಾಗಿ ಸಂತಾಪಹೊಂದುತ್ತಲೇ ಇದೆ) ಅವಸ್ಥಾತುಂ=ಯುದ್ಧದಲ್ಲಿ ವೀರಾಸನದಿಂದ ನಿಲ್ಲಲಿಕ್ಕೆ, ನಚ ಶಕ್ನೋಮಿ=ಸಮರ್ಥನೇ ಆಗುವುದಿಲ್ಲ ಮೇ=ನನ್ನ ಮನಶ್ಚ=ಮನಸ್ಸು, ಭ್ರಮತೀವ=ಮೋಹ ಹೊಂದುತ್ತಲೇ ಇದೆ (ಅಂದರೆ ಸಂಹರಿಸಿಕೊಳ್ಳಲಿಕ್ಕೆ ಯೋಗ್ಯರಾದವರನ್ನು ಯೋಗ್ಯರಲ್ಲವೆಂದು ಮನಸ್ಸು ತಿಳಿಯುತ್ತದೆ) ॥೩೦॥

ಪೀ--ಬಂಧುಗಳಾದ ಪ್ರಯುಕ್ತ ಈ ಶತ್ರುಗಳನ್ನು ಕೊಲ್ಲುವುದು ನ್ಯಾಯವೋ ಅನ್ಯಾಯವೋ, ಎಂಬ ಸಂಶಯವನ್ನು ಒಳ್ಳೇ ಶಕುನಗಳಿಂದ ಪರಿಹರಿಸಿಕೊಳ್ಳಬೇಕೆಂದರೆ--

ಗೀ ॥ ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ।
ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ॥ ೩೧ ॥

ಅ ॥ ಕೇಶವ=ಬ್ರಹ್ಮರುದ್ರರಿಗೂ ಸೃಷ್ಟಿಕರ್ತನಾದ ಶ್ರೀಕೃಷ್ಣನೇ, ವಿಪರೀತಾನಿ ನಿಮಿತ್ತಾನಿ ಚ=ವಿರುದ್ಧಗಳಾದ ದುಶ್ಶಕುನಗಳನ್ನು ಕೂಡ, ಪಶ್ಯಾಮಿ=ಕಾಣುತ್ತೇನೆ (ಯುದ್ಧದಿಂದ ಶ್ರೇಯಸ್ಸು ಬರಬಹುದೆಂದರೆ—) ಆಹವೇ=ಯುದ್ಧದಲ್ಲಿ, ಸ್ವಜನಂ=ಬಾಂಧವರನ್ನು, ಹತ್ವಾ=ಕೊಂದು, ಶ್ರೇಯಃ=ಒಳ್ಳೆಯದನ್ನು, ನಚ ಪಶ್ಯಾಮಿ=ಸರ್ವಥಾ ಹೊಂದಲಾರೆನು

ವಿ ॥ (1) ವಾಮಾಂಗಸ್ಫುರಣಾದಿರೂಪಗಳಾದ ಒಳ್ಳೆ ಶಕುನಗಳು ಅರ್ಜುನನಿಗೆ ಆಗಿದ್ದರೂ ಬಂಧುಗಳಲ್ಲಿ ಮಮತಾಭಿಮಾನವಿದ್ದ ಕಾರಣ ಅವುಗಳನ್ನು ಅರ್ಜುನನು ದುಶ್ಶಕುನಗಳನ್ನಾಗಿಯೇ ತಿಳಿದುಕೊಂಡನು. (2) ಪಾರತ್ರಿಕ ಶ್ರೇಯಸ್ಸು ಕಾಣದಿರುವುದರಿಂದ ಅದು ಸಿಗಬಹುದೆಂದು ಹೇಳಲಾಗುವುದಿಲ್ಲ (3) ರಾಜ್ಯವು ಲಭಿಸಿದುದಕ್ಕೆ ತಮ್ಮವರನ್ನು ಪೋಷಿಸುವುದು ಮುಖ್ಯ ಫಲವಾಗಿರುವುದರಿಂದ ಬಾಂಧವರನ್ನು ಕೊಂದರೆ ದೃಶ್ಯವಾದ ಶ್ರೇಯಸ್ಸೂ ಇಲ್ಲವೆಂದಾಗುವುದು ॥ ೩೧ ॥

ಪೀ—ಶತ್ರುಗಳಾದ ಬಾಂಧವರನ್ನು ಕೊಲ್ಲದೆ ನಿನಗೆ ವಿಜಯವು ಹೇಗೆ ಬರುವುದೆಂದರೆ—

ಗೀ ॥ ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ।
ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ॥೩೨॥

ಅ || ಕೃಷ್ಣ=ದುಷ್ಟಸಂಹಾರಕನಾದ ಶ್ರೀಕೃಷ್ಣನೇ, ವಿಜಯಂ=ಶತ್ರುಗಳಿಂದ ಜಯವನ್ನು, ನ ಕಾಂಕ್ಷೇ=ಇಚ್ಛಿಸಲಾರೆನು (ಜಯವಾಗದಿದ್ದರೆ ರಾಜ್ಯವು ಸಿಗಲಾರದೆಂದರೆ—) ರಾಜ್ಯಂ=ಸಾಮ್ರಾಜ್ಯವನ್ನು, ಸುಖಾನಿ ಚ=ಸುಖಗಳನ್ನೂ ಕೂಡ, ನಚ ಆಕಾಂಕ್ಷೇ=ಇಚ್ಛಿಸಲಾರೆನು (ಏಕೆಂದರೆ—) ಗೋವಿಂದ=ಶ್ರೀಕೃಷ್ಣನೇ, ನಃ=ನಮಗೆ, ರಾಜ್ಯೇನ=ಸಾಮ್ರಾಜ್ಯದಿಂದ, ಕಿಂ=ಏನು ಪ್ರಯೋಜನವು? (ಭೋಗಗಳೇ ಫಲಗಳೆಂದರೆ—) ಭೋಗೈಃ=ಭೋಗಗಳಿಂದ. ಕಿಂ=ಏನು ಪ್ರಯೋಜನವು? (ಭೋಗಗಳನ್ನು ಅನುಭವಿಸದಿದ್ದರೆ ಬದುಕಲಾರನೆಂದರೆ—) ಜೀವಿತೇನ ವಾ=ಬದುಕುವುದರಿಂದ, ಕಿಂ=ಏನು ಪ್ರಯೋಜನವು? || ೩೨ ||

ಟೀ—ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ಎಂದು ಹೇಳಿದುದನ್ನು ವಿವರಿಸುತ್ತಾರೆ—

ಗೀ || ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ |
ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ || ೩೩ ||

ಅ || ಯೇಷಾಮರ್ಥೇ=ಯಾರ ಪ್ರಯೋಜನಕ್ಕಾಗಿ, ನಃ=ನಮಗೆ, ರಾಜ್ಯಂ=ರಾಜ್ಯವು ಭೋಗಾಃ=ವಿಷಯಭೋಗಗಳೂ, ಸುಖಾನಿ ಚ=ಸುಖಗಳೂ ಕೂಡ, ಕಾಂಕ್ಷಿತಂ=ಇಚ್ಛಿಸಲ್ಪಟ್ಟವೆಯೋ, ತ ಇಮೇ=ಆ ಬಾಂಧವರೆಲ್ಲರೂ ಯುದ್ಧೇ=ಯುದ್ಧವಿಷಯದಲ್ಲಿ, ಪ್ರಾಣಾನ್=ಪ್ರಾಣಾದಿಗಳ ಆಶೆಗಳನ್ನೂ, ಧನಾನಿ ಚ=ದ್ರವ್ಯಗಳನ್ನೂ ಕೂಡ, ತ್ಯಕ್ತ್ವಾ=ತೊರೆದು ಅವಸ್ಥಿತಾಃ=ಸನ್ನದ್ಧರಾಗಿ ನಿಂತಿರುತ್ತಾರೆ || ೩೩ ||

ಟೀ—ಅವರು ಯಾರೆಂದರೆ—

ಗೀ || ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ |
ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ || ೩೪ ||

ಅ || ಆಚಾರ್ಯಾಃ=ಗುರುಗಳೂ, ಪಿತರಃ=ಪಿತೃಗಳಿಗೆ ಸಮಾನಿಕರೂ, ಪುತ್ರಾಃ=ಮಕ್ಕಳೂ ತಥೈವ=ಹಾಗೆಯೇ, ಪಿತಾಮಹಾಃ=ಭೀಷ್ಮಾದಿಗಳೂ, ಮಾತುಲಾಃ=ಸೋದರ ಮಾವಂದಿಯರೂ, ಶ್ವಶುರಾಃ=ಹೆಣ್ಣುಕೊಟ್ಟ ಮಾವಂದಿಯರೂ, ಪೌತ್ರಾಃ=ಮೊಮ್ಮಕ್ಕಳೂ, ಶ್ಯಾಲಾಃ=ಬಾವಮೈದುನರೂ, ತಥಾ=ಹಾಗೆಯೇ, ಸಂಬಂಧಿನಃ=ಸಂಬಂಧಿಕರೆಲ್ಲರೂ. (ಸನ್ನದ್ಧರಾಗಿ ನಿಂತಿರುತ್ತಾರೆ) || ೩೪ ||

ಗೀ || ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ |
ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ || ೩೫ ||

ಅ || (ಯುದ್ಧದಿಂದ ಹಿಂತೆರಳಿದ ನನ್ನನ್ನು) ಘ್ನತೋಪಿ=ಕೊಲ್ಲಲಿಕ್ಕೆ ಪ್ರವೃತ್ತಿಮಾಡಿದವರನ್ನೂ, ಹಂತುಂ=ಕೊಲ್ಲಲಿಕ್ಕೆ, ನೇಚ್ಛಾಮಿ=ಇಚ್ಛಿಸುವುದೇಇಲ್ಲ. ಮಧುಸೂದನ=ಮಧುದ್ವೇಷಿಯಾದ ಶ್ರೀಕೃಷ್ಣನೇ, ತ್ರೈಲೋಕ್ಯರಾಜ್ಯಸ್ಯಾಪಿ ಹೇತೋಃ=ಮೂರು ಲೋಕದ ಆಧಿಪತ್ಯವನ್ನು ಹೊಂದುವುದಕ್ಕಾಗಿಯೂ, ಏತಾನ್=ಈ ಬಾಂಧವರನ್ನು, (ಕೊಲ್ಲಲಿಕ್ಕೆ ಇಚ್ಛಿಸಲಾರೆನು ಹೀಗಿರಲು) ಮಹೀಕೃತೇ=ಭೂಲೋಕಾಧಿಪತ್ಯವನ್ನು ಮಾತ್ರ ಹೊಂದುವುದಕ್ಕಾಗಿ, ಕಿಂನು=ಇಚ್ಛಿಸಲಾರೆನೆಂದು ಏನು ಹೇಳಬೇಕು? || ೩೫ ||

ಟೀ—ಶತ್ರುಗಳನ್ನು ಕೊಂದರೆ ಮನಸ್ತೃಪ್ತಿಯಾಗುತ್ತದೆಂದರೆ—

**ಗೀ || ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ಹತ್ವೈತಾನಾತತಾಯಿನಃ || ೩೬ ||**

**ಅ ||** ಜನಾರ್ದನ=ತಾನು ಹುಟ್ಟದಿದ್ದು ಭಕ್ತರ ಸಂಸಾರದುಃಖವನ್ನು ಪರಿಹರಿಸುವ ಶ್ರೀಕೃಷ್ಣನೇ, ನಃ=ನಮ್ಮವರಾದ ಧಾರ್ತರಾಷ್ಟ್ರಾನ್=ದುರ್ಯೋಧನಾದಿಗಳನ್ನು, ನಿಹತ್ಯ=ಸಂಹರಿಸಿ, ನಃ=ನಮಗೆ, ಕಾ ಪ್ರೀತಿಃ=ಏನು ಸಂತೋಷವು? (ಅಂದರೆ ಐಹಿಕ ಸುಖವೂ ಪಾರತ್ರಿಕ ಸುಖವೂ ಸರ್ವಥಾ ಉಂಟಾಗಲಾರದು) ಪರಂತು, ಆತತಾಯಿನಃ=ಆತತಾಯಿಗಳಾಗಿದ್ದರೂ, ಏತಾನ್=ಈ ಶತ್ರುಗಳನ್ನು ಹತ್ವಾ=ಸಂಹಾರಮಾಡಿರುವ, ಅಸ್ಮಾನ್=ನಮ್ಮನ್ನು, ಪಾಪಮೇವ=(ಪಾರತ್ರಿಕಸುಖಕ್ಕೆ ವಿರೋಧಿಯಾಗಿದ್ದು ಪಾರತ್ರಿಕ ದುಃಖಕ್ಕೆ ಕಾರಣವಾದ) ಪಾಪವೇ, ಆಶ್ರಯೇತ್=ಹೊಂದುವುದು

**ವಿ || (1) ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹೃತ್ । ಕ್ಷೇತ್ರದಾರಾಪಹಾರೀ ಚ ಷಡೇತೇ ಹ್ಯಾತತಾಯಿನಃ** ಮನೆಗೆ ಬೆಂಕಿ ಕೊಡುವವರು, ವಿಷಪ್ರಯೋಗ ಮಾಡುವವರು, ಶಸ್ತ್ರಗಳನ್ನು ಕೈಯಲ್ಲಿ ಹಿಡಿದುಕೊಳ್ಳುವವರು, ಪರರ ದ್ರವ್ಯವನ್ನೂ ಗದ್ದೆಗಳನ್ನೂ ಹೆಂಡಂದಿಯರನ್ನೂ ಅಪಹರಿಸುವವರು ಈ ಆರು ಮಂದಿ ಆತತಾಯಿಗಳೆನ್ನಿಸಿಕೊಳ್ಳುತ್ತಾರೆ (2) **ಆತತಾಯಿನಮಾಯಾಂತಂ ಹನ್ಯಾದೇವಾವಿಚಾರಯನ್ । ನಾತತಾಯಿವಧೇ ದೋಷೋ ಹಂತುರ್ಭವತಿ ಕಶ್ಚನ** ಅಂತಹ ಆತತಾಯಿಗಳನ್ನು ನಿರ್ವಿಚಾರವಾಗಿ ಕೊಲ್ಲಲೇಬೇಕು ಅಂತಹವರನ್ನು ಕೊಂದರೆ ದೋಷವು ಬರುವುದಿಲ್ಲ ಎಂಬ ಪ್ರಮಾಣದಿಂದ ದುರ್ಯೋಧನಾದಿಗಳನ್ನು ಕೊಲ್ಲಲೇಬೇಕು ಪಾಪವು ಸರ್ವಥಾ ಬರುವುದಿಲ್ಲ ಆದರೆ ಅವರನ್ನು ಕೊಲ್ಲುವಾಗ ಅವರೊಂದಿಗಿರುವ ಬಂಧುಗಳೂ ಪೂಜ್ಯರೂ ಆದ ಭೀಷ್ಮಾದಿಗಳನ್ನು ಸಂಹರಿಸಬೇಕಾಗುವುದರಿಂದ ಪಾಪವು ಬರುವುದೆಂದು ಅರ್ಜುನನ ಅಭಿಪ್ರಾಯವು || ೩೬ ||

**ಗೀ || ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ಸ್ವಬಾಂಧವಾನ್ ।**
**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ || ೩೭ ||**

**ಅ ||** ಮಾಧವ=ಲಕ್ಷ್ಮೀಪತಿಯಾದ ಶ್ರೀಕೃಷ್ಣನೇ, ತಸ್ಮಾತ್=ಐಹಿಕಾಮುಷ್ಮಿಕ ಫಲಗಳು ಇಲ್ಲವೆಂದು ಮಾತ್ರವಲ್ಲದೆ ಪಾಪವೇ ಬರುವುದರಿಂದ, ಧಾರ್ತರಾಷ್ಟ್ರಾನ್ ಸ್ವಬಾಂಧವಾನ್=ದುರ್ಯೋಧನಾದಿಗಳು ನಮಗೆ ಬಂಧುಗಳಾಗಿರುವುದರಿಂದ ಅವರನ್ನು, ವಯಂ=ನಾವು, ಹಂತುಂ=ಕೊಲ್ಲಲಿಕ್ಕೆ, ನಾರ್ಹಾಃ=ಯೋಗ್ಯರಲ್ಲ. (ಅಂದರೆ ನಮ್ಮವರನ್ನು ಕೊಂದರೆ ದುಃಖವೇ ಆಗುವುದು, ಸುಖವು ಆಗಲಾರದು) ಹಿ=ಏಕೆಂದರೆ, ಮಾಧವ=ಶ್ರೀಕೃಷ್ಣನೇ, ಸ್ವಜನಂ=ಪ್ರೀತಿಪಾತ್ರರಾದ ನಮ್ಮ ಬಂಧುಗಳನ್ನು, ಹತ್ವಾ=ಕೊಂದು, ಸುಖಿನಃ=ಸುಖವುಳ್ಳವರು ಕಥಂ=ಹೇಗೆ, ಸ್ಯಾಮ=ಆದೇವು

**ವಿ ||** ರಾಜಸುಖವನ್ನುದ್ದೇಶಿಸಿ ಯುದ್ಧಮಾಡಬೇಕು ಬಂಧುಗಳನ್ನು ಕೊಂದರೆ—ಅವರ ದರ್ಶನ ಸ್ಪರ್ಶನ ಮೊದಲಾದವುಗಳು ಇಲ್ಲವೆಂದಾಗಬೇಕಾಗುವುದರಿಂದ ಸುಖವುಂಟಾಗಲಾರದು ದುಃಖವೇ ಉಂಟಾಗುವುದು || ೩೭ ||

**ಪೀ**—ಹೇಗೆ ಆ ದುರ್ಯೋಧನಾದಿಗಳು ನಮ್ಮವರನ್ನು ಕೊಲ್ಲಲಿಕ್ಕೆ ಪ್ರವರ್ತಿಸುತ್ತಾರೋ, ಹಾಗೆಯೇ ನಿನಗೂ ಪ್ರವರ್ತಿಸಬಹುದಷ್ಟೆ ದುಃಖಿಸುವುದು ಏತಕ್ಕೆಂದರೆ—

ಗೀ || ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ |
ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಂ || ೩೮ ||
ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಂ |
ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ || ೩೯ ||

ಅ || ಯದ್ಯಪಿ, ಏತೇ = ಈ ದುರ್ಯೋಧನಾದಿಗಳು, ಲೋಭೋಪಹತಚೇತಸಃ = ರಾಜ್ಯವನ್ನು ಪಡೆಯಬೇಕೆಂಬ ದುರಾಶೆಯಿಂದ ಧರ್ಮಜ್ಞಾನಗಳಿಲ್ಲದವರಾಗಿ, ಕುಲಕ್ಷಯಕೃತಂ = ವಂಶದ ನಾಶದಿಂದುಂಟಾಗುವ, ದೋಷಂ = ದೋಷವನ್ನು, ಮಿತ್ರದ್ರೋಹೇ ಚ = ಗೆಳೆಯರ ದ್ರೋಹದಿಂದುಂಟಾಗುವ, ಪಾತಕಂ ಚ = ಪಾಪವನ್ನು ಕೂಡ, ನ ಪಶ್ಯಂತಿ = ತಿಳಿಯಲಾರರು (ಆದರೂ) ಜನಾರ್ದನ = ತಾನು ಹುಟ್ಟಿದಿದು ಭಯಕರ ಸಂಸಾರದುಃಖವನ್ನು ಪರಿಹರಿಸುವ ಶ್ರೀಕೃಷ್ಣನೇ, ಕುಲಕ್ಷಯಕೃತಂ = ಕುಲನಾಶದಿಂದ ಉಂಟಾಗುವ, ದೋಷಂ = ದೋಷವನ್ನು, ಪ್ರಪಶ್ಯದ್ಭಿಃ = ಧರ್ಮಶಾಸ್ತ್ರದಿಂದ ಚೆನ್ನಾಗಿ ತಿಳಿಯುವ, ಅಸ್ಮಾಭಿಃ = ನಮ್ಮಿಂದ ಅಸ್ಮಾತ್ ಪಾಪಾತ್ = ಈ ಪಾಪ(ದೋಷ)ದಿಂದ, ನಿವರ್ತಿತುಂ ಹಿಂತೆರಳಲಿಕ್ಕೆ, ಕಥಂ = ಹೇಗೆ ನ ಜ್ಞೇಯಂ - ತಿಳಿಯಲ್ಪಡದಿರುವುದು? (ಅಂದರೆ ಇದು ಪಾತಕವೆಂದು ತಿಳಿದು ಮಾಡುವವನಿಗೆ ಮಹಾದೋಷವಿರುವುದರಿಂದ ದೋಷವೆಂದು ತಿಳಿಯುತ್ತಿರುವ ನಾವು ಅವಶ್ಯವಾಗಿ ಬಿಡಲೇಬೇಕು || ೩೮ || ೩೯ ||

ಹೀ—ಕುಲನಾಶವಾದರೆ ಏನು ದೋಷವುಂಟಾಗುತ್ತದೆ? ಎಂದರೆ—

ಗೀ || ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ |
ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ || ೪೦ ||

ಅ || ಕುಲಕ್ಷಯೇ - ವಂಶವು ನಾಶವಾದರೆ ಸನಾತನಾಃ = ಪರಂಪರೆಯಾಗಿ ಬಂದಿರುವ ಕುಲಧರ್ಮಾಃ = ಕ್ಷತ್ರಿಯ ಮೊದಲಾದ ಕುಲಧರ್ಮಗಳು, ಪ್ರಣಶ್ಯಂತಿ = ಸಂಪೂರ್ಣವಾಗಿ ಕೆಟ್ಟುಹೋಗುತ್ತವೆ ಧರ್ಮೇ ನಷ್ಟೇ ಧರ್ಮವು ಸಂಪೂರ್ಣ ಕೆಟ್ಟುಹೋಗುತ್ತಿರಲು, ಕೃತ್ಸ್ನಮುತ ಕುಲಂ ಮಿಕ್ಕ ಯಾವತ್ತು ವಂಶವನ್ನು, ಅಧರ್ಮಃ ಅಭಿಭವತಿ = ಅಧರ್ಮವು ವ್ಯಾಪಿಸುತ್ತದೆ (ಅಂದರೆ ಸಂಪೂರ್ಣ ವಂಶದಲ್ಲಿ ಅಧರ್ಮವು ಹಬ್ಬುತ್ತದೆ) || ೪೦ ||

ಗೀ || ಅಧರ್ಮಾಭಿಭವಾತ್ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ |
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ || ೪೧ ||

ಅ || ಕೃಷ್ಣ = ಶ್ರೀಕೃಷ್ಣನೇ, ಅಧರ್ಮಾಭಿಭವಾತ್ = ಅಧರ್ಮವು ತುಂಬಿರುವುದರಿಂದ ಕುಲಸ್ತ್ರಿಯಃ ಸತ್ಕುಲದಲ್ಲಿ ಹುಟ್ಟಿದ ಸ್ತ್ರೀಯರು ಪ್ರದುಷ್ಯಂತಿ = ಸಂಪೂರ್ಣ ಕೆಟ್ಟುಹೋಗುತ್ತಾರೆ ವಾರ್ಷ್ಣೇಯ = ವೃಷ್ಣಿಕುಲದಲ್ಲಿ ಅವತಾರಮಾಡಿದ ಶ್ರೀಕೃಷ್ಣನೇ, ಸ್ತ್ರೀಷು ದುಷ್ಟಾಸು = ಕುಲೀನಸ್ತ್ರೀಯರು ಕೆಟ್ಟುಹೋದರೆ, ವರ್ಣಸಂಕರಃ = ಬ್ರಾಹ್ಮಣಾದಿ ವರ್ಣಗಳಿಗೆ ಸಾಂಕರ್ಯವು ಜಾಯತೇ ಉಂಟಾಗುತ್ತದೆ || ೪೧ ||

ಗೀ || ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ |
ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ || ೪೨ ||

ಅ || ಸಂಕರಃ= ವರ್ಣಸಾಂಕರ್ಯವು, ಕುಲಘ್ನಾನಾಂ= ಕುಲವನ್ನು ನಾಶ ಮಾಡುವವರಿಗೂ, ಕುಲಸ್ಯ ಚ= ಪುತ್ರ ಪೌತ್ರಾದಿರೂಪ ಸಂತಾನಕ್ಕೂ, ನರಕಾಯೈವ= ನರಕಕ್ಕೋಸ್ಕರವೇ (ಕಾರಣವಾಗುತ್ತದೆ) ಏಷಾಂ= ಕುಲವನ್ನು ನಾಶಮಾಡಿದವರ, ಪಿತರಃ= ಪಿತೃಗಳು, ಲುಪ್ತಪಿಂಡೋದಕಕ್ರಿಯಾಃ= ಪಿಂಡದಾನ, ಉದಕದಾನ, ಉತ್ತರಕ್ರಿಯೆಗಳನ್ನು ಮಾಡುವವರು ಇಲ್ಲದವರಾಗಿ, ಪತಂತಿ= ನರಕದಲ್ಲಿ ಬೀಳುತ್ತಾರೆ ಹಿ= ನಿಶ್ಚಯ || ೪೨ ||

ಗೀ || ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ |
ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ || ೪೩ ||

ಅ || ವರ್ಣಸಂಕರಕಾರಕೈಃ= ವರ್ಣಗಳಿಗೆ ಸಾಂಕರ್ಯವನ್ನುಂಟುಮಾಡುವ, ಕುಲಘ್ನಾನಾಂ= ಕುಲಘಾತಕರ, ಏತೈಃ ದೋಷೈಃ= ಈ ದೋಷಗಳಿಂದ, ಶಾಶ್ವತಾಃ= ವಂಶಪರಂಪರೆಯಿಂದ ಬಂದಿರುವ, ಜಾತಿಧರ್ಮಾಃ= ಕ್ಷತ್ರಿಯತ್ವ ಮೊದಲಾದ ಜಾತಿಯನ್ನು ನಿಮಿತ್ತೀಕರಿಸಿಕೊಂಡು ಬಂದ ಧರ್ಮಗಳೂ, ಕುಲಧರ್ಮಾಶ್ಚ= ಕುಲಾಚಾರಧರ್ಮಗಳೂ ಆಶ್ರಮಧರ್ಮಗಳೂ ಕೂಡ, ಉತ್ಸಾದ್ಯಂತೇ= ನಾಶಗೊಳಿಸಲ್ಪಡುತ್ತವೆ || ೪೩ ||

ಗೀ || ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ |
ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ || ೪೪ ||

ಅ || ಜನಾರ್ದನ= ಶ್ರೀಕೃಷ್ಣನೇ ಉತ್ಸನ್ನಕುಲಧರ್ಮಾಣಾಂ= ಕುಲಧರ್ಮಗಳನ್ನೂ ಜಾತಿಧರ್ಮಗಳನ್ನೂ ಕೆಡಿಸಿಕೊಂಡಿರುವ, ಮನುಷ್ಯಾಣಾಂ=ಮನುಷ್ಯರಿಗೆ, ನರಕೇ= ನರಕದಲ್ಲಿ, ವಾಸಃ=ಆವಾಸವು, ನಿಯತಂ= ನಿಶ್ಚಯವಾಗಿಯೂ, ಭವತೀತಿ= ಆಗುತ್ತದೆಂದು, ಅನುಶುಶ್ರುಮ= ಕೇಳಿರುತ್ತೇವೆ

ವಿ || ಪ್ರಾಯಶ್ಚಿತ್ತಮಕುರ್ವಾಣಾಃ ಪಾಪೇಷು ನಿರತಾ ನರಾಃ | ಅಪಶ್ಚಾತ್ತಾಪಿನಃ ಕಷ್ಟಾನ್ನಿರಯಾನ್ಯಾಂತಿ ದಾರುಣಾನ್ ಇತ್ಯಾದಿ ಪ್ರಕಾರ ಜ್ಞಾನವೃದ್ಧರಿಂದ ಕೇಳಿರುತ್ತೇವೆ || ೪೪ ||

ಪೀ—ಬಾಂಧವರನ್ನು ಸಂಹಾರಮಾಡಿದರೆ ದೋಷವದೆ ಎಂದು ತಿಳಿದುಕೊಂಡು ಅದರಿಂದ ಸಂತಾಪವನ್ನು ಹೊಂದಿ ಹೇಳುತ್ತಾನೆ—

ಗೀ || ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಂ |
ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ || ೪೫ ||

ಅ || ರಾಜ್ಯಸುಖಲೋಭೇನ= ಸಾಮ್ರಾಜ್ಯಪ್ರಾಪ್ತಿಯಿಂದ ಸಿಗತಕ್ಕ ಸುಖದ ಅತ್ಯಾಶೆಯಿಂದ, ಸ್ವಜನಂ— ನಮ್ಮ ಬಂಧುಜನರನ್ನು, ಹಂತುಂ= ಕೊಲ್ಲಲಿಕ್ಕೆ, ವಯಂ= ನಾವು, ಉದ್ಯತಾಃ ಇತಿ ಯತ್= ಸನ್ನದ್ಧರಾಗಿರುತ್ತೇವೆ ಎಂಬೀ, ಮಹತ್ಪಾಪಂ= ಮಹಾಪಾಪಕರ್ಮವನ್ನು, ಕರ್ತುಂ= ಮಾಡಲಿಕ್ಕೆ, ವ್ಯವಸ್ಥಿತಾಃ= ನಿಶ್ಚಯವುಳ್ಳವರಾಗಿರುತ್ತೇವೆ ಅಹೋ ಬತ= ಬಹಳ ಕಷ್ಟವು || ೪೫ ||

ಪೀ—ಆದಕಾರಣ ಮರಣವೇ ಪ್ರಶಸ್ತವೆನ್ನುತ್ತಾನೆ—

ಗೀ ॥ ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।
ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥ ೪೬ ॥

ಅ ॥ ಅಪ್ರತೀಕಾರಂ= ದುರ್ಯೋಧನಾದಿಗಳು ಅಪಕಾರ ಮಾಡಿದರೂ ಪ್ರತಿಕಾರ ಮಾಡದಿರುವ, ಅಶಸ್ತ್ರಂ= ಶಸ್ತ್ರವನ್ನು ಧರಿಸದೆ ಸುಮ್ಮನೆ ಕುಳಿತಿರುವ ಅಥವಾ ಶಸ್ತ್ರವನ್ನು ಕೆಳಗಿಟ್ಟು ಸುಮ್ಮನೆ ಕುಳಿತ, ಮಾಂ= ನನ್ನನ್ನು ಧಾರ್ತರಾಷ್ಟ್ರಾಃ= ದುರ್ಯೋಧನಾದಿಗಳು ಶಸ್ತ್ರಪಾಣಯಃ= ಕೈಯಲ್ಲಿ ಶಸ್ತ್ರಗಳನ್ನು ಧರಿಸಿದವರಾಗಿ, ರಣೇ= ಯುದ್ಧದಲ್ಲಿ, ಯದಿ ಹನ್ಯುಃ= ಕೊಂದಪಕ್ಷದಲ್ಲಿ, ತತ್= ಆ ಸಂಹಾರವು, ಮೇ= ನನಗೆ ಕ್ಷೇಮತರಂ= ಅತ್ಯಂತ ಹಿತಕರವಾದದ್ದೇ, ಭವೇತ್— ಆಗುವುದು

ವಿ ॥ ಹೇಗೆಂದರೆ ಬಂಧುಗಳನ್ನು ಕೊಲ್ಲೋಣದರಿಂದ ನನಗೆ ದೋಷವು ಬರುವುದಿಲ್ಲ, ಅಲ್ಲದೆ ಶಸ್ತ್ರರಹಿತನಾದ ನನ್ನನ್ನು ಶಸ್ತ್ರಧಾರಿಗಳಾಗಿ ಕೊಂದರೆ ಶತ್ರುಗಳಿಗೆ ಪಾಪವು ಲಭಿಸುವುದು, ನನಗೆ ಸದ್ಗತಿಯಾಗುವುದು ಆದಕಾರಣ ಅತ್ಯಂತ ಹಿತಕರವೇ ಆಗುವುದು ॥ ೪೬ ॥

ಗೀ ॥ ಸಂಜಯ ಉವಾಚ

ಏವಮುಕ್ತ್ವಾಽರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ ।
ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥ ೪೭ ॥

ಅ ॥ ಸಂಜಯನು (ಧೃತರಾಷ್ಟ್ರನಿಗೆ) ಹೇಳಿದನು. ಅರ್ಜುನಃ= ಅರ್ಜುನನು, ಏವಂ= ಹೀಗೆ, ಉಕ್ತ್ವಾ= ಹೇಳಿ, ಶೋಕಸಂವಿಗ್ನಮಾನಸಃ= ದುಃಖಯುಕ್ತವಾದ ಮನಸ್ಸುಳ್ಳವನಾಗಿ, ಸಶರಂ - ಬಾಣದಿಂದ ಕೂಡಿದ ಚಾಪಂ= ಬಿಲ್ಲನ್ನು (ಗಾಂಡೀವವನ್ನು), ವಿಸೃಜ್ಯ= ತೊರೆದು, ಸಂಖ್ಯೇ— ರಣರಂಗದಲ್ಲಿ ರಥೋಪಸ್ಥೇ= ರಥದ ಮಧ್ಯದಲ್ಲಿ, ಉಪಾವಿಶತ್= ಕುಳಿತನು ॥ ೪೭ ॥

ಗೀ ॥ ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇಽರ್ಜುನವಿಷಾದಯೋಗೋ ನಾಮ ಪ್ರಥಮೋಽಧ್ಯಾಯಃ ॥ ೧ ॥

ಅ ॥ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ಅರ್ಜುನವಿಷಾದಯೋಗವೆಂಬ ಒಂದನೇ ಅಧ್ಯಾಯವು ಮುಗಿಯಿತು ॥ ೧ ॥

॥ ಶ್ರೀಕೃಷ್ಣಾರ್ಪಣಮಸ್ತು ॥

|| ಶ್ರೀಃ ||

# ಎರಡನೇ ಅಧ್ಯಾಯವು.

ಪೀ—ಆಮೇಲೆ ಏನಾಯಿತೆಂಬ ಧೃತರಾಷ್ಟ್ರನ ಪ್ರಶ್ನೆಗೆ ಸಂಜಯನು ಉತ್ತರಿಸಿದನು—

ಗೀ || ಸಂಜಯ ಉವಾಚ

**ತಂ ತಥಾ ಕೃಪಯಾಽಽವಿಷ್ಟಮಶ್ರುಪೂರ್ಣಾಕುಲೇಕ್ಷಣಂ |**
**ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ || ೧ ||**

ಅ || ಸಂಜಯನು ಹೇಳುತ್ತಾನೆ ತಥಾ ಕೃಪಯಾ=ಬಂಧುಗಳ ಮೇಲಿನ ಮಮತೆ ಮತ್ತು ದಯೆ ಇವುಗಳಿಂದ, ಆವಿಷ್ಟಂ=ಕೂಡಿರುವ, ಅಶ್ರುಪೂರ್ಣಾಕುಲೇಕ್ಷಣಂ=ಕಣ್ಣೀರು ತುಂಬಿದುದರಿಂದ ವಿಷಯಗಳನ್ನು ಗ್ರಹಿಸಲಿಕ್ಕೆ ಅಸಮರ್ಥಗಳಾದ ಕಣ್ಣುಗಳುಳ್ಳ, ತಥಾ ವಿಷೀದಂತಂ=ಹಿಂದೆ ಹೇಳಿದ ಪ್ರಕಾರ ಕ್ಲೇಶಪಡುತ್ತಿದ್ದ, ತಂ=ಆ ಅರ್ಜುನನ್ನು ಕುರಿತು, ಮಧುಸೂದನಃ=ಮಧುನಾಮಕ ದೈತ್ಯನನ್ನು ನಾಶಪಡಿಸಿದ ಶ್ರೀಕೃಷ್ಣನು, ಇದಂ ವಾಕ್ಯಂ=ಮುಂದೆ ಹೇಳುವ ಮಾತನ್ನು, ಉವಾಚ=ಹೇಳಿದನು || ೧ ||

ಗೀ || ಶ್ರೀಭಗವಾನುವಾಚ

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ |**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ || ೨ ||**

ಅ || ಶ್ರೀಕೃಷ್ಣನು ಹೇಳುತ್ತಾನೆ ಅರ್ಜುನ=ಎಲೋ ಅರ್ಜುನನೇ, ಅನಾರ್ಯಜುಷ್ಟಂ=ಪೂಜ್ಯರಿಂದ ಸೇವಿಸಲ್ಪಡದಿರುವ, ಅಸ್ವರ್ಗ್ಯಂ=ಸ್ವರ್ಗ ಯಾ ಧರ್ಮಸಾಧನವಾಗದಿರುವ, ಅಕೀರ್ತಿಕರಂ=ಅಪಕೀರ್ತಿಯನ್ನುಂಟುಮಾಡುವ, ಪರಲೋಕಕ್ಕೆ ವಿರೋಧಿಯಾದ ಅಪಯಶಸ್ಸನ್ನುಂಟುಮಾಡುವ, ಇದಂ ಕಶ್ಮಲಂ=ಈ ಮೂಢಭಾವವು (ರಣರಂಗದಿಂದ ಹಿಂತೆರಳುವುದು). ತ್ವಾ=ನಿನ್ನನ್ನು, ಕುತಃ=ಯಾವ ಕಾರಣದಿಂದ, ವಿಷಮೇ=ಯುದ್ಧೋಪಕ್ರಮಕಾಲದಲ್ಲಿ, ಸಮುಪಸ್ಥಿತಂ=ಬಂದುಸೇರಿತು ಅಥವಾ ಯುದ್ಧದಿಂದ ಹಿಂತೆರಳುವುದು, ಕುತಃ=ನಿನಗೆ ಮಮತಾನಿಮಿತ್ತವಾಗಿಯೇ ಬಂದದ್ದು ಇದಂ=ಇದು ಅತ್ಯಾಶ್ಚರ್ಯವನ್ನು ಕೊಡುತ್ತದೆ ಏಕೆಂದರೆ—ಇದು ಮೂಢರಿಂದ ಸೇವಿಸಲ್ಪಡತಕ್ಕದು, ಸ್ವರ್ಗದಲ್ಲಿದ್ದ ಭೋಗಗಳೂ ಇದರಿಂದ ಲಭಿಸಲಾರವು ಅಲ್ಲದೆ ಇಲ್ಲಿ ಅಪಕೀರ್ತಿಯನ್ನೇ ಉಂಟುಮಾಡುವುದು || ೨ ||

**ಗೀ || ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ |**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ || ೩ ||**

ಅ || ಪಾರ್ಥ=ಅರ್ಜುನನೇ, ಕ್ಲೈಬ್ಯಂ=ನಪುಂಸಕತನವನ್ನು (ಹೇಡಿತನವನ್ನು), ಮಾಸ್ಮಗಮಃ=ಹೊಂದಬೇಡ ಏತತ್=ಈ ನಪುಂಸಕತನವು, ತ್ವಯಿ=ಕ್ಷತ್ರಿಯಶ್ರೇಷ್ಠನಾದ ನಿನ್ನಲ್ಲಿ, ನೋಪಪದ್ಯತೇ=ಯುಕ್ತವಲ್ಲ ಪರಂತಪ=ಶತ್ರುಗಳನ್ನು ಸಂತಾಪಗೊಳಿಸುವ ಅರ್ಜುನನೇ, ಕ್ಷುದ್ರಂ=ಅತಿಹೀನವಾದ, ಹೃದಯದೌರ್ಬಲ್ಯಂ=ಮನಸ್ಸಿನಲ್ಲಿರುವ ದುರ್ಬಲತನವನ್ನು (ಅನುತ್ಸಾಹರೂಪ ಖೇದವನ್ನು), ತ್ಯಕ್ತ್ವಾ=

ಬಿಟ್ಟು, ಉತ್ತಿಷ್ಠ=ಯುದ್ಧಕ್ಕೆ ಸನ್ನದ್ಧನಾಗು (ಏವಂಚ ಮನಸ್ಸಿಗೆ ದೌರ್ಬಲ್ಯವನ್ನುಂಟುಮಾಡುವ ಅಧೈರ್ಯವನ್ನು ತೊರೆದು ಯುದ್ಧಕ್ಕೆ ಸನ್ನದ್ಧನಾಗು) ॥ ೩ ॥

ಗೀ ॥ **ಅರ್ಜುನ ಉವಾಚ**

**ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥ ೪ ॥**

ಅ ॥ (ಶ್ರೀಕೃಷ್ಣನು ಅರ್ಜುನನಿಗೆ ಹಿತವನ್ನುಪದೇಶಿಸಿದರೂ ಬಂಧುಗಳಲ್ಲಿ ಸ್ನೇಹದಿಂದ ಸಂಭ್ರಾಂತನಾಗಿ ಶ್ರೀಕೃಷ್ಣನು ಉಪದೇಶಿಸಿದ್ದು ಹಿತವೆಂದು ತಿಳಿಯದವನಂತೆ) ಅರ್ಜುನನು (ಮರಳಿ ಬಾಂಧವರಲ್ಲಿ ಸ್ನೇಹಪೂರ್ವಕವಾದ ದಯೆಯಿಂದ ವ್ಯಥಪಟ್ಟವನಾಗಿ) ಹೇಳುತ್ತಾನೆ ಅರಿಸೂದನ=ಶತ್ರುಸಂಹಾರಕನಾದ, ಮಧುಸೂದನ=ಶ್ರೀಕೃಷ್ಣನೇ, ಪೂಜಾರ್ಹೌ=ನನ್ನಿಂದ ಪೂಜಿಸಿಕೊಳ್ಳಲಿಕ್ಕೆ ಯೋಗ್ಯರಾದ, ಭೀಷ್ಮಂ=ಭೀಷ್ಮಾಚಾರ್ಯರನ್ನು, ದ್ರೋಣಂ ಚ=ದ್ರೋಣಾಚಾರ್ಯರನ್ನೂ, ಸಂಖ್ಯೇ ರಣಾಂಗಣದಲ್ಲಿ, ಅಹಂ ನಾನು, ಕಥಂ=ಹೇಗ, ಇಷುಭಿಃ=ಬಾಣಗಳಿಂದ, ಪ್ರತಿಯೋತ್ಸ್ಯಾಮಿ- ಯುದ್ಧಮಾಡಲಿ ॥ ೪ ॥

ಹೀ—ಭೀಷ್ಮದ್ರೋಣಾದಿಗಳನ್ನು ಸಂಹರಿಸದಿದ್ದರೆ ರಾಜ್ಯವು ಸಿಗದಿರುವುದರಿಂದ ಶರೀರವನ್ನು ರಕ್ಷಿಸಲಿಕ್ಕೆ ಉಪಾಯವೇ ಇಲ್ಲವೆಂದಾಗುವುದು ಎಂದರೆ--

ಗೀ ॥ **ಗುರೂನಹತ್ವಾ ಹಿ ಮಹಾನುಭಾವಾನ್**
**ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ ।**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ**
**ಭುಂಜೀಯ ಭೋಗಾನ್ರುಧಿರಪ್ರದಿಗ್ಧಾನ್ ॥ ೫ ॥**

ಅ ॥ ಮಹಾನುಭಾವಾನ್— ಭಗವದ್ಭಕ್ತ್ಯಾದಿ ಗುಣಗಳಿರುವ ಗುರೂನ್- ದ್ರೋಣಾದಿ ಗುರುಗಳನ್ನು, ಅಹತ್ವಾ=ಸಂಹರಿಸದೆ, ಇಹ ಲೋಕೇ=ಈ ಭೂಲೋಕದಲ್ಲಿ, ಭೈಕ್ಷ್ಯಮಪಿ=ಭಿಕ್ಷಾಟನದಿಂದ ಸಿಗುವ ಅನ್ನವಾದರೂ, ಭೋಕ್ತುಂ=ಭುಂಜಿಸುವುದಕ್ಕೆ ಶ್ರೇಯಃ- ಶ್ರೇಷ್ಠವೆಂದು, ಹಿ=ಪ್ರಸಿದ್ಧ (ಅಂದರೆ ಪಾರತ್ರಿಕದುಃಖವಿಲ್ಲದಿರುವುದರಿಂದ ಭಿಕ್ಷಾಟನದಿಂದ ಸಿಗತಕ್ಕ ಅನ್ನವನ್ನು ಉಣ್ಣುವುದೇ ಒಳ್ಳೇದು ಯುದ್ಧವು ಬೇಡ) (ಭೀಷ್ಮಾದಿಗಳನ್ನು ಕೊಂದರೆ ಪಾರತ್ರಿಕ ದುಃಖ ಮಾತ್ರವಲ್ಲ ಇಲ್ಲಿಯೂ ದುಃಖವದೆ ಎನ್ನುತ್ತಾರೆ--) ಅರ್ಥಕಾಮಾನ್-ಧನಾದಿಗಳನ್ನು ಇಚ್ಛಿಸುತ್ತಿರುವ ಗುರೂನ್ ದ್ರೋಣಾದಿ ಗುರುಗಳನ್ನು ಹತ್ವಾ=ಸಂಹರಿಸಿ, ಭೋಗಾನ್-ಭೀಷ್ಮಾದಿಗಳಿಂದ ಭೋಗಿಸಲ್ಪಡುವ ರಾಜ್ಯಭೋಗಗಳನ್ನೂ, ರುಧಿರಪ್ರದಿಗ್ಧಾನ್=ಅವರ ರಕ್ತಗಳಿಂದಲೇ ಚೆನ್ನಾಗಿ ತೋಯಿಸಲ್ಪಟ್ಟವುಗಳನ್ನು, ಇಹೈವ-ಅವರ ಆಸನಾದಿಗಳಲ್ಲಿಯೇ ಕುಳಿತು ಭುಂಜೀಯ ತು=ಹೇಗೆ ಅನುಭವಿಸಲಿ (ಇದರಿಂದ ಪರಲೋಕದುಃಖದಿಂದಲೂ ಹೆಚ್ಚು ದುಃಖವು ಅಲ್ಲದೆ ಪರಲೋಕದಲ್ಲಿ ಪುನಃ ಮೋಕ್ಷವನ್ನು ಹೊಂದಲಾರೆವು) ॥ ೫ ॥

ಹೀ—ಅಧರ್ಮವನ್ನಂಗೀಕರಿಸಿ ಯುದ್ಧ ಮಾಡಿದರೂ ಜಯಪರಾಜಯಗಳು ಅವರಿಗೋ ನಮಗೋ ಎಂದು ತಿಳಿಯಲಶಕ್ಯವೇ ಎನ್ನುತ್ತಾರೆ--

ಗೀ || ನ ಚೈತದ್ವಿದ್ಮಃ ಕತರನ್ನೋ ಗರೀಯೋ
ಯದ್ವಾ ಜಯೇಮ ಯದಿ ವಾ ನೋ ಜಯೇಯುಃ |
ಯಾನೇವ ಹತ್ವಾ ನ ಜಿಜೀವಿಷಾಮ-
ಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ || ೬ ||

ಅ || ಯದ್ವಾ ಜಯೇಮ=ನಾವೇ ಭೀಷ್ಮಾದಿಗಳನ್ನು ಗೆಲ್ಲುವೆವೋ ಯದಿ ವಾ=ಅಥವಾ, ನಃ=ನಮ್ಮನ್ನೇ, ಜಯೇಯುಃ=ದುರ್ಯೋಧನಾದಿಗಳು ಗೆಲ್ಲುವರೋ, (ಈ ಎರಡರಲ್ಲಿ) ನಃ=ನವ ಗೆ, ಕತರತ್=ಯಾವುದು ಗರೀಯಃ=ಅಧಿಕವಾಗುವುದೋ, ಏತತ್=ಇದನ್ನು ನ ವಿದ್ಮಃ=(ನಾವು) ತಿಳಿಯಲಾರೆವು (ನವಗೆ ಸೋಲಾಗುವುದೋ, ಅವರಿಗೆ ಸೋಲೋ ಎಂಬುವುದನ್ನು ತಿಳಿಯುವುದಿಲ್ಲ) (ಇಷ್ಟು ಮಾತ್ರವಲ್ಲ, ನಾವು ದುರ್ಯೋಧನಾದಿಗಳನ್ನು ಗೆದ ರೂ ಅದೇವೇ ನವುಗೆ ಪರಾಜಯವಾಗ ಹಾಗೆಯೇ ಎಂದು ನನ್ನ ಮನಸ್ಸಿಗೆ ತೋರುತ್ತದೆ ಏಕೆಂದರೆ—) ಯಾನೇವ ಹತ್ವಾ=ಯಾವ ದುರ್ಯೋಧನಾದಿಗಳನ್ನೇ ಕೊಂದು, ನ ಜಿಜೀವಿಷಾಮಃ=ಆ ದುಃಖದಿಂದ ತಿರುಗಿ ಪ್ರಾಣಧಾರಣಮಾಡಲಿಕ್ಕೆ ಇಚ್ಛಿಸುವುದಿಲ್ಲವೋ, ತ ಏವ ಧಾರ್ತರಾಷ್ಟ್ರಾಃ=ಅಂತಹ ಬಂಧುಗಳಾದ ದುರ್ಯೋಧನಾದಿಗಳೇ ಪ್ರಮುಖೇ=ಸಮ್ಮುಖದಲ್ಲಿ, ಅವಸ್ಥಿತಾಃ=ನಿಂತಿರುತ್ತಾರೆ (ಆದಕಾರಣ ಅವರನ್ನು ಕೊಂದು ನಾವು ಜೀವಿಸಲಿಕ್ಕೆ ಹೇಗೆ ಇಚ್ಛಿಸುವೆವು?)

ವಿ || (1) ಕ್ಷತ್ರಿಯರು ಯುದ್ಧದಲ್ಲಿ ಶತ್ರುಗಳನ್ನು ಗೆದ್ದು ರಾಜ್ಯವನ್ನು ಭೋಗಿಸುವುದೇ ಶ್ರೇಯಸ್ಕರವೆಂದರೆ ಹಾಗೆ ಹೇಳಲಾಗುವುದಿಲ್ಲ ಏಕೆಂದರೆ ಭೀಷ್ಮಾದಿಗಳನ್ನು ಯುದ್ಧದಲ್ಲಿ ಕೊಲ್ಲುವುದು ತಮ್ಮ ಕರ್ತವ್ಯ ಕರ್ಮವಾದ ಕಾರಣ ಶ್ರೇಯಸ್ಕರವೋ, ಅಥವಾ ಹಿಂಸಾಪ್ರಸಕ್ತಿಯಿಲ್ಲದಿರುವುದರಿಂದ ಭಿಕ್ಷಾಟನವೇ ಶ್ರೇಯಸ್ಕರವೋ? ಈ ಎರಡರಲ್ಲಿ ಯಾವುದು ಶ್ರೇಷ್ಠವೆಂದು ತಿಳಿಯುವುದಿಲ್ಲ (2) ಮತ್ತು ಯುದ್ಧದಲ್ಲಿ ಅವರಿಗೆ ಸೋಲೋ, ನಮಗೆ ಸೋಲೋ ಎಂದು ಜಯವೂ ಸಂದಿಗ್ಧವಾಗಿದೆ ಕಥಂಚಿತ್ ನಮಗೆ ಜಯವಾದರೂ ಅದು ನಮಗೆ ಫಲಕಾರಿಯಲ್ಲ ಬಂಧುಗಳನ್ನು ಕೊಂದು ನಾವು ಜೀವಿಸಲಿಕ್ಕೆ ಸರ್ವಥಾ ಇಚ್ಛಿಸಲಾರೆವು || ೬ ||

ಗೀ || ಕಾರ್ಪಣ್ಯದೋಷೋಪಹತಸ್ವಭಾವಃ
ಪೃಚ್ಛಾಮಿ ತ್ವಾಂ ಧರ್ಮಸಮ್ಮೂಢಚೇತಾಃ |
ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ
ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ || ೭ ||

ಅ || ಕಾರ್ಪಣ್ಯದೋಷೋಪಹತಸ್ವಭಾವಃ=ದೈನ್ಯರೂಪವಾದ ದೋಷದಿಂದ ಅಥವಾ ಬಂಧುಗಳಾದ ದುರ್ಯೋಧನಾದಿಗಳನ್ನ ಸಂಹರಿಸಿದರೆ ನಾವು ಹೇಗೆ ಜೀವಿಸುವುದೆಂಬ ದುಃಖ, ಕುಲಕ್ಷಯದಿಂದುಂಟಾಗುವ ದೋಷ ಇವುಗಳಿಂದ ಶೌರ್ಯಮೊದಲಾದ ಧರ್ಮಗಳನ್ನು ಕೆಡಿಸಿಕೊಂಡ, ಧರ್ಮಸಮ್ಮೂಢಚೇತಾಃ=ಯುದ್ಧವನ್ನು ಬಿಟ್ಟು ಭಿಕ್ಷಾಟನಾದಿಗಳಿಂದ ಜೀವನವನ್ನು ಕಳೆಯುವುದು ಶ್ರೇಯಸ್ಕರವೋ ಅಥವಾ ಕ್ಷತ್ರಿಯರಾದ ನಮಗೆ ಯುದ್ಧವನ್ನು ಮಾಡುವುದು ಶ್ರೇಯಸ್ಕರವೋ ಎಂಬೀ ಧರ್ಮದಲ್ಲಿ ಸಂದಿಗ್ಧವಾದ ಮನಸ್ಸುಳ್ಳ ಅಹಂ=ನಾನು, ತ್ವಾ=ನಿನ್ನನ್ನು, ಪೃಚ್ಛಾಮಿ=ಕೇಳುತ್ತೇನೆ ಯಚ್ಛ್ರೇಯಃ ಸ್ಯಾತ್=ಭಿಕ್ಷಾಟನೆ ಯುದ್ಧಗಳ ಮಧ್ಯದಲ್ಲಿ ಯಾವುದು ಶ್ರೇಯಸ್ಕರವೋ, ನಿಶ್ಚಿತಂ ತತ್=ನಿಶ್ಚಯಿಸ

ಲ್ಪಟ್ಟ ಅದನ್ನು, ಮೇ=ನನಗೆ, ಬ್ರೂಹಿ=ಹೇಳು- ಅಹಂ=ನಾನು, ತೇ=ನಿನ್ನ, ಶಿಷ್ಯಃ=ಶಿಷ್ಯನು (ಶಾಸನಮಾಡಿಕೊಳ್ಳಲಿಕ್ಕೆ ಯೋಗ್ಯನು) ಆಗಿರುತ್ತೇನೆ. ತ್ವಾಂ=ನಿನ್ನನ್ನು, ಪ್ರಪನ್ನಂ=ಶರಣುಹೊಂದಿದ, ಮಾಂ=ನನ್ನನ್ನು, ಶಾಧಿ=ಶಿಕ್ಷಿಸು ॥ ೭ ॥

ಹೀ—ನೀನೇ ವಿಚಾರಮಾಡಿ ಯಾವುದು ಯುಕ್ತವೋ ಅದನ್ನು ಮಾಡೆಂದರೆ—

ಗೀ ॥ ನ ಹಿ ಪ್ರಪಶ್ಯಾಮಿ ಮಮಾಪನುದ್ಯಾ-
ದ್ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಂ ।
ಅವಾಪ್ಯ ಭೂಮಾವಸಪತ್ನಮೃದ್ಧಂ
ರಾಜ್ಯಂ ಸುರಾಣಾಮಪಿ ಚಾಧಿಪತ್ಯಂ ॥ ೮ ॥

ಅ ॥ ಭೂಮೌ=ಭೂಮಿಯಲ್ಲಿ, ಅಸಪತ್ನಂ=ಶತ್ರುಗಳ ಬಾಧೆಯಿಲ್ಲದಿರುವ, ಋದ್ಧಂ=ಸಮೃದ್ಧವಾದ, ರಾಜ್ಯಂ=ಸಾಮ್ರಾಜ್ಯವನ್ನೂ, ಸುರಾಣಾಂ=ದೇವತೆಗಳ, ಆಧಿಪತ್ಯಂ ಚ=ಸ್ವಾಮಿತ್ವವನ್ನೂ ಕೂಡ, (ಇಂದ್ರಪದವಿಯನ್ನು) ಅವಾಪ್ಯಾಪಿ=(ಹೀಗೆ ಎಲ್ಲಾ ಅಭೀಷ್ಟಗಳನ್ನು) ಹೊಂದಿದರೂ, ಇಂದ್ರಿಯಾಣಾಂ=ಇಂದ್ರಿಯಗಳಿಗೆ, ಉಚ್ಛೋಷಣಂ=ತಂತಮ್ಮ ವ್ಯಾಪಾರ ಮಾಡಲಿಕ್ಕೆ ಅಸಮರ್ಥವಾದ, ಅಥವಾ ಸಂತಾಪವನ್ನ ಹೊಂದಿಸುವ, ಮಮ ಶೋಕಂ=ನನ್ನ ದುಃಖವನ್ನು, ಯತ್=ಯಾವ ಕರ್ಮವು, ಅಪನುದ್ಯಾತ್=ಕಳೆಯುವುದೋ, ತತ್=ಅಂತಹ ಕರ್ಮವನ್ನು ನ ಹಿ ಪ್ರಪಶ್ಯಾಮಿ=ನೋಡಲಾರೆನು (ಅಂದರೆ ದೇವೇಂದ್ರಪದವಿ ಮೊದಲಾದ ಅಭೀಷ್ಟಗಳನ್ನು ಹೊಂದಿದರೂ ಶೋಕವನ್ನು ಕಳೆಯುವ ಉಪಾಯವನ್ನು ತಿಳಿಯಲಾರೆ) ॥ ೮ ॥

ಹೀ—ಅರ್ಜುನನು ಹೀಗೆ ಶ್ರೀಕೃಷ್ಣನಿಗೆ ಪ್ರಕಾಶಪಡಿಸಿದ ಅಭಿಪ್ರಾಯವನ್ನು ಸಂಜಯನು ಧೃತರಾಷ್ಟ್ರನಿಗೆ ತಿಳಿಸಿದನೆನ್ನುತ್ತಾರೆ—

ಗೀ ॥ ಸಂಜಯ ಉವಾಚ

ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ ।
ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವ ಹ ॥ ೯ ॥

ಅ ॥ (ಆಮೇಲೆ ಅರ್ಜುನನು ಏನು ಮಾಡಿದನೆಂದು ಧೃತರಾಷ್ಟ್ರನು ಕೇಳಿದ್ದಕ್ಕೆ) ಸಂಜಯನು ಹೇಳಿದನು ಪರಂತಪಃ=ಶತ್ರುಗಳಿಗೆ ಸಂತಾಪವನ್ನು ಕೊಡತಕ್ಕ, ಗುಡಾಕೇಶಃ=ಅರ್ಜುನನು, ಹೃಷೀಕೇಶಂ=ಸರ್ವೇಂದ್ರಿಯಗಳಿಗೆ ಪ್ರೇರಕನಾದ, ಗೋವಿಂದಂ=ಸರ್ವವೇದಪ್ರತಿಪಾದ್ಯನಾದ ಶ್ರೀಕೃಷ್ಣನನ್ನು, ಏವಂ=ಹಿಂದೆ ಹೇಳಿದ ಪ್ರಕಾರ, ಉಕ್ತ್ವಾ=ಹೇಳಿದಮೇಲೆ, ನ ಯೋತ್ಸ್ಯ ಇತಿ=ಯುದ್ಧ ಮಾಡುವುದಿಲ್ಲವೆಂದು, ಉಕ್ತ್ವಾ=ಹೇಳಿ, ತೂಷ್ಣೀಂ ಬಭೂವ=ಸುಮ್ಮನೆ ಕುಳಿತನು ಹ=ಮಹಾಧೈರ್ಯಾದಿ ಗುಣಗಳುಳ್ಳ ಅರ್ಜುನನಿಗೂ ಹೀಗೆ ಬುದ್ಧಿಯು ಹುಟ್ಟಿದ್ದು ಆಶ್ಚರ್ಯವು ॥ ೯ ॥

ಗೀ ॥ ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।
ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥ ೧೦ ॥

ಅ || ಭಾರತ=ಎಲೋ ಧೃತರಾಷ್ಟ್ರನೇ, ಹೃಷೀಕೇಶಃ=ಶ್ರೀಕೃಷ್ಣನು, ಉಭಯೋಸ್ಸೇನಯೋಃ ಮಧ್ಯೇ=ಎರಡು ಸೈನ್ಯಗಳ ಮಧ್ಯದಲ್ಲಿ ವಿಷೀದಂತಂ=ದುಃಖಪಡುತ್ತಿದ್ದ ತಂ=ಆ ಅರ್ಜುನನನ್ನು, ಪ್ರಹಸನ್ನಿವ=ಸ್ವಲ್ಪ ಹಾಸ್ಯಮಾಡುತ್ತಾ ಅಥವಾ ನಗುತ್ತಿದ್ದಾನೋ ಎಂಬ ಹಾಗೆ ಹಸನ್ಮುಖನಾಗಿ ಅಥವಾ ಮುಗುಳುನಗೆಯಿಂದ ವಿಶ್ರಾಂತಪಡಿಸುವವನಂತಿರುವವನಾಗಿ, ಇದಂ ವಚಃ-ಮುಂದೆ ಹೇಳುವ ಮಾತನ್ನು, ಉವಾಚ – ಹೇಳಿದನು || ೧೦ ||

## ಗೀತಾಭಾಷ್ಯೋಪೋದ್ಘಾತ.

ಪೀಠಿಕೆ—ಭಗವದ್ಗೀತೆಯು ಪ್ರಮಾಣವಾಗುವುದು ಹೇಗೆ? ಪ್ರಮಾಣವಾಗುವುದಾದರೂ ಅಂತಹ ಬೇರೆ ಗ್ರಂಥಗಳನ್ನು ಬಿಟ್ಟು ಇದಕ್ಕೇನೇ ಭಾಷ್ಯ ಬರೆಯಲಿಕ್ಕೆ ಕಾರಣವೇನೆಂದರೆ

**ಗೀತಾಭಾಷ್ಯ || (೧) ನಷ್ಟಧರ್ಮಜ್ಞಾನಲೋಕಕೃಪಾಲುಭಿರ್ಬ್ರಹ್ಮರುದ್ರೇಂದ್ರಾದಿಭಿರರ್ಥಿತೋ ಜ್ಞಾನಪ್ರದರ್ಶನಾಯ ಭಗವಾನ್ ವ್ಯಾಸೋಽವತತಾರ || (೨) ತತಶ್ಚೇಷ್ಟಾನಿಷ್ಟಪ್ರಾಪ್ತಿಪರಿಹಾರಸಾಧನಾದರ್ಶನಾದ್ವೇದಾರ್ಥಾಜ್ಞಾನಾಚ್ಚ ಸಂಸಾರೇ ಕ್ಲಿಶ್ಯಮಾನಾನಾಂ ವೇದಾನಧಿಕಾರಿಣಾಂ ಸ್ತ್ರೀಶೂದ್ರಾದೀನಾಂ ಚ ಧರ್ಮಜ್ಞಾನದ್ವಾರಾ ಮೋಕ್ಷೋ ಭವೇದಿತಿ ಕೃಪಾಲುಃ ಸರ್ವವೇದಾದ್ಯರ್ಥೋಪಬೃಂಹಿತಾಂ ತದನುಕ್ತಕೇವಲೇಶ್ವರಜ್ಞಾನದೃಷ್ಟಾರ್ಥಯುಕ್ತಾಂ ಚ ಸರ್ವಪ್ರಾಣಿನಾಮವಗಾಹ್ಯಾನವಗಾಹ್ಯರೂಪಾಂ ಕೇವಲಭಗವತ್ಸ್ವರೂಪಪರಾಂ ಪರೋಕ್ಷಾರ್ಥಾಂ ಮಹಾಭಾರತಸಂಹಿತಾಮಚೀಕ್ಲೃಪತ್ || ೧ ||**

ಅರ್ಥ || (೧) ಧರ್ಮಜ್ಞಾನಗಳನ್ನು ಕಳಕೊಂಡ ಸಜ್ಜನರಲ್ಲಿ ಕೃಪಾಪೂರ್ಣರಾದ [ಅಂದರೆ ಮೋಕ್ಷ ಸಾಧನಗಳಾದ ಧರ್ಮ-(ಫಲೇಚ್ಛಾದಿಗಳನ್ನು ತೊರೆದು ಭಗವತ್ಪ್ರೀತಿಯಾಗಬೇಕೆಂಬ ಉದ್ದೇಶಮಾತ್ರದಿಂದ ಮಾಡತಕ್ಕ ಕರ್ಮ, ಅಥವಾ ತತ್ವಜ್ಞಾನ ಹುಟ್ಟಲಿಕ್ಕೆ ತಡೆಯಾದ ದುರಿತವನ್ನು ಹೋಗಲಾಡಿಸುತ್ತಾ ತತ್ತ್ವಜ್ಞಾನವನ್ನು ಹುಟ್ಟಿಸಿ ಸಂಸಾರನಿವೃತ್ತಿಗೆ ಅನುಕೂಲವಾದ ಕರ್ಮ,) ಜ್ಞಾನ=(ಶ್ರೀ ಪರಮಾತ್ಮನೆಂಬ ಪರತತ್ತ್ವ, ಪ್ರಕೃತಿಮೊದಲಾದ ಅಪರತತ್ತ್ವ ಇವುಗಳ ತಿಳಿವು) ಇಲ್ಲದಿರುವುದರಿಂದ ಸಂಸಾರದಲ್ಲಿ ದುಃಖಿಸುತ್ತಿರುವ ಸಜ್ಜನರನ್ನು ನೋಡಿ ಕೃಪೆ (ಪರದುಃಖವನ್ನು ಪರಿಹರಿಸಬೇಕೆಂಬ ಇಚ್ಛೆ) ಹೊಂದಿದ] ಬ್ರಹ್ಮ ರುದ್ರ ಇಂದ್ರ ಮೊದಲಾದ ದೇವತೆಗಳಿಂದ ಆ ಧರ್ಮಜ್ಞಾನಗಳನ್ನು ಲೋಕದಲ್ಲಿ ಪ್ರಸಿದ್ಧಿಗೊಳಿಸುವುದಕ್ಕಾಗಿ ಪ್ರಾರ್ಥಿಸಿಕೊಳ್ಳಲ್ಪಟ್ಟ ಪೂರ್ಣಜ್ಞಾನ ಐಶ್ವರ್ಯ ವೈರಾಗ್ಯ ಮೊದಲಾದ ಗುಣಭರಿತನಾದ ಶ್ರೀ ನಾರಾಯಣನು ಧರ್ಮಜ್ಞಾನಗಳನ್ನು ಪ್ರಕಟಿಸಲು ವೇದವ್ಯಾಸರೂಪದಿಂದ ಅವತರಿಸಿದನು (೨) ಅವತಾರ ಮಾಡಿದ ಮೇಲೆ ಮೋಕ್ಷಾದಿರೂಪ ಇಷ್ಟಪ್ರಾಪ್ತಿಸಾಧನ ಅನಿಷ್ಟಪರಿಹಾರಸಾಧನಗಳಾದ ಧರ್ಮಜ್ಞಾನಗಳಿಲ್ಲದಿರುವುದರಿಂದಲೂ ವೇದಗಳ ತತ್ತ್ವಾರ್ಥಜ್ಞಾನವಿಲ್ಲದಿರುವುದರಿಂದಲೂ ಸಂಸಾರದಲ್ಲಿ ಕ್ಲೇಶಪಡುತ್ತಿರುವ ವೇದಾಧ್ಯಯನದಲ್ಲಿ ಅಧಿಕಾರವಿಲ್ಲದಿರುವ ಸ್ತ್ರೀ ಶೂದ್ರ ಮೊದಲಾದ ಸಜ್ಜನರಿಗೂ ಧರ್ಮಜ್ಞಾನಗಳನ್ನು ತಿಳಿದುಕೊಂಡು ಮೋಕ್ಷವಾಗಬೇಕೆಂಬ ಉದ್ದೇಶದಿಂದ ದಯಾಳುಗಳಾದ ವೇದವ್ಯಾಸರು ಎಲ್ಲಾ ವೇದಾದಿಗಳ ಅರ್ಥಕ್ಕೆ ಸಮಾನ ಅರ್ಥವುಳ್ಳದ್ದೂ ವೇದಗಳಲ್ಲಿ ಹೇಳದಿದ್ದು ಕೇವಲ ಈಶ್ವರಜ್ಞಾನಕ್ಕೆ ವಿಷಯವಾದ ಅರ್ಥದಿಂದ ಕೂಡಿರುವುದೂ, ಎಲ್ಲಾ ಪ್ರಾಣಿಗಳಿಗೆ ಸಾಮಾನ್ಯವಾಗಿ ತಿಳಿಯಲು ಶಕ್ಯವೂ, ವಿಶೇಷವಾಗಿ ಸಂಪೂರ್ಣ ತಿಳಿಯಲಶಕ್ಯವೂ ಆದ ಅರ್ಥ ಹೀಗೆ ಎರಡು ಅರ್ಥಗಳುಳ್ಳದ್ದೂ, ಅತ್ಯಂತ ಗೂಢವಾದ ಅರ್ಥವುಳ್ಳದ್ದೂ, ಭಗವತ್ಸ್ವರೂಪವನ್ನೇ ಮುಖ್ಯವಾಗಿ ಉಪದೇಶಿಸತಕ್ಕದ್ದೂ,

(ಅಮುಖ್ಯವಾಗಿ ಧರ್ಮಾದಿಗಳನ್ನು ಪ್ರತಿಪಾದಿಸತಕ್ಕದ್ದೂ) ಆದ ಮಹಾಭಾರತವೆಂಬ ಶಾಸ್ತ್ರವನ್ನು ಧರ್ಮ ಜ್ಞಾನಗಳ ಪ್ರಕಟನೆಗಾಗಿ ರಚಿಸಿದರು

**ವಿಶೇಷಾಂಶ** ॥ (1) ಈ ಗ್ರಂಥದಲ್ಲಿ ಪರಾಪರತತ್ತ್ವಗಳು ವಿಷಯವು ಅವುಗಳ ಜ್ಞಾನವು ಅಮುಖ್ಯ ಪ್ರಯೋಜನವು ಮೋಕ್ಷವು ಮುಖ್ಯ ಪ್ರಯೋಜನವು ಸಜ್ಜನರು ಅಧಿಕಾರಿಗಳು (2) ಮಹಾಭಾರತದಲ್ಲಿ ವೇದಗಳಲ್ಲಿ ಹೇಳದಿದ್ದು ಶ್ರೀಹರಿಯು ಮಾತ್ರ ತಿಳಿಯುವ ಅರ್ಥವಿರುವಕಾರಣ ಅದು ವೇದಗಳಿಗಿಂತಲೂ ಶ್ರೇಷ್ಠವು ಅದುಕಾರಣ ಬೇರೆ ಗ್ರಂಥಬಟ್ಟು ಇವಕ್ಕೇನೆ ಅರ್ಥ ಬರದಿರುವರು (3)ವೇದದಲ್ಲಿ ಅಧಿಕಾರವುಳ್ಳ ತ್ರೈವರ್ಣಿಕ(ಬ್ರಾಹ್ಮಣ ಕ್ಷತ್ರಿಯ ವೈಶ್ಯ)ರಿಗೆ ವೇದಾರ್ಥವನ್ನು ತಿಳಿಯಲು ಉಪಯುಕ್ತವಾದ ಭಾರತವು ವೇದಗಳ ಅಧ್ಯಯನದಲ್ಲಿ ಅಧಿಕಾರವಿಲ್ಲದವರಿಗೆ ವೇದಸ್ಥಾನೀಯವು ಆದಕಾರಣ ಭಾರತನಿರ್ಮಾಣವು ಅತ್ಯಾವಶ್ಯಕವು ಏವಂಚ ಆಪ್ತಾಪ್ತರಾದ ವೇದವ್ಯಾಸರು ಮಾಡಿದುದರಿಂದ ಮುಖ್ಯ ಪ್ರಮಾಣವು (4) ಜನರಿಗೆ ವೇದಗಳ ಏಕದೇಶಾರ್ಥವನ್ನು ತಿಳಿಯಲು ಶಕ್ತಿಯಿಲ್ಲದಿರುವಾಗ ಎಲ್ಲಾ ವೇದಾದಿಗಳಲ್ಲಿ ಹೇಳಿದ್ದು ಹೇಳದೆಯೂ ಇದ್ದ ಅರ್ಥವಿರುವ ಭಾರತದಲ್ಲಿ ಅಧಿಕಾರಿಗಳು ಯಾರು? ಎಂದರೆ—ಬ್ರಹ್ಮರುದ್ರಾದಿ ದೇವತೆಗಳೇ ಮುಖ್ಯಾಧಿಕಾರಿಗಳು **ವೇದೋತ್ತಮಂ ತಚ್ಚ ವಿಧಾತೃಶಂಕರಪ್ರಧಾನಕ್ಕೈಸ್ತನ್ಮುಖತಃ ಸುರೈಃ ಶ್ರುತಂ** ಎಂದುಕ್ತವಾಗಿವ ಮನುಷ್ಯರು ಅಮುಖ್ಯಾಧಿಕಾರಿಗಳು (5) **ಭಾರತಾರ್ಥಸ್ತ್ರಿಧಾ ಪ್ರೋಕ್ತಃ, ದಶಾರ್ಥಾಃ ಸರ್ವಭಾರತೇ, ಯಸ್ಮಿನ್ ದಶಾರ್ಥಾಃ ಸರ್ವತ್ರ** ಇದುಮೊದಲಾದ ಪ್ರಮಾಣಗಳಿಂದ ಮೂರು ಅರ್ಥ, ಹತ್ತು ಅರ್ಥಗಳೆಂದು ಹೇಳಿದ್ದರೂ ದೇವತೆಗಳಿಗೂ ತಿಳಿಯಲಶಕ್ಯವಾದುದು ಒಂದು ಅರ್ಥವು, ಸಾಮಾನ್ಯ ಜನರಿಗೆ ತಿಳಿಯಲು ಸಾಧ್ಯವಾದುದು ಇನ್ನೊಂದರ್ಥವು ಈ ಅಭಿಪ್ರಾಯದಿಂದ ಎರಡು ವಿಧ ಅರ್ಥಗಳೆಂದು ಹೇಳಿರುವರು ॥ ೧ ॥

ಶಿ —ಇದರಲ್ಲಿ ಪ್ರಮಾಣವು ಯಾವುದೆಂದರೆ –

ಭಾ ॥ (೧) **ತಚ್ಚೋಕ್ತಂ । ಲೋಕೇಶಾ ಬ್ರಹ್ಮರುದ್ರಾದ್ಯಾಃ ಸಂಸಾರೇ ಕ್ಲೇಶಿನಂ ಜನಂ । ವೇದಾರ್ಥಾಜ್ಞಮಧಿಕಾರವರ್ಜಿತಂ ಚ ಸ್ತ್ರಿಯಾದಿಕಂ । ಅವೇಕ್ಷ್ಯ ಪ್ರಾರ್ಥಯಾಮಾಸುರ್ದೇವೇಶಂ ಪುರುಷೋತ್ತಮಂ ॥ (೨) ತತಃ ಪ್ರಸನ್ನೋ ಭಗವಾನ್ವ್ಯಾಸೋ ಭೂತ್ವಾ ಚ ತೇನ ಚ । ಅನ್ಯಾವತಾರರೂಪೈಶ್ಚ ವೇದಾನುಕ್ತಾರ್ಥಭೂಷಿತಂ । ಕೇವಲೇನಾತ್ಮಬೋಧೇನ ದೃಷ್ಟಂ ವೇದಾರ್ಥಸಂಯುತಂ । ವೇದಾದಪಿ ಪರಂ ಚಕ್ರೇ ಪಂಚಮಂ ವೇದಮುತ್ತಮಂ ॥ (೩) ಭಾರತಂ ಪಂಚರಾತ್ರಂ ಚ ಮೂಲರಾಮಾಯಣಂ ತಥಾ । ಪುರಾಣಂ ಭಾಗವತಂ ಚೇತಿ ಸಂಭಿನ್ನಃ ಶಾಸ್ತ್ರಪುಂಗವಃ । ಇತಿ ನಾರಾಯಣಾಷ್ಟಾಕ್ಷರಕಲ್ಪೇ** ॥ ೨ ॥

ಅ ॥ (೧) (ನಷ್ಟಧರ್ಮ ಇತ್ಯಾದಿಗಳಿಂದ ಹೇಳಿದ ಪ್ರಮೇಯವನ್ನು ತಾವು ಮಾತ್ರ ಹೇಳಿದ್ದಲ್ಲ, ಪತ್ರ) ಆ ವಿಷಯವು **ಲೋಕೇಶಾಃ** ಇದುಮೊದಲಾದ ಪ್ರಮಾಣಗಳಲ್ಲಿಯೂ ಹೇಳಲ್ಪಟ್ಟಿದೆ ಎಲ್ಲಾ ಲೋಕಗಳಿಗೆ ನಿಯಾಮಕರಾದ ಬ್ರಹ್ಮ ರುದ್ರ ಮೊದಲಾದ ದೇವತೆಗಳು, ಸಂಸಾರದಲ್ಲಿ ದುಃಖಿಸುತ್ತಿರುವ ವೇದಗಳ ಅರ್ಥಗಳನ್ನರಿಯದಿರುವ ಜನರನ್ನೂ, ವೇದಾಧ್ಯಯನದಲ್ಲಿ ಅಧಿಕಾರವಿಲ್ಲದಿರುವ ಸ್ತ್ರೀ ಶೂದ್ರ ಮೊದಲಾದವರನ್ನೂ ನೋಡಿ ಬ್ರಹ್ಮಾದಿಗಳಿಗೆ ಒಡೆಯನೂ ಪುರುಷೋತ್ತಮನೂ ಆದ ಶ್ರೀ ಹರಿಯನ್ನ ಪ್ರಾರ್ಥಿಸಿಕೊಂಡರು (೨) ಅನಂತರ ಪ್ರಸನ್ನನಾದ ಶ್ರೀ ಹರಿಯು ವೇದವ್ಯಾಸರೂಪದಿಂದ ಅವತರಿಸಿ ಜೊತೆಗೆ ಆ ರೂಪದಿಂದಲೂ ಮೂಲರೂಪದಿಂದಲೂ ನಾರಾಯಣಾವತಾರರೂಪದಿಂದಲೂ, ಹಯಗ್ರೀ

ವಾವತಾರ ರೂಪದಿಂದಲೂ ವೇದಗಳಲ್ಲಿ ಹೇಳದಿದ್ದ ಅರ್ಥಗಳಿಂದ ಕೂಡಿದ, ಕೇವಲ ತನಗೆ (ಶ್ರೀಹರಿಗೆ) ಮಾತ್ರ ತಿಳಿದಿರುವ, ಎಲ್ಲಾ ವೇದಗಳ ಅರ್ಥವಿರುವ ವೇದಗಳಿಗಿಂತಲೂ ಅತಿಶಯವಾಗಿ ಉತ್ತಮವಾದ, ಸರ್ವೋತ್ತಮನಾದ ವಿಷ್ಣುವನ್ನೇ ತಿಳಿಸುವ, ಐದನೇ ವೇದವನ್ನು ಮಾಡಿದನು (೩) (ಐದನೇ ವೇದವು ಯಾವುದೆಂದರೆ-) ಭಾರತವು ಪಂಚರಾತ್ರಾಗಮವು ಮೂಲರಾಮಾಯಣವು, ಹದಿನೆಂಟು ಪುರಾಣಗಳು ಹಾಗೆಯೇ ಆದಿಭಾಗವತವೂ, ಹೀಗೆ ಐದನೇ ವೇದವೆಂದು ಪ್ರಸಿದ್ಧವಾದ ಉತ್ತಮ ಶಾಸ್ತ್ರವು ಇಷ್ಟು ಪ್ರಭೇದಗಳುಳ್ಳದ್ದು ಇವೆಲ್ಲವೂ ಶ್ರೀಹರಿಯು ಸರ್ವೋತ್ತಮನು ಇವುಮೊದಲಾದ ಅರ್ಥಗಳನ್ನೇ ತಿಳಿಸತಕ್ಕವುಗಳು ಹೀಗೆ ನಾರಾಯಣಾಷ್ಟಾಕ್ಷರಕಲ್ಪದಲ್ಲಿ ಹೇಳಿದೆ

ವಿ ॥ (1) **ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಂ । ವೇದೇಷ್ವವ್ಯಕ್ತಮರ್ಥಂ ಹಿ ವ್ಯಂಜಯನ್ಪರಮಃ ಪುಮಾನ್ । ಚಕ್ರೇ ನಾರಾಯಣಃ ಶ್ರೀಮಾನ್ ಪಂಚರಾತ್ರಮಶೇಷತಃ** ಇತ್ಯಾದಿ ಪ್ರಮಾಣಗಳಿಂದ ಪಂಚರಾತ್ರಾಗಮವನ್ನು ನಾರಾಯಣಾವತಾರದಿಂದ ಮಾಡಿದುದು (2) **ಮೂಲರಾಮಾಯಣಂ ನಾಮ ಶತಕೋಟಿಪ್ರವಿಸ್ತರಂ । ನಿರ್ದಗ್ಧೇಷು ಚ ಲೋಕೇಷು ವಾಜಿರೂಪೇಣ ವೈ ಮಯಾ । ಶ್ರುತ್ವಾ ಜಗಾದ ಚ ಮುನೀನ್ ಪ್ರತಿ ದೇವಶ್ಚತುರ್ಮುಖಃ ವಾಲ್ಮೀಕಿನಾಽಪಿ ಯತ್ಪ್ರೋಕ್ತಂ ರಾಮೋಪಾಖ್ಯಾನಮುತ್ತಮಂ । ಬ್ರಹ್ಮಣಾಽಭಿಹಿತಂ ತಚ್ಚ ಶತಕೋಟಿಪ್ರವಿಸ್ತರಂ । ಆಹೃತ್ಯ ನಾರದಾಯೈವ ತೇನ ವಾಲ್ಮೀಕಯೇ ಪುನಃ** ಇತ್ಯಾದಿ ಪ್ರಮಾಣಗಳಿಂದ ಮೂಲರಾಮಾಯಣವನ್ನು ಹಯಗ್ರೀವರೂಪಿ ಶ್ರೀಹರಿಯು ಮಾಡಿ ಬ್ರಹ್ಮನಿಗೆ ಉಪದೇಶಿಸಿದನು ಬ್ರಹ್ಮನು ನಾರದರಿಗೂ, ನಾರದರು ವಾಲ್ಮೀಕಿಋಷಿಗಳಿಗೂ ಉಪದೇಶಿಸಿದರೆಂದು ಸಿದ್ಧವಾಯಿತು (3) **ಏತದೇವಾತ್ಮಭೂ ರಾಜನ್ ನಾರದಾಯೇತಿ ಪೃಚ್ಛತೇ । ವೇದಗರ್ಭೋಽಭ್ಯಧಾತ್ಸರ್ವಂ ಯದಾಹ ಹರಿರಾತ್ಮನೇ । ಇದಂ ಭಾಗವತಂ ನಾಮ ಯನ್ಮೇ ಭಗವತೋದಿತಂ । ಸಂಗ್ರಹೋಽಯಂ ವಿಭೂತೀನಾಂ ತದೇತದ್ವಿಪುಲೀಕುರು** ಇತ್ಯಾದಿ ಪ್ರಮಾಣಗಳಿಂದ ಮೂಲರೂಪಿಯಾದ ಶ್ರೀನಾರಾಯಣನು ಸೃಷ್ಟಿಯ ಆದಿಯಲ್ಲಿ ಆದಿಭಾಗವತವನ್ನು ಚತುರ್ಮುಖನಿಗೆ ಉಪದೇಶಿಸಿರುತ್ತಾನೆಂದು ತಿಳಿಯುತ್ತದೆ (4) ಭಾರತವನ್ನೂ ಹದಿನೆಂಟು ಪುರಾಣಗಳನ್ನೂ ವೇದವ್ಯಾಸರು ಮಾಡಿದರು ॥ ೨ ॥

ಭಾ ॥ **(೧) ಬ್ರಹ್ಮಾಽಪಿ ತನ್ನ ಜಾನಾತಿ ಈಷತ್ಸರ್ವೋಽಪಿ ಜಾನತಿ । ಬಹ್ವರ್ಥತ್ವಾದ್ಯತಸ್ತತ್ತು ಭಾರತಂ ಪ್ರವದಂತಿ ಹಿ । ಇತ್ಯುಪನಾರದೀಯೇ ॥ (೨) ಬ್ರಹ್ಮಾದ್ಯೈಃ ಪ್ರಾರ್ಥಿತೋ ವಿಷ್ಣುರ್ಭಾರತಂ ಸ ಚಕಾರ ಹ । ಯಸ್ಮಿನ್ ದಶಾರ್ಥಾಃ ಸರ್ವತ್ರ ಸಜ್ಞೇಯಾಃ ಸರ್ವಜಂತುಭಿಃ । ಇತಿ ನಾರದೀಯೇ ॥ (೩) ಭಾರತಂ ಚಾಪಿ ಕೃತವಾನ್ಪಂಚಮಂ ವೇದಮುತ್ತಮಂ । ದಶಾವರಾರ್ಥಂ ಸರ್ವತ್ರ ಕೇವಲಂ ವಿಷ್ಣುಬೋಧಕಂ । ಪರೋಕ್ಷಾರ್ಥಂ ತು ಸರ್ವತ್ರ ವೇದಾದಪ್ಯುತ್ತಮಂ ತು ಯತ್ । ಇತಿ ಸ್ಕಾಂದೇ** ॥ ೩ ॥

ಅ ॥ (೧) ದೇವತೆಗಳಿಗೆ ಗುರುಗಳಾದ ಬೃಹಸ್ಪತ್ಯಾಚಾರ್ಯರೂ ಕೂಡ ಭಾರತದಲ್ಲಿ ಹೇಳಿದ ಎಲ್ಲಾ ಪ್ರಮೇಯಗಳನ್ನು ತಿಳಿಯಲಾರರು ಅಧಿಕ ವಿವರ್ಗದವರೆಲ್ಲರೂ ಸ್ವಲ್ಪ ಅರ್ಥವನ್ನೇ ತಿಳಿಯುತ್ತಾರೆ ಋಷಿಗಳು ಭಾರತಕ್ಕೆ ಅನೇಕಾರ್ಥಗಳಿವೆ ಎಂದು ಹೇಳುತ್ತಾರೆ (ಏವಂಚ ಆ ಎಲ್ಲಾ ಅರ್ಥಗಳನ್ನು ಶ್ರೀ ವೇದವ್ಯಾಸರೂ ಅವರ ಅನುಗ್ರಹದಿಂದ ಚತುರ್ಮುಖನೂ ವಾಯುದೇವರೂ ತಿಳಿಯುತ್ತಾರೆ.) ಹೀಗೆ ಉಪನಾರದೀಯದಲ್ಲಿದೆ (೨) ಯಾವ ಭಾರತದಲ್ಲಿ ಎಲ್ಲಾ ಭಾಗಗಳಲ್ಲಿಯೂ ಹತ್ತು ಅರ್ಥಗಳಿಗೆ

ಯಾಗದ ಅರ್ಥಗಳು ಎಲ್ಲಾ ಪ್ರಾಣಿಗಳಿಗೆ ತಿಳಿಯಲಶಕ್ಯಗಳಾಗಿವೆಯೋ, ಅಂತಹ ಭಾರತವನ್ನು ಶ್ರೀ ವಿಷ್ಣುವು ಬ್ರಹ್ಮಾದಿದೇವತೆಗಳಿಂದ ಪ್ರಾರ್ಥಿಸಿಕೊಳ್ಳಲ್ಪಟ್ಟವನಾಗಿ ಮಾಡಿದನು, ಹೀಗೆ ನಾರದೀಯಪುರಾಣದಲ್ಲಿದೆ (೩) ಭಾರತದ ಎಲ್ಲಾ ಭಾಗಗಳಲ್ಲಿಯೂ ಹತ್ತಕ್ಕೆ ಕಡಿಮೆಯಾಗದ ಅರ್ಥಗಳಿವೆ ಅವು ಮುಖ್ಯವಾಗಿ ವಿಷ್ಣುವನ್ನೇ ತಿಳಿಸುತ್ತವೆ ಪ್ರತಿಭಾಗಗಳಲ್ಲಿಯೂ ಅತಿಗೋಪ್ಯಗಳಾದ ಅರ್ಥಗಳಿವೆ ವೇದಗಳಿಗಿಂತಲೂ ಶ್ರೇಷ್ಠವಾದುದು ಅಂತಹ ಐದನೇ ವೇದವೆಂದು ಪ್ರಸಿದ್ಧವಾದ ಸರ್ವಶಾಸ್ತ್ರೋತ್ತಮವಾದ ಮಹಾಭಾರತವನ್ನು ರಚಿಸಿದರು, ಹೀಗೆ ಸ್ಕಾಂದಪುರಾಣದಲ್ಲಿದೆ

ವಿ ॥ (1) **ಸ್ವಯಂ ವ್ಯಾಸೋ ಹಿ ತದ್ವೇದ ಬ್ರಹ್ಮಾ ವಾ ತತ್ಪ್ರಸಾದತಃ** ಎಂಬ ಪ್ರಮಾಣದಿಂದ ಭಾರತಾರ್ಥವನ್ನು ವೇದವ್ಯಾಸರು ಸಂಪೂರ್ಣ ತಿಳಿದಿರುತ್ತಾರೆ ಅವರ ಅನುಗ್ರಹದಿಂದ ಚತುರ್ಮುಖ ಮುಖ್ಯಪ್ರಾಣರು ತಿಳಿದಿರುತ್ತಾರೆಂದು ಹೇಳುವ ಕಾರಣ **ಬ್ರಹ್ಮಾಪಿ ತನ್ನ ಜಾನಾತಿ** ಎಂದು ಹೇಳಿದ್ದು ಹೇಗೆ ಕೂಡುತ್ತದೆಂದರೆ— **ಬೃಹಸ್ಪತಿಃ ಪುರೋಧಾಶ್ಚ ಬ್ರಹ್ಮಾ ಚ ಬ್ರಹ್ಮಣಸ್ಪತಿಃ । ಬೃಹಸ್ಪತಿರ್ದೇವಾನಾಂ ಬ್ರಹ್ಮಾ ಅಹಂ ಮನುಷ್ಯಾಣಾಂ** ಇತ್ಯಾದಿ ಪ್ರಮಾಣಗಳಿಂದ ಬ್ರಹ್ಮಶಬ್ದದಿಂದ ಬೃಹಸ್ಪತ್ಯಾಚಾರ್ಯರನ್ನು ಇಟ್ಟುಕೊಳ್ಳಬೇಕು (2) ಹಾಗಾದರೆ ತತ್ತ್ವಪ್ರಕಾಶಿಕೆ ದಲ್ಲಿ **ಕಿಂಚಿದಪ್ರಾಪ್ತಲಾಭಕ್ಷೋಚ್ಯತೇ** ಹಿಂದೆ ಇಲ್ಲದಿರುವ ವಿಶೇಷಜ್ಞಾನವು ಹುಟ್ಟುತ್ತದೆಂದೂ ಭಾಷ್ಯದಲ್ಲಿ **ಬ್ರಹ್ಮರುದ್ರಾದಿದೇವೇಷು ಜ್ಞಾನಂ ಸಂಸ್ಥಾಪ್ಯ** ಬ್ರಹ್ಮಾದಿ ದೇವತೆಗಳಿಗೂ ಜ್ಞಾನೋಪದೇಶ ಮಾಡಿದರೆಂದೂ, ತಾತ್ಪರ್ಯನಿರ್ಣಯದಲ್ಲಿ **ಏವಂ ಜ್ಞಾನಂ ಪುನಃ ಪ್ರಾಪುರ್ದೇವಾಃ** ಎಂದೂ, ಸುಮಧ್ವವಿಜಯದಲ್ಲಿ **ವಿಶಿಶೇಷಶೇಷಶಯನಃ ಪುನರರ್ಥಿಯಂ** ಎಂದೂ ಹೇಳಿದ ಕಾರಣ ಚತುರ್ಮುಖನಿಗೂ ಭಾರತದಿಂದ ವಿಶೇಷ ಜ್ಞಾನವು ಹುಟ್ಟಿತೆಂದು ಹೇಳಲೇಬೇಕು ಹೀಗೆ ಹೇಳಿದ್ದರೆ ಭಾರತದಲ್ಲಿ ಬ್ರಹ್ಮನಿಗೆ ಅಧಿಕಾರವಿಲ್ಲವೆಂದು ಹೇಳಬೇಕಾಗುವುದು ಎಂದರೆ—ಬ್ರಹ್ಮನಿಗೆ ಉಪದೇಶಕೊಟ್ಟ ಮೇಲೆ ಜ್ಞಾನವು ಮರೆಯಾಗುವುದಿಲ್ಲ ಉಪದೇಶದಿಂದ ಮೊದಲು ಕೆಲವು ಸೂಕ್ಷ್ಮ ವಿಷಯವನ್ನು ಬ್ರಹ್ಮಾಪಿ ಚತುರ್ಮುಖನೂ ತಿಳಿಯುತ್ತಿಲ್ಲ ಉಪದೇಶದಿಂದ ವಿಶೇಷಜ್ಞಾನವನ್ನು ಹೊಂದಿದನು **ಗೀತೋಕ್ತಂ ವಿಸ್ಮೃತಂ ಚಾಸ್ಯ** ಎಂದು ಹೇಳಿದ ಪ್ರಕಾರ ಬೇರೆಯವರಿಗೆ ಉಪದೇಶವಾದಿನ ಮೇಲೆಯೂ ಮರೆಯಾಗುತ್ತದೆ ಆದಕಾರಣ ಉಪದೇಶಾನಂತರದಲ್ಲಿಯೂ ಬ್ರಹ್ಮಾಪಿ ಬೃಹಸ್ಪತ್ಯಾಚಾರ್ಯರೂ ತಿಳಿಯುತ್ತಿಲ್ಲ ಆದಕಾರಣ ಬ್ರಹ್ಮಾ ಎಂಬ ಶಬ್ದದಿಂದ ಇಬ್ಬರನ್ನು ಇಟ್ಟುಕೊಳ್ಳಬೇಕು ಯಾವ ಪ್ರಮಾಣವಿರೋಧವೂ ಇಲ್ಲ (೩) ಹತ್ತಕ್ಕೆ ಕಡಿಮೆಯಾಗದ ಅರ್ಥಗಳು ಭಾರತದಲ್ಲಿವೆ ಏಕೆಂದರೆ— **ವಿಷ್ಣೋಸ್ಸಹಸ್ರನಾಮಾಪಿ ನಿರಂತರಶತಾರ್ಥಕಂ** ಎಂಬ ಪ್ರಮಾಣದಿಂದ ಭಾರತದೊಳಗಣ ವಿಷ್ಣುಸಹಸ್ರನಾಮಕ್ಕೆ (೧೦೦) ನೂರು ಅರ್ಥಗಳಿವೆ ಎಂದು ಹೇಳಿದೆ ಮತ್ತು **ಸಹಸ್ರನಾಮತತ್ತುಲ್ಯಂ ರಾಮನಾಮ ವರಾನನೇ** ಎಂಬ ಪ್ರಮಾಣದಿಂದ ರಾಮ ಎಂಬ ನಾಮಕ್ಕೆ ಸಹಸ್ರನ ಮಕ್ಕಳಷ್ಟು ಅರ್ಥಗಳಿವೆಂದು ಹೇಳಿದ ॥ ೩ ॥

ಟೀ- **ಯದಿ ವಿದ್ಯಾತ್** ಇದುಮೊದಲಾದ ಭಾರತದೊಳಗಣ ವಾಕ್ಯಗಳಿಂದಲೂ ಭಾರತವು ಸರ್ವಶಾಸ್ತ್ರೋತ್ತಮವು ಇತ್ಯಾದಿ ಪ್ರಮೇಯಗಳು ಸ್ಥಿರಗಳಾಗುತ ವೆನ್ನುತ್ತಾರೆ -

ಭಾ ॥ (೧) **ಯದಿ ವಿದ್ಯಾಚ್ಚತುರ್ವೇದಾನ್ಸಾಂಗೋಪನಿಷದಾನ್ದ್ವಿಜಃ । ನ ಚೇತ್ಪುರಾಣಂ ಸಂವಿದ್ಯಾನ್ನೈವ ಸ ಸ್ಯಾದ್ವಿಚಕ್ಷಣಃ ॥ (೨) ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ । ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರಚರಿಷ್ಯತಿ ॥ (೩) ಮನ್ವಾದಿ ಕೇಚಿದ್ಬ್ರುವತೇ ಹ್ಯಾಸ್ತಿಕಾದಿ ತಥಾಪರೇ । ತಥೋಪರಿಚರಾದ್ಯನ್ಯೇ ಭಾರತಂ ಪರಿಚಕ್ಷತೇ ॥ (೪) ಭಾರತಂ ಸರ್ವವೇದಾಶ್ಚ ತುಲಾಮಾರೋಪಿತಾಃ**

**ಪುರಾ । ದೇವೈರ್ಬ್ರಹ್ಮಾದಿಭಿಸ್ಸರ್ವೈರ್ಋಷಿಭಿಶ್ಚ ಸಮನ್ವಿತೈಃ । ವ್ಯಾಸಸ್ಯೈವಾಜ್ಞಯಾ ತತ್ರ ತ್ವತ್ಯರಿಚ್ಯತ ಭಾರತಂ ॥ (೫) ಮಹತ್ವಾದ್ಭಾರವತ್ವಾಚ್ಚ ಮಹಾಭಾರತಮುಚ್ಯತೇ । ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ॥ (೬) ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್ । ವಿರಾಟೋದ್ಯೋಗಸಾರವಾನಿತ್ಯಾದಿತದ್ವಾಕ್ಯಪರ್ಯಾಲೋಚನಯಾ ಋಷಿಸಂಪ್ರದಾಯಾತ್ನೋ ಹ್ಯನ್ಯಃ ಪುಂಡರೀಕಾಕ್ಷಾನ್ಮಹಾಭಾರತಕೃದ್ಭವೇದಿತ್ಯಾದಿ ಪುರಾಣಗ್ರಂಥಾಂತರಗತವಾಕ್ಯಾರ್ಥಾನ್ಯಥಾನುಪಪತ್ತ್ಯಾ ನಾರದಾಧ್ಯಯನಾದಿಲಿಂಗೈಶ್ಚಾವಸೀಯತೇ ॥ ೪ ॥**

ಅ ॥ (೧) ಬ್ರಾಹ್ಮಣ ಕ್ಷತ್ರಿಯ ವೈಶ್ಯರು, ಶಿಕ್ಷಾ ಮೊದಲಾದ ಷಡಂಗ ಉಪನಿಷತ್ತು ಇವುಗಳ ಸಮೇತ ಋಗ್ವೇದ ಮೊದಲಾದ ನಾಲ್ಕು ವೇದಗಳನ್ನು ತಿಳಿದಿದ್ದರೂ ಪುರಾಣಗಳನ್ನು ತಿಳಿಯದಿದ್ದರೆ ಜ್ಞಾನಿಯು ಸರ್ವಥಾ ಆಗಲಾರರು (೨) ಪುರಾಣಗಳನ್ನು ತಿಳಿಯದವರು ನನ್ನನ್ನು (ವೇದವನ್ನು) ಕದಲಿಸುತ್ತಾರೆ (ಅಂದರೆ-ಯೋಗ್ಯವಾದ ಅರ್ಥಬಿಟ್ಟು ಅಪಾರ್ಥವನ್ನು ಕಲ್ಪಿಸುತ್ತಾರ) ಹೀಗೆ ವೇದವು ಸ್ವಲ್ಪ ಶಾಸ್ತ್ರಶ್ರವಣ ಮಾಡಿದ ಪುರುಷರಿಂದ ಹೆದರುತ್ತದೆ ಆದಕಾರಣ ವೇದಗಳನ್ನು ಇತಿಹಾಸ ಪುರಾಣಗಳ ಆಧಾರದಿಂದಲೇ ವೃದ್ಧಿಗೊಳಿಸಬೇಕು (ವಿವರಿಸಬೇಕು) (೩) ಕೆಲವರು **ಮನ್ವರ್ಥಕ**ವೆಂದೂ, ಇತರರು **ಆಸ್ತಿಕಾರ್ಥಕ**ವೆಂದೂ, ಬೇರೆಯವರು **ಉಪಚರಿತಾರ್ಥಕ**ವೆಂದೂ ಹೀಗೆ ಭಾರತಾರ್ಥವು ಮೂರು ವಿಧವೆಂದು ಹೇಳುತ್ತಾರೆ (೪) (ಭಾರತಕ್ಕೆ ಸರ್ವಶಾಸ್ತ್ರಗಳಿಗಿಂತ ಉತ್ತಮತ್ವವು ಹೇಗೆಂದರೆ—)ಬ್ರಹ್ಮರುದ್ರ ಮೊದಲಾದ ಎಲ್ಲಾ ದೇವತೆಗಳೂ, ಋಷಿಗಳೂ ಒಟ್ಟು ಸೇರಿ ಒಂದು ತಕ್ಕಡಿಯಲ್ಲಿ ಭಾರತವನ್ನೂ ಇನ್ನೊಂದು ತಕ್ಕಡಿಯಲ್ಲಿ ಎಲ್ಲಾ ವೇದಗಳನ್ನೂ ಶ್ರೀ ವೇದವ್ಯಾಸರ ಅಪ್ಪಣೆಯಿಂದಲೇ ಏರಿಸಿದರು ಆಗ ಭಾರತವು ಹೆಚ್ಚು ಭಾರವುಳ್ಳದ್ದಾಯಿತು (೫) ಅದುಕಾರಣ ಆ ಗ್ರಂಥವು ಶ್ರೇಷ್ಠವಾಗಿರುವುದರಿಂದಲೂ ಹೆಚ್ಚು ಭಾರವಿರುವುದರಿಂದಲೂ ಮಹಾಭಾರತವೆನಿಸುತ್ತದೆ ಹೀಗೆ **ಮಹಾಭಾರತ** ಎಂಬ ಶಬ್ದದಿಂದ ಸಿಗುವ ಅರ್ಥವನ್ನು ತಿಳಿದವನು ಅಪ್ರಾರಬ್ಧಗಳಾದ ಎಲ್ಲಾ ಪಾಪಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ (೬) ಭಾರತದಲ್ಲಿ ಹೇಳಿದ ಪ್ರಮೇಯವೇ ವೇದ ವೈದಿಕ ಗ್ರಂಥಗಳಲ್ಲಿದೆ ಭಾರತದಲ್ಲಿ ಹೇಳದೆ ಇದ್ದು ಬೇರೆ ಶಾಸ್ತ್ರಗಳಲ್ಲಿ ಹೇಳುವ ಪ್ರಮೇಯವು ಯಾವುದೊಂದೂ ಇಲ್ಲ (ಇದರಿಂದ ಭಾರತದಲ್ಲಿ ಎಲ್ಲಾ ವೇದಾದಿಗಳ ಅರ್ಥವೂ ತುಂಬಿದೆಂದು ಸಿದ್ಧವಾಯಿತು) ವಿರಾಟಪರ್ವ ಉದ್ಯೋಗಪರ್ವ ಇವುಗಳು ಸಾರವಾಗಿ ಉಳ್ಳದ್ದು. (ಎಂಬೀ ವಾಕ್ಯವು ಭಾರತವು ಕಲ್ಪವೃಕ್ಷದಂತಿರುವುದು ಎಂದು ಹೇಳುತ್ತಾ ಎಲ್ಲಾ ಪುರುಷಾರ್ಥಗಳಿಗೂ ಕಾರಣವೆಂದು ತಿಳಿಸುತ್ತದೆ) ಇದುಮೊದಲಾದ ವಾಕ್ಯಗಳ ಯುಕ್ತ್ಯನುಸಂಧಾನ ಪೂರ್ವಕವಾದ ವಿಚಾರದಿಂದಲೂ, ವೈಶಂಪಾಯನ ಮೊದಲಾದ ಋಷಿಗಳು ಜನಮೇಜಯ ಮೊದಲಾದ ಶಿಷ್ಯರ ಶ್ರೇಯಸ್ಸಿಗಾಗಿ ಉಪದೇಶ ಮಾಡಿದುದರಿಂದಲೂ ಶ್ರೀಪರಮಾತ್ಮನಿಗಿಂತ ಇನ್ನೊಬ್ಬನು ಯಾವನು ಮಹಾಭಾರತವನ್ನು ನಿರ್ಮಿಸಲು ಶಕ್ತನಾದಾನು ಇದುಮೊದಲಾದ ಪುರಾಣಗ್ರಂಥಗಳಲ್ಲಿರುವ ವಾಕ್ಯಗಳು ಅರ್ಥವು ಬೇರೆ ರೀತಿಯಾಗಿ ಕೂಡದಿರುವುದರಿಂದಲೂ ನಾರದಋಷಿಗಳು ಮಾಡಿದ ಅಧ್ಯಯನ (ಗುರುಮುಖದಿಂದ ಕೇಳುವುದು) ಮನನಮೊದಲಾದ ಜ್ಞಾಪಕಗಳಿಂದಲೂ ಹಿಂದೆಹೇಳಿದ ಅರ್ಥವು ನಿಶ್ಚಿತವಾಗುತ್ತದೆ

ವಿ ॥ (1) **ಮನ್ವಾದಿ ಕೇಚಿದ್ಬ್ರುವತೇ** ಎಂಬ ಶ್ಲೋಕಕ್ಕೆ ಮನುಗಳ ಚರಿತ್ರೆ, ಆಸ್ತಿಕಋಷಿಯ ಚರಿತ್ರೆ ಉಪರಿಚರರಾಜ್ಯ ವಸುವಿನ ಚರಿತ್ರೆ ಇವುಗಳನ್ನು ಹೇಳತಕ್ಕುದು ಭಾರತವೆಂದು ಕೆಲವರು ಹೇಳುತ್ತಾರೆ ಹೀಗೆ ಹೇಳುವುದು ಸರ್ವಥಾ ಯುಕ್ತವಲ್ಲ ಏಕೆಂದರೆ—ಮನುಗಳನ್ನು ಭಾರತದಲ್ಲಿ ಹೇಳಲೇ ಇಲ್ಲ ಆಸ್ತೀಕಋಷಿ ಉಪರಿಚರವಸು ಇವರಿಬ್ಬರಿಗೆ ಸರ್ಪಯಾಗದಲ್ಲಿ ವಿಘ್ನ ಮಾಡುವುದಕ್ಕಾಗಿಯೂ,

ಸತ್ಯವತಿಯ ಉತ್ಪತ್ತಿಗಾಗಿಯೂ ಆದಿಪರ್ವದ ಆದಿಭಾಗದಲ್ಲಿ ಮಾತ್ರ ಹೇಳಿದ್ದರೂ ಸಕಲ ಭಾರತದಲ್ಲಿ ಹೇಳಲ್ಪಟ್ಟಿದ್ದಾರೆಂಬುದು ಸುತರಾಂ ಕೂಡಲಾರದು ಆದಕಾರಣ ಆಪಾತತಃ ತೋರುವ ಅರ್ಥವು ಸರಿಯಲ್ಲ ಪರಂತು ಹೀಗೆ ಅರ್ಥ ಹೇಳಬೇಕು. ಮೀಯತೇ ಏಭಿಃ **ಪರಮಾತ್ಮಾ**=ಇವುಗಳಿಂದ ಶ್ರೀ ಪರಮಾತ್ಮನು ತಿಳಿಯಲ್ಪಡುವುದರಿಂದ **ಮನವಃ**=ಪರಮಾತ್ಮನನ್ನು ತಿಳಿಸತಕ್ಕವುಗಳು:—(ಕ) ಧರ್ಮಗಳು, (ಖ) ಭಕ್ತಿ ಮೊದಲಾದ ಹತ್ತು ಗುಣಗಳು (ಗ) ಶ್ರುತಾದಿಗಳು, (ಘ) ಶೀಲ ವಿನಯಗಳು, (ಙ) ವೇದಗಳು-ಇವೈದು, **ಆದಯಃ**=ಪ್ರತಿಪಾದಿಸಲ್ಪಡುವವುಗಳಾಗಿ ಯಸ್ಮಿನ್ ತತ್=ಯಾವ ಭಾರತಲ್ಲಿವೆಯೋ ಆ ಭಾರತವು **ಮನ್ವಾದಿ** ಎನಿಸುತ್ತದೆ ಅಂದರೆ—ಧರ್ಮ ಮೊದಲಾದವುಗಳನ್ನು ಯಾವ ಯಾವ ಭಾಗದಲ್ಲಿ ಹೇಳಿದ್ದಾರೋ ಆಯಾಯ ಭಾಗದಲ್ಲಿ ಧರ್ಮಗಳಿಗೆ ಅಭಿಮಾನಿಯಾದುದರಿಂದ **ಮನು** ಎನಿಸಿಕೊಂಡವನು ಧರ್ಮರಾಜನು ಭಕ್ತಿ, ಜ್ಞಾನ, ವೈರಾಗ್ಯ, ಪ್ರಜ್ಞಾ, ಮೇಧಾ, ಧೃತಿ ಸ್ಥಿತಿ, ಯೋಗ, ಪ್ರಾಣ, ಬಲ—ಈ ಹತ್ತು ಗುಣಗಳಿಗೆ ಅಭಿಮಾನಿಯಾದುದರಿಂದ **ಮನು** ಎನಿಸಿಕೊಂಡವನು ಭೀಮಸೇನನು ಶ್ರೀಕೃಷ್ಣನ ಮುಖದಿಂದಲೇ ಸಕಲಶಾಸ್ತ್ರಾರ್ಥನಿರ್ಣಯರೂಪವಾದ ಗೀತೆಯನ್ನು ಕೇಳಿದುದರಿಂದಲೂ ಮನನಮಾಡಿದುದರಿಂದಲೂ ಶಾಸ್ತ್ರಶ್ರವಣ-ಮನನಗಳಿಗೆ ಅಭಿಮಾನಿಯಾದುದರಿಂದ **ಮನು** ಎನಿಸಿದವನು ಅರ್ಜುನನು ಶೀಲ ವಿನಯಗಳಿಗೆ ಅಭಿಮಾನಿಗಳಾಗಿರುವುದರಿಂದ **ಮನು** ಎನಿಸಿಕೊಂಡವರು ನಕುಲಸಹದೇವರು ವೇದಗಳಿಗ ಅಭಿಮಾನಿನಿಯಾದುದರಿಂದ **ಮನು** ಎನಿಸಿಕೊಂಡವಳು ದ್ರೌಪದೀದೇವಿಯು ಈ ಐವರ ಚರಿತ್ರೆಯನ್ನು ಹೇಳುವುದರಿಂದ **ಮನ್ವಾದಿ** ಎನಿಸುತ್ತದೆ. ಏವಂಚ ಧರ್ಮಾದಿಗಳಿಗೆ ಅಭಿಮಾನಿಗಳಾದ ಪಂಚ ಪಾಂಡವರು ದ್ರೌಪದೀದೇವಿ ಇವರ ಮಹಿಮೆಯನ್ನು ಪ್ರಕಟಿಸುವುದಕ್ಕಾಗಿ ಭಾರತವು ಪ್ರವೃತ್ತವಾದುದು (2) ಅಸ್ತಿ ಪರದೇವತಾ=ಪರದೇವತೆಯಿದೆ, ಪರಲೋಕವಿದೆ ಎಂದು ಪಾಂಡವರೂ ದ್ರೌಪದೀದೇವಿಯೂ ತಿಳಿಯುತ್ತಿರುವುದರಿಂದ ಅವರು ಆಸ್ತಿಕರೆನಿಸುತ್ತಾರೆ ಆಸ್ತಿಕಶಿರೋಮಣಿಗಳಾದ ಪಂಚ ಪಾಂಡವರೂ ದ್ರೌಪದೀದೇವಿಯೂ ಇವರ ಉತ್ಪತ್ತ್ಯಾದಿಗಳನ್ನು ಹೇಳುವ ಭಾರತವು **ಆಸ್ತೀಕಾದಿ** ಎನಿಸುತ್ತದೆ ಏವಂಚ ಸಕಲ ಭಾರತವೂ ಪರಮವೈಷ್ಣವರಾದ ಪಾಂಡವರ ಚರಿತೆಯನ್ನು ಹೇಳುವುದಕ್ಕಾಗಿ ಪ್ರವೃತ್ತವಾದುದು (3) ಸರ್ವೋತ್ತಮನಾದುದರಿಂದ **ಉಪರಿಚರ** ಎನಿಸಿದ ಮಹಾವಿಷ್ಣುವನ್ನೇ ಆದಿಯಲ್ಲಿಯೂ ಮಧ್ಯದಲ್ಲಿಯೂ ಅಂತ್ಯದಲ್ಲಿಯೂ ಹೊಗಳುವ ಎಲ್ಲಾ ಪ್ರಕರಣವೂ **ಉಪರಿಚರಾದಿ** ಎನಿಸುತ್ತದೆ (4) **ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ । ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ** ಎಂದು ಹೇಳಿದ ಪ್ರಕಾರ ಪರಮಮುಖ್ಯವೃತ್ತಿಯಿಂದ ಸ್ವರ-ವರ್ಣ-ಪದ-ವಾಕ್ಯರೂಪಗಳಾದ ಭಾರತದ ಎಲ್ಲಾ ಭಾಗಗಳಲ್ಲಿಯೂ ಶ್ರೀ ವಿಷ್ಣುವನ್ನೇ ಹೇಳುತದೆ (5) **ಚರಿತಂ ವೈಷ್ಣವಾನಾಂ ಚ ವಿಷ್ಣೂದ್ರೇಕಾಯ ಕಥ್ಯತೇ** ಎಂಬ ಪ್ರಮಾಣದಿಂದ ವೈಷ್ಣವಾಗ್ರೇಸರರಾದ ಪಾಂಡವರೂ ದ್ರೌಪದೀದೇವಿಯೂ ಇವರ ಕಥೆಯನ್ನು ಅಮುಖ್ಯವಾಗಿಯೂ ಶ್ರೀ ಹರಿಯ ಮಹಿಮೆಯನ್ನು ಮುಖ್ಯವಾಗಿಯೂ ಹೇಳುತ್ತದೆ. (6) ರಾಜಸೂಯ ಅಶ್ವಮೇಧ ಮೊದಲಾದ ಧರ್ಮಗಳೂ ಶ್ರೀ ಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಿದುದರಿಂದ ಶ್ರೀ ಕೃಷ್ಣನಲ್ಲಿ ನಿರುಪಚರಿತವಾದ ಭಕ್ತಿಯೂ, ಕೆಲವು ಕಡೆ ಶ್ರವಣ ಮನನಾದಿಗಳೂ ಸಮೃದ್ಧ ರಾಜ್ಯವನ್ನು ಪರಿತ್ಯಾಗ ಮಾಡಿ ವೈರಾಗ್ಯವೂ, ಸತ್ಯಪರಿಪಾಲನವೂ ಜ್ಯೇಷ್ಠನನ್ನು ಅನುಸರಿಸಿದುದರಿಂದ ವಿನಯಾದಿಗಳೂ ಅಲ್ಲಲ್ಲಿ ಹೇಳಲ್ಪಟ್ಟಿವೆ (7) ಅಜ್ಞಾನ ಮಿಥ್ಯಾಜ್ಞಾನಾದಿಗಳನ್ನು ಹೇಳಿದ ಭಾಗದಲ್ಲಿಯೂ ಧರ್ಮಾದಿಗಳಿಂದ ಅಜ್ಞಾನಾದಿಗಳು ನಿವೃತ್ತಗಳಾಗುತ್ತವೆಂದು ಹೇಳಿದ ಕಾರಣ ಧರ್ಮಾದಿಗಳನ್ನು ಹೊಗಳಿಯದೆ (8) ದುರ್ಯೋಧನಾದಿಗಳನ್ನು ಸ್ತುತಿಸತಕ್ಕ ಭಾಗದಲ್ಲಿಯೂ ಮಹಾಪರಾಕ್ರಮಿಗಳಾದ ದುರ್ಯೋಧನಾದಿಗಳನ್ನು ಪಾಂಡವರು ಸಂಹರಿಸಿದರೆಂದು ಪಾಂಡವರನ್ನೇ ಹೊಗಳುತ್ತದೆ (9) ಭಾರತಕ್ಕೆ ಪ್ರಾಮಾಣ್ಯವನ್ನು ಅಂಗೀಕರಿಸದವನಿಗೆ ಭಾರತಕ್ಕೆ ಉತ್ತಮತ್ವವನ್ನು ನಿರ್ಣಯಿಸಕೊಡುವುದಕ್ಕಾಗಿ ಭಾರತವಾಕ್ಯವನ್ನೇ

ಹೇಳಿದ್ದು ಹೇಗೆ? ಎಂದರೆ—ಭಾರತಕ್ಕೆ ಪ್ರಾಮಾಣ್ಯವನ್ನು ಒಡಂಬಟ್ಟು ಭಾರತವು ವೇದಾದಿಗಳಿಗಿಂತ ಉತ್ತಮವು ಎಂದು ಒಡಂಬಡದಿರುವವನಿಗೆ ಭಾರತವು ಉತ್ತಮವು ಎಂದು ತಿಳಿಸುವುದಕ್ಕಾಗಿ ಭಾರತ ವಾಕ್ಯವನ್ನು ಹೇಳಿದ್ದು (10) ಅಕ್ಷರವನ್ನುಚ್ಚರಿಸಿಕೊಂಡು ಅರ್ಥ ತಿಳಿದುಕೊಳ್ಳುವುದು ಅಥವಾ ಗುರುಗಳ ಉಚ್ಚಾರಣವನ್ನನುಸರಿಸಿ ಉಚ್ಚರಿಸುವುದು **ಅಧ್ಯಯನವು.** ಅಕ್ಷರವನ್ನುಚ್ಚರಿಸದೆ ಅರ್ಥವನ್ನು ತಿಳಿದುಕೊಳ್ಳುವುದು ಅಥವಾ ಉಪದೇಶದಿಂದ ವಾಕ್ಯಾರ್ಥವನ್ನು ತಿಳಿದುಕೊಳ್ಳುವುದು **ಶ್ರವಣವು.** ॥ ೪ ॥

**ಪೀ—ತದ್ವಾಕ್ಯಪರ್ಯಾಲೋಚನಯಾ** ಎಂದು ಹೇಳಿರುವರು ಆ ಪರ್ಯಾಲೋಚನೆಯು ಎಂತಹುದೆಂದರೆ ಅವನ್ನು ಲೇಶತಃ ತೋರಿಸುತ್ತಾರೆ—

**ಭಾ ॥ (೧) ಕಥಮನ್ಯಥಾ ಭಾರತನಿರುಕ್ತಿಜ್ಞಾನಮಾತ್ರೇಣ ಸರ್ವಪಾಪಕ್ಷಯಃ ! (೨) ಪ್ರಸಿದ್ಧಶ್ಚ ಸೋಽರ್ಥಃ ॥ ೫ ॥**

**ಅ** ॥ (೧) (**ಮಹತ್ವಾತ್** ಎಂಬ ವಾಕ್ಯದಲ್ಲಿ **ಭಾರತ** ಎಂಬ ಶಬ್ದಕ್ಕೆ ಅರ್ಥ ಹೇಳಿ ಆ ಜ್ಞಾನದಿಂದ ಸಮಸ್ತ ಪಾಪಗಳೂ **ನಾಶಹೊಂದುತ್ತವೆಂದು** ಹೇಳಿದ್ದು ಭಾರತಕ್ಕೆ ಉತ್ತಮತ್ವವಿಲ್ಲದೆ ಸರ್ವಥಾ ಕೂಡಲಾರದು ) ಭಾರತಕ್ಕೆ ಸರ್ವಶಾಸ್ತ್ರೋತ್ತಮತ್ವವಿಲ್ಲವಾದರೆ ಭಾರತವೆಂಬ ಶಬ್ದದ ಅರ್ಥವನ್ನು ತಿಳಿಯೋಣ ಮಾತ್ರದಿಂದ ಸಮಸ್ತ ಪಾಪಪರಿಹಾರವು ಹೇಗೆ ಆದೀತು? (ಬೇರೆ ಶಬ್ದಗಳ ಅರ್ಥಜ್ಞಾನದಿಂದ ಸಮಸ್ತಪಾಪ ಪರಿಹಾರವು ಆಗುವುದಿಲ್ಲವಷ್ಟೆ!) (೨) (**ಗಂಗಾಸ್ನಾನೇನ ವಾ ಮುಕ್ತಿಃ ಪ್ರಯಾಗಮರಣೇನ ವಾ** ಇತ್ಯಾದಿಗಳಲ್ಲಿ ಸ್ನಾನಾದಿಗಳನ್ನು ಮಾಡೋಣದರಿಂದ ಮುಕ್ತಿಯಾಗದಿರುವುದರಿಂದ ಇಲ್ಲದಿರುವುದನ್ನು ಹೊಗಳಿಯದೆ ಅಂತೆಯೇ **ಸರ್ವಪಾಪೈಃ ಪ್ರಮುಚ್ಯತೇ** ಎಂಬಲ್ಲಿಯೂ ಅಯಾಥಾರ್ಥ್ಯವನ್ನೇ ಹೇಳಿದ್ದೆಂದು ಏಕೆ ಹೇಳಲಾಗುವುದಿಲ್ಲ? ಎಂದರೆ—) ಆ ಅರ್ಥವು ಪ್ರಮಾಣಪ್ರಸಿದ್ಧವೇ ಆಗಿದೆ

**ವಿ** ॥ **(1)** ಜ್ಞಾನವು ಸ್ವತಃ ಪ್ರಮಾಣವು ಅಂದರೆ ಜ್ಞಾನವು ಯಾವುದರಿಂದ ಹುಟ್ಟುತ್ತದೋ ಅದರಿಂದಲೇ ಪ್ರಮಾಣವೆಂದೂ ಹುಟ್ಟುತ್ತದೆ ಬಾಧಕವಿದ್ದರೆ ಅಪ್ರಮಾಣವೆಂದು ತಿಳಿಯುತ್ತದೆ ಇಲ್ಲಿ ಅಂತಹ ಬಾಧಕವಿಲ್ಲ ಅರ್ಥವಾದ (ಸ್ತುತಿ ಅಥವಾ ನಿಂದೆಯನ್ನು ಬೋಧಿಸುವ) ವಾಕ್ಯಗಳಿಗೂ ಅಬಾಧಿತವಾದ ಸ್ವಾರ್ಥದಲ್ಲಿ ಪ್ರಾಮಾಣ್ಯವು ಇದ್ದೇಇದೆ ಆದಕಾರಣ ಭಾರತ ಎಂಬ ಶಬ್ದದ ಅರ್ಥಜ್ಞಾನದಿಂದ ಸಮಸ್ತ ಪಾಪಪರಿಹಾರರೂಪವಾದ ಅರ್ಥವು ಪ್ರಮಾಣಪ್ರಸಿದ್ಧವೇ ಆಗಿದೆ (2) ವೇದವು ಅಚೇತನವಾದುದರಿಂದ **ಬಿಭೇತಿ** ಎಂದು ಹೇಳಿದ್ದು ಹೇಗೆ ಕೂಡುತ್ತದೆಂದರೆ—ಕಳ್ಳರಿಗೆ ಹೆದರಿದವನು ತನ್ನ ದ್ರವ್ಯಾದಿಗಳನ್ನು ಮರೆ ಮಾಡಿಕೊಳ್ಳುವಂತೆ ವೇದವೂ ಕೂಡ ಇತಿಹಾಸ ಪುರಾಣಗಳನ್ನು ತಿಳಿಯದವರಿಗೆ ತನ್ನ ನಿಜವಾದ ಅರ್ಥವನ್ನು ತಿಳಿಸುವುದಿಲ್ಲ ಅಂದರೆ ಅವರಿಗ ವೇದದ ಅರ್ಥವಾಗುವುದಿಲ್ಲ (೩) ಸರ್ವತ್ರ ವ್ಯಾಪ್ತವೂ ದ್ರವ್ಯರೂಪವೂ ನಿತ್ಯವೂ ಆದ ವರ್ಣರಾಶಿರೂಪವಾದ ಭಾರತವನ್ನು ತಕ್ಕಡಿಯಲ್ಲಿ ಹಾಕಿದರೆಂದೂ ಅದು ಹೆಚ್ಚು ಭಾರವುಳ್ಳದ್ದಾಯಿತೆಂಬುದೂ ಹೇಗೆ ಕೂಡುತ್ತದೆಂದರೆ—ಸಮಾನವಾದ ಭಾರವೂ ಪರಿಮಾಣವೂ ಇರುವ ಎರಡು ಮಣಿಗಳಲ್ಲಿ ಒಂದು ಮಣಿಯಲ್ಲಿ ಎಲ್ಲಾ ವೇದರಾಶಿಗಳನ್ನೂ ಮತ್ತೊಂದರಲ್ಲಿ ಭಾರತವನ್ನೂ ಆವಾಹನಮಾಡಿ ದೇವತೆಗಳೂ ಋಷಿಗಳೂ ವ್ಯಾಸರ ಆಜ್ಞಾನುಸಾರ ತಕ್ಕಡಿಯಲ್ಲಿ ಹಾಕಿದಾಗ ಭಾರತಪ್ರತಿನಿಧಿಯಾದ ಮಣಿಯ ಭಾರವು ಹೆಚ್ಚು ಆಯಿತು ಈ ಪ್ರಮೇಯವು ಬ್ರಾಹ್ಮಪುರಾಣದಲ್ಲಿ ೩೪ನೇ ಅಧ್ಯಾಯದಲ್ಲಿ **ಬದ್ಧಾ ಸುಪೂಜಿತಾ ತತ್ರ ತುಲಾ ತಸ್ಯಾಂ ಮಣಿದ್ವಯಂ । ದೇವೈಃ ಕ್ಷಿಪ್ತಂ ದ್ವಿಜಮುಖ್ಯೈಃ ಭಾರಕಾತ್ಮಾ ಮಣಿರ್ಗುರುಃ ॥ ಅಭೂತ್ತದಾ ಬ್ರಾಹ್ಮಣೋಽಯಂ ಜಗ್ರಾಹೇಮಂ ಮಣಿಂ ಪರಂ । ಭಾರಾದ್ಭಾರತಮೇತಸ್ಯ ನಾಮ ಚಕ್ರುಸ್ತದಾ ಸುರಾಃ ॥** ಎಂದು ಹೇಳಿದೆ (4)

**ಸಂಗ್ರಹಾಧ್ಯಾಯಬೀಜೋಽಸೌ ಪೌಲೋಮಾಸ್ತೀಕಬೀಜವಾನ್ । ಸಂಭವಸ್ಕಂಧ್ಯವಿಸ್ತಾರಸ್ಸಭಾರಣ್ಯವಿಟಂಕವಾನ್ ॥ ಅರಣೀಪೂರ್ವರೂಪಾಢ್ಯೋ ವಿರಾಟೋದ್ಯೋಗಸಾರವಾನ್ । ಭೀಷ್ಮಪರ್ವಮಹಾಶಾಖೋ ದ್ರೋಣಪರ್ವಪಲಾಶವಾನ್ ॥ ಕರ್ಣಪರ್ವಶುಭೈಃ ಪುಷ್ಪೈಃ ಶಲ್ಯಪರ್ವಸುಗಂಧಿಭಿಃ । ಸ್ತ್ರೀಪರ್ವೈಷಿಕವಿಶ್ರಾಮಃ ಶಾಂತಿಪರ್ವಮಹಾಫಲಃ ॥ ಅಶ್ವಮೇಧಾಮೃತರಸಃ ಆಶ್ರಮಸ್ಥಾನಸಂಶ್ರಯಃ । ಕೌಸಲಶ್ರುತಿಸಂಕ್ಷೇಪಃ ಶಿಷ್ಟದ್ವಿಪನಿಷೇವಿತಃ ॥ ಸರ್ವೇಷಾಂ ಕವಿಮುಖ್ಯಾನಾಮುಪಜೀವ್ಯೋ ಭವಿಷ್ಯತಿ । ಪರ್ಜನ್ಯ ಇವ ಭೂತಾನಾಂ ಪಕ್ಷಿಣಾಂ ಭಾರತದ್ರುಮಃ** ಎಂದು ದುರ್ವಾಸರನ್ನು ಕುರಿತು ಬ್ರಹ್ಮನ ವಾಕ್ಯವು ಈ ಪೂರ್ವೋತ್ತರ ವಾಕ್ಯಗಳನ್ನು ವಿಚಾರಮಾಡಿದರೆ ಭಾರತವೆಂಬ ಕಲ್ಪವೃಕ್ಷಕ್ಕೆ ವಿರಾಟ ಉದ್ಯೋಗ ಪರ್ವಗಳೇ ತಿರುಳು ಎಂದು ಹೇಳುತ್ತಾ ಭಾರತವು ಸರ್ವ ಪುರುಷಾರ್ಥಗಳಿಗೂ ಕಾರಣವೆಂದು ತಿಳಿಸುತ್ತದೆ ॥ ೫ ॥

ಟೀ—**ಕೋ ಹ್ಯನ್ಯಃ** ಇತ್ಯಾದಿ ಪುರಾಣ ಗ್ರಂಥಾಂತರಗತ ವಾಕ್ಯಾನ್ಯಥಾನುಪಪತ್ತ್ಯಾ ಎಂದು ಹೇಳಿದೆ ಆ ಅನ್ಯಥಾನುಪತ್ತಿಯು ಎಂತಹುದೆಂದರೆ—

**ಭಾ ॥ (೧) ಕಥಂ ಚಾನ್ಯಸ್ಯ ನ ಕರ್ತುಂ ಶಕ್ಯತೇ ॥ (೨) ಗ್ರಂಥಾಂತರಗತತ್ವಾಚ್ಚ ನಾವಿದ್ಯಮಾನಸ್ತುತಿಃ ॥ ೬ ॥**

**ಅ** ॥ (೧) ಶ್ರೀ ಹರಿಯು ಮಾತ್ರ ತಿಳಿದಿರುವ ಅರ್ಥವು ಭಾರತದಲ್ಲಿರುವುದೆಂದು ಆಗದಿದ್ದರೆ—**ಕೋ ಹ್ಯನ್ಯಃ** ಎಂಬ ವಾಕ್ಯದಲ್ಲಿ ಭಾರತವನ್ನು ಶ್ರೀನಾರಾಯಣನು ಹೊರತು ಬೇರೆಯವರಿಗೆ ಮಾಡಲು ಶಕ್ತಿಯಿಲ್ಲವೆಂದು ಹೇಳಿದ್ದು ಹೇಗೆ ಕೂಡುತ್ತದೆ? (ಆದಕಾರಣ ಶ್ರೀ ವ್ಯಾಸರು ಬೇರೆಯವರಿಗೆ ತಿಳಿಯಲು ಅಸಾಧ್ಯವಾಗಿದ್ದು ತಾನು ಮಾತ್ರ ತಿಳಿದಿರುವ ವಿಷಯಗಳನ್ನು ಭಾರತದಲ್ಲಿ ಹೇಳಿರುತ್ತಾರೆ) (೨) ಸ್ವತಃ ಪ್ರಮಾಣವಾದ ಈ ಭಾರತದ ಮಹಿಮೆಯನ್ನು ಬೇರೆ ಗ್ರಂಥಗಳಲ್ಲಿಯೂ ಹೇಳಿದ ಕಾರಣ **ಕೋ ಹ್ಯನ್ಯಃ ಪುಂಡರೀಕಾಕ್ಷಾತ್** ಎಂಬಲ್ಲ ಭಾರತದಲ್ಲಿಲ್ಲದಿರುವ ಗುಣಗಳನ್ನು ಹೊಗಳಿದ್ದೆಂದು ತಿಳಿಯಬಾರದು ॥೬॥

ಟೀ—**ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪರಂ** ಎಂದು ವ್ಯಾಸರನ್ನು ಸಾಕ್ಷಾನ್ನಾರಾಯಣನೆಂದು ಸ್ತೋತ್ರಮಾಡಿದ ಕಾರಣ **ಕೋ ಹ್ಯನ್ಯಃ** ಎಂಬ ಮೇಲಿನ ವಾಕ್ಯದಲ್ಲಿಯೂ ನಾರಾಯಣನನ್ನೇ ಸ್ತುತಿಸಿದ್ದು ಭಾರತವನ್ನಲ್ಲವೆಂದರೆ--

**ಭಾ ॥ (೧) ನ ಚ ಕರ್ತುರೇವ ॥ (೨) ಇತರತ್ರಾಪಿ ಸಾಮ್ಯಾತ್ ॥ ೭ ॥**

**ಅ** ॥ (೧) ಈರೀತಿ ಭಾರತಗ್ರಂಥಕರ್ತರಾದ ವ್ಯಾಸರೂಪಿ ಶ್ರೀ ನಾರಾಯಣನನ್ನು ಮಾತ್ರ ಸ್ತುತಿಸಿದ್ದೆಂದಲ್ಲ, ಪರಂತು ಭಾರತವನ್ನೂ ಸ್ತುತಿಸಿದ್ದಾರೆ (೨) ಗ್ರಂಥವನ್ನು ಅಥವಾ ಗ್ರಂಥವಿಶೇಷವನ್ನು ಮಾಡಿದ್ರಿಂದ ವ್ಯಾಸರನ್ನು ಶ್ರೀ ನಾರಾಯಣನೆಂದು ಹೇಳುವುದಾದರೆ ಕಾಲಿದಾಸಾದಿಗಳೂ ರಘುವಂಶ ಮೊದಲಾದ ಗ್ರಂಥವಿಶೇಷಗಳನ್ನು ಮಾಡಿದ್ರಿಂದ ಅವರನ್ನೂ ಶ್ರೀ ನಾರಾಯಣನೆಂದು ಅನ್ನಬೇಕಾದೀತು ಅದುಕಾರಣ ನಾರಾಯಣನು ಹೊರತು ಬೇರೆ ಯಾರಿಂದಲೂ ಮಾಡಲಸಾಧ್ಯವಾದ ಭಾರತಗ್ರಂಥವನ್ನು ರಚಿಸಿದ ಕಾರಣ ವ್ಯಾಸರನ್ನು ಶ್ರೀ ನಾರಾಯಣನೆಂದೇ ಹೇಳಬೇಕು ॥ ೭ ॥

ಟೀ—ಭಾರತವು ಹೀಗೆ ಪ್ರಮಾಣವೂ, ಅಧಿಕಾರಿವಿಷಯಗಳುಳ್ಳದ್ದೂ ತಿಳಿಯಲಸಾಧ್ಯವಾದ ಅರ್ಥವುಳ್ಳದ್ದೆಂದೂ ಆಗಲಿ ಆದರೂ ಗೀತೆಗೆ ಪ್ರಾಮಾಣ್ಯಾದಿಗಳು ಸಿದ್ಧಿಸುವುದು ಹೇಗೆ? ಎಂದರೆ—

**ಭಾ ॥ (೧) ತತ್ರ ಚ ಸರ್ವಭಾರತಾರ್ಥಸಂಗ್ರಹಾಂ ವಾಸುದೇವಾರ್ಜುನಸಂವಾದರೂಪಾಂ ಭಾರತಪಾರಿಜಾತಮಧುಭೂತಾಂ ಗೀತಾಮುಪನಿಬಬಂಧ ॥ (೨) ತಚ್ಚೋಕ್ತಂ । ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ । ವಿಷ್ಣೋಃ ಸಹಸ್ರನಾಮಾಪಿ ಜ್ಞೇಯಂ ಪಾಠ್ಯಂ ಚ ತದ್ದ್ವಯಂ । ಇತಿ ಮಹಾಕೌರ್ಮೇ ॥ ೮ ॥**

**ಅ** ॥ (೧) ಇಂತಹ ಮುಖ್ಯಪ್ರಮಾಣವಾದ ಭಾರತದಲ್ಲಿ ಶ್ರೀ ಕೃಷ್ಣಾರ್ಜುನರ ಪ್ರಶ್ನೋತ್ತರರೂಪ ವಾದ ಸಂವಾದವನ್ನು ಪ್ರಕಾಶಗೊಳಿಸುವ, ಸಂಪೂರ್ಣ ಭಾರತದ ಅರ್ಥವನ್ನು ಸಂಗ್ರಹಿಸಿರುವ, ಭಾರತ ವೆಂಬ ಪಾರಿಜಾತಪುಷ್ಪದ ರಸದಂತೆ ಸಾರವಾದ ಭಗವದ್ಗೀತೆಯನ್ನು (ವೇದವ್ಯಾಸರು) ರಚಿಸಿರುವರು (ಆದುದರಿಂದಲೇ ಭಾರತದ ಬೇರೆ ಭಾಗಗಳನ್ನು ಬಿಟ್ಟು ಗೀತೆಗೇನೇ ಅರ್ಥ ಬರೆದಿರುವರು ಗೀತೆಯ ಅರ್ಥ ಹೇಳಿದರೆ ಸಂಪೂರ್ಣ ಭಾರತದ ಅರ್ಥ ಹೇಳಿದಂತೆಯೇ ಆಗುವುದು) (೨) (ಭಾರತಾರ್ಥವನ್ನು ಸಂಗ್ರಹಿಸಿ ಗೀತೆಯಲ್ಲಿ ಹೇಳದಕಾರಣ ಗೀತೆಯು ಭಾರತಕ್ಕೆ ಸಮಾನವೆಂದಲ್ಲ, ಪರಂತು ಭಾರತಕ್ಕಿಂತಲೂ ಗೀತೆಯು ಶ್ರೇಷ್ಠವಾಗಿದೆ ಎಂಬುವಲ್ಲಿ ಪ್ರಮಾಣ ಹೇಳುತ್ತಾರೆ—)ಗೀತೆಯು ಶ್ರೇಷ್ಠವೆಂದು ಮಹಾಕೌರ್ಮ ದಲ್ಲಿ ಹೇಳಿದೆ ಭಾರತವು ಸರ್ವಶಾಸ್ತ್ರಗಳಲ್ಲಿ ಶ್ರೇಷ್ಠವು ಭಾರತದಲ್ಲಿಯೂ ಭಗವದ್ಗೀತೆಯೂ ವಿಷ್ಣುಸಹಸ್ರ ನಾಮವೂ ಶ್ರೇಷ್ಠವು ಆದಕಾರಣ ಆ ಗೀತಾ ಸಹಸ್ರನಾಮಗಳ ಅರ್ಥವನ್ನು ತಿಳಿಯಬೇಕು ಮತ್ತು ಅವುಗಳನ್ನು ಪಠಿಸಬೇಕೆಂದೂ ಹೇಳಿಯದೆ

**ವಿ** ॥ **(1)** ಪರಮಾಪ್ತರಾದ ವ್ಯಾಸರು ರಚಿಸಿರುವುದರಿಂದಲೂ ವೇದಾದಿಗಳ ಅರ್ಥವನ್ನು ಸಂಪೂರ್ಣ ಹೇಳುವುದರಿಂದಲೂ ಗೀತೆಯು ಮುಖ್ಯ ಪ್ರಮಾಣವಾಗಿದೆ ಇದರಲ್ಲಿ ಧರ್ಮಾದಿಗಳನ್ನು ಹೇಳುವುದ ರಿಂದ ಧರ್ಮಾದಿಗಳು ವಿಷಯವು, ಮೋಕ್ಷವು ಪ್ರಯೋಜನವು, ಸಜ್ಜನರು ಅಧಿಕಾರಿಗಳು (2) ಕೇವಲ ಅಪರೋಕ್ಷಜ್ಞಾನವೇ ಮೋಕ್ಷಸಾಧನವು ಜ್ಞಾನವು ಹುಟ್ಟುವುದಕ್ಕಿಂತ ಮೊದಲು ಮಾಡಿದ ಧರ್ಮದಿಂದ ಅಂತಃಕರಣಶುದ್ಧಿಯಾಗಿ ವೈರಾಗ್ಯಾದಿಗಳು ಹುಟ್ಟುತ್ತವೆ ಗೀತೆಯ ಶ್ರವಣ ಮನನಾದಿಗಳಿಂದ ಜ್ಞಾನ ವುಂಟಾಗಿ ಮೋಕ್ಷವು ಲಭಿಸುವದು ಜ್ಞಾನವು ಹುಟ್ಟಿದ ಮೇಲೆ ಮಾಡಿದ ಧರ್ಮದಿಂದ ಮೋಕ್ಷದಲ್ಲಿ ಆನಂದವು ಅಭಿವೃದ್ಧಿಯಾಗುತ್ತದೆ ॥ ೮ ॥

**ಪೀ**—(೧) ಜ್ಞಾನವು ಹುಟ್ಟಿದ ಮೇಲೆ ಧರ್ಮವನ್ನು ಮಾಡಬೇಕಾಗಿಲ್ಲ ಧರ್ಮವನ್ನು ಗೀತೆಯಲ್ಲಿ ಹೇಳುವುದೇ ಇಲ್ಲವೆಂದು ಮಾಯಾವಾದಿಗಳು ಹೇಳುತ್ತಾರೆ (೨) ಜ್ಞಾನಕರ್ಮಗಳ ಸಮುಚ್ಚಯ ದಿಂದಲೇ ಮೋಕ್ಷವು ಆ ಜ್ಞಾನಕರ್ಮಗಳನ್ನು ಹೇಳುವುದಕ್ಕಾಗಿಯೇ ಗೀತೆಯನ್ನು ಮಾಡಿದ್ದು ಧರ್ಮಾದಿಗಳನ್ನು ಹೇಳುವುದಕ್ಕಾಗಿ ಅಲ್ಲ ಧರ್ಮಜ್ಞಾನಗಳನ್ನು ಹೇಳುವ ಮನ್ವಾದಿ ಧರ್ಮಶಾಸ್ತ್ರಗಳೂ, ಸನಕಾದಿಗಳು ಮಾಡಿದ ಯೋಗಶಾಸ್ತ್ರಗಳೂ ಪ್ರತಿಕಲ್ಪದಲ್ಲಿಯೂ ಇರುತ್ತವೆಂದು ಭಾಸ್ಕರಾಚಾರ್ಯರು ಹೇಳುತ್ತಾರ ಅವೆರಡೂ ಅಯುಕ್ತವೆನ್ನುತ್ತಾರೆ—

**ಭಾ ॥ ಸ ಹಿ ಧರ್ಮಃ ಸುಪರ್ಯಾಪ್ತೋ-ಬ್ರಹ್ಮಣಃ ಪದವೇದನೇ । ಇತ್ಯಾದಿ ಚ ॥ ೯ ॥**

ಅ ॥ (**ನ ಚ ಶಕ್ಯಃ ಪುನರ್ವಕ್ತುಮಶೇಷೇಣ ಧನಂಜಯ**=ಅರ್ಜುನನೇ ತಿರುಗಿ ಸಂಪೂರ್ಣ ಹೇಳಲು ಶಕ್ಯವಲ್ಲ) ಜ್ಞಾನವು ಹುಟ್ಟುವುದಕ್ಕಿಂತ ಮೊದಲು ಮಾಡಿದ ಗೀತೆಯಲ್ಲಿ ಹೇಳಿದ ಧರ್ಮವು ಪರಬ್ರಹ್ಮನ ಸ್ವರೂಪಜ್ಞಾನವನ್ನು ಹುಟ್ಟಿಸಿ ಮೋಕ್ಷಕ್ಕೆ ಕಾರಣವಾಗುತ್ತದೆ ಪರಬ್ರಹ್ಮನ ಸ್ವರೂಪಜ್ಞಾನ ಹುಟ್ಟಿದ ಮೇಲೆ ಮಾಡಿದ ಧರ್ಮವು ಮೋಕ್ಷದಲ್ಲಿ ಆನಂದವನ್ನು ವೃದ್ಧಿಗೊಳಿಸುತ್ತದೆಂದು ಅನುಗೀತೆಯ

(ಅಶ್ವಮೇಧಪರ್ವದಲ್ಲಿ ಅಭಿಮನ್ಯುಮರಣಾನಂತರದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದ ಗೀತೆ ಅನುಗೀತೆಯು) ಬುಡದಲ್ಲಿ ಶ್ರೀಕೃಷ್ಣನೇ ಉಪದೇಶಿಸಿದನು, ಇದುಮೊದಲಾದ ಪ್ರಮೇಯವು ಇದೆ ॥ ೯ ॥

ಪೀ – **ಧರ್ಮಕ್ಷೇತ್ರೇ** (ಅಧ್ಯಾ ೧ ಶ್ಲೋ ೧) ಆರಂಭಿಸಿ **ವಿಷೀದಂತಮಿದಂ ವಚಃ** (ಅಧ್ಯಾ. ೨ ಶ್ಲೋ ೧೦) ಎಂಬ ಪರ್ಯಂತ ಶ್ಲೋಕಗಳ ಅರ್ಥವು ಸ್ಪಷ್ಟವಾಗಿರುವುದರಿಂದ ಅವುಗಳ ತಾತ್ಪರ್ಯವನ್ನು ಹೇಳುತ್ತಾರೆ—

**ಭಾ ॥ ತತ್ರ ಸೇನಯೋರ್ಮಧ್ಯೇ ಬಾಂಧವಾದಿಮೋಹಜಾಲಸಂವೃತಂ ವಿಷೀದಂತಮು-ರ್ಜುನಂ ಭಗವಾನುವಾಚ ॥ ೧೦ ॥**

**ಅ** ॥ ಕುರುಪಾಂಡವರ ಸೈನ್ಯಗಳ ಮಧ್ಯದಲ್ಲಿ ಬಾಂಧವಾದಿಗಳನ್ನು ನೋಡಿದೊಡನೇ ಬಲೆಯಂತೆ ಇರುವ ಸ್ನೇಹದಿಂದೊಡಗೂಡಿ ದುಃಖಿಸುತ್ತಿರುವ ಅರ್ಜುನನಿಗೆ ಶ್ರೀಕೃಷ್ಣ ಪರಮಾತ್ಮನು ಗೀತೆಯನ್ನು ಪದೇಶಿಸಿದನು

ವಿ ॥ (1) ಅರ್ಜುನನಿಗೆ ಭೀಷ್ಮಾದಿ ಬಾಂಧವರನ್ನು ನೋಡಿದೊಡನೆ ಇವರು ನನ್ನವರು, ನಾನು ಇವರಿಗೆ ಸಂಬಂಧಿಯು, ಇವರು ನನಗಾಗಿ ನಾಶಹೊಂದುವರು, ಇವರಿಲ್ಲದೆ ನನಗೆ ಹೇಗೆ ಸುಖವುಂಟಾಗುವುದು, ಇವರನ್ನು ಕೊಂದರೆ ನನಗೆ ಪಾಪವೇ ಸಂಭವಿಸುವುದು ಜಯವೂ ಸಂದಿಗ್ಧವಾಗಿದೆ, ಇದು ಮೊದಲಾದ ಮಿಥ್ಯಾಜ್ಞಾನವು ಬಾಂಧವಾದಿಮೋಹವು ಇದು ಮೀನನ್ನು ಹಿಡಿಯುವ ಬಲೆಯಂತಿರುವುದು ಅಂದರೆ ಬಲೆಯಲ್ಲಿ ಮೀನುಗಳು ಸಿಲುಕಿ ಬೀಳುವಂತೆ ಬಾಂಧವಾದಿಗಳನ್ನು ನೋಡಿದೊಡನೆ ಅರ್ಜುನನು ಸಿಲುಕಿ ಮೋಹವನ್ನು ಹೊಂದಿರುತ್ತಾನೆ ಅಂತಿಹ ಅರ್ಜುನನಿಗೆ ಶ್ರೀ ಕೃಷ್ಣನು ಗೀತೋಪದೇಶ ಮಾಡಿರುತ್ತಾನೆ (2) ಅರ್ಜುನನು ಇಂದ್ರಾವತಾರನಾದುದರಿಂದ ಅಪರೋಕ್ಷಜ್ಞಾನಿಯು ಆದ ಕಾರಣ ಆತನಿಗೆ ಮೋಹವಿದೆ ಎಂದು ಹೇಗೆ ಕೂಡುತ್ತದೆಂದರೆ—ಭೂಸಂಬಂಧ, ಮನುಷ್ಯರ ಅನ್ನವನ್ನು ಉಣ್ಣುವುದು ಇದುಮೊದಲಾದ ಕಾರಣಗಳಿಂದ ಅತ್ಯಲ್ಪ ಮೋಹವು ॥ ೧೦ ॥

## ಗೀತಾತಾತ್ಪರ್ಯೋಪೋದ್ಘಾತವು.

**ಪೀಠಿಕೆ**—ಅನೇಕ ಗ್ರಂಥಗಳಿರುವಾಗ ಭಾರತದ ಮಧ್ಯದಲ್ಲಿರುವ ಗೀತೆಗೇನೇ ವಿಶೇಷವೇನು? ಅದಕ್ಕೇನೇ ಪ್ರತ್ಯೇಕ ತಾತ್ಪರ್ಯವನ್ನು ಮಾಡಿದ್ದೇಕೆ? ಎಂದರೆ—ಭಾರತವು ಸರ್ವಶಾಸ್ತ್ರಗಳಲ್ಲಿ ಶ್ರೇಷ್ಠವು ಭಾರತದಲ್ಲಿಯೂ ಗೀತೆಯು ಶ್ರೇಷ್ಠವೆಂಬುದನ್ನು ಪುರಾಣ ಪ್ರಮಾಣವಚನಗಳಿಂದ ದೃಢೀಕರಿಸುತ್ತಾರೆ—

**ಗೀತಾತಾತ್ಪರ್ಯ ॥ (೧) ಶಾಸ್ತ್ರೇಷು ಭಾರತಂ ಸಾರಂ(ರಃ) ತತ್ರ ನಾಮಸಹಸ್ರಕಂ । ವೈಷ್ಣವಂ ಕೃಷ್ಣಗೀತಾ ಚ ತಜ್ಜ್ಞಾನಾನ್ಮುಚ್ಯತೇಽಂಜಸಾ ॥ (೨) ನ ಭಾರತಸಮಂ ಶಾಸ್ತ್ರಂ ಕುತ ಏವಾನಯೋಸ್ಸಮಂ ॥ (೩) ಭಾರತಂ ಸರ್ವವೇದಾಶ್ಚ ತುಲಾಮಾರೋಪಿತಾಃ ಪುರಾ । ದೇವೈರ್ಬ್ರಹ್ಮಾದಿಭಿಸ್ಸರ್ವೈರ್ಋಷಿಭಿಶ್ಚ ಸಮನ್ವಿತೈಃ । ವ್ಯಾಸಸ್ಯೈವಾಜ್ಞಯಾ ತತ್ರ ತ್ವತ್ಯರಿಚ್ಯತ ಭಾರತಂ ॥ (೪) ಮಹತ್ವಾದ್ಭಾರವತ್ವಾಚ್ಚ ಮಹಾಭಾರತಮುಚ್ಯತೇ । ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ॥ ೧ ॥**

ಅ ॥ (೧) ಋಗ್ವೇದ ಮೊದಲಾದ ಶಾಸ್ತ್ರಗಳಲ್ಲಿ ಭಾರತವು ಶ್ರೇಷ್ಠವು. ಭಾರತದಲ್ಲಿಯೂ ವಿಷ್ಣು ಸಹಸ್ರನಾಮವೂ ಗೀತೆಯೂ ಶ್ರೇಷ್ಠವು ಗೀತಾ ವಿಷ್ಣುಸಹಸ್ರನಾಮಗಳನ್ನು ತಿಳಿಯೋಣದರಿಂದ ಮೋಕ್ಷ ವನ್ನು ಹೊಂದುತ್ತಾನೆ (ಅಂದರೆ—ಭಾರತದ ಅರ್ಥವನ್ನು ತಿಳಿಯುವುದಕ್ಕಿಂತಲೂ ಗೀತಾ ಸಹಸ್ರನಾಮ ಗಳ ಅರ್ಥವನ್ನು ಹೆಚ್ಚು ತಿಳಿದರೆ ವಿಶೇಷತಃ ಮೋಕ್ಷವಾಗುವ ಕಾರಣ ಭಾರತದಲ್ಲಿಯೂ ಗೀತಾ ಸಹಸ್ರ ನಾಮಗಳು ಶ್ರೇಷ್ಠಗಳೆಂಬುದು ಯುಕ್ತವು) (೨) (ಗೀತಾ ಸಹಸ್ರನಾಮ ಇವುಗಳಿಗೆ ಸಮಾನಗಳಾದ ಬೃಹತೀಸಹಸ್ರ ಪಂಚರಾತ್ರಾಗಮ ಮೊದಲಾದ ಶಾಸ್ತ್ರಾಂತರಗಳ ಜ್ಞಾನದಿಂದಲೂ ಮೋಕ್ಷವು ಸಿಗುವ ದರಿಂದ ಭಗವದ್ಗೀತಾದಿಗಳಿಗೇನೇ ವಿಶೇಷವೇನೆಂದರೆ—) ಭಾರತಕ್ಕೆ ಸಮಾನವಾದ ಶಾಸ್ತ್ರವೇ ಇಲ್ಲವೆಂದ ಮೇಲೆ ಅದಕ್ಕಿಂತಲೂ ಮಿಗಿಲಾದ ಗೀತಾ ಸಹಸ್ರನಾಮಗಳಿಗೆ ಸಮಾನವಾದ ಬೇರೆ ಶಾಸ್ತ್ರವು ಇರುವುದು ಹೇಗೆ? (ಸರ್ವಥಾ ಇಲ್ಲ) (೩) (ಏಕೆಂದರೆ—) ಮೊದಲು ಬ್ರಹ್ಮ ರುದ್ರ ಮೊದಲಾದ ಎಲ್ಲಾ ದೇವತೆ ಗಳೂ ಋಷಿಗಳೂ ಒಟ್ಟು ಸೇರಿ ಭಾರತವನ್ನೂ (ಭಾರತಪ್ರತಿನಿಧಿಯಾದ ಮಣಿಯನ್ನೂ) ಋಗ್ವೇದ ಮೊದ ಲಾದ ಎಲ್ಲಾ ಶಾಸ್ತ್ರಗಳನ್ನೂ (ಅವುಗಳಿಗೆ ಪ್ರತಿನಿಧಿಯಾದ ಮಣಿಯನ್ನೂ) ವೇದವ್ಯಾಸರ ಆಜ್ಞೆಯಿಂದಲೇ ತಕ್ಕಡಿಯಲ್ಲಿ ಇಟ್ಟರು ಅವುಗಳಲ್ಲಿ ಭಾರತಪ್ರತಿನಿಧಿಯಾದ ಮಣಿಯು ಹೆಚ್ಚು ಭಾರವುಳ್ಳದ್ದಾಯಿತು (೪) ಶ್ರೇಷ್ಠವಾಗಿರುವುದರಿಂದಲೂ ಹೆಚ್ಚು ಭಾರವಿರುವುದರಿಂದಲೂ ಮಹಾಭಾರತವೆನಿಸುತ್ತದೆ ಈ ಮಹಾಭಾರತ ಎಂಬ ಶಬ್ದದಿಂದ ಸಿಗುವ ಅರ್ಥವನ್ನು ತಿಳಿದವನು ಎಲ್ಲಾ ಪಾಪಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ.

ವಿ ॥ (1) ಗೀತೆಗೆ ಸಮಾನವಾದುದು ವಿಷ್ಣುಸಹಸ್ರನಾಮವೂ ಇರುವುದರಿಂದ ಅದನ್ನು ಬಿಟ್ಟು, ಗೀತೆಗೇನೇ ವ್ಯಾಖ್ಯಾನ ಮಾಡಲಿಕ್ಕೆ ಕಾರಣವೇನೆಂದರೆ—ಗೀತೆಯಲ್ಲಿ ಸಂಪೂರ್ಣ ಭಾರತದ ಅರ್ಥವನ್ನು ಸಂಗ್ರಹಿಸಿ ಹೇಳಿದ ಕಾರಣ ಸಹಸ್ರನಾಮಕ್ಕಿಂತಲೂ ಗೀತೆಯಲ್ಲಿ ಹೆಚ್ಚು ಅರ್ಥವಿರುವುದರಿಂದ ಗೀತೆಗೇನೇ ವ್ಯಾಖ್ಯಾನಮಾಡಿರುತ್ತಾರೆ ॥ ೧ ॥

ಪೀ—ಪರಮಾಪ್ತರಾದ ವೇದವ್ಯಾಸರು ಮಾಡಿರುವುದರಿಂದ ಭಾರತವು ಸರ್ವ ಶಾಸ್ತ್ರಗಳಿಗಿಂತಲೂ ಶ್ರೇಷ್ಠವಾಗಿದೆ ಎನ್ನುತ್ತಾರೆ—

**ತಾ ॥ ಸ್ವಯಂ ನಾರಾಯಣೋ ದೇವೈರ್ಬ್ರ(ರ್ವೋ ಬ್ರ)ಹ್ಮರುದ್ರೇಂದ್ರಪೂರ್ವಕೈಃ । ಅರ್ಥಿ-ತೋ ವ್ಯಾಸತಾಂ ಪ್ರಾಪ್ಯ ಕೇವಲಂ ತತ್ತ್ವನಿರ್ಣಯಂ । ಚಕಾರ ಪಂಚಮಂ ವೇದಂ ಮಹಾಭಾರತಸಂಜ್ಞಿತಂ । ಇತಿ(ತ್ಯಾದಿ) ಬ್ರಹ್ಮಾಂಡೇ ॥ ೨ ॥**

ಅ ॥ ಸಾಕ್ಷಾನ್ನಾರಾಯಣನು ಬ್ರಹ್ಮ ರುದ್ರ ಇಂದ್ರ ಮೊದಲಾದ ದೇವತೆಗಳಿಂದ ಪ್ರಾರ್ಥಿಸಿಕೊಳ್ಳ ಲ್ಪಟ್ಟವನಾಗಿ ವೇದವ್ಯಾಸಾವತಾರವನ್ನು ಹೊಂದಿ ಅಸುರಾದಿಗಳನ್ನು ಮೋಹಿಸಬೇಕು ಇದುಮೊದಲಾದ ಉದ್ದೇಶವಿಲ್ಲದೆ ತತ್ತ್ವವನ್ನೇ ನಿರ್ಣಯಿಸತಕ್ಕ ಮಹಾಭಾರತ ಎಂದು ಹೆಸರುಳ್ಳ ಐದನೇ ವೇದವನು ಮಾಡಿದನೆಂದು ಬ್ರಹ್ಮಾಂಡಪುರಾಣದಲ್ಲಿದೆ ॥ ೨ ॥

ಪೀ—ಈ ಪ್ರಕಾರ ಗೀತೆಗೆ ತಾತ್ಪರ್ಯ ಹೇಳುವುದು ಯುಕ್ತವೆಂದು ಸಾಧಿಸಿ ಶ್ರೋತೃಗಳಿಗೆ ಅನು ಕೂಲವಾಗುವುದಕ್ಕಾಗಿ ಬುಡದಲ್ಲಿಯೇ ಭಗವದ್ಗೀತೆಯಲ್ಲಿ ಹೇಳತಕ್ಕ ಎಲ್ಲಾ ಅರ್ಥಗಳನ್ನು ಸಂಕ್ಷೇಪವಾಗಿ ತೋರಿಸುತ್ತಾರೆ—

**ತಾ ॥ ತತ್ರ ಸಾಕ್ಷಾದಿಂದ್ರಾವತಾರಮುತ್ತಮಾಧಿಕಾರಿಣಮಾತ್ಮನಃ ಪ್ರಿಯತಮಮರ್ಜುನಂ ಕ್ಷತ್ರಿಯಾಣಾಂ ವಿಶೇಷತೋಽಪಿ ಪರಮಧರ್ಮಂ ನಾರಾಯಣದ್ವಿಟ್ಟ್ರದನುಬಂಧಿ-**

( ) ಈ ಆವರಣ ಚಿಹ್ನೆಯೊಳಗಣ ಪಾಠವು ಹೃಷೀಕೇಶ ತೀರ್ಥೀಯ ಪಾಠಾನುಸಾರಿಯೆಂದು ತಿಳಿಯಬೇಕು

**ನಿಗ್ರಹಂ ಬಂಧುಸ್ನೇಹಾದಧರ್ಮತ್ವೇನಾಶಂಕ್ಯ ತತೋ ನಿವೃತ್ತಪ್ರಾಯಂ ಸ್ವವಿಹಿತ-ವೃತ್ತ್ಯಾ ಭಕ್ತ್ಯಾ ಭಗವದಾರಾಧನಮೇವ ಪರಮೋ(ಮು)ಧರ್ಮಸ್ತದ್ವಿರುದ್ಧಃ ಸರ್ವೋಽಪ್ಯಧರ್ಮಃ ಭಗವದಧೀನತ್ವಾತ್ಸರ್ವಸ್ಯೇತಿ ಬೋಧಯತಿ ಭಗವಾನ್ನಾರಾಯಣಃ** || ೩ ||

ಅ || (ಭಗವದ್ಭಕ್ತರಿಗೆಲ್ಲರಿಗೂ ದುಷ್ಟನಿಗ್ರಹವು ಪರಮಧರ್ಮವು) ಕ್ಷತ್ರಿಯರಿಗಂತೂ ಮುಖ್ಯವಾಗಿ ವಿಶೇಷ ಧರ್ಮರೂಪವಾದ ಶ್ರೀ ನಾರಾಯಣನ ದ್ವೇಷಿಗಳ ಮತ್ತು ಅವರ ಸಂಬಂಧಿಗರ ಸಂಹಾರವನ್ನು ಬಾಂಧವರೆಂಬ ಅಭಿಮಾನಮಾತ್ರದಿಂದಲೇ ಅಧರ್ಮವೆಂದಾಶಂಕಿಸಿ ಯುದ್ಧವನ್ನು ಬಿಟ್ಟವನಂತಿರುವವನೂ, ತನಗೆ ಅತ್ಯಂತ ಪ್ರಿಯನೂ, ಮುಖ್ಯವಾಗಿ ಪುರಂದರನ ಅವತಾರಭೂತನೂ (ಆವೇಶಮಾತ್ರವಲ್ಲ) (ಅಪರೋಕ್ಷಜ್ಞಾನಿಯಾಗಿರುವುದರಿಂದ) ಉತ್ತಮಾಧಿಕಾರಿಯೂ ಆದ ಅರ್ಜುನನಿಗೆ ತಂತಮಗೆ ವಿಹಿತವಾದ ಆಚರಣೆಯಿಂದ ಭಕ್ತಿಪೂರ್ವಕವಾಗಿ ಶ್ರೀ ಭಗವಂತನನ್ನು ಆರಾಧಿಸುವುದೇ ಮುಖ್ಯವಾದ ಧರ್ಮವು, ಅದಕ್ಕೆ ವಿರುದ್ಧವಾದುದೆಲ್ಲವೂ ಅಧರ್ಮವು (ಏಕೆಂದರೆ -) ಸರ್ವವೂ ಶ್ರೀ ಹರಿಯ ಅಧೀನವೇ ಆಗಿದೆ ಎಂದು ಸದ್ಗುಣಪೂರ್ಣನಾದ ಶ್ರೀ ನಾರಾಯಣನ ಅವತಾರಭೂತನಾದ ಶ್ರೀ ಕೃಷ್ಣನು ಗೀತೆಯಲ್ಲಿ ಉಪದೇಶಿಸಿರುತ್ತಾನೆ

ವಿ || (1) ಶ್ರೀ ಕೃಷ್ಣನು ಅರ್ಜುನನಿಗೆ ಏಕೆ ಬೋಧಿಸಿದನೆಂದರೆ—ಅತ್ಯಂತ ಪ್ರಿಯನಾದುದರಿಂದ ತನಗೆ ಪ್ರಯೋಜನವಿಲ್ಲವಾದರೂ ತಾಯಿಯು ಮಕ್ಕಳನ್ನು ಕಾಪಾಡುವಂತೆ ಅರ್ಜುನನಿಗೆ ಬೋಧಿಸಿದ್ದು ಯುಕ್ತವು (2) ಇಂತಹ ಆಶಂಕೆಯಿಂದ ಯುದ್ಧವನ್ನು ಬಿಟ್ಟವನಂತೆ ಆಗಿದ್ದರ ಯುದ್ಧವನ್ನು ಮಾಡಬೇಕೆಂದೇ ಬೋಧಿಸಬೇಕಿತ್ತು ಶ್ರೀ ಹರಿಯ ಮಹಿಮಾದಿಗಳನ್ನು ಏಕೆ ಹೇಳುವುದೆಂದರೆ– ಯುದ್ಧಾದಿಗಳು ಮಾತ್ರ ಪರಮ ಧರ್ಮವಲ್ಲ, ಭಗವದ್ಭಕ್ತ್ಯಾದಿಯೂ ಪರಮ ಧರ್ಮವೇ ಅದರಲ್ಲಿ ಅರ್ಜುನನಿಗೆ ಕೆಲವು ಧರ್ಮಗಳಲ್ಲಿ ಮಾತ್ರ ಅಧರ್ಮವೆಂದು ಸಂದೇಹವುಂಟಾಗಿದ್ದರೂ ಸಂದೇಹಪಟ್ಟ ಎಲ್ಲಾ ಜನರಿಗೂ ಉಪಕಾರವಾಗುವುದಕ್ಕಾಗಿ ಸಮಗ್ರ ಧರ್ಮವನ್ನುಪದೇಶಿಸಿರುತ್ತಾನೆ ಶ್ರೀ ಹರಿಯಲ್ಲಿ ಭಕ್ತಿ ಹುಟ್ಟುವುದಕ್ಕಾಗಿ ಆತನ ಮಹಿಮಾದಿಗಳನ್ನು ಹೇಳಿದ್ದು (3) ಹಾಗಾದರೆ ಅರ್ಜುನನು ತನಗೆ ವಿಹಿತವಾದ ಯುದ್ಧಾದಿಗಳನ್ನು ಬಿಟ್ಟರೂ ಭಕ್ತ್ಯಾದಿಗಳನ್ನು ಬಿಡದಿದ್ದ ಕಾರಣ ಪರಮ ಧರ್ಮವನ್ನು ಬಿಡಲಿಲ್ಲ ಆದಕಾರಣ ಏತಕ್ಕೆ ಬೋಧಿಸುವುದೆಂದರೆ--ಪ್ರತ್ಯೇಕ ಭಕ್ತ್ಯಾದಿಗಳು ಮಾತ್ರ ಪರಮಧರ್ಮವಲ್ಲ, ತನಗೆ ವಿಹಿತಗಳಾದ ಯುದ್ಧಾದಿಗಳೂ ಸೇರಿಯೇ ಅವು ಪರಮ ಧರ್ಮಗಳು ಆದುಕಾರಣ ಯುದ್ಧಾದಿಗಳನ್ನು ಬಿಟ್ಟರೆ ಪರಮ ಧರ್ಮಗಳನ್ನು ಬಿಟ್ಟಂತೆ ಆಗುವುದರಿಂದ ಅರ್ಜುನನಿಗೆ ಬೋಧಿಸಿದುದು ಯುಕ್ತವು (4) ಹಾಗಾದರೆ **ಮಹಾಭೂತಾನ್ಯಹಂಕಾರಃ** ಇತ್ಯಾದಿಗಳಿಂದ ಪ್ರಕೃತ್ಯಾದಿಗಳನ್ನು ಏಕೆ ಹೇಳುವುದೆಂದರೆ- ಸರ್ವವೂ ಭಗವಂತನ ಅಧೀನವೆಂದು ಹೇಳುವುದಕ್ಕಾಗಿ ಪ್ರಕೃತ್ಯಾದಿಗಳನ್ನು ಹೇಳಿದ್ದು || ೩ ||

**ಶಿ**—ಅರ್ಜುನನು ಅಪರೋಕ್ಷಜ್ಞಾನಿಯು, ಉತ್ತಮಾಧಿಕಾರಿಯು ದೇವೇಂದ್ರನ ಅವತಾರಭೂತನು ಇತ್ಯಾದಿಯೂ, ತಮಗೆ ವಿಹಿತವಾದ ಆಚರಣೆಯಿಂದ ಭಕ್ತಿಪೂರ್ವಕವಾಗಿ ಭಗವಂತನ ಆರಾಧನವು ಪರಮ ಧರ್ಮವು ಇತ್ಯಾದಿಗಳೂ ಗೀತೆಗೆ ತಾತ್ಪರ್ಯವಿಷಯವಾದ ಅರ್ಥವೆಂದು ಯಾವ ಪ್ರಮಾಣದಿಂದ ತಿಳಿಯುತ್ತದೆಂದರೆ---

**ತಾ || (೧) ಸರ್ವಂ ಚೈತದತ್ರೈವಾವಗಮ್ಯತೇ || (೨) ಅಥ ಚೇತ್ತ್ವಮಿಮಂ ಧರ್ಮ್ಯಮಿಮಂ ಸಂಗ್ರಾಮಂ ನ ಕರಿಷ್ಯಸಿ । ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ** (ಅ.೨–ಶ್ಲೋ.೩೩) **ಇತ್ಯಾದಿನಾ ಯುದ್ಧಸ್ಯ ಸ್ವಧರ್ಮತ್ವಂ** || ೪ ||

**ಅ** ॥ (೧) ಅರ್ಜುನನು ದೇವತೆಯು ಇದುಮೊದಲಾದ ಎಲ್ಲಾ ವಿಷಯಗಳೂ ಗೀತೆಯಲ್ಲಿಯೇ ಸ್ಪಷ್ಟವಾಗಿ ತಿಳಿಯುತ್ತದೆ (ಆ ವಿಷಯದಲ್ಲಿ ಬೇರೆ ಪ್ರಮಾಣಗಳನ್ನು ಹುಡುಕಬೇಕಾಗಿಲ್ಲ) "ತನಗೆ ವಿಹಿತವಾದ ಸದಾಚಾರಸಮೇತ ಭಕ್ತಿಪೂರ್ವಕವಾಗಿ ಭಗವಂತನನ್ನು ಆರಾಧಿಸುವುದು ಪರಮಧರ್ಮವು" ಇತ್ಯಾದಿಗಳೂ ಗೀತೆಯಲ್ಲಿ ಸ್ಪಷ್ಟವಾಗಿ ತಿಳಿಯಲ್ಪಡುತ್ತದೆ (ಆ ಅರ್ಥವನ್ನು ಬಲಾತ್ಕಾರದಿಂದ ಹೇಳುವುದಲ್ಲ.) (ನಾರಾಯಣದ್ವೇಷಿಗಳ ನಿಗ್ರಹವು ಅಧರ್ಮವೆಂದಾಶಂಕಿಸಿಕೊಂಡು ಹಿಂತೆರಳಿದಂತೆ ತೋರಿಸಿದ ಅರ್ಜುನನಿಗೆ ಶ್ರೀ ಕೃಷ್ಣನು ಬೋಧಿಸಿದನೆಂಬುವುದು ಗೀತೆಯಲ್ಲಿ ಸ್ಪಷ್ಟವಾಗಿ ತಿಳಿಯುತ್ತದೆ ಹೇಗೆಂದರೆ **ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ** (೨-೭) ಎಂದು ಅರ್ಜುನನು ಪ್ರಾರ್ಥಿಸಿದ ಕಾರಣ ಯುದ್ಧದಿಂದ ಹಿಂತೆರಳಿದಂತೆ ತೋರಿಸಿರುತ್ತಾನೆಂದು ತಿಳಿಯುತ್ತದೆ) (ಸಂಪೂರ್ಣ ಯುದ್ಧವನ್ನು ಬಿಟ್ಟಿದ್ದರೆ ಶ್ರೇಯಸ್ಕರವಾದುದನ್ನು ಹೇಳು ಎಂದು ಹೇಳುತ್ತಿರಲಿಲ್ಲ) (೨) (ನಾರಾಯಣದ್ವೇಷಿಗಳ ನಿಗ್ರಹವು ಕ್ಷತ್ರಿಯರಿಗೆ ಪರಮಧರ್ಮವೆಂದು ಗೀತೆಯಲ್ಲಿ ಯಾವ ಶ್ಲೋಕದಿಂದ ತಿಳಿದುಬರುತ್ತದೆಂದರೆ) ಪುಣ್ಯವನ್ನು ಹುಟ್ಟಿಸುವ ಈ ಯುದ್ಧವನ್ನು ನೀನು ಮಾಡದಿದ್ದರೆ ಅದರಿಂದ ನೀನು ಧರ್ಮವನ್ನೂ ಯಶಸ್ಸನ್ನೂ ಹೊಂದದೆ ಪಾಪವನ್ನೇ ಹೊಂದುವಿ, ಇತ್ಯಾದಿಪ್ರಮಾಣಗಳಿಂದ ಯುದ್ಧವು ಅರ್ಜುನನಿಗೆ ಧರ್ಮವೆಂದು ತಿಳಿಯುತ್ತದೆ ॥ ೮ ॥

ಪೀ— ತಮಗೆ ವಿಹಿತವಾದ ಆಚರಣೆಯಿಂದ ಭಕ್ತಿಪೂರ್ವಕ ಶ್ರೀ ಹರಿಯನ್ನು ಆರಾಧಿಸುವದೇ ಪರಮಧರ್ಮವು ಅದಕ್ಕೆ ವಿರುದ್ಧವಾದುದೆಲ್ಲವೂ ಅಧರ್ಮವೆಂದು ಯಾವುದರಿಂದ ತಿಳಿದುಬರುತ್ತದೆಂದರೆ—

**ತಾ ॥ (೧) ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಂ । ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ** (೧೮-೪೬) ॥ **(೨) ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ । ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ** (೩-೩೫) ॥ **(೩) ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ । ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಂ** (೧೮-೬೪) ॥ **(೪) ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು । ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ** (೧೮-೬೫) ॥ **(೫) ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ । ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ** (೧೮-೬೬) **ಇತ್ಯಾದಿನಾ ಸ್ವಧರ್ಮೇಣೈವ ಭಗವದಾರಾಧನಸ್ಯೈವ ಕರ್ತವ್ಯತ್ವಂ ತದನ್ಯಸ್ಯ ತ್ಯಾಜ್ಯತ್ವಂ ಚ ॥ ೫ ॥**

**ಅ** ॥ (೧) ಎಲ್ಲಾ ಪ್ರಾಣಿಗಳ ವ್ಯಾಪಾರವು ಯಾವ ಶ್ರೀ ಹರಿಯಿಂದ ಆಗುತ್ತದೋ, ಸಂಪೂರ್ಣ ಜಗತ್ತು ಯಾರಿಂದ ವ್ಯಾಪ್ತವಾಗಿದೆಯೋ, ಆ ಶ್ರೀ ಹರಿಯನ್ನು ವರ್ಣಾಶ್ರಮಗಳಿಗೆ ಉಚಿತವಾದ ಸದಾಚಾರದಿಂದ ಮನುಷ್ಯನು ಪೂಜಿಸಿ ಮೋಕ್ಷವನ್ನು ಹೊಂದುತ್ತಾನೆ (೨) ತನ್ನ ವರ್ಣಾಶ್ರಮಗಳಿಗೆ ಉಚಿತವಾದ ಧರ್ಮವು ಸಾಂಗವಾಗದಿದ್ದರೂ ಸರ್ವಾಂಗಗಳಿಂದೊಡಗೂಡಿ ಮಾಡಿದ ಬೇರೆ ವರ್ಣ-ಆಶ್ರಮಗಳಿಗೆ ಉಚಿತವಾದ ಧರ್ಮಕ್ಕಿಂತಲೂ ಉತ್ತಮವು ತನಗೆ ಧರ್ಮವಾದ ಯುದ್ಧಾದಿಗಳಲ್ಲಿ ಮರಣ ಹೊಂದಿದರೂ ಶ್ರೇಯಸ್ಸು ಬೇರೆ ವರ್ಣ ಆಶ್ರಮಗಳ ಧರ್ಮವು (ನಿಷಿದ್ಧವಾದ ಕಾರಣ) ಅದರಿಂದ ಅನರ್ಥವುಂಟಾಗುತ್ತದೆ (೩) ಅತಿರಹಸ್ಯವಾದ ನನ್ನ ಉತ್ತಮವಾದ ಮಾತನ್ನು ಮರಳಿ ಕೇಳು ನೀನು ನನಗೆ ಇಷ್ಟನಾಗಿರುತ್ತಿ. ಆದಕಾರಣ ನಿಶ್ಚಯವಾಗಿಯೂ ನಿನಗೆ ಹಿತವಾದುದನ್ನೇ ಹೇಳುವೆನು (೪) ನನ್ನಲ್ಲಿ ಮನ

ಸ್ಕನ್ನಿಡು. ನನ್ನ ಭಕ್ತನಾಗು ನನ್ನ ಉದ್ದೇಶ ಯಜ್ಞಮಾಡು ನನ್ನನ್ನು ನಮಸ್ಕರಿಸು. ನನ್ನನ್ನೇ ಹೊಂದುವಿ ನನಗೆ ಪ್ರಿಯನಾಗಿರುತ್ತಿ ನಿನಗಾಗಿ ಸತ್ಯವನ್ನೇ ಹೇಳುತ್ತೇನೆ (೫) ಎಲ್ಲಾ ಧರ್ಮಗಳನ್ನು ಬಿಟ್ಟು ನನ್ನನ್ನೊಬ್ಬನನ್ನು ಶರಣುಹೊಂದು ನಾನು ನಿನ್ನನ್ನು ಸಮಸ್ತ ಪಾಪಗಳಿಂದ ಬಿಡುಗಡೆ ಮಾಡುವೆನು ದುಃಖಿಸಬೇಡ ಇತ್ಯಾದಿಗಳಿಂದ ತಮ್ಮ ಧರ್ಮದಿಂದ ಭಗವದಾರಾಧನೆಯನ್ನೇ ಮಾಡಬೇಕೆಂದೂ ಬೇರೆಯೆಲ್ಲವನ್ನೂ ಬಿಡಬೇಕೆಂದೂ ಹೇಳಿದೆ

ವಿ || (1) **ಯತಃ ಪ್ರವೃತ್ತಿಃ** (2) **ಸ್ವಕರ್ಮಣಾ** ಇವುಗಳಿಂದ ತಮಗೆ ವಿಹಿತವಾದ ಆಚರಣೆಯಿಂದ ಭಗವಂತನ ಆರಾಧನವನ್ನೇ ಮುಖ್ಯವಾಗಿ ಮಾಡಬೇಕೆಂದೂ, (3) **ಶ್ರೇಯಾನ್ ಸ್ವಧರ್ಮಃ** ಎಂಬುವುದರಿಂದ ತಮಗೆ ವಿಹಿತವಾದ ಶ್ರೇಯಸ್ಸಾಧನವನ್ನೇ ಮಾಡಬೇಕೆಂದೂ ತಮಗೆ ವಿಹಿತವಾಗದೆ ಶ್ರೇಯಸ್ಸಾಧನವಾಗದಿರುವುದನ್ನು ಬಿಡಬೇಕೆಂದೂ, (4) **ಸರ್ವಗುಹ್ಯತಮಂ** ಎನ್ನುವುದರಿಂದ ಅತಿ ರಹಸ್ಯವಾಗಿರುವುದರಿಂದಲೂ ಹಿತಸಾಧನವಾಗಿರುವುದರಿಂದಲೂ ಶ್ರೀಹರಿಯ ಸಾಮೀಪ್ಯವನ್ನು ಹೊಂದಲಿಕ್ಕೆ ಸಾಧನವಾಗಿರುವುದರಿಂದಲೂ ಶಾಸ್ತ್ರದಲ್ಲಿ ಹೇಳಿದುದನ್ನೇ ಮಾಡಬೇಕಾದುದರಿಂದ ಭಕ್ತಿಪೂರ್ವಕವಾಗಿ ಭಗವದಾರಾಧನೆಯನ್ನು ಮಾಡಬೇಕೆಂದೂ (5) **ಸರ್ವಧರ್ಮಾನ್ ಪರಿತ್ಯಜ್ಯ** ಎನ್ನುವುದರಿಂದ ತಮಗೆ ವಿಹಿತವಾದ ಆಚರಣೆಯಿಂದ ಭಕ್ತಿಪೂರ್ವಕವಾಗಿ ಶ್ರೀಹರಿಯ ಆರಾಧನವನ್ನೇ ಮಾಡಬೇಕೆಂದೂ, ಬೇರೆ ದೇವತೆಗಳನ್ನು ದ್ವೇಷಿಸಿ ಧರ್ಮಗಳನ್ನು ಮಾಡಬಾರದೆಂದೂ ಹೇಳಿದೆ || ೫ ||

ಪೀ—ಶ್ರವಣ ಮನನಾದಿರೂಪವಾದ ತಮಗೆ ವಿಹಿತವಾದ ಆಚರಣೆಯಿಂದಲೇ ಪರೋಕ್ಷಜ್ಞಾನವೂ ಅಪರೋಕ್ಷಜ್ಞಾನವೂ ಹುಟ್ಟುವುದರಿಂದ ಅಂತಹ ಜ್ಞಾನಸಾಧನವೇ ಪರಮಧರ್ಮವಾಗಿರುವುದರಿಂದ ಭಕ್ತಿಯು ಪರಮಧರ್ಮವೆಂದು ಗೀತೆಗೆ ಅಭಿಮತವಲ್ಲ ಎಂದರೆ —

ತಾ || (೧) **ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ । ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ** (೧೧-೫೩) || (೨) **ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ । ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ** (೧೧-೫೪) । **ಇತ್ಯಾದಿನಾ ವಿಷ್ಣುಭಕ್ತೇರೇವ ಸರ್ವಸಾಧನೋತ್ತಮತ್ವಂ ಪರೋಕ್ಷಾಪರೋಕ್ಷಜ್ಞಾನಯೋರ್ಜ್ಞಾನಿನೋಽಪಿ ಮೋಕ್ಷಸ್ಯ ತದಧೀನತ್ವಂ ಚ ||೬||**

ಅ || (೧) ಅರ್ಜುನನೇ ನನ್ನನ್ನು ನೀನು ಹೇಗೆ ನೋಡಿದ್ದೀಯೋ, ಅಂತಹ ನಾನು ವೇದಗಳ ಅಧ್ಯಯನದಿಂದಲೂ ತಪಸ್ಸಿನಿಂದಲೂ, ದಾನದಿಂದಲೂ, ಯಾಗದಿಂದಲೂ ನೋಡಲು ಶಕ್ಯನಲ್ಲ (೨) ಶತ್ರುಗಳನ್ನು ಸಂತಾಪಗೊಳಿಸುವ ಅರ್ಜುನನೇ, ಇಂತಹ ನಾನು ನಿನ್ನಿಂದ ಅಸಾಧಾರಣವಾದ ಭಕ್ತಿಯಿಂದಲೇ ಯಥಾರ್ಥವಾಗಿ ತಿಳಿಯಲಿಕ್ಕೂ ನೋಡಲಿಕ್ಕೂ ಸಾಯುಜ್ಯಮೋಕ್ಷ ಹೊಂದಲಿಕ್ಕೂ ಶಕ್ಯನು, ಇತ್ಯಾದಿಗಳಿಂದ ವಿಷ್ಣುವಿನ ಭಕ್ತಿಯೇ ಸರ್ವಸಾಧನಗಳಲ್ಲಿ ಉತ್ತಮವೆಂದೂ, ಪರೋಕ್ಷಜ್ಞಾನ ಅಪರೋಕ್ಷಜ್ಞಾನಗಳೂ ಜ್ಞಾನಿಯಾದವನ ಮೋಕ್ಷವೂ ಕೂಡ ಭಕ್ತಿಯ ಅಧೀನವೆಂದೇ ಹೇಳಿದೆ

ವಿ || ಶ್ರವಣ ಮನನಾದಿಗಳು ಜ್ಞಾನಾದಿಗಳಿಗೆ ಸಾಧನಗಳಾದರೂ ಅವುಗಳಿಗಿಂತ ಭಕ್ತಿಯೇ ಉತ್ತಮವೆಂದು ಇಟ್ಟುಕೊಳ್ಳಬೇಕು || ೬ ||

ಪೀ—**ಸರ್ವಧರ್ಮಾನ್** ಎಂಬುದರಿಂದ ಶರಣುಹೊಂದಿ ಭಕ್ತಿಯಿರುವವನಿಗೆ ಕರ್ತವ್ಯಕರ್ಮವಿಲ್ಲವೆಂದೂ, ತ್ಯಾಜ್ಯವೇ ಇಲ್ಲವೆಂದೂ ಹೇಳಿದೆ ಎಂದರೆ—

**ತಾ || ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ । ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ** (೧೧-೫೫) **ಇತ್ಯಾದಿನಾ ಭಕ್ತಸ್ಯಾಪಿ ತತ್ಕರ್ಮವಿಕರ್ಮತ್ಯಾಗಶ್ಚ ॥ ೭ ॥**

**ಅ ||** ನನ್ನಲ್ಲಿಯೇ ಆಸಕ್ತನಾಗಿ ಯಾವ ನನ್ನ ಭಕ್ತನು ನನ್ನ ಪ್ರೀತಿಗಾಗಿ ಕರ್ಮ ಮಾಡುತ್ತಾ ಶಾಸ್ತ್ರಗಳಲ್ಲಿ ವಿಹಿತವಾಗದಿರುವ, ನನಗೆ ಪ್ರೀತಿಕರವಲ್ಲದ, ಕರ್ಮಗಳನ್ನು ಬಿಟ್ಟು ಎಲ್ಲಾ ಪ್ರಾಣಿಗಳಲ್ಲಿ ವೈರವಿಲ್ಲದವನೋ, ಆತನು ನನ್ನನ್ನು ಹೊಂದುತ್ತಾನೆ, ಇತ್ಯಾದಿಗಳಿಂದ ಭಕ್ತನು ತನಗೆ ವಿಹಿತವಾದ ಆಚರಣೆಯಿಂದ ಶ್ರೀಹರಿಗೆ ಪ್ರೀತಿಕರವಾದ ಕರ್ಮವನ್ನು ಮಾಡಬೇಕು ಶಾಸ್ತ್ರದಲ್ಲಿ ಹೇಳಲ್ಪಡದಿದ್ದು ಶ್ರೀಹರಿಗೆ ಪ್ರೀತಿಕರವಲ್ಲದ ಕರ್ಮವನ್ನು ಬಿಡಬೇಕೆಂದು ಹೇಳಿದೆ

**ವಿ ||** (1) ಭಕ್ತನಿಗೂ ಕರ್ತವ್ಯಕರ್ಮವೂ ತ್ಯಾಜ್ಯವೂ ಇಲ್ಲವೆಂದು ಗೀತೆಗೆ ಅಭಿಪ್ರೇತಾರ್ಥವಲ್ಲ, ಗೀತೆಯಲ್ಲಿಯೇ ಭಕ್ತನು ಭಗವದಾರಾಧನವನ್ನು ಮಾಡಬೇಕೆಂದೂ ನಿಷಿದ್ಧವಾದುದನ್ನು ಬಿಡಬೇಕೆಂದೂ ಸ್ಪಷ್ಟವಾಗಿ ಹೇಳಿದೆ (2) ಭಗವಂತನ ಸಮೀಪವನ್ನು ಹೊಂದಲಿಕ್ಕೆ ಬೇಕಾದ ಕರ್ಮವನ್ನೇ ಮಾಡಬೇಕು ನಿಷಿದ್ಧವಾದುದನ್ನು ಬಿಡಬೇಕು ॥ ೭ ॥

**ಪೀ**—ಅರ್ಜುನನು ಜ್ಞಾನಿಯಾದಕಾರಣ ಜ್ಞಾನಿಗಳಿಗೆ ಕರ್ಮದ ಆವಶ್ಯಕತೆಯು ಇಲ್ಲವೆಂದೇ ಗೀತೆಗೆ ಸಮ್ಮತವಾದ ಕಾರಣ ಅರ್ಜುನನಿಗೆ ಭಗವದಾರಾಧನರೂಪ ಕರ್ಮ ಹೇಳಿದ್ದು ಸರಿಯಲ್ಲವೆಂದರೆ—

**ತಾ || ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರೈಃ(ರಂ) ಕೃತಂ** (೪-೧೫) **। ಇತ್ಯಾದಿನಾ ಜ್ಞಾನಿನೋಽಪಿ ಭಗವತ್ಕರ್ಮ ॥ ೮ ॥**

**ಅ ||** (ಜ್ಞಾನಿಯಾದವನಿಗೆ ತನಗೆ ಶಾಸ್ತ್ರವಿಹಿತವಾದ ಆಚಾರಾದಿಗಳೂ ಇಲ್ಲವೆಂದು ಗೀತೆಗೆ ಸಮ್ಮತವಲ್ಲ **ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ** ಹಿಂದಿನ ಮುಮುಕ್ಷುಗಳೂ ಕರ್ಮವನ್ನು ಮಾಡಿರುವರು ಆದುದರಿಂದ ಅರ್ಜುನನೇ ನೀನು ಪೂರ್ವಿಕರೂ ಅವರಿಗಿಂತಲೂ ಪೂರ್ವಿಕರೂ ಮಾಡುತ್ತಿದ್ದ ಕರ್ಮವನ್ನೇ ಮಾಡು ಇತ್ಯಾದಿಗಳಿಂದ (ಶಾಸ್ತ್ರವಿಹಿತಗಳಾದ ಸದಾಚಾರಗಳನ್ನು ಮಾಡಬೇಕೆಂದು ಹೇಳಿದ ಕಾರಣ) ಶ್ರೀಹರಿಯ ಪ್ರೀತಿಗಾಗಿ ಕರ್ಮವನ್ನು (ಮಾಡಲೇಬೇಕು ) ॥ ೮ ॥

**ಪೀ**—ಅರ್ಜುನನು ಶ್ರೀಕೃಷ್ಣನಿಗೆ ಅತಿಪ್ರಿಯನು ಅಪರೋಕ್ಷಜ್ಞಾನಿಯು, ಉತ್ತಮಾಧಿಕಾರಿಯು, ದೇವತೆಯು ಎಂಬುದು ಯಾವ ಪ್ರಮಾಣದಿಂದ ತಿಳಿಯುತ್ತದೆಂದರೆ—

**ತಾ || (೧) ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ । ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ** (೧೧-೫೨) **॥ (೨) ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಂ** (೧೮-೬೪) **॥ (೩) ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ । ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವ** (೧೬-೫) **॥ (೪) ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ। ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಂ** (೯-೧೩) **(೫) (ದರ್ಶಯಾತ್ಮಾನಮವ್ಯಯಂ) ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಂ**(೧೧-೯) **ಇತ್ಯಾದಿನಾಽರ್ಜುನಸ್ಯೋತ್ತಮಾಧಿಕಾರಿತ್ವಮಪರೋಕ್ಷಜ್ಞಾನಿತ್ವಂ ಚ ॥ ೯ ॥**

ಅ || ೧ ಯಾವ ನನ್ನ ರೂಪವನ್ನು ನೋಡಿರುತ್ತೀಯೋ ಇದು ಮನುಷ್ಯಾದಿಗಳಿಗೆ ನೋಡಲು ಅಸಾಧ್ಯವು ದೇವತೆಗಳೂ ಕೂಡ ಈ ರೂಪವನ್ನು ನಿತ್ಯದಲ್ಲಿಯೂ ನೋಡಲಿಚ್ಛಿಸುತ್ತಾರೆ. (೨) ನಿಶ್ಚಯ ವಾಗಿಯೂ ನೀನು ನನಗೆ ಪ್ರಿಯನಾಗಿರುತ್ತಿ ಆದಕಾರಣ ನಿನಗೆ ಹಿತವನ್ನೇ ಹೇಳುವೆನು (೩) ದೇವ ತೆಗಳ ಸಂಪತ್ತು ಹೆಚ್ಚು ಆನಂದವುಳ್ಳ ಮೋಕ್ಷಕ್ಕೂ, ಅಸುರಸಂಪತ್ತು ಅಂಧಂತಮಸ್ಸಿಗೂ ಕಾರಣವೆಂದು ಸಮ್ಮತವು ನೀನು ಜನ್ಮವೆತ್ತುವಾಗಲೇ ದೈವೀಸಂಪತ್ತಿನಿಂದ ಕೂಡಿಯೇ ಬಂದಿರುವಿ ದುಃಖಿಸಬೇಡ. (೪) ದೇವತೆಗಳ ಸ್ವಭಾವವನ್ನು ಆಶ್ರಯಿಸಿರುವ ಮಹಾಜ್ಞಾನಿಗಳು ನನ್ನನ್ನು ಬ್ರಹ್ಮಾದಿಗಳಿಗೆ ಕಾರಣನ ನ್ನಾಗಿಯೂ ನಾಶರಹಿತನನ್ನಾಗಿಯೂ ತಿಳಿದು ಬೇರೆ ಕಡೆ ಮನಸ್ಸನ್ನಿಡದೆ ನನ್ನನ್ನೇ ಭಜಿಸುತ್ತಾರೆ (೫) ಅರ್ಜುನನಿಗೆ ಸರ್ವನಿಯಾಮಕವಾದ ಶ್ರೇಷ್ಠ ರೂಪವನ್ನು ತೋರಿಸಿದನು. ಇತ್ಯಾದಿಗಳಿಂದ ಅರ್ಜುನನು ಉತ್ತಮಾಧಿಕಾರಿಯೆಂದೂ ಅಪರೋಕ್ಷಜ್ಞಾನಿಯೆಂದೂ ಸ್ಪಷ್ಟವಾಗಿ ತಿಳಿಯುತ್ತದೆ

ವಿ || (1) **ಸುದುರ್ದರ್ಶಂ** ಎನ್ನುವುದರಿಂದ ಅರ್ಜುನನು ಅಪರೋಕ್ಷಜ್ಞಾನಿಯೆಂದೂ, ದೇವತೆ ಗಳೊಡನೆ ಆತನನ್ನು ಹೇಳಿದ್ರಿಂದ ದೇವತೆಯೆಂದೂ (2) **ಇಷ್ಟೋಽಸಿ** ಎನ್ನುವುದರಿಂದ ಶ್ರೀ ಕೃಷ್ಣನಿಗೆ ಪ್ರಿಯತಮನೆಂದೂ, **ದೈವೀಸಂಪತ್** ಎಂಬುವುದರಿಂದ ದೇವತೆಯೆಂದೂ,(3) **ಮಹಾತ್ಮಾನಃ** ಎಂಬುವುದ ರಿಂದ ದೇವತ್ವವೂ ಅಪರೋಕ್ಷಜ್ಞಾನಿತ್ವವೂ, (4) **ದರ್ಶಯಾಮಾಸ** ಎಂಬುವುದರಿಂದ ಅರ್ಜುನನು ಅಪ ರೋಕ್ಷಜ್ಞಾನಿಯೆಂದೂ, ಶ್ರೀ ಹರಿಗೆ ಅತಿಪ್ರಿಯನೆಂದೂ ದೇವತೆಯೆಂದೂ, ಉತ್ತಮಾಧಿಕಾರಿಯೆಂದೂ ಸ್ಪಷ್ಟವಾಗಿ ತಿಳಿದುಬರುತ್ತದೆ || ೯ ||

ಪೀ —ಎಲ್ಲಾ ವಸ್ತುಗಳೂ ಶ್ರೀ ಹರಿಯ ಅಧೀನಗಳೆಂಬುವುದು ಯಾವ ಪ್ರಮಾಣದಿಂದ ತಿಳಿದುಬರು ತ್ತದೆ? ವಸ್ತುಗಳೆಲ್ಲವೂ ಆತನ ಅಧೀನಗಳಾಗಿದ್ದರೆ ಶ್ರೀ ಹರಿಯು ಸರ್ವವಸ್ತುಗಳಿಂದ ಭಿನ್ನನು, ಸರ್ವೋ ತ್ತಮನು, ಸರ್ವಗುಣಪರಿಪೂರ್ಣನು ನಿರ್ದೋಷನ , ಪರಾಧೀನನಲ್ಲದವನು, ಮೋಕ್ಷವನ್ನು ಕೊಡುವ ವನು ಸರ್ವಶಾಸ್ತ್ರಪ್ರತಿಪಾದ್ಯನೆಂದೂ, ಸರ್ವವಸ್ತುಗಳೂ ಸತ್ಯಗಳೆಂದೂ ಅನ್ನಬಹುದು ಸರ್ವವೂ ಆತನ ಅಧೀನವೆಂದು ಹೇಳಬೇಕಾದರೆ ಸರ್ವವಸ್ತುಗಳ ಅಪೇಕ್ಷೆಯು ಬೇಕು ಆದಕಾರಣ ಅವುಗಳ ವಿಷ ಯದಲ್ಲಿ ಪ್ರಮಾಣಗಳು ಯಾವವು? ಎಂದರೆ—

**ಶಾ || (೧) ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ । ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ** (೧೦ ೨) || **(೨) ಯೋ ಮಾಮಜಮ- ನಾದಿಂ ಚ ವೇತ್ತಿ ಲೋಕಮಹೇಶ್ವರಂ । ಅಸಮ್ಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ** (೧೦-೩) || **(೩) ಬುದ್ಧಿರ್ಜ್ಞಾನಮಸಮ್ಮೋಹಃ ಕ್ಷಮಾ ಸತ್ಯಂ ದಮಃ ಶಮಃ** (೧೦-೪) || **(೪) ಮಹರ್ಷಯಃ ಸಪ್ತ ಪೂರ್ವೇ** (೧೦ ೬) || **(೫) ಏತಾಂ ವಿ- ಭೂತಿಂ ಯೋಗಂ ಚ** (೧೦-೭) || **(೬) ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ । ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ** (೧೦-೮) || **(೭) ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ । ನಾಶಯಾಮಿ** (೧೦- ೧೧) **। ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್** (೧೨ ೭) || **(೮) ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಂ । ಸುಹೃದಂ ಸರ್ವಭೂತಾ ನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ** (೫-೨೯) || **(೯) ಜ್ಞಾನಂ ತೇಽಹಂ ಸವಿಜ್ಞಾನ-**

**ಮಿದಂ ವಕ್ಷ್ಯಾಮ್ಯಶೇಷತಃ । ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ** (೭-೨) ॥ ೧೦ ॥

**ಅ** ॥ (೧) ದೇವತೆಗಳ ಸಮೂಹಗಳೂ ಮಹರ್ಷಿಗಳೂ ನನ್ನ ಮಹಿಮೆಯನ್ನು ಸಂಪೂರ್ಣ ತಿಳಿಯುವುದಿಲ್ಲ ನಾನು ದೇವತೆಗಳಿಗೂ ಋಷಿಗಳಿಗೂ ಎಲ್ಲರಿಗೂ ಕಾರಣನು (೨) ಯಾವನು ನನ್ನನ್ನು ಹುಟ್ಟದಿರುವವನನ್ನಾಗಿಯೂ, (ಅನಾದಿಂ=ಅನಸ್ಯ ಆದಿಂ=) ಮುಖ್ಯಪ್ರಾಣನಿಗೂ ಕಾರಣನನ್ನಾಗಿಯೂ, ಲೋಕಗಳಿಗೆ ಮುಖ್ಯಕಾರಣನನ್ನಾಗಿಯೂ ತಿಳಿಯುತ್ತಾನೋ, ಆತನು ಮನುಷ್ಯರಲ್ಲಿ ಭ್ರಮೆಯಿಲ್ಲದವನಾಗಿ ಎಲ್ಲಾ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ (೩) ಇದು ಮಾಡಲು ಯೋಗ್ಯವು, ಇದು ಮಾಡಲಯೋಗ್ಯವೆಂಬ ನಿಶ್ಚಯವು. ಜ್ಞಾನವು, ಭ್ರಮೆಯಿಲ್ಲದಿರುವುದು, ಅಪಕಾರ ಮಾಡಿದವನಿಗೆ ತಿರುಗಿ ಅಪಕಾರಮಾಡದಿರುವುದು, ಯಥಾರ್ಥನುಡಿಯು ಇಂದ್ರಿಯಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಳ್ಳುವುದು, ಶ್ರೀ ಹರಿಯಲ್ಲಿ ಆಸಕ್ತವಾದ ಬುದ್ಧಿಯು, (೪) ಪೂರ್ವಮನ್ವಂತರದಲ್ಲಿರತಕ್ಕ ಮರೀಚಿ ಮೊದಲಾದ ಏಳು ಋಷಿಗಳು (೫) ಈ ಪ್ರಭಾವವನ್ನು ಸಾಮರ್ಥ್ಯವನ್ನು (೬) ನಾನು ಎಲ್ಲಾ ವಸ್ತುಗಳನ್ನು ಸೃಷ್ಟಿಸಿದವನು, ನನ್ನಿಂದಲೇ ಎಲ್ಲರೂ ಇಷ್ಟಪ್ರಾಪ್ತಿ ಅನಿಷ್ಟಪರಿಹಾರಾದಿಗಳಿಗೆ ಅನುಕೂಲವಾದ ಕರ್ಮವುಳ್ಳವರಾಗುತ್ತಾರೆ ಹೀಗೆ ತಿಳಿದುಕೊಂಡು ಜ್ಞಾನಿಗಳು ಭಕ್ತಿಯುಕ್ತರಾಗಿ ನನ್ನನ್ನು ಪತ್ರ ಪುಷ್ಪಾದಿಗಳಿಂದ ಪೂಜಿಸುತ್ತಾರೆ, ಮತ್ತು ಧ್ಯಾನಿಸುತ್ತಾರೆ (೭) ಅವರಿಗೆ ಅನುಗ್ರಹಿಸುವುದಕ್ಕಾಗಿಯೇ ನಾನು ಅಜ್ಞಾನದಿಂದುಂಟಾಗತಕ್ಕ ಸುಖದುಃಖಾದಿರೂಪವಾದ ಬಂಧವನ್ನು ನಾಶಗೊಳಿಸುತ್ತೇನೆ (೮) ನನ್ನಲ್ಲಿಯೇ ಮನುಸ್ಸು ಇಟ್ಟು ಧ್ಯಾನಿಸುವವರನ್ನು 'ನಾನು ಮೃತ್ಯುರೂಪ ಸಂಸಾರಸಾಗರದಿಂದ ಶೀಘ್ರದಲ್ಲಿಉದ್ಧರಿಸುತ್ತೇನೆ (೯) ಜ್ಯೋತಿಷ್ಟೋಮಾದಿಯಾಗಕೃಚ್ಛ್ರಚಾಂದ್ರಾಯಣಾದಿತಪಸ್ಸು ಇವುಗಳ ಫಲವನ್ನು ಭೋಗಿಸುವವನೂ, ಸರ್ವಲೋಕಗಳಿಗೆ ಮುಖ್ಯಸ್ವಾಮಿಯೂ, ಎಲ್ಲಾ ಪ್ರಾಣಿಗಳಿಗೆ ಉಪಕಾರಿಯೂ ಆದ ನನ್ನನ್ನು ಧ್ಯಾನಿಸಿ ಮೋಕ್ಷವನ್ನು ಹೊಂದುತ್ತಾನೆ (೧೦) ಅರ್ಜುನನೇ ನಿನಗೆ(ವಿಜ್ಞಾನಂ=) ವಿಶೇಷವಾಗಿ ತಿಳಿಯಲಿಕ್ಕೆ ಯೋಗ್ಯವಾದ ನನ್ನ ಮಾಹಾತ್ಮ್ಯೆಯನ್ನೂ, (ಜ್ಞಾನಂ=) ಸಾಮಾನ್ಯತಃ ತಿಳಿಯಲು ಯೋಗ್ಯವಾದ ಮಾಹಾತ್ಮ್ಯವನ್ನು (ಏವಂಚ ನಿನಗೆ ತಿಳಿಯಲು ಯೋಗ್ಯವಾದುದೆಲ್ಲವನ್ನು) ಹೇಳುವೆನು ಯಾವ ಮಹಿಮೆಯನ್ನು ತಿಳಿದರೆ ಬೇರೆ ತಿಳಿಯಲ್ಪಡಬೇಕಾದುದು ಯಾವುದೂ ಇರುವುದಿಲ್ಲ

**ವಿ** ॥ (1) **ನ ಮೇ ವಿದುಃ** ಎನ್ನುವುದರಿಂದ ಹರಿಯು ಗುಣಪೂರ್ಣನೆಂದೂ, **ಅಹಮಾದಿಃ** ಎನ್ನುವುದರಿಂದ ಸರ್ವೋತ್ತಮನೆಂದೂ (2) **ಯೋ ಮಾಂ** ಎನ್ನುವುದರಿಂದ ನಿರ್ದೋಷನೆಂದೂ,ಸರ್ವವಸ್ತುಗಳು ಶ್ರೀಹರಿಯ ಅಧೀನಗಳೆಂದೂ ಶ್ರೀಹರಿಯ ಜ್ಞಾನದಿಂದ ಮೋಕ್ಷವಾಗುತ್ತದೆಂದೂ, (3) **ಬುದ್ಧಿರ್ಜ್ಞಾನಂ** ಎಂಬುವುದರಿಂದ ಸರ್ವವಸ್ತುಗಳೂ ಶ್ರೀಹರಿಯ ಅಧೀನಗಳೆಂದೂ(೪) **ಏತಾಂ** ಎಂಬುವುದರಿಂದ ಶ್ರೀಹರಿಯ ಜ್ಞಾನದಿಂದ ಮೋಕ್ಷವಾಗುತ್ತದೆಂದೂ, (5) **ಅಹಂ ಸರ್ವಸ್ಯ** ಎಂಬುವುದರಿಂದ ಎಲ್ಲಾವಸ್ತುಗಳೂ ಶ್ರೀಹರಿಯ ಅಧೀನಗಳೆಂದೂ ಶ್ರೀಹರಿಯ ಜ್ಞಾನದಿಂದ ಮೋಕ್ಷವಾಗುತ್ತದೆಂದೂ (6) **ತೇಷಾಂ** ಎನ್ನುವುದರಿಂದ ಶ್ರೀಹರಿಯ ಜ್ಞಾನದಿಂದಮೋಕ್ಷವಾಗುತ್ತದೆಂದೂ.(7) **ಭೋಕ್ತಾರಂ**ಎನ್ನುವುದರಿಂದ ಎಲ್ಲಾವಸ್ತುಗಳೂ ಶ್ರೀಹರಿಯ ಅಧೀನಗಳಾಗಿರುತ್ತವೆಂದೂ ಶ್ರೀಹರಿಯ ಜ್ಞಾನದಿಂದ ಮೋಕ್ಷವಾಗುತ್ತದೆಂದೂ (8) **ಜ್ಞಾನಂ ತೇಽಹಂ** ಎನ್ನುವುದರಿಂದ ಸರ್ವಶಾಸ್ತ್ರಗಳೂ ಶ್ರೀಹರಿಯ ಮಾಹಾತ್ಮ್ಯೆಗಳನ್ನು ಹೇಳುತ್ತವೆಂದೂ ತಿಳಿಯುತ್ತದೆ. ॥ ೧೦ ॥

**ತಾ** ॥ (೧) **ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ । ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ । ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ**

ಇವ(೩-೭) ॥ (೨) ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ । ಜ್ಞಾನಂ ವಿಜ್ಞಾನಸಹಿತಂ ಯಜ್ಞಾತ್ವಾ ಮೋಕ್ಷ್ಯಸೇಽಶುಭಾತ್ । ರಾಜವಿದ್ಯಾ ರಾಜಗುಹ್ಯಂ (೯-೧,೨)॥ (೩) ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ । ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ । ಭೂತಭೃನ್ನ ಚ ಭೂತಸ್ಥಃ (೯-೪,೫)॥ (೪) ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯಃ (೧೧-೪೩) ॥ (೫) ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಂ (೧೪-೧) ॥ ೧೧ ॥

ಅ ॥ (೧) ನಾನು ಸರ್ವಜಗತ್ತನ್ನು ಸೃಷ್ಟಿಸಿದವನು, ನಾಶ ಮಾಡುವವನು ಅರ್ಜುನನೇ ನನಗಿಂತ ಸರ್ವೋತ್ತಮನಾದವನು ಬೇರೆ ಯಾರೊಬ್ಬನೂ ಇಲ್ಲವೇ ಇಲ್ಲ ಹಗ್ಗದಲ್ಲಿ ಪೋಣಿಸಲ್ಪಟ್ಟ ರತ್ನಗಳಂತೆಯೇ ನನ್ನಲ್ಲಿ ಈ ಎಲ್ಲಾ ಜಗತ್ತು ಆಶ್ರಿತವಾಗಿದೆ (೨) ಅರ್ಜುನನೇ ಕಿಚ್ಚು ಮೊದಲಾದ ದೋಷಗಳಿಲ್ಲದ ನಿನಗೆ ಅತಿರಹಸ್ಯವಾದ ಈ ಎಲ್ಲಾ ಮಹಿಮೆಯನ್ನು ಹೇಳುತ್ತೇನೆ ಅದನ್ನು ತಿಳಿದರೆ ಎಲ್ಲಾ ಅಮಂಗಲಗಳಿಂದ ಪಾರಾಗುತ್ತಿ ವಿದ್ಯೆಗಳಲ್ಲಿ ಪ್ರಧಾನ ವಿದ್ಯೆಯು ರಹಸ್ಯಗಳಲ್ಲಿ ಅತಿರಹಸ್ಯವು (೩) ಈ ಜೀವ ಜಡಗಳೆಲ್ಲವೂ ಅವ್ಯಕ್ತಮೂರ್ತಿಯಾದ (ಸರ್ವರಿಗೂ ತೋರದಿರುವ ಆಕಾರವುಳ್ಳ) ನನ್ನಿಂದ ವ್ಯಾಪ್ತವಾಗಿವೆ ಜಡಜೀವರೆಲ್ಲರೂ ನನ್ನನ್ನಾಶ್ರಯಿಸಿರುತ್ತಾರೆ ನಾನು ಅವರನ್ನಾಶ್ರಯಿಸಿಕೊಂಡಿರುವುದಿಲ್ಲ ನಾನು ಎಲ್ಲಾ ಪ್ರಾಣಿಗಳನ್ನು ಧರಿಸಿದ್ದರೂ ಯಾವ ಪ್ರಾಣಿಗಳನ್ನೂ ಆಶ್ರಯಿಸಿಕೊಂಡಿಲ್ಲ (೪) ನಿನಗೆ ಸಮಾನನೇ ಇಲ್ಲವೆಂದಾದಮೇಲೆ ನಿನಗಿಂತ ಶ್ರೇಷ್ಠನು ಹೇಗೆ ಇದ್ದಾನು ? (೫) ತಿಳಿಯಲರ್ಹಗಳಾದ ವಸ್ತುಗಳ ಮಧ್ಯದಲ್ಲಿ ಶ್ರೇಷ್ಠವಸ್ತುವನ್ನು ಹೇಳುವೆನು (ಅದನ್ನು ತಿಳಿದೇ ಸಂಸಾರದಿಂದ ಬಿಡುಗಡೆ ಹೊಂದಿ ಮೋಕ್ಷವನ್ನು ಹೊಂದುತ್ತಾನೆ )

ವಿ ॥ (1) **ಅಹಂ** ಎಂಬುದರಿಂದ ಎಲ್ಲಾವಸ್ತುಗಳೂ ಶ್ರೀಹರಿಯ ಅಧೀನಗಳೆಂದೂ, **ಮತ್ತಃ ಪರತರಂ** ಎಂಬುದರಿಂದ ಶ್ರೀಹರಿಯು ಸರ್ವೋತ್ತಮನೆಂದೂ **ಮಯಿ ಸರ್ವಂ** ಎಂಬುದರಿಂದ ವಸ್ತುಗಳೆಲ್ಲವೂ ಶ್ರೀಹರಿಯ ಅಧೀನಗಳೆಂದೂ, **ಇದಂ ತು** ಎಂಬುದರಿಂದ ಶ್ರೀಹರಿಯ ಜ್ಞಾನದಿಂದ ಮೋಕ್ಷವಾಗುತ್ತದೆಂದೂ, **ರಾಜವಿದ್ಯಾ** ಎಂಬುದರಿಂದ ಸರ್ವ ಶಾಸ್ತ್ರಗಳೂ ಭಗವಂತನ ಗುಣಗಳನ್ನು ಹೇಳುತ್ತವೆಂದೂ **ಮಯಾ ತತಂ** ಎಂಬುದರಿಂದ ವಸ್ತುಗಳೆಲ್ಲವೂ ಶ್ರೀಹರಿಯ ಅಧೀನಗಳೆಂದೂ, ಶ್ರೀಹರಿಯು ನಿರ್ದೋಷನೆಂದೂ, ಬೇರೆಯವರ ಅಧೀನನಲ್ಲಿರುವವನಲ್ಲವೆಂದೂ **ಭೂತಭೃತ್** ಎಂಬುದರಿಂದ ವಸ್ತುಗಳೆಲ್ಲವೂ ಶ್ರೀಹರಿಯ ಅಧೀನಗಳೆಂದೂ ಶ್ರೀಹರಿಯು ಇತರರ ಅಧೀನನಲ್ಲವೆಂದೂ **ನ ತ್ವತ್** ಎಂಬುದರಿಂದ ಶ್ರೀಹರಿಯು ಸರ್ವೋತ್ತಮನೆಂದೂ **ಪರಂ ಭೂಯಃ** ಎಂಬುದರಿಂದ ಎಲ್ಲಾ ಶಾಸ್ತ್ರಗಳೂ ಶ್ರೀಹರಿಯ ಗುಣಗಳನ್ನು ಹೇಳುತ್ತವೆಂದೂ ಸಿದ್ಧಿಸುತ್ತವೆ ॥ ೧೧ ॥

ತಾ ॥ (೧) ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದಧಾಮ್ಯಹಂ । ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ (೧೪-೩) ॥ (೨) ಬ್ರಹ್ಮಣೋ ಹಿ ಪ್ರತಿಷ್ಠಾಽಹಮಮೃತಸ್ಯಾವ್ಯಯಸ್ಯ ಚ । ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ (೧೪-೨೭) ॥ (೩) ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ । ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ । ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ

**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ । ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಂ । ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥ ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ । ಏತದ್ಬುಧ್ವಾ ಬುದ್ಧಿಮಾನ್ ಸ್ಯಾತ್ಕೃತಕೃತ್ಯಶ್ಚ ಭಾರತ**[15](೧೬,೧೭,೧೮,೧೯,೨೦) ॥ **(೪) ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ । ನಾನವಾಪ್ತಮವಾಪ್ತವ್ಯಂ** (೩–೨೨) **ಇತ್ಯಾದಿನಾ ಸರ್ವಸ್ಮಾದ್ಭಗವತೋ ಭೇದಃ ಸರ್ವಸ್ಯ ತದಧೀನತ್ವಂ ತಸ್ಯಾನನ್ಯಾಧೀನತ್ವಂ ಸರ್ವೋತ್ತಮತ್ವಂ ಸರ್ವಗುಣಪರಿಪೂರ್ಣತ್ವಂ ಸರ್ವಶಾಸ್ತ್ರಾಣಾಂ ತತ್ಪರತ್ವಂ ತಥಾ ತಜ್ಜ್ಞಾನಾದೇವ ಮೋಕ್ಷ ಇತ್ಯಾದಿ** ॥ ೧೨ ॥

**ಅ** ॥ (೧) ಲಕ್ಷ್ಮೀದೇವಿಯು ನನ್ನ ಪತ್ನಿಯು ಅವಳಲ್ಲಿ ನಾನು ಗರ್ಭಧಾರಣಮಾಡುತ್ತೇನೆ ಅದರಿಂದ ಎಲ್ಲಾ ಪ್ರಾಣಿಗಳೂ ಹುಟ್ಟುತ್ತಾರೆ (೨) ನಾನು ಮಹಾಲಕ್ಷ್ಮೀದೇವಿಗೂ ಮುಕ್ತರ ಸಮೂಹಕ್ಕೂ ನಿಷ್ಕಾಮ ಧರ್ಮಕ್ಕೂ ದುಃಖಮಿಶ್ರವಾಗದ ಸುಖರೂಪವಾದ ಮೋಕ್ಷಕ್ಕೂ ಆಧಾರನು (೩) ನಿಯಮ್ಯವರ್ಗದಲ್ಲಿ ಕ್ಷರ ಅಕ್ಷರವೆಂದು ಇಬ್ಬರು ಚೇತನರು ಬ್ರಹ್ಮಾದಿಗಳು ಕ್ಷರರೆನ್ನಿಸುತ್ತಾರೆ ಲಕ್ಷ್ಮೀದೇವಿಯು ಅಕ್ಷರಳೆನಿಸುತ್ತಾಳೆ (೪) ಸರ್ವೋತ್ತಮನಾದ ಶ್ರೀಹರಿಯು ಅವರಿಬ್ಬರಿಂದ ಭಿನ್ನನು ಪರಮಾತ್ಮನೆಂದು ವೇದಗಳಲ್ಲಿ ಹೇಳಲ್ಪಡುತ್ತಾನೆ ಆತನು ಭೂಃ ಭುವಃ ಸ್ವಃ ಎಂಬ ಮೂರು ಲೋಕಗಳನ್ನು ಧರಿಸುತ್ತಾನೆ ಅಚಿಂತ್ಯಶಕ್ತಿಯುಳ್ಳವನಾದುದರಿಂದ ನಾಶವಿಲ್ಲದವನು ಕ್ಷರ ಅಕ್ಷರರಿಂದ ಉತ್ತಮನಾದ ಕಾರಣ ವೇದ ಪುರಾಣಾದಿ ಗ್ರಂಥಗಳಲ್ಲಿ ಪ್ರಸಿದ್ಧನಾದ ಪುರುಷೋತ್ತಮನು ನಾನೇ ಯಾವ ಅಧಿಕಾರಿಯು ನನ್ನನ್ನು ಹೀಗೆ ಅಜ್ಞಾನವಿಲ್ಲದವನಾಗಿ ಪುರುಷೋತ್ತಮನೆಂದು ತಿಳಿಯುತ್ತಾನೋ, ಆತನು ಸರ್ವಶಾಸ್ತ್ರಾರ್ಥವನ್ನು ತಿಳಿದವನಾಗಿ ಸರ್ವಪ್ರಕಾರದಿಂದಲೂ ನನ್ನನ್ನು ಹೊಂದುತ್ತಾನೆ ಪಾಪರಹಿತನೇ ಹಿಂದೆ ಹೇಳಿದ ಸರ್ವಾಂತರ್ಯಾಮಿತ್ವಾದಿಗಳು ಉಪದೇಶಿಸಲಿಕ್ಕೆ ಯೋಗ್ಯಗಳು ಅತಿರಹಸ್ಯಗಳು ಇವು ನನ್ನಿಂದ ಉಪದೇಶಿಸಲ್ಪಟ್ಟವು ಇವುಗಳನ್ನು ತಿಳಿದು ಅಪರೋಕ್ಷಜ್ಞಾನಿಯೂ ಮುಕ್ತನೂ ಆಗುವನು (೫) ಅರ್ಜುನನೇ ನನಗೆ ಕರ್ತವ್ಯವು ಯಾವುದೂ ಇಲ್ಲ ಮೂರು ಲೋಕಗಳಲ್ಲಿಯೂ ಮೊದಲು ಹೊಂದಲ್ಪಡದಿದ್ದದೂ ಮುಂದೆ ಸಿಗಬೇಕಾದುದೂ ಇಲ್ಲ (ಆದರೂ ಕರ್ಮವನ್ನು ಮಾಡಿಕೊಂಡೇ ಇರುತ್ತೇನೆ) ಇದುಮೊದಲಾದ ಪ್ರಮಾಣಗಳಿಂದ ಶ್ರೀಹರಿಗೆ ಸರ್ವರಿಂದ ಭೇದವೂ, ಸರ್ವವಸ್ತುಗಳಿಗೆ ಶ್ರೀಹರಿಯ ಅಧೀನತ್ವವೂ, ಶ್ರೀಹರಿಗೆ ಇತರರ ಅಧೀನತನವಿಲ್ಲದಿರುವುದೂ, ಸರ್ವೋತ್ತಮತ್ವವೂ, ಸರ್ವಗುಣಪರಿಪೂರ್ಣತ್ವವೂ, ಎಲ್ಲಾ ಶಾಸ್ತ್ರಗಳೂ ಶ್ರೀಹರಿಯ ಮಹಿಮೆಯನ್ನೇ ಉಪದೇಶಿಸತಕ್ಕವುಗಳೆಂದೂ, ಶ್ರೀಹರಿಯ ಜ್ಞಾನದಿಂದಲೇ ಮೋಕ್ಷವು ಜಗತ್ಸತ್ಯತ್ವವು ಇತ್ಯಾದಿ ವಿಷಯವು (ಹೇಳಲ್ಪಟ್ಟಿತು)

**ವಿ** ॥ **ಮಮ ಯೋನಿಃ ಬ್ರಹ್ಮಣೋ ಹಿ** ಎಂಬುವುಗಳಿಂದ ಸರ್ವವಸ್ತುಗಳೂ ಶ್ರೀಹರಿಯ ಅಧೀನಗಳೆಂದೂ, ಶ್ರೀಹರಿಯ ಜ್ಞಾನದಿಂದ ಮೋಕ್ಷವಾಗುತ್ತದೆಂದೂ, **ದ್ವಾವಿಮೌ** ಎಂಬುವುದರಿಂದ ಶ್ರೀಹರಿಗೆ ಸರ್ವವಸ್ತುಗಳಿಂದ ಭೇದವೂ, ಸರ್ವೋತ್ತಮತ್ವವೂ, ಸರ್ವವಸ್ತುಗಳು ಶ್ರೀಹರಿಯ ಅಧೀನದಲ್ಲಿರುವವುಗಳೆಂದೂ, ಸರ್ವಶಾಸ್ತ್ರಗಳೂ ಶ್ರೀಹರಿಯ ಮಹಿಮೆಯನ್ನು ಹೇಳುವವುಗಳೆಂದೂ, ಶ್ರೀಹರಿಯ ಜ್ಞಾನದಿಂದ ಮೋಕ್ಷವಾಗುತ್ತದೆಂದೂ, **ನ ಮೇ ಪಾರ್ಥ** ಎಂಬುವುದರಿಂದ ಶ್ರೀಹರಿಯು ಗುಣಪೂರ್ಣನೆಂದೂ, ಸಿದ್ಧಿಸುತ್ತದೆ ॥ ೧೨ ॥

ಪೀ - ಜ್ಞಾನಿಗಳೂ ಭಗವಂತನ ಪ್ರೀತಿಗಾಗಿ ಕರ್ಮ ಮಾಡಬೇಕೆಂಬುವ ವಿಷಯದಲ್ಲಿ ವೇದವೂ ಪ್ರಮಾಣವಿದೆ ಎನ್ನುತ್ತಾರೆ—

**ತಾ ॥ (೧) ಅಥಾತೇ ವಿಷ್ಣೋ ವಿದುಷಾ ಚಿದರ್ಧ್ಯಃ ಸ್ತೋಮೋ ಯಜ್ಞಶ್ಚ ರಾಧ್ಯೋ ಹವಿಷ್ಮತಾ ॥ (೨) ಪಶ್ಯನ್ನಪೀಮಮಾತ್ಮಾನಂ ಕುರ್ಯಾತ್ಕರ್ಮಾವಿಚಾರಯನ್ । ಯದಾತ್ಮನಃ ಸುನಿಯತಮಾನಂದೋತ್ಕರ್ಷಮಾಪ್ನುಯಾತ್ ॥ (೩) ಭಕ್ತ್ಯಾ ಪ್ರಸನ್ನಃ ಪರಮೋ ದದ್ಯಾಜ್ಜ್ಞಾನಮನಾಕುಲಂ । ಭಕ್ತಿಂ ಚ ಭೂಯಸೀಂ ತಾಭ್ಯಾಂ ಪ್ರಸನ್ನೋ ದರ್ಶನಂ ವ್ರಜೇತ್ ॥ (೪) ತತೋಽಪಿ ಭೂಯಸೀಂ ಭಕ್ತಿಂ ದದ್ಯಾತ್ತಾಭ್ಯಾಂ ವಿಮೋಚಯೇತ್ । ಮುಕ್ತೋಽಪಿ ತದ್ವಶೋ ನಿತ್ಯಂ ಭೂಯೋಭಕ್ತಿಸಮನ್ವಿತಃ ॥ (೫) ಸಾಧ್ಯಾನಂದಸ್ವರೂಪೈವ ಭಕ್ತಿರ್ನೈವಾತ್ರ ಸಾಧನಂ ॥ ೧೩ ॥**

ಅ ॥ (೧) ಅಥ=ಆಮೇಲೆ ವಿಷ್ಣೋ ಎಲೋ ಶ್ರೀಹರಿಯೆ ತೇ=ನಿನ್ನ, ಸ್ತೋಮಃ=ಸ್ತೋತ್ರವು, ಯಜ್ಞಶ್ಚ=ಯಾಗವೂ ಕೂಡ, ಹವಿಷ್ಮತಾ=ಸತ್ಕರ್ಮಮಾಡುವವನಿಂದಲೂ, ವಿದುಷಾಚಿತ್ ಜ್ಞಾನಿಯಾದವನಿಂದಲೂ ಕೂಡ ಅರ್ಧ್ಯಃ=ಪ್ರಾರ್ಥಿಸಲ್ಪಡತಕ್ಕದು ರಾಧ್ಯಃ=ಸಾಧಿಸಲ್ಪಡತಕ್ಕದು (೨) (ಜ್ಞಾನಿಗಳಿಗೆ ಮೋಕ್ಷವು ನಿಶ್ಚಿತವಾಗಿರುವುದರಿಂದ ಕರ್ಮವು ಏತಕ್ಕೆಂದರೆ—) ಶ್ರೀ ಹರಿಯನ್ನು ಪ್ರತ್ಯಕ್ಷೀಕರಿಸಿದವನೂ (ಜ್ಞಾನಿಯಾದ ನನಗೆ ಮೋಕ್ಷವು ನಿಶ್ಚಿತವಾಗಿರುವುದರಿಂದ) ಕರ್ಮವು ಏತಕ್ಕೆ ಎಂದು ವಿಚಾರಮಾಡದೆ ಶಾಸ್ತ್ರವಿಹಿತವಾದ ಕರ್ಮವನ್ನು ಮಾಡುವುದರಿಂದ ಮೋಕ್ಷದಲ್ಲಿ ಆನಂದಾತಿಶಯವನ್ನು ಹೊಂದುವನು (೩) (ವಿಷ್ಣುಭಕ್ತಿಯೇ ಎಲ್ಲಾ ಸಾಧನಗಳಲ್ಲಿ ಶ್ರೇಷ್ಠವು ಇದುಮೊದಲಾದ ವಿಷಯಗಳಲ್ಲಿ ವೇದಪ್ರಮಾಣವನ್ನು ಹೇಳುತ್ತಾರೆ ) ಭಕ್ತಿಯಿಂದ ಸಂತುಷ್ಟನಾದ ಶ್ರೀ ಹರಿಯು ನಿಶ್ಚಿತ ಫಲವುಳ್ಳ ಜ್ಞಾನವನ್ನೂ ದೃಢವಾದ ಭಕ್ತಿಯನ್ನೂ ಕೊಡುವನು ಅವುಗಳಿಂದ ಸಂತುಷ್ಟನಾದ ಶ್ರೀ ಹರಿಯು (ಭಕ್ತನಿಗೆ) ತನ್ನ ರೂಪವನ್ನು ಪ್ರತ್ಯಕ್ಷಗೊಳಿಸುವನು ಆಮೇಲೆ ಅದಕ್ಕಿಂತಲೂ ದೃಢವಾದ ಭಕ್ತಿಯನ್ನು ಕೊಟ್ಟು ಆ ಜ್ಞಾನಭಕ್ತಿಗಳಿಂದ ಸಂಸಾರದಿಂದ ಬಿಡುಗಡೆಮಾಡುವನು ಮುಕ್ತನೂ ಕೂಡ ಶ್ರೀ ಹರಿಯ ಅಧೀನನೇ ಆಗಿದ್ದು ನಿತ್ಯದಲ್ಲಿಯೂ ಹೆಚ್ಚುಹೆಚ್ಚು ಭಕ್ತಿಯಿಂದೊಡಗೂಡಿದವನಾಗಿರುತ್ತಾನೆ (೫) (ಮುಕ್ತಿಯಲ್ಲಿಯೂ ಭಕ್ತಿಯಿದೆ ಎಂದಾದರೆ ಸುಖಾದಿಫಲವನ್ನೂ ಅದರಿಂದ ಆನಂದವೃದ್ಧ್ಯಾದಿಗಳನ್ನೂ ಒಡಂಬಡಬೇಕಾದೀತು ಪ್ರಯೋಜನವಿಲ್ಲವೆಂದಾದರೆ ನಿಷ್ಫಲವಾದ ಭಕ್ತಿಯು ಏತಕ್ಕೆ ಎಂದರೆ) ಮುಕ್ತರ ಭಕ್ತಿಯು ಸಾಧ್ಯಫಲರೂಪವಾದ ಆನಂದದ ಸ್ವರೂಪವೇ ಆಗಿದೆ ಮೋಕ್ಷದಲ್ಲಿದ್ದ ಭಕ್ತಿಯು ಸಾಧನಸ್ವರೂಪವಲ್ಲ

ವಿ ॥ (1) ಮೋಕ್ಷವನ್ನು ಹೊಂದಿದವರ ಭಕ್ತಿಯು ಸಾಧನಸ್ವರೂಪವಾಗದಿರುವುದರಿಂದ ಆ ಭಕ್ತಿಗೆ ಫಲವಿಲ್ಲ ಆ ಭಕ್ತಿಯು ಸಂಸಾರದಲ್ಲಿರುವಾಗ ಮಾಡಿದ ಭಕ್ತಿಯಿಂದುಂಟಾದ ಆನಂದದ ಸ್ವರೂಪವೇ ಆಗಿರುವುದರಿಂದ ಭಕ್ತಿಯೇ ಪ್ರಯೋಜನವು (2) ಜ್ಞಾನವಿಲ್ಲದೆ ಭಕ್ತಿಯು ಹುಟ್ಟದಿರುವುದರಿಂದ ಭಕ್ತಿಯಿಂದ ಜ್ಞಾನವು ಹುಟ್ಟುವುದು ಹೇಗೆಂದರೆ - ಮೊದಲಿನ ಜ್ಞಾನವು ಅಲ್ಪವಾಗಿದ್ದು ಫಲವುಂಟೆಂದು ನಿಶ್ಚಿತವಲ್ಲ ಭಕ್ತಿಯಿಂದ ಹುಟ್ಟಿದ ಜ್ಞಾನವು ಹಿಂದಿನ ಜ್ಞಾನಕ್ಕಿಂತ ಪೂರ್ಣವಾಗಿದ್ದು ಪ್ರಯೋಜನವಿದೆ ಎಂದು ನಿಶ್ಚಯವುಳ್ಳದ್ದು ॥ ೧೩ ॥

ಪೀ — ಆ ವಿಷ್ಣುಭಕ್ತಿಯು ಎಂತಹುದೆಂದರೆ-

ತಾ ॥ (೧) ಬ್ರಹ್ಮರುದ್ರರಮಾದಿಭ್ಯೋಽಪ್ಯುತ್ತಮತ್ವಂ ಸ್ವತಂತ್ರತಾಂ । ಸರ್ವಸ್ಯ ತದಧೀನತ್ವಂ ಸರ್ವಸದ್ಗುಣಪೂರ್ಣತಾಂ । ನಿರ್ದೋಷತ್ವಂ ಚ ವಿಜ್ಞಾಯ ವಿಷ್ಣೋಸ್ತತ್ರಾಖಿಲಾಧಿಕಃ । ಸ್ನೇಹೋ ಭಕ್ತಿರಿತಿ ಪ್ರೋಕ್ತಃ ಸರ್ವೋಪಾಯೋತ್ತಮೋತ್ತಮಃ । ತೇನೈವ ಮೋಕ್ಷೋ ನಾನ್ಯೇನ ದೃಷ್ಟ್ಯಾದಿಸ್ತಸ್ಯ ಸಾಧನಂ ॥ (೨) ಅಧಮಾಧಿಕಾರಿಣೋ ಮರ್ತ್ಯಾ ಮುಕ್ತಾವೃಷ್ಯಾದಿಕಾಃ ಸಮಾಃ । ಅಧಿಕಾರ್ಯುತ್ತಮಾ ದೇವಾ ಪ್ರಾಣಸ್ತತ್ರೋತ್ತಮೋತ್ತಮಃ ॥ (೩) ನೈವ ದೇವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ । ತಿರೋಹಿತಂ ತಥಾಽಪ್ಯೇತೇ ಶೃಣ್ವಂತಿ ಕ್ರೀಡಯಾಽಥವಾ । ಬಹುವಾರತದಭ್ಯಾಸಾತ್ತಿರೋಭಾವೋಽಪಿ ನೋ ಭವೇತ್ ॥ (೪) ಯಥಾ ವ್ಯಾಸಾನುಶಿಷ್ಟಾನಾಂ ದೇವಾನಾಂ ಕ್ಷತ್ರಜನ್ಮನಾಂ । ಪಾರ್ಥಾನಾಮತಿರೋಧಾನಂ ಜ್ಞಾನಂ ಸುಸ್ಥಿರತಾಂ ಗತಂ ॥ ೧೪ ॥

ಅ ॥ (೧) ಶ್ರೀ ವಿಷ್ಣುವಿಗೆ ಬ್ರಹ್ಮ ರುದ್ರ ಲಕ್ಷ್ಮೀ ಮೊದಲಾದವರಿಗಿಂತ ಉತ್ತಮತ್ವವನ್ನೂ, ಸರ್ವಸ್ವಾತಂತ್ರ್ಯವನ್ನೂ, ಎಲ್ಲಾ ವಸ್ತುಗಳಿಗೂ ಶ್ರೀ ಹರಿಯ ಅಧೀನತೆಯನ್ನೂ, ಎಲ್ಲಾ ಸದ್ಗುಣಗಳಿಂದ ಪರಿಪೂರ್ಣತೆಯನ್ನೂ, ದೋಷಗಳ ಇಲ್ಲದಿರುವಿಕೆಯನ್ನೂ ತಿಳಿದುಕೊಂಡು ಆ ವಿಷ್ಣುವಿನಲ್ಲಿ ಎಲ್ಲಾ ವಸ್ತುಗಳಿಗಿಂತಲೂ ಅತ್ಯಧಿಕವಾದ ಸ್ನೇಹವೇ ಭಕ್ತಿಯೆನಿಸುತ್ತದೆ ಭಕ್ತಿಯೇ ಎಲ್ಲಾ ಸಾಧನಗಳಿಗಿಂತ ಉತ್ತಮೋತ್ತಮವು. ಅಂತಹ ಭಕ್ತಿಯಿಂದಲೇ ಮೋಕ್ಷ ಭಗವದ್ದರ್ಶನ ಧ್ಯಾನ ಶ್ರವಣಗಳು ಲಭಿಸುತ್ತವೆ ಜ್ಞಾನದಿಂದ ಅಲ್ಲ ದರ್ಶನ ಧ್ಯಾನ ಶ್ರವಣಾದಿಗಳು ಭಕ್ತಿಯೋಗಕ್ಕೆ ಸಾಧನಗಳು (೨) (ಅರ್ಜುನನು ದೇವತೆಯಾದುದರಿಂದ ಉತ್ತಮಾಧಿಕಾರಿಯು ಅದರಿಂದಲೇ ಅಪರೋಕ್ಷಜ್ಞಾನಿಯು ಎಂಬೀ ವಿಷಯದಲ್ಲಿಯೂ ದೇವತ್ವವಿದ್ದಲ್ಲಿ ಉತ್ತಮಾಧಿಕಾರಿತ್ವವು, ಉತ್ತಮಾಧಿಕಾರಿತ್ವವಿದ್ದಲ್ಲಿ ಅಪರೋಕ್ಷಜ್ಞಾನಿತ್ವವು ಎಂಬೀ ವಿಷಯದಲ್ಲಿಯೂ ವೇದಪ್ರಮಾಣ ಹೇಳುತ್ತಾರೆ) ಮೋಕ್ಷದಲ್ಲಿ ಮನುಷ್ಯೋತ್ತಮರು ಅಧಮಾಧಿಕಾರಿಗಳು ಋಷಿಮೊದಲಾದವರು ಮಧ್ಯಮಾಧಿಕಾರಿಗಳು ದೇವತೆಗಳು ಉತ್ತಮಾಧಿಕಾರಿಗಳು ಅವರಲ್ಲಿ ಮುಖ್ಯಪ್ರಾಣ ಚತುರ್ಮುಖರು ಉತ್ತಮೋತ್ತಮರು (೩) ದೇವತೆಗಳ ಪದವಿಯನ್ನು ಹೊಂದಿದವರು ಬ್ರಹ್ಮಸಾಕ್ಷಾತ್ಕಾರವಿಲ್ಲದವರು ಇಲ್ಲ (ಉತ್ತಮಾಧಿಕಾರಿತ್ವವಿರಬೇಕಾದರೆ ಬ್ರಹ್ಮಸಾಕ್ಷಾತ್ಕಾರವಾಗಲೇಬೇಕು) (ದೇವತೆಗಳ ಪದವಿಯನ್ನು ಹೊಂದಿದವರಿಗೆ ಬ್ರಹ್ಮಸಾಕ್ಷಾತ್ಕಾರವಾಗಿದ್ದರೆ ಅವರು ಶಾಸ್ತ್ರಶ್ರವಣಾದಿಗಳನ್ನು ಏಕೆ ಮಾಡುವುದೆಂದರೆ -) ಆದರೂ ಈ ದೇವತೆಗಳು ಮರವೆ ಆದುದನ್ನು ರೂಪವಿಶೇಷದಲ್ಲಿ ಕೇಳುತ್ತಾರೆ. ಅಥವಾ ವಿನೋದಕ್ಕಾಗಿ ಕೇಳುತ್ತಾರೆ ಅನೇಕಸಲ ಶಾಸ್ತ್ರಶ್ರವಣಾದಿಗಳನ್ನು ಮಾಡುವುದರಿಂದ ಮರೆವು ಉಂಟಾಗುವುದಿಲ್ಲ (೪) ಉದಾ --ಕ್ಷತ್ರಿಯರಾಗಿ ಜನ್ಮವೆತ್ತಿದ, ವೇದವ್ಯಾಸರಿಂದ ಚೆನ್ನಾಗಿ ಶಿಕ್ಷಿತರಾದ ದೇವತೆಗಳಾದ ಪಾಂಡವರಿಗೆ ಮರೆತುಹೋಗದಿರುವ ಜ್ಞಾನವು ಅತಿಸ್ಥಿರತನವನ್ನು ಹೊಂದಿರುತ್ತದೆ

ವಿ ॥ (1) ಭಕ್ತಿಯಿಂದ ಮೋಕ್ಷ ಭಗವತ್ಸಾಕ್ಷಾತ್ಕಾರಾದಿಗಳು ಆಗುವುದಾದರೆ ಭಕ್ತಿಗೆ ಸಾಕ್ಷಾತ್ಕಾರಾದಿಗಳು ಸಾಧನಗಳೆಂದು ಹೇಳಿದ್ದು ಹೇಗೆ ಕೂಡುತ್ತವೆ-ದರಿ-ಪ್ರಥಮತಃ ಭಕ್ತನಾದ ಅಧಿಕಾರಿಗೆ ಶಾಸ್ತ್ರಶ್ರವಣಾದಿಗಳು, ಆಮೇಲೆ ಭಕ್ತನಲ್ಲಿ ಶ್ರೀ ಹರಿಯ ಸ್ವಲ್ಪ ಅನುಗ್ರಹರೂಪ ಪ್ರಸಾದವು, ಆಮೇಲೆ ಸ್ವಲ್ಪ ಭಕ್ತಿಯು ಆಮೇಲೆ ಸ್ವಲ್ಪ ಅಭಿವೃದ್ಧವಾದ ಶ್ರೀ ಹರಿಯ ಪ್ರಸಾದವು, ಆಮೇಲೆ ಶಾಸ್ತ್ರಶ್ರವಣವು ಆಮೇಲೆ ಹಿಂದಿಗಿಂತ ಹೆಚ್ಚಾದ ವೈರಾಗ್ಯ ಭಕ್ತಿ ಪ್ರಸಾದಗಳು, ಆಮೇಲೆ ಮನನ, ಆಮೇಲೆ ಹಿಂದಿಸಿಂದ ಹೆಚ್ಚಾದ

ವೈರಾಗ್ಯ ಭಕ್ತಿ ಪ್ರಸಾದಗಳು ಆಮೇಲೆ ಧ್ಯಾನವು, ಆದರಿಂದ ಅಭಿವೃದ್ಧಗಳಾದ ವೈರಾಗ್ಯ ಭಕ್ತಿ ಪ್ರಸಾದಗಳು, ಆಮೇಲೆ ಪ್ರತಿಬಂಧಕವಾದ ಅವಿದ್ಯೆಯನ್ನು ಹೋಗಲಾಡಿಸಿ ಶ್ರೀಹರಿಯ ಅಪರೋಕ್ಷಜ್ಞಾನವು ಆಮೇಲೆ ಅವರವರಿಗೆ ಯೋಗ್ಯಗಳಾದ ಪರಿಪೂರ್ಣ ವೈರಾಗ್ಯ ಭಕ್ತಿ ಪ್ರಸಾದಗಳು ಆಮೇಲೆ ಏನೂ ದುಃಖವಿಲ್ಲದ ಪರಮಾನಂದ ಪ್ರಾಪ್ತಿರೂಪವಾದ ಮೋಕ್ಷವು **ಶ್ರವಣಂ ಮನನಂ ತಸ್ಮಾದ್ಧ್ಯಾನಂ ಸಾಕ್ಷಾತ್ಕೃತಿರ್ಹರೇಃ । ಭಕ್ತಿಃ ಪ್ರಸಾದ ಇತ್ಯೇತೇ ಮುಕ್ತೇಃ ಸೋಪಾನಪಂಕ್ತಯಃ** ಎಂದುಕ್ತವಾಗಿದೆ (2) ಮೊದಲಿನಿಂದಲೇ ಸರ್ವಶಾಸ್ತ್ರಗಳ ತತ್ತ್ವಜ್ಞಾನಿಯಾದ ಚತುರ್ಮುಖನಿಗೆ ಮರೆವು ಇಲ್ಲದಿರುವುದರಿಂದ ಮರಳಿ ಶಾಸ್ತ್ರಶ್ರವಣಾದಿಗಳ ಹೇಗೆ ಕೂಡುತ್ತವೆಂದರೆ ವಿನೋದಕ್ಕಾಗಿ ಶಾಸ್ತ್ರಶ್ರವಣವು ಅಥವಾ **ವಿರಿಂಚಸ್ಯ ಕೇವಲಂ ಧರ್ಮಕಾರಣಂ** ಎಂದು ಹೇಳಿದ ಪ್ರಕಾರ ಮಹಾಸ್ವಧರ್ಮವು ಅಭಿವೃದ್ಧಿಯಾಗುವದಕ್ಕಾಗಿ ಚತುರ್ಮುಖನು ಶ್ರೀಹರಿಯಿಂದ ಅಧ್ಯಯನಮಾಡುವುದು (3) ಗರುಡಾದಿಗಳು **ಸಂಶಯಾರ್ಥಂ ಗುರೋರ್ವಚಃ । ಸುಪರ್ಣಾದೇಃ** ಎಂದು ಹೇಳಿದ ಪ್ರಕಾರ ಸಂಶಯನಿವೃತ್ತಿಯಾಗಿ ವಿಶೇಷಜ್ಞಾನಕ್ಕಾಗಿ ಶಾಸ್ತ್ರಶ್ರವಣ ಮಾಡುತ್ತಾರೆ (4) **ಗೀತೋಕ್ತಂ ವಿಸ್ಮೃತಂ ಚಾಸ್ಯ ಪುನರಧ್ಯಗಮದ್ವಿಭುಃ** ಎಂದು ಅರ್ಜುನನಿಗೆ ಮರೆವ ಹೇಳಿವ ಕಾರಣ **ಪಾರ್ಥಾನಾಮತಿರೋಧಾನಂ** ಎಂದು ಹೇಳಿದು ಹೇಗೆಂದರೆ— ಬಹುಸಲ ಉಪದೇಶಿಸಿದ ಮೇಲೆ ಮರೆವು ಇಲ್ಲವೆಂದು ಹೇಳಿದ (5) ಪಾಂಡವರ ಜ್ಞಾನವು ಶುದ್ಧವಾಗಿದ್ದರೆ ಇಂದ್ರ ಅರ್ಜುನಾದಿಗಳಿಗೆ ಕೆಲವೇಳೆ ಅಜ್ಞಾನಾದಿಗಳು ಹೇಗೆ ಕೂಡುತ್ತವೆಂದರೆ ಮೂಲರೂಪದಲ್ಲಿಯೂ ಹಿಂದಿನ ಕಲ್ಪಾಂತರೀಯ ಅವತಾರರೂಪಗಳಲ್ಲಿಯೂ ಮರೆವು ಇಲ್ಲ ಅವತರಿಸಿದ ವರ್ತಮಾನ ಭಗವದ್ರೂಪಗಳಲ್ಲಿ ಕೆಲವು ವೇಳೆ ಅಜ್ಞಾನವು ಬರುತ್ತದೆ ವ್ಯಾಸಾದಿಗಳ ಉಪದೇಶದಿಂದ ಮರಳಿ ಜ್ಞಾನವು ಸ್ಥಿರವಾಗುತ್ತದೆ ಅತ ಏವ **ಇಂದ್ರೋಽಥ ವಿಸ್ಮೃತರಥಾಂಗಧರಾವತಾರಃ** ಎಂದು ಹೇಳಿರುವರು ॥೧೪॥

ಹೀ— ಶ್ರೀ ವಿಷ್ಣುವು ಬ್ರಹ್ಮರುದ್ರಾದಿಗಳಿಗಿಂತಲೂ ಉತ್ತಮನೆಂಬುವ ವಿಷಯದಲ್ಲಿ ವೇದಗಳನ್ನು ಪ್ರಮಾಣವಾಗಿ ಹೇಳುತ್ತಾರೆ--

**ತಾ ॥ (೧) ಅಸ್ಯ ದೇವಸ್ಯ ಮೀಳ್ಹುಷೋ ವಯಾ ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ ।**
**ವಿದೇಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾವಿರಾವತ್ ॥**
**(೨) ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ ॥ (೩) ಸ ಮುನಿ-**
**ರ್ಭೂತ್ವಾ ಸಮಚಿಂತಯತ್ತತ ಏತೇ ವ್ಯಜಾಯಂತ ವಿಶ್ವೋ ಹಿರಣ್ಯಗರ್ಭೋಽಗ್ನಿ-**
**ರ್ಯಮೋ ವರುಣರುದ್ರೇಂದ್ರಾ ಇತಿ ॥ (೪) ಏಕೋ ನಾರಾಯಣ ಆಸೀನ್ನ ಬ್ರಹ್ಮಾ**
**ನೇಶಾನಃ ॥ (೫) ವಾಸುದೇವೋ ವಾ ಇದಮಗ್ರ ಆಸೀನ್ನ ಬ್ರಹ್ಮಾ ನ ಚ ಶಂಕರಃ ॥**
**(೬) ಯಂ ಯಂ ಕಾಮಯತೇ ವಿಷ್ಣುಸ್ತಂ ಬ್ರಹ್ಮಾಣಂ ಚ ಶಂಕರಂ । ಶಕ್ರಂ**
**ಸೂರ್ಯಂ ಯಮಂ ಸ್ಕಂದಂ ಕುರ್ಯಾತ್ಕರ್ತಾಸ್ಯ ನ ಕ್ವಚಿತ್ ॥ (೭) ಸರ್ವೋ-**
**ತ್ಕರ್ಷೇ ದೇವದೇವಸ್ಯ ವಿಷ್ಣೋರ್ಮಹಾತಾ(ಹತ್ವಾ)ತ್ಪರ್ಯಂ ನೈವ ಚಾನ್ಯತ್ರ**
**ಸತ್ಯಂ । ಅವಾಂತರಂ ತತ್ಪರತ್ವಂ ತದನ್ಯತ್ಸರ್ವಾಗಮಾನಾಂ ಪುರುಷಾರ್ಥಸ್ತತೋಽತಃ**
**ಇತಿ ಪೈಂಗಿಶ್ರುತಿಃ ॥ ೧೫ ॥**

**ಅ** ॥(೧) ಮೀಳ್ಹುಷಃ=ಭಕ್ತರಿಗೆ ಇಷ್ಟಾರ್ಥವನ್ನು ಕೊಡುವವನೂ ಏಷಸ್ಯ=ಚೆನ್ನಾಗಿ ಸರ್ವನಿಯಾಮಕನೂ, ದೇವಸ್ಯ=ಕ್ರೀಡಾದಿಗುಣವಿಶಿಷ್ಟನೂ ಆದ, ಅಸ್ಯ ವಿಷ್ಣೋಃ=ಈ ವಿಷ್ಣುವಿನ, ಪ್ರಭೃಥೇ ಪೂಜೆಯು ಹವಿರ್ಭಿಃ=ಹವಿಸ್ಸುಗಳಿಂದ, (ಮಾಡಲ್ಪಡುತ್ತಿರಲು) ವಯಾಃ ಸಂಸಾರಬಂಧಕನಾದ,

ರುದ್ರಃ=ರುದ್ರನು, ರುದ್ರಿಯಂ=ರುದ್ರಸಂಬಂಧಿಕವಾದ, ಮಹಿತ್ವಂ=ಮಹಿಮೆಯನ್ನು, (ಹೇಗೆ) ವಿದೇಹಿ= ಹೊಂದಿರುವನೋ (ಹಾಗೆಯೆ) ಅಶ್ವಿನಾ=ಅಶ್ವಿನೀದೇವತೆಗಳಿರಾ, (ನೀವು ಕೂಡ) ಇರಾವತ್=ಪ್ರಶಸ್ತಾನ್ನ ವುಳ್ಳ, ವರ್ತಿಃ=ಸ್ಥಿತಿಯನ್ನು, ಯಾಸಿಷ್ಟಂ=ಹೊಂದಿರುವಿರಿ (೨) ಪ್ರಲಯಕಾಲದಲ್ಲಿ ನಾರಾಯಣನೊಬ್ಬನೇ ಇರುತ್ತಿದ್ದನು ಚತುರ್ಮುಖನಾಗಲೀ ರುದ್ರನಾಗಲೀ ಇರಲಿಲ್ಲ (೩) ಶ್ರೀ ಪರಬ್ರಹ್ಮನು ಮೌನವುಳ್ಳವನಾಗಿ ವಾಯುದೇವರು ಚತುರ್ಮುಖನು, ಅಗ್ನಿ ಯಮ ವರುಣ ರುದ್ರ ಇಂದ್ರರು ಹುಟ್ಟಲಿ ಎಂದು ಆಲೋಚಿಸಿದನು ಆ ಮೇಲೆ ಅವರು ಹುಟ್ಟಿದರು (೪) ನಾರಾಯಣನೊಬ್ಬನೇ ಇರುತ್ತಿದ್ದನು ಚತುರ್ಮುಖನೂ ರುದ್ರನೂ ಇರಲಿಲ್ಲ (೫) ಪ್ರಲಯಕಾಲದಲ್ಲಿ ವಾಸುದೇವನೊಬ್ಬನೇ ಇರುತ್ತಿದ್ದನು ಚತುರ್ಮುಖ ರುದ್ರರು ಇರಲಿಲ್ಲ (೬) ಶ್ರೀಹರಿಯು ಯಾರನ್ನು ಚತುರ್ಮುಖನನ್ನಾಗಿ ಸೃಷ್ಟಿ ಮಾಡಲಿಕ್ಕೆ ಇಚ್ಛಿಸುತ್ತಾನೋ ಆತನನ್ನು ಚತುರ್ಮುಖನನ್ನಾಗಿ ರುದ್ರನನ್ನು ಸೃಷ್ಟಿ ಮಾಡಲಿಕ್ಕೆ ಇಚ್ಛಿಸಿದರೆ ರುದ್ರನನ್ನಾಗಿಯೂ ಸೃಷ್ಟಿಮಾಡುವನು ಹೀಗೆ ಇಂದ್ರ ಸೂರ್ಯ ಯಮ ಸ್ಕಂದ ಇವರನ್ನು ಸೃಷ್ಟಿಮಾಡಲಿಚ್ಛಿಸಿದರ ಅವರವರನ್ನು ಸೃಷ್ಟಿಸುತ್ತಾನೆ ಬ್ರಹ್ಮಾದಿಗಳನ್ನು ಸೃಷ್ಟಿಸುವವನು ವಿಷ್ಣುವು ಹೊರತು ಯಾರೂ ಇಲ್ಲ (೭) ಬ್ರಹ್ಮಾದಿದೇವತೆಗಳಿಗೆ ಸ್ವಾಮಿಯಾದ ಶ್ರೀಹರಿಯು ಸರ್ವೋತ್ತಮನೆಂಬ ವಿಷಯದಲ್ಲಿಯೇ ಎಲ್ಲಾ ಆಗಮ (ವೇದ) ಗಳಿಗೆ ಮುಖ್ಯ ತಾತ್ಪರ್ಯವು ಬೇರೆಯವರು ಸರ್ವೋತ್ತಮರೆಂಬಲ್ಲಿ ತಾತ್ಪರ್ಯವಿಲ್ಲ (ಇನ್ನು ಕೆಲವು ವೇದಗಳು ಬೇರೆ ದೇವತೆಗಳಿಗೆ ಸರ್ವೋತ್ತಮತ್ವವನ್ನು ಹೇಳಿರುತ್ತವೆಂದರೆ) ಅದು ಮುಖ್ಯ ತಾತ್ಪರ್ಯದಿಂದ ಹೇಳಿದ್ದಲ್ಲ, ಅಮುಖ್ಯ ತಾತ್ಪರ್ಯವು 'ಆದಕಾರಣ ಪ್ರಸನ್ನನಾದ ಶ್ರೀವಿಷ್ಣುವಿನಿಂದಲೇ ಮೋಕ್ಷವಾಗುತ್ತದೆಂದು ಪೈಂಗಿಶ್ರುತಿಯು

ವಿ ॥ (1) ಎಲ್ಲಾ ಶಾಸ್ತ್ರಗಳೂ ಶ್ರೀಹರಿಯ ಮಹಿಮೆಯನ್ನು ಹೇಳುತ್ತವೆ, ಮತ್ತು ಶ್ರೀಹರಿಯ ಜ್ಞಾನದಿಂದಲೇ ಮೋಕ್ಷವಾಗುತ್ತದೆಂಬ ವಿಷಯದಲ್ಲಿಯೂ **ಸರ್ವೋತ್ಕರ್ಷೇ** ಎಂಬೀ ವೇದವು ಪ್ರಮಾಣವು (2) ಮೋಕ್ಷವನ್ನು ಹೊಂದಿಸಿಕೊಡುವುದಕ್ಕಾಗಿ ಉಂಟಾದ ಎಲ್ಲಾ ವೇದಗಳಿಗೆ ಶ್ರೀಹರಿಗೆ ಪ್ರೀತಿಯನ್ನುಂಟುಮಾಡುವ ಶ್ರೀಭಗವಂತನು ಗುಣಪೂರ್ಣನೆಂಬ ಜ್ಞಾನವನ್ನು ಹುಟ್ಟಿಸುವುದರಲ್ಲಿಯೇ ಮುಖ್ಯ ತಾತ್ಪರ್ಯವು ॥ ೧೫ ॥

**ತಾ ॥ (೧) ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ ॥ (೨) ಅನಂತಗುಣಮಾಹಾತ್ಮ್ಯೋ ನಿರ್ದೋಷೋ ಭಗವಾನ್ಹರಿಃ । ನ ಸಮೋ ವಾಽಧಿಕೋ ವಾಽಪಿ ವಿದ್ಯತೇ ತಸ್ಯ ಕಶ್ಚನ । ನಾಸೀನ್ನ ಚ ಭವಿಷ್ಯೋ ವಾ ಪರತಃ ಸ್ವತ ಏವ ಚ । ಇತ್ಯಾದಿಶ್ರುತೇಶ್ಚ ॥ (೩) ಯಸ್ತ್ವಾತ್ಮರತಿರೇವ ಸ್ಯಾದಿತ್ಯಾದಿ ತು ಮುಕ್ತ-ವಿಷಯಂ ॥ (೪) ಯಸ್ತ್ವೇವಾತ್ಮರತೋ ಮುಕ್ತಃ ಕಾರ್ಯಂ ತಸ್ಯೈವ ನಾಸ್ತಿ ಹಿ । ತಸ್ಮಾತ್ಕುರ್ವೀತ(ರ್ವೇವ) ಕರ್ಮಾಣೀತ್ಯಾಹ ಕೃಷ್ಣೋಽರ್ಜುನಂ ಸ್ಮಯನ್॥ ಇತಿ ಚ ಸ್ಕಾಂದೇ ॥ ೧೬ ॥**

ಅ ॥ (೧) (ಎಲೋ ವಿಷ್ಣುವೇ ನೀನು) ಮಾತ್ರಯಾ ಪರಃ=ಜ್ಞಾನಕ್ಕೆ ಅಗೋಚರನು, ಅಪರಿಮಿತ ಮಹಿಮೆಯುಳ್ಳವನು, ತನ್ವಾ ವೃಧಾನ=(ಕೀರ್ತ್ಯಾದಿಗಳಿಂದ ಮಾತ್ರ ಪೂರ್ಣನೆಂದಲ್ಲ) ಶರೀರದಿಂದಲೇ ಪೂರ್ಣನಾಗಿರುತ್ತಿ (ಆದಕಾರಣ) ತೇ=ನಿನ್ನ, ಮಹಿತ್ವಂ=ಮಹಿಮೆಯನ್ನು, (ಬೇರೆಯವರು) ನಾನ್ವಶ್ನುವಂತಿ=ಹೊಂದುವುದೇ ಇಲ್ಲ (೨) ಪೂಜ್ಯನಾದ ಶ್ರೀ ಹರಿಯು ಅನಂತಾನಂತ ಗುಣಗಳೂ ಮಹಿಮೆಗಳೂ ಉಳ್ಳವನು, ಯಾವ ದೋಷವೂ ಇಲ್ಲದವನು, ಪರತಃ=ಬ್ರಹ್ಮಾದಿಗಳ ವರಬಲದಿಂದಲಾಗಲೀ

ಆವೇಶಾದಿಗಳಿಂದಲಾಗಲೀ, ಸ್ವತ ಏವ ಚ-ತಪಸ್ಸು ಮೊದಲಾದ ತನ್ನ ಸಾಮರ್ಥ್ಯದಿಂದಲಾಗಲೀ ಯಾರೊಬ್ಬನೂ ಶ್ರೀಹರಿಗೆ ಸಮಾನಿಕನಾಗಲೀ ಅಧಿಕನಾಗಲೀ ಇಲ್ಲವೇ ಇಲ್ಲ ಹಿಂದೆ ಇರಲಿಲ್ಲ ಮುಂದೆಯೂ ಇರಲಾರನು, ಇದು ಮೊದಲಾದ ವೇದಗಳಿಂದ ಶ್ರೀ ಹರಿಗೆ ಸಮಾನಿಕನೂ ಅಧಿಕನೂ ಇಲ್ಲವೆಂದು ಸಿದ್ಧವಾಗುತ್ತದೆ (೩) (ಜ್ಞಾನಿಗಳೂ ಕರ್ಮ ಮಾಡಬೇಕು, ಅದರಿಂದ ಆನಂದಾಧಿಕ್ಯವುಂಟಾಗುತ್ತದೆಂದು ಹೇಳಿದ್ದು ಯುಕ್ತವಲ್ಲ ಏಕೆಂದರೆ– **ಯಸ್ತ್ವಾತ್ಮರತಿರೇವ, ತಸ್ಯ ಕಾರ್ಯಂ ನ ವಿದ್ಯತೇ** ಎಂಬುವುದರಿಂದ ಕರ್ತವ್ಯಕರ್ಮವು ಯಾವುದೂ ಇಲ್ಲವೆಂದೂ, **ನೈವ ತಸ್ಯ ಕೃತೇನಾರ್ಥಃ** ಎಂಬುವುದರಿಂದ ಫಲವಿಲ್ಲವೆಂದೂ **ನಾಕೃತೇನೇಹ ಕಶ್ಚನ** ಎಂಬುವುದರಿಂದ ಮಾಡದಿದ್ದರೆ ಅನರ್ಥವಿಲ್ಲವೆಂದೂ ಹೇಳಿದೆ, ಎಂದರೆ—) **ಯಸ್ತ್ವಾತ್ಮರತಿರೇವ ಸ್ಯಾತ್** ಇತ್ಯಾದಿಗಳು ಮುಕ್ತರನ್ನು ಹೇಳುತ್ತವೆ (೪) (ಸ್ಮೃತಿ ರೂಪ ಪ್ರಮಾಣದಿಂದಲೂ ಇದು ಮುಕ್ತರನ್ನು ಹೇಳುತ್ತದೆನ್ನುತ್ತಾರೆ—)ಯಾವಾತನು ಶ್ರೀಹರಿಯಲ್ಲಿಯೇ ಆಸಕ್ತನಾಗಿ ಮೋಕ್ಷವನ್ನು ಹೊಂದಿದವನೋ, ಆತನಿಗೆ ಮಾತ್ರ ಕರ್ತವ್ಯಕರ್ಮವು ಇಲ್ಲ ಆದಕಾರಣ ಜ್ಞಾನಿಗಳು ಕರ್ಮಗಳನ್ನು ಮಾಡಲೇಬೇಕು ಹೀಗೆ ಶ್ರೀ ಕೃಷ್ಣನು ನಗುತ್ತಾ ಅರ್ಜುನನಿಗೆ ಹೇಳಿದನು ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ

ವಿ || (1) **ಯಸ್ತ್ವಾತ್ಮರತಿರೇವ** ಇತ್ಯಾದಿಗಳಿಂದ ಜ್ಞಾನಿಗಳು ಕರ್ಮಾದಿಗಳನ್ನು ಮಾಡಬೇಕಾಗಿಲ್ಲ, ಎಂದು ಸಿದ್ಧಿಸುವುದಿಲ್ಲ ಏಕೆಂದರೆ **ವಿಷ್ಣುಪ್ರಸಾದಾದ ತಿಮಾನ್** ಇತ್ಯಾದಿ ಪ್ರಮಾಣಗಳಿಂದ ಆತ್ಮರತಿತ್ವಾದಿ ವಿಶೇಷಣಗಳು ಮುಕ್ತರಲ್ಲಿಯೇ ಮುಖ್ಯಗಳಾಗಿವೆ ಮತ್ತು ಪೂರ್ವೋತ್ತರ ವಾಕ್ಯಗಳನ್ನು ನೋಡುವಾಗಲೂ ಇದು ಮುಕ್ತರನ್ನೇ ಹೇಳುತ್ತದೆ ಆದುದರಿಂದ ಮುಕ್ತರು ಕರ್ಮ ಮಾಡಬೇಕಾಗಿಲ್ಲ, ಎಂದು ಅರ್ಥವು ಜ್ಞಾನಿಗಳು ಕರ್ಮ ಮಾಡುವುದು ಬೇಡವೆಂದು ಅರ್ಥವು ಸಿದ್ಧವಾಗುವುದಿಲ್ಲ (2) ಗೀತಾಭಾಷ್ಯದಲ್ಲಿ **ಆತ್ಮರತಿರೇವ** ಎಂದು ಏವಶಬ್ದಪ್ರಯುಕ್ತ ಅಸಂಪ್ರಜ್ಞಾತಸಮಾಧಿಯಲ್ಲಿದ್ದವನಿಗೇನೇ ಕರ್ತವ್ಯಕರ್ಮವಿಲ್ಲವೆಂದು ಅರ್ಥ ಹೇಳಿದ್ದರಿಂದ ಮುಕ್ತರನ್ನು ಹೇಳುತ್ತದೆಂದು ಹೇಳುವುದು ಹೇಗೆ? ಎಂದರೆ-- ಇಲ್ಲಿ ಸರ್ವಥಾ ದೇಹಾದ್ಯಭಿಮಾನವನ್ನು ಬಿಟ್ಟಿರುವುದರಿಂದ ಅಸಂಪ್ರಜ್ಞಾತ ಸಮಾಧಿಯಲ್ಲಿದ್ದವನೂ ಮುಕ್ತನೆನಿಸುತ್ತಾನೆ || ೧೭ ||

ಪೀ – **ಜ್ಞಾನಯೋಗೇನ** ಎಂಬಲ್ಲಿ ಜ್ಞಾನಿಗಳಿಗೆ ಕರ್ಮವಿಲ್ಲವೆಂದು ಹೇಳಿದ ಕಾರಣ ಜ್ಞಾನಿಗಳು ಕರ್ಮ ಮಾಡುವುದು ಯುಕ್ತವಲ್ಲವೆಂದರೆ--

**ತಾ || (೧)ಜ್ಞಾನಯೋಗೇನ ಸಾಂಖ್ಯಾನಾಂ(೩-೩) ಇತ್ಯಾದಿ ತು (ಚ) ಬಾಹ್ಯಕರ್ಮಸಂಕೋಚಾಪೇಕ್ಷಯಾ||(೨)ನ ಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್(೩-೫) | ಶರೀರಯಾತ್ರಾಽಪಿ ಚ ತೇ ನ ಪ್ರಸಿಧ್ಯೇದಕರ್ಮಣಃ (೩-೮) || (೩) ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ | ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಂ (೧೮-೬) || (೪) ಜ್ಞಾನೀ ಚ ಕರ್ಮಾಣಿ ಸದೋದಿತಾನಿ ಕುರ್ಯಾದಕಾಮಃ ಸತತಂ ಭವೇತ || (೫) ನ ಸರ್ವಕರ್ಮಣಾಂ ತ್ಯಾಗಃ ಕಸ್ಯಚಿದ್ಭವತಿ ಕ್ವಚಿತ್ | ತ್ಯಾಗಿನೋ ಯತಯೋಽಪಿ ಸ್ಯುಃ ಸಂಕೋಚಾದ್ಬಾಹ್ಯಕರ್ಮಣಾಂ || ಇತ್ಯಾದಿ || (೬) ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ (೪-೩೪) | ಇತ್ಯಾದಿ ಚೋಕ್ತನ್ನಜ್ಞಾನತಿರೋಭಾವನಿವೃತ್ತ್ಯರ್ಥಂ || ೧೦ || || ೧೭ ||**

ಅ || (೧) **ಜ್ಞಾನಯೋಗೇನ ಸಾಂಖ್ಯಾನಾಂ** ಇದುಮೊದಲಾದ ವಾಕ್ಯವು ಜ್ಞಾನಪ್ರಧಾನರಾದ ದೇವತೆಗಳಿಗೂ, ಸನಕಾದಿ ಯತಿಗಳಿಗೂ ಜಪ ಧ್ಯಾನಾದಿಗಳಿಂದ ಮುಕ್ತಿಯು ಬಾಹ್ಯ ಕರ್ಮಗಳನ್ನು ಸಂಕೋಚಮಾಡಿಕೊಳ್ಳಬೇಕು ಕರ್ಮಕ್ಕಿಂತ ಜ್ಞಾನವು ಹೆಚ್ಚು ಬೇಕು ಕರ್ಮಬೇಡವೆಂದಲ್ಲ, ಜ್ಞಾನದಿಂದಲೇ ಮೋಕ್ಷವಾಗುತ್ತದೆಂದು ಹೇಳುತ್ತದೆ (೨) (ಜ್ಞಾನಿಗಳಿಗೆ ಕರ್ಮವೇ ಇಲ್ಲವೆಂದು ಏಕೆ ಹೇಳಬಾರದು? ಎಂದರೆ-) ಯಾರೊಬ್ಬನೂ ಯಾವಾಗಲೂ ಯಾವ ಅವಸ್ಥೆಯಲ್ಲಿಯೂ ಕ್ಷಣಕಾಲದಲ್ಲಿಯೂ ಕರ್ಮ ಮಾಡದಿದ್ದವನು ಇಲ್ಲ ಕರ್ಮ ಮಾಡದಿರುವವನಿಗೆ ದೇಹರಕ್ಷಣೆಯೂ ಆಗಲಾರದು (೩) ನಾನೇ ಕರ್ತನೆಂಬ ಅಭಿಮಾನವನ್ನು ಪ್ರಯೋಜನಾಪೇಕ್ಷೆಯನ್ನು ತೊರೆದು ಯಜ್ಞಮೊದಲಾದ ಕರ್ಮಗಳನ್ನು ಮಾಡಲೇಬೇಕು ಹೀಗೆ ನಿಶ್ಚಿತವಾದ ನನ್ನ ಉತ್ತಮವಾದ ಮತವು (೪) ಯಾರಿಗೂ ಕರ್ಮ ಬಿಡಲಿಕ್ಕೆ ಅಸಾಧ್ಯವಾಗಿರುವುದರಿಂದ ಜ್ಞಾನಿಯೂ ಕೂಡ ವಿಹಿತ ಕರ್ಮಗಳನ್ನು ಸದಾ ಮಾಡುತ್ತಿರಲೇಬೇಕು ಸರ್ವಕರ್ಮಪರಿತ್ಯಾಗವು ಯಾರಿಗೂ ಶಕ್ಯವಲ್ಲ (೫) ಯಾರೊಬ್ಬನೂ ಎಲ್ಲಾ ಕರ್ಮಗಳನ್ನು ಬಿಡಬಾರದು ಬಾಹ್ಯ ಕರ್ಮಗಳನ್ನು ಬಿಡುವುದರಿಂದ ಯತಿಗಳೂ ತ್ಯಾಗಿಗಳೆನಿಸುತ್ತಾರೆ (೬) (**ಉಪದೇಕ್ಷ್ಯಂತಿ ತೇ** ಎಂದು ಅರ್ಜುನನಿಗೆ ತತ್ವೋಪದೇಶವನ್ನು ಮಾಡುವರೆಂದು ಹೇಳಿದ್ರಿಂದ ಅರ್ಜುನನು ಜ್ಞಾನಿಯೆಂಬು ಹೇಳಿದ್ದು ಯುಕ್ತವಲ್ಲವೆಂದರೆ—) ತತ್ವವನ್ನರಿತ ಜ್ಞಾನಿಗಳು ನಿನಗೆ ಜ್ಞಾನಸಾಧನವನ್ನು ಉಪದೇಶಿಸುತ್ತಾರೆ, ಇದುಮೊದಲಾದುದು ಒಮ್ಮೆ ಹುಟ್ಟಿದಜ್ಞಾನವು ಮರೆತಲ್ಲಿ ಆ ಮರೆವನ್ನು ನಿವಾರಿಸಲಿಕ್ಕೆ ಉಪದೇಶಿಸುತ್ತಾರೆಂದು ಹೇಳಿದ್ದು (ಮೊದಲು 'ಇಲ್ಲದಿದ್ದ ಜ್ಞಾನವು ಹುಟ್ಟುವುದಕ್ಕಾಗಿ ಉಪದೇಶಿಸುವರೆಂದಲ್ಲ ) || ೧೦ || || ೧೬ ||

**ಉಪೋದ್ಘಾತವು ಮುಗಿಯಿತು.**

ಹೀ—ಶ್ರೀ ಭಗವಂತನ ಮಾಹಾತ್ಮ್ಯಜ್ಞಾನ ಭಕ್ತಿಗಳಿಂದ ಆಯಾಯ ಜಾತಿಗೆ ವಿಹಿತವಾದ ಆಚರಣೆಯೇ ಮುಖ್ಯ ಭಗವದಾರಾಧನೆಯಾದುದರಿಂದ ಕ್ಷತ್ರಿಯನಾದ ಅರ್ಜುನನಿಗೆ ಭಗವದ್ವೇಷಿಗಳ ಸಂಹಾರವು ಪರಮಧರ್ಮವ, ಅದನ್ನು ಬಾಂಧವರೆಂಬ ಸ್ನೇಹದಿಂದ ಅಧರ್ಮವೆಂದು ಸಂದೇಹಪಡುತ್ತಿರುವ ಅರ್ಜುನನಿಗೆ ಭಗವದ್ವೇಷಿಗಳ ಸಂಹಾರವೇ ಪರಮಧರ್ಮವು, ವಿರುದ್ಧವಾದುದೆಲ್ಲವೂ ಅಧರ್ಮವೆಂದು ಸಂಪೂರ್ಣ ಗೀತೆಯಿಂದ ಶ್ರೀಕೃಷ್ಣನು ಉಪದೇಶಿಸಿಸುವವನಾಗಿ ಬುಡದಲ್ಲಿ ನಿನಗೆ ವಿಚಾರವಿಲ್ಲದೆ ಶೋಕವೆನ್ನುತ್ತಾನೆ—

ಗೀ || **ಶ್ರೀಭಗವಾನುವಾಚ**

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ |**
**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ || ೧೧ ||**

ಅ || ಶ್ರೀಕೃಷ್ಣನು (ಅರ್ಜುನನಿಗೆ) ಉಪದೇಶಿಸುತ್ತಾನೆ (ಎಲೋ ಅರ್ಜುನನೇ! ತ್ವಂ=ನೀನು, ಅಶೋಚ್ಯಾನ್ ಶೋಚಿಸಲಿಕ್ಕೆ ಅನರ್ಹರಾದ ಭೀಷ್ಮಾದಿಗಳ ವಿಷಯದಲ್ಲಿ, ಅನ್ವಶೋಚಃ=ಶೋಚಿಸಿರುತ್ತಿ ಪ್ರಜ್ಞಾವಾದಾಂಶ್ಚ=ನಿನ್ನ ಬುದ್ಧಿಯಿಂದ ಮಾತ್ರ ಕಲ್ಪಿತಗಳಾದ (ಶಾಸ್ತ್ರವಿರುದ್ಧಗಳಾದ) ಮಾತುಗಳನ್ನು ಅಥವಾ ಪ್ರಾಜ್ಞರಿಗೆ ಸಮ್ಮತಗಳಾಗದ ಮಾತುಗಳನ್ನು, ಭಾಷಸೇ=ಆಡುತ್ತಿದ್ದಿ (ಪ್ರಾಣ ಬಿಡಲು ಸಿದ್ಧರಾದ ಬಂಧುಗಳು ಶೋಚಿಸಲಿಕ್ಕೆ ಅರ್ಹರು ಏಕೆ ಆಗುವುದಿಲ್ಲವೆಂದರೆ—) ಪಂಡಿತಾಃ=ಜ್ಞಾನಿಗಳು ಗತಾಸೂನ್=ಪ್ರಾಣಬಿಡಲು ಸಿದ್ಧರಾದ ಬಂಧುಗಳನ್ನು, ಅಗತಾಸೂಂಶ್ಚ=ಜೀವಿಸುತ್ತಿರುವ ಜನರನ್ನೆಂಬಂತೆ,

ನಾನುಶೋಚಂತಿ=ಶೋಕಿಸುವುದಿಲ್ಲ (ಆದಕಾರಣ ದುಃಖಿಸಬೇಡ ಪಾಪವು ಬರುತ್ತದೆಂಬ ಸಂಶಯದಿಂದ ಯುದ್ಧ ಮಾಡದಿರುವುದು ಯುಕ್ತವಲ್ಲ) ॥ ೧೧ ॥

ಹೀ— **ಪ್ರಜ್ಞಾವಾದಾನ್** ಎಂಬುದಕ್ಕೆ ಬುದ್ಧಿವಂತರ ಮಾತುಗಳನ್ನು, ಎಂದು ಶಂಕರಾಚಾರ್ಯರು ಅರ್ಥ ಹೇಳಿರುವರು ಅದು ಯುಕ್ತವಲ್ಲ **ದೃಷ್ಟ್ವೇಮಂ ಸ್ವಜನಂ** ಇದುಮೊದಲಾದ ಅರ್ಜುನನ ವಾಕ್ಯಗಳಲ್ಲಿ ಪ್ರಾಜ್ಞರ ಮಾತು ಯಾವುದೊಂದೂ ಕಾಣುವುದಿಲ್ಲ ಏಕೆಂದರೆ--ಬುದ್ಧಿಯುಳ್ಳವರು ಭಗವದ್ದ್ವೇಷಿಗಳ ನಿಗ್ರಹವನ್ನು ಅಧರ್ಮವೆಂದು ಹೇಳುವುದಿಲ್ಲವಷ್ಟೆ ಧರ್ಮಾಧರ್ಮಗಳ ವಿಚಾರವದೆ ಎಂದರೆ— ಅವುಗಳ ವಿಚಾರವನ್ನು ಮಾತ್ರ ಮಾಡಿದ್ದರಿಂದ ಪ್ರಾಜ್ಞರ ವಾದಗಳೆಂದು ಹೇಳಕೂಡದು ಹಾಗೆ ಹೇಳುವುದಾದರೆ— **ಅಹಿಂಸಾ ಪರಮೋ ಧರ್ಮಸ್ತ್ವಧರ್ಮಃ ಪ್ರಾಣಿನಾಂ ವಧಃ** ಇತ್ಯಾದಿ ಧರ್ಮಾಧರ್ಮಗಳನ್ನು ಹೇಳುವ ಬೌದ್ಧಾದಿಗಳ ಉಪದೇಶವೂ ಪ್ರಾಜ್ಞರ ವಾದವೆಂದೆನ್ನಬೇಕಾದೀತು, ಎಂದರೆ—

**ಭಾ ॥ ಪ್ರಜ್ಞಾವಾದಾನ್ ಸ್ವಮನೀಷೋತ್ಥವಚನಾನಿ । ಕಥಮಶೋಚ್ಯಾಃ । ಗತಾಸೂನ್ ॥ ೧೧ ॥**

ಅ ॥ ತನ್ನ ಬುದ್ಧಿಯಿಂದಲೇ ಹುಟ್ಟಾಗತಕ್ಕ ಮಾತುಗಳನ್ನು (ಶಾಸ್ತ್ರ, ಆಚಾರ್ಯರ ಉಪದೇಶಗಳಿಂದ ಬಂದವುಗಳಲ್ಲ) (ಯಾರ ವಿಷಯದಲ್ಲಿ ಶೋಕಿಸುತ್ತೀಯೋ, ಅವರು ದುಃಖಿಸಿಕೊಳ್ಳಲಿಕ್ಕೆ ಯೋಗ್ಯರಲ್ಲ, ಆದುಕಾರಣ ಅವರ ವಿಷಯದಲ್ಲಿ ಶೋಕ ಮಾಡಬೇಡ) (ಯಾವ ಮಾತುಗಳನ್ನು ನೀನು ಆಡುತ್ತೀಯೋ ಅವುಗಳು ಸ್ವೇಚ್ಛಾನುಸಾರವಾಗಿಯೇ ಕಲ್ಪಿತಗಳು ಅಂತಹುಗಳನ್ನು ಮಾತಾಡಬೇಡ) ಅಶೋಚ್ಯರು ಹೇಗೆಂದರೆ -ಪ್ರಾಣ ಹೋಗಲು ಸಿದ್ಧರಾದವರನ್ನು ॥ ೧೧ ॥

ಹೀ—ಹೀಗೆ ಸಂಕ್ಷೇಪವಾಗಿ ಗೀತೆಯ ತಾತ್ಪರ್ಯವನ್ನು ಹೇಳಿ ವಿಸ್ತರವಾಗಿ ಹೇಳಲಿಚ್ಛಿಸುತ್ತಾ ೧ನೇ ಅಧ್ಯಾಯ, ೨ನೇ ಅಧ್ಯಾಯದಲ್ಲಿ ೧೧ ಶ್ಲೋಕಗಳ ವರಗಿನ ಅರ್ಥವು ಸ್ಪಷ್ಟನಾಗಿರುವುದರಿಂದ ಅದನ್ನು ಸಂಗ್ರಹಿಸಿ ಹೇಳೋಣವರಿಂದಲೇ ವ್ಯಾಖ್ಯಾನ ಮಾಡಿದಂತೆಯೇ ಆಯಿತೆಂದು ತಿಳಿದು **ಪ್ರಜ್ಞಾವಾದ** ಎಂಬ ಪದದ ಅರ್ಥ ಹೇಳುತ್ತಾರೆ –

**ತಾ ॥ (೧) ಪ್ರಕರ್ಷೇಣ ಜಾನಂತೀತಿ ಪ್ರಜ್ಞಾಃ ತದವಾದಃ ಪ್ರಜ್ಞಾವಾದಃ ॥ (೨) ಪ್ರಾಜ್ಞಮತವಿರುದ್ಧವಾದಂ ವದಸಿ । ಕಥಂ । ಗತಾಸೂನ್ ॥ ೧೧ ॥**

ಅ ॥ (೧) ಚೆನ್ನಾಗಿ ತಿಳಿದವರು ಪ್ರಜ್ಞರು ಅವರ ವಾದಕ್ಕೆ ವಿರುದ್ಧವಾದುದು ಪ್ರಜ್ಞಾವಾದವು- ಅಂದರೆ ಪ್ರಾಜ್ಞರ ಮತಕ್ಕೆ ವಿರುದ್ಧವಾದ ಮಾತನ್ನು ಹೇಳುತ್ತಿ (೨) (ಸಾಯಲಿಕ್ಕೆ ಸಿದ್ಧರಾದವರು ಅಶೋಚ್ಯರು) ಹೇಗೆ? (ಎಂದರೆ—ಪಂಡಿತರು ಜೀವಿಸಿಕೊಂಡಿರುವವರ ವಿಷಯದಲ್ಲಿ ಹೇಗ ದುಃಖಿಸುವುದಿಲ್ಲವೋ, ಹಾಗೆಯೇ) ಪ್ರಾಣಹೋಗಲು ಸಿದ್ಧರಾದವರ ವಿಷಯವಾಗಿ (ದುಃಖಿಸುವುದಿಲ್ಲ) ॥ ೧೧ ॥

ಹೀ—ಭೀಷ್ಮದ್ರೋಣಾದಿಗಳಿಗೆ ಯುದ್ಧದಲ್ಲಿ ನಾಶ ಬರಬಹುದಾದುದರಿಂದ ಅವರೂ ಏಕೆ ಶೋಚಿಸಲಿಕ್ಕೆ ಅರ್ಹರಲ್ಲವೆಂದು ಅರ್ಜುನನ ಆಕ್ಷೇಪಕ್ಕೆ ಶ್ರೀ ಕೃಷ್ಣನು ಭೀಷ್ಮಾದಿಗಳ ಸ್ವರೂಪವು ನಿತ್ಯವಾದ ಕಾರಣ ಅದಕ್ಕೆ ಸರ್ವಥಾ ನಾಶವಿಲ್ಲ ಆದಕಾರಣ ದುಃಖಿಸಬೇಡ ಎಂದನು ಜೀವರು ನಾಶವಿಲ್ಲದವರು ನಿತ್ಯರು ಹೇಗೆಂದರೆ—

**ಗೀ ॥ ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಂ ॥ ೧೨ ॥**

**ಅ ॥** ಅಹಂ= ನಾನು, ಜಾತು= ಯಾವ ಕಾಲದಲ್ಲಿಯೂ, ನಾಸಮಿತಿ ನ= ಇರಲಿಲ್ಲವೆಂದಲ್ಲ ತು= ಮತ್ತೆ ಆಸಮೇವ= ಯಾವಾಗಲೂ ನಿಶ್ಚಯವಾಗಿಯೂ ಇರುತ್ತೇನೆ ತ್ವಂ= ನೀನು, ನಾಸೀರಿತಿ ನ= ನೀನೂ ಯಾವಾಗಲೂ ಇರಲಿಲ್ಲವೆಂದಲ್ಲ, (ಸರ್ವದಾ ಇರುತ್ತಿ) ಇಮೇ ಜನಾಧಿಪಾಃ= ಈ ರಾಜರೂ ಕೂಡ, ನಾಸುರಿತಿ ನ= ಇರಲಿಲ್ಲವೆಂದಲ್ಲ (ಸರ್ವದಾ ಇರುವರು) (ಅರ್ಜುನನೇ ನಾನೂ ನೀನೂ ಎಲ್ಲಾ ಜೀವರೂ ಅನಾದಿಕಾಲದಿಂದಲೂ ಹಿಂದೆಯೂ ಈಗಲೂ ಇರುತ್ತೇವೆ) ಅತಃಪರಂ= ಇನ್ನು ಮುಂದೆಯೂ ವಯಂ ಸರ್ವೇ= ನಾವೆಲ್ಲರೂ, ನ ಭವಿಷ್ಯಾಮ ಇತಿ ನ ಚೈವ= ಇರುವುದಿಲ್ಲವೆಂದಲ್ಲ (ಮುಂದೆಯೂ ಇರುವೆವು) (ಆದಕಾರಣ ಭೀಷ್ಮ ದ್ರೋಣಾದಿಗಳ ಜೀವವು ನಿತ್ಯವಾದಕಾರಣ ಅವರ ವಿಷಯದಲ್ಲಿ ದುಃಖಿಸಬೇಡ) ॥ ೧೨ ॥

**ಭಾ ॥ (೧) ಕಿಮಿತಿ ॥ (೨) ನ ತ್ವೇವಾಹಂ ॥ (೩) ಈಶ್ವರನಿತ್ಯತ್ವಸ್ಯಾಪ್ರಸಿದ್ಧತ್ವಾದ್ದೃಷ್ಟಾಂತತ್ವೇನಾಹ । ನ ತ್ವೇವೇತಿ । ಯಥಾಹಂ ನಿತ್ಯಃ ಸರ್ವವೇದಾಂತೇಷು ಪ್ರಸಿದ್ಧಃ ಏವಂ ತ್ವಮೇತೇ ಜನಾಧಿಪಾಶ್ಚ ನಿತ್ಯಾಃ ॥ ೧೨ ॥**

**ಅ ॥** (೧) (ಜ್ಞಾನಿಗಳೂ ಕೂಡ ಜೀವಿಸುತ್ತಿರುವವರನ್ನೆಂಬಂತೆ ಪ್ರಾಣ ಬಿಡಲು ಸಿದ್ಧರಾದವರನ್ನು ದುಃಖಿಸುವುದಿಲ್ಲವೆಂಬುದು) ಯಾವ ಕಾರಣದಿಂದ (೨) (ಎಂದರೆ ಜೀವರು ನಿತ್ಯರಾಗಿರುವ ಪ್ರಯುಕ್ತ ಜೀವರಿಗೆ ನಿತ್ಯತ್ವವು ಹೇಗೆಂದರೆ) **ನ ತ್ವೇವಾಹಂ** ಎಂದು ಹೇಳುತ್ತಾರೆ (ಇಲ್ಲಿ ಶ್ರೀಕೃಷ್ಣನು ನಿತ್ಯನೆಂದೂ ಈಶ್ವರನೆಂದೂ ತಿಳಿಯದವರಿಗೆ ಶ್ರೀಕೃಷ್ಣನಿಗೂ ನಿತ್ಯತ್ವವನ್ನು ಸಾಧಿಸಿಕೊಡಬೇಕು) (೩) (ಶ್ರೀಕೃಷ್ಣನು ನಿತ್ಯನೆಂದು ತಿಳಿದುಕೊಂಡು ಜೀವರು ನಿತ್ಯರೆಂದು ತಿಳಿಯದವರಿಗೆ ಬೇರೆ ರೀತಿಯಾಗಿ ಅರ್ಥ ಹೇಳುತ್ತಾರೆ—) ಈಶ್ವರನಾದ ಶ್ರೀಕೃಷ್ಣನು ನಿತ್ಯನೆಂಬ ವಿಷಯದಲ್ಲಿ ಸಂದೇಹವಿಲ್ಲವೆ ನಿಶ್ಚಯವಿರುವುದರಿಂದ (ಜೀವರಿಗೆ ನಿತ್ಯತ್ವವನ್ನು ಸಾಧಿಸುವಾಗ ಶ್ರೀಕೃಷ್ಣನನ್ನು) **ನ ತ್ವೇವಾಹಂ** ಎಂದು ದೃಷ್ಟಾಂತವಾಗಿ ಹೇಳಿರುತ್ತಾರೆ ಹೇಗೆ ನಾನು ನಿತ್ಯನೆಂದು ಎಲ್ಲಾ ಉಪನಿಷತ್ತುಗಳಲ್ಲಿ ಪ್ರಸಿದ್ಧನಾಗಿರುತ್ತೇನೋ, ಹಾಗೆಯೇ ನೀನೂ ಈ ರಾಜರೂ ಎಲ್ಲರೂ ನಿತ್ಯರು ॥ ೧೨ ॥

**ಪೀ** —ಬಂಧುಗಳಲ್ಲಿ ಸ್ನೇಹವಿದ್ದ ಪ್ರಯುಕ್ತ ಅವರು ಮರಣಹೊಂದುತ್ತಾರೆಂಬ ಭಯದಿಂದ ಯುದ್ಧ ಮಾಡುವುದಿಲ್ಲವೆಂದು ಅರ್ಜುನನು ಹೇಳಿದ ಕಾರಣ **ನ ಯೋತ್ಸ್ಯೇ** ಎಂಬ ವಾಕ್ಯವು ಪ್ರಾಜ್ಞರ ಮತಕ್ಕೆ ವಿರುದ್ಧವಾಗುವುದು ಹೇಗೆ? ಎಂಬ ಎರಡನೇ ಆಕ್ಷೇಪವನ್ನು ಪರಿಹರಿಸುತ್ತಾರೆ

**ತಾ ॥ (೧) ಬಂಧುಸ್ನೇಹಾದ್ಧಿ ತ್ವಯಾ ಸ್ವಧರ್ಮನಿವೃತ್ತಿಃ ಕ್ರಿಯತೇ ॥ (೨) ತತ್ರ ದೇಹನಾಶಭಯಾತ್ಕಿಂ ವಾ ಚೇತನನಾಶಭಯಾತ್ । ದೇಹಸ್ಯ ಸರ್ವಥಾ ವಿನಾಶಿತ್ವಾನ್ನ ತತ್ರ ಭಯೇ ಪ್ರಯೋಜನಂ ॥ (೩) ನ ಚ ಚೇತನನಾಶಭಯಾತ್ । ತಸ್ಯಾವಿನಾಶಿತ್ವಾದೇವ ॥ (೪) ನ ತಾವತ್ಪರಮಚೇತನಸ್ಯ ಮಮ ನಾಶೋಽಸ್ತಿ । ಏವಮೇವ ತವಾನ್ಯೇಷಾಂ ಚ ॥ (೫) ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್ । ಇತ್ಯಾದಿಶ್ರುತೇಃ ॥ ೧ ॥**

ಅ || (೧) (ಅರ್ಜುನನೇ, ಬಾಂಧವರಲ್ಲಿ ಸ್ನೇಹವಿರುವುದರಿಂದ ಅವರಿಗೆ ಸಾವು ಬರುತ್ತದೆಂಬ ಭಯದಿಂದ ತನಗೆ (ಕ್ಷತ್ರಿಯರಿಗೆ) ಶಾಸ್ತ್ರಗಳ ವಿಹಿತಗಳಾದ ಯುದ್ಧ ಮೊದಲಾದ ಸ್ವಧರ್ಮಗಳನ್ನು ಬಿಡುತ್ತಿಯಷ್ಟೆ (೨) (ಅಹುದೆಂದು ಅರ್ಜುನನು ಒಪ್ಪಿಕೊಂಡರೆ) ಯುದ್ಧದಲ್ಲಿ (1) ಬಂಧುಗಳ ದೇಹವು ನಾಶವಾಗುತ್ತದೆಂಬ ಭಯದಿಂದ ಯುದ್ಧವನ್ನು ಬಿಡುವುದೋ, (2) ಅಥವಾ ಜೀವನು ನಾಶಹೊಂದುತ್ತಾನೆಂಬ ಭಯದಿಂದಲೋ? (ಇವುಗಳಲ್ಲಿ 1ನೇದ್ದು ಕೂಡ ಸರಿಯಿಲ್ಲವೆನ್ನುವುದಕ್ಕಾಗಿ ದೇಹಿನಃ ಎಂಬ ಶ್ಲೋಕದ ತಾತ್ಪರ್ಯ ಹೇಳುತ್ತಾರೆ—) ದೇಹವು ಸರ್ವಥಾ ನಾಶವನ್ನೇ ಹೊಂದುವ ಪ್ರಯುಕ್ತ ದೇಹನಾಶವಾಗುವುದೆಂಬ ಭಯದಿಂದ ತನ್ನ ಧರ್ಮವನ್ನು ಬಿಡುವುದರಿಂದ ಪ್ರಯೋಜನವಿಲ್ಲ (೩) (ಚೇತನರು ಸಾಯುತ್ತಾರೋ ಎಂಬ 2ನೇ ಆಕ್ಷೇಪವನ್ನು ನಿರಾಕರಿಸುವುದಕ್ಕಾಗಿ ನ ತ್ವೇವಾಹಂ ಎಂಬ ಶ್ಲೋಕದ ತಾತ್ಪರ್ಯ ಹೇಳುತ್ತಾರೆ--) ಜೀವರಿಗೆ ಎಂದಿಗೂ ನಾಶವಿಲ್ಲದಿರುವುದರಿಂದಲೇ ಜೀವರು ಸಾಯುತ್ತಾರೆಂಬ ಭಯದಿಂದ ಎಂದೂ ಹೇಳಕೂಡದು (೪) (ದೃಷ್ಟಾಂತವಾಗಿ ನ ತ್ವೇವಾಹಂ ಎಂಬ ಶ್ಲೋಕದ ಅರ್ಥ ಹೇಳುತ್ತಾರೆ) ಸರ್ವೋತ್ತಮನೂ ಸರ್ವಸ್ವತಂತ್ರಚೇತನನೂ ಆದ ನನಗೆ ಯಾವುದೊಂದು ವಿಧವಾದ ನಾಶವೂ ಹೇಗೆ ಇಲ್ಲವೋ, ಹೀಗೆಯೇ ನಿನಗೂ ಬೇರೆ ಜೀವರಿಗೂ ಸ್ವರೂಪತಃ ನಾಶಾದಿಗಳಿಲ್ಲ (೫) ಶ್ರೀಹರಿಯು ನಿತ್ಯವಸ್ತುಗಳಿಗೂ ನಿತ್ಯತ್ವವನ್ನು ಕೊಡುವವನು, ಚೇತನರಿಗೆ ಚೈತನ್ಯವನ್ನು ಕೊಡುವವನು, ಒಬ್ಬನೇ ಎಲ್ಲರಿಗೂ ಅಭೀಷ್ಟಗಳನ್ನು ಕೊಡತಕ್ಕವನು ಇದು ಮೊದಲಾದ ವೇದಗಳಿಂದ ಶ್ರೀಹರಿಗೆ ಪರಮನಿತ್ಯತ್ವವೂ ಚೇತನತ್ವವೂ ಸಿದ್ಧವಾಯಿತು. || ೧ ||

ಟೀ || ಈಶ್ವರನಂತೆ ಜೀವರೂ ನಿತ್ಯರಾದ ಮೇಲೆ- ಈಶ್ವರನಿಗೆ ಏನು ವಿಶೇಷವು? ಎಂದರೆ— ಆ ವಿಶೇಷವನ್ನು ಹೇಳತಕ್ಕ ಸ್ಮೃತಿಯನ್ನು ಹೇಳುತ್ತಾರೆ-

ತಾ || (೧) ಸ್ವದೇಹಯೋಗವಿಗಮೌ(ಮು)ನಾಮ ಜನ್ಮಮೃತೀ ಪುರಾ | ಇಷ್ಯೇತೇ ಹ್ಯೇವ ಜೀವಸ್ಯ ಮುಕ್ತೇರ್ನ ತು ಹರೇಃ ಕ್ವಚಿತ್ | ಇತಿ ಸ್ಕಾಂದೇ || (೨) ಈಶ್ವರಸ್ಯಾಪಿ ಯುದ್ಧಗತತ್ವಾನ್ಮೋಹಾತ್ತಸ್ಯಾಪ್ಯುಭಯವಿಧಾನಿತ್ಯತ್ವಶಂಕಾಪ್ರಾಪ್ತೌ ತದಪಿ ನಿವಾರ್ಯತೇ | ನ ತ್ವೇವಾಹ(ಹಂ ಜಾತು ನಾಸ)ಮಿತಿ || (೩) ಯದ್ಯಪ್ಯೇಷಾ ಶಂಕಾಽರ್ಜುನಸ್ಯ ನಾಸ್ತಿ ತಥಾಽಪಿ ಪ್ರಾಪ್ತಲೋಕೋಪಕಾರಾರ್ಥಂ ಭಗವತಾ ನಿವಾರ್ಯತೇ (೪) ಏಕಾಂತೇ ಕಥಯನ್ನಪಿ ವ್ಯಾಸರೂಪೇಣ ತದೇವ ಲೋಕೇ ಪ್ರಕಾಶಯಿಷ್ಯನ್ನಿತಿ || ೨ || || ೧೨ ||

ಅ || (೧) ಜೀವರಿಗೆ ಮೋಕ್ಷವಾಗುವುದಕ್ಕಿಂತ ಮೊದಲು ತಮ್ಮ ಶರೀರದ ಸಂಬಂಧವೂ ಜನ್ಮ, ದೇಹವಿಯೋಗವೆಂಬ ಸಾವು ಇರುತ್ತವೆ ಶ್ರೀಹರಿಗೆ ಎಲ್ಲಿಯೂ ಸರ್ವಥಾ ಜನನಮರಣಗಳು ಇಲ್ಲವೇ ಇಲ್ಲ (ಅನಾದಿನಿತ್ಯನು ಇದರಿಂದ ಶ್ರೀಹರಿಗೆ ಪರಮ ಚೇತನತ್ವವು ಸಿದ್ಧವಾಯಿತು) ಎಂದು ಸ್ಕಾಂದಪುರಾಣದಲ್ಲಿದೆ (೨) (ಶ್ರೀಕೃಷ್ಣನೂ ಕೂಡ ಯುದ್ಧದಲ್ಲಿ ಸನ್ನದ್ಧನಾಗಿ ನಿಂತಿರುವುದರಿಂದ ಶ್ರೀಕೃಷ್ಣನಿಗೂ ಎರಡು ವಿಧವಾದ ಅನಿತ್ಯತ್ವವೂ ಇದೆ ಎಂದು ಅಜ್ಞಾನದಿಂದ ಸಂಶಯವು ಬರುತ್ತಿರಲು ಅದನ್ನು ನ ತ್ವೇವಾಹಂ ಎಂಬುದರಿಂದ ಪರಿಹರಿಸುತ್ತಾರೆ (ಈ ಶಬ್ದದಿಂದ ಶ್ರೀಹರಿಗೆ ಯಾವದೊಂದು ವಿಧವಾದ ನಾಶಾದಿಗಳೂ ಇಲ್ಲವೆಂದು ತಿಳಿಯುತ್ತದೆ) (೩) (ಶ್ರೀಕೃಷ್ಣನು ಯಾವಾಗಲೂ ಅರ್ಜುನನು ಜೊತೆಯಾದುದರಿಂದ ಆತನಿಗೆ ಇಂತಹ ಸಂಶಯವೇ ಹುಟ್ಟಲಾರದೆಂದರೆ) ಯದ್ಯಪಿ ಅರ್ಜುನನಿಗೆ ಇಂತಹ ಸಂದೇಹವು ಬರುವುದಿಲ್ಲ ಆದರೂ ಸಂಶಯಗ್ರಸ್ತರಾದ ಸಜ್ಜನರಿಗೆ ಉಪಕಾರವಾಗುವುದಕ್ಕಾಗಿ ಶ್ರೀ

ಕೃಷ್ಣನು ಸಂದೇಹವನ್ನು ನಿವಾರಿಸಿರುತ್ತಾನೆ. (೪) (ಶ್ರೀಕೃಷ್ಣನು ಅರ್ಜುನನಿಗೆ ಏಕಾಂತದಲ್ಲಿ ಉಪದೇಶಿಸುವುದರಿಂದ ಲೋಕೋಪಕಾರವು ಹೇಗೆಂದರೆ) ಏಕಾಂತದಲ್ಲಿ ಉಪದೇಶಿಸಿದ್ದರೂ ಶ್ರೀಕೃಷ್ಣನು ವೇದವ್ಯಾಸರೂಪದಿಂದ (ಭಗವದ್ಗೀತೆಯಲ್ಲಿ) ಅದನ್ನೇ ಲೋಕದಲ್ಲಿ ಪ್ರಸಿದ್ಧಿಪಡಿಸಿರುವನು. ॥ ೨ ॥ ॥ ೧೨ ॥

ಪೀ ॥ ಭೀಷ್ಮದ್ರೋಣಾದಿಗಳ ಜೀವಕ್ಕೆ ನಾಶವಿಲ್ಲವಾದರೂ ದೇಹಕ್ಕೆ ನಾಶವು ಬರುವುದರಿಂದ ದುಃಖವೆಂದರೆ—

**ಗೀ ॥ ದೇಹಿನೋಽಸ್ಮಿನ್ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥ ೧೩ ॥**

ಅ ॥ ದೇಹಿನಃ ದೇಹಾಭಿಮಾನವುಳ್ಳ ಜೀವನಿಗೆ, ಅಸ್ಮಿನ್ ದೇಹೇ-ಈ ಸ್ಥೂಲದೇಹದಲ್ಲಿ, ಯಥಾ= ಹೇಗೆ, ಕೌಮಾರಂ ಯೌವನಂ ಜರಾ= ಬಾಲ್ಯ ಯೌವನ ವಾರ್ಧಕ್ಯಾವಸ್ಥೆಗಳು (ಉಂಟಾಗುತ್ತವೋ) ತಥಾ-ಹಾಗೆಯೇ, ದೇಹಾಂತರಪ್ರಾಪ್ತಿಃ=ಹಳೇ ದೇಹವು ಹೋಗುವಾಗ ಇನ್ನೊಂದು ಹೊಸ ದೇಹವು (ಬರುತ್ತದೆ) ತತ್ರ= ಮೊದಲಿನ ದೇಹವು ನಾಶವಾಗುತ್ತದೆಂಬ ವಿಷಯದಲ್ಲಿ, ಧೀರಃ= ಬುದ್ಧಿಶಾಲಿಯು, ನ ಮುಹ್ಯತಿ= ಇವರ ದೇಹಗಳು ನಾಶಹೊಂದುತ್ತವೆಂದು ಶೋಕವನ್ನು ಹೊಂದುವುದಿಲ್ಲ

ವಿ ॥ ದೇಹದಲ್ಲಿ ಬಾಲ್ಯಾವಸ್ಥೆಯು ಹೋದರೂ ಯೌವನಾದ್ಯವಸ್ಥೆಗಳು ಬರುವಂತೆಯೇ, ಈ ಹಳೇ ದೇಹವು ನಾಶಹೊಂದಿದರೂ ಇನ್ನೊಂದು ಹಳೇದೇಹವು ಬರುವಕಾರಣ ಭೀಷ್ಮಾದಿಗಳ ದೇಹವು ನಾಶಹೊಂದುತ್ತದೆಂದು ದುಃಖಿಸುವುದು ಯುಕ್ತವಲ್ಲ ॥ ೧೩ ॥

ಪೀ—(1) ಇಲ್ಲಿ ಜೀವರ ದೇಹಗಳು ನಿತ್ಯಗಳೆನ್ನುತ್ತೀರೋ, (2) ಅಥವಾ ಜೀವರು ನಿತ್ಯರೆನ್ನುತ್ತೀರೋ? 1ನೇದ್ದು ಕೂಡುವುದಿಲ್ಲ ಏಕೆಂದರೆ—ದೇಹವು ಹುಟ್ಟುವುದೂ ನಾಶಹೊಂದುವುದೂ ಪ್ರತ್ಯಕ್ಷವಾಗಿದೆ ಆದಕಾರಣ ಅನಾದಿತ್ವವೂ ನಿತ್ಯತ್ವವೂ ದೇಹಗಳಿಗಿಲ್ಲ ಜೀವರು ನಿತ್ಯರೆಂಬ 2ನೇ ಕಲ್ಪದಲ್ಲಿ ದೋಷ ಹೇಳುತ್ತಾರೆ—

**ಭಾ ॥ (೧) ದೇಹಿನೋ ಭಾವ ಏತದ್ಭವತಿ । ತದೇವಾಸಿದ್ಧಮಿತಿ ಚೇನ್ನ ದೇಹಿನೋಽಸ್ಮಿನ್॥ (೨) ಯಥಾ ಕೌಮಾರಾದಿಶರೀರಭೇದೇಽಪಿ ದೇಹೀ ತದೀಕ್ಷಿತಾ ಸಿದ್ಧಃ । ಏವಂ ದೇಹಾಂತರಪ್ರಾಪ್ತಾವಪೀಕ್ಷಿತೃತ್ವಾತ್ ॥ (೩) ನ ಹಿ ಜಡಸ್ಯ ಶರೀರಸ್ಯ ಕೌಮಾರಾದ್ಯನುಭವಃ ಸಂಭವತಿ । ಮೃತಸ್ಯಾದರ್ಶನಾತ್ ॥ ೧ ॥**

ಅ ॥ (೧) (1) ದೇಹದಿಂದ ಬೇರೆಯಾದ ಜೀವನಿದ್ದರೆ ಜೀವರು ನಿತ್ಯರೆಂದು ಊಹಿಸಬಹುದಿತ್ತು. ಆದರೆ ದೇಹ ಹೊರತು ಜೀವನಿದ್ದಾನೆಂಬ ವಿಷಯದಲ್ಲಿ ಪ್ರಮಾಣವೇ ಇಲ್ಲ, ಅಥವಾ (2) ದೇಹ ಹೊರತು ಜೀವನಿದ್ದಾನೆಂದು ಒಡಂಬಟ್ಟರೂ ಒಬ್ಬ ಜೀವನಿಗೆ ಅನೇಕ ದೇಹಗಳು ಬರುತ್ತವೆಂಬ ಮಾತು ಸರಿಯಲ್ಲ ಎಂಬ ಈ ಎರಡು ಆಕ್ಷೇಪಗಳು ಯುಕ್ತವಲ್ಲವೆಂದು, **ದೇಹಿನೋಽಸ್ಮಿನ್** ಎಂಬುವುದರಿಂದ ಹೇಳುತ್ತಾರೆ. (ಅಂತೂ—ದೇಹವು ಹುಟ್ಟುವಾಗ ಜೀವನು ಹುಟ್ಟುತ್ತಾನೆ ದೇಹಕ್ಕೆ ನಾಶವುಬರುವಾಗ ಜೀವನೂ ನಾಶಹೊಂದುತ್ತಾನೆ ಇಂತಹವನಿಗೆ ಅನಾದಿನಿತ್ಯತ್ವವು ಕೂಡಲಾರದೆಂಬ ಶಂಕೆಯನ್ನು **ದೇಹಿನೋಽಸ್ಮಿನ್** ಎಂಬುದರಿಂದ ನಿರಾಕರಿಸುತ್ತಾರೆ) (೨) (ಈ ಎರಡು ಆಕ್ಷೇಪಗಳಿಗೆ ಸಮಾಧಾನ ಹೇಳುವುದಕ್ಕಾಗಿ ಮೂರು ಪಾದಗಳ ಅರ್ಥ ಹೇಳುತ್ತಾರೆ—) ಹೇಗೆ ಬಾಲ್ಯಮೊದಲಾದ ಅವಸ್ಥೆಗಳುಳ್ಳ ಶರೀರಗಳಿಗೆ ಭೇದ

ಇದ್ದರೂ (ಯಾವ ನಾನು ಬಾಲ್ಯಶರೀರವುಳ್ಳವನಾಗಿದ್ದೆನೋ, ಅಂತಹ ನಾನೇ ಈಗ ತಾರುಣ್ಯಶರೀರವುಳ್ಳವನಾಗಿರುತ್ತೇನೆ ಇದುಮೊದಲಾದ ಪ್ರಕಾರ ತಿಳಿಯುವುದರಿಂದ) ದೇಹದಿಂದ ಬೇರೆಯಾದ ಜೀವನು ಒಬ್ಬನೇ ಬಾಲ್ಯಮೊದಲಾದ ಅವಸ್ಥೆಗಳನ್ನು ನೋಡುವವನೆಂದು ಸಿದ್ಧನಾಗುತ್ತಾನೋ, ಹೀಗೆಯೇ ಒಬ್ಬನಿಗೆ ಅನೇಕ ಶರೀರಗಳು ಬಂದರೂ ಜೀವನೊಬ್ಬನೇ ಎಂದು ಸಿದ್ಧಿಸುವುದು ಹೇಗೆಂದರೆ- ಈಕ್ಷಿತೃತ್ವಾತ್- ಮಕ್ಕಳು ಹುಟ್ಟಿದೊಡನೆಯೇ ಮೊಲೆಹಾಲನ್ನು ಉಣ್ಣುವುದಕ್ಕೆ ಬಯಸುವುದರಿಂದ ಹಿಂದಿನ ಜನ್ಮದ ಜ್ಞಾನವುಂಟೆಂಬುದು ಸಿದ್ಧವಾಗುವ ಪ್ರಯುಕ್ತ (ಹಿಂದಿನ ಜನ್ಮದ ಜೀವನೇ ಇಂದಿನ ಜನ್ಮಕ್ಕೆ ಬಂದಿರುವನೆಂದು ಸಿದ್ಧವಾಗುವುದು) (೩) (ಆದಕಾರಣ ಜೀವನು ಶರೀರದಿಂದ ಭಿನ್ನನೆಂದೂ, ದೇಹಗಳು ಬೇರಬೇರೆಯಾದರೂ ಜೀವನೊಬ್ಬನೇ ಎಂದೂ ಸಿದ್ಧವಾಯಿತು) (**ಧೀರಸ್ತತ್ರ ನ ಮುಹ್ಯತಿ** ಎಂಬುದು ವ್ಯರ್ಥವೆಂದರೆ– ದೇಹದಿಂದ ಬೇರೆಯಾದ ನಿತ್ಯನಾದ ಆತ್ಮನು ಇದ್ದಾನೆಂಬ ವಿಷಯದಲ್ಲಿ ಕೆಲಕೆಲವರು ಸಂಘಾತವೇ ಚೈತನ್ಯವೆಂದೂ, ಪ್ರಾಣಾದಿಗಳೇ ಚೈತನ್ಯವೆಂದೂ ಇಂದ್ರಿಯಗಳೇ ಚೈತನ್ಯವೆಂದೂ ಹೀಗೆ ಸ್ವೇಚ್ಛಾನುಸಾರ ಹೇಳುತ್ತಾರೆ, ಇದುಮೊದಲಾದ ಕುತರ್ಕಗಳಿಗೆ ಧೀರನಾದವನು ಅವಕಾಶ ಕೊಡಬಾರದೆಂಬ ಅಭಿಪ್ರಾಯದಿಂದ ಹೇಳಿದ್ದು. ಈ ಅಭಿಪ್ರಾಯವನ್ನು ತೋರಿಸುವದಕ್ಕಾಗಿ **ನ ಹಿ ಜಡಸ್ಯ** ಇತ್ಯಾದಿಗಳು. ಹಾಗಾದರೆ ಈ ಗ್ರಾಮ(ಸ್ಥೂಲದೇಹ)ದಿಂದ ಶರೀರದಿಂದ ಬೇರೆಯಾದ ಜೀವನು ಇದ್ದಾನೆಂದು ಏಕೆ ಒಪ್ಪಬೇಕು? ಈಕ್ಷಿತಾ ನೋಡತಕ್ಕವನು (ದರ್ಶನಕರ್ತೃ) ಶರೀರ ಪ್ರಾಣ ಜಠರ ನೇ ಇಂದ್ರಿಯ ಮನಸ್ಸು ವಿಷಯ ಇವುಗಳಿರುವಾಗಲೇ ನೋಡುವುದರಿಂದ ಇವುಗಳಲ್ಲಿ ಯಾವುದಾದರೊಂದನ್ನೇ ಈಕ್ಷಿತೃ ನೋಡತಕ್ಕವನು ಎಂದು ಒಪ್ಪಬಹುದಲ್ಲ, ಎಂದರೆ ಶರೀರವೇ ನೋಡತಕ್ಕುದು ಎಂಬುದು ಅನುಭವಸಿದ್ಧವೆನ್ನುತ್ತಾರೆ-) ಈಕ್ಷಿತಾ-ನೋಡತಕ್ಕವನು ದೇಹವೇ ಎಂದು ಹೇಳಲಾಗುವುದಿಲ್ಲ, ಏಕೆಂದರೆ ದೇಹವು ಜಡವು ಜಡವಾದ ದೇಹವೇ ತನ್ನ ಬಾಲ್ಯಮೊದಲಾದ ಅವಸ್ಥೆಗಳುಳ್ಳವನೆಂದು ತಿಳಿಯಲಾರದು (ಹೊರತು ದೇಹದಲ್ಲಿರುವ ಜೀವನೇ ಹಾಗೆ ತಿಳಿಯಬಲ್ಲನು ಈ ಪ್ರಕಾರವು) ಶವಶರೀರದಲ್ಲಿ ಯಾವುದೊಂದು ವಿಧವಾದ ಜ್ಞಾನವೂ ತೋರಿಬಾರದಿರುವುದರಿಂದ (ಅಸ್ಪಷ್ಟವಾಗಿ ತಿಳಿಯುವುದು) ॥ ೧ ॥

**ಭಾ ॥ (೧) ಮೃತಸ್ಯ ಪ್ರಾಣಾದ್ಯುಪಗಮಾದನುಭವಾಭಾವಃ ॥ (೨) ಅಹಂ ಮನುಷ್ಯ ಇತ್ಯಾದ್ಯನುಭವಾತ್ತತ್ಸಿದ್ಧಮಿತಿ ಚೇನ್ನ । ಸತ್ಯೇವಾವಿಶೇಷೇ ದೇಹೇ ಸುಪ್ತ್ಯಾದೌ ಜ್ಞಾನಾದಿವಿಶೇಷಾದರ್ಶನಾತ್ ॥ (೩) ಸಮರ್ತ್ಯಾಭಿಮಾನೋ ಮನಸಿ । ಕಾಷ್ಠಾದಿವಚ್ಚ ॥ ೨ ॥**

ಅ ॥ (೧) ಅದರ— ಶವಶರೀರದಲ್ಲಿ ಪ್ರಾಣನ ವ್ಯಾಪಾರಗಳೂ ಜಠರಾಗ್ನಿಯೂ ಇಂದ್ರಿಯಗಳೂ ಹೊರಟಿರುವುದರಿಂದ ಶವಶರೀರವು ನೋಡಲಾರದು. ಬದುಕಿರುವವರೂ ಜೀವಚ್ಛರೀರದಲ್ಲಿ ಪ್ರಾಣವಾಯ್ವಾದಿಗಳು ಇದ್ದ ಪ್ರಯುಕ್ತ ನೋಡಲಾಪ್ಪುದು (೨) ನಾನು ಮನುಷ್ಯನು, ಕೃಶನು ಇತ್ಯಾದಿಪ್ರಕಾರ ದೇಹವು ತಿಳಿದುಕೊಳ್ಳುವುದರಿಂದಲೂ ಶರೀರವೇ ಈಕ್ಷಿತೃ ಎಂಬುದು ಪ್ರಮಾಣಸಿದ್ಧವೇ ಆಗಿದೆ ಎಂದರೆ — ಹಾಗೆ ಹೇಳಕೂಡದು. ಏಕೆಂದರೆ - ಸುಷುಪ್ತಿ (ಗಾಢನಿದ್ರೆ) ಕಾಲದಲ್ಲಿಯೂ ಮೂರ್ಛೆಯಲ್ಲಿಯೂ ದೇಹದಲ್ಲಿ ಪ್ರಾಣವಾಯ್ವಾದಿಗಳು ಹೊರಟುಹೋಗುವುದೆಂಬ ವಿಶೇಷವಿಲ್ಲದಿರುವಾಗಲೇ (ಅಂದರೆ ಪ್ರಾಣವಾಯ್ವಾದಿಗಳು ಇದ್ದರೂ) ಜ್ಞಾನ ಸುಖ ದುಃಖ ಇಚ್ಛಾ ದ್ವೇಷ ಪ್ರಯತ್ನ ಇವುಗಳಲ್ಲಿ ಒಂದನ್ನೂ ದೇಹವು ತಿಳಿಯಲಾರದುದರ ಕಾರಣ ದೇಹವೇ ಈಕ್ಷಿತೃ ಎನ್ನುವುದು ಕೂಡದು. (ಪೃಥಿವೀ ಮೊದಲಾದ ನಾಲ್ಕು ಭೂತಗಳ ಸಂಘಾತವೇ ಈಕ್ಷಿತೃ, ಪ್ರಾಣಾದಿಗಳೇ ಈಕ್ಷಿತೃ ಎಂಬ ಪಕ್ಷಗಳನ್ನು ಇದರಿಂದಲೇ ನಿರಾಕರಿಸಿದಂತಾಯಿತು) (೩) ಸುಷುಪ್ತ್ಯಾದ್ಯವಸ್ಥೆಗಳಲ್ಲಿ ಮನಸ್ಸು ಇದ್ದರೂ ಯಾವುದೊಂದು ಜ್ಞಾನವೂ ಮನಸ್ಸಿ

ನಿಂದ ಬಾರದಿರುವುದರಿಂದ ಮನಸ್ಸು ನೋಡತಕ್ಕುದು, ಎಂಬುದು ಕೂಡಲಾರದು (ಮನಸ್ಸು ತಿಳಿಯುವುದೆಂದು ಇಟ್ಟುಕೊಂಡರೆ ಇನ್ನೊಂದು ದೋಷ ಹೇಳುತ್ತಾರೆ---) ಕಟ್ಟಿಗೆ ಮೊದಲಾದವುಗಳಂತೆಯೇ. (ಅಂದರೆ ಒಂದು ಕ್ರಿಯೆಯಲ್ಲಿ ಮುಖ್ಯ ಕಾರಣವಾದುದು ಕರ್ತೃ ಆಗಲಾರದು ಅಡಿಗೆ ಮಾಡಲಿಕ್ಕೆ ಕಟ್ಟಿಗೆಯೂ, ಮರ ಕಡಿಯಲಿಕ್ಕೆ ಕೊಡಲಿಯೂ ಮುಖ್ಯ ಕಾರಣವು ಅವು ಕರ್ತೃ ಆಗಲಾರವು ಅಂತೆಯೇ ಕರ್ತನಾದ ಜೀವನೂ ಯಾವುದನ್ನಾದರೂ ತಿಳಿದುಕೊಳ್ಳುವುದರಲ್ಲಿ ಮನಸ್ಸು ಕರಣ=ಸಾಧನವಾಗಿರುವುದರಿಂದ ಅದೇವೇ ನೋಡತಕ್ಕುದು ತಿಳಿಯತಕ್ಕುದು ಎಂದು ಹೇಳಕೂಡದು ಏಕೆಂದರೆ— ನಾನು ಮನಸ್ಸಿನಿಂದ ತಿಳಿಯುತ್ತೇನೆಂದೇ ಸರ್ವರಿಗೂ ಅನುಭವವಿರುವುದರಿಂದ ಮನಸ್ಸು ಕರಣವಲ್ಲದೆ ಕರ್ತೃ ಸರ್ವಥಾ ಆಗಲಾರದು ಹೀಗೆಯೇ ನಾನು ಕಣ್ಣಿನಿಂದ ನೋಡುತ್ತೇನೆ ಇತ್ಯಾದಿ ಪ್ರಕಾರವೇ ಸರ್ವರಿಗೂ ಅನುಭವವಿದ್ದುದರಿಂದ ಇಂದ್ರಿಯಗಳು ಮನಸ್ಸಿನಂತೆ ಮುಖ್ಯ ಕಾರಣಗಳಾಗಿಯೇ ತೋರುತ್ತವೆ, ಕರ್ತೃಗಳಲ್ಲ ಆದಕಾರಣ ಇಂದ್ರಿಯಗಳು ನೋಡತಕ್ಕವುಗಳು ಎಂಬ ಪಕ್ಷವೂ ಅಯುಕ್ತವು) (ಭೂತ ಭವಿಷ್ಯತ್ಕಾಲದಲ್ಲಿರತಕ್ಕ ವಸ್ತುಗಳ ಜ್ಞಾನವಿದ್ದುದರಿಂದ ವಿಷಯಗಳೇ (ಇಂದ್ರಿಯಕ್ಕೆ ತೋರತಕ್ಕವುಗಳು) ಈಕ್ಷಿತೃ=ನೋಡತಕ್ಕವುಗಳು ಎಂಬ ಪಕ್ಷವೂ ಅಯುಕ್ತವು) ‖ ೨ ‖

ಹೀ—ಹೀಗೆ ದೇಹಾದಿಗಳಿಗೆ ಈಕ್ಷಿತೃತ್ವವು ಕೂಡದಿರುವುದರಿಂದ ಈಕ್ಷಣಕರ್ತನಾದ ಜೀವನು ದೇಹಾದಿಗಳಿಗಿಂತ ಬೇರೆಯೇ ಇದ್ದಾನೆಂದು ಸಿದ್ಧವಾಯಿತು ಆದರ ಅಂತಹ ಜೀವನಿಗೆ ಸ್ತನ್ಯಪಾನಾದಿ ಆಹಾರಗಳ ಅಪೇಕ್ಷೆಯು ಜೀವರಿಗೆ ಸ್ವಭಾವದಿಂದಲೇ ಉಂಟಾಗುವ ಪ್ರಯುಕ್ತ ಹೋದ ಜನ್ಮದ ಜ್ಞಾನವುಂಟೆಂದು ಏಕೆ ಒಪ್ಪಬೇಕು? ಎಂದರೆ ಒಬ್ಬ ಜೀವನು ಅನೇಕ ದೇಹಗಳನ್ನು ಹೊಂದುತ್ತಾನೆ, ಆತನು ನಿತ್ಯನೆಂಬುದನ್ನು ವೇದರೂಪ ಪ್ರಮಾಣದಿಂದ ಸಾಧಿಸುತ್ತಾರೆ—

**ಭಾ ‖ (೧) ಶ್ರುತೇಶ್ಚ ‖ (೨) ಪ್ರಾಮಾಣ್ಯಂ ಚ ಪ್ರತ್ಯಕ್ಷಾದಿವತ್ । ನ ಚ ಬೌದ್ಧಾದಿವಾಕ್ಯವತ್ । ಅಪೌರುಷೇಯತ್ವಾತ್ । ನ ಹ್ಯಪೌರುಷೇಯೇ ಪೌರುಷೇಯಾಜ್ಞಾನಾದಯಃ ಕಲ್ಪಯಿತುಂ ಶಕ್ಯಾಃ ‖ ೩ ‖**

ಅ ‖ (೧) **ಅಸ್ಮಾಚ್ಛರೀರಭೇದಾದೂರ್ಧ್ವ ಮುತ್ಕ್ರಮ್ಯಾಮುಷ್ಮಿನ್ ಸ್ವರ್ಗೇ ಲೋಕೇ** ಜೀವನು ಈ ಶರೀರದಿಂದ ಹೊರಟುಹೋಗಿ ಸ್ವರ್ಗಲೋಕದಲ್ಲಿ ಸುಖಿಯಾಗಿರುತ್ತಾನೆ' ತಿರುಗಿ ಹುಟ್ಟುತ್ತಾನೆ' ಇದುಮೊದಲಾದ ವೇದಗಳಿಂದಲೂ ದೇಹದಿಂದ ಬೇರೆಯಾದ ನಿತ್ಯನಾದ ಜೀವನು ಇದ್ದಾನೆಂದು ಸಿದ್ಧಿಸುತ್ತದೆ (ಆದಕಾರಣ ಸರ್ವವೂ ಆಯಾಯ ವಸ್ತುಸ್ವಭಾವದಿಂದಲೇ ಆಗುತ್ತದೆಂದು ಹೇಳುವುದು ಯುಕ್ತವಲ್ಲ) (೨) (ದೇಹದಿಂದ ಬೇರೆಯಾದ ನಿತ್ಯನಾದ ಜೀವನು ಇದ್ದಾನೆಂದು ಬೌದ್ಧ ಚಾರ್ವಾಕ ಮೊದಲಾದವರನ್ನು ಕುರಿತು ಹೇಳುವುದಷ್ಟು, ಅವರು ವೇದವು ಪ್ರಮಾಣವೆಂದೇ ಒಡಂಬಡುವುದಿಲ್ಲ ಆದಕಾರಣ ಅವರಿಗೆ ವೇದವು ಪ್ರಮಾಣವೆಂದು ಹೇಳಿದ್ದು ಅಯುಕ್ತವೆಂದರೆ) ಪ್ರತ್ಯಕ್ಷ ಮೊದಲಾದ ಪ್ರಮಾಣಗಳಂತೆಯೇ ಎಲ್ಲಾ ವೇದಗಳೂ ಪ್ರಮಾಣಗಳೆಂದು ಅಂಗೀಕರಿಸಲೇಬೇಕು. ಅಂದರೆ— ಜ್ಞಾನವನ್ನು ಹುಟ್ಟಿಸುವುದರಿಂದ ಬೌದ್ಧನು ಪ್ರತ್ಯಕ್ಷಾನುಮಾನಗಳಿಗೂ, ಚಾರ್ವಾಕನು ಪ್ರತ್ಯಕ್ಷಕ್ಕೂ ಪ್ರಾಮಾಣ್ಯವಿದೆ ಎಂದು ಹೇಳಿದಂತೆಯೇ ತತ್ವಜ್ಞಾನವನ್ನು ಹುಟ್ಟಿಸುವುದರಿಂದ ವೇದಗಳಿಗೂ ಪ್ರಾಮಾಣ್ಯವನ್ನು ಒಡಂಬಡಬೇಕು) (ಹಾಗಾದರ— ಎಲ್ಲವೂ ವಾಕ್ಯಗಳಾಗಿದ್ದರೂ ಬೌದ್ಧಾದಿಗಳದ್ದು ಕೆಲವಾಕ್ಯಗಳು ಮಾತ್ರ ಅಪ್ರಮಾಣಗಳಾಗಿ ತೋರಿದ್ದಂತೆಯೇ ವೇದಭಾಗಗಳಲ್ಲಿಯೂ ಕೆಲವು ಮಾತ್ರ ಅಪ್ರಮಾಣಗಳಾಗ ಬಹುದಷ್ಟೆ, ಎಂದರ— ಬುದ್ಧ ಚಾರ್ವಾಕಾದಿಗಳ ವಾಕ್ಯಗಳಂತೆಯೇ ವೇದಗಳು ಅಪ್ರಮಾಣಗಳೆಂದು ಸಂಶಯ

ಪಡಕೂಡದು (ಏಕೆಂದರೆ) ಅಪೌರುಷೇಯಗಳಾಗಿರುವುದರಿಂದ (ವೇದಗಳನ್ನು ಯಾರೂ ಮಾಡಿದ್ದಲ್ಲ! ಅವು ಅನಾದಿನಿತ್ಯಗಳು) (ಹಾಗಿದ್ದರೂ ಅವು ಪ್ರಮಾಣವಲ್ಲವೆಂದು ಸಂಶಯ ಪಡುವುದಾದರೆ— ಪ್ರತ್ಯಕ್ಷ ಅನುಮಾನಗಳಲ್ಲಿಯೂ ಕೆಲವುಕಡೆ ಅಪ್ರಾಮಾಣ್ಯವು ಕಂಡದ್ದರಿಂದ ಎಲ್ಲಾ ಪ್ರತ್ಯಕ್ಷ ಅನುಮಾನಗಳೂ ಅಪ್ರಮಾಣಗಳೆಂದು ಸಂಶಯಪಡಬೇಕಾಗುವುದು. ಪ್ರತ್ಯಕ್ಷ ಅನುಮಾನಗಳಲ್ಲಿ ಸಂಶಯ ಬಂದರೂ ಅವುಗಳನ್ನು ನಿರ್ದೋಷಗಳೆಂದು ಒಪ್ಪಿದ್ದರಿಂದ ಸಂಶಯವನ್ನು ಪರಿಹರಿಸಿಕೊಳ್ಳುತ್ತೇವೆಂದರೆ—ವೇದಗಳನ್ನು ಅಪೌರುಷೇಯಗಳನ್ನುತ್ತೇವೆ) (ಅಪೌರುಷೇಯಗಳಾದರೆ ದೋಷಗಳು ಏಕೆ ಇರಲಾರದೆಂದರೆ—) ಅಪೌರುಷೇಯವಾದ ಗ್ರಂಥದಲ್ಲಿ ಪುರುಷರಲ್ಲಿರುವ ಅಜ್ಞಾನ ಮೊದಲಾದ ದೋಷಗಳನ್ನು ಕಲ್ಪಿಸಲಿಕ್ಕೆ ಸಾಧ್ಯವಲ್ಲ

ವಿ || ಶಬ್ದಗಳಲ್ಲಿ ಅಬೋಧಕತ್ವ (ಅರ್ಥವನ್ನು ತಿಳಿಸದಿರುವುದು) ವಿಪರೀತವಾಗಿ ತಿಳಿಸುವುದು ಇದುಮೊದಲಾದ ದೋಷಗಳಿರುವವು ಆ ದೋಷಗಳಿಗ ಉಪದೇಶಿಸುವ ಜನರಲ್ಲಿರುವ ಅಜ್ಞಾನ ಮಿಥ್ಯಾಜ್ಞಾನ ವಂಚನೆ ಮೊದಲಾದ ದೋಷಗಳು ಕಾರಣಗಳು ವೇದಗಳನ್ನು ಯಾರೂ ಮಾಡಿದ್ದೇ ಅಲ್ಲ ಹೀಗಿರಲು ಆ ವೇದಗಳಲ್ಲಿ ಆ ದೋಷಗಳನ್ನು ಕಲ್ಪಿಸುವುದು ಹೇಗೆ? || ೩ ||

ಪೀ — ವೇದಗಳೂ ಲೌಕಿಕವಾಕ್ಯಗಳಂತೆಯೇ ವಾಕ್ಯಗಳಾಗಿರುವುದರಿಂದ ಅಪೌರುಷೇಯಗಳೇ ಅಲ್ಲ ಎಂದರೆ—ಹೀಗೆ ಹೇಳುವವರಿಗೆ ಯಾವುದೊಂದೂ ಅಪೌರುಷೇಯ ವಾಕ್ಯವೇ ಇಲ್ಲವೆಂದು ಸಮ್ಮತವಾಗಿದ್ದರೆ ದೋಷ ಹೇಳುತ್ತಾರೆ—

**ಭಾ || (೧) ವಿನಾ ಚ ಕಸ್ಯಚಿದ್ವಾಕ್ಯಸ್ಯಾಪೌರುಷೇಯತ್ವಂ ಸರ್ವಸಮಯಾಭಿಮತಧರ್ಮಾದ್ಯಸಿದ್ಧಿಃ || (೨) ಯಸ್ತ್ವತೌ ನಾಂಗೀಕುರುತೇ ನಾಸೌ ಸಮಯೀ | ಅಪ್ರಯೋಜಕತ್ವಾತ್ || ४ ||**

ಅ || (೧) ಯಾವುದಾದರೂಂದು ವಾಕ್ಯವು ಅಪೌರುಷೇಯವಿದೆಯೆಂದು ಒಡಂಬಡದಿದ್ದರೆ ಎಲ್ಲಾ ಶಾಸ್ತ್ರಗಳಿಗೂ ಸಮ್ಮತಗಳಾದ ಧರ್ಮಾದಿಗಳು ಸಿದ್ಧಿಸದೆ ಹೋದಾವು (ಅಂದರೆ ಯಾವುದೊಂದು ವಾಕ್ಯವೂ ಅಪೌರುಷೇಯವಾದುದಿಲ್ಲದಿದ್ದರೆ— ಧರ್ಮ ಅಧರ್ಮಗಳ ನಿಶ್ಚಯವನ್ನು ಹುಟ್ಟಿಸುವ ಪ್ರಮಾಣವೇ ಇಲ್ಲದಿರುವುದರಿಂದ ಇದು ಧರ್ಮವು, ಇದು ಅಧರ್ಮವು ಎಂದು ನಿಶ್ಚಯವು ಬಾರದೆ ಹೋಗವುದು ಹಾಗೆ ಆಗಲಿ ಎಂದು ಹೇಳಕೂಡದು ಧರ್ಮಾಧರ್ಮಗಳ ನಿಶ್ಚಯವದೆ ಎಂದು ಎಲ್ಲಾ ವಾದಿಗಳೂ ಹೇಳಿರುವರು) (೨) ಪ್ರತ್ಯಕ್ಷವೊಂದೇ ಪ್ರಮಾಣವೆಂದು ಹೇಳುವ ಚಾರ್ವಾಕನು ಧರ್ಮ ಅಧರ್ಮಗಳನ್ನು ಅಂಗೀಕರಿಸುವುದಿಲ್ಲ ಅವನಿಗ ಇದನಿಷ್ಟವಲ್ಲ ಮತ್ತು ಯಾವುದೊಂದು ಅಪೌರುಷೇಯವಾಕ್ಯವನ್ನೇ ಒಡಂಬಡದೆ ವೇದಗಳಿಗೆ ಅಪೌರುಷೇಯತ್ವವನ್ನು ಅಂಗೀಕರಿಸದಿರುವವರೆಲ್ಲರಿಗೂ ಧರ್ಮಾಧರ್ಮಗಳ ನಿಶ್ಚಯವು ಬಾರದೆ ಹೋಗುವುದು ಎಂದರೆ— ಚಾರ್ವಾಕನೂ ಧರ್ಮ ಅಧರ್ಮಗಳನ್ನು ಅಂಗೀಕರಿಸಲೇ ಬೇಕೆನ್ನುತ್ತಾರೆ) ಯಾವನು ಆ ಧರ್ಮಾಧರ್ಮಗಳನ್ನು ಒಡಂಬಡುವುದಿಲ್ಲವೋ, ಇವನು ಸಿದ್ಧಾಂತಿಯಲ್ಲವೆಂದಾಗುವನು ಏಕೆಂದರ—ಶಾಸ್ತ್ರದಲ್ಲಿ ವಿಷಯಪ್ರಯೋಜನಗಳಿಲ್ಲವೆಂದಾಗುವುದರಿಂದ

ವಿ || (೧) ಅಪ್ರಯೋಜಕತ್ವಾತ್ =ಪ್ರಯುಜ್ಯತೇ ಪ್ರಣೀತಾ ಪ್ರೇರಿತಾ ಚ ಶಾಸ್ತ್ರೇ ಯಾಭ್ಯಾಂ ಎಂಬ ವ್ಯುತ್ಪತ್ತಿಯಿಂದ ಯಾವ ವಿಷಯಪ್ರಯೋಜನಗಳಿಂದ ಗ್ರಂಥಕರ್ತನು ಶಾಸ್ತ್ರಗ್ರಂಥವನ್ನು ರಚಿಸುವುದರಲ್ಲಿಯೂ, ಕೇಳುವವನು ಶಾಸ್ತ್ರಶ್ರವಣದಲ್ಲಿಯೂ ಪ್ರವೃತ್ತಿಪಡುತ್ತಾನೋ ಅಂತಹ ವಿಷಯಪ್ರಯೋಜನಗಳು ಪ್ರಯೋಜಕಗಳು ಅವಿದಮಾನೇ ಪ್ರಯೋಜಕೇ ಯಸ್ಯ ಶಾಸ್ತ್ರಸ್ಯ ಎಂಬ ವ್ಯುತ್ಪತ್ತಿ

ಯಿಂದ ಶಾಸ್ತ್ರದಲ್ಲಿ ವಿಷಯಪ್ರಯೋಜನಗಳಿಲ್ಲದಿರುವುದರಿಂದ ಎಂದರ್ಥವು (2) ಬೇರೆ ಯಾವುದರಿಂದ ಲಾಗದಿರುವ ಪುರುಷಾರ್ಥಕ್ಕಾಗಿ ಅದಕ್ಕೆ ಸಾಧನವಾದ ಬೇರೆ ಯಾವುದರಿಂದಲೂ ಸಿಗದಿರುವ ಅರ್ಥವನ್ನು ಹೇಳತಕ್ಕ ವಾಕ್ಯಸಮೂಹವು ಶಾಸ್ತ್ರವೆನಿಸುತ್ತದೆ ಹೀಗೆ ಹೇಳದಿದ್ದರೆ ಹುಚ್ಚನ ಮಾತೂ ಶಾಸ್ತ್ರವಾಗ ಬೇಕಾದೀತು ಆದಕಾರಣ ಶಾಸ್ತ್ರವೆಂದಾಗಲಿಕ್ಕೆ ಧರ್ಮಾದಿರೂಪಗಳಾದ ಅತೀಂದ್ರಿಯ ವಸ್ತುಗಳನ್ನು ವಿಷಯವೆಂದೂ ಸ್ವರ್ಗಾದಿಗಳನ್ನು ಫಲವೆಂದೂ ಒಡಂಬಡಬೇಕು ॥ ೪ ॥

**ಭಾ ॥ ಮಾಽಸ್ತು ಧರ್ಮೋಽನಿರೂಪ್ಯತ್ವಾದಿತಿ ಚೇನ್ನ । ಸರ್ವಾಭಿಮತಸ್ಯ ಪ್ರಮಾಣಂ ವಿನಾ ನಿಷೇದ್ಧುಮಶಕ್ಯತ್ವಾತ್ ॥ ೫ ॥**

ಅ ॥ ಧರ್ಮಾದಿಗಳಿವೆ ಎಂಬಲ್ಲಿ ಪ್ರಮಾಣವಿಲ್ಲದಿರುವುದರಿಂದ ಹೇಳಲಶಕ್ಯವಾಗಿರುವ ಪ್ರಯುಕ್ತ ಧರ್ಮಾದಿಗಳನ್ನು ಒಡಂಬಡುವುದು ಬೇಡ, ಎಂದರೆ— ಹೀಗೆ ಹೇಳಕೂಡದು ಎಲ್ಲಾ ವಾದಿಗಳಿಗೂ ಸಮ್ಮತಗಳಾದ ಧರ್ಮಾದಿಗಳನ್ನು ಪ್ರಮಾಣವಿಲ್ಲದೆ ಸ್ವೇಚ್ಛಾನುಸಾರ ಇಲ್ಲವೆಂದು ಹೇಳುವುದು ಸರಿಯಲ್ಲ

ವಿ ॥ (1) ಪ್ರಮಾಣವಿಲ್ಲದೆ ಬರಿ ಮಾತಿನಿಂದ ಹೇಳಿದರೆ ಅದನ್ನು ಯಾರೂ ನಂಬಲಾರರು ಆದ ಕಾರಣ ಯಾವವು ಪ್ರಮಾಣವನ್ನು ದಾಹರಿಸಿ ಹೇಳಲಿಕ್ಕೆ ಶಕ್ಯಗಳಾಗುತ್ತವೋ, ಅವುಗಳು ವಿಷಯಪ್ರಯೋಜನಗಳು ಆಗುತ್ತವೆ ಧರ್ಮಾದಿಗಳಲ್ಲಿ ಪ್ರಮಾಣ ಹೇಳಲಿಕ್ಕೆ ಸಾಧ್ಯವಿಲ್ಲ ಏಕೆಂದರೆ— ಧರ್ಮಾಧರ್ಮಗಳಲ್ಲಿ ಪ್ರತ್ಯಕ್ಷವಿಲ್ಲ. ಅನುಮಾನ ಆಗಮಗಳು ಪ್ರಮಾಣಗಳಲ್ಲ ಆದುದರಿಂದ ಶಾಸ್ತ್ರಕ್ಕೆ ಧರ್ಮಾದಿಗಳು ವಿಷಯ ಪ್ರಯೋಜನಗಳೆಂದು ಹೇಳಲಾಗುವುದಿಲ್ಲ ಮತ್ತೆ ಧರ್ಮಾದಿಗಳ ಅಭಾವವೇ ವಿಷಯವು ಧರ್ಮಾದಿಗಳನ್ನು ಮಾಡುವುದರಿಂದುಂಟಾಗತಕ್ಕ ದುಃಖದ ಪರಿಹಾರವು ಶ್ರೋತೃಗಳಿಗೆ ಪ್ರಯೋಜನವು. ಮತ್ತು ಧರ್ಮಾದಿಗಳಿವೆ ಎಂಬ ಭ್ರಮೆಯಿಂದ ಸ್ವೇಚ್ಛಾನುಸಾರ ವೈಷಯಿಕಸುಖಗಳನ್ನು ಅನುಭವಿಸಲಿಕ್ಕೆ ಆಗುತ್ತಿರಲಿಲ್ಲ ಈಗ ಅಂತಹಸುಖವನ್ನು ಸ್ವೇಚ್ಛಾನುಸಾರ ಪಡೆಯಬಹುದು ಗ್ರಂಥಕರ್ತನಿಗೆ ಲೋಕೋಪಕಾರವು ಪ್ರಯೋಜನವು ಹೇಗೆಂದರೆ—ಗ್ರಂಥಕರ್ತನು ನಮಗೆ ಬಹಳ ಉಪಕಾರಮಾಡಿರುತ್ತಾನೆಂದು ಅವನಲ್ಲಿ ಜನರು ಪ್ರೀತರಾಗಿ ಧನಾದಿಸಂಪತ್ತನ್ನು ಅವನಿಗೆ ಹೊಂದಿಸುತ್ತಾರೆ **ಜಿತೇಂದ್ರಿಯತ್ವಂ ವಿನಯಸ್ಯ ಕಾರಣಂ ಗುಣಪ್ರಕರ್ಷೋ ವಿನಯಾದವಾಪ್ಯತೇ । ಗುಣಾಧಿಕೇ ಪುಂಸಿ ಜನೋಽನುರಜ್ಯತೇ ಜನಾನುರಾಗಪ್ರಭವಾಶ್ಚ ಸಂಪದಃ** ಎಂದು ಚಾರ್ವಾಕನು ಹೇಳಿರುತ್ತಾನೆ ಎಂದರೆ— ಹೀಗೆ ಹೇಳುವವರಿಗೆ ಧರ್ಮಾಧರ್ಮಾದಿಗಳಿಲ್ಲನೆಂಬುದೂ ಶಾಸ್ತ್ರಕ್ಕೆ ವಿಷಯವೆಂದು ಹೇಳಲಾಗುವುದಿಲ್ಲ. ಆದಕಾರಣ ಧರ್ಮಾದಿಗಳನ್ನು ಎಲ್ಲರೂ ಅಂಗೀಕರಿಸಿರುವುದರಿಂದ ಪ್ರಮಾಣವಿಲ್ಲದ ಮಾತಿನಿಂದ ಮಾತ್ರ ಇಲ್ಲವೆಂದು ಹೇಳಲಿಕ್ಕೆ ಶಕ್ಯವಿಲ್ಲ ॥ ೫ ॥

**ಭಾ ॥ (೧) ನ ಚ ಸಿದ್ಧಿರಪ್ರಮಾಣ(ಪ್ರಾಮಾಣಿ)ಕಸ್ಯೇತಿ ಚೇನ್ನ । ಸರ್ವಾಭಿಮತೇರೇವ ಪ್ರಮಾಣತ್ವಾತ್ । ಅನ್ಯಥಾ ಸರ್ವವಾಚಿಕವ್ಯವಹಾರಾಸಿದ್ಧೇಶ್ಚ ॥(೨)ನ ಚ ಮಯಾ ಶ್ರುತ ಮಿತಿ ತವ ಜ್ಞಾತುಂ ಶಕ್ಯಂ । ಅನ್ಯಥಾ ವಾ ಪ್ರತ್ಯುತ್ತರಂ ಸ್ಯಾತ್ ॥ (೩) ಭ್ರಾಂತಿರ್ವಾ ತವ ಸ್ಯಾತ್॥ (೪) ಸರ್ವದುಃಖಕಾರಣತ್ವಂ ವಾ ಸ್ಯಾತ್ ॥(೫) ಏಕೋ ವಾಽನ್ಯಥಾ ಸ್ಯಾತ್ ॥ ೬ ॥**

ಅ ॥ (೧) (ಧರ್ಮಾದಿಗಳ ಅಭಾವವು ವಿಷಯವಾಗದೇ ಹೋಗಲಿ ಆದರೂ ಧರ್ಮಾದಿಗಳು ವಿಷಯಪ್ರಯೋಜನಾದಿಗಳೆಂದೂ ಹೇಳಲು ಶಕ್ಯವಲ್ಲ ಏಕೆಂದರೆ—) ಧರ್ಮಾಧರ್ಮಗಳಿವೆ, ಎಂಬಲ್ಲಿ

ಪ್ರಮಾಣವೇ ಇಲ್ಲದಿರುವಪ್ರಯುಕ್ತ ಅಪ್ರಾಮಾಣಿಕಗಳಾದ ಧರ್ಮ ಅಧರ್ಮಗಳ ಜ್ಞಾನವೇ ಬಾರದಿರುವ ಕಾರಣ ಅವುಗಳನ್ನು ಸಾಧಿಸಲಿಕ್ಕೆ ಅಸಾಧ್ಯವಾಗಿರುವುದರಿಂದ ಅವುಗಳು ಸಿದ್ಧಿಸಲಾರವು ಎಂದರೆ ಹಾಗೆ ಹೇಳಕೂಡದು ಏಕೆಂದರೆ—ಎಲ್ಲಾ ವಾದಿಗಳು ಧರ್ಮ ಅಧರ್ಮಗಳನ್ನು ಒಪ್ಪಿರುವುದರಿಂದ ಅವರ ಒಪ್ಪಿಗೆ, ಜ್ಞಾನ ವಚನ, ವೇದ, ಅವುಗಳನ್ನನುಸರಿಸುವ ಅನುಮಾನ, ಇವುಗಳೇ ಧರ್ಮ ಅಧರ್ಮಗಳಿವೆ, ಎಂಬಲ್ಲಿ ಪ್ರಮಾಣಗಳು ವೇದ ಅನುಮಾನಗಳು ಪ್ರಮಾಣಗಳೆಂದು ಒಪ್ಪದಿದ್ದರೆ ಎಲ್ಲರಿಗೂ ವ್ಯವಹಾರವು ಸಿದ್ಧಿಸದೆ ಹೋಗುವುದು (ಅಂತೂ ಎಲ್ಲರ ವಾಕ್ಯಗಳೂ ಪ್ರಮಾಣಗಳಾಗದಿರಬೇಕಾದೀತು ಹೀಗಾದರೆ ಚಾರ್ವಾಕನ ಮಾತನ್ನೂ ನಂಬದೆ ಹೋಗಬೇಕಾದೀತು) (೨) (ವೇದವು ಪ್ರಮಾಣವೆಂದು ಒಪ್ಪದಿದ್ದರೆ ವ್ಯವಹಾರವೇ ಸಿದ್ಧಿಸದಿರಲಿ. ಅನುಮಾನವು ಪ್ರಮಾಣವೆಂದು ಒಪ್ಪದಿದ್ದರೆ ದೋಷವೇನೆಂದರೆ –) ನಾನು ನಿನ್ನ ಮಾತನ್ನು ಕೇಳಿದೆನೆಂದು ತಿಳಿಯದೆ ವ್ಯವಹಾರ ಮಾಡುವುದಾದರೆ ನಿಷ್ಫಲವಾದ ವ್ಯವಹಾರವನ್ನು ನೀನು (ಚಾರ್ವಾಕನು) ಮಾಡದೇನೇ ಇರಬೇಕಾಗುವುದು ನಾನು ನಿನ್ನ ಮಾತನ್ನು ಕೇಳಿದೆನೆಂದು ತಿಳಿದು ವ್ಯವಹಾರಮಾಡುವುದಾದರೆ ಇನ್ನೊಬ್ಬರ ಮನಸ್ಸಿನಲ್ಲಿದ್ದುದು ತಿಳಿಯಲು ಶಕ್ಯವಾಗದಿರುವುದರಿಂದ ನಾನು ಕೇಳಿದೆನೆಂದು ನಿನಗೆ (ಚಾರ್ವಾಕನಿಗೆ) ತಿಳಿಯಲು ಶಕ್ಯವಲ್ಲ. (ನನ್ನ ಪ್ರತ್ಯುತ್ತರವೇ ಅದನ್ನು ತಿಳಿಯಲಿಕ್ಕೆ ಉಪಾಯವೆಂದೇ ಹೇಳಬೇಕು) (ಹಾಗಾಗಲಿ ಎಂದರೆ—) ನಿನ್ನ ಮತದಲ್ಲಿ ಅನುಮಾನವು ಪ್ರಮಾಣವಲ್ಲ ಪ್ರತ್ಯುತ್ತರವು ಅನುಮಾನರೂಪವಾಗಿ ಜ್ಞಾಪಕವಾಗಿರುವುದರಿಂದ ನಿನ್ನ ಮತದಲ್ಲಿ ಪ್ರತ್ಯುತ್ತರವು ಅನ್ಯಥಾ ವಾ-ಜ್ಞಾಪಕವಾಗದೇನೇ ಇರಬೇಕಾದೀತು (೩) (ಹಾಗಾದರೆ ಆಗಮ ಅನುಮಾನಗಳು ಪ್ರಮಾಣಗಳೆಂದೇ ಒಡಂಬಡುವುದಿಲ್ಲ, ಜ್ಞಾಪಕಗಳೆಂದು ಹೇಳುತ್ತೇವೆ ಆದಕಾರಣ ವ್ಯವಹಾರವು ಸಿದ್ಧಿಸದಿರುವುದು ಹೇಗೆ? ಎಂದರೆ— ಜ್ಞಾಪಕಗಳೆಂದು ಮಾತ್ರ ಅಂಗೀಕರಿಸಿ ಪ್ರಮಾಣಗಳೆಂದಂಗೀಕರಿಸದಿದ್ದರೆ ಆಗಮ ಅನುಮಾನಗಳಿಂದುಂಟಾಗತಕ್ಕ ಜ್ಞಾನವು) ನಿನ್ನ ಮತದಲ್ಲಿ ಭ್ರಮೆಯು ಅಥವಾ ಸಂಶಯವೆಂದಾಗಬೇಕಾಗುವುದು (ಬೇರೆ ರೀತಿ ಹೇಳಲು ಶಕ್ಯವಲ್ಲ ಇತರರಿಗೆ ಭ್ರಮೆಯು ಅಥವಾ ಸಂಶಯವು ಹುಟ್ಟುವುದಕ್ಕಾಗಿ ಮಾತಾಡುವುದೆಂದು ಹೇಳಲಾಗುವುದಿಲ್ಲವಷ್ಟೆ! ಆದಕಾರಣ ವಾಗ್ವ್ಯವಹಾರವು ಸಿದ್ಧಿಸುವುದಕ್ಕಾಗಿ ವೇದ ಅನುಮಾನಗಳು ಪ್ರಮಾಣಗಳೆಂದು ಹೇಳಲೇಬೇಕು ಏವಂಚ ಚಾರ್ವಾಕಶಾಸ್ತ್ರದಲ್ಲಿ ವಿಷಯವಿಲ್ಲವೆಂದಾಗುವುದು (೪) (ಈಗ ಚಾರ್ವಾಕಶಾಸ್ತ್ರದಲ್ಲಿ ಶ್ರೋತೃಗಳಿಗೆ ಪ್ರಯೋಜನವೂ ಇಲ್ಲವೆನ್ನುತ್ತಾರೆ—) ಶ್ರೋತೃಗಳಿಗೆ ಶಾಸ್ತ್ರಶ್ರವಣದಿಂದ ಹೇಗೆ ಸುಖವುಂಟಾಗುತ್ತದೋ ಹಾಗೆಯೇ ಧರ್ಮಾದಿಗಳಿಲ್ಲವೆಂಬ ಜ್ಞಾನವುಂಟಾದರೆ ಪರಸ್ಪರ ಹೊಡೆದುಬಡೆದುಕೊಂಡು ದುಃಖವೇ ಉಂಟಾಗುವುದು (ತಥಾಚ **ಅಶಕ್ಯಾನಿ ದುರಂತಾನಿ ಸಮವ್ಯಯಫಲಾನಿ ಚ । ಅಶಕ್ಯಾನಿ ಚ ವಸ್ತೂನಿ ನಾರಭೇತ ವಿಚಕ್ಷಣಃ** ಎಂದು ಹೇಳಿದಪ್ರಕಾರ ಶಾಸ್ತ್ರಕ್ಕೆ ಪ್ರಯೋಜನವಿಲ್ಲವೆಂದಾಯಿತು) (೫) (ಈಗ ಶಾಸ್ತ್ರವನ್ನು ರಚಿಸಿದವನಿಗೂ ಪ್ರಯೋಜನವಿಲ್ಲವೆನ್ನುತ್ತಾರೆ—) (ಧರ್ಮಾದಿಗಳ ಜ್ಞಾನವಿಲ್ಲದವರು ಪಶುತುಲ್ಯರಾದುದರಿಂದ ಉಪಕಾರ ಮಾಡಿದವರಿಗೆ ತಿರುಗಿ ಉಪಕಾರ ಮಾಡುವುದಿಲ್ಲ ಪರಂತು ಸರ್ವರೂ ಅಪಕಾರ ಮಾಡಿಯಾರು ಪಕ್ಷೇ ಸರ್ವರೂ ಅಪಕಾರ ಮಾಡದಿದ್ದರೂ ಶಾಸ್ತ್ರವನ್ನು ರಚಿಸಿದ ಪುರುಷನೊಬ್ಬನಾದರೂ ಅಪಕಾರ ಮಾಡುವನು ಹೀಗೆ ಧರ್ಮಾದಿಗಳನ್ನು ಅಂಗೀಕರಿಸದಿದ್ದರೆ ಶಾಸ್ತ್ರಕ್ಕೆ ವಿಷಯಾದಿಗಳು ಇಲ್ಲವೆಂದಾಗುವುದರಿಂದ ಶಾಸ್ತ್ರವು ಅಶಾಸ್ತ್ರವಾಗಬೇಕಾಗುವುದು ಆದಕಾರಣ ಸರ್ವರೂ ಧರ್ಮಾಧರ್ಮಾದಿಗಳನ್ನು ಅಂಗೀಕರಿಸಲೇಬೇಕು ॥ ೬ ॥

**ಪೀ**—ಹಾಗಾದರೆ ಧರ್ಮಾಧರ್ಮಾದಿಗಳನ್ನು ಒಡಂಬಡುತ್ತೇವೆ. ಆದರೆ ಪೌರುಷೇಯ ವಾಕ್ಯದಿಂದ ಆ ಧರ್ಮಾದಿಗಳನ್ನು ನಿಶ್ಚಯಿಸಿಕೊಳ್ಳುತ್ತೇವೆಂದರೆ—

**ಭಾ ॥ (೧) ರಚಿತತ್ವೇ ಚ ಧರ್ಮಪ್ರಮಾಣಸ್ಯ ಕರ್ತುರಜ್ಞಾನಾದಿದೋಷಶಂಕಾ ಸ್ಯಾತ್ ನ ಚಾದೋಷತ್ವಂ ಸ್ವವಾಕ್ಯೇನೈವ ಸಿದ್ಧ್ಯತಿ ॥ (೨) ನ ಚ ಯೇನಕೇನಚಿದಪೌರುಷೇಯಮಿತ್ಯುಕ್ತಮುಕ್ತವಾಕ್ಯಸಮಂ । ಅನಾದಿಕಾಲಪರಿಗ್ರಹಸಿದ್ಧತ್ವಾತ್ ॥ (೩ ಅತಃ ಪ್ರಾಮಾಣ್ಯಂ ಶ್ರುತೇಃ । ಅತಃ ಕುತರ್ಕೇ ಧೀರಸ್ತತ್ರ ನ ಮುಹ್ಯತಿ॥ ೮ ॥೧೩**

ಅ ॥ (೧) ಧರ್ಮಾದಿಗಳನ್ನು ಹೇಳುವ ಪ್ರಮಾಣವು ಪುರುಷರಿಂದ ರಚಿಸಲ್ಪಟ್ಟದ್ದೆಂದು ಹೇಳು ದಾದರೆ ಗ್ರಂಥಕರ್ತನಿಗೆ ಅಜ್ಞಾನಮೊದಲಾದ ದೋಷಗಳು ಬರಬಹುದೆಂದು ಸಂಶಯವು ಬರುವುದು (ಅದರಿಂದ ಧರ್ಮಾದಿಗಳ ನಿಶ್ಚಯವು ಸರ್ವಥಾ ಆಗಲಾರದು ) (ಆ ಧರ್ಮಾದಿಗಳನ್ನು ನಿಶ್ಚಯ ಹೇಳುವವನು ನಿರ್ದೋಷನೆಂದರೆ— (1) ಅದು ಬೇರೆ ಪ್ರಮಾಣದಿಂದ ಸಿದ್ಧವಾಗುತ್ತದೋ, (2 ಅವನ ಮಾತಿನಿಂದಲೇ ಸಿದ್ಧವಾಗುತ್ತದೋ? (1) ಅವನು ನಿರ್ದೋಷನೆಂಬುವಲ್ಲಿ ಬೇರೆ ಪ್ರಮಾ ಇಲ್ಲದಿರುವುದರಿಂದ ಬೇರೆ ಪ್ರಮಾಣದಿಂದ ಸಿದ್ಧಿಸಲಾರದು (2) (ಅವನ ಮಾತಿನಿಂದಲೇ ಸಿ ವಾಗುತ್ತದೆಂದರೆ–) ತಾನು ನಿರ್ದೋಷನೆಂಬುವುದು ತನ್ನ ಮಾತಿನಿಂದಲೇ ಸಿದ್ಧವಾಗಲಾರದು (ಏವಂ ಪ್ರತ್ಯಕ್ಷಾದಿಗಳಿಂದ ಧರ್ಮಾದಿಗಳು ಸರ್ವಥಾ ಸಿದ್ಧಿಸಲಾರವು ಆದಕಾರಣ ಸರ್ವರೂ ಅಪೌರುಷೇಯ ವಾಕ್ಯವನ್ನು ಅಂಗೀಕರಿಸಲೇಬೇಕು. ಶೌದ್ಧೋದನಿಪ್ರಭೃತಯಸ್ಸಂಪ್ರದಾಯಪ್ರವರ್ತಕಾಃ ಎಂ ಹೇಳಿದಕಾರಣ ಬೌದ್ಧಾದಿಗಳೂ ತಂತಮ್ಮ ಶಾಸ್ತ್ರಗಳು ಅಪೌರುಷೇಯಗಳೆಂದೇ ಹೇಳಿರುವರು ) (೨ (ಹೀಗೆ ವೇದವು ಅಪೌರುಷೇಯವೆಂದು ಹೇಳಲು ಬಾಧಕವಿಲ್ಲ ಕರ್ತೃಪ್ರಸಿದ್ಧಿಯಿಲ್ಲದಿದ್ದು ಅಪೌರುಷೆ ಯವೆಂದು ಪ್ರಸಿದ್ಧಿಯಿದೆ ಹೀಗೆ ಸಾಧಕಪ್ರಮಾಣವೂ ಇದೆ ಎಂದರೆ –ಹೀಗಾದರೆ ಯಾರಿಗೂ ತಿಳಿಯ ದಂತೆ ಒಬ್ಬನು ಒಂದು ಗ್ರಂಥವನ್ನು ಮಾಡಿಟ್ಟರೆ ಗೂಢಕರ್ತೃಕವಾದ ಅಂತಹ ಗ್ರಂಥವು ಅಪೌರುಷೇಯ ವೆಂದು ಪ್ರಸಿದ್ಧಿಯು ಬರಬೇಕಾಗುವುದು, ಎಂದರೆ—) ಯಾರಾದರೂ ಗೋಪ್ಯವಾಗಿ ಮಾಡಿ ಅಪೌರುಷೆ ಯವೆಂದು ಹೇಳಿದರೆ ಗೂಢಕರ್ತೃಕವಾದ ಆ ಗ್ರಂಥವು ವೇದದಂತೆ ಅಪೌರುಷೇಯವಾಗಲಾರದು ಏಕೆ ದರೆ—ಅನಾದಿಕಾಲದಿಂದಲೂ ಹಿಂದಿನದ್ದೇ ಇದು, ಸ್ವರವರ್ಣಾದಿಗಳಿಂದ ವ್ಯತ್ಯಾಸವೇನೂ ಇಲ್ಲ, ಎಂ ವೇದವನ್ನು ಪ್ರಾಜ್ಞರು ಹೇಳುತ್ತಾ ಬಂದಿದ್ದಾರೆ (ಬೇರೆ ಗ್ರಂಥಗಳಲ್ಲಿ ಅಪೌರುಷೇಯವೆಂದು ಪ್ರಸಿದ್ಧಿಯ ಇಲ್ಲ.) ಆದುಕಾರಣ ವೇದಗಳು ಪ್ರಮಾಣಗಳೆಂದೇ ಸಿದ್ಧವಾಯಿತು. ಆದಪ್ರಯುಕ್ತ ದೇಹಾದಿಗಳಿಂ ಬೇರೆ ಆತ್ಮನಿಲ್ಲವೆಂದು ಹೇಳುವ ವಾದಿಗಳ ಕುತರ್ಕಗಳಿಂದ ಧೀರನಾದವನು ನಿತ್ಯನಾದ ಜೀವನಿದ್ದಾನೆಂ ವಿಷಯದಲ್ಲಿ ಮೋಹ ಹೊಂದಬಾರದು ॥ ೮ ॥ ॥ ೧೩

ಪೀ—ಲೇಶತಃ ಎಂಬುವುದರಿಂದ ಗೀತೆಗೆ ಅನೇಕಾರ್ಥಗಳಿವೆ ಎಂದು ಸೂಚಿಸಲ್ಪಟ್ಟದ್ದನ್ನು ೧ ೧೩ನೇ ಶ್ಲೋಕಗಳಿಂದ ತೋರಿಸುತ್ತಾರೆ—

**ಭಾ ॥ ಅಥವಾ ಜೀವನಾಶಂ ದೇಹನಾಶಂ ವಾಽಪೇಕ್ಷ್ಯ ಶೋಕಃ । ನ ತಾವಜ್ಜೀವನಾಶಂ ನಿತ್ಯತ್ವಾದಿತ್ಯಾಹ । ನ ತ್ವೇವೇತಿ ॥ ೧೨**

ಅ ॥ ಅಥವಾ (ಶೋಚಿಸುವುದಾದರೆ) ಜೀವನಿಗೆ ನಾಶವಾಗುತ್ತದೆಂದಾಗಲೀ ದೇಹಕ್ಕೆ ನಾಶವಾ ತ್ತದೆಂದಾಗಲೀ ಇಟ್ಟುಕೊಂಡು ಶೋಕವನ್ನು ಮಾಡಬೇಕು, ಎರಡು ಕಲ್ಪವೂ ಸರಿಯಲ್ಲ ಜೀವನಿ ನಿತ್ಯತ್ವವಿದ್ದ ಪ್ರಯುಕ್ತ ಜೀವನಿಗೆ ನಾಶವಾಗುತ್ತದೆಂದು ಶೋಚಿಸಕೂಡದೆಂದು ನ ತ್ವೇವ ಎಂಬ ಶ್ಲೋ ದಿಂದ ಹೇಳುತ್ತಾರೆ ॥ ೧೨

**ಭಾ ॥ ನಾಪಿ ದೇಹನಾಶಮಿತ್ಯಾಹ । ದೇಹಿನ ಇತಿ । ಯಥಾ ಕೌಮಾರಾದಿದೇಹಹಾನೇನ ಜರಾದಿಪ್ರಾಪ್ತಾವಶೋಕಃ ಏವಂ ಜೀರ್ಣಾದಿದೇಹಹಾನೇನ ದೇಹಾಂತರಪ್ರಾಪ್ತಾ-ವಪಿ ॥ ೧೩ ॥**

ಅ ॥ ದೇಹವು ನಾಶವಾಗುತ್ತದೆಂದೂ ಶೋಕಮಾಡಕೂಡದೆಂದು **ದೇಹಿನಃ** ಎಂಬ ಶ್ಲೋಕದಿಂದ ಹೇಳುತ್ತಾರೆ ಹೀಗೆ ಬಾಲ್ಯ ಮೊದಲಾದ ಅವಸ್ಥೆಗಳುಳ್ಳ ನೆಟ್ಟಗಿದ್ದ ಶರೀರವು ಹೋಗಿ ಮುದಿತನ ಮೊದಲಾದ ಅವಸ್ಥೆಗಳುಳ್ಳ ದೇಹವು ಬಂದರೂ ಶೋಚಿಸುವುದಿಲ್ಲವೋ, ಹೀಗೆಯೇ ಮುದಿತನ ಮೊದಲಾದ ಅವಸ್ಥೆಗಳುಳ್ಳ ಹಳೆದೇಹವು ಹೋಗಿ ಬೇರೆ ಹೊಸ ದೇಹವು ಬಂದರೂ ಶೋಚಿಸುವುದು ಯುಕ್ತವಲ್ಲ. ॥೧೩॥

ಪೀ— ಈ ಶ್ಲೋಕದಲ್ಲಿ ಶ್ರೀಹರಿಗೆ ಯಾವುದೊಂದು ವಿಧವಾದ ನಾಶಾದಿಗಳಿಲ್ಲವೆನ್ನುವುದಾದರೆ, **ದೇಹಿನೋಽಸ್ಮಿನ್** ಎಂಬಲ್ಲಿ ಈಶ್ವರಾದಿಗಳಿಗೆ ದೇಹಾಂತರವು ಲಭಿಸುತ್ತದೆಂದು ಹೇಳಿದ್ದು ಕೂಡು ವುದಿಲ್ಲ ಈಶ್ವರನು ಹೊರತು ಜೀವರಿಗೆ ಮಾತ್ರ ಎಂದರೆ ಅಂತಹ ಪದವಿಲ್ಲವೆಂದರೆ—

**ತಾ ॥ (೧) ಮಮ ಸ್ವಕೀಯದೇಹಾಂತರಪ್ರಾಪ್ತಿರಪಿ ನಾ(ಪ್ತಿರ್ನಾ)ಸ್ತೀತಿ ದರ್ಶಯಿತುಂ ದೇಹಿನ ಇತಿ ವಿಶೇಷಣಂ ॥ (೨) ಭವದಾದೀನಾಂ ಸಾ ಭವಿಷ್ಯತೀತ್ಯಪಿ ಶೋಕೋ ನ ಕರ್ತವ್ಯಃ । ದೇಹಸ್ಯೇದಾನೀಮಪ್ಯನ್ಯಥಾತ್ವದರ್ಶನಾತ್ ॥ ೧೩ ॥**

ಅ ॥ (೧) ನನಗೆ (ಶ್ರೀಹರಿಗೆ) ತನ್ನದಾದ ಹೊಸ ದೇಹವು ಬರುವುದಿಲ್ಲವೆಂದು ತೋರಿಸುವುದಕ್ಕಾಗಿ **ದೇಹಿನಃ** ಎಂಬ ವಿಶೇಷಣವು. (**ದೇಹಿನಃ** ಎಂಬಲ್ಲಿ ಶ್ರೀಹರಿಗೆ ಹೊಸದೇಹವು ಬರುತ್ತದೆಂದು ಹೇಳುವುದಿಲ್ಲ ಜೀವರಿಗೆನೇ ಹೊಸದೇಹವು ಬರುವುದು ಶ್ರೀಹರಿಗೆ ತನ್ನ ಸ್ವರೂಪದೇಹವು;ಹೊರತು ಬೇರೆ ದೇಹವು ಇಲ್ಲದಿರುವುದರಿಂದ ದೇಹೀ=ದೇಹವುಳ್ಳವನು ಎಂಬುವುದು ಕೂಡುವುದಿಲ್ಲ (೨) ನೀನೇ ಮೊದಲಾದ ಜೀವರಿಗೆ ಹಳೇ ಶರೀರವು ಹೋಗಿ ಹೊಸ ಶರೀರವು ಬರುತ್ತದೆಂದೂ ಶೋಚಿಸಬಾರದು. ಈಗ ಒಂದೇ ಶರೀರದಲ್ಲಿ ತಾರುಣ್ಯಾದ್ಯವಸ್ಥೆಗಳಿಂದ ವ್ಯತ್ಯಾಸವು ತೋರಿದರೂ ಅಲ್ಲಿ ಹೇಗೆ ದುಃಖಿಸುವುದಿಲ್ಲವೋ ಹಾಗೆಯೇ ಶೋಚಿಸುವುದು ಯುಕ್ತವಲ್ಲ ॥ ೧೩ ॥

ಪೀ ॥ ಯುದ್ಧಮಾಡಿದರೂ ಜೀವರಿಗೆ ನಾಶವಿಲ್ಲ ಯುದ್ಧದಲ್ಲಿ ಭೀಷ್ಮದ್ರೋಣಾದಿಗಳ ಹಳೆದೇಹವು ನಷ್ಟವಾದರೂ ಹೊಸ ದೇಹವು ಸಿಗುವುದರಿಂದ ಶೋಚಿಸಬಾರದೆಂದು ಹೇಳಿದ್ದು ನಿಜವೇ ಆದರೂ ಬಂಧುಗಳಾದ ಭೀಷ್ಮದ್ರೋಣಾದಿಗಳು ಮೃತರಾದರೆ ಸುಖಕಾರಣವಾದ ಅವರ ದರ್ಶನ ಸಂಭಾಷಣಾದಿಗಳು ಇಲ್ಲವೆಂದಾಗುವುದರಿಂದ ನನಗೇನೇ ಸುಖವಿಲ್ಲವೆಂದಾಗುವುದು ಮತ್ತು ದುಃಖಕಾರಣವಾದ ಛಿನ್ನಭಿನ್ನಗಳಾದ ದೇಹಗಳನ್ನು ನೋಡುವಾಗ ದುಃಖವೇ ಉಂಟಾಗುವುದು, ಆದಕಾರಣ ಯುದ್ಧ ಮಾಡಲಾರೆ, ಎಂದು ಅರ್ಜುನನು ಆಕ್ಷೇಪಿಸಿದರೆ ಶ್ರೀಕೃಷ್ಣನು ಸಮಾಧಾನ ಹೇಳುತ್ತಾನೆ—

**ಗೀ ॥ ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥ ೧೪ ॥**

ಅ ॥ ಕೌಂತೇಯ=ಎಲೋ ಅರ್ಜುನನೇ, ಮಾತ್ರಾಸ್ಪರ್ಶಾಃ=ವಿಷಯೇಂದ್ರಿಯಗಳ ಸಂಬಂಧಗಳು, (ಅಂದರೆ ಗಂಧ ರಸ ರೂಪ ಸ್ಪರ್ಶ ಶಬ್ದಗಳೆಂಬ ವಿಷಯಗಳಿಗೆ ಘ್ರಾಣ ರಸನ ಚಕ್ಷುಸ್ಸು ತ್ವಕ್ ಶ್ರೋತ್ರ

ಗಳೆಂಬ ಇಂದ್ರಿಯಗಳಿಂದ ಸಂಬಂಧಗಳು,) ತು=ವಿಷಯಗಳಲ್ಲಿ ಇದು ನನ್ನದೆಂಬ ಅಭಿಮಾನದಿಂದ ಕೂಡಿದರೇನೇ, ಶೀತೋಷ್ಣಸುಖದುಃಖದಾಃ=ಸುಗಂಧ ಸುರಸ ಸುರೂಪ ಸುಸ್ಪರ್ಶ ಸುಶಬ್ದಗಳ ಜ್ಞಾನವನ್ನು ಹುಟ್ಟಿಸುತ್ತಾ ಸುಖವನ್ನು ಕೊಡುತ್ತವೆ ಅನಿಷ್ಟಗಳಾದ ದುರ್ಗಂಧಾದಿಗಳ ಜ್ಞಾನವನ್ನು ಹುಟ್ಟಿಸುತ್ತಾ ದುಃಖವನ್ನು ಕೊಡುತ್ತವೆ. (ಅವು) ಆಗಮಾಪಾಯಿನಃ=ಬರುವಿಕೆ ಹೋಗುವಿಕೆಯುಳ್ಳವುಗಳು ಅನಿತ್ಯಾಃ=ಪ್ರವಾಹತೋಽಪಿ ನಿತ್ಯವಲ್ಲದವುಗಳು, ಭಾರತ=ಎಲೋ ಅರ್ಜುನನೇ, (ಅತಃ=ಅಭಿಮಾನವಿಲ್ಲದಿರುವ ವಿಷಯೇಂದ್ರಿಯಸಂಬಂಧಗಳು ಸುಖದುಃಖಗಳನ್ನು ಕೊಡದಿರುವುದರಿಂದ ನಮ್ಮವರೆಂಬ ಅಭಿಮಾನ ತೊರೆದು), ತಾನ್=ಆ ವಿಷಯೇಂದ್ರಿಯಸಂಬಂಧಗಳನ್ನು, ತಿತಿಕ್ಷಸ್ವ=ಸುಖದುಃಖಾದಿಗಳನ್ನು ಕೊಡತಕ್ಕವುಗಳು ಹೇಗೆ ಆಗುವುದಿಲ್ಲವೋ ಹಾಗೆ ಮಾಡಿಕೊ ॥ ೧೪ ॥

ಭಾ ॥ (೧) ತಥಾಽಪಿ ತದ್ದರ್ಶನಾಭಾವಾದಿನಾ ಶೋಕ ಇತಿ ಚೇನ್ನೇತ್ಯಾಹ । ಮಾತ್ರಾಸ್ಪರ್ಶಾ ಇತಿ । ಮೀಯಂತ ಇತಿ ಮಾತ್ರಾ ವಿಷಯಾಃ ತೇಷಾಂ ಸ್ಪರ್ಶಾಃ ಸಂಬಂಧಾಃ ತ ಏವ ಶೀತೋಷ್ಣಸುಖದುಃಖದಾಃ ॥ (೨) ದೇಹೇ ಶೀತೋಷ್ಣಾದಿಸಂಬಂಧಾದ್ಧಿ ಶೀತೋಷ್ಣಾದ್ಯನುಭವ ಆತ್ಮನಃ । ತತಶ್ಚ ಸುಖದುಃಖೇ ॥ (೩) ನ ಹ್ಯಾತ್ಮನಃ ಸ್ವತೋ ದುಃಖಾದಿಃ ಸಂಭವತಿ । ಕುತಃ । ಆಗಮಾಪಾಯಿತ್ವಾತ್ ॥ (೪) ಯದ್ಯಾತ್ಮನಃ ಸ್ವತಃ ಸ್ಯುಃ ಸುಪ್ತಾವಪಿ ಸ್ಯುಃ । ಅತೋ ಯತೋ ಮಾತ್ರಾಸ್ಪರ್ಶಾ ಜಾಗ್ರದಾದಾವೇವ ತೇ ಸಂತಿ ನಾನ್ಯದೇತಿ ತದನ್ವಯವ್ಯತಿರೇಕಿತ್ವಾತ್ತನ್ನಿಮಿತ್ತಾ ಏವ ನಾತ್ಮನಃ ಸ್ವತಃ ॥ ೧ ॥

ಅ ॥ (೧) ಯದ್ಯಪಿ ಬಾಂಧವಾದಿಗಳು ಸಾಯುತ್ತಾರೆಂದು ಶೋಚಿಸುವುದು ಯುಕ್ತವಲ್ಲ ಜೀವರು ಸಾಯುವುದಿಲ್ಲ ದೇಹಕ್ಕೆ ನಾಶ ಬಂದರೂ ಹೊಸದೇಹವು ಬರುತ್ತದೆ) ಆದರೂ (ಬಾಂಧವಾದಿಗಳು ಮೃತರಾದರೆ, ನನಗೇನೂ ಸುಖವಿಲ್ಲವೆಂದಾಗುತ್ತದೆ ದುಃಖವೂ ಬರುವುದು ಆದ್ದರಿಂದ ಕಾರಣ ನನಗೆ ಶೋಕವು ಹುಟ್ಟಿತು ಹೇಗೆಂದರೆ) ಬಾಂಧವಾದಿಗಳ ದೇಹಾದಿಗಳು ನೋಡಲಿಕ್ಕೆ ಇಲ್ಲವೆಂದಾಗುತ್ತದೆ ಭಿನ್ನಭಿನ್ನಗಳಾದ ಶರೀರಾದಿಗಳನ್ನು ನೋಡಬೇಕಾಗುವುದು, ಇತ್ಯಾದಿಗಳಿಂದ ಶೋಕವು, (ಅಂದರೆ ಪ್ರೀತಿಪಾತ್ರರಾದ ಬಂಧುಗಳನ್ನು ನೋಡುವುದು ಅವರೊಡನೆ ಮಾತಾಡುವುದು ಅವರನ್ನು ಮುಟ್ಟುವುದು ಇದು ಮೊದಲಾದುದು ಸುಖಕ್ಕೆ ಕಾರಣವು ಅವರು ಮೃತರಾದರೆ ಅವರ ದರ್ಶನಾದಿಗಳು ಇಲ್ಲದಿರುವುದರಿಂದ ಸುಖವುಂಟಾಗುವುದಿಲ್ಲ ಹಾಗೆಯೇ ಬಂಧುಗಳ ಛೇದ ಭೇದಾದಿಗಳನ್ನು ನೋಡಿ ದುಃಖವೂ ಉಂಟಾಗುತ್ತದೆ) ಎಂದರೆ—ಹಾಗೆ ಹೇಳಕೂಡದೆನ್ನುತ್ತಾರೆ ಮಾತ್ರಾಸ್ಪರ್ಶಾ ಎಂಬುವ ಶ್ಲೋಕದಿಂದ ಮೀಯಂತೇ=ತಿಳಿಯಲ್ಪಡುತ್ತವೆ ಎಂಬ ವ್ಯುತ್ಪತ್ತಿಯಿಂದ ಮಾತ್ರಾಃ=ವಿಷಯಗಳು, ಅವುಗಳ ಸ್ಪರ್ಶಾಃ=ಸಂಬಂಧಗಳೂ ಅವುಗಳೇ ಶೀತ ಉಷ್ಣ ಸುಖ ದುಃಖಗಳನ್ನು ಕೊಡುತ್ತವೆ (ಅಂದರೆ ಎಲ್ಲಾ ವಿಷಯಗಳ ಜ್ಞಾನವನ್ನು ಹುಟ್ಟಿಸಿ ಸುಖದುಃಖಗಳನ್ನು ಕೊಡುತ್ತವೆ) (೨) ದೇಹೇ=ಇಂದ್ರಿಯಗಳಲ್ಲಿ ಶೀತೋಷ್ಣ ಮೊದಲಾದವುಗಳ ಸಂಬಂಧದಿಂದಲೇ ಜೀವನಿಗೆ ಶೀತೋಷ್ಣಾದಿಗಳ ಜ್ಞಾನವುಂಟಾಗುತ್ತದೆ. ಅದರಿಂದ ಸುಖದುಃಖಗಳು ಹುಟ್ಟುತ್ತವೆ (ಅಂದರೆ ಆಯಾಯ ವಿಷಯಗಳಿಗೆ ಆಯಾಯ ಇಂದ್ರಿಯಗಳ ಸಂಬಂಧಗಳಿಂದ ಆಯಾಯ ವಿಷಯಗಳ ಜ್ಞಾನವುಂಟಾಗುತ್ತದೆ ಅದರಲ್ಲಿ ಇಷ್ಟವಿಷಯಗಳಿಂದ ಸುಖವೂ ಅನಿಷ್ಟ ವಿಷಯಗಳಿಂದ ದುಃಖವೂ ಉಂಟಾಗುತ್ತದೆ) (೩) (ಇದರಿಂದ ಯಾವ ಅರ್ಥವು ಸಿದ್ಧವಾಯಿತೆಂದರೆ—) ಜೀವನಿಗೆ ವಿಷಯ ಇಂದ್ರಿಯಗಳ ಸಂಬಂಧಮಾತ್ರದಿಂದ ವಿಷಯಸಾಕ್ಷಾತ್ಕಾರ ಸುಖದುಃಖಗಳುಂಟಾಗ

ಲಾರವು (ಅಂದರೆ—ಕೇವಲ ವಿಷಯಸಂಬಂಧಗಳೇ ವಿಷಯಗಳ ಜ್ಞಾನದಿಂದುಟಾಗತಕ್ಕ ಸುಖದುಃಖ ಗಳನ್ನು ಕೊಡಲಾರವು ಪರಂತು ಅಭಿಮಾನದಿಂದ ಕೂಡಿದ್ದರೇನೇ ಕೊಡುವವು. ಅಭಿಮಾನವೆಂದರೆ ಈ ವಿಷಯಗಳು ಅತಿಪ್ರಶಸ್ತಗಳು ಎಂಬ ಭ್ರಾಂತಿಯಿಂದುಂಟಾಗುವ ರಾಗವು ಇವನು ಶತ್ರುವು ಇದು ಮೊದಲಾದ ಭ್ರಾಂತಿಯಿಂದುಂಟಾಗುವ ದ್ವೇಷವು. ಈ ಶರೀರವೂ, ಈ ಇಂದ್ರಿಯಗಳೂ, ಈ ಅಂತಃಕರಣವೂ ನನ್ನದೇ ಮತ್ತೊಬ್ಬರದಲ್ಲ, ಎಂದು ಮಮತಾತಿಶಯದಿಂದ ಬರತಕ್ಕ ಅವಿವೇಕವು. ಇತ್ಯಾದಿಗಳು) ಕುತಃ=ವಿಷಯೇಂದ್ರಿಯಗಳ ಸಂಬಂಧಗಳು ಮಾತ್ರ ಜ್ಞಾನಕ್ಕೂ, ಸುಖದುಃಖಗಳಿಗೂ, ಕಾರಣಗಳೆಂದು ಏಕೆ ಆಗಲಾರವು? ಅಭಿಮಾನವೂ ಕಾರಣವೆಂದದ್ದು ಏತಕ್ಕೆಂದರೆ—ಆಗಮಾಪಾಯಿತ್ವಾತ್=(ವಿಷಯ ಸಂಬಂಧಗಳು ಸುಖದುಃಖಗಳನ್ನು ಕೊಡುತ್ತವೆಂಬುದು) ದೇಹೇಂದ್ರಿಯಾದಿಗಳ ಸಂಬಂಧವು ಬರುವುದು, ಹೋಗುವುದು, ಎಂಬುವದರಿಂದ (ಅಭಿಮಾನವು ಕಾರಣವೆಂದುದು ಅದು ಹೇಗೆಂದರೆ—) ವಿಷಯ ಸಂಬಂಧ ಗಳು ಅಭಿಮಾನವಿಲ್ಲದೆ ತಾವೇ ಜೀವರಿಗೆ ವಿಷಯಾನುಭವದಿಂದುಂಟಾಗತಕ್ಕ ಸುಖದುಃಖಗಳನ್ನು ಕೊಡುತ್ತವೆಂದು ಹೇಳುವುದಾದರೆ ಸುಷುಪ್ತಿಕಾಲದಲ್ಲಿಯೂ ಕೊಡಬೇಕಾದೀತು ಯಾವ ಕಾರಣದಿಂದ ಅಭಿಮಾನದಿಂದ ಕೂಡಿದ ವಿಷಯಸಂಬಂಧಗಳೇ ಜಾಗ್ರತ್ ಸ್ವಪ್ನ ಅವಸ್ಥೆಗಳಲ್ಲಿಯೇ ಸುಖದುಃಖಗಳನ್ನು ಕೊಡುತ್ತವೋ ಆದಕಾರಣ ವಿಷಯಸಂಬಂಧಗಳು ಜೀವನಿಗೆ ಅಭಿಮಾನವಿಲ್ಲದೆ ವಿಷಯಾನುಭವದಿಂದುಂ ಟಾಗತಕ್ಕ ಸುಖದುಃಖಗಳನ್ನು ಕೊಡಲಾರವು (ಅದು ಹೇಗೆಂದರೆ—)ವಿಷಯಸಂಬಂಧಗಳು ಅಭಿಮಾನ ವಿರುವ ಜಾಗ್ರದವಸ್ಥೆ ಸ್ವಪ್ನಾವಸ್ಥೆಗಳಲ್ಲಿಯೇ ಅಭಿಮಾನದಿಂದ ಕೂಡಿದವುಗಳಾಗಿ ಸುಖದುಃಖಗಳನ್ನು ಕೊಡುತ್ತವೆ ಅಭಿಮಾನವಿಲ್ಲದಿರುವ ಸುಷುಪ್ತಿ, ಮೋಹ, ಅಸಂಪ್ರಜ್ಞಾತ ಸಮಾಧಿಗಳಲ್ಲಿ ಕೊಡುವು ದಿಲ್ಲ, ಹೀಗೆ ವಿಷಯಸಂಬಂಧಗಳು ಸುಖದುಃಖಗಳನ್ನು ಕೊಡುತ್ತವೆಂಬುದು ಅಭಿಮಾನವಿದ್ದರೆ ಆಗು ವುದು. ಅಭಿಮಾನವಿಲ್ಲದಿದ್ದರೆ ಆಗುವುದಿಲ್ಲ ಎಂಬ ಅನ್ವಯವ್ಯತಿರೇಕಗಳನ್ನು ಅನುಸರಿಸಿಕೊಂಡಿರು ವವುಗಳು ॥ ೧ ॥

ಪೀ – ಅಭಿಮಾನವೇ ಜೀವರಿಗೆ ವಿಕಾರಕಾರಣವೆನ್ನುತ್ತಾರೆ –

ಭಾ ॥ (೧) ಆತ್ಮನಸ್ತು ತೈರ್ವಿಷಯವಿಷಯಿಭಾವಸಂಬಂಧಾದನ್ಯಃ ಸಂಬಂಧೋ ನಾಸ್ತಿ ॥ (೨)ನ ಚಾಗಮಾಪಾಯಿತ್ವೇಽಪಿ ಪ್ರವಾಹರೂಪೇಣ ನಿತ್ಯತ್ವಮಸ್ತಿ। ಸುಷುಪ್ತಿಪ್ರಲಯಾ-ದಾವಭಾವಾದಿತ್ಯಾಹ । ಅನಿತ್ಯಾ ಇತಿ ॥ (೩) ಅತಸ್ತ್ವಾತ್ಮನೋ ದೇಹಾದ್ಯಾತ್ಮಭ್ರಮ ಏವ ಸುಖದುಃಖಕಾರಣಂ ॥ (೪) ಅತಸ್ತದ್ವಿಮುಕ್ತಸ್ಯ ಬಂಧುಮರಣಾದಿದುಃಖಂ ನ ಭವತಿ ॥ (೫) ಅತೋಽಭಿಮಾನಂ ಪರಿತ್ಯಜ್ಯ ತಾನ್ ಶೀತೋಷ್ಣಾದೀಂಸ್ತಿತಿಕ್ಷಸ್ವ ॥ ॥ ೨ ॥ ॥ ೧೪ ॥

ಅ ॥ (೧) (ಜ್ಞಾನಸುಖದುಃಖಗಳು ಮನಸ್ಸಿನಲ್ಲಿರತಕ್ಕವುಗಳಾದುದರಿಂದ) ಜೀವರಿಗೆ ಜ್ಞಾನಾದಿ ಗಳಿಂದ ವಿಷಯವಿಷಯಿಭಾವಸಂಬಂಧಕ್ಕಿಂತ ಬೇರೆ ಸಂಬಂಧವಿಲ್ಲ (ಮನಸ್ಸಿನಲ್ಲಿದ್ದ ಧರ್ಮಗಳು ಜೀವನಿಗೆ ಅಭಿಮಾನವಿಲ್ಲದೆ ನೀಚೋಚ್ಚತ್ವರೂಪವಾದ ವಿಕಾರಕ್ಕೆ ಕಾರಣಗಳು ಆಗಲಾರವು, ಮನಸ್ಸಿ ನಲ್ಲಿರತಕ್ಕ ಜ್ಞಾನಾದಿಗಳು ವಿಷಯಗಳು ಜೀವನು ವಿಷಯಿಯು ಸಾಕ್ಷಿಚೈತನ್ಯವು ಮನಸ್ಸಿನಲ್ಲಿರುವ ಜ್ಞಾನಾದಿಗಳನ್ನು ವಿಷಯೀಕರಿಸುವುದರಿಂದ ವಿಷಯಿಯು.) (೨) (ಅಭಿಮಾನವಿದ್ದರೇನೇ ವಿಷಯ ಸಂಬಂಧಗಳು ಜ್ಞಾನಾದಿಗಳಿಗೆ ಕಾರಣಗಳು ಕೇವಲ ವಿಷಯಸಂಬಂಧಗಳಲ್ಲ ಎಂದುಕ್ತವಾಗಿದೆ ಆದ ಕಾರಣ ಅನಿತ್ಯಾಃ ಎಂಬುವುದು ವ್ಯರ್ಥವೆಂದರೆ ಹಾಗೆ ಹೇಳಕೂಡದು ಅನಿತ್ಯಾಃ ಎಂಬುವುದರಿಂದ

ಆಗಮಾಪಾಯಿನಃ ಎಂಬುದರ ಅರ್ಥ ಹೇಳಿದ್ದು ಅದರಿಂದ ಪ್ರಯೋಜನವೇನೆಂದರೆ —) ಬರತಕ್ಕವುಗಳು ಹೋಗತಕ್ಕವುಗಳಾದಾಗ್ಯೂ (ಸ್ವರೂಪತಃ ಅನಿತ್ಯಗಳಾದಾಗ್ಯೂ) ವಿಷಯಸಂಬಂಧಗಳಿಗೆ ಪ್ರವಾಹರೂಪ ದಿಂದಲೂ ನಿತ್ಯತ್ವವಿಲ್ಲ ಸುಪ್ತಿ ಮೂರ್ಛಾ ಅಸಂಪ್ರಜಾತಸಮಾಧಿಗಳಲ್ಲಿ ಇಲ್ಲದಿರುವುದರಿಂದ, ಎಂದು **ಅನಿತ್ಯಾಃ** ಎನ್ನುವುದರಿಂದ ಹೇಳಿದರು. (೩) ಆದಕಾರಣ ಹಿಂದೆ ಹೇಳಿದ ಪ್ರಕಾರ ಜೀವನಿಗೆ ದೇಹ ಇಂದ್ರಿಯ ಅಂತಃಕರಣಗಳಲ್ಲಿ ಇವು ನನ್ನದು ಎಂದು ಭ್ರಮೆಯು ವಿಷಯಗಳಲ್ಲಿ ಇವು ಪ್ರಶಸ್ತಗಳು, ಇವು ಕೆಟ್ಟವು ಇತ್ಯಾದಿ ಭ್ರಮೆಯೇ ಇವುಗಳಿಂದ ಕೂಡಿದ ವಿಷಯಸಂಬಂಧಗಳೇ ಸುಖದುಃಖಗಳಿಗೆ ಕಾರಣ ಗಳು. (೪) ಆದುದರಿಂದ ಇಂತಹ ಭ್ರಮೆ ಇಲ್ಲದವನಿಗೆ ಬಾಂಧವರ ಮರಣಾದಿಗಳಿಂದ ದುಃಖವು ಬರುವು ದಿಲ್ಲ. (೫) ಆದುದರಿಂದ ಅಭಿಮಾನವನ್ನು ಬಿಟ್ಟು ಆ ಶೀತೋಷ್ಣಾದಿ ದುಃಖಗಳನ್ನು (ಉಂಟಾಗ ದಿದ್ದ ಹಾಗೆ ಮಾಡು ) ॥ ೧೪ ॥

ಟೀ— ಬಾಲ್ಯಾದ್ಯವಸ್ಥೆಗಳು ಹೋಗಿ ತಾರುಣ್ಯಾದ್ಯವಸ್ಥೆಗಳು ಬಂದರೂ ಮರಳಿ ಅದೇ ಶರೀರವು ಕಾಣುವುದರಿಂದ ಶೋಕವಿಲ್ಲವೆಂಬುದು ಕೂಡುತ್ತದೆ ಆ ದೇಹವೇ ಹೋಗಿ ಹೊಸದೇಹವು ಬಂದರೆ— ಹಳೆ ಶರೀರದ ದರ್ಶನಾದಿಗಳು ಆಗದಿರುವುದರಿಂದ ದುಃಖವು, ಎಂಬ ಆಶಂಕೆಯನ್ನು ಪರಿಹರಿಸುವುದ ಕ್ಕಾಗಿ **ಮಾತ್ರಾಸ್ಪರ್ಶಾ** ಎಂಬ ಶ್ಲೋಕವು ಎಂದು ಹೇಳುತ್ತಾರೆ—

**ತಾ ॥ ತದದರ್ಶನಾದಿನಿಮಿತ್ತಂ ಸೋಢವ್ಯಮಿತ್ಯಾಹ । ಮಾತ್ರಾಸ್ಪರ್ಶಾ ಇತಿ । ವಿಷಯ- ಸಂಬಂಧಾಃ ॥ ೧೪ ॥**

**ಅ** ॥ ಬಂಧುಗಳು ಕಾಣದಿರುವುದು, ಅವರೊಡನೆ ಮಾತಾಡದಿರುವುದು ಇತ್ಯಾದಿಗಳಿಂದುಂಟಾಗ ತಕ್ಕ ದುಃಖವನ್ನು ಅಭಿಮಾನಬಿಡುವುದರಿಂದ ಪರಿಹರಿಸಿಕೊಳ್ಳಬೇಕು ಮಾತ್ರಾಸ್ಪರ್ಶಾಃ ಎಂಬುವುದಕ್ಕೆ ವಿಷಯಗಳ ಸಂಬಂಧಗಳು ಎಂದರ್ಥವು ॥ ೧೪ ॥

**ಟೀ**— ಬಂಧುಗಳೊಡನೆ ಯುದ್ಧಮಾಡಿ ಯುದ್ಧದಲ್ಲಿ ಛಿನ್ನಭಿನ್ನವಾದ ಬಂಧುಗಳ ಶರೀರವನ್ನು ನೋಡಿದುದರಿಂದುಂಟಾಗತಕ್ಕ ದುಃಖವನ್ನು ಅಭಿಮಾನ ತೊರೆದು ದುಃಖವುಂಟಾಗದಂತೆ ಮಾಡಿಕೊಳ್ಳು ವುದಕ್ಕಿಂತ ಯುದ್ಧ ಮಾಡದೇನೇ ಇರಬಹುದು ಎಂದರೆ— ಅಭಿಮಾನಬಿಡೋಣದರಿಂದುಂಟಾಗತಕ್ಕ ದುಃಖಾಭಾವವು ಫಲರೂಪವೂ ಪರಮಪುರುಷಾರ್ಥವಾದ ಮೋಕ್ಷಕ್ಕೆ ಕಾರಣವೂ ಆಗುತ್ತದೆ ಎನ್ನುತ್ತಾರೆ—

**ಗೀ ॥ ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥ ೧೫ ॥**

**ಅ ॥ ಪುರುಷರ್ಷಭ**=ಪುರುಷಶ್ರೇಷ್ಠನಾದ ಅರ್ಜುನನೇ, **ಏತೇ**=ವಿಷಯೇಂದ್ರಿಯ ಸಂಬಂಧಗಳು **ಪುರುಷಂ**=ಬ್ರಹ್ಮಜ್ಞಾನಿಯಾದ, **ಧೀರಂ**=ದುಃಖವು ಪ್ರಸಕ್ತವಾದರೂ ದುಃಖವು ಬಾರದಂತೆ ಪ್ರಯತ್ನ ಪಡುವ, **ಸಮದುಃಖಸುಖಂ**=ದುಃಖಕ್ಕೆ ಸಮವಾದ ಸುಖವುಳ್ಳ (ಅಂದರೆ—ಪುರುಷಾರ್ಥವಾಗದಿರುವುದ ರಿಂದ ದುಃಖವು ಹೇಗೆ ಇಚ್ಛಿಸಲು ಯೋಗ್ಯವಲ್ಲವೋ ಹಾಗೆಯೇ ವಿಷಯಾನುಭವದಿಂದುಂಟಾಗುವ ಐಹಿಕ ಸುಖವೂ ಮೋಕ್ಷಕ್ಕೆ ವಿರೋಧಿಯಾಗಿರುವ ಕಾರಣ ಇಚ್ಛಿಸಲು ಯೋಗ್ಯವಲ್ಲವೆಂದು ತಿಳಿದಿರುವ) **ಯಂ**= ಅಭಿಮಾನವನ್ನು ತೊರೆದಿರುವ ಯಾವ ಸ್ತ್ರೀಯರನ್ನಾಗಲೀ ಪುರುಷರನ್ನಾಗಲೀ, **ನ ವ್ಯಥಯಂತಿ**=ಸುಖ ದುಃಖಗಳ ನಿಮಿತ್ತವಾಗಿ ಉತ್ಕೃಷ್ಟತ್ವನೀಚತ್ವರೂಪ ವಿಕಾರವನ್ನು ಹೊಂದಿಸಿಕೊಡುವುದಿಲ್ಲವೋ, **ಸಃ**=ಅಂತಹ

ಅಧಿಕಾರಿಯು, ಅಮೃತತ್ವಾಯ=ಮೋಕ್ಷವನ್ನು ಹೊಂದಲಿಕ್ಕೆ ಕಲ್ಪತೇ=ಸಮರ್ಥನಾಗುತ್ತಾನೆ. ಹಿ= ಪ್ರಮಾಣ ಪ್ರಸಿದ್ಧವು. ॥ ೧೫ ॥

**ಭಾ ॥ (೧) ಅತಃ ಪ್ರಯೋಜನಮಾಹ । ಯಂ ಹೀತಿ । ಯಮೇತೇ ಮಾತ್ರಾಸ್ಪರ್ಶಾ ನ ವ್ಯಥಯಂತಿ ॥ (೨) ಪುರಿಶಯಮೇವ ಸಂತಂ । ಶರೀರಸಂಬಂಧಾಭಾವೇ ಸರ್ವೇಷಾಮಪಿ ವ್ಯಥಾಭಾವಾತ್ಪುರುಷಮಿತಿ ವಿಶೇಷಣಂ ।' (೩) ಕಥಂ ನ ವ್ಯಥಯಂತಿ । ಸಮದುಃಖಸುಖತ್ವಾತ್ ॥ (೪) ತತ್ಕಥಂ । ಧೈರ್ಯೇಣ ॥ ೧೫ ॥**

ಅ ॥ (೧) (ದುಃಖಾಭಾವವು ಯುದ್ಧವನ್ನು ಮಾಡದಿರುವುದರಿಂದಲೇ ಉಂಟಾಗುವುದರಿಂದ ಯುದ್ಧವನ್ನು ಮಾಡಿ ಅದರಿಂದುಂಟಾಗತಕ್ಕ ದುಃಖವು ಬಾರದಿರುವುದಕ್ಕಾಗಿ ಅಭಿಮಾನ ಬಿಡುವುದು ಏತಕ್ಕೆ ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ) ವಿಷಯಸಂಬಂಧಗಳು ಸುಖದುಃಖಗಳನ್ನು ಕೊಡದೆ ಹಾಗೆ ಮಾಡಿದುದರಿಂದಾಗತಕ್ಕ ಪ್ರಯೋಜನವನ್ನು ಹೇಳುತ್ತಾರೆ—(ಹಿಂದಿನ ಶ್ಲೋಕದಲ್ಲಿದ್ದ ತಿತಿಕ್ಷಸ್ವ ಎಂಬುದಕ್ಕೆ ಸಹನಮಾಡಿಕೋ ಎಂದು ಕೆಲವರು ಅರ್ಥ ಹೇಳಿರುವರು ಅದು ಅಯುಕ್ತವು, ಅದನ್ನು ಅನುವಾದ ಮಾಡಿಕೊಂಡರೆ ಇಲ್ಲಿ ನಿಷ್ಫಲವನ್ನಾಗಿ ಮಾಡು ಎಂದೇ ತೋರುತ್ತದೆ, ಎಂಬ ಅಭಿಪ್ರಾಯದಿಂದ ಒಂದನೇ ಪಾದಕ್ಕೆ ಅರ್ಥ ಹೇಳುತ್ತಾರೆ—) ಯಾರಿಗೆ ಈ ವಿಷಯಸಂಬಂಧಗಳು ಶೀತೋಷ್ಣ ಸುಖದುಃಖರೂಪವಾದ ವೈಷಮ್ಯವನ್ನು ಕೊಡುವುದಿಲ್ಲವೋ, (೨) (ಮೈತ್ರೇಯಿ ಮೊದಲಾದ ಸ್ತ್ರೀಯರಿಗೂ ಮುಕ್ತಿಯು ಆಗುವ ಪ್ರಯುಕ್ತ ಪುರುಷಂ ಎಂಬ ವಿಶೇಷಣವು ಅಯುಕ್ತವೆಂದರೆ) ಪುರುಷಂ=ಶರೀರಸಂಬಂಧಿಯಾಗಿಯೇ ಇರುವವನು (ಅಂದರೆ ದೇಹಾಭಿಮಾನವುಳ್ಳವರು ಅಂತಹರು ಪುರುಷರೂ ಸ್ತ್ರೀಯರೂ ಆಗಬಹುದು) ಶರೀರಸಂಬಂಧವಿಲ್ಲವೆಂದಾದರೆ—(ಸುಷುಪ್ತ್ಯಾದಿಗಳಲ್ಲಿ) ಪ್ರಕೃತಿಸಂಬಂಧವಿರುವರಿಗೆಲ್ಲರಿಗೂ (ನಮ್ಮದೆಂಬ ಅಭಿಮಾನವಿಲ್ಲದಿರುವುದರಿಂದ) ವ್ಯಥೆಯು ಇಲ್ಲದಿರುವಪ್ರಯುಕ್ತ ಮೋಕ್ಷವು ಆಗಬೇಕಾಗುವುದು ಎಂಬ ಆಶಂಕೆಯನ್ನು ಹೋಗಲಾಡಿಸುವುದಕ್ಕಾಗಿ ಪುರುಷಂ ದೇಹಾಭಿಮಾನವುಳ್ಳವನು ಎಂಬ ವಿಶೇಷಣವು. (೩) ಎಂತಹ ಅಭಿಮಾನವನ್ನು ತೊರೆದರೆ ವಿಷಯಸಂಬಂಧಗಳು ವ್ಯಥೆಪಡಿಸುವುದಿಲ್ಲವೋ ಅಂತಹ ಅಭಿಮಾನ ಪರಿತ್ಯಾಗವು ಯಾವ ಉಪಾಯದಿಂದ ಆಗುತ್ತವೆ? ಎಂದರೆ—ಪುರುಷರು ದುಃಖವನ್ನು ಹೇಗೆ ಅಪೇಕ್ಷಿಸುವುದಿಲ್ಲವೋ, ಹಾಗೆಯೇ ವಿಷಯಾನುಭವದಿಂದುಂಟಾಗತಕ್ಕ ಸುಖವೂ ಕೂಡ ಮೋಕ್ಷಕ್ಕೆ ವಿರೋಧಿಯಾಗಿರುವುದರಿಂದ ಅದನ್ನು ಸ್ವೀಕರಿಸಬಾರದು (೪) ಅಂತಹ ದುಃಖಸಮಾನವಾದ ಸುಖವೂ ಯಾವ ಉಪಾಯದಿಂದ ಆಗುತ್ತದೆ? ಎಂದರೆ-ಸುಖದುಃಖಗಳು ಬಂದರೂ ಅವುಗಳಿಂದ ಆಗತಕ್ಕ ಉತ್ಸಾಹ ವಿಷಾದಗಳನ್ನು ಹುಟ್ಟದಂತೆ ಮಾಡುವ ಪ್ರಯತ್ನದಿಂದ ಆಗುತ್ತದೆ ॥ ೧೫ ॥

ಹೀ—ಯುದ್ಧ ಮಾಡದಿದ್ದರೆ ದುಃಖವು ಹುಟ್ಟುವುದಿಲ್ಲ ಆದಪ್ರಯುಕ್ತ ಯುದ್ಧ ಮಾಡಿ ದುಃಖವು ಉಂಟಾಗದಂತೆ ಅಭಿಮಾನವನ್ನು ಬಿಡುವುದು ಏತಕ್ಕೆ ಎಂದರೆ

**ತಾ ॥ (೧) ಫಲಮಾಹ । ಯಂ ಹೀತಿ ॥ (೨) ನ ಕೇವಲಮವ್ಯಥಾಮಾತ್ರೇಣಾಮೃತತ್ವಂ ಕಿಂ ತು ಪುರುಷಂ । ಪುರುಬ್ರಹ್ಮಗುಣಾಧಿಕ್ಯಾತ್ತಜ್ಜ್ಞಾನಾತ್ಪುರುಷಃ ಸ್ಮೃತಃ । ಇತಿ ಪ್ರವೃತ್ತೇ । ಪುರುಸರಣಾತ್ಪುರುಷ ಇತ್ಯರ್ಥಃ ॥ ೧೫ ॥**

ಅ ॥ (೧) (ಅಭಿಮಾನವನ್ನು ಬಿಡೋಣದರಿಂದ ಆಗತಕ್ಕ ದುಃಖಪರಿತ್ಯಾಗವು) ಫಲರೂಪವಾದುದಾಗ್ಯೂ ಮೋಕ್ಷಕ್ಕೆ ಕಾರಣವೂ ಆಗುತ್ತದೆ, ಎಂದು ಯಂ ಹಿ ಎಂಬ ಶ್ಲೋಕದಿಂದ ಹೇಳುತ್ತಾರೆ—(೨)

(ವ್ಯಥೆಯನ್ನು ಮಾತ್ರ ಬಿಟ್ಟರೆ ಮೋಕ್ಷವನ್ನು ಹೊಂದುವುದು ಹೇಗೆ? ತಮೇವಂ ವಿದ್ವಾನ್ ಇತ್ಯಾದಿಗಳಲ್ಲಿ ಪರಬ್ರಹ್ಮನ ಜ್ಞಾನವಾವಶ್ಯಕವೆಂದು ಹೇಳಿದೆ ಎಂದರೆ—) ವ್ಯಥೆಯನ್ನು ಮಾತ್ರ ಬಿಟ್ಟರೆ ಮೋಕ್ಷವಾಗ ಲಾರದು. ಮತ್ತೆ ಪರಬ್ರಹ್ಮನ ಜ್ಞಾನಿಯಾಗಬೇಕು ಅದಕ್ಕಾಗಿ ಪುರುಷಂ ಎಂಬ ವಿಶೇಷಣವು ಅಂದರೆ ಪೂರ್ಣಗುಣಗಳಿದ್ದುದರಿಂದ ಪರಬ್ರಹ್ಮನು ಪುರು ಎನಿಸುತ್ತಾನೆ ಅವನನ್ನು ತಿಳಿಯುವುದರಿಂದ ಪುರುಷ ನೆನಿಸುತ್ತಾನೆ ಎಂದು ಪ್ರವೃತ್ತವೆಂಬ ಗ್ರಂಥದಲ್ಲಿದೆ ಏವಂಚ ಗುಣಪೂರ್ಣನಾದ ಶ್ರೀಪರಬ್ರಹ್ಮನ ಜ್ಞಾನ ದಿಂದ ಪುರುಷನೆನಿಸುತ್ತಾನೆ ॥ ೧೫ ॥

ಪೀ—ಪಾಪಮೇವಾಶ್ರಯೇದಸ್ಮಾನ್ ಹತ್ವಾ ಇತ್ಯಾದಿಗಳಿಂದ ಯುದ್ಧದಲ್ಲಿ ಬಾಂಧವರನ್ನು ಕೊಂದರೆ ಪರಲೋಕದಲ್ಲಿ ದುಃಖವುಂಟಾಗುತ್ತದೆಂದು ಹೇಳಿದೆ. ಅದುಕಾರಣ ಶೋಕವೆಂದರೆ—

ಗೀ ॥ ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।
ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥ ೧೬ ॥

ಅ ॥ ಅಸತಃ=ಅಸತ್ಕರ್ಮದಿಂದ, ಭಾವಃ=ಸುಖವು, ನ ವಿದ್ಯತೇ=ಉಂಟಾಗುವುದಿಲ್ಲ ಸತಃ=ಶಾಸ್ತ್ರ ವಿಹಿತವಾದ ಸತ್ಕರ್ಮದಿಂದ, ಅಭಾವಃ=ದುಃಖವು, ನ=ಉಂಟಾಗುವುದಿಲ್ಲ ತತ್ವದರ್ಶಿಭಿಃ=ತತ್ವಜ್ಞಾನಿ ಗಳಿಂದ. ಉಭಯೋರಪ್ಯನಯೋಃ=ಸತ್ಕರ್ಮದಿಂದ ದುಃಖವುಂಟಾಗುವುದಿಲ್ಲ, ದುಷ್ಕರ್ಮದಿಂದ ಸುಖ ವುಂಟಾಗುವುದಿಲ್ಲ, ಎಂಬೀ ಎರಡರ, ಅಂತಃ=ನಿರ್ಣಯವು. ದೃಷ್ಟಃ=ಕಾಣಲ್ಪಟ್ಟದೆ ಅಥವಾ ಅಸತಃ= ಕಾರಣವಾದ ಪ್ರಕೃತಿಗೆ ಅಭಾವಃ=ಪ್ರಾಗಭಾವವೂ (ವಸ್ತು ಹುಟ್ಟುವುದಕ್ಕಿಂತ ಮೊದಲಿದ್ದ ಅಭಾವವು,) ಪ್ರಧ್ವಂಸವೂ (ವಸ್ತುನಾಶಾನಂತರದಲ್ಲಿರುವ ಅಭಾವವು) ನ ವಿದ್ಯತೇ=ಇರುವುದಿಲ್ಲ ಸತಃ=ಬ್ರಹ್ಮನಿಗೆ ಅಭಾವಃ=ಪ್ರಾಗಭಾವವೂ, ಪ್ರಧ್ವಂಸವೂ ನ ವಿದ್ಯತೇ=ಇರುವುದಿಲ್ಲ, ಉಭಯೋರಪ್ಯನಯೋಃ= ಅನಾದಿನಿತ್ಯದಿಂದ ಇವರಿಬ್ಬರ, ಅಂತಃ=ನಿರ್ಣಯಭೂತವಾದ ಪರಂಪರೋಪದೇಶರೂಪವಾದ ಸಂಪ್ರ ದಾಯವು, ತತ್ವಜ್ಞಾನಿಗಳಿಂದ ಕಾಣಲ್ಪಟ್ಟದೆ ॥ ೧೬ ॥

ಭಾ ॥ (೧) ನಿತ್ಯ ಆತ್ಮೇತ್ಯುಕ್ತಂ । ಕಿಮಾತ್ಮೈವ ನಿತ್ಯ ಆಹೋಸ್ವಿದನ್ಯದಪಿ । ಅನ್ಯದಪಿ ತತ್ಕಿಮಿತ್ಯತ ಆಹ । ನಾಸತ ಇತಿ ॥ (೨) ಅಸತಃ ಕಾರಣಸ್ಯ ಸತೋ ಬ್ರಹ್ಮಣಶ್ಚಾ- ಭಾವೋ ನ ವಿದ್ಯತೇ । ಪ್ರಕೃತಿಃ ಪುರುಷಶ್ಚೈವ ನಿತ್ಯೌ ಕಾಲಶ್ಚ ಸತ್ತಮ । ಇತಿ ವಚನಾಚ್ಛ್ರೀವಿಷ್ಣುಪುರಾಣೇ । ಪೃಥಗ್ವಿದ್ಯತ ಇತ್ಯಾದರಾರ್ಥಃ ॥ (೩) ಅಸತಃ ಕಾರಣತ್ವಂ ಚ ಸದಸದ್ರೂಪಯಾ ಚಾಸೌ ಗುಣಮಯ್ಯಾ ಗುಣೋ ವಿಭುಃ । ಇತಿ ಶ್ರೀಭಾಗವತೇ । ಅಸತಃ ಸದಜಾಯತ । ಇತಿ ಚ । ಅವ್ಯಕ್ತೇಶ್ಚ ॥ (೪) ಸಂಪ್ರದಾ- ಯತಶ್ಚೈತತ್ಸಿದ್ಧಮಿತ್ಯಾಹ । ಉಭಯೋರಪೀತಿ । ಅಂತೋ ನಿರ್ಣಯಃ ॥ ೧೬ ॥

ಅ ॥ (೧) (ಅನಾದಿಯಾದುದರಿಂದ) ಆತ್ಮನು ನಿತ್ಯನೆಂದು (ನತ್ವೇವಾಹಂ ಎಂಬುವಲ್ಲಿ) ಹೇಳಿ ಯದೆ ಆತ್ಮನು ಮಾತ್ರ ನಿತ್ಯನೂ ಅನಾದಿಯೋ, ಅಥವಾ ಬೇರೆಯೂ ನಿತ್ಯವೂ ಅನಾದಿಯೂ ಇದೆಯೋ, (ಆತ್ಮನು ಮಾತ್ರ ನಿತ್ಯನೆಂಬುವ ಕಲ್ಪದಲ್ಲಿ ದೃಷ್ಟಾಂತವೇ ಇಲ್ಲ ಆದಕಾರಣ) ಆತ್ಮನಿಂದ ಬೇರೆ ನಿತ್ಯವೂ ಅನಾದಿಯೂ ಆದ ವಸ್ತುವು ಇದೆ ಅದು ಯಾವುದೆಂದರೆ ನಾಸತಃ ಎಂಬ ಶ್ಲೋಕದಿಂದ ಹೇಳುತ್ತಾರೆ (೨) (ಆ ಶ್ಲೋಕದ ಅರ್ಥವನ್ನು ಹೇಳುತ್ತಾರೆ) ಅಸತಃ=ಕಾರಣವಾದ ಪ್ರಕೃತಿಗೂ, ಸತಃ=ಪರಬ್ರಹ್ಮ

ನಿಗೂ, ಅಭಾವಃ=ಪ್ರಾಗಭಾವವೂ ಪ್ರಧ್ವಂಸವೂ, ಇಲ್ಲ. (ನಿತ್ಯವಾದುದು ಬೇರೆಯೂ ಇದೆ, ಎಂಬಲ್ಲಿ ಪ್ರಮಾಣ ಹೇಳುತ್ತಾರೆ—) ಜ್ಞಾನಿಶ್ರೇಷ್ಠನೇ ಪ್ರಕೃತಿಯೂ ಪರಮಾತ್ಮನೂ ಕಾಲವೂ ನಿತ್ಯವಾಗಿವೆ ಎಂದು ಶ್ರೀವಿಷ್ಣುಪುರಾಣದಲ್ಲಿದೆ. (13 – 20) **ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ** ಎಂಬ ಪ್ರಮಾಣದಿಂದ ಪ್ರಕೃತ್ಯಾದಿಗಳು ಅನಾದಿಗಳಾಗಿವೆಂದೂ ಇಟ್ಟುಕೊಳ್ಳಬೇಕು.) ಈ ಶ್ಲೋಕದಲ್ಲಿ **ಅಸತಃ** ಅಭಾವೋ ನ ವಿದ್ಯತೇ ಸತಶ್ಚಾಭಾವೋ ನ ವಿದ್ಯತೇ ಎಂದು ಎರಡಕ್ಕೂ ಪ್ರತ್ಯೇಕವಾಗಿ ಪ್ರಾಗಭಾವ ಪ್ರಧ್ವಂಸಗಳನ್ನು ನಿಷೇಧಿಸಿದ್ದು ನಿತ್ಯತ್ವವಿದ್ದಲ್ಲಿ ಅನಾದಿತ್ವವಿದೆ, ಎಂಬುವಲ್ಲಿ ಮುಖ್ಯತಾತ್ಪರ್ಯವನ್ನು ತಿಳಿಸುತ್ತಾ ಜೀವರು ನಿತ್ಯರೆಂಬ ವಿಷಯದಲ್ಲಿ ಪರಬ್ರಹ್ಮ ಪ್ರಕೃತಿ ಮೊದಲಾದ ಅನೇಕ ದೃಷ್ಟಾಂತ ಗಳನ್ನು ತೋರಿಸಿರುವರು (೩) (ಸತಃ ಎಂಬುವುದಕ್ಕೆ ಬ್ರಹ್ಮಣಃ ಎಂಬ ಅರ್ಥವು ಕೂಡಿದರೂ **ಅಸತಃ** ಎಂಬುದಕ್ಕೆ ಕಾರಣಸ್ಯ ಎಂಬುವುದು ಅರ್ಥವು ಹೇಗೆ ಕೂಡುತ್ತದೆಂದರೆ—) ಸದಸದ್ರೂಪಯಾ= ಕಾರ್ಯಕಾರಣರೂಪವೂ ಸತ್ವರಜಸ್ತಮೋಗುಣರೂಪವೂ ಆದ ಪ್ರಕೃತಿಯಿಂದ ಸತ್ವರಜಸ್ತಮೋಗುಣ ಗಳಿಲ್ಲದ ಶ್ರೀಹರಿಯು (ಜಗತ್ತನ್ನು ಸೃಷ್ಟಿಸುತ್ತಾನೆ) ಎಂದು ಭಾಗವತಪ್ರಮಾಣದಿಂದಲೂ (**ಅಸದ-ವ್ಯಕ್ತರೂಪತ್ವಾತ್ಕಾರಣಂ ಚಾಪಿ ಶಬ್ದಿತಂ** ಎಂಬ ಪ್ರಮಾಣದಿಂದಲೂ) ಅಸತ್ ಎಂಬ ಶಬ್ದಕ್ಕೆ ಕಾರಣವೆಂಬುವ ಅರ್ಥವಿದೆ ಮತ್ತು ಅಸತಃ=ಕಾರಣದಿಂದ, ಸತ್=ಕಾರ್ಯವು, ಹುಟ್ಟಿತು ಎಂದು ಶ್ರುತಿಯಿದೆ ಕಾರಣವು ಅವ್ಯಕ್ತಸ್ವರೂಪವಾಗಿರುವುದರಿಂದಲೂ ಅಸತ್ ಎನಿಸುತ್ತದೆ (೪) ಪ್ರಕೃತಿ ಪುರುಷರಿಗೆ ಅನಾದಿನಿತ್ಯತ್ವವು ಶಾಸ್ತ್ರಮೂಲಕ ಉಪದೇಶಪರಂಪರಾರೂಪವಾದ ಸಂಪ್ರದಾಯದಿಂದಲೇ ಸಿದ್ಧವಾಗಿದೆಂದು **ಉಭಯೋರಪಿ** ಎನ್ನುವುದರಿಂದ ಹೇಳುತ್ತಾರೆ **ನಿರ್ಣಯಃ** ಎನ್ನುವುದಕ್ಕೆ ಅನಾದಿ ನಿತ್ಯತ್ವ ನಿಶ್ಚಯವೆಂದರ್ಥವು (ವಿನಾಶಾದಿ ರೂಪವಾದ ಅರ್ಥವಲ್ಲ) ॥ ೧೬ ॥

ಪೀ—ಪಾಪಮೇವಾಶ್ರಯೇದಸ್ಮಾನ್ ಇತ್ಯಾದಿಗಳಿಂದ, ಯುದ್ಧದಲ್ಲಿ ಬಾಂಧವಾದಿಗಳ ಸಂಹಾ ರಾದಿಗಳನ್ನು ಮಾಡಿದರೆ ಅದರಿಂದ ಪರಲೋಕದಲ್ಲಿ ದುಃಖವುಂಟಾಗುವುಗುದರಿಂದ ಶೋಕವು ಎಂದರೆ—

**ತಾ ॥ (೧) ನ ಚ ಯುದ್ಧಾತ್ಪರಲೋಕದುಃಖಮಿತಿ ಶೋಕಃ । ಅಸತ್ಕರ್ಮಣಃ ಸಕಾಶಾ-ದ್ಭಾವೋ ನಾಸ್ತಿ ಸತ್ಕರ್ಮಣಃ ಸಕಾಶಾದಭಾವೋ ನಾಸ್ತೀತಿ ನಿಯತತ್ವಾತ್ ॥ (೨) ಸದ್ಭಾವವಾಚಿನಃ ಶಬ್ದಾಃ ಸರ್ವೇ ತೇ ಸುಖವಾಚಕಾಃ । ಅಭಾವವಾಚಿನಃ ಶಬ್ದಾಃ ಸರ್ವೇ ತೇ ದುಃಖವಾಚಕಾಃ । ಇತಿ ಶಬ್ದನಿರ್ಣಯೇ ॥ (೩) ಸದ್ಭಾವೇ ಸಾಧು-ಭಾವೇ ಚ ಸದಿತ್ಯೇತತ್ಪ್ರಯುಜ್ಯತೇ । ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ (ಗೀ. ೧೭–೨೬) ಇತಿ ವಕ್ಷ್ಯಮಾಣತ್ವಾತ್ ॥ (೪) ಅಸನ್ನೇವ ಸ ಭವತಿ ಅಸದ್ಬ್ರಹ್ಮೇತಿ ವೇದಚೇದಿತ್ಯಾದೇಶ್ಚ । ಅಂತೋ ನಿರ್ಣಯಃ ॥ ೧ ॥**

ಅ ॥ (೧) ಯುದ್ಧಮಾಡೋಣದರಿಂದ ಪರಲೋಕದಲ್ಲಿ ದುಃಖವುಂಟಾಗುವಪ್ರಯುಕ್ತ ಶೋಕ ವೆಂದು ಹೇಳಕೂಡದು. (ಏಕೆಂದರೆ—**ನಾಸತಃ** ಎಂಬ ಶ್ಲೋಕಕ್ಕೆ ಅರ್ಥ ಹೇಳುತ್ತಾರೆ) ಹೇಗೆ ಅಸ ತ್ಕರ್ಮದಿಂದ ಸುಖವಿಲ್ಲವೋ, ಹಾಗೆಯೇ ಸತ್ಕರ್ಮದಿಂದ ದುಃಖವಿಲ್ಲವೆಂದು ನಿಶ್ಚಿತವಾಗಿದೆ. (ಈ ಯುದ್ಧವು ಭಗವದ್ದ್ವೇಷಿಗಳ ಸಂಹಾರರೂಪವಾಗಿರುವುದರಿಂದ ಸತ್ಕರ್ಮವೇ ಆಗಿದೆ) (೨) ಸತ್ ಭಾವ (ಇರುವಿಕೆ) ಎಂಬ ಅರ್ಥವನ್ನು ಹೇಳುವ ಎಲ್ಲಾ ಶಬ್ದಗಳೂ ಸುಖವೆಂಬ ಅರ್ಥವನ್ನು ಹೇಳುತ್ತವೆ. ಅಭಾವ (ಇಲ್ಲದಿರುವಿಕೆ) ಎಂಬ ಅರ್ಥವನ್ನು ಹೇಳುವ ಎಲ್ಲಾ ಶಬ್ದಗಳೂ ದುಃಖವೆಂಬ ಅರ್ಥವನ್ನು ಹೇಳುತ್ತವೆ, ಎಂದು ಶಬ್ದನಿರ್ಣಯದಲ್ಲಿದೆ (೩) ಎಲೋ ಅರ್ಜುನನೇ ಇರೋಣ, ಸಾಧುತನ, ಪ್ರಶಸ್ತ

ಕರ್ಮ ಈ ಅರ್ಥಗಳಲ್ಲಿ ಸತ್ ಎಂಬ ಶಬ್ದವು ಇರುತ್ತದೆ, ಎಂದು ಮುಂದೆ ಹೇಳುವೆವು. (೩) (ಸತ್ ಶಬ್ದಕ್ಕೆ ಸುಖವೆಂದೂ, ಅಸತ್ ಶಬ್ದಕ್ಕೆ ದುಃಖವೆಂದೂ ಅರ್ಥವು ಇದೆ ಎಂಬಲ್ಲಿ ಪ್ರಯೋಗವನ್ನೂ ಪ್ರಮಾಣವನ್ನೂ ತೋರಿಸುತ್ತಾರೆ) ಪರಬ್ರಹ್ಮನು ದುಃಖವುಳ್ಳವನೆಂದು ತಿಳಿದವನು ದುಃಖವುಳ್ಳವನೇ ಆಗುತ್ತಾನೆ. (ಬ್ರಹ್ಮನು ಸುಖಸ್ವರೂಪನೆಂದು ತಿಳಿದವನು ಸುಖಿಯಾಗುತ್ತಾನೆ) ಇತ್ಯಾದಿ ಪ್ರಮಾಣಗಳಿಂದ (ಈ ಅರ್ಥವು ಸಿದ್ಧಿಸುತ್ತದೆ) ಅಂತಃ=ನಿರ್ಣಯವು ॥ ೧ ॥

ಪೀ—ಅಸತಃ=ಮೊದಲು ಇಲ್ಲದಿದ್ದುದಕ್ಕೆ ಉತ್ಪತ್ತಿಯಿಲ್ಲ, ಇದ್ದುದಕ್ಕೆ ನಾಶವಿಲ್ಲ, ಎಂಬೀ ಭಾಸ್ಕರಾಚಾರ್ಯರ ವ್ಯಾಖ್ಯಾನವನ್ನು ನಿರಾಕರಿಸುತ್ತಾರೆ—

ತಾ ॥ ನ ಚಾವಿದ್ಯಮಾನವಿದ್ಯಮಾನಯೋರುತ್ಪತ್ತಿನಾಶನಿಷೇಧಕೋಽಯಂ ಶ್ಲೋಕಃ । ಪ್ರತ್ಯಕ್ಷವಿರೋಧಾತ್ ॥ (೨) ಸನ್ನಿತಿ ವ್ಯವಹ್ರಿಯಮಾಣಮೇವ ಪದಾರ್ಥಸ್ವರೂಪಮುತ್ಪತ್ತೇಃ ಪ್ರಾಙ್ನಾಶೋತ್ತರಂ ಚ ನಾಸ್ತೀತಿ ಸರ್ವಲೋಕೋ ವ್ಯವಹರತಿ ॥ (೩) ನ ಚ ವಿಪರ್ಯಯೇ ಕಿಂಚಿನ್ಮಾನಂ (ಪ್ರಮಾಣಂ) । ಇದಂ ತು ವಾಕ್ಯಮನ್ಯಥಾಸಿದ್ಧಂ ॥ (೪) ಆದ್ಯಂತಯೋಃ ಸರ್ವಕಾರ್ಯಮಸದೇವೇತಿ ನಿಶ್ಚಿತಂ । ಯದ್ಯಸನ್ನ ವಿಶೇಷೋಽತ್ರ ಜಾಯತೇ ಕೋಽತ್ರ ಜಾಯತೇ ॥ (೫) ವ್ಯಕ್ತಾವಪಿ ಸಮಂ ಹ್ಯೇತದನವಸ್ಥಾಽನ್ಯಥಾ ಭವೇತ್ । ಏವಂ ನಾಶೇಽಪಿ ಬೋದ್ಧವ್ಯಮತೋಽಸನ್ನೇವ ಜಾಯತೇ ॥ (೬) ತಥಾಽಪ್ಯಭೇದಾನುಭವಾತ್ಕಾರ್ಯಕಾರಣಯೋಸ್ಸದಾ । ಭೇದಸ್ಯ ಚಾವಿಶೇಷೇಣ ದೇಹೋಽಗಾತ್ ಕ್ಷಿತಿತಾಮಿತಿ । ವ್ಯವಹಾರೋ ಭವೇದ್ಯಸ್ಮಾದ್ಬಲ್ಯೇವಾನುಭವಸ್ಸದಾ । ಇತಿ ಚ ಬ್ರಹ್ಮತರ್ಕೇ ॥ ೨ ॥

ಅ ॥ (೧) (ಮೊದಲು ಇಲ್ಲದಿದ್ದ ವಸ್ತುವೇ ಹುಟ್ಟುವುದಾಗಿಯೂ ಇದ್ದ ವಸ್ತುವೇ ನಾಶಹೊಂದುವುದಾಗಿಯೂ ಸರ್ವರಿಗೂ ಪ್ರತ್ಯಕ್ಷಾನುಭವವಿದ್ದುದರಿಂದ) ಇಲ್ಲದಿದ್ದುದು ಹುಟ್ಟುವುದಿಲ್ಲ, ಇದ್ದುದು ನಾಶಹೊಂದುವುದಿಲ್ಲ, ಎಂಬೀ ಅರ್ಥವು ನಾಸತಃ ಎಂಬ ಶ್ಲೋಕದ ಅರ್ಥವೆಂದು (ಭಾಸ್ಕರಾಚಾರ್ಯರು ಹೇಳಿದ ಅರ್ಥವು) ಪ್ರತ್ಯಕ್ಷ ವಿರುದ್ಧವು. (೨) ಯಾವ ವಸ್ತುವು "ಸತ್=ಇರುತ್ತದೆ" ಎಂದು ಹೇಳಿಸಿಕೊಳ್ಳಲ್ಪಡುತ್ತದೋ, ಅದೇ ವಸ್ತುವು ಹುಟ್ಟುವುದಕ್ಕಿಂತ ಮುಂಚೆಯೂ ನಾಶವನ್ನು ಹೊಂದಿದ ಅನಂತರವೂ "ನಾಸ್ತಿ=ಇರುವುದಿಲ್ಲ'' ಎಂದು ಎಲ್ಲಾ ಜನರೂ ಹೇಳುವರು (ಇದರಿಂದ ಅವರ ವ್ಯವಹಾರಕ್ಕೆ ಕಾರಣವಾದ ಪ್ರತ್ಯಕ್ಷವಿದೆ ಎಂದು ಊಹಿಸಲಿಕ್ಕೆ ಬರುತ್ತದೆ) (೩) (ಹಾಗಾದರೆ ಅಂತಹ ವ್ಯವಹಾರಕ್ಕೆ ಕಾರಣವಾದುದು ಜ್ಞಾನವೆಂದು ಮಾತ್ರ ಸಿದ್ಧಿಸಬಹುದಲ್ಲದೆ ಪ್ರತ್ಯಕ್ಷವೇ ಸಿದ್ಧಿಸುತ್ತದೆಂಬ ನಿಯಮವಿಲ್ಲವೆಂದರೆ–ಆ ಜ್ಞಾನವು ಅನುಮಾನಾದಿ ಜ್ಞಾನವೋ ಭ್ರಾಂತಿಯೋ, ಹೇತ್ವಾದಿಗಳಿಲ್ಲದಿದ್ದರೂ ಹುಟ್ಟುವ ಪ್ರಯುಕ್ತ ಅನುಮಾನಾದಿ ಜ್ಞಾನವೆಂದು ಹೇಳಲಿಕ್ಕೆ ಆಗುವುದಿಲ್ಲ ಭ್ರಮೆಯೆಂದೂ ಹೇಳಕೂಡದು, ಏಕೆಂದರೆ) ವ್ಯವಹಾರಕ್ಕೆ ಕಾರಣವಾದ ಜ್ಞಾನವು ಭ್ರಮೆಯು ಎಂಬ ವಿಷಯದಲ್ಲಿ ಯಾವುದೊಂದು ಪ್ರಮಾಣವೂ ಇಲ್ಲ (ಅಂದರೆ—ಭ್ರಾಂತಿಯೆಂದು ಹೇಳಬೇಕಾದರೆ ಬಾಧಕ ಜ್ಞಾನವು ಬೇಕು ಇಲ್ಲಿ ಅಂತಹ ಬಾಧಕ ಜ್ಞಾನವಿಲ್ಲ. ಆದುಕಾರಣ ಇದು ಭ್ರಮೆಯಲ್ಲ, ಪರಂತು ವ್ಯವಹಾರಕ್ಕೆ ಕಾರಣವಾದುದು ಪ್ರತ್ಯಕ್ಷವೇ ಎಂದು ಸಿದ್ಧಿಸುತ್ತದೆ) (ಇನ್ನು ನಾಸತಃ ಇತ್ಯಾದಿ ವಾಕ್ಯಗಳಿಂದ ಭ್ರಾಂತಿಜ್ಞಾನವು ಸಿದ್ಧವಾಗುತ್ತದೆಂದು ಶಂಕಿಸಬಹುದು (ಆದರೂ) ನಾಸತಃ ಎಂಬ ಶ್ಲೋಕಕ್ಕೆ ಪ್ರಾಮಾಣಿಕವಾದುದು ಬೇರೆಯೇ ಅರ್ಥವಿದೆ (ಪು 60) (೪) (ಈ ಅರ್ಥವನ್ನೇ ಬ್ರಹ್ಮತರ್ಕಪ್ರಮಾಣದಿಂದ ಸಾಧಿಸುತ್ತಾರೆ) ಮಡಿಕೆ ಮೊದಲಾದ ಎಲ್ಲಾ ಕಾರ್ಯಗಳೂ

ಹುಟ್ಟುವುದಕ್ಕಿಂತ ಮುಂಚೆಯೂ ನಾಶಹೊಂದಿದ ಅನಂತರವೂ "ಅಸತ್=ಇಲ್ಲ" ಎಂದೇ ಸರ್ವರಿಗೂ ಪ್ರತ್ಯಕ್ಷಾನುಭವವಿದೆ (ಹುಟ್ಟುವುದಕ್ಕಿಂತ ಮುಂಚೆ "ಅಸತ್=ಇಲ್ಲದಿದ್ದುದು" ಎಂದು ಒಡಂಬಡದಿದ್ದರೆ ಬಾಧಕ ಹೇಳುತ್ತಾರೆ) ಮಡಿಕೆ ಮೊದಲಾದ ಕಾರ್ಯಗಳಲ್ಲಿ ಕಾಣಬಹುದಾದ ಆಕಾರವಿಶೇಷಗಳು ಮೊದಲು ಇಲ್ಲದಿದ್ದುದು ಹುಟ್ಟುವುದಲ್ಲವಾದರೆ ಹುಟ್ಟಿದವು, ಹುಟ್ಟುತ್ತವೆ, ಮುಂತಾದ ವ್ಯವಹಾರಕ್ಕೂ ಜ್ಞಾನಕ್ಕೂ ವಿಷಯವಿಲ್ಲವೆಂದೇ ಆಗುವುದು (೫) (ಅಭಿವ್ಯಕ್ತಿಯು (ತೋರುವಿಕೆ) ವಿಷಯವು ಎಂದರೆ) ವ್ಯಕ್ತಾವಪಿ ಸಮಂ ಹ್ಯೇತತ್=ಅಭಿವ್ಯಕ್ತಿಯು ವಿಷಯವೆಂದು ಹೇಳುವವರೂ ಮೊದಲು ಇಲ್ಲದಿದ್ದ ಅಭಿವ್ಯಕ್ತಿಯು ಈಗ ಹುಟ್ಟಿತು ಎಂದು ಹೇಳಬೇಕು ವ್ಯಕ್ತಿಯೂ ಮೊದಲು ಇದ್ದುದು ಎಂದು ಒಡಂಬಟ್ಟರೆ ಅಭಿವ್ಯಕ್ತಿಯು ಈಗ ಆಯಿತೆಂಬುವುದು ಕೂಡ ಕೂಡದೆ ಹೋಗುವುದು. ಆದಕಾರಣ ಈಗ ಅಭಿವ್ಯಕ್ತಿಯು ಆಯಿತೆಂಬ ಜ್ಞಾನಕ್ಕೂ ವ್ಯವಹಾರಕ್ಕೂ ವಿಷಯವಿಲ್ಲವೆಂದನ್ನಬೇಕಾಗುವುದು. (ಮೊದಲು ಇದ್ದ ಅಭಿವ್ಯಕ್ತಿಗೇನೇ ಪುನಃ ಅಭಿವ್ಯಕ್ತಿಯು ಕೆಲವು ವೇಳೆ ಮಾತ್ರ ಆಗುತ್ತದೆ ಆದಕಾರಣ ಜ್ಞಾನವ್ಯವಹಾರಗಳೂ ಕೆಲವು ವೇಳೆ ಎಂಬುದು ಕೂಡುತ್ತದೆ ಎಂದರೆ) ಅನವಸ್ಥಾಽನ್ಯಥಾ ಭವೇತ್=ಅಭಿವ್ಯಕ್ತಿಗೂ ಅಭಿವ್ಯಕ್ತಿಯು ಎನ್ನುವುದಾದರೆ—ಆ ಅಭಿವ್ಯಕ್ತಿಯು ಮೊದಲು ಇಲ್ಲವೆಂದೇ ಆಯಿತು, ಮೊದಲು ಇದ್ದ ಅಭಿವ್ಯಕ್ತಿಗೇನೇ ಅಭಿವ್ಯಕ್ತಿಯೆನ್ನುವುದಾದರೆ ಆ ಅಭಿವ್ಯಕ್ತಿಗೂ ಹೀಗೆ, ಆ ಅಭಿವ್ಯಕ್ತಿಗೂ ಹೀಗೆ, ಎಂದು ಅನವಸ್ಥಾ ಎಂಬ ದೋಷವು (ಪ್ರಮಾಣವಿಲ್ಲದಿದ್ದು ಅನಂತಸಜಾತೀಯ ಪದಾರ್ಥಗಳ ಕಲ್ಪನೆಗೆ ಕೊನೆಯಿಲ್ಲದಿರುವುದು) ಬರುವುದು ಏವಂ ನಾಶೇಽಪಿ ಬೋದ್ಧವ್ಯಂ=ಇದ್ದ ವಸ್ತುವು ನಾಶಹೊಂದುವುದಿಲ್ಲ, ಎಂದು ಒಡಂಬಟ್ಟರೂ ಹೀಗೆಯೇ ಬಾಧಕವನ್ನು ತಿಳಿಯಬೇಕು (ಹೇಗೆಂದರೆ-ಇದ್ದ ವಸ್ತುವಿಗೆ ನಾಶವಿಲ್ಲವೆಂದು ಹೇಳುವುದಾದರೆ ಆ ವಸ್ತುವು ನಷ್ಟವಾಯಿತೆಂಬ ಜ್ಞಾನಕ್ಕೂ ವ್ಯವಹಾರಕ್ಕೂ ವಿಷಯಗಳೇ ಇಲ್ಲವೆಂದನ್ನಬೇಕಾಗುವುದು ಅನಭಿವ್ಯಕ್ತಿಯು (ತೋರದಿರುವಿಕೆಯು) ವಿಷಯವೆನ್ನುವುದಾದರೆ—ಆ ಅನಭಿವ್ಯಕ್ತಿಯು ಮೊದಲೂ ಇದ್ದುದೆಂದಾದರೆ ಕದಾಚಿತ್ ಅನಭಿವ್ಯಕ್ತಿಯು ಎಂಬುದು ಕೂಡದೆಹೋಗುವುದು ಆ ಅನಭಿವ್ಯಕ್ತಿಯು ಮೊದಲು ಇಲ್ಲದಿದ್ದುದು ಎಂದಾದರೆ—ಇಲ್ಲದಿದ್ದುದೇ ಹುಟ್ಟಿತೆಂದನ್ನಬೇಕಾಗುವುದು ಅನಭಿವ್ಯಕ್ತಿಗೆ ಅಭಿವ್ಯಕ್ತಿಯೆಂದು ಹೇಳುವುದಾದರೆ ವ್ಯಕ್ತಿಪರಂಪರೆ ಇಟ್ಟುಕೊಂಡು ಹಿಂದಿನಂತೆ ಅನವಸ್ಥಾದೋಷವು ಬರುವುದು) ಅತೋಽಸನ್ನೇವ ಜಾಯತೇ=ಆದಕಾರಣ ಅಸತ್ತಾದುದೇ (ಹಿಂದೆ ಇಲ್ಲದಿದ್ದುದೇ) ಹುಟ್ಟುತ್ತದೆ (ಅಂದರೆ— ಹಿಂದೆ ಇಲ್ಲದಿದ್ದುದು ಹುಟ್ಟುವುದಿಲ್ಲವೆನ್ನುವುದಾದರೆ ಜಾಯತೇ=ಹುಟ್ಟುತ್ತದೆ ಎಂಬ ಜ್ಞಾನಕ್ಕೂ ವ್ಯವಹಾರಕ್ಕೂ ವಿಷಯವಿಲ್ಲವೆಂದೆನ್ನಬೇಕಾಗುವುದು ಸತ್ತಾದುದಕ್ಕೆ (ಇದ್ದುದಕ್ಕೆ) ನಾಶವಿಲ್ಲವೆನ್ನುವುದಾದರೆ ನಷ್ಟವಾಯಿತೆಂಬ ಜ್ಞಾನಕ್ಕೂ ವ್ಯವಹಾರಕ್ಕೂ ವಿಷಯವಿಲ್ಲವೆಂದನ್ನಬೇಕಾಗುವುದು ಹೀಗೆ ಹುಟ್ಟುತ್ತದೆ. ನಾಶ ಹೊಂದುತ್ತದೆ, ಎಂಬ ಜ್ಞಾನವ್ಯವಹಾರಗಳು ಎಲ್ಲರಿಗೂ ಇದ್ದ ಪ್ರಯುಕ್ತ ಆ ಜ್ಞಾನವ್ಯವಹಾರಗಳಿಗೆ ವಿಷಯವಿಲ್ಲವೆಂದಾಗುವುದು ಸರ್ವಥಾ ಯುಕ್ತವಲ್ಲ ಆದಕಾರಣ ಮೊದಲು ಇಲ್ಲದಿದ್ದುದೇ ಹುಟ್ಟುತ್ತದೆ ಎಂದನ್ನಬೇಕು) (ಸತ್ತಾದುದೇ (ಇದ್ದುದೇ) ನಾಶಹೊಂದುತ್ತದೆ ಎಂದು ಹೇಳಬೇಕು) (೬) (ಹೀಗೆ ಇಲ್ಲದಿದ್ದುದೇ ಹುಟ್ಟುವುದೆಂದು ಹೇಳುವುದಾದರೆ ಅತ್ಯಂತಾಸತ್ತಾದ ಮೊಲದ ಕೋಡು ಇತ್ಯಾದಿಗಳೇ ಹುಟ್ಟುತ್ತವೆಂದೆನ್ನಬೇಕಾಗುವವು ಎಂದರೆ —) ಆದರೂ ಕಾರ್ಯಕಾರಣಗಳಿಗೆ ಅಭೇದವೆಂದು ಸದಾನುಭವವಿದ್ದುದರಿಂದಲೂ, ಭೇದವಿದೆ ಎಂದು ಅನುಭವವಿದ್ದುದರಿಂದಲೂ ವಿಶೇಷವು ಹುಟ್ಟುತ್ತದೆಂದು ಹೇಳಬೇಕು. (ಅಂದರೆ ಯದ್ಯಪಿ ಅಸತ್ತು=ಇಲ್ಲದಿದ್ದುದು ಹುಟ್ಟುತ್ತದೆಂದು ಹೇಳಿತು. ಆದರೂ ಅತ್ಯಂತಾಸತ್ತಾದ ಮೊಲದಕೋಡು ಇತ್ಯಾದಿಗಳು ಹುಟ್ಟುತ್ತವೆಂದು ಅರ್ಥವಲ್ಲ ಮತ್ತು ಕಾರಣ ರೂಪದಿಂದ (ಮಣ್ಣಿನ ರೂಪದಿಂದ) ಇದ್ದುದು. ಕಾರ್ಯ (ಮಡಿಕೆ) ರೂಪದಿಂದ ಇಲ್ಲದಿದ್ದುದು ಹುಟ್ಟುತ್ತದೆಂದು ಹೇಳಬೇಕು. ಏಕೆಂದರೆ—ಮಣ್ಣೇ ಮಡಿಕೆಯು, ನೂಲುಗಳೇ ಬಟ್ಟೆಯು, ಎಂದು ಕಾರ್ಯಕಾರಣಗಳಿಗೆ ಅಭೇದವೆಂದು ಜ್ಞಾನವಿದೆ ಆದಕಾರಣ ಕಾರಣವಾದ ಮಣ್ಣು ನೂಲು ಮೊದಲು ಇದ್ದುದ

ರಿಂದ ಕಾರ್ಯವಾದ ಮಡಿಕೆ ಮೊದಲು ಮಣ್ಣಿನ ರೂಪದಿಂದಲೂ, ಬಟ್ಟೆ ನೂಲಿನ ರೂಪದಿಂದಲೂ ಇದೆ ಎಂದು ಸಿದ್ಧಿಸುತ್ತದೆ. ಅದು ಮಣ್ಣು, ಇದು ಮಡಿಕೆ, ಇದು ನೂಲು, ಇದು ಬಟ್ಟೆ ಎಂದು ಭೇದ ಜ್ಞಾನವಿರುವುದರಿಂದ ಮಡಿಕೆ ಬಟ್ಟೆ ಮುಂತಾದ ಕಾರ್ಯರೂಪದಿಂದ ಇರಲಿಲ್ಲವೆಂದೂ ಸಿದ್ಧಿಸುತ್ತದೆ ) (ಅಭೇದಾನುಭವವು ಭ್ರಾಂತಿಯೆಂದು ಏಕೆ ಹೇಳಬಾರದೆಂದರೆ) ಅವಿಶೇಷೇಣ=ಅಭೇದಜ್ಞಾನವು ಭ್ರಾಂತಿ ಯೆನ್ನುವುದಾದರೆ—ಭೇದವಿದೆ ಎಂಬ ಅನುಭವವೂ ಭ್ರಾಂತಿಯೆಂದನ್ನಬೇಕಾಗುವುದು ವಿಶೇಷವೇನೂ ಇಲ್ಲ. (ಅಭೇದಾನುಭವವೇ ಇಲ್ಲವೆಂದರೆ—) ದೇಹವು ಮಣ್ಣುಪಾಲಾಯಿತು ಎಂಬ ಸಾರ್ವತ್ರಿಕ ವ್ಯವ ಹಾರವು ಕಾರ್ಯಕಾರಣಗಳಿಗೆ ಅಭೇದವೆಂಬುದನ್ನೇ ದೃಢಪಡಿಸುತ್ತದೆ, ಎಂದು ಬ್ರಹ್ಮತರ್ಕದಲ್ಲಿದೆ ॥೨॥

ಟೀ—ಇದುವರೆಗೆ ಭಾಸ್ಕರಾಚಾರ್ಯರ ವ್ಯಾಖ್ಯಾನವನ್ನು ಸಪ್ರಮಾಣವಾಗಿ ದೂಷಿಸಿದರು ಇನ್ನು ಇದೇ ಶ್ಲೋಕಕ್ಕೆ ಅದ್ವೈತಿಗಳು ಮಾಡಿದ ವ್ಯಾಖ್ಯಾನವನ್ನು ದೂಷಿಸುತ್ತಾರೆ—

ತಾ ॥ (೧) ನ ಚ ಸದಸದ್ವಿಲಕ್ಷಣಂ ಕಿಂಚಿದಸ್ತೀತ್ಯತ್ರ ಕಿಂಚಿನ್ಮಾ(ಚ ಮಾ)ನಂ ॥ (೨) ನ ಚಾಸತಃ ಖ್ಯಾತ್ಯಯೋಗಾತ್ಸತೋ ಬಾಧಾಯೋಗಾದುಭಯವಿಲಕ್ಷಣಂ ಭ್ರಾಂತಿ-ವಿಷಯಂ ॥ (೩) ಅಸತಃ ಖ್ಯಾತ್ಯಯೋಗಾದಿತಿ ವದತೋ ಸತಃ ಖ್ಯಾತಿರಭೂನ್ನ ವಾ । ಯದಿ ನಾಭೂನ್ನ ತತ್ಖ್ಯಾತಿನಿರಾಕ(ವಾ)ರಣಂ । ಯದ್ಯಭೂತ್ತಥಾಽಪಿ ॥ (೪) ನ ಚಾಸತೋ ಸತ್ತ್ವೇನ ಭ್ರಾಂತೌ ಸತ್ತ್ವೇನ ಚ ಖ್ಯಾತಿರ್ನಾಸ್ತೀತ್ಯತ್ರ ಕಿಂಚಿನ್ಮಾನಂ । ಅಸದ್ವ್ಯವಹಾರಲೋಪಪ್ರಸಂಗಾಚ್ಚ ॥ ೩ ॥

ಅ ॥ (೧) (ಸದಸದ್ವಿಲಕ್ಷಣ ಎಂಬುದೇ ಪ್ರಮಾಣಸಿದ್ಧವಾಗದಿದ್ದ ಮೇಲೆ) ಸದಸದ್ವಿಲಕ್ಷಣವಾದುದು ಯಾವುದಾದರೊಂದು ವಸ್ತುವಿದೆ, ಎಂಬಲ್ಲಿ ಯಾವುದೊಂದು ಪ್ರಮಾಣವೂ ಇಲ್ಲ (೨) (ಅಸತಃ=ಅಸತ್ತಿನ (ಇಲ್ಲದಿರುವ ವಸ್ತುವಿನ) ಭಾವಃ=ಜ್ಞಾನವು, ಇರುವುದಿಲ್ಲ ಸತಃ=ಇದ್ದವಸ್ತುವಿಗೆ, ಅಭಾವಃ=ಬಾಧವು, (ಇಲ್ಲದಿದ್ದುದು ಎಂಬ ಜ್ಞಾನವು) ಇರುವುದಿಲ್ಲ. ಆದಕಾರಣ ಭ್ರಾಂತಿಯಲ್ಲಿ ತೋರುವ ಬೆಳ್ಳಿಯಲ್ಲಿ, ಈ ಹಿಂದೆ ಹೇಳಿದ ಜ್ಞಾನವೂ ಬಾಧವೂ ಎರಡೂ ಇರುವುದರಿಂದ ಇದನ್ನು ಸದಸದ್ವಿಲಕ್ಷಣವೆಂದೇ ಅನ್ನ ಬೇಕಾಗುವುದು ಆದುಕಾರಣ ಆ ವಿಷಯದಲ್ಲಿ ಯಾವುದೊಂದು ಪ್ರಮಾಣವೂ ಇಲ್ಲವೆಂದು ಹೇಳುವುದು ಹೇಗೆ ಎಂದರೆ) ಅಸತ್ತಿಗೆ ಪ್ರತೀತಿ ಕೂಡದಿರುವುದರಿಂದಲೂ (ಅಂದರೆ ಅಸತ್ತು ತೋರದಿರುವುದರಿಂದಲೂ) ಸತ್ತಿಗೆ ಬಾಧವು ಕೂಡದಿರುವುದರಿಂದಲೂ ಸತ್ತಿನಿಂದಲೂ ಅಸತ್ತಿನಿಂದಲೂ ಬೇರೆಯಾದುದು ಭ್ರಮೆಗೆ ವಿಷಯವಾಗಲಾರದು (೩) ಭ್ರಮೆಗೆ ವಿಷಯವಾದ ಶುಕ್ತಿರಜತ (ಮುತ್ತಿನ ಚಿಪ್ಪನ್ನು ನೋಡಿ ಬೆಳ್ಳಿ ಎಂದು ತಿಳಿದುಕೊಳ್ಳುವುದು ಮೊದಲಾದದು) ಸದ್ವಿಲಕ್ಷಣ (ಸತ್ತಲ್ಲ)ಎಂದು ಹೇಳಿದುದು ಯುಕ್ತವೇ ಶುಕ್ತಿ ರಜತವೊದಲಾದುದಕ್ಕೆ ಪ್ರತೀತಿಯು ಕೂಡದಿರುವುದರಿಂದ ಅದು ಅಸದ್ವಿಲಕ್ಷಣ (ಅಸತ್ತಲ್ಲ) ವೆಂದ- ಹೇಳಿದ್ದು ಯುಕ್ತವಲ್ಲ ಏಕೆಂದರೆ—ಅಸತ್ತು ತೋರುವುದಿಲ್ಲವೆಂಬುದು (1) ಅಸತ್ತಾಗಿ ತೋರುವುದಿಲ್ಲ ಎಂದರ್ಥವೋ (2)ಅಸತ್ತು ಸತ್ತಾಗಿ ತೋರುವುದಿಲ್ಲ ಎಂದರ್ಥವೋ 1ನೇ ಕಲ್ಪದಲ್ಲಿ ಪ್ರಶ್ನಿಸುತ್ತಾರೆ ) ಅಸ ತ್ತಿಗೆ ಪ್ರತೀತಿಯಿಲ್ಲದಿರುವುದರಿಂದ ಎಂದು ಹೇಳುವವನಿಗೆ (1) ಅಸತ್ತಿನ ಪ್ರತೀತಿಯು ಇದೆಯೋ (2) ಇಲ್ಲವೋ. ಅಸತ್ತಿಗೆ ಪ್ರತೀತಿಯೇ ಇಲ್ಲವಾದರೆ ಅಸತ್ಪ್ರತೀತಿಯನ್ನು ನಿರಾಕರಿಸಲು ಆಗುವುದಿಲ್ಲ (ಅಂದರೆ— ಧರ್ಮಿಯು ಇದ್ದರೇನೇ ಧರ್ಮವನ್ನು ನಿಷೇಧಿಸಬಹುದು, ಅಸತ್ತೇ ತೋರದಿದ್ದರೆ ಅಸತ್ತಿನಲ್ಲಿ ಪ್ರತೀತತ್ವ (ತೋರುವಿಕೆ) ರೂಪಧರ್ಮವು ಇಲ್ಲವೆಂದು ಹೇಳಲಾಗುವುದಿಲ್ಲ ) (1) ಅಸತ್ತಿಗೆ ಪ್ರತೀತಿಯು ಇದೆ ಎನ್ನು ವುದಾದರೂ ಅಸತ್ಪ್ರತೀತಿಯನ್ನು ನಿರಾಕರಿಸಲಾಗುವುದಿಲ್ಲ (ತನ್ನ ತಾಯಿಯು ಬಂಜೆ ಎಂದು ಹೇಳಿ

ದಂತೆಯೇ ತನ್ನ ಮಾತೇ ತನಗೆ ವಿರುದ್ಧವಾಗುವುದು ) ಅಸತ್ತು ಸತ್ತಾಗಿ ತೋರುತ್ತದೋ ಇಲ್ಲವೋ ಎಂಬ ಕಲ್ಪದಲ್ಲಿಯೂ ೧ನೇದ್ದು ಯುಕ್ತವಲ್ಲ, ಏಕೆಂದರೆ—ಭ್ರಮೆಯಿರುವಾಗಲೂ ಭ್ರಮೆಯಿಲ್ಲದಿರುವಾಗಲೂ ಅಸತ್ತು ಸತ್ತಾಗಿ ತೋರಲಾರದು ೨ನೇದ್ದು ಸುತರಾಂ ಕೂಡಲಾರದು (೨) ಅಸತ್ತು ಅಸತ್ತಾಗಿ ತೋರುವುದಿಲ್ಲ ಎಂಬುವಲ್ಲಿ ಯಾವದೊಂದು ಪ್ರಮಾಣವೂ ಇಲ್ಲ. ಮತ್ತು ಅಸತ್ತು ಭ್ರಮೆಯಲ್ಲಿ ಸತ್ತಾಗಿ ತೋರುವುದಿಲ್ಲ, ಎಂಬುವಲ್ಲಿಯೂ ಯಾವದೊಂದು ಪ್ರಮಾಣವೂ ಇಲ್ಲ. (ಅಸತ್ತು ಅಸತ್ತಾಗಿ ತೋರುವುದಿಲ್ಲ ಎಂಬ ಪಕ್ಷದಲ್ಲಿ ಇನ್ನೊಂದು ದೋಷ ಹೇಳುತ್ತಾರೆ-) ಅಸತ್ ಎಂಬ ವ್ಯವಹಾರವೇ ಇಲ್ಲವೆಂದಾಗಬೇಕಾಗುವುದು (ಅಂದರೆ—ಅಸತ್ತು ತೋರುವುದಿಲ್ಲವೆಂದಾದರೆ-ಅಸತ್ತಿನಲ್ಲಿ ಪ್ರತೀತತ್ವವೆಂಬ ಧರ್ಮವನ್ನು ನಿರಾಕರಿಸಲಿಕ್ಕೆ ಆಗುವುದಿಲ್ಲವೆಂದ ಮಾತ್ರವಲ್ಲದೆ ಅಸತ್ತು ಪ್ರಮಾಣವಲ್ಲ, ಅಸತ್ತಿನಿಂದ ಯಾವ ಕ್ರಿಯೆಯೂ ಆಗಲಾರದು ಇದುಮೊದಲಾದ ಯಾವ ವ್ಯವಹಾರವೂ ಅಸತ್ತಿನಲ್ಲಿ ಇಲ್ಲವೆಂದಾಗುವುದು ಎಲ್ಲಾ ವ್ಯವಹಾರಗಳಿಗೂ ಪ್ರತೀತಿಯು (ತಿಳುವಳಿಕೆಯು) ಕಾರಣವಾಗಿದೆ ॥ ೩ ॥

ಪೀ—ಅಸತ್ತು ಭ್ರಮೆಯಲ್ಲಿ ಸತ್ತಾಗಿ ತೋರುವುದಿಲ್ಲ. ಎಂಬಲ್ಲಿ ಪ್ರಮಾಣವಿಲ್ಲವೆಂದು ಹೇಳಿಯಾಯಿತು ಭ್ರಮೆಯಲ್ಲಿ ಅಸತ್ತು ಸತ್ತಾಗಿ ತೋರುತ್ತದೆಂಬುದೂ ಯಾವ ಪ್ರಮಾಣದಿಂದ ಎಂದರೆ—

ತಾ ॥ (೧) ಯದವಿದ್ಯಮಾನಂ ರೂಪಂ ತಸ್ಯ ಸತ್ತ್ವೇನ ಪ್ರತೀತೇರೇವ ಭ್ರಾಂತಿತ್ವಾಚ್ಚ ॥ (೨) ಅನಿರ್ವಚನೀಯತ್ವಪಕ್ಷೇಽಪಿ ಸದಿದಂ ರಜತಮಿತ್ಯವಿದ್ಯಮಾನಸತ್ತ್ವಪ್ರತೀತಿಂ ವಿನಾ ನ ಹಿ ಭ್ರಾಂತಿತ್ವಂ ॥ (೩) ಭ್ರಾಂತಿಸತ್ತ್ವಾಂಗೀಕಾರೇಽಪ್ಯಭ್ರಾಂತಂ ಸದಿದಂ ರಜತಮಿತ್ಯವಿದ್ಯಮಾನಸತ್ತ್ವಪ್ರತೀತೌ ಹಿ ಪ್ರವರ್ತತೇ ॥ (೪) ತಸ್ಮಾದುಭಯ-ವಿಲಕ್ಷಣಂ ನ ಕಿಂಚಿತ್ ॥ (೫) ವಿಶ್ವಂ ಸತ್ಯಂ (ಮಘವಾನಾ....ವ್ರತಂ ವಾಂ) ॥(೬) ಯಚ್ಚಿಕೇತ ಸತ್ಯಮಿತ್ (ತನ್ನ ಮೋಘಂ ವಸುಸ್ಪಾರ್ಹಮುತ ಜೇತೋತ ದಾತಾ) ॥ (೭) ಕವಿರ್ಮನೀಷೀ ಪರಿಭೂಃ ಸ್ವಯಂಭೂರ್ಯಾಥಾತಥ್ಯತೋಽರ್ಥಾನ್ ವ್ಯದ-ಧಾಚ್ಛಾಶ್ವತೀಭ್ಯಃ ಸಮಾಭ್ಯಃ । ಇತ್ಯಾದಿಶ್ರುತೇಶ್ಚ ॥ ೪ ॥ ॥ ೧೬ ॥

ಅ ॥ (೧) ವಸ್ತುವಿನಲ್ಲಿ ವಾಸವವಾಗಿ ಇಲ್ಲದಿರುವ ರೂಪವು ಇದೆ ಎಂದು ತೋರುವುದೇ ಭ್ರಮೆಯು. (ಅಂದರೆ ಮುತ್ತಿನ ಚಿಪ್ಪನ್ನು ನೋಡಿ ಬೆಳ್ಳಿ ಎಂದು ಜ್ಞಾನವು ಬರುವಾಗ ಚಿಪ್ಪಿ ಮೊದಲಾದ ಅಧಿಷ್ಠಾನದಲ್ಲಿ ಇಲ್ಲದಿರುವ ರಜತ ಮೊದಲಾದ ಆಕಾರವು ಸತ್ತಾಗಿ ತೋರುವುದೇ ಭ್ರಮೆಯು ಭ್ರಮೆಯಲ್ಲಿ ಅಸತ್ತು ಸತ್ತಾಗಿ ತೋರುವುದಿಲ್ಲವೆಂದರೆ ಭ್ರಮೆಯೇ ಇಲ್ಲವೆಂದಾಗುವುದು ಅದುಕಾರಣ ಭ್ರಮೆಯಲ್ಲಿ ಅಸತ್ತು ಸತ್ತಾಗಿ ತೋರುತ್ತದೆಂದು ಹೇಳಬೇಕು ) (೨) (ಭ್ರಮೆಯಲ್ಲಿ ತೋರುವ ಆಕಾರವು ಅಸತ್ ಎಂಬುವುದು ಸರ್ವಸಮ್ಮತವಾಗಿದ್ದರೆ ಹಿಂದೆ ಹೇಳಿದ್ದು ಕೂಡಬಹುದಿತ್ತು ಆದರೆ ಅದನ್ನು ಅಸತ್ತೆಂದು ಹೇಳುವುದಿಲ್ಲ ಮತ್ತೆ ಅನಿರ್ವಚನೀಯವೆನ್ನುತ್ತೇವೆ ಅನಿರ್ವಚನೀಯವೆಂದು ಹೇಳಿದರೂ ಭ್ರಮೆಯೆಂಬುದು ಕೂಡುತ್ತದೆ ಆದಕಾರಣ ಭ್ರಮೆಯಲ್ಲಿ ಅಸತ್ತು ಸತ್ತಾಗಿ ತೋರುವುದು ಹೇಗೆ? ಎಂದರೆ—) ಅನಿರ್ವಚನೀಯತ್ವಪಕ್ಷದಲ್ಲಿಯೂ ಈ ರಜತವು ಸತ್ತಾಗಿದೆ, ಎಂದು ಇಲ್ಲದಿರುವ ಅಸತ್ತಿಗೆ ಸತ್ವಪ್ರತೀತಿಯಿಲ್ಲದೆ ಭ್ರಾಂತಿತ್ವವು ಕೂಡಲಾರದು (ಅಂದರೆ—ತೋರುವ ಆಕಾರವು ಅನಿರ್ವಚನೀಯವಾಗಲಿ ಆದರೂ ಭ್ರಾಂತಿಯಲ್ಲಿ ಅಸತ್ತು ಸತ್ತಾಗಿ ತೋರುತ್ತದೆ ಎಂಬುದನ್ನು ಇಲ್ಲವೆಂದು ಹೇಳಲಾಗುವುದಿಲ್ಲ ಹೇಗೆಂದರೆ-ಅನಿರ್ವಚನೀಯವಾದ ರಜತವು ಭ್ರಾಂತಿಯಲ್ಲಿ ಅನಿರ್ವಚನೀಯವಾಗಿಯೇ ತೋರುತ್ತದೋ? ಇದು ಸತ್ ಎಂದು ತೋರುತ್ತದೋ? ೧ನೇ ಕಲ್ಪವು ಕೂಡುವುದಿಲ್ಲ ಏಕೆಂದರೆ ಇದು ಸತ್ ಎಂಬ ಪ್ರತೀತಿಯಿಲ್ಲದೆ ಅನಿರ್ವಚನೀಯವು ಎಂದೇ ತೋರಿದರೆ ಭ್ರಮೆಯೇ ಆಗಲಾರದು ಇಲ್ಲವಾದರೆ ಬಾಧಕ

ಜ್ಞಾನವೂ ಭ್ರಮೆಯಾಗಬೇಕಾಗುವುದು. ಭ್ರಮೆಯು ಪ್ರಾತಿಭಾಸಿಕ ಅನಿರ್ವಚನೀಯವಾದ ಅರ್ಥವನ್ನು ವಿಷಯೀಕರಿಸುತ್ತದೆ ಬಾಧಕಜ್ಞಾನವು ವ್ಯಾವಹಾರಿಕ ಅನಿರ್ವಚನೀಯಾರ್ಥವನ್ನು ವಿಷಯೀಕರಿಸುತ್ತದೆ ಹೀಗೆ ವ್ಯತ್ಯಾಸವಿದೆ ಎಂದರೆ--ವ್ಯಾವಹಾರಿಕ ಪ್ರಾತಿಭಾಸಿಕಗಳಿವೆ ಎಂಬಲ್ಲಿ ಪ್ರಮಾಣವೇ ಇಲ್ಲದಿರುವುದರಿಂದ ನಿಮ್ಮ ಸಂಕೇತಮಾತ್ರವೂ ಅಪ್ರಯೋಜಕವಾಗುವುದು (ಅನಿರ್ವಚನೀಯವಾದ ರಜತವು ಭ್ರಮೆಯಲ್ಲಿ ಇದು ಸತ್ ಎಂದು ತೋರುತ್ತದೆ ಎಂಬ ಕಲ್ಪದಲ್ಲಿ ಆ ಸತ್ವವು ಸತ್ ಎಂದೇ ಆದರೆ ಅನಿರ್ವಚನೀಯವಲ್ಲವೆಂದಾಯಿತು ಅದಕ್ಕೆ ಭ್ರಾಂತಿತ್ವವೂ ಕೂಡದೆ ಹೋಗುವುದು ) (ಅನಿರ್ವಚನೀಯವಾದ ರಜತದಲ್ಲಿ ತೋರುವ ಸತ್ವವು ಸತ್ಯವೆಂದಾದರೆ ಅನಿರ್ವಚನೀಯವಲ್ಲವೆಂದಾಗಬೇಕಾಗುವುದು ) (೩) (ಅನಿರ್ವಾಚ್ಯವಾದ ರಜತದಲ್ಲಿರತಕ್ಕ ಸತ್ವವು ಅಸತ್ತಲ್ಲ ಮತ್ತೆ ಪ್ರಾತಿಭಾಸಿಕವು ಆದಕಾರಣ ಅಸತ್ತು ಸತ್ತಾಗಿ ತೋರುವುದಿಲ್ಲವೆಂದರೆ) ಪ್ರಾತಿಭಾಸಿಕ ಸತ್ವವೆಂಬ ಪಕ್ಷದಲ್ಲಿಯೂ ಆ ಪ್ರಾತಿಭಾಸಿಕ ಸತ್ವವೂ ಪ್ರಾತಿಭಾಸಿಕವೆಂದೇ ತೋರುವುದೋ, ವ್ಯಾವಹಾರಿಕವೆಂದೋ, ಪ್ರತಿಭಾಸಿಕವೆಂದೇ ತೋರಿದಲ್ಲಿ ಪ್ರವೃತ್ತಿಯಾಗಲಿಕಿಲ್ಲ ವ್ಯಾವಹಾರಿಕವೆಂದೇ ತೋರುವುದಾದರೆ ಆ ವ್ಯಾವಹಾರಿಕವೂ ಸತ್ತೋ ಅಸತ್ತೋ, ಸತ್ ಎಂಬ ಪಕ್ಷದಲ್ಲಿಯೂ ಪ್ರಾತಿಭಾಸಿಕ ಎಂಬ ಪಕ್ಷಕ್ಕೆ ವಿರೋಧವು ಬರುತ್ತದೆ ಅಸತ್ತೆಂದಾದರೆ ಅಸತ್ತಿಗೆ ಪ್ರತೀತಿಯನ್ನು ಒಪ್ಪಿದಂತೆಯೇ ಆಯಿತು. (೩) ಆದಕಾರಣ ಸದಸದ್ವಿಲಕ್ಷಣವಾದುದು ಯಾವುದೂ ಇಲ್ಲ (ಅಂದರೆ ಅನಿರ್ವಚನೀಯವಾದ ರಜತಕ್ಕೆ ಸತ್ವವು ಪ್ರಾತಿಭಾಸಿಕವಾಗಲಿ ಆದರೂ ಅಸತ್ತು ಸತ್ತೆಂದು ತೋರುತ್ತದೆ ಹೇಗೆಂದರೆ ಆ ಪ್ರಾತಿಭಾಸಿಕವಾದ ಸತ್ವವು ಪ್ರಾತಿಭಾಸಿಕವೆಂದೇ ತೋರುತ್ತದೋ, ವ್ಯಾವಹಾರಿಕವೆಂದು ತೋರುತ್ತದೋ, ಪ್ರಾತಿಭಾಸಿಕವಾಗಿಯೇ ತೋರುತ್ತದೆಂದು ಒಡಂಬಟ್ಟರೆ ಪ್ರವೃತ್ತಿಯೇ ಇಲ್ಲವೆಂದಾಗಬೇಕಾಗುವುದು ವ್ಯಾವಹಾರಿಕವಾಗಿ ತೋರುತ್ತದೆಂದು ಹೇಳಿದರೆ—ಆ ವ್ಯಾವಹಾರಿಕದಲ್ಲಿದ್ದ ವ್ಯಾವಹಾರಿಕತ್ವವು ಸತ್ ಎಂದು ಹೇಳುತ್ತೀರೋ, ಅಸತ್ ಎಂದೋ, ಪ್ರಾತಿಭಾಸಿಕ ಎಂದು ಹೇಳಿದ್ರಿಂದ ವಿರೋಧವು ಬರುವುದರಿಂದ ಸತ್ ಎಂದು ಹೇಳಕೂಡದು ಆ ವ್ಯಾವಹಾರಿಕತ್ವವು ಅಸತ್ ಎಂದು ಹೇಳಿದರೆ--ಅಸತ್ತು ಸತ್ತಾಗಿ ತೊರುತ್ತದೆಂದೇ ಹೇಳಿದಂತೆಯೇ ಆಯಿತು ಅದುಕಾರಣ ಅಸದ್ವೈಲಕ್ಷಣ್ಯವನ್ನು ಸಾಧಿಸುವ ಪ್ರಮಾಣವು ದುಷ್ಟವಾದ ಪ್ರಯುಕ್ತ ಭ್ರಮೆಗೆ ವಿಷಯವಾದುದು ಯಾವುದೂ ಅನಿರ್ವಾಚ್ಯವಾದುದು ಇಲ್ಲ (೫) (ಭ್ರಮೆಗೆ ವಿಷಯವಾದುದನ್ನು ಅನಿರ್ವಾಚ್ಯವೆಂದು ಇಲ್ಲಿ ಹೇಳುವುದಿಲ್ಲ ಜಗತ್ತು ಅನಿರ್ವಾಚ್ಯವೆನ್ನುತ್ತೇವೆ ಜಗತ್ತು ಅಸದ್ವಿಲಕ್ಷಣವೆಂದು ನಮಗೆ ಸಮ್ಮತವಾಗಿದೆ ಸದ್ವೈಲಕ್ಷಣ್ಯವೂ ಸುತರಾಂ ಸಿದ್ಧಿಸುತ್ತದೆ ಎಂದರೆ—ವೇದಾದಿ ಪ್ರಮಾಣಗಳಿಂದ ವಿರೋಧವು ಬರುವುದರಿಂದ ಅದೂ ಯುಕ್ತವಲ್ಲವೆನ್ನುತ್ತಾರೆ ) **ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚನ ಪ್ರಮಿನಂತಿ ವ್ರತಂ ವಾಂ** । ಎಲೋ ಇಂದ್ರಾ ಬೃಹಸ್ಪತಿಗಳಿರಾ ನೀವು ರಕ್ಷಿಸುತ್ತಿರುವ ಜಗತ್ತು ಸತ್ಯವೇ. ನೀವು ಮಾಡತಕ್ಕ ಸತ್ಯವಾದ ಜಗತ್ತಿನ ಸೃಷ್ಟ್ಯಾದಿ ಕರ್ಮಗಳನ್ನು ಎಲ್ಲಾ ದೇವತೆಗಳೂ ತಿಳಿಯುತ್ತಾರೆ (೬) **ಯಚ್ಚಿಕೇತ ಸತ್ಯಮಿತ್ತನ್ನಮೋಘಂ ವಸು ಸ್ಪಾರ್ಹಮುತ ಜೇತೋತ ದಾತಾ** ಶ್ರೀ ಹರಿಯು ಯಾವ ಜಗತ್ತನ್ನು ಸೃಷ್ಟಿಸಿರುವನೋ ಅದು ಸತ್ಯವೇ, ಮಿಥ್ಯೆಯಲ್ಲ ಬಲಿಚಕ್ರವರ್ತಿ ಮೊದಲಾದವರಿಂದ ಇಚ್ಛಿಸಲ್ಪಡತಕ್ಕ ಸ್ವರ್ಗಾದಿಗಳನ್ನು ತಪ್ಪಿಸಿ ಭಕ್ತರಾದ ಇಂದ್ರಾದಿದೇವತೆಗಳಿಗೆ ಕೊಟ್ಟವನು (೭) ಸರ್ವಜ್ಞನೂ ಮನಸ್ಸುಗಳಿಗೆ ಪ್ರೇರಕನೂ, ಸರ್ವರಿಗಿಂತ ಶ್ರೇಷ್ಠನೂ, ಸರ್ವಸ್ವತಂತ್ರನೂ ಆದ ಶ್ರೀ ಹರಿಯು ಪದಾರ್ಥಗಳನ್ನು ಅನಂತಾನಂತ ಕಾಲಗಳಲ್ಲಿಯೂ, ಸತ್ಯಗಳನ್ನಾಗಿಯೇ ಮಾಡಿದನು, ಇದು ಮೊದಲಾದ ವೇದಾದಿಪ್ರಮಾಣಗಳಿಂದ (ಜಗತ್ತು ಸತ್ಯವೇ ಮಿಥ್ಯೆಯಲ್ಲವೆಂದು ಸಿದ್ಧವಾಯಿತು ) ॥೪॥೧೬॥

**ಟೀ**—ಜೀವಗಿಂತ ಬೇರೆಯಾದ ಅಕಾರಾದಿ ವರ್ಣಗಳೂ ನಿತ್ಯವಾದವುಗಳಿವೆ ಜೀವರು ನಿತ್ಯರೆಂದು ಸಾಧಿಸಲಿಕ್ಕೆ ಅವು ದೃಷ್ಟಾಂತವಾಗುವುದೆನ್ನುತ್ತಾರೆ—

**ಗೀ ॥ ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಂ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥ ೧೭ ॥**

ಅ ॥ ಯೇನ=ಯಾವ ಅಕಾರ ಮೊದಲಾದ ವರ್ಣ ಸಮೂಹಗಳಿಂದ ಅಥವಾ ಶ್ರೀಹರಿಯಿಂದ ಈ ಸಂಪೂರ್ಣ ಜಗತ್ತು, ತತಂ=ವ್ಯಾಪ್ತವಾಗಿದೆಯೋ, ತತ್=ಅಂತಹ ಅಕ್ಷರಸಮೂಹವೂ, ಅವ್ಯಾಕೃತಾಕಾಶಾದಿಗಳೂ, ಅಥವಾ ಶ್ರೀಹರಿಯು, ಅವಿನಾಶಿ ತು=ಸ್ವಾಭಾವಿಕವಾಗಿ ನಾಶವಿಲ್ಲದಿದ್ದುದು ನಿತ್ಯವೂ ಅನಾದಿಯೂ ಎಂದೇ, ವಿದ್ಧಿ=ತಿಳಿ. ಅವ್ಯಯಸ್ಯ=ಹ್ರಾಸವಿಲ್ಲದಿರುವ, ಅಸ್ಯ=ವ್ಯಾಪ್ತವಾದ ವಸ್ತುವಿನ ಅಥವಾ ಶ್ರೀ ಹರಿಯ ವಿನಾಶಂ=ನಾಶವನ್ನು, ಕಶ್ಚಿತ್=ಯಾರೊಬ್ಬನೂ, ಕರ್ತುಂ=ಮಾಡಲಿಕ್ಕೆ, ನಾರ್ಹತಿ=ಸಮರ್ಥನಾಗುವುದಿಲ್ಲ. ॥ ೧೭ ॥

ಪೀ—ಅವಿನಾಶಿ ತು ಎಂಬ ಶ್ಲೋಕದಲ್ಲಿ ಸರ್ವತ್ರ ವ್ಯಾಪ್ತವಾದ ವಸ್ತುವಿಗೆ ನಿತ್ಯತ್ವವನ್ನು ಹೇಳುತ್ತಾರೆ. ಅದು ಪ್ರಕೃತಕ್ಕೆ ಉಪಯುಕ್ತವಲ್ಲವೆಂದರೆ ಪ್ರಕೃತೋಪಯೋಗವನ್ನು ತೋರಿಸುತ್ತಾರೆ—

**ಭಾ ॥ (೧) ಕಿಂ ಬಹುನಾ । ಯದ್ದೇಶತೋಽನಂತಂ ತನ್ನಿತ್ಯಮೇವ ವೇದಾದ್ಯನ್ಯದಪೀತ್ಯಾಹ । ಅವಿನಾಶೀತಿ ॥ (೨) ನಾಪಿ ಶಾಪಾದಿನಾ ವಿನಾಶ ಇತ್ಯಾಹ । ವಿನಾಶಮಿತಿ । ಅವ್ಯಯಂ ಚ ತತ್ ॥ ೧೭ ॥**

ಅ ॥ (೧) ಪ್ರಕೃತಿ ಮೊದಲಾದ ವಸ್ತುಗಳ ಸ್ವರೂಪವನ್ನು ಸಾಧಿಸಿದುದರಿಂದ ಏನು ಪ್ರಯೋಜನವು? ಮತ್ತು ಇದು ನಿತ್ಯವು, ಇದೂ ನಿತ್ಯವು, ಎಂದು ಪ್ರತ್ಯೇಕ ಪ್ರತ್ಯೇಕ ಹೇಳುವುದಕ್ಕಿಂತ ಸರ್ವ ದೇಶಗಳಲ್ಲಿ ವ್ಯಾಪ್ತವಾದುದು ನಿತ್ಯವೆಂದು ಒಂದೇ ಶಬ್ದದಿಂದ ಹೇಳಲು ಶಕ್ಯವಾಗುವುದು ಅಂತಹುದು ಜೀವರಿಂದ ಬೇರೆಯಾದ ಅಕಾರಾದಿ ವರ್ಣಗಳೂ, ಅವ್ಯಾಕೃತಾಕಾಶಾದಿಗಳೂ ನಿತ್ಯಗಳಾಗಿವೆ, ಅವು ಜೀವರು ನಿತ್ಯರೆಂಬ ವಿಷಯ ದಲ್ಲಿ ದೃಷ್ಟಾಂತವಾಗುವುದೆಂದು ಶ್ರೀಕೃಷ್ಣನು ಅವಿನಾಶಿ ತು ಎಂಬ ಶ್ಲೋಕದಿಂದ ಉಪದೇಶಿಸುತ್ತಾನೆ (ಸ್ವಾಭಾವಿಕವಾಗಿ ನಾಶವಿಲ್ಲವಾದರೂ ಶಾಪ ಮೊದಲಾದ ಕಾರಣವಿಶೇಷಗಳಿಂದ ನಾಶವು ಬರಬಹುದಷ್ಟೆ ಎಂದರೆ) ಶಾಪಾದಿಗಳಿಂದಲೂ ವಿನಾಶವಿಲ್ಲವೆಂದು ವಿನಾಶಂ ಇತ್ಯಾದಿಗಳಿಂದ ಹೇಳುತ್ತಾರೆ ಅವೆಲ್ಲವೂ ಹ್ರಾಸವಿಲ್ಲದಿದ್ದುದು ಯಾವ ರೀತಿಯಾಗಿಯೂ ನಾಶವಿಲ್ಲದಿದ್ದುದೇ.

ವಿ ॥ (1) ವಿಕಾರ ಹ್ರಾಸಗಳನ್ನೇ ಮಾಡಲು ಸಾಧ್ಯವಿಲ್ಲವೆಂದ ಮೇಲೆ ನಾಶ ಮಾಡಲು ಸುತರಾಂ ಸಾಧ್ಯವಿಲ್ಲವೆಂದು ಸಿದ್ಧವಾಯಿತು (2) ಏವಂಚ ಅಕಾರಾದಿವರ್ಣ, ಅವ್ಯಾಕೃತಾಕಾಶ, ಪ್ರಕೃತಿ ಮಹಾಲಕ್ಷ್ಮೀ, ಈಶ್ವರ, ಕಾಲಪ್ರವಾಹ ಇವು ಜೀವರು ನಿತ್ಯರೆಂಬಲ್ಲಿ ದೃಷ್ಟಾಂತವಾಗುವವು ॥ ೧೭ ॥

ಪೀ—ಯುದ್ಧವನ್ನು ಭಗವಂತನ ಪೂಜಾರೂಪವಾಗಿಯೇ ಮಾಡಬೇಕೆನ್ನುವರು. ಜೀವೇಶ್ವರರು ಇಬ್ಬರೂ ನಿತ್ಯರಾದ ಪ್ರಯುಕ್ತ ಈಶ್ವರನಿಗೆ ಆಧಿಕ್ಯವಿಲ್ಲದಿರುವುದರಿಂದ ಈಶ್ವರನ ಪೂಜೆಯನ್ನು ಏಕೆ ಮಾಡುವುದು ಎಂದರೆ—

**ತಾ ॥ (೧) ಯದ್ಯಪಿ ನಿತ್ಯತ್ವಂ ಜೀವಸ್ಯಾಪ್ಯಸ್ತಿ । ತಥಾಽಪಿ ಸರ್ವಪ್ರಕಾರೇಣಾವಿನಾಶಿತ್ವಂ ವಿಷ್ಣೋರೇವೇತಿ ತು ಶಬ್ದಃ ॥ (೨) ಅನಿತ್ಯತ್ವಂ ದೇಹಹಾನಿರ್ದುಃಖಪ್ರಾಪ್ತಿರಪೂರ್ಣತಾ । ನಾಶಶ್ಚತುರ್ವಿಧಃ ಪ್ರೋಕ್ತಸ್ತದಭಾವೋ ಹರೇಸ್ಸದಾ । ತದನ್ಯೇಷಾಂ ತು**

ಸರ್ವೇಷಾಂ ನಾಶಾಃ ಕೇಚಿದ್ಭವಂತಿ ಹಿ । ಇತಿ ಮಹಾವಾರಾಹೇ ॥ (೩) ದೇಶತಃ ಕಾಲತಶ್ಚೈವ ಗುಣತಶ್ಚ ತ್ರಿಧಾ ತತಿಃ । ಸಾ ಸಮಸ್ತಾ ಹರೇರೇವ ನ ಹ್ಯನ್ಯೇ ಪೂರ್ಣ ಸದ್ಗುಣಾಃ । ಇತಿ ಪರಮಶ್ರುತಿಃ ॥ ೧೭ ॥

ಅ ॥ (೧) ಯದ್ಯಪಿ ಜೀವರಿಗೂ ನಿತ್ಯತ್ವವು ಇದೆ ಆದರೂ ಸರ್ವಪ್ರಕಾರದಿಂದಲೂ ವಿನಾಶವಿಲ್ಲವೆನ್ನುವುದು ವಿಷ್ಣುವಿಗೇನೇ ಎಂದು ತು ಶಬ್ದವು (ಜೀವರಿಗಿಂತ ಈಶ್ವರನಿಗೆ ಆಧಿಕ್ಯವನ್ನು ತಿಳಿಸುತ್ತದೆ) (೨) (ನಾಶವು ಅನೇಕವಿಧವು ಹೇಗೆ? ಈಶ್ವರನಿಗೆ ಅವು ಹೇಗೆ ಇಲ್ಲ ಎಂದರೆ) ಸ್ವರೂಪನಾಶ, ದೇಹನಾಶ, ದುಃಖವುಂಟಾಗುವುದು, ಪೂರ್ಣತೆಯಿಲ್ಲದಿರುವುದು, ಹೀಗೆ ನಾಶವು ನಾಲ್ಕು ವಿಧವಾದುದು ಅಂತಹ ನಾಲ್ಕುವಿಧ ನಾಶವೂ ಶ್ರೀಹರಿಗೆ ಇರುವುದೇ ಇಲ್ಲ ಶ್ರೀಹರಿಗಿಂತ ಬೇರೆ ಎಲ್ಲರಿಗೂ ಕೆಲಕೆಲವು ನಾಶಗಳು ಬರುತ್ತವೆ, ಎಂದು ಮಹಾವಾರಾಹದಲ್ಲಿದೆ. (೩) ಸರ್ವದೇಶಗಳಲ್ಲಿರುವುದು, ಸರ್ವಕಾಲಗಳಲ್ಲಿರುವುದು, ಸರ್ವಗುಣಪರಿಪೂರ್ಣತ್ವವು, ಎಂದು ಮೂರುವಿಧ ವ್ಯಾಪ್ತಿಯು, ಅವೆಲ್ಲವೂ ಶ್ರೀಹರಿಗೇನೇ, ಬೇರೆಯವರು ಪೂರ್ಣ ಸದ್ಗುಣಗಳುಳ್ಳವರಲ್ಲ ಎಂದು ಪರಮಶ್ರುತಿಯು ॥ ೧೭ ॥

ಗೀ ॥ ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।
ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥ ೧೮ ॥

ಅ ॥ ಶರೀರಿಣಃ = ನಾಶವಾಗತಕ್ಕ ಶರೀರವುಳ್ಳ, ಅನಾಶಿನಃ = ಬಿಂಬ ಉಪಾಧಿಸನ್ನಿಧಿನಾಶದಿಂದ ನಾಶವಿಲ್ಲದ ಅಪ್ರಮೇಯಸ್ಯ = ಸರ್ವತ್ರ ವ್ಯಾಪ್ತನಾದ ಶ್ರೀಹರಿಗೆ ಪ್ರತಿಬಿಂಬ (ಶ್ರೀಹರಿಯ ಅಧೀನದಲ್ಲಿದ್ದು ಶ್ರೀಹರಿಗೆ ಸದೃಶ)ರಾದ, ನಿತ್ಯಸ್ಯ = ಸ್ವರೂಪತಃ ನಿತ್ಯರಾದ ಸಂಸಾರಿ ಜೀವರ, ಇಮೇ = ಕಾಣತಕ್ಕ, ದೇಹಾಃ = ಪಾಂಚಭೌತಿಕ ಶರೀರಗಳು ಅಂತವಂತಃ = ವಿನಾಶ ಉತ್ಪತ್ತಿಯುಳ್ಳವುಗಳು (ಇದರಿಂದ ಬೇರೆ ಶರೀರಗಳಿಗೆ ವಿನಾಶವಿಲ್ಲವೆಂದುಕ್ತವಾಯಿತು) (ಸಂಸಾರಿಗಳ ಶರೀರಗಳಿಗೆ ಉತ್ಪತ್ತಿ ನಾಶಗಳಿವೆ ಎಂದು ಹೇಳಿದಕಾರಣ ಮುಕ್ತರ ಶರೀರಗಳಿಗೆ ಉತ್ಪತ್ತಿ ನಾಶಗಳು ಇಲ್ಲವೆಂದುಕ್ತವಾಯಿತು ಮುಕ್ತರಿಗೂ ನಿಯಾಮಕನಾದ ಶ್ರೀಹರಿಗೆ ನಿತ್ಯದೇಹವಿದೆ ಎಂದು ನಿಶ್ಚಿತವೆ. ಏವಂಚ ಇಂತಹ ಜೀವರಿಗೆ ದುಃಖವು ತಪ್ಪಿದ್ದಲ್ಲ ಗುಣಪರಿಪೂರ್ಣತೆಯು ಇಲ್ಲವೆಂದೂ ನಿಶ್ಚಿತವೇ ಆದರೆ ಜೀವರು ಸ್ವರೂಪತಃ ನಿತ್ಯರಾದರೂ ಅವರಿಗೆ ಮೂರುವಿಧ ನಾಶವಿದೆ ಶ್ರೀಹರಿಗೆ ನಾಲ್ಕುವಿಧ ನಾಶವೂ ಇಲ್ಲ ಆದಕಾರಣ ಜೀವೇಶ್ವರರಿಗೆ ಬಹಳ ವ್ಯತ್ಯಾಸವಿದೆ) ತಸ್ಮಾತ್ = ಶ್ರೀಹರಿಗೆ ಜೀವರಿಗಿಂತ ಆಧಿಕ್ಯವಿದ್ದ ಪ್ರಯುಕ್ತ, ಅನಾಶಿನಃ = ನಾಲ್ಕುವಿಧ ನಾಶವಿಲ್ಲದ, ಅಪ್ರಮೇಯಸ್ಯ = ದೇಶ ಕಾಲ ಗುಣಗಳಿಂದ ಪೂರ್ಣನಾದ ಶ್ರೀಹರಿಯ ಪೂಜೆಗೋಸ್ಕರ, ಯುಧ್ಯಸ್ವ = ಯುದ್ಧಮಾಡು ॥ ೧೮ ॥

ಭಾ ॥ (೧) ಭವತು ದೇಹಸ್ಯಾಪಿ ಕಸ್ಯಚಿನ್ನಿತ್ಯತ್ವಮಿತಿ ನೇತ್ಯಾಹ । ಅಂತವಂತ ಇತಿ ॥ (೨) ಅಸ್ತು ತರ್ಹಿ ದರ್ಪಣನಾಶಾತ್ಪ್ರತಿಬಿಂಬನಾಶವದಾತ್ಮನಾಶ ಇತ್ಯತ ಆಹ । ನಿತ್ಯಸ್ಯೇತಿ । ಶರೀರಿಣ ಇತಿ ಈಶ್ವರವ್ಯಾವೃತ್ತ್ಯರ್ಥೇ ॥ (೩) ನ ಚ ನೈಮಿತ್ತಿಕನಾಶ ಇತ್ಯಾಹ । ಅನಾಶಿನ ಇತಿ ॥ (೪) ಕುತಃ । ಅಪ್ರಮೇಯೇಶ್ವರಸರೂಪತ್ವಾತ್ । ನ ಹ್ಯುಪಾಧಿಬಿಂಬಸನ್ನಿಧ್ಯನಾಶೇ ಪ್ರತಿಬಿಂಬನಾಶಃ ಸತಿ ಚ ಪ್ರದರ್ಶಕೇ ॥ (೫) ಸ್ವಯಮೇವಾತ್ರ ಪ್ರದರ್ಶಕಃ । ಚಿತ್ತ್ವಾತ್ ॥ (೬) ನಿತ್ಯಶ್ಚೋಪಾಧಿಃ ಕಶ್ಚಿದಸ್ತಿ । ಪ್ರತಿ-

**ಪಶ್ಚಾತ್ ವಿಮೋಕ್ಷಸ್ಯ ನಿತ್ಯೋಪಾಧ್ಯಾ ಸ್ವರೂಪಯಾ । ಚಿದ್ರೂಪಯಾ ಯುಕ್ತೋ ಜೀವಃ ಕೇಶವಪ್ರತಿಬಿಂಬಕಃ । ಇತಿ ಭಗವದ್ವಚನಾತ್ ॥ ೧೮ ॥**

ಅ ॥ (೧) ಯಾವುದಾದರೊಂದು ದೇಹಕ್ಕೆ ನಿತ್ಯತ್ವವು ಇರಬಹುದಷ್ಟೆ, ಎಂದರೆ– **ಅಂತವಂತಃ** ಎಂಬುದರಿಂದ ದೇಹಗಳಿಗೆ ನಿತ್ಯತ್ವವು ಕೂಡುವುದಿಲ್ಲವೆನ್ನುತ್ತಾರೆ (೨) (ಜೀವರಿಗೆ ನಿತ್ಯತ್ವವನ್ನು ಹೇಳಿದ್ರಿಂದ ತಿರುಗಿ **ನಿತ್ಯಸ್ಯ** ಎಂದು ಹೇಳಿದ್ದು ಏಕೆಂದರೆ) ಮುಖ ನೋಡಲಿಕ್ಕೆ ಕನ್ನಡಿಯು ಉಪಾಧಿಯು. ಅದರೊಳಗೆ ತೋರುವ ಮುಖವು ಪ್ರತಿಬಿಂಬವು. (ಅದರಿಂದ ಬೇರೆಯಾಗಿ ಅದಕ್ಕೆ ಸದೃಶವಾದುದು) ಕನ್ನಡಿಯು ನಷ್ಟವಾದರೆ ಪ್ರತಿಬಿಂಬವೂ ನಷ್ಟವಾಗುತ್ತದೆ ಅಂತೆಯೇ ಉಪಾಧಿಯಾದ ದೇಹಕ್ಕೆ ನಾಶ ಬರುವಾಗ ಪ್ರತಿಬಿಂಬನಾದ ಜೀವನಿಗೂ ನಾಶವು ಬರಲಿ ಎಂದು ಪೂರ್ವಪಕ್ಷಿಯು ಹೇಳಿದರೆ ಅದನ್ನು ನಿಷೇಧಿಸುವುದಕ್ಕಾಗಿ **ನಿತ್ಯಸ್ಯ** ಎಂದು ಹೇಳಿರುವರು ಅದರೂ ಜೀವರು ನಿತ್ಯರೇ (ಅನಿತ್ಯ ದೇಹಗಳು ಉಪಾಧಿಗಳಲ್ಲ ಉಪಾಧಿಯಾದ ಸ್ವರೂಪದೇಹವು ಅನಿತ್ಯವಲ್ಲ, ಈ ಅಭಿಪ್ರಾಯದಿಂದ ಇಮೇ ಎಂದು ಹೇಳಿರುವರು ) (ಅಶರೀರನಿಗೆ ದೇಹವೇ ಇಲ್ಲದಿರುವುದರಿಂದ **ಶರೀರಿಣೋ ದೇಹಾಃ** ಎಂಬುದು ವ್ಯರ್ಥವೆಂದರೆ) **ನಿತ್ಯಸ್ಯ ದೇಹಾಃ ಅಂತವಂತಃ** ನಿತ್ಯರಾದವರ ಶರೀರಗಳು ನಾಶ ಹೊಂದುತ್ತವೆ, ಎಂದು ಹೇಳೋಣ ಶ್ರೀಹರಿಯ ಶರೀರಕ್ಕೂ ನಾಶವಿದೆ ಎಂದು ತೋರುತ್ತದೆ.) ಶ್ರೀಹರಿಯ ಶರೀರಕ್ಕೆ ನಾಶವಿಲ್ಲವೆಂದು ತೋರಿಸುವುದಕ್ಕಾಗಿ **ಶರೀರಿಣಃ**= ಜೀವನ ಎಂಬ ವಿಶೇಷಣವು. (೩) (ಆದರೂ **ಅನಾಶಿನಃ** ಎಂಬುದು ವ್ಯರ್ಥವೇ ಎಂದರೆ– ಕೆಲವರು ಆ ದೋಷಪರಿಹಾರಕ್ಕಾಗಿ **ವಿನಾಶಿನಃ** ಎಂದು ಪಾಠಮಾಡಿಕೊಳ್ಳುತ್ತಾರೆ ಇದು ಸರಿಯಲ್ಲ ಹಾಗೆ ಹೇಳಿದರೆ— **ಅಂತವಂತಃ** ಎಂಬುದಕ್ಕೆ ಪ್ರಯೋಜನವಿಲ್ಲವೆಂದಾಗುವುದು ಆದಕಾರಣ ಪಾಠಾಂತರ ಕಲ್ಪನೆಯು ವ್ಯರ್ಥವೆಂಬ ಅಭಿಪ್ರಾಯದಿಂದ ಹೇಳುತ್ತಾರೆ ) (ಉಪಾಧಿ (ದೇಹ) ನಾಶದಿಂದ ಜೀವನಿಗೆ ನಾಶವಾಗದಿದ್ದರೂ, ಉಪಾಧಿ ಬಿಂಬ (ಪರಮಾತ್ಮ )ಗಳ ಸನ್ನಿಧಿಯ ನಾಶದಿಂದ ಪ್ರತಿಬಿಂಬನಾದ ಜೀವನಿಗೆ ನಾಶವು ಬರಬಹುದೆಂದಾಕ್ಷೇಪಿಸಿದರೆ ಅದನ್ನು ಪರಿಹರಿಸುವುದಕ್ಕಾಗಿ) **ಅನಾಶಿನಃ** ಎಂದು ಹೇಳಿದ್ದು, ಯಾವ ನಿಮಿತ್ತದಿಂದಲೂ ಜೀವರಿಗೆ ನಾಶವಿಲ್ಲ (೪) ಇದು ಹೇಗೆ ಕೂಡುತ್ತದೆ ? (ಅಲ್ಲದೆ **ಅಪ್ರಮೇಯಸ್ಯ** ಎಂಬುದು ವ್ಯರ್ಥವೆಂದರೆ) ಜೀವನು ಸರ್ವತ್ರ ವ್ಯಾಪ್ತನಾದ ಶ್ರೀಹರಿಗೆ ಸದೃಶನಾದುದರಿಂದ (ಅಂದರೆ—ಜೀವನು ಯಾವುದಾದರೊಂದು ವಸ್ತುವಿಗೆ ಪ್ರತಿಬಿಂಬನಲ್ಲ ಮತ್ತೆ ಶ್ರೀಹರಿಗೆ ಪ್ರತಿಬಿಂಬನು, ಆ ಶ್ರೀಹರಿಯು ಸರ್ವತ್ರವ್ಯಾಪ್ತನು ಅಂತಹ ಶ್ರೀಹರಿಯು ಬಿಂಬನಾದುದರಿಂದ ಆತನ ಸಾನ್ನಿಧ್ಯವು ಸರ್ವದಾ ಇದ್ದ ಪ್ರಯುಕ್ತ ಉಪಾಧಿಯೆನಿಸಿದ ಸ್ವರೂಪದೇಹಸಂಬಂಧವೂ ಸದಾ ಇದ್ದುದರಿಂದಲೂ, ಬಿಂಬಸಂಬಂಧಕ್ಕೆ ನಾಶವಿಲ್ಲದಿರುವುದರಿಂದ ಪ್ರತಿಬಿಂಬನಾದ ಜೀವನಿಗೆ ನಾಶವಿಲ್ಲ.) ಹೇಗೆಂದರೆ— ಉಪಾಧಿ (ಸ್ವರೂಪದೇಹ) ಬಿಂಬ (ಶ್ರೀಪರಮಾತ್ಮ) ಸನ್ನಿಧಿಗೆ ನಾಶವಿಲ್ಲದಿರುವಾಗ ಪ್ರದರ್ಶಕವಾದ ಉಪಾಧಿ ಬಿಂಬಗಳು ನಾಶಹೊಂದದಿರಲು ಪ್ರತಿಬಿಂಬನಾದ ಜೀವನಿಗೆ ನಾಶವು ಬರಲಾರದಷ್ಟೆ. (೫) (ನಶ್ವರಗಳಾದ ಶರೀರಗಳು ಉಪಾಧಿಗಳಾಗದಿರುವುದರಿಂದ ಇಲ್ಲಿ ಯಾವುದು ಉಪಾಧಿಯೆಂದರೆ) (ಜೀವನ ಸ್ವರೂಪದೇಹವೇ ಉಪಾಧಿಯೆಂದು ಹೇಳಿದ ಕಾರಣ ಜೀವನ ಸ್ವರೂಪ ದೇಹಕ್ಕೂ, ಜೀವನಿಗೂ, ಭೇದವಿಲ್ಲದಿರುವುದರಿಂದ ) ಜ್ಞಾನಸ್ವರೂಪನಾದುದರಿಂದ ಜೀವನು ತನಗೆ ತಾನೇ ಉಪಾಧಿಯೆಂದಾಗಾಯಿತು (೬) (ಉಪಾಧಿನಿವೃತ್ತಿಯೇ ಮುಕ್ತಿಯಾಗಿರುವುದರಿಂದ ಜೀವನೇ ಉಪಾಧಿಯೆಂದರೆ ಮೋಕ್ಷದಲ್ಲಿ ಜೀವನೇ ಇಲ್ಲವೆಂದಾಗುವುದು, ಎಂದರೆ—) ನಿತ್ಯವಾದುದೂ ಒಂದು ಉಪಾಧಿಯು ಇದೆ. (ಅಂದರೆ ನಿತ್ಯ, ಅನಿತ್ಯ ಎಂದು ಎರಡು ಉಪಾಧಿಗಳು ಜೀವನಿಗೆ ಇರುತ್ತವೆ ಅವುಗಳಲ್ಲಿ ನಿತ್ಯವಾದ ಸ್ವರೂಪದೇಹವು ಮೋಕ್ಷದಲ್ಲಿಯೂ ಇದೆ ಅನಿತ್ಯವಾದ ಪಾಂಚಭೌತಿಕ ದೇಹವು ನಷ್ಟವಾಗುತ್ತದೆ ಇದಕ್ಕೆ ಪ್ರಮಾಣ ಹೇಳುತ್ತಾರೆ—) ಜೀವನು ಮೋಕ್ಷವನ್ನು ಹೊಂದುವಾಗ ಜ್ಞಾನಸ್ವರೂಪವೂ ನಿತ್ಯವೂ ತನ್ನ ಸ್ವರೂಪ

ಭೂತವೂ ಆದ ದೇಹವೆಂಬ ಉಪಾಧಿಯಿಂದ ಕೂಡಿದವನಾಗಿ ಶ್ರೀಹರಿಗೆ ಪ್ರತಿಬಿಂಬನಾಗಿರುತ್ತಾನೆಂದು ಭಗವಂತನ ಮಾತು. ॥ ೧೮ ॥

ಟೀ—ಶ್ರೀಹರಿಗೆ ಜೀವರಿಗಿಂತ ಉತ್ತಮತ್ವವು ಹೇಗೆಂದರೆ— ಅಂತವಂತಃ ಇಮೇ ಎಂದು ಹೇಳಿರುವರು. ಅದರಲ್ಲಿ ಒಬ್ಬ ಜೀವನದ್ದು ಮಾತ್ರ ದೇಹಕ್ಕೆ ನಾಶವೆಂಬ ಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ತಾ ॥ (೧) ಶರೀರಿಣಾಂ ತು ದೇಹಹಾನ್ಯಾದಿನಾಶೋ ವಿದ್ಯತ ಏವ ॥ (೨) ಯೇನ ಸರ್ವಮಿದಂ ತತಮಿತಿ ತಸ್ಯೈವ ಲಕ್ಷಣಕಥನಾತ್ ॥ (೩) ನ ಜೀವಾನಾಂ ದೇಶತೋ ಗುಣತಶ್ಚ ಪೂರ್ಣತಾ ॥ (೪) ಅನಿಚ್ಛಯಾ ದೇಹಹಾನ್ಯಾದೇರೇವ ದುಃಖಾವಾಪ್ತಿಃ ಸಿದ್ಧಾ ॥ (೫) ತಸ್ಮಾದನಾಶಿನೋಽಪ್ರಮೇಯಸ್ಯ ವಿಷ್ಣೋಃ ಪೂಜಾರ್ಥಂ ಯುಧ್ಯಸ್ವ । ತತ್ಪ್ರಸಾದಾಧೀನತ್ವಾದ್ದುಃಖನಿವೃತ್ತೇಸ್ಸುಖಸ್ಯ ಚ ॥ (೬) ಯೇ ತು ಸರ್ವಾಣಿ ಕರ್ಮಾಣಿ ಮಯಿ ಸನ್ನ್ಯಸ್ಯ ಮತ್ಪರಾಃ ॥ (೭) ತೇಷಾಮಹಂ ಸಮುದ್ಧರ್ತಾ (೧೨-೬,೭) ಇತ್ಯಾದೇಃ ॥ ೧ ॥

ಅ ॥ (೧) ಪಾಂಚಭೌತಿಕ ಶರೀರವುಳ್ಳ ಜೀವರಿಗೆ ದೇಹಹಾನಿ ಮೊದಲಾದ ನಾಲ್ಕು ವಿಧ ನಾಶವು ತಪ್ಪಿದ್ದಲ್ಲ ಯಾರಿಂದ ಜಗತ್ತು ವ್ಯಾಪಿಸಿಕೊಂಡಿದೆಯೋ ಎಂದು ಶ್ರೀಹರಿಗೇನೇ ಲಕ್ಷಣವನ್ನು ಹೇಳಿರುತ್ತಾರೆ (ಏವಂಚ ಶ್ರೀಹರಿಯು ಸರ್ವದೇಶಗಳಲ್ಲಿ ವ್ಯಾಪಿಸಿಕೊಂಡಿರುವವನು, ಸರ್ವಕಾಲಗಳಲ್ಲಿಯೂ ಇರುವವನು, ಸರ್ವಗುಣಪರಿಪೂರ್ಣನು ಎಂದು ಮೂರು ಒಟ್ಟು ಸೇರಿ ಲಕ್ಷಣವು) (ಅಂದರೆ ಶ್ರೀಹರಿಯು ಸರ್ವಪ್ರಕಾರದಿಂದಲೂ ನಾಲ್ಕುವಿಧ ವಿನಾಶವಿಲ್ಲದವನು. ಜೀವರಿಗೆ ಮಾತ್ರ ನಿತ್ಯತ್ವವಿದೆ ದೇಹಕ್ಕೆ ನಾಶಾದಿಗಳಿವೆ. ಆದಕಾರಣ ಶ್ರೀಹರಿಗೆ ಜೀವರಿಗಿಂತ ಆಧಿಕ್ಯವಿದೆ.) (೨) (ಜೀವರು ಸರ್ವಕಾಲಗಳಲ್ಲಿರುವುದರಿಂದ ಇದು ಶ್ರೀಹರಿಗೇನೇ ಲಕ್ಷಣವು ಹೇಗೆ ಆಗುವುದು.? ಎಂದರೆ) ಯಾರಿಂದ ಈ ಸಂಪೂರ್ಣ ಜಗತ್ತು ವ್ಯಾಪ್ತವಾಗಿದೆಯೋ, ಎಂದು ವಿಷ್ಣುವಿಗೇನೇ ಲಕ್ಷಣ ಹೇಳಿರುತ್ತಾರೆ (ಜೀವರು ಸರ್ವಕಾಲಗಳಲ್ಲಿದ್ದರೂ ಸರ್ವದೇಶಗಳಲ್ಲಿ ವ್ಯಾಪಿಸಿಕೊಂಡಿಲ್ಲ ಸರ್ವಗುಣಪರಿಪೂರ್ಣರಲ್ಲ, * (೪) (ಅಂತವಂತಃ ಎಂಬಲ್ಲಿ ಜೀವರಿಗೆ ದೇಹನಾಶ ಮಾತ್ರ ಹೇಳಲ್ಪಡುತ್ತದೆ ಬೇರೆ ನಾಶವು ಹೇಳಲ್ಪಡುವುದಿಲ್ಲ ಅದುಕಾರಣ ದೇಹಹಾನ್ಯಾದಿ ಎಂಬಲ್ಲಿ ಆದಿಪದವು ಏತಕ್ಕೆ ಎಂದರೆ-) ತನಗೆ (ಜೀವನಿಗೆ) ಇಚ್ಛೆಯಿಲ್ಲದಿದ್ದರೂ ದೇಹನಾಶಾದಿಗಳಿಂದಲೇ ದುಃಖಪ್ರಾಪ್ತಿಯು ಸಿದ್ಧವಾಗಿದೆ (ಅಂದರೆ ಇಲ್ಲಿ ದೇಹನಾಶವನ್ನೇ ಹೇಳಿದ್ದೇನೋ ನಿಜ ಆದರೂ ದುಃಖಪ್ರಾಪ್ತಿರೂಪ ನಾಶವನ್ನೂ ಅಪೂರ್ಣತ್ವರೂಪ ನಾಶವನ್ನೂ ಇಟ್ಟುಕೊಳ್ಳಬೇಕು. ದೇಹಪ್ರಾಪ್ತಿನಾಶಗಳು ಅನಿಷ್ಟಗಳಾಗಿರುವುದರಿಂದ ಅವುಗಳಿದ್ದವರಿಗೆ ದುಃಖವು ಬಂದೇಬರುತ್ತದೆ) (೫) ಸರ್ವ ರೀತಿಯಿಂದಲೂ ಶ್ರೀಹರಿಗೆ ವಿನಾಶವಿಲ್ಲದಿರುವಕಾರಣ ಜೀವರಿಗಿಂತ ಆಧಿಕ್ಯವಿದ್ದ ಪ್ರಯುಕ್ತ ನಾಶವಿಲ್ಲದಿರುವ ಸರ್ವತ್ರ ವ್ಯಾಪ್ತನಾದ ಶ್ರೀಹರಿಯ ಪೂಜೆಗೋಸ್ಕರ ಯುದ್ಧಮಾಡು (೬) ದುಃಖನಿವೃತ್ತಿಯಾಗುವುದೂ

---

(1) ಅವಿನಾಶಿ ಎಂಬ ಶ್ಲೋಕವು ಭಾಷ್ಯದಲ್ಲಿ ವರ್ಣ, ಆಕಾಶ ಮೊದಲಾದವುಗಳನ್ನು ಹೇಳುತ್ತದೆಂದೂ, ತಾತ್ಪರ್ಯದಲ್ಲಿ ಶ್ರೀಹರಿಗೆ ಲಕ್ಷಣವನ್ನು ಹೇಳುತ್ತದೆಂದೂ ಹೇಳಿದ ಕಾರಣ ಪರಸ್ಪರ ವಿರೋಧವು ಎಂದರೆ—ಅವಿನಾಶಿ ಎಂಬ ಶ್ಲೋಕದಲ್ಲಿ ಜೀವರು ಹೇಳಲ್ಪಡುವುದಿಲ್ಲವೆಂಬ ಅಭಿಪ್ರಾಯದಿಂದ ಭಾಷ್ಯವು ಹೊರಟದ್ದು ಅಮುಖ್ಯಾರ್ಥವನ್ನು ಹೇಳಿದ್ದು ತಾತ್ಪರ್ಯದಲ್ಲಿ ಶ್ರೀಹರಿಯು ದೇಶ, ಕಾಲ, ಗುಣಗಳಿಂದ ಪೂರ್ಣನೆಂದು ಮುಖ್ಯಾರ್ಥವನ್ನು ಹೇಳಿಯದೆ ಆದಕಾರಣ ವಿರೋಧವಿಲ್ಲ ಜೀವರಿಗೆ ಕಾಲತಃ ವ್ಯಾಪ್ತಿ ಮಾತ್ರ ಇದೆ ವೇದ ಮೊದಲಾದುವುಗಳಿಗೆ ಕಾಲತಃ ದೇಶತಃ ಹೀಗೆ ಎರಡು ವಿಧ ವ್ಯಾಪ್ತಿಯಿದೆ ಹೀಗೆ ಜೀವರಿಗಿಂತ ವೇದಾದಿಗಳಲ್ಲಿ ವ್ಯಾಪ್ತಿಯು ಹೆಚ್ಚು ಇದೆ ಅವುಗಳಿಗಿಂತಲೂ ಶ್ರೀಹರಿಯಲ್ಲಿ ಹೆಚ್ಚು ವ್ಯಾಪ್ತಿಯಿದೆ

ಸುಖಲಾಭವಾಗುವುದೂ, ಶ್ರೀಹರಿಯ ಪ್ರಸಾದದಿಂದಲೇ. (ಸರ್ವ ರೀತಿಯಾಗಿಯೂ ನಾಶವಿಲ್ಲದಿರುವುದರಿಂದ ಮಾತ್ರ ಶ್ರೀಹರಿಯನ್ನು ಪೂಜಿಸಬೇಕೆಂದು ಹೇಳಿದ್ದಲ್ಲ ಪರಂತು ನಾಲ್ಕುವಿಧ ನಾಶವೂ ಇಲ್ಲದಿರುವುದರಿಂದ ಶ್ರೀಹರಿಯೇ ಸರ್ವಸ್ವತಂತ್ರನು ಯುದ್ಧ ಮೊದಲಾದ ತಮ್ಮ ಕರ್ಮಗಳಿಂದ ಈಶ್ವರನನ್ನು ಪೂಜಿಸಿದರೆ ಅತನು ಮೋಕ್ಷವನ್ನು ಕೊಡುತ್ತಾನೆ ಆದಕಾರಣ ಅತನನ್ನು ಪೂಜಿಸಬೇಕು) (೭) (ಶ್ರೀಹರಿಯು ಸರ್ವೋತ್ತಮನಾದುದರಿಂದ ಅತನಿಗೆ ಮೋಕ್ಷವನ್ನು ಕೊಡತಕ್ಕ ಶಕ್ತಿಯಿದ್ದರೂ, ಅವರವರ ಜಾತಿವಿಹಿತ ಕರ್ಮಗಳಿಂದ ಪೂಜಿಸಿದರೆ ಮೋಕ್ಷವನ್ನು ಕೊಡುತ್ತಾನೆಂದು ಗೀತೆಗೆ ಸಮ್ಮತವೆಂಬುದು ಹೇಗೆ? ಮೋಕ್ಷವು ಜ್ಞಾನಭಕ್ತಿಗಳಿಂದ ಲಭಿಸುವುದೆಂದು ಗೀತೆಗೆ ಸಮ್ಮತವೆಂದರೆ -) ಯಾರು ಎಲ್ಲಾ ಕರ್ಮಗಳನ್ನು ನನ್ನಲ್ಲಿ (ಶ್ರೀಕೃಷ್ಣನಲ್ಲಿ) ಸಮರ್ಪಿಸಿ (ಅಂದರೆ ತಾವು ಮಾಡುವ ಎಲ್ಲಾ ಕರ್ಮಗಳೂ, ಸರ್ವ ಸ್ವತಂತ್ರನಾದ ಶ್ರೀಹರಿಯ ಪೂಜಾರೂಪಗಳೆಂದು ತಿಳಿದುಕೊಂಡು)ಶ್ರೀಹರಿಯೇ ಸರ್ವೋತ್ತಮನೆಂದು ತಿಳಿಯುತ್ತಾ (ಲಕ್ಷ್ಮ್ಯಾದಿಗಳನ್ನು ಸ್ವತಂತ್ರರೆಂದು ಉಪಾಸನಮಾಡದೆ ನನ್ನನ್ನೇ ಧ್ಯಾನಿಸುತ್ತಾರೋ) ಅಂತಹವರನ್ನು ಸಂಸಾರಸಮುದ್ರದಿಂದ ಉದ್ಧರಿಸುವೆನು, ಇದುಮೊದಲಾದ ಪ್ರಮಾಣಗಳಿಂದ (ಕೇವಲ ಕರ್ಮದಿಂದ ಮೋಕ್ಷವಾಗುತ್ತದೆಂದು ಗೀತೆಗೆ ಸಮ್ಮತವಾಗದಿದ್ದರೂ ಭಕ್ತಿ ಜ್ಞಾನಗಳಿಂದ ಕೂಡಿದ ಕರ್ಮದಿಂದ ಮೋಕ್ಷವಾಗುತ್ತದೆಂದು ಗೀತೆಗೆ ಸಮ್ಮತವು) ॥ ೧ ॥

ಪೀ— **ಅನಾಶಿನೋಽಪ್ರಮೇಯಸ್ಯ** ಎಂಬುದು ಜೀವಪರವೆಂದು ಏಕೆ ಆಗಲಾರದೆಂದರೆ—

**ತಾ ॥ (೧) ಜೀವಪಕ್ಷೇ ನಿತ್ಯಸ್ಯೋಕ್ತಾ ಇತ್ಯುಕ್ತತ್ವಾದನಾಶಿನ ಇತಿ ಪುನರುಕ್ತಿಃ ॥ (೨) ಅವಿನಾಶಿ ಯೇನ ಸರ್ವಮಿದಂ ತತಮಿತ್ಯುಕ್ತಸ್ಯೈವಾನಾಶಿನೋಽಪ್ರಮೇಯಸ್ಯೇತಿ ಪ್ರತ್ಯಭಿಜ್ಞಾನಾಚ್ಚ ॥ (೩) ಇಮೇ ದೇಹಾ ಇತಿ ವಿಶೇಷಣಾನ್ನಿತ್ಯಶ್ಚಿದಾನಂದಾತ್ಮಕಃ ಸ್ವರೂಪಭೂತೋ ದೇಹೋ ಮುಕ್ತಾನಾಮಪಿ ವಿದ್ಯತ ಇತಿ ಜ್ಞಾಯತೇ ॥ ೨ ॥**

ಅ ॥ (೧) **ಅನಾಶಿನೋಽಪ್ರಮೇಯಸ್ಯ** ಎಂಬಲ್ಲಿ ಜೀವನು ಹೇಳಲ್ಪಡುತ್ತಾನೆಂದು ಇಟ್ಟುಕೊಂಡರೆ **ನಿತ್ಯಸ್ಯೋಕ್ತಾಃ** ಎಂಬಲ್ಲಿ ಜೀವನಿಗೆ ನಿತ್ಯತ್ವವನ್ನು ಹೇಳಿದ್ದರಿಂದ **ಅನಾಶಿನಃ** ಎಂಬಲ್ಲಿಯೂ ನಿತ್ಯತ್ವವನ್ನು ಹೇಳಿದ ಕಾರಣ ಪುನರುಕ್ತಿದೋಷವು (ಹೇಳಿದನ್ನೇ ಹೇಳುವುದು) ಒರುವುದು (೨) (ಜೀವರು ಹೇಳಲ್ಪಡುತ್ತಾರೆಂಬ ಪಕ್ಷದಲ್ಲಿ ಪುನರುಕ್ತಿದೋಷವು ಬರುವುದರಿಂದ ಮಾತ್ರ ಈಶ್ವರನನ್ನೇ ಇಟ್ಟುಕೊಳ್ಳಬೇಕೆಂದಲ್ಲ ಮತ್ತೆ ಈಶ್ವರನನ್ನು ಬೋಧಿಸುವ ಪದವೂ ಇದೆ ಎನ್ನುತ್ತಾರೆ) **ಅವಿನಾಶಿ ಯೇನ ಸರ್ವಮಿದಂ ತತಂ** ಎಂಬುವಲ್ಲಿ ಶ್ರೀಹರಿಯೇ ಹೇಳಲ್ಪಡುತ್ತಾನೆಂದು ಸಾಧಿಸಲ್ಪಟ್ಟಿದೆ ಅಲ್ಲಿ ಹೇಳಿದ ಅವಿನಾಶಿತ್ವವು ಸರ್ವವ್ಯಾಪ್ತಿಯು, ಇಲ್ಲಿ **ಅನಾಶಿನಃ ಅಪ್ರಮೇಯಸ್ಯ** ಎಂಬುದರಿಂದ ಹೇಳಲ್ಪಡುತ್ತದೆ (ಆದುದರಿಂದಲೂ ಶ್ರೀಹರಿಯೇ ಹೇಳಲ್ಪಡುತ್ತಾನೆ) (೩) (ಜೀವರ ದೇಹಕ್ಕೆ ನಾಶವಿದೆ. ಈಶ್ವರನ ದೇಹಕ್ಕೆ ನಾಶವಿಲ್ಲ. ಆದಕಾರಣ ಜೀವರಿಗಿಂತ ಶ್ರೀಹರಿಯು ಶ್ರೇಷ್ಠನೆಂಬ ವ್ಯಾಖ್ಯಾನವು ಗೀತೆಗೆ ಸಮ್ಮತವಾಗಲಾರದು ದೇಹವೆಲ್ಲವೂ ಅನಿತ್ಯವೇ ಎಂದು ನಿಯಮವಿದೆ, ಎಂದರೆ—ಗೀತೆಯಲ್ಲಿಯೇ) **ಇಮೇ ದೇಹಾಃ** ಎಂದು ದೇಹಗಳಿಗೆ ಇಮೇ=ಪ್ರತ್ಯಕ್ಷವಾಗಿ ತೋರುವ ಈ ದೇಹಗಳು ಎಂದು ವಿಶೇಷಣ ಕೊಟ್ಟಪ್ರಯುಕ್ತ ನಿತ್ಯವೂ ಚಿದಾನಂದಾತ್ಮಕವೂ ಸ್ವರೂಪಭೂತವೂ ಆದ ದೇಹವು ಮುಕ್ತರಿಗೂ ಉಂಟೆಂದು ತಿಳಿಯುತ್ತದೆ

ವಿ ॥ (1) ಇದರಿಂದ ಮುಕ್ತರ ಶರೀರವೇ ನಿತ್ಯವೆಂದಾದ ಮೇಲೆ ಶ್ರೀಹರಿಯ ಶರೀರವು ನಿತ್ಯವೆಂದು ಹೇಳಬೇಕಾಗಿಯೇ ಇಲ್ಲ ಮತ್ತೆ ಜಡಶರೀರವೇ ಅನಿತ್ಯವಾಗುವುದಲ್ಲದೆ ಜ್ಞಾನ ಆನಂದ ಸ್ವರೂಪವಾದ ಶರೀರವು ಸರ್ವಥಾ ಅನಿತ್ಯವಾಗಲಾರದು (2) **ಅಶರೀರಂ ವಾವ ಸಂತಂ** ಇತ್ಯಾದಿಗಳಲ್ಲಿ ಮುಕ್ತರಿಗೆ ಜ್ಞಾನಾನಂದಾತ್ಮಕ ದೇಹವಲ್ಲದೆ ಜಡಶರೀರವು ಇಲ್ಲವೆಂದು ಹೇಳಿದ್ದು ॥ ೨ ॥

ಪೀ—ಮುಕ್ತರಿಗೆ ನಿತ್ಯವೂ ಜ್ಞಾನ ಆನಂದ ಸ್ವರೂಪವೂ ಆದ ದೇಹವಿದೆ ಎಂಬಲ್ಲಿ ಭಾಗವತ ಪ್ರಮಾಣ ಹೇಳುತ್ತಾರೆ—

**ತಾ ॥ ನ ವರ್ತತೇ ಯತ್ರ ರಜಸ್ತಮಸ್ತಯೋಃ ಸತ್ತ್ವಂ ಚ ಮಿಶ್ರಂ ನ ಚ ಕಾಲವಿಕ್ರಮಃ। ನ ತ(ಯ)ತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಾಃ ॥೧॥ ಶ್ಯಾಮಾವದಾತಾಃ ಶತಪತ್ರಲೋಚನಾಃ ಪಿಶಂಗವಸ್ತ್ರಾಃ ಸುರುಚಃ ಸುಪೇಶಸಃ। ಸರ್ವೇ ಚತುರ್ಬಾಹವ ಉನ್ಮಿಷನ್ಮಣಿಪ್ರವೇಕನಿಷ್ಕಾಭರಣಾಃ ಸುವರ್ಚಸಃ॥ ॥ ೨ ॥ಪ್ರವಾಲವೈಡೂರ್ಯಮೃಣಾಳವರ್ಚಸಾಂ ಪರಿಸ್ಫುರತ್ಕುಂಡಲಮೌಳಿಮಾಲಿನಾಂ। ಭ್ರಾಜಿಷ್ಣುಭಿರ್ಯಃ ಪರಿತೋ ವಿರಾಜತೇ ಲಸದ್ವಿಮಾನಾವಳಿಭಿರ್ಮಹಾತ್ಮನಾಂ ॥ ವಿದ್ಯೋತಮಾನಪ್ರಮದೋತ್ತಮಾಭಿಃ ಸವಿದ್ಯುದಭ್ರಾವಳಿಭಿರ್ಯಥಾ ನಭಃ ॥ ಇತಿ ಹಿ ಭಾಗವತೇ ॥ ೩ ॥**

ಅ ॥ ಯಾವ ವೈಕುಂಠಲೋಕದಲ್ಲಿ ರಜೋಗುಣವೂ, ತಮೋಗುಣವೂ, ರಜಸ್ತಮೋಗುಣಗಳಿಂದ ಮಿಶ್ರವಾದ ಸತ್ವಗುಣವೂ, ಕಾಲದಿಂದುಂಟಾದ ವಿಕಾರವೂ, ಅವಿದ್ಯೆಯೂ (ಅಜ್ಞಾನವೂ)ಇಲ್ಲವೋ. ಅಜ್ಞಾನವೇ ಇಲ್ಲವೆಂದ ಮೇಲೆ ಕಾಮಾದಿದೋಷಗಳು ಇಲ್ಲವೆಂದು ಏನು ಹೇಳಬೇಕು. ಯಾವ ಲೋಕದಲ್ಲಿ ದೇವತೆಗಳಿಂದಲೂ ಅಸುರರಾದ ಪ್ರಹ್ಲಾದ ಮೊದಲಾದ ಸಾಧುಗಳಿಂದಲೂ ಪೂಜಿತರಾದ ಬ್ರಹ್ಮಾದಿದೇವತೆಗಳು ಶ್ರೀಹರಿಗೆ ಅನುವ್ರತ (ಸೇವಕ) ರಾಗಿಯೇ ಇರುತ್ತಾರೋ. ॥೧॥ ಮುಕ್ತರು ಮೇಘದಂತೆ ನೀಲವರ್ಣದವರು, ನಿರ್ಮಲರು, ಕಮಲದಳದಂತೆ ಕಣ್ಣುಳ್ಳವರು, ಪೀತಾಂಬರವುಳ್ಳವರು, ಸೂರ್ಯನಂತೆ ಚಲೋ ಪ್ರಭೆಯುಳ್ಳವರು, ಚಲೋ ರೂಪವುಳ್ಳವರು, ಎಲ್ಲರೂ ನಾಲ್ಕು ಕೈಗಳುಳ್ಳವರು, ಪ್ರಕಾಶಿಸುತ್ತಿರುವ ರತ್ನ ಶ್ರೇಷ್ಠ ಮುತ್ತಿನಸರಗಳೇ ಆಭರಣಗಳಾಗಿ ಉಳ್ಳವರು, ಚೆಲುವ ಕಾಂತಿಯುಳ್ಳವರು, ಇವರೆಲ್ಲರೂ ಸೇವಕರಾಗಿಯೇ ಇರುತ್ತಾರೆ ॥ ೨ ॥ ಹವಳ ವೈಡೂರ್ಯ ಕಮಲದದಂಡು ಇವುಗಳಂತೆ ವರ್ಚಸ್ಸುಳ್ಳವರು, ಮಿಂಚಿನಿಂದ ಕೂಡಿದ ಮೇಘಗಳ ಸಮೂಹಗಳಿಂದ ಆಕಾಶವು ಶೋಭಿಸುವಂತೆ ವಿಶೇಷವಾಗಿ ಶೋಭಿಸುತ್ತಿರುವವರು, ಪ್ರಕಾಶಿಸುತ್ತಿರುವ ಕುಂಡಲ ಕಿರೀಟ ಮಾಲಿಕೆಗಳುಳ್ಳವರು, ಮಹಾನುಭಾವರೂ ಆದ ಮುಕ್ತಜೀವರ ಉತ್ತಮ ಸ್ತ್ರೀಯರಿಂದ ಕಂಗೊಳಿಸುವ ಪ್ರಕಾಶಮಾನಗಳಾದ ವಿಮಾನಗಳ ಪಂಕ್ತಿಗಳಿಂದ ಯಾವ ವೈಕುಂಠಲೋಕವು ಸುತ್ತಮುತ್ತಲೂ ಸರ್ವತ್ರ ಪ್ರಕಾಶಿಸುತ್ತಿದೆಯೋ, (**ತಸ್ಮೈ ಸ್ವಲೋಕಂ ಭಗವಾನ್ ಸಭಾಜಿತಃ ಸಂದರ್ಶಯಾಮಾಸ ಪರಂ ನ ಯತ್ಪದಂ** ಅಂತಹ ಲೋಕವನ್ನು ಶ್ರೀಹರಿಯು ತೋರಿಸಿದನು ) ಎಂದು ಭಾಗವತದಲ್ಲಿದೆ ॥ ೩ ॥

ವಿ ॥ ಮುಕ್ತರಿಗೆ ಇಲ್ಲಿ ಜಡಶರೀರವಿಲ್ಲವೆಂದು ಹೇಳಿ ಶರೀರವಿದೆ, ಎಂದು ಹೇಳಿದ್ರಿಂದ ಅರ್ಥಾತ್ ಜ್ಞಾನ ಆನಂದಸ್ವರೂಪವಾದ ದೇಹವಿದೆ, ಎಂದು ತಿಳಿಯುತ್ತದೆ ॥ ೩ ॥

**ತಾ ॥ (೧) ಚಿದಾನಂದಶರೀರೇಣ ಸರ್ವೇ ಮುಕ್ತಾ ಯಥಾ ಹರಿಃ । ಭುಂಜತೇ ಕಾಮತೋ ಭೋಗಾಂಸ್ತದಂತರ್ಬಹಿರೇವ ಚ । ಇತಿ ಪರಮಶ್ರುತಿಃ ॥ (೨) ನ ಚ ಜೀವೇಶ್ವರೈಕ್ಯಂ ಮುಕ್ತಾವಪಿ ॥ (೩) ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ । ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ** (೧೪–೨) **॥ (೪)**

ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ । ಸೋಽಶ್ನುತೇ ಸರ್ವಾ-
ನ್ಕಾಮಾನ್ಸಹ ಬ್ರಹ್ಮಣಾ ವಿಪಶ್ಚಿತಾ ॥ (೫) ಏತಮಾನಂದಮಯಮಾತ್ಮಾನಮುಪ-
ಸಂಕ್ರಮ್ಯೇಮಾಂಲ್ಲೋಕಾನ್ಕಾಮಾನ್ನೀ ಕಾಮರೂಪ್ಯನುಸಂಚರನ್ನೇತತ್ಸಾಮ ಗಾ-
ಯನ್ನಾಸ್ತೇ ॥ (೬) ಸರ್ವೇ ನಂದಂತಿ ಯಶಸಾಗತೇನ ಸಭಾಸಾಹೇನ ಸಖ್ಯಾ ಸಖಾ
ಯಃ । ಕಿಲ್ಬಿಷಸ್ಪೃತ್ಪಿತುಷಣಿರ್ಹ್ಯೇಷಾಮರಂ ಹಿತೋ ಭವತಿ ವಾಜಿನಾಯ ॥ (೭)
ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ಗಾಯತ್ರಂ ತ್ವೋ ಗಾಯತಿ ಶಕ್ವರೀಷು ।
ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿಮಿಮೀತ ಉ ತ್ವಃ ॥
(೮) ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ತತ್ರ ಪರ್ಯೇತಿ
ಜಕ್ಷನ್ ಕ್ರೀಡನ್ರಮಮಾಣಃ (ಸ್ತ್ರೀಭಿರ್ವಾ ಯಾನೈರ್ವಾ) ॥ (೯) ತದಾ ವಿದ್ವಾನ್
ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ॥ ೪ ॥

ಅ ॥ (೧) ಶ್ರೀಹರಿಯಂತೆ ಮುಕ್ತರೆಲ್ಲರೂ ಜ್ಞಾನಾನಂದಸ್ವರೂಪವಾದ ಶರೀರದಿಂದ ಸ್ವೇಚ್ಛಾನುಸಾರ ಭೋಗಗಳನ್ನು ಶ್ರೀಹರಿಯ ದೇಹದೊಳಗೂ ಹೊರಗೂ ಯೋಗ್ಯತಾನುಸಾರ ಭೋಗಿಸುತ್ತಾರೆ. ಎಂದು ಪರಮಶ್ರುತಿಯು (ಸಾಯುಜ್ಯ ಮೋಕ್ಷವನ್ನು ಹೊಂದಿದವರು ಪರಮಾತ್ಮನ ದೇಹದೊಳಗೇನೇ ಕೆಲವುರೂಪಗಳಿಂದ ಇದ್ದು, ರೂಪಾಂತರಗಳಿಂದ ಹೊರಗೂ ಇದ್ದು ಭೋಗಗಳನ್ನುಣ್ಣುತ್ತಾರೆ. ಸಾಯುಜ್ಯ ಮೋಕ್ಷವನ್ನು ಹೊಂದದಿರುವವರಿಗೆ ಹೊರಗೇನೇ ಭೋಗವೆಂದು ತಿಳಿಯಬೇಕು) (೨) (ಈ ವಾಕ್ಯಗಳೆಲ್ಲವೂ ಅಮುಖ್ಯಮೋಕ್ಷವನ್ನು ಹೇಳತಕ್ಕವುಗಳು ಮುಖ್ಯಮೋಕ್ಷದಲ್ಲಿ ಜೀವೇಶ್ವರರಿಗೆ ಐಕ್ಯವೇ, ಎಂದರೆ—) ಮೋಕ್ಷದಲ್ಲಿಯೂ ಜೀವಬ್ರಹ್ಮರಿಗೆ ಅಭೇದವು ಸರ್ವಥಾ ಇಲ್ಲ (೩) (ಏಕೆ ಇಲ್ಲವೆಂದರೆ—ಮುಖ್ಯವಾದ ಮೋಕ್ಷವಾದ ಮೇಲೆಯೂ ಜೀವಬ್ರಹ್ಮರಿಗೆ ಭೇದವೇ, ಎಂಬಲ್ಲಿ ವೇದ ಸ್ಮೃತಿ ಪ್ರಮಾಣಗಳನ್ನು ಹೇಳುತ್ತಾರೆ) ಮುಂದೆ ಹೇಳುವ ಜ್ಞಾನವನ್ನು ಹೊಂದಿ ನನ್ನ ಸಾರೂಪ್ಯವನ್ನು ಹೊಂದಿರುತ್ತಾರೆ ಸೃಷ್ಟಿಕಾಲದಲ್ಲಿ ಹುಟ್ಟುವುದಿಲ್ಲ ಪ್ರಲಯಕಾಲದಲ್ಲಿ ದುಃಖಿಸುವುದಿಲ್ಲ (ಇಲ್ಲಿ ಮೋಕ್ಷವಾದ ಮೇಲೆ ಮೋಕ್ಷದಿಂದ ಹಿಂದೆ ತೆರಳುವುದಿಲ್ಲವೆಂದು ಹೇಳಿದ್ದರಿಂದ ಮುಖ್ಯಮೋಕ್ಷವೆಂದು ತಿಳಿಯುತ್ತದೆ) (೪) (ಮೋಕ್ಷದಲ್ಲಿಯೂ ಶ್ರೀಹರಿಯಿಂದ ಭಿನ್ನರಾಗಿಯೇ ಪರಮಾನಂದವನ್ನು ಅನುಭವಿಸುತ್ತಿರುತ್ತಾರೆಂಬ ವಿಷಯವಲ್ಲಿ ವೇದಪ್ರಮಾಣ ಹೇಳುತ್ತಾರೆ) ಯಾರು ಹೃದಯಾಕಾಶದಲ್ಲಿ ಇರತಕ್ಕ ಶ್ರೀಹರಿಯನ್ನು ತಿಳಿಯುತ್ತಾನೋ ಆತನು ಪರಬ್ರಹ್ಮನಿಂದ ಕೂಡಿ ಎಲ್ಲಾ ಭೋಗಗಳನ್ನುಣ್ಣುತ್ತಾನೆ (೫)ಮುಕ್ತನು ಈ ಆನಂದಮಯರೂಪಿಯಾದ ಶ್ರೀನಾರಾಯಣನ ಸಮೀಪಕ್ಕೆ ಹೋಗಿ ತಾನು ಇಚ್ಛಿಸಿದ ಸರ್ವಭೋಗಗಳುಳ್ಳವನಾಗಿ ಇಚ್ಛಾನುಸಾರ ರೂಪಗಳುಳ್ಳವನಾಗಿ ಭೂರಾದಿ ಲೋಕಗಳಲ್ಲಿ ಸ್ವೇಚ್ಛಾನುಸಾರ ಸಂಚರಿಸುತ್ತಾ ಅಥವಾ ಪ್ರಕಾಶಸ್ವರೂಪರಾದ ತಮ್ಮಿಂದ ಕೆಳಗಿನ ಮುಕ್ತರನ್ನು ನಿಯಮಿಸುತ್ತಾ ಹಾಉವು ಹಾಉವು ಹಾಉವು ಎಂಬೀ ಸಾಮವನ್ನು ಗಾನಮಾಡಿಕೊಂಡು ಇರುತ್ತಾನೆ (ಯೋ ವೇದ ಆನಂದಮಯಂ ಎಂಬೀ ತೈತ್ತಿರೀಯ ಎರಡು ವಾಕ್ಯಗಳು ಪರಬ್ರಹ್ಮಪ್ರಕರಣದಲ್ಲಿದ್ದ ಪ್ರಯುಕ್ತ ಮುಖ್ಯಮೋಕ್ಷವನ್ನು ಹೇಳತಕ್ಕವುಗಳೆಂದು ತಿಳಿಯುತ್ತದೆ) (೬) ಶ್ರೀಹರಿಯು ಮುಕ್ತರಿಗೆ ಅನಿಷ್ಟವು ಬಾರದಂತೆ ಮಾಡುತ್ತಾನೆ ದಿವ್ಯವಾದ ಅನ್ನವನ್ನು ಕೊಡುತ್ತಾ ಇಂದ್ರಿಯಗಳಿಗೆ ಹಿತವನ್ನು ಮಾಡುತ್ತಿರುತ್ತಾನೆ. ಎಲ್ಲಾ ಮುಕ್ತರೂ ಪರಸ್ಪರವಾಗಿ ಗೆಳೆಯರಾಗಿಯೇ ಇರುತ್ತಾರೆ ಯಥಾಯೋಗ್ಯವಾಗಿ ತಂತಮ್ಮಿಂದ ತಿಳಿಯಲ್ಪಟ್ಟವನೂ, ಯಶಸ್ಸೆಂಬ ಗುಣಸ್ವರೂಪನೂ ಬ್ರಹ್ಮಾದಿಗಳ ಸಭೆಗೆ ನಿಯಾಮಕನೂ ಉಪಕಾರಕನೂ ಆದ ಶ್ರೀಹರಿಯಿಂದ ಸಂತೋಷಗೊಳ್ಳುತ್ತಾರೆ (ಇಲ್ಲಿಯೂ ಅನಿಷ್ಟವೇ ಇಲ್ಲವೆಂದು ತೋರುವುದರಿಂದ ಈ ವಾಕ್ಯವೂ ಮುಖ್ಯ

ಮೋಕ್ಷವನ್ನೇ ಹೇಳುತ್ತದೆಂದು ತಿಳಿಯುತ್ತದೆ) (೭) ಒಬ್ಬ ಬ್ರಹ್ಮನು ಋಕ್ಕುಗಳನ್ನು ಚೆನ್ನಾಗಿ ಉಚ್ಚರಿಸುತ್ತಾ, ಇನ್ನೊಬ್ಬ ಬ್ರಹ್ಮನು ತಾನು ಅತಿಪುಷ್ಟನಾಗಿ ಶಕ್ವರೀಛಂದಸ್ಸುಳ್ಳ ಋಕ್ಕುಗಳಲ್ಲಿ ಗಾಯತ್ರಸಾಮವನ್ನು ಗಾನಮಾಡುತ್ತಾ, ಮತ್ತೊಬ್ಬ ಬ್ರಹ್ಮನು ಪುರಾಣವಿದ್ಯೆಯನ್ನು ಹೇಳುತ್ತಾ, ಇನ್ನೊಬ್ಬ ಬ್ರಹ್ಮನು ಶ್ರೀಹರಿಯ ಮತ್ಸ್ಯ ಮೊದಲಾದ ಅವತಾರಗಳನ್ನು ಧ್ಯಾನಿಸುತ್ತಾ ಇರುತ್ತಾನೆ (ಇಲ್ಲಿ ಬಹುಬ್ರಹ್ಮರನ್ನು ಹೇಳಿದ ಕಾರಣ ಮುಖ್ಯಮೋಕ್ಷವನ್ನು ಹೇಳುತ್ತದೆಂದೇ ತಿಳಿಯುತ್ತದೆ) (೮) ಪರಬ್ರಹ್ಮನನ್ನು ಹೊಂದಿ ತನ್ನ ಸ್ವರೂಪಾವಿರ್ಭಾವವನ್ನು ಹೊಂದುತ್ತಾನೆ ಮೋಕ್ಷದಲ್ಲಿ ಸ್ವೇಚ್ಛಾನುಸಾರ ಭಕ್ಷಿಸುತ್ತಾ ನಗುತ್ತಾ ಆಡುತ್ತಾ ಸ್ತ್ರೀಯರಿಂದ ಕ್ರೀಡಿಸುತ್ತಾ ವಾಹನಗಳಿಂದ ಸಂಚರಿಸುತ್ತಿರುತ್ತಾನೆ (೯) ಶ್ರೀಹರಿಯನ್ನು ಸಾಕ್ಷಾತ್ಕರಿಸಿದಾಗ ಅಪರೋಕ್ಷಜ್ಞಾನಿಯು ಅನಿಷ್ಟ ಅಂದರೆ (ಮೋಕ್ಷಕ್ಕೆ ಪ್ರತಿಬಂಧಕವಾದ) ಪುಣ್ಯವನ್ನು ಎಲ್ಲಾ ಪಾಪಗಳನ್ನು ಬಿಟ್ಟುಬಿಟ್ಟು ನಿರ್ದೋಷನಾಗಿ ತನ್ನ ಯೋಗ್ಯತಾನುಸಾರ ಆನಂದಪೂರ್ಣತ್ವವನ್ನೇ ಹೊಂದುತ್ತಾನೆ

ವಿ || ಪುಣ್ಯವು ಕಾಮ್ಯ ಅಕಾಮ್ಯ ಎಂದು ಎರಡು ವಿಧವು ಅದರಲ್ಲಿ ಅಕಾಮ್ಯವು ಅಪರೋಕ್ಷಜ್ಞಾನವುಂಟಾದ ಮೇಲೆ ಕ್ಷೀಣವಾಗುವುದು ಕಾಮ್ಯವೂ ಪ್ರಾರಬ್ಧ ಅಪ್ರಾರಬ್ಧ ಎಂದು ಎರಡು ವಿಧವು ಪ್ರಾರಬ್ಧಕ್ಕೆ ಭೋಗದಿಂದಲೇ ನಾಶವು ಅಪ್ರಾರಬ್ಧವೂ ಅನಿಷ್ಟವೂ ಆಗಿರುವ ಪುಣ್ಯಕ್ಕೆ ಜ್ಞಾನದಿಂದ ನಾಶವು. || ೪ ||

ಪೀ–ಮೋಕ್ಷದಲ್ಲಿಯೂ ಮುಕ್ತರಿಗೆ ಶ್ರೀಪರಬ್ರಹ್ಮನಿಂದ ಸರ್ವಸಾಮ್ಯವಿಲ್ಲ ಎಂಬುವಲ್ಲಿಯೂ ಮುಕ್ತರಿಗೂ ತಾರತಮ್ಯವಿದೆ ಎಂಬಲ್ಲಿಯೂ ಪ್ರಮಾಣ ಹೇಳುತ್ತಾರೆ–

**ತಾ || (೧) ಮುಕ್ತಾಃ ಪ್ರಾಪ್ಯ ಪರಂ ವಿಷ್ಣುಂ ತದ್ದೇಹಂ ಸಂಶ್ರಿತಾ ಅಪಿ । ತಾರತಮ್ಯೇನ ತಿಷ್ಠಂತಿ ಗುಣೈರಾನಂದಪೂರ್ವಕೈಃ ॥ (೨) ಭೂಪಾ ಮನುಷ್ಯ(ಮಾನುಷ)ಗಂಧರ್ವಾ ದೇವಾಃ ಪಿತರ ಏವ ಚ । ಆಜಾನೇಯಾಃ ಕರ್ಮದೇವಾಸ್ತತ್ತ್ವದೇವಾಃ(ರೂಪಾಃ) ಪುರಂದರಃ । ಶಿವೋ ವಿರಿಂಚ ಇತ್ಯೇತೇ ಕ್ರಮಾಚ್ಛತಗುಣೋತ್ತರಾಃ । ಮುಕ್ತಾವಪಿ ತದನ್ಯೇ ಯೇ ಭೂಪಾಚ್ಛತಗುಣಾವರಾಃ ॥ (೩) ನ ಸಮೋ ಬ್ರಹ್ಮಣಃ ಕಶ್ಚಿನ್ಮುಕ್ತಾವಪಿ ಕಥಂಚನ । ತತಸ್ಸಹಸ್ರಗುಣಿತಾ ಶ್ರೀಸ್ತತಃ ಪರಮೋ ಹರಿಃ । ಅನಂತಗುಣಿತತ್ವೇನ ತತ್ಸಮಃ ಪರಮೋಽಪಿ ನ || ೫ ||**

ಅ || (೧) ಮುಕ್ತರು ಸರ್ವೋತ್ತಮನಾದ ಶ್ರೀಹರಿಯನ್ನು ಹೊಂದಿ ಆತನ ಶರೀರವನ್ನು ಆಶ್ರಯಿಸಿದರೂ ಆನಂದವೇ ಮೊದಲಾದ ಗುಣಗಳಿಂದ ನೀಚೋಚ್ಚಭಾವದಿಂದಲೇ ಇರುತ್ತಾರೆ (೨) ರಾಜರೂ ಮನುಷ್ಯಗಂಧರ್ವರು (ಇನ್ನೊಬ್ಬರ ಮುಖಾಂತರ ದೇವತೆಗಳಿಂದ ಕಾರ್ಯದಲ್ಲಿ ಪ್ರೇರೇಪಿಸಲ್ಪಡತಕ್ಕವರು) ದೇವಗಂಧರ್ವರು (ದೇವತೆಗಳಿಂದಲೇ ಕಾರ್ಯಗಳಲ್ಲಿ ಪ್ರೇರೇಪಿಸಲ್ಪಡತಕ್ಕವರು) ಪಿತೃದೇವತೆಗಳು ಆಜಾನಜ ದೇವತೆಗಳು (ದೇವತೆಗಳ ಕುಲದಲ್ಲಿ ಹುಟ್ಟಿ ಅಪ್ರಸಿದ್ಧರಾಗಿರುವವರು) ಕರ್ಮದೇವತೆಗಳು (ಕರ್ಮದಿಂದ ದೇವತ್ವವನ್ನು ಪಡೆದ ಬಲಿಚಕ್ರವರ್ತಿಮೊದಲಾದವರು) ತತ್ತ್ವಾಭಿಮಾನಿಗಳಾದ ಬೃಹಸ್ಪತಿ ಮೊದಲಾದವರು, ದೇವೇಂದ್ರನು ರುದ್ರನು, ಚತುರ್ಮುಖಬ್ರಹ್ಮನು ಇವರು ಮೋಕ್ಷದಲ್ಲಿಯೂ ಕ್ರಮವಾಗಿ ನೂರುನೂರು ಹೆಚ್ಚೆಚ್ಚು ಗುಣಗಳುಳ್ಳವರು ಇವರಿಗಿಂತ ಬೇರೆಯಾದ ಮನುಷ್ಯೋತ್ತಮರು ರಾಜರಿಗಿಂತ ನೂರುಗುಣ ಕಡಿಮೆಯವರು (೩) (ಅಧಿಕಾರಿ ವರ್ಗದಲ್ಲಿ) ಯಾರೊಬ್ಬನೂ ಚತುರ್ಮುಖ

ಬ್ರಹ್ಮನಿಗೆ ಸಮಾನಿಕನಾದವನು ಮೋಕ್ಷದಲ್ಲಿಯೂ ಕೂಡ ಹೇಗೂ ಇಲ್ಲ. ಚತುರ್ಮುಖ ಬ್ರಹ್ಮನಿಗಿಂತ ಲಕ್ಷ್ಮೀದೇವಿಯು ಸಹಸ್ರಗುಣಗಳು ಹೆಚ್ಚು ಉಳ್ಳವಳು. ಲಕ್ಷ್ಮೀದೇವಿಗಿಂತ ಸರ್ವೋತ್ತಮನಾದ ಶ್ರೀಹರಿಯು ಅನಂತಾನಂತಗುಣಗಳು ಹೆಚ್ಚುಳ್ಳವನು ಶ್ರೀಹರಿಗೆ ಸಮಾನಿಕನೇ ಇಲ್ಲ ಉತ್ತಮನು ಸುತರಾಂ ಇಲ್ಲ ॥ ೫ ॥

ಪೀ—ಮೋಕ್ಷದಲ್ಲಿಯೂ ಮುಕ್ತರಿಗೆ ತಾರತಮ್ಯವಿದ್ದರೆ ಪರಸ್ಪರ ವಿರೋಧವು ಬರುವುದೆಂದರೆ—

**ತಾ ॥ (೧) ಅಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾ ಬಭೂವುಃ । (ಆದಘ್ನಾಸ ಉಪಕಕ್ಷಾಸ ಉ ತ್ವೇ ಹ್ರದಾ ಇವ ಸ್ನಾತ್ವಾ ಉ ತ್ವೇ ದದೃಶ್ರೇ) ॥ (೨) ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿಸ್ರವ । ಇತ್ಯಾದಿಮೋಕ್ಷಾನಂತರಮಪಿ ಭೇದವಚನೇಭ್ಯಃ ॥ ೬ ॥**

ಅ ॥ (೧) ಕಣ್ಣು ಕಿವಿ ಮೊದಲಾದ ಇಂದ್ರಿಯಗಳ ಪ್ರಯೋಜನವನ್ನು ಸಂಪೂರ್ಣ ಪಡೆದಿರುವ, ಪರಸ್ಪರ ವಿರೋಧವಿಲ್ಲದಿರುವ ಮುಕ್ತರು, ಜ್ಞಾನ ಮೊದಲಾದ ಗುಣಗಳಲ್ಲಿ ಸಮಾನಿಕರಿಲ್ಲದವರು ಅಂದರೆ ಪರಿಪೂರ್ಣರಾದವರಾದರು (೨) (ಮೋಕ್ಷದಲ್ಲಿಯೂ ನೀಚೋಚ್ಚಭಾವವಿದ್ದರೆ ಮುಕ್ತರಿಗೂ **ಪೂರ್ಣತೆ** ಯಿಲ್ಲವೆಂದಾಗಬೇಕಾಗುವುದು ಎಂದರೆ) ಯಾವ ಮೋಕ್ಷದಲ್ಲಿ ಇಚ್ಛೆಗೆ ವಿಷಯಗಳಾದ ಅಭೀಷ್ಟಗಳು ಪೂರ್ಣಗಳಾಗಿರುತ್ತವೋ ಅಂತಹ ಲೋಕದಲ್ಲಿ ನನ್ನನ್ನು ಮುಕ್ತನನ್ನಾಗಿ ಮಾಡು, ಇದುಮೊದಲಾದ ಭೇದವನ್ನು ತಿಳಿಸುವ ವೇದಪ್ರಮಾಣಗಳಿಂದ ಮೋಕ್ಷವನ್ನು ಹೊಂದಿದ ಮೇಲೆಯೂ ತಾರತಮ್ಯವಿದ್ದರೂ ಪೂರ್ಣತೆಯಿದೆ ಎಂದು ಸ್ಪಷ್ಟವಾಗುತ್ತದೆ. ॥ ೬ ॥

ಪೀ—ಹೀಗೆಂದರೂ ಜೀವೇಶ್ವರರಿಗೆ ಐಕ್ಯವನ್ನು ಹೇಳುವ ಬಹುವೇದಗಳಿಂದ ವಿರೋಧವು ಬರುವ ಪ್ರಯುಕ್ತ ಜೀವೇಶ್ವರರಿಗೆ ಭೇದವೆನ್ನುವುದು ಸಮಂಜಸವಾಗಲಾರದೆಂದರೆ—

**ತಾ ॥ (೧) ನ ಚ ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ತತ್ಕೇನ ಕಂ ಪಶ್ಯೇತ್ ॥ (೨) ಯದ್ವೈ ತನ್ನ ಪಶ್ಯತಿ ಪಶ್ಯನ್ವೈ ತನ್ನ ಪಶ್ಯತಿ । ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ । ಅವಿನಾಶಿತ್ವಾನ್ನ ತು ತದ್ದ್ವಿತೀಯಮಸ್ತಿ । ತತೋಽನ್ಯದ್ವಿಭಕ್ತಂ ಯತ್ಪಶ್ಯೇತ್ ॥ (೩) ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ ॥ (೪) ತತ್ತ್ವಮಸ್ಯಹಂ ಬ್ರಹ್ಮಾಸ್ಮೀತ್ಯಾದಿಶ್ರುತಿ(ವಾಕ್ಯ)ವಿರೋಧಃ ॥ ೭ ॥**

ಅ ॥ (೧) (ಪರರು ಈ ಶ್ರುತಿಗಳಿಗೆ ಹೀಗೆ ಅರ್ಥ ಹೇಳುತ್ತಾರೆ) ಯಾವ ಮೋಕ್ಷಾವಸ್ಥೆಯಲ್ಲಿ ಎಲ್ಲಾ ವಸ್ತುಗಳೂ ಆತ್ಮಸ್ವರೂಪಗಳೇ ಆಗುತ್ತವೋ, ಆಗ ಆತ್ಮನು ಹೊರತು ಬೇರೆ ಯಾವ ವಸ್ತುಗಳೂ ಇಲ್ಲ (ನಿರ್ವಿಶೇಷಚೈತನ್ಯವು ಮಾತ್ರ ಉಳಿಯುತ್ತದೆ) ಆದಕಾರಣ ಯಾವ ಇಂದ್ರಿಯದಿಂದ ಯಾವ ವಸ್ತುವನ್ನು ನೋಡಲಾಪನು? (ಯಾವುದನ್ನೂ ನೋಡಲಾರ) (೨) (ಪರಕೀಯರ ಅರ್ಥವು ಸುಷುಪ್ತ್ಯವಸ್ಥೆಯಲ್ಲಿ ಅಹಂಕಾರಾದಿಗಳೂ, ಅವುಗಳ ಕಾರ್ಯಗಳೂ ನಾಶವಾದೊಡನೆ ಕ್ರಿಯಾ ಕಾರಕ ಫಲರೂಪವಾದ ಜಗತ್ತು ಇಲ್ಲವೆಂದು ಸುಪ್ತನಾದ ಆತ್ಮನಿಗೆ ವಿಧಿಸಲ್ಪಡುತ್ತದೆ ಹೇಗೆಂದರೆ—**ಹೃದ್ಯಂತ ಜ್ಯೋತಿಃ** ಎಂಬಲ್ಲಿ ಜ್ಯೋತಿಶ್ಶಬ್ದದಿಂದ ಸುಪ್ತನಾದ ಆತ್ಮನಿಗೆ ಜ್ಞಾನವಿದೆ, ಎಂದು ಹೇಳಿದೆ. ಪುನಃ **ಅಯಮಾತ್ಮಾ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರಂ** ಎಂಬುದರಿಂದ ಸುಪ್ತನಿಗೆ ಜ್ಞಾನವಿಲ್ಲವೆಂದೂ ಹೇಳಿದೆ ಇವೆರಡೂ ಪರಸ್ಪರ ವಿರುದ್ಧಗಳಾಗಿವೆ, ಎಂದರೆ—)

ಸುಪ್ತನು ನೋಡುವುದಿಲ್ಲವೆಂದು ಹೇಳಿದ್ದು ಯುಕ್ತವೇ ಪಶ್ಯನ್ವೈ ನ ಪಶ್ಯತಿಎಂದು ಹೇಳಿದ್ರಿಂ ವಿರೋಧವಿಲ್ಲ. (ಜ್ಞಾನವು ಇದೆ ಎಂದು ಏಕೆ ಒಡಂಬಡಬೇಕೆಂದರೆ) ಸ್ವರೂಪ ಜ್ಞಾನಕ್ಕೆ ವಿನಾಶವಿದಿರುವುದರಿಂದ ನೋಡುವವನ ಜ್ಞಾನಕ್ಕೆ ವಿನಾಶವಿಲ್ಲ ತನಗಿಂತ ಬೇರೆಯಾದುದನ್ನು ಯಾವುದನ ನೋಡಿಯಾನೋ ಅಂತಹ ಎರಡನೇ ವಸ್ತುವೇ ಇಲ್ಲ (ಏವಂಚ ತನ್ನ ಸ್ವರೂಪಕ್ಕಿಂತ ಬೇರೆ ವಿಷಂಗಳೇ ಇಲ್ಲದಿರುವುದರಿಂದ ನ ಪಶ್ಯತಿ ನೋಡುವುದಿಲ್ಲವೆಂದು ಹೇಳಿದ್ದು ನಿರ್ವಿಷಯಕವಾದ ಸ್ವರೂ ಜ್ಞಾನವು ಇದ್ದಪ್ರಯುಕ್ತ ಪಶ್ಯನ್ವೈ=ಜ್ಞಾನವುಳ್ಳವನೇ ಎಂದು ಹೇಳಿದ್ದು ಆದಕಾರಣ ಪರಸ್ಪ ವಿರೋಧವಿಲ್ಲ ಎಂದು ಹೇಳಿರುವರು. (೩) ಪರಬ್ರಹ್ಮನನ್ನು ತಿಳಿದರೆ ಪರಬ್ರಹ್ಮನೇ ಆಗುತ್ತಾ (೪) ಎಲೋ ಶ್ವೇತಕೇತುವೇ ಆ ಪರಬ್ರಹ್ಮನೇ ನೀನಾಗಿರುತ್ತಿ ನಾನು ಪರಬ್ರಹ್ಮನಾಗಿರುತ್ತೇನೆ ಇ ಮೊದಲಾದ, ಆಪಾತತಃ ಐಕ್ಯವನ್ನು ಪ್ರತಿಪಾದಿಸುವಂತೆ ತೋರುವ ವೇದಪ್ರಮಾಣಗಳಿಂದ ವಿರೋಧ ಬರುವುದಿಲ್ಲ

ವಿ || ಏಕೆ ವಿರೋಧವು ಬರುವುದಿಲ್ಲವೆಂದರೆ—ಆ ವೇದಗಳಿಗೆ ಪರರು ಹೇಳುವ ಅರ್ಥವು ಸಮಂಜ ವಲ್ಲ ಯುಕ್ತವಾದ ಅರ್ಥವು ಬೇರೆಯೇ ಇದೆ ಹೇಗೆಂದರೆ— (1) ಯತ್ರ ತ್ವಸ್ಯ ಎಂಬ ವಾಕ್ಯ ನಿರ್ವಿಶೇಷಚೈತನ್ಯವು ಮಾತ್ರ ಉಳಿಯುತ್ತದೆ ಚೈತನ್ಯವು ಹೊರತು ಬೇರೆ ಯಾವುದೂ ಉಳಿಯು ದಿಲ್ಲವೆಂದಭಿಪ್ರಾಯವಾಗಿದ್ದರೆ—ಘ್ರಾಣ (ಮೂಗು) ಮೊದಲಾದ ಇಂದ್ರಿಯಗಳಿಂದ ಗಂಧ ಮೊದಲಾದ ಗಳ ಜ್ಞಾನವೂ, ತನ್ನ ಜ್ಞಾನವೂ ಶ್ರೀಹರಿಯ ಜ್ಞಾನವೂ ಬಾರದೆ ಹೋಗುವುದು ಅಜ್ಞಾನವು ಬರುತ್ತ ಆದಕಾರಣ ಜ್ಞೇಯವಿದೆ ಎಂದಂಗೀಕರಿಸಲೇಬೇಕು ಆದಕಾರಣ ಮೋಕ್ಷದಲ್ಲಿಯೂ ಎಲ್ಲರೂ ಶ್ರೀ ಹರಿಯ ಅಧೀನರಾಗಿಯೇ ಇರುತ್ತಾರೆ ಸ್ವತಂತ್ರವಾಗಿ ಯಾರೊಬ್ಬರೂ ಯಾವ ಇಂದ್ರಿಯದಿಂದಲ ಯಾವ ವಸ್ತುವನ್ನೂ ನೋಡಲಾರರು (2) ಪರಬ್ರಹ್ಮನು ಯಾವ ವಸ್ತುವನ್ನು ಸಮಾನಿಕವನ್ನಾಗಿಯು ಉತ್ತಮವನ್ನಾಗಿಯೂ ನೋಡುವುದಿಲ್ಲ ಆದಕಾರಣ ಸಮಾನಿಕವೂ, ಉತ್ತಮವೂ ಆದ ವಸ್ತು ಇಲ್ಲವೇ ಇಲ್ಲ ಇರತಕ್ಕ ಎಲ್ಲಾ ವಸ್ತುಗಳನ್ನು ನೋಡುತ್ತಿದ್ದರೂ ಇಂತಹುದನ್ನು ನೋಡದೇ ಇರುವುದರಿಂದ ಅಂತಹುದು ಇಲ್ಲವೇ ಇಲ್ಲ (ಭ್ರಮೆಯಿದ್ದುದರಿಂದ ನೋಡುವುದಿಲ್ಲವೆಂದು ಏಕೆ ಆ ಲಾರದೆಂದರೆ—) ನಿರ್ದೋಷಜ್ಞಾನವುಳ್ಳವನೂ, ಅಬಾಧ್ಯ ಜ್ಞಾನವುಳ್ಳವನೂ, ಭ್ರಮೆಯಿಲ್ಲದವನೂ ಆ ದರಿಂದ ಶ್ರೀಹರಿಯು ಕಂಡದ್ದು ಅಯಥಾರ್ಥವಾಗಲಾರದು ಯಾವುದು ಶ್ರೀಹರಿಗೆ ವಿರುದ್ಧವಾ ದನ್ನು ನೋಡುವುದೋ ಅಂತಹುದು ಶ್ರೀಹರಿಯಿಂದ ಬೇರೆಯಾದುದು ಎರಡನೇ ವಸ್ತುವು ನೋ ವಂಥಾದ್ದು ಇಲ್ಲವೇ ಇಲ್ಲ (ಆದಕಾರಣ ಶ್ರೀಹರಿಗೆ ಸಮಾನಿಕನು ಅಥವಾ ಉತ್ತಮನು ಇದ್ದಾನೆಂ ನೋಡುವವನು ಇನ್ನೊಬ್ಬನಿಲ್ಲ ಸರ್ವರನ್ನು ಕಾಣತಕ್ಕ ಶ್ರೀಹರಿಯು ತನಗೆ ಸಮಾನಿಕರನ್ನು ಅಧಿ ರನ್ನು ನೋಡುವುದಿಲ್ಲ ಸಮಾಧಿಕರು ಇಲ್ಲವೆಂದೇ ಕಾಣುತ್ತಿದ್ದಾನೆ ಆದಕಾರಣ ಶ್ರೀಹರಿಗೆ ಸಮರ ಉತ್ತಮರೂ ಇಲ್ಲವೇ ಇಲ್ಲವೆಂದರ್ಥವು) (3) ಸರ್ವೋತ್ತಮನಾದ ಶ್ರೀಹರಿಯನ್ನು ತಿಳಿದವನು ತ ಜೀವಭಾವವನ್ನು ಬಿಡದೆ ಪರಬ್ರಹ್ಮನಿಗೆ ಸದೃಶನೇ ಆಗುತ್ತಾನೆ ಪರಬ್ರಹ್ಮನಾಗುವುದೇ ಇಲ್ಲ (4 ಶ್ವೇತಕೇತುವೇ ನೀನು ಪರಬ್ರಹ್ಮನಿಗೆ ಸದೃಶನಾಗುತ್ತಿ ಪರಬ್ರಹ್ಮನು ಯಾರಿಂದಲೂ ಹೇಯನ ಗುಣಪೂರ್ಣನು, ದುಷ್ಟನಿರಾಸಕನು, ಜ್ಞಾನಸ್ವರೂಪನು ಇತ್ಯಾದಿ ರೂಪವಾದ ಯುಕ್ತವಾದ ಅರ್ಥವನ ಹೇಳಬೇಕು ಇವುಗಳ ಅರ್ಥವನ್ನು ಮುಂದೆ ವಿವರಿಸುವರು || ೭

ಟೀ—ಸಾಮಾನ್ಯವಾಗಿ ತೋರುವ ಅರ್ಥವು ಏಕೆ ಆಗಲಾರದೆಂದರೆ--ಬೇರೆ ವೇದ ಪ್ರಮಾಣಗಳ ದಲೇ ಆ ವೇದಗಳಿಗೆ ಹಾಗೆ ಅರ್ಥವು ಕೂಡುವುದಿಲ್ಲವೆಂಗೂ ಬೇರೆ ಅರ್ಥವೇ ಕೂಡುತ್ತದೆಂದೂ ಸ್ಪ ವಾಗಿ ತಿಳಿಯ ಬರುತ್ತದೆನ್ನುತ್ತಾರೆ—

ಶಾ ॥ (೧) ಸಂಜ್ಞಾನಾಶೋ ಯದಿ ಭವೇತ್ಕಿಂ ಮುಕ್ತ್ಯಾ ನಃ ಪ್ರಯೋಜನಂ । ಮೋಹಂ ಮಾಂ ಪ್ರಾಪಯಾಮಾಸ ಭವಾನತ್ರ ॥(೨) ಇತಿ ಚೋದಿತಃ। ಯಾಜ್ಞವಲ್ಕ್ಯಃ ಪ್ರಿಯಾಮಾಹ ನಾಹಂ ಮೋಹಂ ಬ್ರವೀಮಿ ತೇ । ಭೂತಜಜ್ಞಾನಲೋಪಃ ಸ್ಯಾನ್ನಿಜಂ ಜ್ಞಾನಂ ನ ಲುಪ್ಯತೇ ॥ (೩) ನ ಚ ಜ್ಞೇಯವಿನಾಶಃ ಸ್ಯಾದಾತ್ಮನಾಶಃ ಕುತಃ ಪುನಃ । (೪) ಸ್ವಭಾವತಃ ಪರಾದ್ವಿಷ್ಣೋರ್ವಿಶ್ವಂ ಭಿನ್ನಮಪಿ ಸ್ಫುಟಂ । ಅಸ್ವಾತಂತ್ರ್ಯಾದ್ಧಿ ಭಿನ್ನಮಿವ ಸ್ಥಿತಮೇವ ಯದೇದೃಶಂ ॥ (೫) ತದಾ ಘ್ರಾಣಾದಿಭೋಗಃ ಸ್ಯಾತ್ಸ್ವರೂಪಜ್ಞಾನಶಕ್ತಿತಃ । ತದಾಽಽತ್ಮಾನುಭವೋಽಪಿ ಸ್ಯಾದೀಶ್ವರಜ್ಞಾನಮೇವ ಚ ॥ (೬) ಯದ್ಯಾನ್ಯನ್ನ ವಿಜಾನಾತಿ ನಾತ್ಮಾನಂ ನೇಶ್ವರಂ ತಥಾ । ಪುರುಷಾರ್ಥತಾ ಕುತಸ್ತು (ಸ್ತತ್) ಸ್ಯಾತ್ತದಭಾವಾಯ ಕೋ ಯತೇತ್ ॥ (೭) ತಸ್ಮಾತ್ಸ್ವಭಾವಜ್ಞಾನೇನ ಭಿನ್ನಾ ವಿಷ್ಣುಸಮೀಪಗಾಃ । ಭುಂಜತೇ ಸರ್ವಭೋಗಾಂಶ್ಚ ಮುಕ್ತಿರೇಷಾ ನ ಚಾನ್ಯಥಾ ॥ ॥ ೮ ॥

ಅ ॥ (೧) (ಪ್ರಜ್ಞಾನಘನ ಏವೈತೇಭ್ಯೋ ಭೂತೇಭ್ಯಸ್ಸಮುತ್ಥಾಯ ತಾನ್ಯೇವಾನುವಿನಶ್ಯತಿ । ನ ಪ್ರೇತ್ಯ ಸಂಜ್ಞಾಽಸ್ತಿ ಜೀವನು ಈ ಪಂಚಭೂತಗಳಿಂದ ಕೂಡಿಹುಟ್ಟಿ ಕೊನೆಗೆ ಅವುಗಳಲ್ಲಿಯೇ ಸೇರುತ್ತಾನೆ ಮೋಕ್ಷವಾದ ಮೇಲೆ ಜ್ಞಾನವೇ ಇಲ್ಲ. ಎಂದು ಯಾಜ್ಞವಲ್ಕ್ಯರು ಹೇಳಿದ ಮೇಲೆ ಅವರ ಅಭಿಪ್ರಾಯವನ್ನು ತಿಳಿಯದೆ ಮೈತ್ರೇಯಿಯು ಅತ್ರೈವ ಮಾ ಭಗವಾನ್ ಮೋಹಾಂತಮಾಪೀಪನ್ನ ಪ್ರೇತ್ಯ ಸಂಜ್ಞಾಽಸ್ತಿ ಪೂಜ್ಯರೇ ಸತ್ತಮೇಲೆ ಜ್ಞಾನವಿಲ್ಲವೆಂದು ನನಗೆ ಇಲ್ಲಿಯೇ ಮಿಥ್ಯಾಜ್ಞಾನರೂಪ ವಿನಾಶವನ್ನು ತಾವು ಹೊಂದಿಸಿರುವಿರಿ. ಎಂದಳು ಆಗ ಆ ವಾಕ್ಯಗಳಿಗೆ ಹಾಗೆ ಅರ್ಥವಲ್ಲವೆಂದು ಬೇರೆ ಪ್ರಮಾಣ ಹೇಳಿ ಹೇಳುತ್ತಾರೆ ಮೋಕ್ಷದಲ್ಲಿ ಜ್ಞಾನವು ಇಲ್ಲವೆಂದಾಗುವುದಾದರೆ ಮೋಕ್ಷ ಹೊಂದೋಣದರಿಂದ ನಮಗೆ ಪ್ರಯೋಜನವೇನು? ಆದಕಾರಣ ನೀವು ನನಗೆ ಈ ವಿಷಯದಲ್ಲಿ ಭ್ರಾಂತಿಯನ್ನು ಹೊಂದಿಸಿ ಕೊಟ್ಟಿರುವಿರಿ- (೨) (ಮೋಕ್ಷದಲ್ಲಿ ಜ್ಞಾನವು ನಾಶಹೊಂದ ವುದಾದರೆ ಮೋಕ್ಷವು ಪುರುಷಾರ್ಥವಾಗದೆ ಹೋಗುವುದು ಮೋಕ್ಷವು ಪುರುಷಾರ್ಥವೇ ಆಗಿದೆ ಆದಕಾರಣ ಮೋಕ್ಷದಲ್ಲಿ ಜ್ಞಾನವಿಲ್ಲವೆನ್ನುವುದು ಮೋಹಕವೇ ಎಂದು ಪತ್ನಿಯಿಂದ ಹೇಳಿಸಿಕೊಳ್ಳಲ್ಪಟ್ಟ ಯಾಜ್ಞವಲ್ಕ್ಯರು ಪ್ರಿಯಳಾದ ಪತ್ನಿಗೆ ಹೇಳಿದರು ನಾನು ನಿನಗೆ ಮೋಹಕ ವಾಕ್ಯವನ್ನು ಹೇಳಲಾರೆ. ಪಂಚಭೂತಗಳಿಂದುಪಚಿತವಾಗ ಜ್ಞಾನವು ನಾಶಹೊಂದುತ್ತದೆ ಅಥವಾ ಪಾಂಚಭೌತಿಕ ದೇಹವುಳ್ಳ ಅಮುಕ್ತರಿಗೆ ಮೋಕ್ಷವನ್ನು ಹೊಂದಿದವರ ವಿಷಯದಲ್ಲಿ ಜ್ಞಾನವು ನಾಶಹೊಂದುತ್ತದೆ. ಎಂದು ನನ್ನ ವಾಕ್ಯದ ಅರ್ಥವು ಸ್ವರೂಪಜ್ಞಾನವು ನಾಶ ಹೊಂದುತ್ತದೆಂದು ನನ್ನ ಅಭಿಪ್ರಾಯವಲ್ಲ ಆದಕಾರಣ ನನ್ನ ಮಾತು ಮೋಹಕವಲ್ಲ) (೩) (ಸ್ವರೂಪ ಜ್ಞಾನಕ್ಕೆ ಏಕೆ ನಾಶವಿಲ್ಲವೆಂದರೆ—) ತಿಳಿಯಲರ್ಹವಾದ ವಸ್ತುವಿಗೇನೇ ವಿನಾಶವಿಲ್ಲವೆನ್ನುವಾಗ ಆತ್ಮನ ಸ್ವರೂಪಭೂತವಾದ ಜ್ಞಾನವು ನಾಶಹೊಂದುವುದಿಲ್ಲವೆಂದು ಸುತರಾಂ ನಿಶ್ಚಿತವು (ಆತ್ಮನಿಗಿಂತ ಬೇರೆಯಾದ ವಿಷಯವೂ ನಾಶ ಹೊಂದದಿರುವಾಗ ಅತಿಪ್ರೀತಿವಿಷಯವಾದ ಆತ್ಮಸ್ವರೂಪಜ್ಞಾನವು ಸುತರಾಂ ನಾಶ ಹೊಂದುವುದೇ ಇಲ್ಲ) (೪) (ಜ್ಞೇಯಕ್ಕೆ ನಾಶವಿಲ್ಲವೆಂಬುದು ಹೇಗೆ ಕೂಡುತ್ತದೆಂದರೆ— * ಯತ್ರ ಹಿ ದ್ವೈತಮಿವ ಭವತಿ । ತದಿತರ ಇತರಂ ಪಶ್ಯತಿ । ತದಿತರ ಇತರಂ ಜಿಘ್ರತಿ । ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್ ಇತ್ಯಾದಿ ವಾಕ್ಯಗಳ ಅಭಿಪ್ರಾಯ ಹೇಳುತ್ತಾರೆ ) ಸ್ವಾಭಾವಿಕವಾಗಿ ಸರ್ವೋತ್ತಮನಾದ ವಿಷ್ಣುವಿನಿಂದ ಜಗತ್ತು ಸ್ಪಷ್ಟವಾಗಿ ಭಿನ್ನವೇ ಆಗಿದೆ. ಆದಾಗ್ಯೂ ಮೋಕ್ಷಾ

* VIನೇ ಓಲ್ಯುಮ್ ಬೃ ಉ. ೧೯೧—೧೯೫ರ ವರೆಗೆ ಇವರ ಅರ್ಥವು ವಿವೃತವಾಗಿದೆ

ವಸ್ಥೆಯಲ್ಲಿಯೂ ಅಬಾಧಿತವಾಗಿಯೇ ಇದ್ದಾಗ್ಯೂ ಸ್ವಾತಂತ್ರ್ಯವಿಲ್ಲದಿರುವುದರಿಂದ ದ್ವೈತಮಿವ= ಭಿನ್ನಮಿವ ಎಂದು ಹೇಳಿರುವರು ಅಂದರೆ ಎಲ್ಲರೂ ಮೋಕ್ಷದಲ್ಲಿಯೂ ಶ್ರೀಹರಿಯಿಂದ ಭಿನ್ನರಾಗಿ ಅಸ್ವತಂತ್ರರಾಗಿಯೇ ಇರುತ್ತಾರೆ (೫) ಜ್ಞೇಯವು ಇದೆ ಎಂದು ಒಡಂಬಟ್ಟರೇನೇ ಅಬಾಧಿತವಾದ ಸ್ವರೂಪಭೂತವಾದ ಜ್ಞಾನಸಾಮರ್ಥ್ಯದಿಂದ ಘ್ರಾಣ ಮೊದಲಾದ ಇಂದ್ರಿಯಗಳಿಂದ ಗಂಧಮೊದಲಾದವುಗಳ ಅನುಭವವೂ ತನಗೆ ತನ್ನ ಅನುಭವವೂ ಬರುತ್ತದೆ, ಶ್ರೀಹರಿಯನ್ನು ತಿಳಿಯುತ್ತಾನೆ, ಇಲ್ಲವಾದರೆ ಕೂಡಲಾರದು ಆದಕಾರಣ ಜ್ಞೇಯವಿದೆ, ಎಂದಂಗೀಕರಿಸಲೇಬೇಕು (ಏನೂ ವಿಶೇಷವಿಲ್ಲದ ಐಕ್ಯವೆಂಬ ಪಕ್ಷದಲ್ಲಿ ಕರ್ಮ ಕರ್ತೃಭಾವವೇ ಕೂಡದಿರುವುದರಿಂದ ತನ್ನ ಜ್ಞಾನವು ಬರಲಾರದು ) (೬) (ಜ್ಞೇಯವು ಇಲ್ಲವಾದರೆ ಭೋಗಾದಿಗಳೂ ಕೂಡದಿರಲಿ, ಬಾಧಕವೇನೆಂದರೆ) ಯಾವಾಗ ಗಂಧಮೊದಲಾದ ವಿಷಯಗಳನ್ನು ತನ್ನನ್ನು ಹಾಗೆಯೇ ಈಶ್ವರನನ್ನು ತಿಳಿಯುವುದಿಲ್ಲವೋ, ಅಂತಹುದು ಪುರುಷಾರ್ಥವು ಹೇಗೆ ಆಗುವುದು? ಭೋಗಾದಿಗಳು ಸಿಗಬಾರದೆಂಬುದಕ್ಕಾಗಿ ಯಾವನು ಪ್ರಯತ್ನಪಡುವನು (ಅಂದರೆ— ಭೋಗಾದಿಗಳಿಲ್ಲವಾದರೆ ಪುರುಷಾರ್ಥವಾಗದಿರುವುದು ಹೇಗೆಂದರೆ ಪುರುಷರು ಅಪೇಕ್ಷಿಸತಕ್ಕುದು ಪುರುಷಾರ್ಥವು. ಭೋಗಾದಿಗಳು ಬೇಡವೆಂದು ಯಾರೂ ಅಪೇಕ್ಷಿಸಲಾರರು ಅದಕ್ಕಾಗಿ ಯಾರೂ ಪ್ರಯತ್ನಿಸಲಾರರು ಆದಕಾರಣ ಭೋಗಾದ್ಯಭಾವರೂಪವಾದ ಮೋಕ್ಷವು ಪುರುಷಾರ್ಥವಾಗಲಾರದು ) (೭) (**ಏತಾವದರೇ ಖಲ್ವಮೃತತ್ವಂ** ಎಂಬ ಅಂತಿಮವಾಕ್ಯದ ಅರ್ಥ ಹೇಳುತ್ತಾರೆ ) ಭೋಗಾದಿಗಳು ಇಲ್ಲವಾದರೆ ಪುರುಷಾರ್ಥವಾಗದೆ ಹೋಗಬೇಕಾಗಿರುವುದರಿಂದ ಭೋಗಾದಿಗಳನ್ನಂಗೀಕರಿಸಲೇಬೇಕು (ಭೋಗಾದಿಗಳು ಕೂಡುವುದರಿಂದ ವಿಷಯಾದಿಗಳು ಭಿನ್ನಗಳೇ, ಅದರಿಂದ ಸ್ವರೂಪಜ್ಞಾನವು ಇದೆ ) ಆದುದರಿಂದ ಪರಸ್ಪರ ಭೇದವಿರುವ ಮುಕ್ತರು ಶ್ರೀವಿಷ್ಣುವಿನ ಸಮೀಪದಲ್ಲಿದ್ದವರಾಗಿ ಸ್ವರೂಪಭೂತವಾದ ಜ್ಞಾನದಿಂದಲೇ ಎಲ್ಲಾ ಭೋಗಗಳನ್ನು ಉಣ್ಣುತ್ತಾರೆ ಸ್ವಸ್ವರೂಪಾನಂದಾವಿರ್ಭಾವವೇ ಮುಕ್ತಿಯು ಜೀವಬ್ರಹ್ಮೈಕ್ಯಜ್ಞಾನದಿಂದ ಮೋಕ್ಷವೆಂಬುದು ಸರ್ವಥಾ ಕೂಡಲಾರದು ॥ ೮ ॥

**ಪೀ—** **ಯದ್ವೈತನ್ನ ಪಶ್ಯತಿ ನ ತು ತದ್ದ್ವಿತೀಯಮಸ್ತಿ** ಎಂಬುವ ವಾಕ್ಯಕ್ಕೆ ಯುಕ್ತವಾದ ಅರ್ಥ ಹೇಳುತ್ತಾರೆ —

**ತಾ ॥ (೧) ಯನ್ನ ಪಶ್ಯೇತ್ಪರೋ ವಿಷ್ಣುರ್ದ್ವಿತೀಯತ್ವೇನ ಸ ಸ್ವತಃ । ತದ್ದ್ವಿತೀಯಂ ನ ಭವತಿ ಪ್ರಾದುರ್ಭಾವಾತ್ಮಕಂ ವಪುಃ ॥ (೨) ಪ್ರಧಾನಪುರುಷಾದ್ಯನ್ಯದ್ಯತ್ತಸ್ಮಾದ್ಭಿನ್ನಮೀಶ್ವರಃ । ವಿಭಕ್ತತ್ವೇನ ನಿಯತಂ ಯಸ್ಮಾತ್ಪಶ್ಯತಿ ಸರ್ವದಾ ॥ (೩) ಪಶ್ಯನ್ನೇವ ಯತೋ ವಿಷ್ಣುಸ್ತದಭೇದಂ ನ ಪಶ್ಯತಿ । ಚೇತನಾಚೇತನಸ್ಯಾಸ್ಯ ನಾಭೇದೋಽಸ್ತಿ ತತೋಽಮುನಾ ॥ (೪) ನ ಹಿ ಜ್ಞಾನವಿಲೋಪೋಽಸ್ತಿ ಸರ್ವಜ್ಞಸ್ಯ ಪರೇಶಿತುಃ ॥ (೫) ಬ್ರಹ್ಮಾಣಿ ಜೀವಾಸ್ಸರ್ವೇಽಪಿ ಪರಬ್ರಹ್ಮಾಣಿ ಮುಕ್ತಿಗಾಃ । ಪ್ರಕೃತಿಃ ಪರಮಂ ಬ್ರಹ್ಮ ಪರಮಂ ಮಹದಚ್ಯುತಃ ॥ (೬) ನೈವ ಮುಕ್ತಾ ನ ಪ್ರಕೃತಿಃ ಕ್ವಾಪಿ ತದ್ವಿಷ್ಣು(ಹಿ ಬ್ರಹ್ಮ)ವೈಭವಂ । ಪ್ರಾಪ್ನುವಂತ್ಯಪಿ ತಜ್ಜ್ಞಾನಾನ್ನಿಜಂ ಬ್ರಹ್ಮತ್ವಮಾಪ್ಯತೇ ॥ ೯ ॥**

ಅ ॥ (೧) ಸರ್ವೋತ್ತಮನಾದ ಶ್ರೀಹರಿಯು ಯಾವ ತನ್ನ ಮತ್ಸ್ಯ ಮೊದಲಾದ ಅವತಾರ ರೂಪವನ್ನು ತನ್ನಿಂದ ಬೇರೆಯೆಂದು ನೋಡುವುದಿಲ್ಲವೋ, ಆ ಮತ್ಸ್ಯಾದಿ ರೂಪವು ಮೂಲರೂಪಕ್ಕಿಂತ ಬೇರೆಯಲ್ಲ (೨) (**ತತೋಽನ್ಯದ್ವಿಭಕ್ತಂ ಯತ್ಪಶ್ಯೇತ್** ಎಂಬುದರ ಅರ್ಥ ಹೇಳುತ್ತಾರೆ) ತನ್ನ ಅವ

ತಾರವಲ್ಲದ ಪ್ರಕೃತಿ ಪುರುಷ (ಜೀವ) ಮೊದಲಾದುದನ್ನು ಸರ್ವದಾ ಶ್ರೀಹರಿಯು ಬೇರೆಯೆಂದೇ ತಿಳಿಯುವುದರಿಂದ ಅವು ಶ್ರೀಹರಿಯಿಂದ ಬೇರೆಯೇ ಆಗಿವೆ (೩) (**ಪಶ್ಯನ್ನೈತನ್ನ ಪಶ್ಯತಿ** ಎಂಬ ವಾಕ್ಯದ ಅರ್ಥ ಹೇಳುತ್ತಾರೆ) ಶ್ರೀಹರಿಯು ಚೇತನಾಚೇತನ ವಸ್ತುಗಳನ್ನು ಸರ್ವದಾ ನೋಡುತ್ತಲೇ ಇದ್ದರೂ ಅವುಗಳಿಗೆ ಅಭೇದವನ್ನು ನೋಡುವುದೇ ಇಲ್ಲ ಅಭೇದವೆಂದು ಸರ್ವಜ್ಞನಾದ ಶ್ರೀಹರಿಯು ಕಾಣದಿರುವುದರಿಂದ ಚೇತನ ಅಚೇತನರೂಪ ಜಗತ್ತಿಗೆ ಶ್ರೀಹರಿಯಿಂದ ಅಭೇದವಿಲ್ಲ (೪) (ಪ್ರಕೃತಿ ಮೊದಲಾದುದನ್ನು ಶ್ರೀಹರಿಯು ತನ್ನಿಂದ ಭಿನ್ನವೆಂದು ಕಾಣುವುದು ಶ್ರೀಹರಿಗೆ ಭ್ರಮೆಯೆಂದು ಏಕೆ ಆಗಲಾರದೆಂದರೆ— **ನಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ** ಎಂಬುದಕ್ಕೆ ಅರ್ಥ ಹೇಳುತ್ತಾರೆ) (ಅನಾದಿನಿತ್ಯನಾಗಿ ನಿರ್ದೋಷನಾದ ಪ್ರಯುಕ್ತ) ಸರ್ವಜ್ಞನೂ ಸರ್ವೋತ್ತಮನೂ ಆದ ಶ್ರೀಹರಿಯ ಜ್ಞಾನವು ವ್ಯತ್ಯಾಸವಾಗಲಾರದು (೫) (**ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ** ಎಂಬುದಕ್ಕೆ ಅರ್ಥ ಹೇಳುತ್ತಾರೆ) ಜೀವರೆಲ್ಲರೂ ಬ್ರಹ್ಮ ಎನ್ನಿಸುತ್ತಾರೆ ಮೋಕ್ಷದಲ್ಲಿದ್ದವರು ಪರಬ್ರಹ್ಮ ಎನ್ನಿಸುತ್ತಾರೆ ಪ್ರಕೃತಿಯು (ಲಕ್ಷ್ಮೀದೇವಿಯು) ಪರಬ್ರಹ್ಮ ಎನ್ನಿಸುತ್ತಾಳೆ ಶ್ರೀಹರಿಯು ಪರಮಮಹದ್ಬ್ರಹ್ಮ ಎನ್ನಿಸುತ್ತಾನೆ (೬) ಮುಕ್ತರೂ, ಲಕ್ಷ್ಮೀದೇವಿಯೂ ಶ್ರೀಹರಿಯ ಮಹತ್ವವನ್ನು ಯಾರೂ ಹೊಂದಲಾರರು ಶ್ರೀಹರಿಯ ಜ್ಞಾನದಿಂದ ತನ್ನ ಯೋಗ್ಯತಾನುಸಾರ ಗುಣಪೂರ್ಣನಾಗುತ್ತಾನೆ (ಅಂದರೆ ತಾನು ಪರಬ್ರಹ್ಮನನ್ನು ತಿಳಿದರೂ ತನ್ನ ಜೀವಭಾವವನ್ನು ಬಿಡದೆ ಯೋಗ್ಯತಾನುಸಾರ ಗುಣಪೂರ್ಣನೇ ಆಗುತ್ತಾನೆ ಪರಬ್ರಹ್ಮನಾಗುವುದಿಲ್ಲ) ॥ ೯ ॥

ಪೀ — ಪರಬ್ರಹ್ಮನ ಜ್ಞಾನದಿಂದ ಪರಬ್ರಹ್ಮತ್ವವೇ ಬರುತ್ತದೆಂಬ ಅರ್ಥವೇ ಏಕೆ ಆಗಲಾರದೆಂದರೆ-

**ತಾ ॥ (೧) ಯದ್ಯಸ್ಯ ಪರಮೇಶಿತ್ವಂ ತದಾ ಸ್ಯಾದ್ದುಃಖಿತಾ ಕುತಃ । ದುಃಖೀ ಚೇತ್ಕುತ ಈಶಿತ್ವಮನೀಶೋ ಹ್ಯೇವ ದುಃಖಭಾಕ್ ॥ (೨) ಕುತಃ ಸರ್ವವಿದೋಽಜ್ಞತ್ವಂ ಕ್ವ ಭ್ರಮೋಽಪ್ಯಜ್ಞತಾಂ ವಿನಾ । ತಸ್ಮಾನ್ನೈವೇಶ್ವರೋ ಜೀವಸ್ತತ್ಪ್ರಸಾದಾತ್ತು ಮುಚ್ಯತೇ ॥ (೩) ಅಹೇಯತ್ವಾದಹಂನಾಮಾ ಭಗವಾನ್ಸ್ಥಿರಿರವ್ಯಯಃ । ಬ್ರಹ್ಮಾಸೌ ಗುಣಪೂರ್ಣತ್ವಾದಸ್ಯಾಸಾವಸನಾನ್ನಿತೀಃ । ಅಸನಾದಸಿನಾಮಾಽಸೌ ತೇಜಸ್ತ್ವಾತ್ತ್ವ-ಮಿತೀರಿತಃ ॥ (೪) ಸರ್ವೈಃ ಕ್ರಿಯಾಪದೈಶ್ಚೈವ ಸರ್ವೈರ್ದ್ರವ್ಯಪದೈರಪಿ । ಸರ್ವೈರ್ಗುಣಪದೈಶ್ಚೈವ ವಾಚ್ಯ ಏಕೋ ಹರಿಃ ಸ್ವಯಂ ॥ (೫) ಯುಷ್ಮತ್ಪದೈಃ ಪ್ರಾತಿಯೋಗ್ಯಾತ್ತದ್ಯುಕ್ತೈಶ್ಚ ಕ್ರಿಯಾಪದೈಃ । ಅಸ್ಮತ್ಪದೈರಾಂತರತ್ವಾತ್ ಕ್ರಿಯಾರ್ಥೈಶ್ಚ ತದನ್ವಯೈಃ । ಪರೋಕ್ಷತ್ವಾತ್ತತ್ಪದೈಶ್ಚ ಮುಖ್ಯವಾಚ್ಯಃ ಸ ಏವ ತು ॥ ೧೦ ॥**

ಅ ॥ (೧) ಜೀವನಿಗೆ ಮೋಕ್ಷದಲ್ಲಿ ಪರಬ್ರಹ್ಮನಿಂದ ಐಕ್ಯವೆಂದು ಹೇಳುವುದಾದರೆ (ಸಂಸಾರದಲ್ಲಿಯೂ ಐಕ್ಯವು ಇರಬೇಕಾಗುವುದು, ಐಕ್ಯವಿಲ್ಲ ಮೊದಲು ಭಿನ್ನನಾದ ಜೀವನಿಗೆ ಆ ಮೇಲೆ ಅಭೇದವೆಂಬುದು ಕೂಡಲಾರದಷ್ಟೆ) ಐಕ್ಯವಿದ್ದರೆ ದುಃಖವುಳ್ಳವನು ಹೇಗೆ ಆದಾನು? ದುಃಖವುಳ್ಳವನಾದರೆ ಪರಬ್ರಹ್ಮನು ಹೇಗೆ ಆದಾನು ಈಶನಾಗದಿದ್ದವನೇ ದುಃಖವನ್ನು ಹೊಂದುತ್ತಾನೆ (೨) (ಜೀವನು ಪರಬ್ರಹ್ಮ ಸ್ವರೂಪನೇ ಆದಾಗ್ಯೂ ಅಜ್ಞಾನವಶದಿಂದ ದುಃಖವುಳ್ಳವನಾಗುತ್ತಾನೆ ಎಂದರೆ-) ಸರ್ವಜ್ಞನಿಗೆ ಅಜ್ಞಾನವು ಹೇಗೆ ಬಂದೀತು (ಸರ್ವಜ್ಞನಿಗೂ ಭ್ರಮೆಯಿಂದ ಅಜ್ಞಾನವೆಂದರೆ ಅಜ್ಞಾನವಿಲ್ಲದೆ ಭ್ರಮೆಯು ಹೇಗೆ ಬರುವುದು? ಆದಕಾರಣ ಜೀವನು ಈಶ್ವರನಾಗಲಾರನು ಜೀವನು ಶ್ರೀಹರಿಯ ಅನುಗ್ರಹದಿಂದಲೇ ಮೋಕ್ಷ

ವನ್ನು ಹೊಂದುತ್ತಾನೆ (೩) (ಅಹಂ ಬ್ರಹ್ಮಾಸ್ಮಿ ತತ್ತ್ವಮಸಿ ಎಂಬ ಎರಡುವೇದವಾಕ್ಯಗಳ ಅರ್ಥ ಹೇಳುತ್ತಾರೆ.) ಗುಣಪೂರ್ಣನೂ ನಾಶರಹಿತನೂ ಆದ ಶ್ರೀಹರಿಯು ಬಿಡಲರ್ಹನಾಗದಿರುವುದರಿಂದ ಅಹಂ ಎನಿಸುತ್ತಾನೆ. ಗುಣಪೂರ್ಣನಾದುದರಿಂದ ಬ್ರಹ್ಮನೆನಿಸುತ್ತಾನೆ ತನ್ನಲ್ಲಿ ಪರಿಮಾಣವಿಲ್ಲದಿರುವುದರಿಂದಲೂ, ಅಥವಾ ವಿರೋಧಿಗಳನ್ನು ನಿರಾಕರಿಸುವುದರಿಂದಲೂ ಜ್ಞಾನಸ್ವರೂಪನಾದುದರಿಂದಲೂ ಅಸ್ಮಿ ಎನಿಸುತ್ತಾನೆ. ದುಷ್ಟಸಂಹಾರಕನಾದುದರಿಂದ ಅಸಿ ಎನಿಸುತ್ತಾನೆ. ತೇಜಃಸ್ವರೂಪನಾದುದರಿಂದ ತ್ವಂ ಎನಿಸುತ್ತಾನೆ (೪) (ಶ್ರೀಹರಿಯು ಅಹಮಾದಿಶಬ್ದಗಳಿಂದ ಮಾತ್ರ ಹೇಳಲ್ಪಡುತ್ತಾನೆಂದಲ್ಲ. ಸರ್ವಶಬ್ದಗಳಿಂದಲೂ ಹೇಳಲ್ಪಡುತ್ತಾನೆನ್ನುತ್ತಾರೆ) ಎಲ್ಲಾ ಕ್ರಿಯಾಪದಗಳಿಂದಲೂ ಎಲ್ಲಾ ದ್ರವ್ಯವಾಚಕಪದಗಳಿಂದಲೂ ಎಲ್ಲಾ ಗುಣವಾಚಕಪದಗಳಿಂದಲೂ ಶ್ರೀಹರಿಯೊಬ್ಬನೇ ಹೇಳಲ್ಪಡುತ್ತಾನೆ (೫) (ಶ್ರೀಹರಿಯು ಎಲ್ಲಾ ಶಬ್ದಗಳಿಂದ ಹೇಳಲ್ಪಡುವವನಾದರೂ ರೂಪವಿಶೇಷ ನಿಯಮವಿದೆ ಎನ್ನುತ್ತಾರೆ) ಸರ್ವರಿಗೂ ಅಭಿಮುಖವಾಗಿರುವುದರಿಂದ ಯುಷ್ಮತ್ಪದಗಳಿಂದಲೂ, ಯುಷ್ಮಚ್ಛಬ್ದದಿಂದ ಕೂಡಿದ ಕ್ರಿಯಾಪದಗಳಿಂದಲೂ (ಅಂದರೆ ತ್ವಮಸಿ ನೀನು ಆಗಿರುತ್ತಿ ಇತ್ಯಾದಿ ಶಬ್ದಗಳಿಂದಲೂ)ಸರ್ವರ ಹೃದಯದೊಳಗೆ ಇರುವುದರಿಂದ ಅಸ್ಮತ್ಪದಗಳಿಂದಲೂ ಅಸ್ಮತ್ಪದದಿಂದ ಕೂಡಿದ ಕ್ರಿಯಾಪದಗಳಿಂದಲೂ (ಅಂದರೆ—ಅಹಮಸ್ಮಿ ನಾನು ಆಗಿರುತ್ತೇನೆ ಇತ್ಯಾದಿ ಶಬ್ದಗಳಿಂದಲೂ) ದೃಗ್ಗೋಚರನಾಗದಿರುವುದರಿಂದ ಸಃ ಅವನು ಇತ್ಯಾದಿ ಪದಗಳಿಂದಲೂ ಶ್ರೀಹರಿಯೇ ಮುಖ್ಯವಾಗಿ ಹೇಳಲ್ಪಡುತ್ತಾನೆ ॥ ೧೦ ॥

ಪೀ— ಪೂರ್ವೋತ್ತರ ವಾಕ್ಯಗಳ ವಿರೋಧವು ಬರುವುದರಿಂದ ತತ್ತ್ವಮಸಿ ಇತ್ಯಾದಿ ವಾಕ್ಯಗಳಿಗೆ ಐಕ್ಯರೂಪವಾದ ಅರ್ಥವು ಕೂಡುವುದಿಲ್ಲವಾದ ಕಾರಣ ವಾಕ್ಯಕ್ಕೇನೇ ಬೇರೆ ರೀತಿಯಾಗಿ ಅರ್ಥ ಹೇಳುತ್ತಾರೆ ಅದರಲ್ಲಿ ಸರ್ವಾನ್ ವೇದಾನಧೀತ್ಯ ಮಹಾಮನಾ ಅನೂಚಾನಮಾನೀ ಸ್ತಬ್ಧ ಏಯಾಯ ಎಂಬುದಕ್ಕೆ ಅರ್ಥ ಹೇಳುತ್ತಾರೆ –

**ತಾ ॥ (೧) ಸರ್ವಾನ್ವೇದಾನಧೀತ್ಯೈವ ಪ್ರಜ್ಞಾಧಿಕ್ಯೇನ ಹೇತುನಾ । ಶ್ವೇತಕೇತುರಹಂಕಾರಾತ್ಪ್ರಾಯಶೋ ನಾಸ್ಮಿ ಮಾನುಷಃ ॥ (೨) ದೇವೋ ವಾ ಕೇಶವಾಂಶೋ ವಾ ನೈಷಾ ಪ್ರಜ್ಞಾಽನ್ಯಥಾ ಭವೇತ್ । ಏವಂ ಮಹತ್ತ್ವಬುದ್ಧ್ಯೈವ ದರ್ಪಪೂರ್ಣೋಽಭ್ಯಗಾತ್ ಪಿತುಃ । ಸಕಾಶಂ ॥ (೩) ಅಕೃತಾಚಾರಂ ತಂ ದೃಷ್ಟ್ವಾ ಸ್ತಬ್ಧಮಜ್ಞವತ್ । ಪಿತೋವಾಚ ಕುತಃ ಪುತ್ರ ಸ್ತಬ್ಧತಾ ತ್ವಾಮುಪಾಗತಾ । ಪ್ರಾಯೋ ನಾರಾಯಣಂ ದೇವಂ ನೈವ ತ್ವಂ ಪೃಷ್ಟವಾನಸಿ ॥ (೪) ಯಸ್ಮಿನ್ ಜ್ಞಾತೇ ತ್ವವಿಜ್ಞಾತಜ್ಞಾನಾದೀನಾಂ ಫಲಂ ಭವೇತ್ । ಪ್ರಾಧಾನ್ಯಾತ್ಸದೃಶತ್ವಾಚ್ಚ ತದಧೀನಮಿತಿ ಸ್ಫುಟಂ । ತತ್ಸ್ಪೃಷ್ಟಂ ಚೇತಿ ವಿಜ್ಞಾತಂ ಫಲವದ್ಧಿ ಭವೇಜ್ಜಗತ್ ॥ ೧೧ ॥**

ಅ ॥ (೧) ಶ್ವೇತಕೇತುವು ಎಲ್ಲಾ ವೇದಗಳನ್ನು ಕಲಿತು ಮಹಾಪ್ರಾಜ್ಞನೆಂದು ತಿಳಿದುಕೊಂಡು ದುರಹಂಕಾರದಿಂದ ಪ್ರಾಯಶಃ ನಾನು ಮನುಷ್ಯನಲ್ಲ. (೨) ಸಾಕ್ಷಾದ್ದೇವನೇ ನಾನು ಅಥವಾ ಶ್ರೀಹರಿಯ ಅಂಶಭೂತನು ಇಲ್ಲದಿದ್ದರೆ ಇಂತಹ ಬುದ್ಧಿಯು ಬರುತ್ತಿರಲಿಲ್ಲ ಹೀಗೆ ತಾನು ಮಹಾಪ್ರಾಜ್ಞನು ಸರ್ವರಿಗಿಂತ ಶ್ರೇಷ್ಠನೆಂಬ ಬುದ್ಧಿಯಿಂದಲೇ ದುರಹಂಕಾರಪೂರ್ಣನಾಗಿ ತಂದೆಯ ಬಳಿಗೆ ಹೋದನು (೩) ತಂ ಹ ಪಿತೋವಾಚ ಶ್ವೇತಕೇತೋ ಯನ್ನು ಖಲು ಸೋಮ್ಯೈವಂ ಮಹಾಮನಾ ಅನೂಚಾನಮಾನೀ ಸ್ತಬ್ಧೋಽಸ್ಯುತ ತಮಾದೇಶಮಪ್ರಾಕ್ಷ್ಯೋಯೇನಾಶ್ರುತಂ ಶ್ರುತಂ ಭವತ್ಯ-

**ಮತಂ ಮತಮವಿಜ್ಞಾತಂ ವಿಜ್ಞಾತಂ ಭವತಿ** ಎಂಬುದಕ್ಕೆ ಅರ್ಥ ಹೇಳುತ್ತಾರೆ) ಗುರುನಮಸ್ಕಾರ ಮೊದಲಾದ ಸದಾಚಾರಗಳಿಲ್ಲದ, ಸರ್ವಥಾ ಧರ್ಮಶಾಸ್ತ್ರಗಳನ್ನು ತಿಳಿಯದ ಪುರುಷನಂತೆ ಅಹಂಕಾರಿಯಾದ ಮಗನನ್ನು ನೋಡಿ ತಂದೆಯು ಎಲೋ ಮಗನೇ ನೀನು ಶ್ರೀನಾರಾಯಣದೇವರ ತತ್ವವನ್ನು ತಿಳಿದಿದ್ದರೆ ಇಂತಹ ದುರಹಂಕಾರವು ನಿನಗೆ ಬರುತ್ತಿರಲಿಲ್ಲ ಸ್ತಬ್ಧತ್ವವು ಬಂದಿರುತ್ತದೆ ಆದಕಾರಣ ನೀನು ಭಗವತ್ತತ್ವವನ್ನು ಕೇಳಿ ತಿಳಿಯಲಿಲ್ಲ (೪) ಯಾವ ಶ್ರೀಹರಿಯನ್ನು ಕೇಳಿ ತಿಳಿದು ಧ್ಯಾನಿಸಿದ್ದರೆ ತಿಳಿಯಲ್ಪಡದೆಯೂ ಕೇಳಲ್ಪಡದೆಯೂ ಮನನಮಾಡಲ್ಪಡದೆಯೂ ಇದ್ದ ವಸ್ತುಗಳ ಜ್ಞಾನ ಶ್ರವಣ ಮನನಗಳಿಗೆ ಯಾವುದು ಫಲವಿದೆಯೋ, ಅಂತಹ ಫಲವು ಆಯಾಯ ವಸ್ತುಗಳ ಜ್ಞಾನಾದಿಗಳಿಲ್ಲದಿದ್ದರೂ ಶ್ರೀಹರಿಯ ಜ್ಞಾನಾದಿಗಳಿಂದಲೇ ಆಗುತ್ತದೆ (ಅಂದರೆ—ಶ್ರೀಹರಿಯನ್ನು ತಿಳಿದರೆ—ಬೇರೆ ವಸ್ತುಗಳನ್ನು ತಿಳಿಯದಿದ್ದರೂ ತಿಳಿದ ಫಲವು ಬರುವುದು ) ಶ್ರೀಹರಿಯು ಸರ್ವರಿಗಿಂತಲೂ ಪ್ರಧಾನ (ಶ್ರೇಷ್ಠ) ನಾದುದರಿಂದಲೂ ಜಗತ್ತು ಜ್ಞಾನಾದಿಗಳಿಂದ ಶ್ರೀಹರಿಗೆ ಸದೃಶವಾಗಿರುವುದರಿಂದಲೂ ನಿಶ್ಚಯವಾಗಿ ಶ್ರೀಹರಿಯ ಅಧೀನವಾದುದು ಮತ್ತು ಜಗತ್ತು ಶ್ರೀಹರಿಯಿಂದ ಸೃಷ್ಟಿಸಲ್ಪಟ್ಟದ್ದೆಂದು ತಿಳಿದು ಸರ್ವನಿಯಾಮಕನಾದ ಶ್ರೀಹರಿಯನ್ನು ತಿಳಿದರೆ ಬೇರೆ ವಸ್ತುಗಳನ್ನು ತಿಳಿಯದಿದ್ದರೂ ತಿಳಿದಂತೆಯೇ ಆಗುತ್ತದೆ

ವಿ ॥ ಜಗತ್ತಿನ ಜ್ಞಾನಾದಿಗಳು ಬಂದರೂ ಶ್ರೀಹರಿಯ ಜ್ಞಾನಾದಿಗಳು ಹುಟ್ಟಿದರೇನೇ ಸಫಲವಾಗುತ್ತದೆಂಬುದು ಹೇಗೆಂದರೆ—ಶ್ರೀಹರಿಯು ಜಗತ್ತನ್ನು ತನ್ನ ಅಧೀನದಲ್ಲಿಟ್ಟುಕೊಂಡು ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಪ್ರಪಂಚ ಶ್ರೀಹರಿಯ ಜ್ಞಾನಾದಿಗಳು ಬಂದರೆ ಜಗತ್ತು ಶ್ರೀಹರಿಯ ಅಧೀನವೆಂಬ ಜ್ಞಾನಾದಿಗಳು ದೃಢವಾಗುತ್ತವೆ ಆದರಿಂದ ಮೋಕ್ಷ ಮೊದಲಾದ ಫಲವು ಲಭಿಸುವುದು ॥ ೧೧ ॥

**ತಾ ॥ (೧) ಸ್ವಾತಂತ್ರ್ಯೇಽಸ್ಯ ವಿಜ್ಞಾನಂ ಮಿಥ್ಯಾಜ್ಞಾನಮನರ್ಥಕೃತ್ ॥ (೨) ಯಥಾ ಚೈವೈಕಮೃತ್ಪಿಂಡಜ್ಞಾನಾದೇಃ ಸದೃಶತ್ವತಃ । ಮೃಣ್ಮಯಂ ತದಕಾರ್ಯಂ ಚ ಜ್ಞಾತಂ ಮೃದಿತಿ ವೈ ಭವೇತ್ ॥ (೩) ಯಥೈವ ಮೃತ್ತಿಕೇತ್ಯಾದಿನಿತ್ಯಸಾಮಪ್ರವೇದನಾತ್ । ವಾಚಾರಬ್ಧಮನಿತ್ಯಂ ತು ಜ್ಞಾತಂ ತನ್ಮೂಲಮಿತ್ಯಪಿ ॥ (೪) ಏವಂ ಕಾರಣಭೂತೋಽಸೌ ಭಗವಾನ್ಪುರುಷೋತ್ತಮಃ । ಪ್ರಧಾನಶ್ಚ ಸ್ವತಂತ್ರಶ್ಚ ತನ್ಮೂಲಮಖಿಲಂ ಜಗತ್ । ತದಾಧಾರಂ ವಿಮುಕ್ತೌ ಚ ತದಧೀನಂ ಸದಾ ಸ್ಥಿತಂ ॥ (೫) ಸ ಸೂಕ್ಷ್ಮೋ ವ್ಯಾಪಕಃ ಪೂರ್ಣಸ್ತದೀಯಮಖಿಲಂ ಜಗತ್ । ತಸ್ಮಾತ್ತದೀಯಸ್ತ್ವಮಸಿ ಪಿ) ನೈವ ಸೋಽಸಿ ಕಥಂಚನ** ॥ ೧೨ ॥

ಅ ॥ (೧) ಶ್ರೀಹರಿಯು ಸರ್ವೋತ್ತಮನು ಇತ್ಯಾದಿಪ್ರಕಾರ ತಿಳಿದುಕೊಳ್ಳದೆ ಬ್ರಹ್ಮ ರುದ್ರ ಮೊದಲಾದ ಜಗತ್ತು ಸ್ವತಂತ್ರವಾದುದು, ಪರಾಧೀನವಲ್ಲ ಎಂದು ತಿಳಿಯುವದು ಮಿಥ್ಯಾಜ್ಞಾನವಾದ ಕಾರಣ ಅಂಧಂತಮಸ್ಸು ಮೊದಲಾದ ಅನರ್ಥವನ್ನು ಕೊಡುತ್ತದೆ. (೨) (ಬ್ರಹ್ಮಾದಿಗಳನ್ನು ತಿಳಿಯೋಣದರಿಂದ ಆಗತಕ್ಕ ಫಲವು ಶ್ರೀಹರಿಯೊಬ್ಬನನ್ನು ತಿಳಿಯೋಣದರಿಂದಲೇ ಆಗುತ್ತದೆ ಎಂಬಲ್ಲಿ * **ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್** ಎಂಬ ದೃಷ್ಟಾಂತದ ಅಭಿಪ್ರಾಯ ಹೇಳುತ್ತಾರೆ—) ಒಂದು ಮಣ್ಣಿನ ಹೆಂಟೆಯಿಂದ ಮಾಡಿದ ಮಡಿಕೆ ಮೊದಲಾದುದನ್ನು ಅದಲ್ಲದೆ ಮತ್ತೊಂದು ಮಣ್ಣಿನ ಹೆಂಟೆಯಿಂದ ಮಾಡಿದ ವಸ್ತುವನ್ನು ಒಂದು ಮೃತ್ಪಿಂಡ ಜ್ಞಾನಾದಿಗಳ ಸಾದೃಶ್ಯ

* ಓಲ್ಯುಮ್ VI ಛಾಂದೋಗ್ಯೋಪನಿಷತ್ತು ಪು ೨೬೫ ೨೯೬ ಪರ್ಯಂತ ಇವುಗಳ ಅರ್ಥವನ್ನು ವಿವರಿಸಿದೆ

ವಿದ್ದುದರಿಂದ (ಯಾರ ಉಪದೇಶವಿಲ್ಲದೇನೇ) ಮಣ್ಣಿನ ಜಾತೀಯವೆಂದು ಹೇಗೆ ತಿಳಿಯಲ್ಪಡುತ್ತದೋ (ಹೀಗೆಯೇ ಶ್ರೀಹರಿಯು ಬ್ರಹ್ಮಾದಿಗಳಿಗಿಂತ ಶ್ರೇಷ್ಠನಾಗಿರುವುದರಿಂದ ಆತನನ್ನು ತಿಳಿದರೆ ಇತರರನ್ನು ತಿಳಿಯದಿದ್ದರೂ ತಿಳಿದ ಫಲವು ಬರುತ್ತದೆ) (೩) (**ವಾಚಾರಂಭಣಂ ವಿಕಾರೋ ನಾಮಧೇಯಂ** ಎಂಬ ದೃಷ್ಟಾಂತದ ಅರ್ಥಹೇಳುತ್ತಾರೆ—) ಸಂಸ್ಕೃತವಲ್ಲದ, ಮಣ್ಣು ಮೊದಲಾದ ಲೌಕಿಕಭಾಷಾಶಬ್ದಗಳ ಉಚ್ಚಾರಣವು ವಾಗಿಂದ್ರಿಯದಿಂದ ಹುಟ್ಟಿದ್ದು, ವಿಕಾರವುಳ್ಳದ್ದು, ಅನಿತ್ಯವು, ಅಪ್ರಧಾನವು ಮೃತ್ತಿಕಾ ಮೊದಲಾದ ಸಂಸ್ಕೃತನಾಮವು ನಿತ್ಯವು ಪ್ರಧಾನವು. ಇದನ್ನು ತಿಳಿಯೋಣದರಿಂದ ಸಾಂಕೇತಿಕ ಶಬ್ದಗಳ ಜ್ಞಾನಾದಿಗಳು ಬಾರದಿದ್ದರೂ ವಿದ್ವಾಂಸನು, ಪಂಡಿತನು, ಇದುಮೊದಲಾದ ನಾಮಗಳಿಂದ ಕರೆಯಲ್ಪಡುವನು ಸಂಸ್ಕೃತನಾಮವೇ ಮೂಲ (ಪ್ರಧಾನ)ವಾಗಿರುವುದರಿಂದ ಸಂಸ್ಕೃತನಾಮಜ್ಞಾನವಿದ್ದರೇನೇ ಸಾಂಕೇತಿಕ ನಾಮಗಳ ಜ್ಞಾನವು ಹುಟ್ಟಿದರೂ ಸಫಲವಾಗುವುದು ಸಾಂಕೇತಿಕನಾಮಜ್ಞಾನದಿಂದ ಮಾತ್ರ ವಿದ್ವಾನ್ ಎಂದು ಹೇಳಿಸಿಕೊಳ್ಳಲಾರನು (ಹೀಗೆಯೇ ಕರ್ಮದೇವತಾದಿಗಳ ಜ್ಞಾನದಿಂದ ಆಗತಕ್ಕ ಫಲವೆಲ್ಲವೂ ಶ್ರೀಹರಿಯ ಜ್ಞಾನದಿಂದಲೇ ಆಗುತ್ತದೆ) (೪) (**ಏವಂ ಸೌಮ್ಯ ಸ ಆದೇಶೋ ಭವತಿ** ಎಂಬ ದಾರ್ಷ್ಟಾಂತಿಕ ವಾಕ್ಯದ ಅರ್ಥ ಹೇಳುತ್ತಾರೆ) ಹೀಗೆ ಸರ್ವ ಜಗತ್ತಿಗೂ ಕಾರಣಭೂತನಾದ ಶ್ರೀಹರಿಯು ಸರ್ವರಿಗಿಂತಲೂ ಪ್ರಧಾನನು, ಸರ್ವಸ್ವತಂತ್ರನು, ಸಮಸ್ತ ಜಗತ್ತು ಆವನಿಂದಲೇ ಹುಟ್ಟಿದ್ದು ಮೋಕ್ಷದಲ್ಲಿಯೂ ಎಲ್ಲರಿಗೂ ಅವನೇ ಆಶ್ರಯನು ಎಲ್ಲರೂ ಆತನ ಅಧೀನರಾಗಿಯೇ ಸದಾ ಇರುತ್ತಾರೆ (ಆದಕಾರಣ ಶ್ರೀಹರಿಯ ಜ್ಞಾನವಿದ್ದರೇನೇ ಎಲ್ಲಾ ವಸ್ತುಗಳನ್ನೂ ತಿಳಿದಂತೆ ಆಗುತ್ತದೆ ಅಂದರೆ ಇತರ ವಸ್ತುಗಳ ಜ್ಞಾನಾದಿಗಳು ಸಫಲಗಳಾಗುತ್ತವೆ) (**ಸದೇವ ಸೋಮ್ಯ** ಇತ್ಯಾದಿಗಳಿಂದ ಶ್ರೀಹರಿಯು ಸರ್ವಸ್ವತಂತ್ರನು, ಜಗತ್ತಿಗೆ ಕಾರಣನೆಂದು ಹೇಳಿದೆ **ಸನ್ಮೂಲಾಃ ಸೋಮ್ಯ** ಇತ್ಯಾದಿಗಳಿಂದ ಅಭೇದಬುದ್ಧಿಯನ್ನು ಮಾಡಕೂಡದೆಂಬ ಅಭಿಪ್ರಾಯದಿಂದ ಶ್ರೀಹರಿಯ ಮಾಹಾತ್ಮ್ಯೆಯನ್ನು ಹೇಳಿದೆ) (೫) (**ಸ ಏಷೋಽಣಿಮೈತದಾತ್ಮ್ಯಮಿದಂ** ಎಂಬುದರ ಅರ್ಥ ಹೇಳುತ್ತಾರೆ—) ಶ್ರೀಹರಿಯು ಸರ್ವವಸ್ತುಗಳಿಗಿಂತ ಸೂಕ್ಷ್ಮನು ಸರ್ವತ್ರ ವ್ಯಾಪಿಸಿಕೊಂಡಿರುವವನು ಸರ್ವಗುಣಪೂರ್ಣನು ಬ್ರಹ್ಮ ಮೊದಲಾದ ಎಲ್ಲಾ ಜಗತ್ತಿಗೆ ಶ್ರೀಹರಿಯೇ ಸ್ವಾಮಿಯು ಆದಕಾರಣ (ಎಲೋ ಶ್ವೇತಕೇತುವೇ) ನೀನು ಶ್ರೀಹರಿಯ ಭೃತ್ಯನಾಗಿರುತ್ತಿ ಹೇಗೂ ಶ್ರೀಹರಿಯು ನೀನಾಗಲಾರೆ ಅಂದರೆ ಅವನೇ ನೀನು ಎಂಬ ವಾಕ್ಯಾರ್ಥವು ಯಾವ ರೀತಿಯಿಂದಲೂ ಎಂದಿಗೂ ಹೇಗೂ ಕೂಡುವುದಿಲ್ಲ ॥ ೧೨ ॥

ಪೀ—ಜೀವೇಶ್ವರರಿಗೆ ಭೇದವಿದೆ ಎಂಬಲ್ಲಿ * **ಯಥಾ ಶಕುನಿಃ** ಇತ್ಯಾದಿಗಳಿಂದ ಹೇಳಲ್ಪಟ್ಟ ಒಂಭತ್ತು ದೃಷ್ಟಾಂತವಾಕ್ಯಗಳ ಅರ್ಥ ಹೇಳುತ್ತಾರೆ—

**ತಾ ॥ (೧) ಯಥಾ ಪಕ್ಷೀ ಚ ಸೂತ್ರಂ ಚ ನಾನಾವೃಕ್ಷರಸಾ ಅಪಿ । ಯಥಾ ನದ್ಯಃ ಸಮುದ್ರಶ್ಚ ಯಥಾ ವೃಕ್ಷಪರಾವಪಿ । ಯಥಾ ಧಾನಾಃ ಪರಶ್ಚೈವ ಯಥೈವ ಲವಣೋದಕೇ । ಯಥಾ ಪುರುಷದೇಶೌ ಚ ಯಥಾಽಜ್ಞಜ್ಞಾನದಾವಪಿ । ಯಥಾ ಸ್ತೇನಾಪಹಾರ್ಯೌ ಚ ತಥಾ ತ್ವಂ ಚ ಪರಸ್ತಥಾ । ಭಿನ್ನೌ ಸ್ವಭಾವತೋ ನಿತ್ಯಂ ನಾನಯೋರೇಕತಾ ಕ್ವಚಿತ್ ॥ (೨) ಏವಂ ಭೇದೋಽಖಿಲಸ್ಯಾಪಿ ಸ್ವತಂತ್ರಾತ್ಪರಮೇಶ್ವರಾತ್ । ಪರತಂತ್ರಂ ಸ್ವತಂತ್ರೇಣ ಕಥಮೈಕ್ಯಮವಾಪ್ನುಯಾತ್ ॥ (೩) ಸ ಜೀವನಾಮಾ ಭಗವಾನ್ ಪ್ರಾಣಧಾರಣಹೇತುತಃ । ಉಪಚಾರೇಣ ಜೀವಾಖ್ಯಾ ಸಂಸಾರಿಣಿ ನಿಗದ್ಯತೇ ॥ (೪) ತದಧೀನಮಿದಂ ಸರ್ವಂ ನಾನ್ಯಾಧೀನಃ ಸ ಈಶ್ವರಃ ॥ ೧೩ ॥**

---

* ಓಲ್ಯುಮ್ VI ಛಾಂದೋಗ್ಯೋಪನಿಷತ್ತು ಪು ೩೧೦ ೩೩ನೇ ವರೇಗೆ ೯ ದೃಷ್ಟಾಂತಗಳ ಅರ್ಥವನ್ನು ವಿವರಿಸಿದೆ

ಅ || (೧) (1) ಬೇಡನು ಹಗ್ಗದಿಂದ ಹಕ್ಕಿಯನ್ನು ಕಟ್ಟಿದಾಗ ಹಗ್ಗಕ್ಕೂ ಹಕ್ಕಿಗೂ ಹೇಗೆ ಭೇದ ವಿದೆಯೋ (2) ತುಂಬಿಗಳು ಪರಸ್ಪರ ವಿಲಕ್ಷಣಗಳಾದ ವೃಕ್ಷಗಳ ಪುಷ್ಪರಸಗಳನ್ನು ಮಿಶ್ರೀಕರಿಸಿ ಜೇನು ತುಪ್ಪವನ್ನು ಮಾಡುತ್ತವೆ ಪುಷ್ಪರಸಗಳು ಒಟ್ಟು ಮಿಶ್ರಗಳಾಗಿ ನಾನು ಈ ಮರದ ರಸ, ನಾನು ಈ ಮರದ ರಸ ಎಂದು ತಿಳಿಯದಿದ್ದರೂ ಅವುಗಳಿಗೆ ಹೇಗೆ ಭೇದವಿದೆಯೋ. (3) ಗಂಗಾ ಯಮುನಾ ಮೊದಲಾದ ನದಿಗಳು ಸಮುದ್ರದೊಳಗೆ ಸೇರಿದಾಗ ನದ್ಯಭಿಮಾನಿ ದೇವತೆಗಳು ಸಮುದ್ರದಲ್ಲಿ ಗಂಗೆಯು ನಾನಾಗಿರುತ್ತೇನೆ, ಇದು ಯಮುನಾ ನದಿಯು, ಇದು ಸಮುದ್ರವು, ಹೀಗೆ ತಿಳಿಯದಿದ್ದರೂ ನದಿಗಳಿಗೂ ಸಮುದ್ರಕ್ಕೂ ಹೇಗೆ ಭೇದವಿದೆಯೋ (4) ವೃಕ್ಷಕ್ಕೆ ಬುಡ, ಮಧ್ಯ ಅಥವಾ ತುದಿ, ಇವುಗಳಲ್ಲಿ ಕೊಡಲಿಮೊದ ಲಾದವುಗಳಿಂದ ಹೊಡೆದರೂ ವೃಕ್ಷವು ಜೀವನೆನಿಸಿದ ಅನಿರುದ್ಧರೂಪಿ ಶ್ರೀಹರಿಯಿಂದ ಕೂಡಿದ್ದರೆ ರಸ ವನ್ನೇ ಕಾರುತ್ತದೆ ಒಣಗುವುದಿಲ್ಲ ವೃಕ್ಷಜೀವನು ಅನಿರುದ್ಧನಿಂದ ದೇಹ ಹೊಂದಿ ನೀರನ್ನೂ ಭೂಮಿ ಯಲ್ಲಿದ್ದ ರಸಗಳನ್ನೂ ಬುಡದಿಂದ ಮೇಲಕ್ಕೆ ಸೆಳೆದುಕೊಂಡು ಸಂತೋಷಗೊಳ್ಳುತ್ತಿರುತ್ತಾನೆ ಇಲ್ಲಿ ವೃಕ್ಷಕ್ಕೂ ಜೀವನೆನಿಸಿದ ಶ್ರೀ ಅನಿರುದ್ಧನಿಗೂ ಹೇಗೆ ಭೇದವಿದೆಯೋ, (5) ಗೋಳೀಮರದ ಹಣ್ಣಿನಲ್ಲಿದ್ದ ಸೂಕ್ಷ್ಮಗಳಾದ ಬೀಜಗಳಿಗೂ (ಬೀಜದೊಳಗಣ ಬೀಜಜೀವನಿಗೂ) ಬೀಜದೊಳಗಣ ಪರಮಾತ್ಮನಿಗೂ ಹೇಗೆ ಭೇದವಿದೆಯೋ. (6) ಉಪ್ಪಿನ ಹೆಂಟೆಯನ್ನು ಮಡಿಕೆಯಲ್ಲಿದ್ದ ನೀರಿನಲ್ಲಿ ಹಾಕಿ ಕರಗಿಸಿ ಅದರ ಮಧ್ಯದಲ್ಲಿ ಕೈಯನ್ನು ಹರಡಿಸಿದಾಗ ಉಪ್ಪಿನಹೆಂಟೆಯನ್ನು ತಿಳಿಯದಿದ್ದರೂ ಉಪ್ಪಿನಹೆಂಟೆಗೂ ನೀರಿಗೂ ಹೇಗೆ ಭೇದವಿದೆಯೋ, (7) ಗಾಂಧಾರ ಎಂಬ ದೇಶದಿಂದ ಕಣ್ಣುಕಟ್ಟಿ ಘೋರಾರಣ್ಯದಲ್ಲಿ ಬಿಡಲ್ಪಟ್ಟ ಪುರುಷನಿಗೂ ಆ ದೇಶಕ್ಕೂ ಹೇಗೆ ಭೇದವಿದೆಯೋ (8) ಅಜ್ಞಾನಿಗೂ ಪ್ರಾಣಾದಿಗಳಿಗೆ ನಿಯಾಮಕನಾದ ಪರಮಾತ್ಮನಿಗೂ ಹೇಗೆ ಭೇದವಿದೆಯೋ (9) ದ್ರವ್ಯವನ್ನು ಅಪಹಾರಮಾಡತಕ್ಕ ಕಳ್ಳನಿಗೂ ಕದಿಯುವ ವಸ್ತುವಿಗೂ ಹೇಗೆ ಬೇದವಿದೆಯೋ ಹಾಗೆಯೇ ನೀನೂ ಶ್ರೀಹರಿಯೂ ಸ್ವಭಾವತಃ ಭೇದವುಳ್ಳವರೇ ಆಗಿರುವಿರಿ ನಿಮ್ಮಿಬ್ಬರಿಗೆ ನಿಶ್ಚಯವಾಗಿಯೂ ಐಕ್ಯವು ಎಂದಿಗೂ ಬರಲಾರದು (೨) ಹೀಗೆಯೇ ಸರ್ವಸ್ವತಂತ್ರನಾದ ಶ್ರೀಹರಿಯಿಂದ ಸರ್ವಜಗತ್ತಿಗೂ ಭೇದವೇ ಪರಾಧೀನವಾದ ಜಗತ್ತು ಸ್ವತಂತ್ರನಾದ ಶ್ರೀಹರಿಯಿಂದ ಐಕ್ಯವನ್ನು ಹೇಗೆ ಹೊಂದೀತು (೩) ಶ್ರೀಹರಿಯು ಎಲ್ಲರ ಪ್ರಾಣಧಾರಣೆಗೆ ಕಾರಣ ನಾದುದರಿಂದ ಜೀವನೆನಿಸುತ್ತಾನೆ ಸಂಸಾರಿ ಜೀವರಲ್ಲಿ ಅಮುಖ್ಯವಾಗಿ ಜೀವ ಎಂಬ ಹೆಸರು. (೪) ಈ ಸಂಪೂರ್ಣ ಜಗತ್ತು ಶ್ರೀಹರಿಯ ಅಧೀನವಾದುದು, ಶ್ರೀಹರಿಯು ಮತ್ತೊಬ್ಬನ ಅಧೀನನಲ್ಲ ||೧೩||

ತಾ || (೧) ಜೀವೇಶ್ವರಭಿದಾ ಚೈವ ಜಡೇಶ್ವರಭಿದಾ ತಥಾ । ಜೀವಭೇದೋ ಮಿಥಶ್ಚೈವ ಜಡಜೀವಭಿದಾ ತಥಾ । ಜಡಭೇದೋ ಮಿಥಶ್ಚೇತಿ ಪ್ರಪಂಚೋ ಭೇದಪಂಚಕಃ || (೨) ಸ ನಿತ್ಯ ಏವ ನೋತ್ಪಾದ್ಯ ಉತ್ಪಾದ್ಯಶ್ಚೇನ್ನಶೇದಪಿ । ತಸ್ಮಾದನಾದಿಮಾನೇವ ಪ್ರಪಂಚೋ(ಕೃಷ್ಣೋ) ಭೇದಪಂಚಕಃ || (೩) ವಿಷ್ಣೋಃ ಪ್ರಜ್ಞಾಮಿತಂ ಯಸ್ಮಾ-ದ್ದ್ವೈತಂ ನ ಭ್ರಾಂತಿಕಲ್ಪಿತಂ । ಅದ್ವೈತಃ ಪರಮಾರ್ಥೋಽಸೌ ಭಗವಾನ್ವಿಷ್ಣುರ-ವ್ಯಯಃ || (೪) ಪರಮತ್ವಂ ಸ್ವತಂತ್ರತ್ವಂ ಸರ್ವಶಕ್ತಿತ್ವಮೇವ ಚ । ಸರ್ವಜ್ಞತ್ವಂ ಪರಾನಂದಃ ಸರ್ವಸ್ಯ ತದಧೀನತಾ । ಇತ್ಯಾದಯೋ ಗುಣಾ ವಿಷ್ಣೋರ್ನೈವಾನ್ಯಸ್ಯ ಕಥಂಚನ (ಕುತಶ್ಚನ) । ಅಭಾವಃ ಪರಮದ್ವೈತೇ ಸಂತ್ಯೇವ ಹ್ಯಪರಾಣಿ ತು ||೧೪||

ಅ || (೧) ಜೀವೇಶ್ವರರಿಗೆ ಭೇದವು ಜಡೇಶ್ವರರಿಗೆ ಭೇದವು, ಜೀವರೊಳಗೆ ಪರಸ್ಪರ ಭೇದವು, ಜಡಜೀವರಿಗೆ ಭೇದವು, ಜಡಗಳೊಳಗೆ ಪರಸ್ಪರ ಭೇದವು, ಹೀಗೆ ಐದು ವಿಧ ಭೇದವು ಪ್ರಪಂಚವೆನಿಸು

ತ್ತದೆ. (೨) ಅದು ನಿತ್ಯವೇ ಹುಟ್ಟತಕ್ಕದ್ದಲ್ಲ ಹುಟ್ಟುವುದಾದರೆ ನಾಶಹೊಂದೀತು ಅದುಕಾರಣ ಈ ಪ್ರಕೃಷ್ಟವಾದ ಐದುವಿಧ ಭೇದವು ಅನಾದಿಯಾದುದೇ (೩) ಶ್ರೀಹರಿಯ ಜ್ಞಾನದಿಂದ ತಿಳಿಯಲ್ಪಟ್ಟದ್ದೂ ನಿರ್ಮಿಸಲ್ಪಟ್ಟದ್ದೂ ಆದುದರಿಂದ ದ್ವೈತಂ=ಭೇದವು ಭ್ರಾಂತಿಯಿಂದ ಕಲ್ಪಿತವಲ್ಲ (ಭೇದವು ಸತ್ಯವೆಂದಾದರೆ – **ಪ್ರಪಂಚೋಪಶಮಂ ಶಿವಮದ್ವೈತಂ** ಇತ್ಯಾದಿಗಳಲ್ಲಿ ಅದ್ವೈತವು ಹೇಳಲ್ಪಡುವುದು ಹೇಗೆ? ಎಂದರೆ) ಅದ್ವೈತವಾಕ್ಯವು ಸರ್ವೋತ್ತಮನೂ ಸರ್ವಸ್ವತಂತ್ರನೂ ಗುಣಪೂರ್ಣನೂ ವ್ಯಾಪ್ತನೂ ನಾಶವಿಲ್ಲದವನೂ ಆದ ಶ್ರೀಹರಿಯು ಅದ್ವೈತನು ಎನಿಸುತ್ತಾನೆ, ಎಂದು ಹೇಳಲ್ಪಟ್ಟದೆ (೪) (**ಅದ್ವೈತಂ ಪರಮಾರ್ಥತಃ** ಎಂಬಲ್ಲಿದ್ದ ಪರಮತ್ವವೆಂದರೆ ಸರ್ವಸ್ವಾತಂತ್ರ್ಯವು, ಸರ್ವಶಕ್ತಿಯು, ಸರ್ವಜ್ಞತ್ವವು ಪೂರ್ಣಾನಂದವು, ಸರ್ವವಸ್ತುಗಳಿಗೆ ಶ್ರೀಹರಿಯ ಅಧೀನತ್ವವು, ಇದುಮೊದಲಾದ ಗುಣಗಳು ವಿಷ್ಣುವಿಗೇನೇ ಇತರರಿಗೆ ಹೇಗೂ ಇರಲಾರದು ಸರ್ವೋತ್ತಮವಾದ ಎರಡನೇ ವಸ್ತುವಿಲ್ಲದಿರುವುದೇ ಅದ್ವೈತಶ್ರುತಿಯ ಅರ್ಥವು (ಸರ್ವರಿಗೂ ಐಕ್ಯವು ಎಂಬ ಅರ್ಥವೇ ಏಕೆ ಆಗಲಾರದೆಂದರೆ) ಬೇರೆ ವಸ್ತುಗಳು ಅನೇಕಗಳು ಇವೆ (ಆದಕಾರಣ ಅಭೇದವೆಂಬುದು ಸರ್ವಥಾ ಕೂಡಲಾರದು) ॥ ೧೪ ॥

ಪೀ—ಯಾವುದೊಂದು ವಿಧ ಬಾಧಕವೂ ಇಲ್ಲದಿರುವುದರಿಂದ ಭೇದವು ಕಲ್ಪಿತವಲ್ಲ ಎನ್ನುತ್ತಾರೆ—

**ತಾ ॥ (೧) ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿತ್ । ಅದ್ವೈತಂ ಜ್ಞಾನಿನಾಂ ಪಕ್ಷೇ ನ ತಸ್ಮಾದ್ವಿದ್ಯತೇ ಕ್ವಚಿತ್ । ಇತ್ಯಾದಿಶ್ರುತಿಭ್ಯೋಽರ್ಥಾಂತರಸ್ಯೈವಾವಗತತ್ವಾತ್ ॥ (೨) ಏಕಪಿಂಡನಾಮಧೇಯೇತಿಶಬ್ದಾನಾಂ ವೈಯರ್ಥ್ಯಂ ಚಾ(ರ್ಥಾರ್ಥ್ಯಾ)ನ್ಯಥಾ ॥ (೩) ನ ಚೈಕವಿಜ್ಞಾನೇನ ಸರ್ವವಿಜ್ಞಾನಂ ತತ್ಪಕ್ಷೇ । ನ ಹಿ ಶುಕ್ತಿಜ್ಞೋ ರಜತಜ್ಞ ಇತಿ ವ್ಯವಹಾರಃ ॥ (೪) ನವಕೃತ್ವೋಽಪಿ ಭೇದ ಏವ ದೃಷ್ಟಾಂತೋಕ್ತೇಶ್ಚ । ತಸ್ಮಾದತತ್ತ್ವಮಸೀತ್ಯೇವೋಚ್ಯತೇ ॥ ೧೫ ॥**

ಅ ॥ (೧) ಭೇದವು ಅಜ್ಞಾನಾದಿಗಳಿಂದ ಕಲ್ಪಿತವಾಗಿದ್ದರೆ ಬಾಧಿಸಲ್ಪಡಬಹುದಿತ್ತು ಬಾಧಿಸಲ್ಪಡುವುದಿಲ್ಲ. ಆದಕಾರಣ ಕಲ್ಪಿತವಲ್ಲ ಆದಪ್ರಯುಕ್ತವೇ ಜ್ಞಾನಿಗಳ ಪಕ್ಷದಲ್ಲಿ ಸರ್ವೈಕ್ಯವಲ್ಲ ಇದುಮೊದಲಾದ ವೇದಗಳಿಂದ ಆಪಾತತಃ ಐಕ್ಯವನ್ನು ಹೇಳುವಂತೆ ತೋರುವ ವೇದವಾಕ್ಯಗಳಿಗೆ ಭೇದರೂಪ ಅರ್ಥವೇ ಸ್ಪಷ್ಟವಾಗಿ ತಿಳಿಯಲ್ಪಡುತ್ತದೆ (೨) (**ಸ ಆತ್ಮಾ ತತ್ತ್ವಮಸಿ** ಇದುಮೊದಲಾದ ವೇದವಾಕ್ಯಗಳು ಭೇದರೂಪ ಅರ್ಥವನ್ನೇ ಹೇಳುತ್ತವೆಂದು ಸಿದ್ಧಿಯಾಗುವುದಕ್ಕಾಗಿ **ಯಥಾ ಸೋಮ್ಯ ಏಕೇನ ಮೃತ್ಪಿಂಡೇನ** ಇತ್ಯಾದಿ ದೃಷ್ಟಾಂತವಾಕ್ಯಗಳನ್ನು ಹೇಳಿದರು ಅವುಗಳಿಗೆ ನಾವು (ದ್ವೈತಿಗಳು) ಹೇಳಿದ ಭೇದರೂಪ ಅರ್ಥವನ್ನು ಅಂಗೀಕರಿಸದೆ ಅಭೇದರೂಪ ಅರ್ಥವನ್ನು ಕಲ್ಪಿಸಿಕೊಂಡರೆ ಅನೇಕವೇದಗಳಿಂದ ವಿರೋಧವು ಬರುತ್ತದೆಂದು ಹೇಳಿಯಾಯಿತು ಇದಲ್ಲದೆ ಬೇರೆ ಪ್ರಬಲ ಬಾಧಕವೂ ಇದೆ ಎನ್ನುತ್ತಾರೆ—) ಭೇದರೂಪಾರ್ಥವನ್ನು ಒಡಂಬಡದಿದ್ದರೆ **ಏಕ ಪಿಂಡ ನಾಮಧೇಯ ಇತಿ** ಶಬ್ದಗಳು ವ್ಯರ್ಥಗಳಾಗಬೇಕಾಗುವವು (ಅಂದರೆ—ಒಂದು ಮಣ್ಣಿನ ಹೆಂಟೆಯನ್ನು ತಿಳಿದರೆ ಮೃಣ್ಮಯವಾದುದೆಲ್ಲವೂ ತಿಳಿದಂತೆ ಆಗುವುದು ಮೃಣ್ಮಯವಾದುದು ವ್ಯವಹರಿಸಲಿಕ್ಕೆ ಮಾತ್ರ ಯೋಗ್ಯವಾದುದು ಪಾರಮಾರ್ಥಿಕವಲ್ಲ ಮೃತ್ತಿಕೆಯೇ ಸತ್ಯವಾಗಿದೆ ಹಾಗೆಯೇ ಪರಮಾತ್ಮನು ಹೊರತು ಬೇರೆ ಯಾವುದೂ ಇಲ್ಲದಿರುವುದರಿಂದ ಆತನ ಜ್ಞಾನವುಂಟಾದರೆ ಜಗತ್ತಿನ ಜ್ಞಾನವು ಬರುತ್ತದೆ ಎಂದು ಅದ್ವೈತಿಗಳು ಅರ್ಥ ಹೇಳುವುದು ಸಮಂಜಸವಲ್ಲ. **ಮೃದಾ ಜ್ಞಾತಯಾ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್ । ವಾಚಾರಂಭಣಂ ವಿಕಾರೋ ಮೃತ್ತಿಕೈವ ಸತ್ಯಾ** ಎಂದಿಷ್ಟೇ ಸಾಕಾಗುವುದರಿಂದ ಏಕ ಮೊದಲಾದ ಶಬ್ದಗಳು ವ್ಯರ್ಥಗಳಾಗಬೇಕಾಗು

ವವು. ಹೇಗೆಂದರೆ ಎಲ್ಲಾ ಮೃಣ್ಮಯ ವಸ್ತುಗಳು ಒಂದು ಮಣ್ಣಿನ ಹೆಂಟೆಯಿಂದ ಹುಟ್ಟಿದ್ದು ಅಲ್ಲವಷ್ಟೆ. ನಾಮಧೇಯವೂ ವಿಕಾರವೇ ಆಗಿದೆ) (೩) (ಮತ್ತು ವಾಚಾರಂಭಣ ವಾಕ್ಯಕ್ಕೆ ಜಗತ್ತು ಪರಮಾತ್ಮನಿಗಿಂತ ಬೇರೆ ಇಲ್ಲವೆಂದು ಅರ್ಥ ಹೇಳುವುದಾದರೆ ಆತನ ಜ್ಞಾನದಿಂದ ಜಗತ್ತಿನ ಜ್ಞಾನವು ಬಾರದೆ ಹೋಗುವುದು ಸತ್ಯಜ್ಞಾನದಿಂದ ಮಿಥ್ಯಾಜ್ಞಾನವು ಬರಲಾರದಷ್ಟೆ ಆ ಜ್ಞಾನಗಳಿಗೆ ವಿರೋಧವಿದೆ ಎನ್ನುತ್ತಾರೆ.) ಒಂದು ವಸ್ತುವಿನ ಜ್ಞಾನದಿಂದ ಸರ್ವವಸ್ತುಗಳ ಜ್ಞಾನವು ಅದ್ವೈತಿಗಳ ಪಕ್ಷದಲ್ಲಿ ಬರಲಾರದು (ಪರಮಾತ್ಮನ ಜ್ಞಾನದಿಂದ ಜಗತ್ತು ಮಿಥ್ಯೆಯೆಂದು ಜ್ಞಾನವು ಬರುತ್ತದೆಂದರೆ—) ಮುತ್ತಿನ ಚಿಪ್ಪನ್ನು ತಿಳಿದವನು ಬೆಳ್ಳಿಯನ್ನು ತಿಳಿದಿರುತ್ತಾನೆಂದು ವ್ಯವಹಾರವು ಇಲ್ಲವಷ್ಟೆ (ಇದ್ದರೆ ಪರಮಾತ್ಮನ ಜ್ಞಾನದಿಂದ ಜಗತ್ತು ಇಲ್ಲವೆಂದು ಜ್ಞಾನವು ಬರುತ್ತದೆಂದು ಹೇಳಬೇಕು ಬ್ರಹ್ಮಜ್ಞಾನದಿಂದ ಜಗತ್ತಿನ ಜ್ಞಾನವು ಬರುತ್ತದೆಂದಾಗುವುದಿಲ್ಲ ಲೋಕದಲ್ಲಿ ಅಂತಹ ವ್ಯವಹಾರವು ಇಲ್ಲ) (೪) ಭೇದವಿದೆ ಎಂಬಲ್ಲಿಯೇ ಒಂಭತ್ತಾವರ್ತಿಯೂ ದೃಷ್ಟಾಂತವನ್ನು ಹೇಳಿರುತ್ತಾರೆ ಆದಕಾರಣ ಹಿಂದಿನ ವಾಕ್ಯಗಳೆಲ್ಲವೂ ಭೇದವನ್ನೇ ಪ್ರತಿಪಾದಿಸಿದುದರಿಂದ **ಸ ಆತ್ಮಾ ತತ್ತ್ವಮಸಿ** ಎಂಬಲ್ಲಿ **ಅತತ್ತ್ವಮಸಿ** ಎಂದು ಪದವನ್ನು ವಿಂಗಡಿಸಿಕೊಂಡು ನೀನು ಶ್ರೀಹರಿಯಿಂದ ಬೇರೆ ಎಂಬ ಅರ್ಥವೇ ಸಮಂಜಸವು ॥ ೧೫ ॥

**ಪೀ**—**ಅತತ್ತ್ವಮಸಿ** ಎಂದು ಭೇದಪರವಾಗಿ ಅರ್ಥಮಾಡಿದರೆ **ಐತದಾತ್ಮ್ಯಮಿದಂ ಸರ್ವಂ** ಎಂದು ಸರ್ವೈಕ್ಯ ಹೇಳುವ ಹಿಂದಿನ ವಾಕ್ಯದಿಂದ ವಿರೋಧವು ಬರುವುದೆಂದರೆ—

**ತಾ ॥ (೧) ಐತದಾತ್ಮ್ಯಮಿತ್ಯೇತದಾತ್ಮಸಂಬಂಧಿ । ತತ್ಸ್ವಾಮಿಕಂ । ತ್ವಮಪಿ ತದೈತದಾತ್ಮ್ಯಮೇವಾಸಿ ನ ಸೋಽಸೀತಿ ವಾ । ತದಿತಿ ಲಿಂಗಸಾಮ್ಯಂ ಚಾತ್ರ ॥ (೨) ಅವಿದ್ಯಮಾನಮೇವೇಶ್ವರಂ ಸೃಷ್ಟ್ಯಾದಿಕಂ ಚಾಪ್ರಾಪ್ತಮೇವಾತ್ಮನೋ ಭಿನ್ನತ್ವೇನ ಪ್ರಾಪಯಿತ್ವಾ ತನ್ನಿಷೇಧೇ ಕಥಂ ಶ್ರುತೇರುನ್ಮತ್ತವಾಕ್ಯತ್ವಂ ನ ಸ್ಯಾತ್ ॥ (೩) ಅನುವಾದೋಽಪಿ ಯದಿದಂ ವದಂತಿ ತನ್ನ ಯುಜ್ಯತ ಇತ್ಯಾದಿವಾಕ್ಯಂ ಪರಿಹಾರೇ ವಿಶೇಷಯುಕ್ತಿಂ ಚ ವಿನಾ ನ ದೃಷ್ಟಃ ॥ (೪) ಅತಿಪ್ರಸಂಗಶ್ಚಾನ್ಯಥಾ । ಅಭೇದಾನುವಾದೇನ ಭೇದೋಪದೇಶಃ ಕಿಮಿತಿ ನ ಸ್ಯಾತ್ । ಸರ್ವಶಾಖಾಂತೇ ಭೇದೋಕ್ತೇಶ್ಚೈತದೇವ ಯುಕ್ತಂ ॥ ೧೬ ॥**

**ಅ** ॥ (೧) (ಐತದಾತ್ಮ್ಯಂ ಎಂಬುದಕ್ಕೆ ಶ್ರೀಹರಿಗೆ ಸಂಬಂಧಿಯಾದುದ ಅಂದರೆ ಶ್ರೀಹರಿಯೇ ಸ್ವಾಮಿಯಾಗಿ ಉಳ್ಳದ್ದು (**ತತ್ ತ್ವಮಸಿ** ಎಂದು ಪದಚ್ಛೇದವಿಟ್ಟುಕೊಂಡರೂ ಪೂರ್ವೋತ್ತರವಾಕ್ಯಗಳು ಭೇದವನ್ನೇ ತಿಳಿಸುವುದರಿಂದ ವೇದದಲ್ಲಿಯೇ ಪ್ರಸಿದ್ಧವಾದ ಭೇದವನ್ನೇ ಬೋಧಿಸುವ ಇನ್ನೊಂದು ಅರ್ಥವನ್ನು ಹೇಳುತ್ತಾರೆ—) (ಶ್ವೇತಕೇತುವೇ) ನೀನೂ ಕೂಡ ಶ್ರೀಹರಿಗೆ ಸಂಬಂಧಿಯೇ ಆಗಿರುತ್ತಿ. (ಅಂದರೆ ಶ್ರೀಹರಿಯು ನಿಯಾಮಕನು ನೀನು ನಿಯಮ್ಯನೇ ಆಗಿರುತ್ತಿ ಶ್ರೀಹರಿಯೇ ನೀನು ಎಂಬುದು ಸರ್ವಥಾ ಆಗಲಾರೆ) ಮತ್ತು **ತತ್** ಎಂಬುದರಿಂದ **ಐತದಾತ್ಮ್ಯಂ** ಎಂಬುದನ್ನು ಇಟ್ಟುಕೊಂಡರೆ ಎರಡೂ ನಪುಂಸಕಲಿಂಗವೇ ಆಗುವುವು (ಆಗ ತ್ವಂ=ನೀನು ತತ್=ಶ್ರೀಹರಿಗೆ ನಿಯಮ್ಯನೇ ಆಗಿರುತ್ತಿ ಎಂದರ್ಥವು) (ಹಿಂದಿನ ಕಲ್ಪದಲ್ಲಿಯೂ ತಸ್ಮಾತ್ ಅನ್ಯತ್ **ಅತತ್** ನೀನು ಶ್ರೀಹರಿಯಿಂದ ಬೇರೆಯಾದ ವಸ್ತುವು, ಎಂದಿಟ್ಟುಕೊಂಡರೆ ಲಿಂಗವೂ ವ್ಯತ್ಯಾಸವಾಗುವುದಿಲ್ಲ) (೨) (**ಐತದಾತ್ಮ್ಯಂ** ಎಂಬುದಕ್ಕೆ ಶ್ರೀಹರಿಯಿಂದ ನಿಯಮ್ಯನೆಂಬ ಅರ್ಥವು ನಿಶ್ಚಿತವಲ್ಲ, ಮತ್ತೆ ಸರ್ವಜಗತ್ತು ಶ್ರೀಪರಬ್ರಹ್ಮನ ಸ್ವರೂಪವಾಗಿದೆ, ಎಂಬ ಅರ್ಥವೂ ಕೂಡಬಹುದಷ್ಟೆ, ಎಂದರೆ—(1) ಜಗತ್ತಿಗೆ ಸಾಕ್ಷಾತ್ತಾಗಿ ಶ್ರೀಹರಿಯಿಂದ

ಐಕ್ಯ ಹೇಳುತ್ತೇವೆಂಬ ಅರ್ಥವು ಕೂಡಲಾರದು—ಏಕೆಂದರೆ ಮಿಥ್ಯಾಭೂತವಾದ ಜಗತ್ತಿಗೆ ಸತ್ಯಭೂತನಾದ ಶ್ರೀಹರಿಯಿಂದ ಐಕ್ಯವು ಕೂಡಲಾರದು (2) (ಪರಬ್ರಹ್ಮನು ಹೊರತು ನಿಯಾಮಕ ನಿಯಮ್ಯರೂಪವಾದ ಜಗತ್ತೇ ಇಲ್ಲವೆನ್ನುತ್ತೇವೆ ಎಂದರೆ ಅದೂ ಸಮಂಜಸವಾಗುವುದಿಲ್ಲ ಏಕೆಂದರೆ) ಅದ್ವೈತಿಗಳ ಮತದಲ್ಲಿ ವಾಸ್ತವಿಕವಾಗಿ ಈಶಾದಿರೂಪ ಜಗತ್ತು ಇಲ್ಲ ಶ್ರೀಹರಿಯು ಜಗತ್ತನ್ನು ಸೃಷ್ಟಿಸಿರುತ್ತಾನೆ, ಇತ್ಯಾದಿಗಳು ವೇದದಿಂದಲೇ ಸಿದ್ಧಿಸಬೇಕು ವೇದ ಹೊರತು ಬೇರೆ ಯಾವುದರಿಂದಲೂ ಸಿಗುವುದೇ ಇಲ್ಲ ನಿಷೇಧಿಸಬೇಕಾದರೆ ಪ್ರಸಕ್ತಿಯು ಬೇಕು. ಹೀಗೆ ವಸ್ತುತಃ ಇಲ್ಲದಿರುವ ಈಶ್ವರನೂ, ಪ್ರಮಾಣಾಂತರದಿಂದ ಸಿಗದಿರುವ ಸೃಷ್ಟ್ಯಾದಿಗಳೂ ಪರಬ್ರಹ್ಮನಿಂದ ಬೇರೆಯಾಗಿದೆ ಎಂದು ತದೈಕ್ಷತ ಇತ್ಯಾದಿಗಳಲ್ಲಿ ವೇದವು ಪ್ರತಿಪಾದಿಸಿ ತಿರುಗಿ ಪರಬ್ರಹ್ಮನು ಹೊರತು ನಿಯಾಮಕ ನಿಯಮ್ಯಾದಿರೂಪವಾದ ಜಗತ್ತು ಇಲ್ಲವೆಂದು ನಿಷೇಧಿಸಿದರೆ ಉನ್ಮತ್ತನ ಮಾತಿನಂತೆ ಪೂರ್ವೋತ್ತರ ವಿರುದ್ಧಗಳಾಗಿರುವುದರಿಂದ ಐತದಾತ್ಮ್ಯಮಿದಂ ಸರ್ವಂ ಇದುಮೊದಲಾದ ವೇದವು ಪ್ರಮಾಣವಾಗದೆ ಹೋಗುವುದು. (ಹಾಗಾದರೆ—ಪರಬ್ರಹ್ಮನು ಹೊರತು ಜಗತ್ತು ಇಲ್ಲವೆಂದು ನಿಷೇಧಿಸುವುದಕ್ಕಾಗಿ ತದೈಕ್ಷತ ಇತ್ಯಾದಿಗಳಲ್ಲಿ ಜಗತ್ತನ್ನು ಅನುವಾದಮಾಡಿದ್ದೆನ್ನುತ್ತೇವೆ ಎಂದರೆ—ಜಗತ್ತು ಶ್ರೀಪರಬ್ರಹ್ಮನಿಗಿಂತ ಬೇರೆ ಇದೆ ಎಂಬುದು ವೇದದಿಂದ ಹೊರತು ಬೇರೆ ಯಾವುದರಿಂದಲೂ ಲಭಿಸದಿರುವುದರಿಂದ ಅನುವಾದವೆಂಬುದೂ ಕೂಡಲಾರದು ) (೩) (ಜಗತ್ತು ಇಲ್ಲವೆಂದು ನಿಷೇಧಿಸುವುದಕ್ಕಾಗಿ ತದೈಕ್ಷತ ಇತ್ಯಾದಿಗಳಲ್ಲಿ ಜಗತ್ತನ್ನು ಅನುವಾದ ಮಾಡಿದ್ದೆಂದರೆ) ಅನುವಾದವೆಂದಾಗಬೇಕಾದರೆ—ಯದಿದಂ ವದಂತಿ ತನ್ನ ಯುಜ್ಯತೇ ಯಾವ ಈ ಮಾತನ್ನು ಜನರು ಹೇಳುತ್ತಾರೋ ಅದು ಯುಕ್ತವಲ್ಲ ಇದುಮೊದಲಾದ ವಾಕ್ಯವು ಅವಶ್ಯಕವು ನಿಷೇಧಿಸಲಿಕ್ಕೆ ವಿಶೇಷಯುಕ್ತಿಯು ಅವಶ್ಯಕವು. ಇವು ಹೊರತು ಅನುವಾದವೆಂಬುದು ಎಲ್ಲಿಯೂ ಕಂಡು ಬರಲಿಲ್ಲ (೪) (ಅಂತಹ ವಾಕ್ಯಾದಿಗಳಿಲ್ಲದಿದ್ದರೂ ಜಗತ್ತು ಇಲ್ಲ ಎಂದು ಜಗತ್ತನ್ನು ನಿಷೇಧಿಸುವುದಕ್ಕಾಗಿ ಜಗತ್ತನ್ನು ಅನುವಾದಮಾಡಿಕೊಂಡದ್ದೆಂದು ಹೇಳಿದರೆ ಅದೃಷ್ಟಕಲ್ಪನಾ ಎಂಬುವುದೊಂದು ದೋಷವು ಬರುತ್ತದೆ ) ಅಲ್ಲದೆ ಹಾಗೆ ಹೇಳದಿದ್ದರೆ ಅತಿಪ್ರಸಂಗವೂ ಬರುವುದು ಹೇಗೆಂದರೆ—ಅಭೇದವನ್ನನುವಾದಮಾಡಿ ಭೇದವನ್ನೇ ಉಪದೇಶಿಸಿದ್ದು ಎಂದು ಏಕೆ ಆಗಲಾರದು (ಅಂದರೆ--ವಿಶೇಷವಾಕ್ಯಾದಿಗಳಿಲ್ಲದಿದ್ದರೂ ಐತದಾತ್ಮ್ಯಂ ಇತ್ಯಾದಿಗಳಲ್ಲಿ ಪರಬ್ರಹ್ಮನು ಹೊರತು ಜಗತ್ತು ಇಲ್ಲ ಎಂದು ಹೇಳುವುದಕ್ಕಾಗಿ ತದೈಕ್ಷತ ಇತ್ಯಾದಿ ವೇದಗಳಿಂದ ಪರಬ್ರಹ್ಮನ ಹೊರತಾದ ಜಗತ್ತನ್ನು ಅನುವಾದ ಮಾಡುವುದೆಂದು ಕಲ್ಪಿಸಿಕೊಳ್ಳುವುದಾದರೆ—ತದೈಕ್ಷತ ಇತ್ಯಾದಿಗಳಲ್ಲಿ ಜಗತ್ತು ಪರಬ್ರಹ್ಮನಿಂದ ಬೇರೆ ಇಲ್ಲ ಎಂಬುದನ್ನು ನಿಷೇಧಿಸಿ ಜಗತ್ತು ಶ್ರೀಪರಬ್ರಹನಿಂದ ಬೇರೆ ಇದೆ ಎಂದು ವಿಧಾನಮಾಡುವುದಕ್ಕಾಗಿ ಐತದಾತ್ಮ್ಯಂ ಇತ್ಯಾದಿಗಳಿಂದ ಜಗತ್ತು ಪರಬ್ರಹ್ಮನಿಂದ ಬೇರೆ ಇಲ್ಲ ಎಂಬುದನ್ನೇ ಅನುವಾದಮಾಡುವುದೆಂದೂ ಹೇಳಬಹುದು ವಿಶೇಷವೇನೂ ಇಲ್ಲ ಮತ್ತು ಎಲ್ಲಾ ಶಾಖೆಗಳ ಅಂತ್ಯದಲ್ಲಿ ಭೇದವನ್ನೇ ಹೇಳಿದ್ದರಿಂದಲೂ ಪರಬ್ರಹ್ಮ ಹೊರತು ಜಗತ್ತು ಇಲ್ಲ ಎಂದು ಜಗತ್ತನ್ನು ನಿಷೇಧಿಸುವುದಕ್ಕಾಗಿ ಪರಬ್ರಹ್ಮನಿಂದ ಬೇರೆ ಜಗತ್ತು ಇದೆ ಎಂಬುದು ಅನುವಾದವಾಗುವುದಿಲ್ಲ ಎಂಬುದೇ ಸಮಂಜಸವು ಅಂದರೆ—ಪರಬ್ರಹ್ಮನಿಂದ ಬೇರೆ ಜಗತ್ತು ಇಲ್ಲವೆಂದು ಅನುವಾದಮಾಡಿ ಭಿನ್ನವಾದ ಜಗತ್ತು ಇದೆ ಎನ್ನುವವೇ ಯುಕ್ತವು

ವಿ || ಅನುವಾದವೆಂದಾಗಬೇಕಾದರೆ ಶಾಖೆಗಳ ಆದಿಯಲ್ಲಿಯೇ ಇರಬೇಕು ಶಾಖೆಗಳ ಅಂತ್ಯದಲ್ಲಿ ನಿಷೇಧವು ಇರಬೇಕು ಇಲ್ಲಿಯಾದರೂ ಶಾಖೆಗಳ ಅಂತ್ಯದಲ್ಲಿ ಭೇದವನ್ನು ನಿಷೇಧಿಸಲಿಲ್ಲ, ಮತ್ತೆ ಶಾಖೆಗಳ ಅಂತ್ಯಗಳಲ್ಲಿ ಭೇದವನ್ನೇ ಹೇಳಿರುತ್ತಾರೆ ಆದಕಾರಣ ಭೇದವನ್ನು ನಿಷೇಧಿಸುವುದಕ್ಕಾಗಿ ವೇದದಲ್ಲಿ ಭೇದವನ್ನು ಅನುವಾದಮಾಡಿದ್ದು ಎಂದಾಗುವುದಿಲ್ಲವಷ್ಟೆ. || ೧೬ ||

ಪೀ—ಶಾಖಾಂತ್ಯಗಳಲ್ಲಿ ಭೇದೋಕ್ತಿಗಳು ಯಾವವೆಂದರೆ--

ಶಾ ॥ (೧) ನಾಸಂವತ್ಸರವಾಸಿನೇ ಪ್ರಬ್ರೂಯಾತ್ ನಾಪ್ರವಕ್ತ್ರ ಇತ್ಯಾಚಾರ್ಯಾ ಆಚಾರ್ಯಾಃ । ಅಹಂ ವಿಶ್ವಂ ಭುವನಮಭ್ಯಭವಾಂ ॥ (೨) ಅನಂತೇ ಸ್ವರ್ಗೇ ಲೋಕೇ ಜ್ಯೇಯೇ ಪ್ರತಿತಿಷ್ಠತಿ ಪ್ರತಿತಿಷ್ಠತೀತಿ ಬ್ರಹ್ಮವಿದೋ ವಿದುಃ ॥ (೩) ನಮೋ ವಿಷ್ಣವೇ ಮಹತೇ ಕರೋಮಿ । ಪಶ್ಯಂತ್ಯಾತ್ಮನ್ಯವಸ್ಥಿತಂ । ಇತ್ಯಾದಿ ॥ ೧೭ ॥

ಅ ॥ (೧) ಒಂದು ಸಂವತ್ಸರ ಪರ್ಯಂತ ಸೇವಾದಿಗಳನ್ನು ಮಾಡದಿದ್ದವನಿಗೆ ವಿದ್ಯೆಯನ್ನು ಹೇಳಬಾರದು. ಶಿಷ್ಯರಿಗೆ ಉಪದೇಶಿಸದಿರುವವನಿಗೂ ಹೇಳಬಾರದು, ಎಂದು ಆಚಾರ್ಯರು ಹೇಳುತ್ತಾರೆ ನಾನು ಸಂಪೂರ್ಣ ಜಗತ್ತನ್ನು ವಶದಲ್ಲಿಟ್ಟುಕೊಂಡು ಜಗತ್ತಿಗೆ ನಿಯಾಮಕನಾಗಿರುವೆನು (೨)ನಾಶವಿಲ್ಲದ ಶ್ರೇಷ್ಠವಾದ ಮೋಕ್ಷದಲ್ಲಿ ಇರುತ್ತಾನೆ, ಎಂದು ಬ್ರಹ್ಮಜ್ಞಾನಿಗಳು ಹೇಳುತ್ತಾರೆ (೩) ಸರ್ವೋತ್ತಮನಾದ ಶ್ರೀವಿಷ್ಣುವಿಗೆ ನಮಸ್ಕರಿಸುತ್ತೇನೆ ತನ್ನ ಹೃದಯದೊಳಗೆ ಇರುವ ಶ್ರೀಹರಿಯನ್ನು ನೋಡುತ್ತಾರೆ ಇತ್ಯಾದಿ ॥ ೧೭ ॥

ಪೀ – ಅಭೇದವನ್ನನುವಾದಮಾಡಿ ಭೇದವನ್ನು ಹೇಳಿದ್ದು ಎಂಬುದು ಯುಕ್ತವಲ್ಲ ವೇದ ಹೊರತು ಬೇರೆ ಯಾವುದರಿಂದಲೂ ಜೀವೇಶ್ವರರಿಗೆ ಅಭೇದವು ಪ್ರಾಪ್ತವಾಗುವುದಿಲ್ಲ ಮತ್ತೆ ನಿಯಾಮಕ ನಿಯಮ್ಯಾದಿರೂಪವಾದ ಜಗತ್ತು ಪರಬ್ರಹ್ಮನಿಂದ ಬೇರೆ ಇದೆ, ಎಂದನುವಾದಮಾಡಿ ಜಗತ್ತು ಪರಬ್ರಹ್ಮನಿಂದ ಬೇರೆಯಿಲ್ಲವೆಂದು ಜಗತ್ತನ್ನು ನಿಷೇಧಿಸುವುದೇ ಯುಕ್ತವು ಏಕೆಂದರೆ ಜಗತ್ತು ಪರಬ್ರಹ್ಮನಿಗಿಂತ ಬೇರೆ ಇದೆ ಎಂದು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾಗಿದೆ ಎಂದರೆ –

ಶಾ ॥ (೧) ನ ಚೇಶ್ವರಸ್ತದ್ಭೇದೋ ವಾ ಪ್ರತ್ಯಕ್ಷಾದಿಸಿದ್ಧಃ ॥ (೨) ತತ್ಪಕ್ಷೇ ತ್ವೈಕ್ಯಾದೇರಪಿ ಮಿಥ್ಯಾತ್ವಾತ್ ಸ್ವರೂಪಸ್ಯ ಚ ಸಿದ್ಧತ್ವಾತ್ ವ್ಯರ್ಥೈವ ಶ್ರುತಿಃ ॥ (೩) ಲಕ್ಷಿತಸ್ವರೂಪಸ್ಯಾಪಿ ನ ಸ್ವರೂಪಾದ್ವಿಶೇಷಃ । ನಿರ್ವಿಶೇಷತ್ವೋಕ್ತೇಃ ॥ (೪) ಮಿಥ್ಯಾವಿಶೇಷೋಕ್ತಾ ಚಾಪ್ರಾಮಾಣ್ಯಂ ಶ್ರುತೇಃ ॥ ೧೮ ॥

ಅ ॥ (೧) ಪರಮಾತ್ಮನಾಗಲೀ ಆತನ ಭೇದವಾಗಲೀ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾಗಲಾರದು (ಅಂದರೆ-- ಪರಮಾತ್ಮನೇ ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಗೋಚರನಾಗದಿರುವಾಗ ಆ ಪರಮಾತ್ಮನಿಂದ ನಿಯಾಮಕ ನಿಯಮ್ಯಾದಿರೂಪವಾದ ಜಗತ್ತಿಗೆ ಭೇದವು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸುತರಾಂ ಸಿದ್ಧಿಸಲಾರದು ) (೨) ಅದ್ವೈತಿಗಳ ಪಕ್ಷದಲ್ಲಿ ಜೀವಬ್ರಹ್ಮೈಕ್ಯಾದಿಗಳೂ ಮಿಥ್ಯಾಭೂತಗಳಾಗಿರುತ್ತವೆ ಆತ್ಮಸ್ವರೂಪವು ಸುತರಾಂ ಸಿದ್ಧವಾಗಿದೆ ಆದಕಾರಣ (ತಿಳಿಸುವ ಅಂಶವು ಯಾವುದೂ ಇಲ್ಲದಿರುವುದರಿಂದ) ವೇದವು ವ್ಯರ್ಥವೇ (ಅಂದರೆ ಪರಬ್ರಹ್ಮನಿಂದ ಬೇರೆಯಾದ ಎಲ್ಲಾ ಜಗತ್ತು ಮಿಥ್ಯೆಯು (ಸುಳ್ಳು, ಜಗತ್ತು ಇಲ್ಲ ) ಎಂದು ಹೇಳುವುದಾದರೆ – ಎಲ್ಲಾ ವೇದಗಳೂ ವ್ಯರ್ಥಗಳಾಗಬೇಕಾಗುವವು ಹೇಗೆಂದರೆ **ಏಕಮೇವಾದ್ವಿತೀಯಂ ಯಸ್ಸರ್ವಜ್ಞಃ** ಇತ್ಯಾದಿ ವೇದಗಳು (1) ಜೀವಬ್ರಹ್ಮೈಕ್ಯಾದಿ ಧರ್ಮಗಳನ್ನು ಹೇಳುತ್ತವೋ (2) ಆತ್ಮಸ್ವರೂಪವನ್ನು ಹೇಳುತ್ತವೋ, (1) ನೇ ಕಲ್ಪದಲ್ಲಿ ಆ ಜೀವಬ್ರಹ್ಮೈಕ್ಯ ಸಾರ್ವಜ್ಞ ಮೊದಲಾದ ಧರ್ಮಗಳು । ಪರಬ್ರಹ್ಮಸ್ವರೂಪದಿಂದ ಬೇರೆಯೋ ।। ಪರಬ್ರಹ್ಮಸ್ವರೂಪಗಳೋ । ಐಕ್ಯ ಸಾರ್ವಜ್ಞಾದಿ ಧರ್ಮಗಳು ಪರಬ್ರಹ್ಮಸ್ವರೂಪಗಳಲ್ಲವೆಂದು ಹೇಳಿದರೆ ಮಿಥ್ಯೆಯಾಗಬೇಕಾಗುವವು ಪರಬ್ರಹ್ಮಸ್ವರೂಪವಲ್ಲದಿದ್ದುದೂ ಸತ್ಯವೆಂದು ಹೇಳಿದರೆ ಅದ್ವೈತಕ್ಕೆ ಹಾನಿಬರಬೇಕಾಗುವುದು ।। ಐಕ್ಯಾದಿ ಧರ್ಮಗಳು ಪರಬ್ರಹ್ಮಸ್ವರೂಪಭೂತಗಳೆಂದರೆ ಪರಬ್ರಹ್ಮಸ್ವರೂಪವು

ಸ್ವಪ್ರಕಾಶನಾದ ಜೀವನಿಂದ ಅಭಿನ್ನವಾಗಿರುವುದರಿಂದ ಸ್ವಪ್ರಕಾಶವಾಗಿ ಸಿದ್ಧವಾಗಿರುವ ಪ್ರಯುಕ್ತ ಅದನ್ನು ಹೇಳುವುದೇ ವ್ಯರ್ಥವು ) (೩) (ಶುದ್ಧಸ್ವರೂಪವನ್ನು ಪ್ರತಿಪಾದಿಸದಿದ್ದರೂ ಭೇದಾಭಾವ, ಸಾರ್ವಜ್ಞ್ಯ ಮೊದಲಾದ ಧರ್ಮಗಳಿಂದುಪಲಕ್ಷಿತವಾದ ಬ್ರಹ್ಮಸ್ವರೂಪವನ್ನು ಹೇಳುವುದರಿಂದ ವೇದಗಳಿಗೆ ವೈಯರ್ಥ್ಯವಿಲ್ಲವೆಂದರೆ) ಲಕ್ಷಿತವಾದ ಸ್ವರೂಪಕ್ಕೂ ಶುದ್ಧಸ್ವರೂಪದಿಂದ ವಿಶೇಷವಿಲ್ಲ (ಆದುದರಿಂದ ಶುದ್ಧಪದದಿಂದ ತಿಳಿಯಲ್ಪಟ್ಟ ರೂಪದಂತೆಯೇ ಲಕ್ಷಿತಪದದಿಂದ ತಿಳಿಯಲ್ಪಟ್ಟ ಸ್ವರೂಪವೂ ಪ್ರತಿಪಾದಿಸಲ್ಪಡುವುದಿಲ್ಲ ಅದುಕಾರಣ ಶ್ರುತಿಯು ಲಕ್ಷಿತಸ್ವರೂಪವನ್ನು ಹೇಳುತ್ತದೆಂಬುದೂ ಯುಕ್ತವಲ್ಲ ) (ಶುದ್ಧಸ್ವರೂಪದಿಂದ ಲಕ್ಷಿತಸ್ವರೂಪಕ್ಕೆ ವಿಶೇಷವಿಲ್ಲವೆಂಬುದು ಹೇಗೆ ಸಿದ್ಧಿಸುತ್ತದೆಂದರೆ) ಲಕ್ಷಿತ ಎಂದು ಹೇಳುವಾಗ ನಿರ್ವಿಶೇಷತ್ವವನ್ನು ಹೇಳಿದಂತೆಯೇ ಆಗುವುದು ನಿರ್ವಿಶೇಷತ್ವವು ಇಲ್ಲವಾದರೆ ವಿಶಿಷ್ಟತ್ವವು ಬರುವುದು ವಿಶಿಷ್ಟವಾದುದು ಮಿಥ್ಯೆಯಾಗಬೇಕಾಗುವುದು ಅದುಕಾರಣ ಲಕ್ಷಿತಸ್ವರೂಪಕ್ಕೆ ಶುದ್ಧಸ್ವರೂಪದಿಂದ ವಿಶೇಷವಿಲ್ಲ || ೧೮ ||

ಟೀ — ಧರ್ಮಗಳು ಮಿಥ್ಯೆಗಳಾಗಲಿ, ಆದರೂ ವೇದವು ಮಿಥ್ಯಾಭೂತಧರ್ಮಗಳನ್ನು ಹೇಳುತ್ತದೆ ಎಂದು ಹೇಳಿದರೆ ದೋಷವೇನೆಂದರೆ—

**ತಾ || (೧) ಮಿಥ್ಯಾತ್ವಂ ಚ ಮಿಥ್ಯೈವ ತೇಷಾಂ । ಅತಃ ಸತ್ಯತ್ವಂ ಸತ್ಯಂ ಸ್ಯಾತ್(ಚ್ಚ) || (೨) ಉಪಾಧಿಕೃತಭೇದೇಽಪ್ಯುಪಾಧೇರ್ಮಿಥ್ಯಾತ್ವೇ ತ್ವಪ್ರಾಪ್ತಮೇವೋಪಾಧಿಭೇದಂ ಪ್ರಾಪಯಿತ್ವಾ ಪುನರ್ನಿಷಿಧ್ಯತ(ಷೇಧ್ಯ) ಇತಿ ಸ ಏವ ದೋಷಃ ||(೩) ಸತ್ಯೋಪಾಧಿಪಕ್ಷೇಽಪಿ ಹಸ್ತಪಾದಾದ್ಯುಪಾಧಿಭೇದೇಽಪಿ ಭೋಕ್ತುರೇಕತ್ವದೃಷ್ಟೇರೇಕೇನೈವೇಶ್ವರೇಣ ಸರ್ವೋಪಾಧಿಗತಂ ಸುಖಂ ದುಃಖಂ (ಪ್ರತಿ ಪ್ರತಿ) ಭುಜ್ಯೇತೇತ್ಯೇವಮಾದಯೋ ದೋಷಾಃ ಸಮಾ ಏವ || (೪) ಅಚೇತನಾನಾಮನುಭವಾಭಾವಾನ್ನ ತತ್ಸಾಮ್ಯಂ । ಅತೋ ಜೀವೇಶ್ವರಯೋರ್ಭೇದ ಏವೇತಿ ಸಿದ್ಧಂ || ೧೯ || || ೧೮ ||**

ಅ || (೧) ಮಿಥ್ಯಾಭೂತ ವಿಶೇಷವನ್ನು ಹೇಳುತ್ತವೆಂದಾದರೆ ವೇದಗಳಿಗೆ ಅಪ್ರಾಮಾಣ್ಯವು ಬರುವುದು. (ಆತ್ಮನು ಹೊರತು ಬೇರೆ ಎಲ್ಲವೂ ಮಿಥ್ಯೆಯೆಂದು ಹೇಳುವುದು ಸರ್ವಥಾ ಯುಕ್ತವಲ್ಲವೆನ್ನುತ್ತಾರೆ ) ಆತ್ಮನು ಹೊರತು ಎಲ್ಲವೂ ಮಿಥ್ಯೆಯೆಂದು ಹೇಳಿದರೆ— ಆ ಮಿಥ್ಯಾತ್ವವು ಸತ್ಯವೋ ಮಿಥ್ಯೆಯೋ? ಸತ್ಯವೆಂದು ಹೇಳಕೂಡದು ಆತ್ಮನು ಹೊರತು ಎಲ್ಲವೂ ಮಿಥ್ಯೆಯೆಂಬ ಅದ್ವೈತಿಗಳ ಪಕ್ಷಕ್ಕೆ ಹಾನಿಯು ಬರಬೇಕಾಗುವುದು ಆದಕಾರಣ ಮಿಥ್ಯೆಯೆಂದೇ ಅಂಗೀಕರಿಸಬೇಕು (ಏವಂಚ ಮಿಥ್ಯಾತ್ವವು ಮಿಥ್ಯೆಯಾದರೆ ಮಿಥ್ಯಾತ್ವವು ಬಾಧಿತವಾಗುವುದು ಆಗ ಸತ್ಯತ್ವವು ಸತ್ಯವೇ ಆಗುವುದು ಸತ್ಯತ್ವವು ಸ್ಥಾಪಿತವಾಯಿತು ) (೨) (ಬ್ರಹ್ಮನಲ್ಲಿರತಕ್ಕ ಸಾರ್ವಜ್ಞ ಮೊದಲಾದ ಧರ್ಮಗಳು ಅಸತ್ಯವಲ್ಲ ಆದಕಾರಣ ವೇದವು ಅಪ್ರಮಾಣವಲ್ಲ ಜ್ಞಾನಸ್ವರೂಪನಾದ ಶುದ್ಧಬ್ರಹ್ಮನು ಅಥವಾ ಲಕ್ಷ್ಯಬ್ರಹ್ಮನು ವೇದದಿಂದ ತಿಳಿಯಲ್ಪಡಬೇಕೆಂದು ಹೇಳುವುದಿಲ್ಲ ಮತ್ತೆ ಮಾಯೆಯೆಂಬ ಉಪಾಧಿವಿಶೇಷದಿಂದ ಭಿನ್ನನಾದ ಒಬ್ಬ ಆತ್ಮನಲ್ಲಿಯೇ ಉಪಾಧಿನಿಮಿತ್ತವಾಗಿ ಸಾರ್ವಜ್ಞ ಮೊದಲಾದ ಧರ್ಮಗಳು ಬರುತ್ತವೆ ಅಥವಾ ಸಚ್ಛಕ್ತಿ ಚಿಚ್ಛಕ್ತಿರೂಪ ಉಪಾಧಿವಿಶೇಷದಿಂದ ಭಿನ್ನನಾದ ಆತ್ಮನಲ್ಲಿ ಚಿಚ್ಛಕ್ತಿಯಿಂದ ಸಾರ್ವಜ್ಞ್ಯ ಸೃಷ್ಟಿಮಾಡಲಿಚ್ಛೆ, ಮೊದಲಾದ ವಿಶೇಷಗಳೂ ಸಚ್ಛಕ್ತಿಯಿಂದ ಜಗತ್ಸೃಷ್ಟಿ ಮೊದಲಾದ ವಿಶೇಷಗಳೂ ಆಗುತ್ತವೆ ಆ ಉಪಾಧಿವಿಶೇಷದಿಂದ ಭಿನ್ನವಾದ ಔಪಾಧಿಕವಿಶೇಷ ವಿಶಿಷ್ಟಸ್ವರೂಪವು ವೇದದಿಂದ ಪ್ರತಿಪಾದಿಸಲ್ಪಡುತ್ತದೆಂದರೆ— ಈ ಉಪಾಧಿಯು (1) ಮಿಥ್ಯೆಯೋ (2) ಸತ್ಯವೋ (1) ಮಿಥ್ಯೆಯೆಂದರೆ—) ಉಪಾಧಿಪ್ರಯುಕ್ತ ಭೇದವಿದ್ದರೂ ಉಪಾಧಿಯು ಮಿಥ್ಯೆಯೆಂದಾದರೆ— ಪ್ರಮಾಣಾಂತರದಿಂದಪ್ರಾಪ್ತವಾಗದೇನೇ

ಇರುವ ಉಪಾಧಿಭೇದವನ್ನು ಕಲ್ಪಿಸಿ ಮರಳಿ ನಿಷೇಧಿಸುವಾಗ ಶ್ರುತಿಗೆ ಅಪ್ರಾಮಾಣ್ಯವೇ ಬರುವುದು (ಅಂದರೆ - ಉಪಾಧಿಪ್ರಯುಕ್ತ ಆತ್ಮನಲ್ಲಿಯೇ ಭೇದವು ವಿಶೇಷಗಳೂ ಎಂದಂಗೀಕರಿಸಿ ಉಪಾಧಿಯು ಮಿಥ್ಯೆಯೆಂದಂಗೀಕರಿಸಿದರೆ—ಉಪಾಧಿಯಿಂದ ಭಿನ್ನವಾದ ಸ್ವರೂಪವೂ ಉಪಾಧಿನಿಮಿತ್ತ ವಿಶೇಷಗಳೂ ಮಿಥ್ಯೆಯಾಗುವುವು ತಥಾಚ ಅವನ್ನು ಹೇಳತಕ್ಕ ವೇದವು ಅಪ್ರಮಾಣವಾಗುವುದು ನೇಹ ನಾನಾ ಇತ್ಯಾದಿಗಳಲ್ಲಿ ನಿಷೇಧಿಸುವುದಕ್ಕಾಗಿ ವೇದದಲ್ಲಿ ಮಿಥ್ಯೆಯೇ ಹೇಳಲ್ಪಡುತ್ತದೆ. ತಾನೇ ಮಿಥ್ಯಾಭೂತ ವಾದ ಉಪಾಧಿಭೇದದಿಂದ ಭಿನ್ನವಾದ ಸ್ವರೂಪವನ್ನು ಉಪಾಧಿನಿಮಿತ್ತವಿಶೇಷಗಳನ್ನು ಹೇಳಿ ಪುನಃ ಅದನ್ನು ನಿಷೇಧಿಸಿದರೆ ವೇದವು ಹುಚ್ಚನ ಮಾತಿನಂತೆ ಅಪ್ರಮಾಣವಾಗುವುದು. ನಿಷೇಧಿಸುವುದಕ್ಕಾಗಿ ಅನುವಾದ ಮಾಡಿದ್ದೆಂದರೆ—ಉಪಾಧಿವಿಶೇಷದಿಂದ ಭಿನ್ನವಾದ ಸ್ವರೂಪವೂ ಉಪಾಧಿನಿಮಿತ್ತವಿಶೇಷಗಳೂ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಪ್ರಾಪ್ತಗಳಾಗದಿರುವುದರಿಂದ ಅನುವಾದವೆಂಬುದೇ ಕೂಡಲಾರದು ) (೩) ಉಪಾಧಿಯು ಸತ್ಯವೆಂಬ ಕಲ್ಪದಲ್ಲಿ ಹಸ್ತ ಪಾದ ಮೊದಲಾದ ಉಪಾಧಿಗಳು ಬೇರೆಯಾದರೂ ಭೋಗಿಸುವವನು ಒಬ್ಬನೇ ಆದುದರಿಂದ ಒಬ್ಬ ಈಶ್ವರನೇ ಎಲ್ಲಾ ಉಪಾಧಿಗಳಲ್ಲಿರುವ ಸುಖದುಃಖಗಳನ್ನು ಭೋಗಿಸಬೇಕಾಗುವುದು. ಇದುಮೊದಲಾದ ದೋಷಗಳು ಸಮಗಳೇ ಆಗಿವೆ (ಉಪಾಧಿಯು ಮಿಥ್ಯೆಯೆಂಬ ಕಲ್ಪದಲ್ಲಿಯೂ ಈ ದೋಷಗಳಿವೆ ) (೪) (ಆಕಾಶವು ಒಂದೆಯಾದರೂ ಮಹಾನಸ (ಅಡಿಗೆಮನೆ) ಆಕಾಶದಲ್ಲಿಯೇ ಹೊಗೆ ಇರುವುದು ಉಪಾಧಿಗಳು ಬೇರೆಬೇರೆಯಾದುದರಿಂದ ಸರ್ವಾಕಾಶದಲ್ಲಿಲ್ಲ ಅಂತೆಯೇ ಇಲ್ಲಿಯೂ ಉಪಾಧಿಯನ್ನನುಸರಿಸಿಯೇ ಬರುವುದು ) ಅಚೇತನಗಳಿಗೆ ಅನುಭವವೇ ಇಲ್ಲದಿರುವುದರಿಂದ ಆ ದೃಷ್ಟಾಂತವು ಕೂಡಲಾರದು (ಅಂದರೆ --ಹೊಗೆಗೆ ಮಹಾನಸಾಕಾಶ ಸಂಬಂಧವಿದ್ದರೂ ಸರ್ವಾಕಾಶಸಂಬಂಧವು ಹೇಗೆ ಇಲ್ಲವೋ, ಹಾಗೆಯೇ ದುಃಖಕ್ಕೆ ಆಶ್ರಯವಾಗದೆ ಇರಲಿ, ಎನ್ನುವುದೋ ಅಥವಾ ಧೂಮಕ್ಕೆ ಅನುಭವವು ಹೇಗೆ ಇಲ್ಲವೋ ಹಾಗೆಯೇ ಅನುಭವವು ಇಲ್ಲದಿರಲಿ, ಎನ್ನುವಲ್ಲಿ ಒಂದನೇದ್ದು ನಮಗೆ ಅನಿಷ್ಟವಲ್ಲ ಎರಡನೇದ್ದು ಕೂಡುವುದಿಲ್ಲ ಆಕಾಶವು ಜಡವಾಗಿರುವುದರಿಂದ ಅದಕ್ಕೆ ಜ್ಞಾನದ ಅವಕಾಶವೇ ಇಲ್ಲದಿರುವುದರಿಂದ ದೃಷ್ಟಾಂತವು ಸರಿಯಲ್ಲ (ವಸ್ತುತಃ ವಿಚಾರಮಾಡಿದರೆ ಆಕಾಶದಲ್ಲಿಯೂ ಭೇದವಿದೆ ) ಆದಕಾರಣ ಜೀವೇಶ್ವರರಿಗೆ ಭೇದವೇ ಎಂದು ಸಿದ್ಧವಾಗುತ್ತದೆ ॥ ೧೮ ॥

ಗೀ ॥ ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಂ ।
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥ ೧೯ ॥

ಅ ॥ ಯಃ ಯಾವಾತನು, ಏನಂ ಈ ಜೀವನನ್ನು, ಹಂತಾರಂ-ಸ್ವತಂತ್ರವಾಗಿ ಇನ್ನೊಬ್ಬನನ್ನು ದೇಹದಿಂದ ಹೊರಪಡಿಸುವವನೆಂದೂ ವೇತ್ತಿ =ತಿಳಿಯುತ್ತಾನೋ, ಅಥವಾ ಶ್ರೀಹರಿಯನ್ನು ಚೇತನನಿಗೆ ಸಂಹಾರಕನನ್ನಾಗಿ ತಿಳಿಯುತ್ತಾನೋ, ಯಶ್ಚ=ಯಾವಾತನು, ಏನಂ ಜೀವನನ್ನು ಹತಂ-ಕೊಲ್ಲಲ್ಪಟ್ಟವನೆಂದು, ಮನ್ಯತೇ=ತಿಳಿಯುತ್ತಾನೋ ಉಭೌ ತೌ =ಇವರಿಬ್ಬರು (ಅಂದರೆ - ಜೀವರು ಅನಿತ್ಯರೆಂದು ತಿಳಿದವನೂ, ಸಂಹರಿಸುವ ವಿಷಯದಲ್ಲಿ ಜೀವನು ಸ್ವತಂತ್ರನೆಂದು ತಿಳಿಯುವವನೂ ಇವರಿಬ್ಬರೂ) ನ ವಿಜಾನೀತಃ=ತಿಳಿಯುವುದಿಲ್ಲ ಅಯಂ ಈ ಜೀವನು, ನ ಹಂತಿ=ಕೊಲ್ಲುವುದಿಲ್ಲ ನ ಹನ್ಯತೇ=ಜೀವ ಸ್ವರೂಪವು ನಿತ್ಯವಾಗಿರುವುದರಿಂದ ಜೀವನು ಸಂಹರಿಸಿಕೊಳ್ಳಲ್ಪಡುವುದಿಲ್ಲ ॥ ೧೯ ॥

ಟೀ—ಯ ಏನಂ ಎಂಬುದರಿಂದ ಪುನಃ ಆತ್ಮನಿಗೆ ನಿತ್ಯತ್ವವನ್ನು ಏಕೆ ಹೇಳುವುದೆಂದರೆ ನಿತ್ಯತ್ವವನ್ನು ಹೇಳುತ್ತದೆಂಬುವಲ್ಲಿ ಈ ಶ್ಲೋಕಕ್ಕೆ ಮುಖ್ಯ ತಾತ್ಪರ್ಯವಿಲ್ಲ ಮತ್ತೆ ಆತ್ಮನು ನಿತ್ಯನೆಂಬುವುದು ನಿಶ್ಚಿತವೇ ಎಂದಾದರೆ ಅವನು ಕೊಂದನು ಇತ್ಯಾದಿ ವ್ಯವಹಾರವು ಹೇಗೆ ಕೂಡುತ್ತದೆ ಎಂದರೆ—

ಭಾ ॥ ವ್ಯವಹಾರಸ್ತು ಭ್ರಾಂತ ಇತ್ಯಾಹ । ಯ ಏನಮಿತಿ । ಕುತಃ । ಉಕ್ತಹೇತುಭ್ಯೋ ನಾಯಂ ಹಂತಿ ನ ಹನ್ಯತೇ । ನ ಹಿ ಪ್ರತಿಬಿಂಬಸ್ಯ ಕ್ರಿಯಾ । ಸ ಹಿ ಬಿಂಬಕ್ರಿಯಯೈವ ಕ್ರಿಯಾವಾನ್ । ಧ್ಯಾಯತೀವೇತಿ ಶ್ರುತೇಶ್ಚ ॥ ೧೯ ॥

ಅ ॥ ಇವನು ಕೊಂದನು ಇತ್ಯಾದಿ ಜ್ಞಾನವು ಭ್ರಾಂತಿಮೂಲಕವೆಂದು ಯ ಏನಂ ಎನ್ನುವುದರಿಂದ ಹೇಳುತ್ತಾರೆ (ಜ್ಞಾನಗಳ ಪ್ರಾಮಾಣ್ಯವು ಬಾಧಕಜ್ಞಾನದಿಂದಲೇ ಬಿಡಲ್ಪಡಬೇಕಾಗಿರುವುದರಿಂದ) ಯಾವ ಬಾಧಕಜ್ಞಾನದಿಂದ ಈ ಜ್ಞಾನವು ಭ್ರಮೆಗೆ ವಿಷಯವೆಂದು ಕಲ್ಪಿಸಲ್ಪಡುವುದು ಎಂದರೆ ಸ್ವಪಕ್ಷ ಸಾಧಕಗಳಾದ ಅಂದರೆ ಆತ್ಮನಿಗೆ ನಿತ್ಯತ್ವವನ್ನು ಸಾಧಿಸುವ ಬಿಂಬನಿತ್ಯತ್ವ, ಉಪಾಧಿನಿತ್ಯತ್ವ, ಬಿಂಬೋಪಾಧಿ ಸನ್ನಿಧಿನಿತ್ಯತ್ವ ರೂಪಗಳಾದ ಹೇತುಗಳಿಂದಲೇ ಈ ಜೀವನು (ಮತ್ತೊಬ್ಬನನ್ನು) ಕೊಲ್ಲುವುದಿಲ್ಲ ಇನ್ನೊಬ್ಬನಿಂದ ಕೊಲ್ಲಲ್ಪಡುವುದಿಲ್ಲ, ಜೀವನು (ನಿತ್ಯನು ಎಂಬುದಕ್ಕೆ ಬಿಂಬನಿತ್ಯತ್ವಮೊದಲಾದ ಹೇತುಗಳನ್ನೂ ಹೇಳಿದರು ಜೀವನು ಹೇಗೆ ನಿತ್ಯನೋ ಹಾಗೆಯೇ ಅಸ್ವತಂತ್ರನೂ ಆಗಿರುತ್ತಾನೆ ಆದರೆ ಅಸ್ವತಂತ್ರನೆಂಬ ವಿಷಯದಲ್ಲಿ ಯಾವ ಹೇತುವನ್ನೂ ಹೇಳಲಿಲ್ಲವೆಂದರೆ *ಪ್ರತಿಬಿಂಬತ್ವವೇ ಹೇತುವು, ಹೇಗೆಂದರೆ) ಪ್ರತಿಬಿಂಬಕ್ಕೆ ಕ್ರಿಯೆಯಿಲ್ಲವಷ್ಟೆ (ಹಾಗಾದರೆ ಪ್ರತಿಬಿಂಬಕ್ಕೂ ಲೋಕದಲ್ಲಿ ಕ್ರಿಯೆಯು ಕಂಡದೆ ಜೀವನಿಗೆ ಕ್ರಿಯೆಯಿಲ್ಲವಾದರೆ ಕರ್ತಾ ಶಾಸ್ತ್ರಾರ್ಥವತ್ವಾತ್ ವಿಧಿನಿಷೇಧರೂಪವಾದ ಶಾಸ್ತ್ರಕ್ಕೆ ಸಾರ್ಥಕ್ಯವು ಬರಬೇಕಾಗಿರುವುದರಿಂದ ಜೀವನಿಗೆ ಕರ್ತೃತ್ವವನ್ನು ಹೇಳಲೇಬೇಕು, ಇತ್ಯಾದಿಗಳು ಕೂಡಲಾರವೆಂದರೆ—) ಜೀವನು ಬಿಂಬದ ಅಧೀನವಾದ ಕ್ರಿಯೆಯಿಂದಲೇ ಕ್ರಿಯೆಯುಳ್ಳವನು. (ಮೊದಲು ಜೀವನಿಗೆ ಕ್ರಿಯೆಯಲ್ಲಿ ಸ್ವಾತಂತ್ರ್ಯವಿಲ್ಲದಿರುವುದರಿಂದ ಕ್ರಿಯೆಯಿಲ್ಲವೆಂದು ಹೇಳಿದ್ದು) (ಜೀವರಿಗೆ ಈಶ್ವರಾಧೀನವಾದ ಕ್ರಿಯೆಯಿರುವುದೆಂಬ ವಿಷಯದಲ್ಲಿ ವೇದಪ್ರಮಾಣ ಹೇಳುತ್ತಾರೆ—) ಸ್ವಾತಂತ್ರ್ಯಾದ್ಧ್ಯಾಯತೀವಾಸೌ ಧ್ಯಾಯಯನ್ ಜೀವಮಂಜಸಾ ಶ್ರೀಹರಿಯು ಸರ್ವಸ್ವತಂತ್ರನಾದುದರಿಂದ ಜೀವನನ್ನು ಅಲ್ಪಧ್ಯಾನದಿಂದ ಕೂಡಿದವನನ್ನಾಗಿ ಮಾಡುತ್ತಾನೆ.) ಅಲ್ಪವಾದ ತನ್ನ ಸ್ವರೂಪವನ್ನೇ ಜೀವನಿಗೆ ತೋರ್ಪಡಿಸುತ್ತಾನೆ, ಎಂದು ಶ್ರುತಿಯು ॥ ೧೯ ॥

ಟೀ—ಸರ್ವಪ್ರಕಾರದಿಂದಲೂ ವಿನಾಶವಿಲ್ಲದಿರುವುದರಿಂದ ಈಶ್ವರನು ಸ್ವತಂತ್ರನೆಂದು ಹೇಳಿದ್ದು ಅಯುಕ್ತವು ಇವನು ಇವನನ್ನು ದೇಹದಿಂದ ಹೊರಪಡಿಸಿದನು ಎಂದು ಜೀವನಿಗೂ ಸ್ವಾತಂತ್ರ್ಯವು ತೋರುತ್ತದೆ ಎಂದರೆ —

ಭಾ ॥ (೧) ಯ ಏನಂ ಜೀವಂ ವೇತ್ತಿ ಹಂತಾರಂ ಸ್ವಾತಂತ್ರ್ಯೇಣ । ಅನ್ಯಥಾ ಮಯಾ ಹತಾಂಸ್ತ್ವಂ ಜಹೀತ್ಯಾದಿವಿರೋಧಃ ॥ (೨) ಚೇತನಂ ಪ್ರತಿ ಯ ಏನಮಿತಿ ಪರಮಾತ್ಮನೋಽಪಿ ಸಮಂ ॥ ೧೯ ॥

ಅ ॥ (೧) ಯಾವನು ಜೀವನನ್ನು ಸ್ವತಂತ್ರವಾಗಿ ದೇಹದಿಂದ ಹೊರಪಡಿಸುವವನನ್ನಾಗಿ ತಿಳಿಯುತ್ತಾನೋ, (ಯಾವನು ಈ ಜೀವನನ್ನು ಮತ್ತೊಬ್ಬ ಜೀವನಿಂದ ಸ್ವತಂತ್ರವಾಗಿ ದೇಹದಿಂದ ಹೊರಡಿಸಲ್ಪಟ್ಟವನನ್ನಾಗಿ ತಿಳಿಯುತ್ತಾನೋ ಅವರಿಬ್ಬರೂ ತಿಳಿಯುವುದಿಲ್ಲ) (ಬೇರೆ ಅರ್ಥವು ಏಕೆ ಆಗಲಾರದೆಂದರೆ) ಜೀವರು ಪರರ ಅಧೀನದಲ್ಲಿಯಾದರೂ ಕೊಲ್ಲುವುದಿಲ್ಲವೆಂದಾದರೆ—ನಾನು ಸಂಹರಿಸಿದವರನ್ನೇ ನೀನು

* ತದಧೀನತ್ವೇ ಸತಿ ತತ್ಸದೃಶತ್ವಂ, ಅದರ ಅಧೀನದಲ್ಲಿದ್ದು ಅದರ ಸದೃಶವಾದ.ದು.

ಕೊಲ್ಲ ಎಂದು ಈಶ್ವರನ ಅಧೀನವಾಗಿ ಜೀವರು ಕೊಂದವರೆಂದು ಹೇಳಿದ್ದು ಕೂಡದೆ ಹೋಗುವುದು (೨ (ಜೀವನು ನಿತ್ಯನೆಂದು ಹೇಳಿದ್ದು ಯುಕ್ತವಲ್ಲ ಇವನು ಚೈತ್ರನನ್ನು ಕೊಂದನು, ವೈತ್ರನಿಂದ ಚೈತ್ರನು ಸಂಹರಿಸಿಕೊಳ್ಳಲ್ಪಟ್ಟನು, ಇತ್ಯಾದಿ ವ್ಯವಹಾರದಿಂದ ಚೇತನನು ಅನಿತ್ಯನೆಂದು ತಿಳಿದುಬರುವುದರಿಂದ ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿಯೂ ಇದೇ ಶ್ಲೋಕವು) ಜೀವನಿಗೆ ಸ್ವತಂತ್ರವಾಗಿ ದೇಹವಿಯೋಗರೂಪವಾದ ಸಂಹಾರಕರ್ತೃತ್ವವು ಇಲ್ಲ ಎಂಬ ಪ್ರಥಮ ಪಕ್ಷದಲ್ಲಿ ಏನಂ ಎಂಬ ಪದವು ಜೀವನನ್ನು ಹೇಳುತ್ತದೆ ಜೀವನನ್ನು ದೇಹದಿಂದ ಹೊರಪಡಿಸಬೇಕಾದರೆ ಜೀವನಿಗೇನೇ ಸ್ವಾತಂತ್ರ್ಯವಿಲ್ಲ ಈಶ್ವರನಿಗೆ ಸ್ವಾತಂತ್ರ್ಯವಿದೆ ಈ ಪಕ್ಷದಲ್ಲಿ ಆದರೂ ಏನಂ=ಶ್ರೀಹರಿಯನ್ನು ಚೇತನನನ್ನು ಸಂಹರಿಸುವವನನ್ನಾಗಿ ಯಾವನು ತಿಳಿಯುತ್ತಾನೋ, ಆತನೂ ತಿಳಿಯುವುದಿಲ್ಲ, ಚೇತನಸಂಹಾರವನ್ನು ಜೀವನಂತೆ ಈಶ್ವರನೂ ಮಾಡುವುದಿಲ್ಲವಾದಕಾರಣ ಏನಂ ಎಂಬ ಪದವು ಜೀವಪರಮಾತ್ಮ ಇಬ್ಬರನ್ನೂ ಹೇಳುತ್ತದೆ || ೧೯ ||

ಪೀ—ಜೀವೇಶ್ವರರಿಗೆ ಉತ್ಪತ್ತಿ ವಿನಾಶಗಳಿಲ್ಲ ಶ್ರೀಹರಿಯ ದೇಹಕ್ಕೂ ಉತ್ಪತ್ತಿಯಿಲ್ಲದಿರುವುರಿಂದ ಸರ್ವಸ್ವಾತಂತ್ರ್ಯವು ಜೀವನಸ್ವರೂಪಕ್ಕೆ ಉತ್ಪತ್ತ್ಯಾದಿಗಳಿಲ್ಲದಿದ್ದರೂ ಶರೀರಕ್ಕೆ ಉತ್ಪತ್ತ್ಯಾದಿಗಳಿದ್ದುದರಿಂದ ಜೀವನು ಅಸ್ವತಂತ್ರನು, ಈ ವಿಷಯದಲ್ಲಿ ಮಂತ್ರವರ್ಣರೂಪ ಪ್ರಮಾಣವನ್ನು ಹೇಳುತ್ತಾರೆ—

ಗೀ || ನ ಜಾಯತೇ ಮ್ರಿಯತೇ ವಾ ಕದಾಚಿ-
ನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ |
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ || ೨೦ ||

ಅ || ಅಯಂ= ಈ ಜೀವನು, ನ ಜಾಯತೇ= ಸ್ವರೂಪದಿಂದ ಹುಟ್ಟುವುದಿಲ್ಲ ನ ಮ್ರಿಯತೇ ವಾ= ಮರಣಹೊಂದುವುದೂ ಇಲ್ಲ ಅಯಂ = ಈ ಜೀವನು ಭೂತ್ವಾ ವಾ= ಸ್ವರೂಪದಿಂದ ಇದ್ದೇ ಭೂಯಃ= ಮತ್ತು, ಭವಿತಾ ನ ಭವತಿ= ಈಶ್ವರಜ್ಞಾನದಂತೆ ಇರ ವವನು ಆಗುವುದಿಲ್ಲ ಅಜಃ= ಸ್ವರೂಪತಃ ಹುಟ್ಟದಿರುವವನು, ನಿತ್ಯಃ=ಸ್ವರೂಪತಃ ವಿನಾಶವಿಲ್ಲದವನು ಶಾಶ್ವತಃ= ಬಿಂಬೋಪಾಧಿಸನ್ನಿಧಿಯ ಉತ್ಪತ್ತಿ ನಾಶಗಳಿಲ್ಲದವನು ಪುರಾಣಃ= ಒಂದು ಶರೀರವನ್ನು ಬಿಟ್ಟು ದೇಹಾಂತರಗಳನ್ನು ಹೊಂದುವವನು (ದೇಹವು ನಾಶವಾಗುವುದರಿಂದ ಜೀವನಿಗೆ ನಾಶಬರಬಹುದೆಂದರೆ) ಶರೀರೇ= ದೇಹವು, ಹನ್ಯಮಾನೇ ವಾ= ನಾಶ ಹೊಂದಿದರೂ ಅಯಂ= ಜೀವನು, ನ ಹನ್ಯತೇ= ನಾಶಹೊಂದುವುದೇ ಇಲ್ಲ, (ನಿತ್ಯವಾದ ಜೀವಸ್ವರೂಪ ಉಪಾಧಿಯು ಇದ್ದಪ್ರಯುಕ್ತ ಶರೀರವು ನಾಶವಾದರೂ ಜೀವನಿಗೆ ನಾಶವಿಲ್ಲ) ಅಥವಾ— ನಾ=ಪರಮಪುರುಷನಾದ ಶ್ರೀಹರಿಯು ನ ಜಾಯತೇ ನ ಮ್ರಿಯತೇ=ದೇಹಸಂಯೋಗ ವಿಯೋಗವುಳ್ಳವನಾಗುವುದಿಲ್ಲ (ನಿತ್ಯದೇಹವುಳ್ಳವನೇ.) ಭೂತ್ವೈವ= ರಾಮಕೃಷ್ಣಾದಿರೂಪದಿಂದ ಸರ್ವದಾ ಇದ್ದೇ, ಭೂಯಃ ಭವಿತಾ= *ಕೆಲವು ವೇಳೆ ಜನರ ದೃಷ್ಟಿಗೆ ಗೋಚರನಾಗುವನು (ಜನರಂತೆ ದೇಹಸಂಯೋಗದಿಂದ ಹುಟ್ಟುವವನಲ್ಲ) ಅಯಂ= ಈ ಜೀವನೂ, ಅಜಃ ನಿತ್ಯಃ= ಅನಾದಿನಿತ್ಯನು, ಪುರಾಣಃ= ಇಚ್ಛೆಯಿಲ್ಲದಿದ್ದರೂ ಹಳೆದೇಹ ಬಿಟ್ಟು ಹೊಸದೇಹವನ್ನು ಹೊಂದುವುದರಿಂದ, ಶಾಶ್ವತಃ= ಯಾವಾಗಲೂ ಒಂದೇ ರೀತಿಯಾಗಿರುವವನು, ಅಂದರೆ—ಅನಾದ್ಯನಂತಕಾಲದಲ್ಲಿಯೂ ಪಾರತಂತ್ರ್ಯ ಮೊದಲಾದ ಸ್ವಭಾವವನ್ನು ಬಿಡದಿದ್ದವನು || ೨೧ ||

* ಕಿಂತು ಪಿರ್ಯೋಽಪಶ್ಯೈತನ್ಯಸುಖಾಂ ನಿತ್ಯಾಂ ಸ್ವಕಾಂ ತನುಂ | ಪ್ರದರ್ಶಯತಿ ಲೋಕಸ್ಯ ಜನಿರಿತ್ಯುಚ್ಯತೇ ಹರೇಃ ॥ ಎಂದು

ಭಾ ॥ (೧) ಅತ್ರ ಮಂತ್ರವರ್ಣೋಽಪ್ಯಸ್ತೀತ್ಯಾಹ । ನ ಜಾಯತ ಇತಿ ॥ (೨) ನ ಚೇಶ್ವರಜ್ಞಾನವದ್ಭೂತ್ವಾ ಭವಿತಾ । ತದ್ಧಿ ತದ್ವೈಕ್ಷತ । ದೇಶತಃ ಕಾಲತೋ ಯೋಽಸಾವವಸ್ಥಾತಃ ಸ್ವತೋಽನ್ಯತಃ । ಅವಿಲುಪ್ತಾವಬೋಧಾತ್ಮೇತ್ಯಾದಿಶ್ರುತಿಸ್ಮೃತಿಸಿದ್ಧಂ ॥ (೩) ಕುತಃ । ಅಜಾದಿಲಕ್ಷಣೇಶ್ವರಸರೂಪತ್ವಾತ್ ॥ (೪) ಶಾಶ್ವತಃ ಸದೈಕರೂಪಃ । ಪುರಂ ದೇಹಮಣತೀತಿ ಪುರಾಣಃ । ತಥಾಽಪಿ ನ ಹನ್ಯತೇ ಹನ್ಯಮಾನೇಽಪಿ ದೇಹೇ ॥೨೦॥

ಅ ॥ (೧) ಹಿಂದೆ ಹೇಳಿದ ಅರ್ಥದಲ್ಲಿ ಸಮ್ಮತಿಯಾಗಿ ನ ಜಾಯತೇ ಎಂಬ ಮಂತ್ರವರ್ಣವೂ ಇದೆ ಎನ್ನುತ್ತಾರೆ (೨) (ಜೀವನು ಸ್ವರೂಪದಿಂದ ಇದ್ದವನು ದೇಹಸಂಬಂಧದಿಂದ ಯುಕ್ತನಾಗುತ್ತಾನೆ. ಆದಕಾರಣ **ಭೂತ್ವಾ ಭವಿತಾ ವಾ** ಎಂದದ್ದು ಹೇಗೆ ಎಂದರೆ) ಜೀವನು ಸ್ವರೂಪದಿಂದ ಇದ್ದವನೇ ಆದರೂ ಯಾವ ವಿವಕ್ಷೆಯಿಂದಲೂ ಈಶ್ವರಜ್ಞಾನದಂತೆ ಆಗುವವನಲ್ಲ, (ಜೀವನು ಹುಟ್ಟುವುದಿಲ್ಲವೆಂದಾದರೆ ಈಶ್ವರ ಜ್ಞಾನವು ವೃದ್ಧಿಹ್ರಾಸಾದಿಗಳಿಲ್ಲದೆನೇ ಅಚಿಂತ್ಯ ಶಕ್ತಿಯಿಂದ ಇದೆ ಎಂದು ವ್ಯವಹಾರವು ಇದ್ದಂತೆಯೇ ಜೀವನಲ್ಲಿಯೂ ಹುಟ್ಟಿದನೆಂಬ ವ್ಯವಹಾರವು ಅಚಿಂತ್ಯಶಕ್ತಿನಿಮಿತ್ತಕವೆಂದು ಆಗಬಹುದಷ್ಟೆ ಎಂದರೆ- **ನಾಯಂ ಭೂತ್ವಾ** ಎಂದಿದ್ದರೂ) ತದ್ಧಿ=ಈಶ್ವರಜ್ಞಾನದಲ್ಲಿ ವೃದ್ಧಿಹ್ರಾಸಾದಿಗಳಿಲ್ಲವೆಂಬುದು (1) ಪರಬ್ರಹ್ಮನು ನಿರ್ವಿಕಾರನಾಗಿದ್ದು ಕಂಡನು, (2) ಕೀಟಕದೇಶವಾಸಾದಿಗಳಿಂದಲೂ, ಬಹುಕಾಲ ವ್ಯವಧಾನದಿಂದಲೂ ಕಲಿಕಾಲಾದ್ಯಭಿಮಾನದಿಂದಲಾಗಲೀ, ಕೌಮಾರಾದ್ಯವಸ್ಥೆಗಳಿಂದಲೂ, ಸ್ವಪ್ನಾದ್ಯವಸ್ಥೆಗಳಿಂದಲೂ ಯಾವ ಕರ್ಮದಿಂದಲೂ, ಶಾಪಾದಿಗಳಿಂದಲೂ, ಶ್ರೀಹರಿಯು ವಿನಾಶಹೊಂದದ ವ್ಯತ್ಯಾಸವಿಲ್ಲದ ಜ್ಞಾನವುಳ್ಳವನು ಇದುಮೊದಲಾದ ಶ್ರುತಿಸ್ಮೃತಿಗಳಿಂದ ಸಿದ್ಧವಾಗಿದೆ (೩) ಕುತಃ=ಜೀವನಿಗೆ ಉತ್ಪತ್ತಿನಾಶಗಳಿಲ್ಲದಿರಲಿಕ್ಕೆ ಕಾರಣವೇನು? ಎಂದರೆ—ಜನನಮರಣಗಳಿಲ್ಲದಿರುವ ಶ್ರೀಹರಿಗೆ ಜ್ಞಾನಾನಂದಾದಿ ಕಲವು ಗುಣಗಳಿಂದ ಸದೃಶನಾಗಿರುವುದರಿಂದ (೪) (ನಿತ್ಯಃ ಎಂದು ಹೇಳಿದ್ದರಿಂದ ಶಾಶ್ವತಃ ಎಂಬುದು ಪುನರುಕ್ತವಾಯಿತೆಂದರೆ) ಶಾಶ್ವತಃ=ಸದಾ ಒಂದೇ ರೂಪವುಳ್ಳವನು, ಪಾರತಂತ್ರ್ಯವನ್ನು ಬಿಡದಿರುವವನು (ಜೀವನು ಹುಟ್ಟಿದನೆಂಬ ವ್ಯವಹಾರಕ್ಕೆ ಕಾರಣವೇನೆಂದರೆ ) ಪುರಾಣಃ=ಹಳೇದೇಹವನ್ನು ಬಿಟ್ಟು ದೇಹಾಂತರವನ್ನು ಹೊಂದುತ್ತಾನೆ (ದೇಹಾಂತರವನ್ನು ಹೊಂದುವವನೆಂದಾದರೆ ಉಪಾಧಿಭೂತವಾದ ದೇಹವು ನಾಶವನ್ನು ಹೊಂದುವುದರಿಂದ ಕನ್ನಡಿಯು ನಷ್ಟವಾದರೆ ಪ್ರತಿಬಿಂಬವು ನಾಶಹೊಂದುವಂತೆ ಜೀವನು ನಾಶಹೊಂದುವನೆಂದರೆ—) ತಥಾಽಪಿ=ಜೀವನು ದೇಹಾಂತರವನ್ನು ಹೊಂದುವವನಾದರೂ ಶರೀರವು ನಷ್ಟವಾಗುವುದಾದರೂ ಜೀವನು ನಾಶಹೊಂದುವುದಿಲ್ಲ ॥ ೨೦ ॥

ಪೀ—ಜೀವರು ನಿತ್ಯರು ಇತ್ಯಾದಿಗಳನ್ನು ಮೊದಲೇ ಹೇಳಿದಕಾರಣ ಈ ಶ್ಲೋಕವು ಏತಕ್ಕೆಂದರೆ—

ತಾ ॥ (೧) ಜೀವೇಶ್ವರಯೋರ್ನಿತ್ಯತ್ವೇ ಮಂತ್ರವರ್ಣೋಽಪ್ಯಸ್ತೀತ್ಯಾಹ । ನ ಜಾಯತೇ ಮ್ರಿಯತ ಇತಿ ॥ (೨) ಅಯಂ ನಾ ಪರಮಪುರುಷೋ ಭೂತ್ವಾ ವಿದ್ಯಮಾನ ಏವ ದೇಹಸಂಬಂಧರೂಪೇಣಾಪಿ ಭವಿತಾ ನ । ಮರಣಂ ತು ದೇಹವಿಯೋಗ ಇತಿ ಪ್ರಸಿದ್ಧಮೇವ ॥ (೩) ನ ಹಿ ಘಟಾದೀನಾಂ ಮರಣವ್ಯವಹಾರಃ । ಸ್ವರೂಪನಾಶಃ ಕ್ವೈಮುತ್ಯೇನೈವ ಸಿದ್ಧಃ । ಅಯಂ ಜೀವೋಽಪ್ಯಜೋ ನಿತ್ಯಶ್ಚ । ಅನ್ಯಥಾ ಪುನರುಕ್ತೇಃ॥ (೪) ಶಾಶ್ವತಶ್ಚ । ನ ಕದಾಚಿದಸ್ವಾತಂತ್ರ್ಯಾದಿಕಂ ಜೀವಸ್ವರೂಪಂ ಜಹಾತಿ ॥ (೫) ಅಲ್ಪಶಕ್ತಿರಸಾರ್ವಜ್ಞ್ಯಂ ಪಾರತಂತ್ರ್ಯಮಪೂರ್ಣತಾ । ಉಪಜೀವಕತ್ವಂ ಜೀವತ್ವ-

**ಮಿಾಶತ್ವಂ ತದ್ವಿಪರ್ಯಯಃ || ಸ್ವಾಭಾವಿಕಂ ತಯೋಃರೇತನ್ನಾನ್ಯಥಾ ಸ್ಯಾತ್ಕಥಂ-(ದಾ)ಚನ | ವದಂತಿ ಶಾಶ್ವತಾವೇತಾವತ ಏವ ಮಹಾಜನಾಃ || ಇತಿ ಮಹಾವಿಷ್ಣು ಪುರಾಣೇ || ಪುರಾಣ್ಯಣತಿ ಗಚ್ಛತೀತಿ ಪುರಾಣಃ || ೨೦ ||**

ಅ || (೧) ಜೀವೇಶ್ವರರು ಇಬ್ಬರೂ ನಿತ್ಯರೆಂಬ ವಿಷಯದಲ್ಲಿ ಮಂತ್ರವರ್ಣವೂ ಇದೆ ಎನ್ನುತ್ತಾರೆ--ನ ಜಾಯತೇ ಎಂಬುದರಿಂದ (೨) (ಇಲ್ಲಿ ಶ್ರೀಹರಿಯನ್ನು ಹೇಳುವ ಪದವು ಇಲ್ಲದಿರುವುದರಿಂದ ಇದು ಹೇಗೆ ಕೂಡುತ್ತದೆಂದರೆ **ನಾಯಂ ಭೂತ್ವಾ** ಎಂಬಲ್ಲಿ ದೇಹಕ್ಕೂ ಉತ್ಪತ್ತಿಯಿಲ್ಲವೆಂದು ಹೇಳಿದೆ ಇದು ಶ್ರೀಹರಿಗೇನೇ ಜ್ಞಾಪಕವು ಅದುಕಾರಣ ಪೂರ್ವಾರ್ಧವು ಶ್ರೀಹರಿಯನ್ನೇ ಹೇಳುತ್ತದೆನ್ನುತ್ತಾರೆ ) ಈ ಸರ್ವೋತ್ತಮನಾದ ಶ್ರೀಹರಿಯು ಸದಾ ಇದ್ದವನಾಗಿಯೇ ದೇಹಸಂಬಂಧರೂಪದಿಂದಲೂ ಹುಟ್ಟುವವ ನಲ್ಲ (ಮತ್ತು **ನ ಮ್ರಿಯತೇ** ಎಂಬುವುದರಿಂದ ದೇಹವಿಯೋಗವಿಲ್ಲವೆಂದು ಶ್ರುತವಾಗುತ್ತದೆ. ಅದು ಶ್ರೀಹರಿಯ ಲಿಂಗವಾದುದರಿಂದ ಪೂರ್ವಾರ್ಧವು ವಿಷ್ಣುವನ್ನು ಹೇಳುತ್ತದೆನ್ನುತ್ತಾರೆ) ಮರಣವೆಂದರೆ ದೇಹವಿಯೋಗವೆಂದು ಪ್ರಸಿದ್ಧವೇ ಆಗಿದೆ (೩) (ದೇಹವಿಯೋಗದಲ್ಲಿದ್ದಂತೆಯೇ ಸ್ವರೂಪನಾಶದಲ್ಲಿಯೂ ಮರಣಶಬ್ದವು ಪ್ರಸಿದ್ಧವಾಗಿರುವುದರಿಂದ ಆ ಅರ್ಥವು ಏಕೆ ಆಗಲಾರದೆಂದರೆ) ಘಟಾದಿಗಳು ಮೃತ ಗಳಾದವು ಎಂದು ಘಟಾದಿಗಳಲ್ಲಿ ಮರಣವ್ಯವಹಾರವು ಇಲ್ಲ ಶ್ರೀಹರಿಯ ದೇಹಕ್ಕೇನೇ ನಾಶವಿಲ್ಲದಿರು ವಾಗ ಸ್ವರೂಪಕ್ಕೆ ನಾಶವಿಲ್ಲವೆಂಬುದು ಸುತರಾಂ ಸಿದ್ಧವಾಗುತ್ತದೆ (ಈ ಮಂತ್ರವರ್ಣದಲ್ಲಿ ಜೀವನಿಗೆ ಉತ್ಪತ್ತ್ಯಾದಿಗಳಿಲ್ಲವೆಂದು ಶ್ರುತವಾಗುವುದಿಲ್ಲವೆಂದರೆ ಉತ್ತರಾರ್ಧವು ಜೀವನನ್ನು ಹೇಳುತ್ತದೆನ್ನುತ್ತಾರೆ ) ಈ ಜೀವನೂ ಉತ್ಪತ್ತಿಯಿಲ್ಲದವನು, ಅನಾದಿನಿತ್ಯನು, ಇಲ್ಲಿಯೂ ಶ್ರೀಹರಿಯನ್ನೇ ಹೇಳುತ್ತದೆಂದು ಹೇಳಿ ದರೆ **ನ ಜಾಯತೇ ಅಜಃ** ಎಂದು ಎರಡುಸಲ ಹೇಳಿದ ಕಾರಣ ಪುನರುಕ್ತಿದೋಷವು ಬರುವುದು ಈ ಜೀವನೇ ಶಾಶ್ವತನಾಗಿರುತ್ತಾನೆ ಯಾವಾಗಲೂ ಅಸ್ವಾತಂತ್ರ್ಯ ಮೊದಲಾದ ಜೀವಸ್ವರೂಪವನ್ನು ಬಿಡುವುದಿಲ್ಲ (೪) (ಜೀವನಿಗೆ ಅಸ್ವಾತಂತ್ರ್ಯಮೊದಲಾದುದು ಸ್ವರೂಪವು, ಅದನ್ನು ಬಿಡದಿರುವುದರಿಂದ **ಶಾಶ್ವತಃ** ಎನಿಸುತ್ತಾನೆ ಎಂಬಲ್ಲಿ ಪ್ರಮಾಣ ಹೇಳುತ್ತಾರೆ.) ಅಲ್ಪವಾದ ಸಾಮರ್ಥ್ಯವು, ಅಲ್ಪಜ್ಞತ್ವವು, ಪರಾ ಧೀನತೆಯು, ಪೂರ್ಣತೆಯಿಲ್ಲದಿರುವಿಕೆ, ಶ್ರೀಹರಿಯನ್ನುಪಜೀವಿಸಿಕೊಂಡಿರುವಿಕೆ, ಇತ್ಯಾದಿಗಳು ಜೀವರ ಧರ್ಮಗಳು ಇದಕ್ಕಿಂತ ವಿಪರೀತವಾದುದು ಶ್ರೀಹರಿಯ ಧರ್ಮವು, ಇವು ಜೀವೇಶ್ವರರಿಗೆ ಸ್ವಾಭಾವಿಕ ವಾಗಿರತಕ್ಕುದು ಹೇಗೂ ಇದು ವ್ಯತ್ಯಾಸವಾಗಲಾರದು ಆದುದರಿಂದಲೇ ಮಹಾಜನರು ಇವರಿಬ್ಬರನ್ನು ಶಾಶ್ವತರೆಂದು ಹೇಳುತ್ತಾರೆ, ಎಂದು ಮಹಾವಿಷ್ಣುಪುರಾಣದಲ್ಲಿದೆ (ಆದರೂ **ಪುರಾಣಃ** ಎಂದು ಎರಡು ಸಲ ಹೇಳಿದಂತೆಯೇ ಆಯಿತು, ಎಂದರೆ) (ಜನ್ಮಾಂತರೀಯ ಕರ್ಮಾನುಸಾರ) ಅನೇಕ ಶರೀರಗಳನ್ನು ಹೊಂದುವುದರಿಂದ **ಪುರಾಣಃ** ಎನಿಸುತ್ತಾನೆ (ಅನಾದಿಯೆಂದರ್ಥವಲ್ಲ ಆದಕಾರಣ ಪುನರುಕ್ತಿ ದೋಷವಿಲ್ಲ ) || ೨೦ ||

## ಗೀ || ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಂ |
## ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಂ || ೨೧ ||

ಅ || ಪಾರ್ಥ=ಅರ್ಜುನನೇ, ಯಃ=ಯಾವಾತನು, ಏನಂ=ಈ ಜೀವವನ್ನು, ಅವಿನಾಶಿನಂ=ಬಿಂಬ ನಾಶಾದಿನಿಮಿತ್ತಕ ನಾಶವಿಲ್ಲದವನೆಂದೂ ನಿತ್ಯಂ=ಸ್ವಾಭಾವಿಕನಾಶವಿಲ್ಲದವನೆಂದೂ ಅಜಂ=ಹುಟ್ಟುವವ ನಲ್ಲವೆಂದೂ ಅವ್ಯಯಂ=ಸ್ವರೂಪಕ್ಕೆ ವಿಕಾರವಿಲ್ಲದವನೆಂದೂ ವೇದ=ತಿಳಿಯುತ್ತಾನೋ, ಅಥವಾ ಸ್ವರೂಪತಃನಾಶವಿಲ್ಲದಿರುವ, ನಿರ್ವಿಕಾರನಾದ ಶ್ರೀಹರಿಯನ್ನು ಸರ್ವಸ್ವತಂತ್ರನನ್ನಾಗಿ ತಿಳಿಯುತ್ತಾನೋ,

ಸಃ=ಆ, ಪುರುಷಃ=ಜ್ಞಾನಿಯು, ಕಥಂ=ಹೇಗೆ, ಕಂ=ಯಾರನ್ನು ಘಾತಯತಿ ಕೊಲ್ಲಿಸುವನು? (ಕೊಲ್ಲಿಸುವುದಿಲ್ಲ) ಕಂ=ಯಾರನ್ನು ಹಂತಿ=ಕೊಲ್ಲುತ್ತಾನೆ. ॥ ೨೧ ॥

ಪೀ—ವೇದಾವಿನಾಶಿನಂ ಎಂಬುದರಿಂದ ಪುನಃ ಜೀವನಿಗೆ ನಾಶವಿಲ್ಲ ಇತ್ಯಾದಿಗಳನ್ನು ಏಕೆ ಹೇಳುವುದೆಂದರೆ—

ಭಾ ॥ ಅತೋ ಯ ಏವಂ ವೇದ ಸ ಕಥಂ ಕಂ ಘಾತಯತಿ ಹಂತಿ ವಾ । ಅವಿನಾಶಿನಂ ನೈಮಿತ್ತಿಕನಾಶರಹಿತಂ । ನಿತ್ಯಂ ಸ್ವಾಭಾವಿಕನಾಶರಹಿತಂ । ಅಥವಾ ಅವಿನಾಶಿನಂ ದೋಷಯೋಗರಹಿತಂ । ನಿತ್ಯಂ ಸದಾಭಾವಿನಂ । ಇತಿ ಸರ್ವತ್ರ ವಿವೇಕಃ । ದೋಷಯುಕ್ತಪುರುಷಾದಿಷು ನಷ್ಟಶಬ್ದಪ್ರಯೋಗಾತ್ ॥ ೨೧ ॥

ಅ ॥ ಹಿಂದೆ ಹೇಳಿದ ಪ್ರಮಾಣಗಳಿಂದ ಯಾವನು ಶ್ರೀಹರಿಗೆ ವಿನಾಶಾದಿಗಳಿಲ್ಲ ಇತ್ಯಾದಿ ಪ್ರಕಾರ ತಿಳಿಯುತ್ತಾನೋ, ಆತನು ಹೇಗೆ ಯಾರನ್ನು ಕೊಲ್ಲಿಸುತ್ತಾನೆ, ಅಥವಾ ಕೊಲ್ಲುತ್ತಾನೆ ಅವಿನಾಶಿನಂ=ಬಿಂಬನಾಶಾದಿಪ್ರಯುಕ್ತ ನಾಶವಿಲ್ಲದವನನ್ನು, ನಿತ್ಯಂ=ಕಾಲಕೃತನಾಶವಿಲ್ಲದವನನ್ನು, ಅಥವಾ ಅವಿನಾಶಿನಂ=ದೋಷಸಂಬಂಧವಿಲ್ಲದವನನ್ನು, ನಿತ್ಯಂ=ಯಾವಾಗಲೂ ಇರುವವನನ್ನು, ಹೀಗೆ ಎಲ್ಲೆಡೆಯಲ್ಲಿಯೂ, ಶಬ್ದಾರ್ಥಗಳ ವಿಚಾರಮಾಡತಕ್ಕದ್ದು (ಅವಿನಾಶಿನಂ ಎಂಬುವುದಕ್ಕೆ ದೋಷಸಂಬಂಧವಿಲ್ಲದವನೆಂದು ಅರ್ಥವು ಹೇಗೆ ಸಿಗುತ್ತದೆಂದರೆ) ದೋಷವಿರುವ ಪುರುಷಾದಿಗಳಲ್ಲಿ ನಷ್ಟಃ ಎಂಬ ಶಬ್ದವನ್ನು ಪ್ರಯೋಗಿಸುತ್ತಾರೆ ॥ ೨೧ ॥

ತಾ ॥ (೧) ಅವಿನಾಶಿನಂ ಶರೀರಾಪಾಯಾದಿವರ್ಜಿತಂ । ನಿತ್ಯಂ ಸ್ವರೂಪತಃ । ಏನಂ ಪರಮೇಶ್ವರಂ ॥ (೨) ಕರ್ತೃತ್ವಂ ತು ಸ್ವತಂತ್ರತ್ವಂ ತದೇಕಸ್ಯ ಹರೇರ್ಭವೇತ್ । ತಚ್ಚಾವ್ಯಯಂ ತಸ್ಯ ಜಾನನ್ಕಥಂ ಕರ್ತಾ ಸ್ವಯಂ ಭವೇತ್ । ಇತಿ(ತ್ಯಾದಿ) ಪರಮಶ್ರುತಿಃ॥ ಅನ್ಯಥಾ ಅವಿನಾಶಿನಂ ನಿತ್ಯಮಿತಿ ಪುನರುಕ್ತಿಃ ॥ ೨೧ ॥

ಅ ॥ (೧) (ಅವಿನಾಶಿ ನಿತ್ಯಪದಗಳಿಗೆ ಪುನರುಕ್ತಿ ದೋಷವನ್ನು ಪರಿಹರಿಸುವುದಕ್ಕಾಗಿ ಬೇರೆ ಬೇರೆ ಅರ್ಥ ಹೇಳುತ್ತಾರೆ) ಅವಿನಾಶಿನಂ=ದೇಹಕ್ಕೆ ಕೆಡಕು ಮೊದಲಾದುದು ಇಲ್ಲದವನು, ನಿತ್ಯಂ=ಸ್ವರೂಪತಃ ನಾಶವಿಲ್ಲದವನು, ಏನಂ=ಈ ಪರಮಾತ್ಮನನ್ನು, (೨) ಸರ್ವಕರ್ತೃತ್ವವೂ ಸರ್ವಸ್ವಾತಂತ್ರ್ಯವೂ ಶ್ರೀಹರಿಯೊಬ್ಬನಿಗೇನೇ ಇರುತ್ತದೆ. ಅದು ಕ್ಷೀಣವಾಗದಿರುವುದು ಹೀಗೆ ತಿಳಿದವನು ತಾನು ಸೃಷ್ಟಿಕರ್ತನೆಂದು ಅಭಿಮಾನವುಳ್ಳವನು ಹೇಗೆ ಆಗುವನೆಂದು ಪರಮಶ್ರುತಿಯು ಜೀವನನ್ನು ಹೇಳತಕ್ಕುದೆಂದು ಇಟ್ಟುಕೊಂಡರೆ—ಅವಿನಾಶಿನಂ ನಿತ್ಯಂ ಎಂದು ಎರಡುಸಲ ಹೇಳಿದಂತೆಯೇ ಆಯಿತು ॥ ೨೧ ॥

ಗೀ ॥ ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋಽಪರಾಣಿ ।
ತಥಾ ಶರೀರಾಣಿ ವಿಹಾಯ ಜೀರ್ಣಾ-
ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ ೨೨ ॥

ಅ ॥ ನರಃ=ಮನುಷ್ಯನು, ಯಥಾ=ಹೇಗೆ ಜೀರ್ಣಾನಿ=ಹಳೆಯದಾದ, ವಾಸಾಂಸಿ=ಬಟ್ಟೆಗಳನ್ನು, ವಿಹಾಯ=ಬಿಟ್ಟು, ನವಾನಿ=ಹೊಸದಾದ, ಅಪರಾಣಿ=ಬೇರೆ ಬಟ್ಟೆಗಳನ್ನು, ಗೃಹ್ಣಾತಿ=ತೆಗೆದುಕೊಳ್ಳುತ್ತಾನೋ ತಥಾ=ಹಾಗೆಯೇ, ದೇಹೀ=ಜೀವನು, ಜೀರ್ಣಾನಿ=ಮುದಿಯಾದ, ಶರೀರಾಣಿ=ದೇಹಗಳನ್ನು, ವಿಹಾಯ=ಬಿಟ್ಟು, ನವಾನಿ=ಹೊಸದಾದ, ಅನ್ಯಾನಿ=ಬೇರೆ ಶರೀರಗಳನ್ನು, ಸಂಯಾತಿ=ಹೊಂದುತ್ತಾನೆ ॥ ೨೨ ॥

ಪೀ–ದೇಹಗಳು ಹೋಗುತ್ತವೆ, ಬರುತ್ತವೆ, ಆದರೂ ಜೀವನೊಬ್ಬನೇ ಎಂಬುವುದು **ದೇಹಿನೋಽಸ್ಮಿನ್** ಎಂಬುವಲ್ಲಿಯೇ ದೃಷ್ಟಾಂತಕೊಟ್ಟು ಹೇಳಿರುತ್ತಾರೆ ಅದುಕಾರಣ ಈ ಶ್ಲೋಕವು ವ್ಯರ್ಥವೆಂದರೆ–

**ಭಾ ॥ ದೇಹಾತ್ಮವಿವೇಕಾನುಭವಾರ್ಥಂ ದೃಷ್ಟಾಂತಮಾಹ । ವಾಸಾಂಸೀತಿ ॥ ೨೨ ॥**

ಅ ॥ (ಬಾಲ್ಯ ಶರೀರಕ್ಕೂ, ಯೌವನ ಶರೀರಕ್ಕೂ ಹೆಚ್ಚು ಭೇದವಿಲ್ಲ, ಆದಕಾರಣ **ದೇಹಿನೋಽಸ್ಮಿನ್** ಎಂಬುವುದರಿಂದ ದೇಹವು ಬೇರೆ, ಜೀವನು ಬೇರೆ ಎಂಬುದು (ಅಂದರೆ ದೇಹಕ್ಕೆ ನಾಶವಿದೆ ಜೀವನಿಗೆ ನಾಶವಿಲ್ಲ, ಎಂಬುದು) ಸ್ಪಷ್ಟವಾಗಿ ಅನುಭವಕ್ಕೆ ಬರುವುದಿಲ್ಲ) ದೇಹಕ್ಕೂ ಜೀವನಿಗೂ ಭೇದವು ಸ್ಪಷ್ಟವಾಗಿ ಅನುಭವಕ್ಕೆ ಬರುವುದಕ್ಕಾಗಿ **ವಾಸಾಂಸಿ** ಎಂಬುದರಿಂದ ಹಿಂದೆ ಹೇಳಿದ್ದಕ್ಕಿಂತ ವಿಲಕ್ಷಣವಾದ ದೃಷ್ಟಾಂತವನ್ನೂ ದಾರ್ಷ್ಟಾಂತಿಕವನ್ನೂ ಹೇಳಿರುತ್ತಾರೆ ॥ ೨೨ ॥

ಪೀ –ಈಶ್ವರವಿಷಯದಲ್ಲಿ ಶೋಕವಿಲ್ಲವಾದರೂ ಜೀವರಿಗೆ ಸರ್ವಲೋಕಪ್ರಸಿದ್ಧಗಳಾದ ಜನನಮರಣಗಳಿದ್ದಪ್ರಯುಕ್ತ ಅದರ ವಿಷಯದಲ್ಲಿ ದುಃಖವು ಬರುವುದು, ಎಂದರೆ—

**ತಾ ॥ ಜೀವಸ್ಯಾಪಿ ಶರೀರಸಂಯೋಗವಿಯೋಗಾವೇವ ಜನಿಮೃತೀ । ಯತಸ್ತತೋ ನ ದುಃಖಕಾರಣಮಿತ್ಯಾಹ । ವಾಸಾಂಸೀತಿ ॥ ೨೨ ॥**

ಅ ॥ ಶರೀರಸಂಯೋಗ ವಿಯೋಗಗಳು ಬಾಲ್ಯಾದ್ಯವಸ್ಥೆಗಳಂತೆ ಶೋಕಕ್ಕೆ ಕಾರಣಗಳಲ್ಲವೆಂದು ಹೇಳುವುದಾದರೆ—ಜನನಮರಣಗಳೂ ಶೋಕಕ್ಕೆ ಕಾರಣಗಳಲ್ಲ, ಏಕೆಂದರೆ ದೇಹಸಂಯೋಗವಿಯೋಗಗಳೇ ಜನನಮರಣಗಳು, ಎಂದು **ವಾಸಾಂಸಿ** ಎನ್ನುವುದರಿಂದ ಹೇಳುತ್ತಾರೆ. ॥ ೨೨ ॥

**ಗೀ ॥ ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥ ೨೩ ॥**

ಅ ॥ ಏನಂ=ಜೀವನನ್ನು, ಶಸ್ತ್ರಾಣಿ ಆಯುಧಗಳು=ನ ಛಿಂದಂತಿ=ಭೇದಿಸುವುದಿಲ್ಲ, ಪಾವಕಃ=ಬೆಂಕಿಯು, ಏನಂ=ಜೀವನನ್ನು, ನ ದಹತಿ=ಸುಡುವುದಿಲ್ಲ, ಆಪಃ=ಜಲವು ಏನಂ=ಜೀವನನ್ನು, ನ ಕ್ಲೇದಯಂತಿ=ತೋಯಿಸುವುದಿಲ್ಲ (ಅಂದರೆ–ಕ್ಷೀಣೀಕರಿಸುವುದಿಲ್ಲ) ಮಾರುತಃ=ಗಾಳಿಯು, ನ ಶೋಷಯತಿ=ಒಣಗಿಸುವುದಿಲ್ಲ ॥ ೨೩ ॥

**ಭಾ ॥ ಸ್ವತಃ ಪ್ರಾಯೋ ನಿಮಿತ್ತೈಶ್ಚಾವಿನಾಶಿನೋಽಪಿ ಕೇನಚಿನ್ನಿಮಿತ್ತವಿಶೇಷೇಣ ಸ್ಯಾತ್ ಕಳಚ್ಛೇದವತ್ ಇತ್ಯತೋ ವಿಶೇಷನಿಮಿತ್ತಾನಿ ನಿಷೇಧತಿ । ನೈನಮಿತಿ ॥ ೨೩ ॥**

ಅ || ಕಾಲಪ್ರಯುಕ್ತವಾಗಲೀ, ಹೆಚ್ಚಾಗಿ ಬಿಂಬನಾಶಾದಿ ನಿಮಿತ್ತಗಳಿಂದಲಾಗಲೀ, ಜೀವಚೈತನ್ಯಕ್ಕೆ ವಿನಾಶವಿಲ್ಲವಾದರೂ ಧಕ್ಷಪ್ರಜಾಪತಿಯ ಶಿರಸ್ಸಿನ ಛೇದದಂತೆ ಯಾವುದಾದರೂ ಶಸ್ತ್ರ ಮೊದಲಾದ ಪ್ರಬಲಕಾರಣಗಳಿಂದ ನಾಶವು ಬರಲಿ, ಎಂದರೆ—ನೈನಂ ಎಂಬುದರಿಂದ ವಿನಾಶದ ವಿಶಿಷ್ಟ ನಿಮಿತ್ತ (ಕಾರಣ)ಗಳನ್ನು ನಿಷೇಧಿಸುತ್ತಾರೆ || ೨೩ ||

ತಾ || ಕಾರಣತೋಽಪಿ ನೇಶ್ವರಸ್ಯಾನ್ಯಥಾತ್ವಮಿತ್ಯಾಹ | ನೈನಂ ಛಿಂದಂತೀತಿ || ೨೩ ||

ಅ || ಯಾವುದೊಂದು ವಿಧವಾದ ಕಾರಣದಿಂದಲೂ, ಶ್ರೀಹರಿಗೆ ಛೇದಾದಿಗಳು ಇಲ್ಲವೆಂದು ನೈನಂ ಛಿಂದಂತಿ ಎಂಬುದರಿಂದ ಹೇಳುತ್ತಾರೆ || ೨೩ ||

ಪೀ—ಜೀವನಿಗೆ ಸ್ವತಃ ನಾಶಾದಿಗಳಿಲ್ಲದಿದ್ದರೂ ಯುದ್ಧದಲ್ಲಿ ಶಸ್ತ್ರಾದಿಗಳಿಂದ ಛೇದಭೇದಾದಿಗಳು ಬರಬಹುದಷ್ಟೆ ಎಂದರೆ—

**ಗೀ || ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ |**
**ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ || ೨೪ ||**

ಅ || ಅಯಮಯಂ=ಈ ಎಲ್ಲಾ ಜೀವರೂ, ಅಚ್ಛೇದ್ಯಃ=ಆಯುಧಗಳಿಂದ ತುಂಡರಿಸಲಾರದಿದ್ದವರು, ಅದಾಹ್ಯಃ=ಸುಡಲಾರರು, ಅಕ್ಲೇದ್ಯಃ=ನೆನಯಿಸಲಾರರು, ಅಶೋಷ್ಯಃ=ಒಣಗಿಸಲಾರರು (ಶ್ರೀಹರಿಯಂತೆಯೇ ಜೀವರಿಗೂ ಅಚ್ಛೇದ್ಯತ್ವಾದಿಗಳಿದ್ದರೆ ಸರ್ವಸಾಮ್ಯವು ಬರುವುದರಿಂದ ಶ್ರೀಹರಿಯನ್ನು ಪೂಜಿಸುವುದು ಏತಕ್ಕೆಂದರೆ ಜೀವರೆಲ್ಲರೂ ಶ್ರೀಹರಿಯ ಅಧೀನರೆನ್ನುತ್ತಾರೆ) ಅಯಂ=ಈ ಜೀವರು, ನಿತ್ಯಃ ಸರ್ವಗತಃ ಸ್ಥಾಣುಃ=ನಿತ್ಯದಲ್ಲಿ ಸರ್ವತ್ರವ್ಯಾಪ್ತನಾದ ಶ್ರೀಹರಿಯ ಅಧೀನದಲ್ಲಿರುವವರು. ಅಣುಸ್ವರೂಪರು, ಅಚಲಃ=ವರಾದಿಗಳಿಂದಲೂ ಶ್ರೀಹರಿಯ ಅಧೀನರೆಂಬುದು ತಪ್ಪದಿರುವವರು, ಸನಾತನಃ=ವಿಧಿನಿಷೇಧಬದ್ಧರಾದ ಪ್ರಯುಕ್ತ ಸದಾ ಶ್ರೀಹರಿಯ ಅಧೀನರು || ೨೪ ||

ಪೀ—ಅಚ್ಛೇದ್ಯೋಽಯಂ ಇತ್ಯಾದಿಗಳು ಪುನರುಕ್ತವಾಯಿತೆಂದರೆ—

**ಭಾ || (೧) ವರ್ತಮಾನನಿಷೇಧಾತ್ ಸ್ಯಾದುತ್ತರತ್ರೇತ್ಯತ ಆಹ | ಅಚ್ಛೇದ್ಯ ಇತಿ || (೨) ವರ್ತಮಾನಾದರ್ಶನಾದ್ಯುಕ್ತಮಯೋಗ್ಯತ್ವಮಿತಿ ಸೂಚಯತಿ ವರ್ತಮಾನಾಪದೇಶೇನ || (೩) ಕುತೋಽಯೋಗ್ಯತಾ ನಿತ್ಯಸರ್ವಗತಾದಿವಿಶೇಷಣೇಶ್ವರಸರೂಪತ್ವಾತ್ || (೪) ಶಾಶ್ವತ ಇತ್ಯೇಕರೂಪತ್ವಮಾತ್ರಮುಕ್ತಂ | ಸ್ಥಾಣುಶಬ್ದೇನ ನೈಮಿತ್ತಿಕಮನ್ಯಥಾತ್ವಂ ನಿವಾರಯತಿ || (೫) ನಿತ್ಯತ್ವಂ ಸರ್ವಗತತ್ವವಿಶೇಷಣಂ | ಅನ್ಯಥಾ ಪುನರುಕ್ತೇಃ | ಐಕ್ಯೋಕ್ತಾವಪ್ಯನುಕ್ತವಿಶೇಷಣೋಪಾದಾನಾನ್ನೇಶ್ವರೈಕ್ಯೇ ಪುನರುಕ್ತಿಃ|| (೬) ಯುಕ್ತಾಶ್ಚ ಬಿಂಬಧರ್ಮಾಃ ಪ್ರತಿಬಿಂಬೇಽವಿರೋಧೇ || (೭) ತತ್ರಾ ಚ ರೂಪಂ ರೂಪಂ ಪ್ರತಿರೂಪೋ ಬಭೂವ, ಆಭಾಸ ಏವ ಚೇತ್ಯಾದಿಶ್ರುತಿಸ್ಮೃತಿಸಿದ್ಧಾ || ೧ ||**

ಅ || (೧) ನೈನಂ ಛಿಂದಂತಿ ಎಂಬಲ್ಲಿ ಛಿಂದಂತಿ ಇದುಮೊದಲಾದ ಪ್ರಕಾರ ಲಟ್ ಪ್ರಯೋಗಿಸಿದುದರಿಂದ ವರ್ತಮಾನಕಾಲದಲ್ಲಿಯೇ ಛೇದಭೇದಾದಿಗಳನ್ನು ನಿಷೇಧಿಸಿದ್ದು ಅದುಕಾರಣ (ಮುಂದೆ

ಶಸ್ತ್ರಾದಿಗಳಿಂದ ವಿನಾಶವು ಜೀವನಿಗೆ ಬರಬಹುದೆಂದು ಶಂಕಾಬಂದರೆ—ಸದಾ ಜೀವನಿಗೆ ಛೇದಭೇದಾದಿಗಳ ಯೋಗ್ಯತೆಯೇ ಇಲ್ಲವೆಂದು ತಿಳಿಸುವುದಕ್ಕಾಗಿ **ಅಚ್ಛೇದ್ಯಃ** ಎಂಬ ಶ್ಲೋಕವು (೨) (ಹಾಗಾದರೆ **ಅಚ್ಛೇದ್ಯಃ** ಎಂಬ ಶ್ಲೋಕವೇ ಸಾಕು **ನೈನಂ ಛಿಂದಂತಿ** ಎಂಬ ಶ್ಲೋಕವು ಬೇಡ ಎಂದರೆ) (**ಪ್ರವೃತ್ತೇ ಶಸ್ತ್ರಸಂಪಾತೇ** ಎಂಬ ಮಾತಿನಿಂದ ಛೇದಾದಿಗಳಿಗೆ ಪ್ರಸಕ್ತಿಯಿದ್ದರೂ) ವರ್ತಮಾನಕಾಲದಲ್ಲಿ ಛೇದಭೇದಾದಿಗಳು ಕಾಣದಿರುವುದರಿಂದ ಜೀವನಿಗೆ ಛೇದಭೇದಾದಿಗಳ ಯೋಗ್ಯತೆಯು ಇಲ್ಲವೆಂಬುದು ಯುಕ್ತವೆಂದು **ನೈನಂ ಛಿಂದಂತಿ** ಎಂಬ ಶ್ಲೋಕದಿಂದ ತೋರಿಸಿರುತ್ತಾರೆ (೩) ಜೀವನಿಗೆ ಛೇದಭೇದಾದಿಗಳ ಯೋಗ್ಯತೆಯು ಇಲ್ಲವೆಂಬುದು ಯಾವ ಪ್ರಮಾಣದಿಂದ (ಅಂದರೆ—ಛೇದಾದಿಗಳ ಯೋಗ್ಯತೆಯು ಇಲ್ಲವೆಂಬುವಲ್ಲಿ ವರ್ತಮಾನಕಾಲದಲ್ಲಿ ಛೇದಾದಿಗಳು ಕಾಣದಿರುವುದು (1) ನಿಶ್ಚಯ ಯುಕ್ತಿಯೋ, (2) ಸಂಭಾವಕ ಯುಕ್ತಿಯೋ. ಅದರಲ್ಲಿ ನಿಶ್ಚಯಯುಕ್ತಿಯೆಂದು ಹೇಳಲಾಗುವುದಿಲ್ಲ ಏಕೆಂದರೆ ಕೆಲವು ವೇಳೆ ಕಾಣದಿದ್ದರೂ ಮುಂದಕ್ಕೆ ಕಾಣಬಹುದು (2) ಸಂಭಾವಕಯುಕ್ತಿಯೆಂದರೆ ಅದರಿಂದ ಜೀವರಿಗೆ ಛೇದಭೇದಾದಿಗಳ ಯೋಗ್ಯತೆಯೇ ಇಲ್ಲವೆಂಬುದು ನಿಶ್ಚಯವು ಹೇಗೆ ಆಗುವುದು?) ಶ್ರೀಹರಿಗೆ ನಿತ್ಯಸರ್ವಗತತ್ವಾದಿಗಳಿದ್ದ ಪ್ರಯುಕ್ತ ಛೇದಭೇದಾದಿಗಳು ಕೂಡುವುದಿಲ್ಲವಷ್ಟೆ. ಆದಕಾರಣ ಶ್ರೀಹರಿಯ ಪ್ರತಿಬಿಂಬನಾದ (ಶ್ರೀಹರಿಯ ಅಧೀನನಾಗಿ ಸಾರೂಪ್ಯವುಳ್ಳ) ಜೀವನಿಗೂ ಛೇದಾದ್ಯಯೋಗ್ಯತ್ವವು ನಿಶ್ಚಿತವು (೪) (**ನ ಜಾಯತೇ** ಎಂಬ ಮಂತ್ರವರ್ಣದಲ್ಲಿ **ಶಾಶ್ವತಃ** ಎಂದೂ, ಈ ಶ್ಲೋಕದಲ್ಲಿ **ಸ್ಥಾಣುಃ** ಎಂದೂ ಶ್ರೀಹರಿಗೆ ವಿಶೇಷಣವಿದೆ ಅವುಗಳಿಗೆ ಅರ್ಥಭೇದ ಹೇಳುತ್ತಾರೆ—) ಶಾಶ್ವತಃ ಎಂಬುದರಿಂದ ಯಾವಾಗಲೂ ಒಂದೇ ರೀತಿಯಾಗಿರುವವನೆಂದೂ (ಸಾಮಾನ್ಯವಾಗಿ ವ್ಯತ್ಯಾಸವಿಲ್ಲದವನೆಂದೂ) ಸ್ಥಾಣುಶಬ್ದದಿಂದ ಎಂತಹ ಕಾರಣದಿಂದಲೂ ವ್ಯತ್ಯಾಸವಿಲ್ಲದವನೆಂದೂ ಅರ್ಥ ಇಟ್ಟುಕೊಳ್ಳಬೇಕು (೫) (ನಿತ್ಯಃ ಎಂಬುದು ಶ್ರೀಹರಿಗೆ ವಿಶೇಷಣವಲ್ಲವೆನ್ನುತ್ತಾರೆ ನಿತ್ಯತ್ವವು ಸರ್ವಗತತ್ವಕ್ಕೆ ವಿಶೇಷಣವು (ಅಂದರೆ ನಿತ್ಯದಲ್ಲಿಯೂ ಸರ್ವತ್ರ ವ್ಯಾಪ್ತನೆಂದರ್ಥವು.) ಹೀಗೆ ಹೇಳದೆ ಎರಡೂ ಶ್ರೀಹರಿಗೆ ವಿಶೇಷಣವೆಂದು ಹೇಳಿದರೆ **ಅಜೋ ನಿತ್ಯಃ** ಎಂದು ಶ್ರೀಹರಿಗೆ ನಿತ್ಯತ್ವವನ್ನು, **ಅಪ್ರಮೇಯಸ್ಯ** ಎಂಬುದರಿಂದ ಸರ್ವತ್ರವ್ಯಾಪ್ತಿಯನ್ನು ಹೇಳಿದಕಾರಣ ಪುನರುಕ್ತಿದೋಷವು ಬರುವುದು (ಜೀವನು ಶ್ರೀಹರಿಗೆ ಪ್ರತಿಬಿಂಬನೆಂದು ಈ ಗ್ರಂಥದಲ್ಲಿಯೇ ಅನೇಕ ಸಲ ಹೇಳಿದಕಾರಣ ಪುನರುಕ್ತಿದೋಷವು ತಪ್ಪಿದ್ದಲ್ಲವೆಂದರೆ) ಕೇವಲ ಐಕ್ಯವನ್ನು (ಪ್ರತಿಬಿಂಬತ್ವರೂಪ ಸಾದೃಶ್ಯವನ್ನು) ಮರಳಿಮರಳಿ ಹೇಳಿದರೂ ಮೊದಲು ಮೊದಲು ಹೇಳದಿದ್ದು ಅಲ್ಲಲ್ಲಿ ಉಪಯುಕ್ತಗಳಾದ ವಿಶೇಷಣಗಳನ್ನು ಮೇಲೆ ತೆಗೆದುಕೊಳ್ಳುವುದರಿಂದ ಜೀವರಿಗೆ ಈಶ್ವರೈಕ್ಯ (ಪರಬ್ರಹ್ಮನ ಸಾರೂಪ್ಯ) ವಿಷಯದಲ್ಲಿ ಪುನರುಕ್ತಿದೋಷವು ಬರುವುದಿಲ್ಲ (ಅಂದರೆ—ಅಪ್ರಮೇಯೇಶ್ವರಸರೂಪತ್ವಾತ್, ಅಜಾದಿಲಕ್ಷಣೇಶ್ವರಸ ರೂಪತ್ವಾತ್, ನಿತ್ಯಸರ್ವಗತಾದಿ ವಿಶೇಷಣೇಶ್ವರಸ ರೂಪತ್ವಾತ್ ಎಂಬಲ್ಲಿ ಅಜತ್ವಾದಿ ವಿಶೇಷಣಗಳು ಬೇರೆಬೇರೆಯಾಗಿರುವುದರಿಂದ ಅಂತಹ ವಿಶೇಷಣಗಳಿಂದೊಡಗೂಡಿದ ಸಾದೃಶ್ಯರೂಪವಾದ ಪ್ರತಿಬಿಂಬರೂಪಕ್ಕೂ ಭೇದವಿದ್ದ ಪ್ರಯುಕ್ತ ಪುನರುಕ್ತಿದೋಷವು ಇಲ್ಲ) (೬) (ಶ್ರೀಹರಿಗೆ ನಿತ್ಯಸರ್ವಗತತ್ವಮೊದಲಾದ ವಿಶೇಷಣಗಳಿದ್ದಪ್ರಯುಕ್ತ ಅಛೇದ್ಯತ್ವಾದಿಗಳಿರಲಿ. ಪ್ರತಿಬಿಂಬಭೂತರಾದ ಜೀವರಿಗೆ ಅವು ಹೇಗೆ ಇರುವವು ಎಂದರೆ) ಪ್ರತಿಬಿಂಬದಲ್ಲಿ ಬಿಂಬಧರ್ಮಕ್ಕೆ ಸಮಾನಗಳಾದ ಧರ್ಮಗಳು ವಿರೋಧವಿಲ್ಲದಿದ್ದರೆ ಇರುವಂಥಾದ್ದು ಯುಕ್ತಗಳೇ ಆಗಿವೆ (೭) (ಜೀವರು ಶ್ರೀಹರಿಗೆ ಪ್ರತಿಬಿಂಬರೆಂಬುವುದು ಯಾವ ಪ್ರಮಾಣದಿಂದ ಸಿದ್ಧಿಸುತ್ತದೆಂದರೆ) ಜೀವರು ಶ್ರೀಹರಿಗೆ ಪ್ರತಿಬಿಂಬರು (ಸದೃಶರು) ಎಂಬುದು ರೂಪಂರೂಪಂ ಪ್ರತಿರೂಪಃ ಇದುಮೊದಲಾದ ವೇದಸ್ಮೃತಿಗಳಿಂದ ಸಿದ್ಧಿಸುತ್ತದೆ.

**ವಿ ॥(1) ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ। ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾದಶ ।** ಎಂಬ ವೇದದ

ಅರ್ಥವು ಜೀವರ ಸಮೂಹವು ಶ್ರೀಹರಿಯ ಎಲ್ಲಾ ರೂಪಗಳಿಗೆ ಪ್ರತಿಬಿಂಬವಾಗಿ (ಸದೃಶವಾಗಿ)ರುತ್ತದೆ ಆ ಬಿಂಬರೂಪವು ಜೀವರಿಗೆ ಮುಕ್ತಿಗಾಗಿ ಪ್ರತ್ಯಕ್ಷವಾಗುತ್ತದೆ ಶ್ರೀಹರಿಯು ತನ್ನ ಸಾಮರ್ಥ್ಯದಿಂದ ಅನಂತಾನಂತ ಜೀವರಿಗೆ ಬಿಂಬರೂಪನಾಗಿಯೇ ಇರುತ್ತಾನೆ ಶ್ರೀಹರಿಗೆ ಹರಿ ಎನ್ನಿಸಿಕೊಳ್ಳುವ ಅನಂತಾನಂತರೂಪಗಳು ಇವೆ ಏವಂಚ ಶ್ರೀಹರಿಯ ರೂಪಗಳಿಗೆ ಜೀವರು ಪ್ರತಿಬಿಂಬರು (2) ಜೀವರು ಆಭಾಸ ಏವ=ಶ್ರೀಹರಿಗೆ ಪ್ರತಿಬಿಂಬರೇ ಮತ್ಸ್ಯಾದಿ ಭಗವದ್ರೂಪಗಳು ಹಾಗಲ್ಲ ॥ ೧ ॥

ಪೀ--(1) ಜೀವರು ಶ್ರೀಹರಿಗೆ ಪ್ರತಿಬಿಂಬರೆಂದಂಗೀಕರಿಸಿದರೆ— **ಅಂಶೋ ನಾನಾ ವ್ಯಪದೇಶಾತ್ ಮಮೈವಾಂಶೋ ಜೀವಲೋಕೇ** ಇದುಮೊದಲಾದ ಸೂತ್ರಸ್ಮೃತಿಗಳಲ್ಲಿ ಅಂಶತ್ವವನ್ನು ಹೇಳಿದಕಾರಣ ಅದರಿಂದ ವಿರೋಧವು (2) ಪ್ರತಿಬಿಂಬಕ್ಕೂ ಬಿಂಬಕ್ಕೂ ಅತ್ಯಂತಾಭೇದವೆಂದು ಕೆಲವರು, ಇತರರು ಅತ್ಯಂತಭೇದವೆನ್ನುತ್ತಾರೆ ಅಂಶವು ಅದರ ಏಕದೇಶವು ಉದಾ=ಬಟ್ಟೆಯ ಅಂಶವಾದ ನೂಲು ಬಟ್ಟೆಯ ಏಕದೇಶವು ಅವುಗಳಿಗೆ ಭೇದಾಭೇದವು ಆದಕಾರಣ ಪ್ರತಿಬಿಂಬರೆಂದಂಗೀಕರಿಸಿದರೆ ಸ್ಮೃತಿ ವಿರೋಧವು ಅಂಶರೆಂದಂಗೀಕರಿಸಿದರೆ—ಸಿದ್ಧಾಂತವಿರೋಧವು ಅಲ್ಲದೆ ಪ್ರತಿಬಿಂಬವು ಬಿಂಬದಿಂದ ಅತ್ಯಂತಾಭಿನ್ನವೆಂದಂಗೀಕರಿಸಿದರೂ ಭಿನ್ನವೆಂದಂಗೀಕರಿಸಿದರೂ ವಿರೋಧವು ತಪ್ಪಿದ್ದಲ್ಲವೆಂದರೆ—

**ಭಾ ॥ (೧) ನ ಚಾಂಶತ್ವವಿರೋಧಃ । ತಸ್ಯೈವಾಂಶತ್ವಾತ್ ॥ (೨) ನ ಚೈಕರೂಪೈವಾಂಶತಾ । ಪ್ರಮಾಣಂ ಚೋಭಯವಿಧವಚನಮೇವ ॥ (೩) ನ ಚಾಂಶಸ್ಯ ಪ್ರತಿಬಿಂಬತ್ವಂ ಕಲ್ಪ್ಯಂ । ಗಾಧ್ಯಾದಿಷ್ವಸ್ಯಾಂಶಬಾಹುರೂಪ್ಯದೃಷ್ಟೇರಿತರತ್ರಾದೃಷ್ಟೇಃ ॥ ೨ ॥**

ಅ ॥ (೧) ಜೀವರು ಶ್ರೀಹರಿಯ ಪ್ರತಿಬಿಂಬರೆಂದಂಗೀಕರಿಸಿದರೂ ಶ್ರೀಹರಿಯ ಅಂಶರೆಂದು ಹೇಳಿದ ಸ್ಮೃತಿಯಿಂದ ವಿರೋಧವು ಬರುವುದಿಲ್ಲ ಪ್ರತಿಬಿಂಬತ್ವವೇ ಅಂಶತ್ವವು (ಅಂದರೆ—ಶ್ರೀಹರಿಯಿಂದ ಅತ್ಯಂತಭಿನ್ನನಾದ ಜೀವನು ಶ್ರೀಹರಿಯ ಅಧೀನನಾಗಿಯೇ ಇದ್ದು ಜ್ಞಾನಾದಿ ಕೆಲವು ಅಂಶಗಳಿಂದ ಶ್ರೀಹರಿಗೆ ಸದೃಶನಾಗಿರುವುದು ಶ್ರೀಹರಿಯ ಪ್ರತಿಬಿಂಬವೆನಿಸುತ್ತದೆ ಶ್ರೀಹರಿಯ ಅಧೀನವಾಗಿದ್ದು ಶ್ರೀಹರಿಯ ಸಾದೃಶ್ಯರೂಪವಾದ ಪ್ರತಿಬಿಂಬತ್ವವೇ ಸ್ಮೃತಿಯಲ್ಲಿ ಹೇಳಿದ ಶ್ರೀಹರಿಯ ಅಂಶತ್ವವು ಆದಕಾರಣ ವಿರೋಧವಿಲ್ಲ.) (೨) (ಅಂಶವೆಂದರೆ ಏಕದೇಶವು ಅದರಲ್ಲಿ ಭೇದಾಭೇದವು, ಪ್ರತಿಬಿಂಬದಲ್ಲಿ ಬಿಂಬದಿಂದ ಅತ್ಯಂತಭೇದವು. ಆದಕಾರಣ ಅಂಶತ್ವಕ್ಕೂ ಪ್ರತಿಬಿಂಬತ್ವಕ್ಕೂ ವಿರೋಧವಿಲ್ಲವೆಂಬುವುದು ಹೇಗೆ? ಎಂದರೆ) ಅಂಶಶಬ್ದಪ್ರವೃತ್ತಿನಿಮಿತ್ತವು ಏಕದೇಶತ್ವರೂಪವಾದುದು ಒಂದೇ ವಿಧವಲ್ಲ. ಪ್ರತಿಬಿಂಬತ್ವವೂ ಅಂಶಶಬ್ದಪ್ರವೃತ್ತಿನಿಮಿತ್ತವು ಜೀವರು ಶ್ರೀಹರಿಯ ಪ್ರತಿಬಿಂಬರು, ಅಂಶಭೂತರು ಎಂದು ಹೇಳುವ ಎರಡುವಿಧ ಪ್ರಮಾಣವಚನಗಳೇ ಈ ವಿಷಯದಲ್ಲಿ ಪ್ರಮಾಣಗಳು. (ಅಂದರೆ—ಶಾಸ್ತ್ರಗಳಿಗೆ ಪರಸ್ಪರ ವಿರುದ್ಧವಾದ ಅರ್ಥ ಹೇಳಬಾರದು ಆದಕಾರಣ ಅಂಶಶಬ್ದಕ್ಕೆ ಅನೇಕಾರ್ಥಗಳಿದ್ದರೂ ವಿರುದ್ಧವಾದ ಏಕದೇಶತ್ವರೂಪ ಅರ್ಥವನ್ನು ಬಿಟ್ಟು ಪ್ರತಿಬಿಂಬತ್ವರೂಪ ಅರ್ಥಾಂತರವನ್ನು ಇಟ್ಟುಕೊಳ್ಳಬೇಕು) (೩) (ಹಾಗಾದರೆ ಪ್ರತಿಬಿಂಬತ್ವವೇ ಅಂಶತ್ವವು ಅಂಶಶಬ್ದಕ್ಕೂ ಅಂಶತ್ವವೇ ಪ್ರವೃತ್ತಿನಿಮಿತ್ತ ಎಂದು ಕಲ್ಪಿಸಿದಂತೆಯೇ ಏಕದೇಶತ್ವವೇ ಅಂಶತ್ವವು. ಪ್ರತಿಬಿಂಬಶಬ್ದಕ್ಕೂ ಏಕದೇಶತ್ವವೇ ಪ್ರವೃತ್ತಿನಿಮಿತ್ತವೆಂದು ಏಕೆ ಕಲ್ಪಿಸಕೂಡದೆಂದರೆ) ಏಕದೇಶತ್ವವು ಪ್ರತಿಬಿಂಬಶಬ್ದಪ್ರವೃತ್ತಿನಿಮಿತ್ತವೆಂದು ಕಲ್ಪಿಸಕೂಡದು (ಏಕೆಂದರೆ) ಅಂಶರೆನಿಸಿದ ಗಾಧಿರಾಜ ಮೊದಲಾದವರಲ್ಲಿ ಅಂಶತ್ವವು ಅನೇಕವಿಧವಾಗಿ ಕಂಡದೆ ಪ್ರತಿಬಿಂಬಗಳೆನಿಸಿಕೊಂಡ ಸೂರ್ಯಕ (ಸೂರ್ಯನ ಪ್ರತಿಬಿಂಬ) ಮೊದಲಾದವುಗಳಲ್ಲಿದ್ದ ಪ್ರತಿಬಿಂಬತ್ವವು ಅನೇಕವಿಧವಾಗಿ ಕಾಣುವುದಿಲ್ಲ

ವಿ ॥ (1) ಗಾಧಿರಾಜನು ಇಂದ್ರನ ಅಂಶನು ಅಲ್ಲಿ ವಿಶೇಷವೇ (ವಸ್ತುತಃ ಭೇದವಿಲ್ಲವಾದರೂ ಭೇದಕಾರ್ಯವಾದ ವ್ಯವಹಾರಾದಿಗಳನ್ನು ಕೂಡಿಸುವುದು) ಅಂಶಶಬ್ದದ ಪ್ರವೃತ್ತಿನಿಮಿತ್ತವು. ಗಾಧಿರಾಜನಿಗೂ ಇಂದ್ರನಿಗೂ ಭೇದಾಭೇದವೆಂಬುದೂ ಅತ್ಯಂತಭೇದವೆಂಬುದೂ ಪ್ರಮಾಣವಿರುದ್ಧವು (2) ಬಟ್ಟೆಯು ಅಂಶವು ನೂಲು ಎಂಬಲ್ಲಿ ಏಕದೇಶತ್ವವು ಅಂಶಶಬ್ದದ ಪ್ರವೃತ್ತಿನಿಮಿತ್ತವು. ಅಲ್ಲಿ ಭೇದಾಭೇದವಿದೆ (3) ಸೂರ್ಯನ ಅಂಶವು ಕಣ್ಣು (ಗೋಲಕವು) ಎಂಬಲ್ಲಿ ಅತ್ಯಂತಭಿನ್ನವಾದ ಚಕ್ಷುಸ್ಸಿಗೆ ಸೂರ್ಯಾಧೀನ ಸಾದೃಶ್ಯವು ಅಂದರೆ ಅಂಶಿಯ ಅಧೀನವಾದ ಪ್ರವೃತ್ತ್ಯಾದಿಗಳು ಹೀಗೆ ಅಂಶಶಬ್ದಕ್ಕೆ ಅನೇಕಾರ್ಥಗಳಿವೆ ಅತ ಏವ **ದ್ವಿರೂಪಾವಂಶಕೌ ತಸ್ಯ ಪರಮಸ್ಯ ಹರೇರ್ವಿಭೋಃ । ಪ್ರತಿಬಿಂಬಾಂಶಕಶ್ಚಾಥ ಸ್ವರೂಪಾಂಶಕ ಏವ ಚ । ಪ್ರತಿಬಿಂಬಾಂಶಕಾಃ ಜೀವಾಃ ಪ್ರಾದುರ್ಭಾವಾಃ ಪರೇ ಸ್ಮೃತಾಃ ॥** ಶ್ರೀಹರಿಗೆ ಪ್ರತಿಬಿಂಬಾಂಶ, ಸ್ವರೂಪಾಂಶ ಎಂದು ಅಂಶವು ಎರಡು ವಿಧ ಜೀವರು ಪ್ರತಿಬಿಂಬಾಂಶರು ಮತ್ಸ್ಯಾದ್ಯವತಾರಗಳು ಸ್ವರೂಪಾಂಶಗಳು ಎಂದುಕ್ತವಾಗಿದೆ (4) ಹೀಗೆಯೇ ಪ್ರತಿಬಿಂಬಶಬ್ದಕ್ಕೆ ಅನೇಕ ಪ್ರವೃತ್ತಿನಿಮಿತ್ತಗಳು ಕಾಣುವುದಿಲ್ಲ ಏವಂಚ ಸಾವಕಾಶವಾದ (ಬೇರೆ ಅರ್ಥ ಹೇಳಲು ಶಕ್ಯವಾಗುವ) ಅಂಶಶಬ್ದಕ್ಕೆ ನಿರವಕಾಶವಾದ (ಅರ್ಥಾಂತರವನ್ನು ಹೇಳಲು ಶಕ್ಯವಾಗದಿರುವ) ಪ್ರತಿಬಿಂಬಶಬ್ದವನ್ನನುಸರಿಸಿ ಅರ್ಥ ಹೇಳುವುದೇ ಯುಕ್ತವು ॥ ೨ ॥

ಪೀ—ಶ್ರೀಹರಿಯು ಸ್ಥಾಣುವು (ಯಾವ ಪ್ರಕಾರದಿಂದಲೂ ಯಾವುದೊಂದು ವಿಧವಾದ ವಿಕಾರವಿಲ್ಲದವನು) ಎಂದು ಹೇಳಿದ್ದು ಕೂಡುವುದಿಲ್ಲ **ತದೈಕ್ಷತ ಸೋಽಕಾಮಯತ** ಇತ್ಯಾದಿಗಳಲ್ಲಿ ದರ್ಶನ ಕಾಮನಾದಿ ಕ್ರಿಯೆಗಳನ್ನು ಹೇಳಿದ್ದಾರೆ ಎಂದರೆ—

**ಭಾ ॥ (೧) ಸ್ಥಾಣುತ್ವೇಽಪಿ ತದೈಕ್ಷತೇತ್ಯಾದ್ಯವಿರುದ್ಧಮೀಶ್ವರಸ್ಯ । ಉಭಯವಿಧವಾಕ್ಯಾತ್। ಅಚಿಂತ್ಯಶಕ್ತೇಶ್ಚ ॥ (೨) ನ ಚ ಮಾಯಯೈಕಂ । ತ್ವಯೀಶ್ವರೇ ಬ್ರಹ್ಮಣಿ ನೋ ವಿರುಧ್ಯತೇ । ನ ಯೋಗಿತ್ವಾದೀಶ್ವರತ್ವಾತ್ ॥ (೩) ಚಿತ್ರಂ ನ ಚೈತತ್ತ್ವಯಿ ಕಾರ್ಯಕಾರಣ ಇತ್ಯಾದ್ಯೈಶ್ವರ್ಯೇಣೈವ ವಿರುದ್ಧಧರ್ಮಾವಿರೋಧೋಕ್ತೇಃ । ಮಹಾತಾತ್ಪರ್ಯಾಚ್ಚ ॥ ೩ ॥**

ಅ ॥ (೧) ಶ್ರೀಹರಿಗೆ ಸ್ಥಾಣುತ್ವವಿದ್ದರೂ ಐಕ್ಷತ ಇತ್ಯಾದಿಗಳಿಂದ ಹೇಳಿದ ಕ್ರಿಯೆಗಳು ವಿರುದ್ಧಗಳಲ್ಲ, ಸ್ಥಾಣುತ್ವಕರ್ತೃತ್ವಗಳೆರಡನ್ನು ಹೇಳತಕ್ಕ ವಾಕ್ಯಗಳಿವೆ (ಬೇರೆಕಡೆ ಎಲ್ಲಿಯೂ ತೋರದಿರುವುದು, ಶ್ರೀಹರಿಯಲ್ಲಿ ಹೇಗೆ ಇರುತ್ತವೆಂದರೆ) ಬೇರೆಯವರಿಗೆ ಆಲೋಚಿಸಲಿಕ್ಕೂ ಅಶಕ್ಯವಾದ ಶಕ್ತಿಯು ಶ್ರೀಹರಿಗೆ ಇದೆ (೨) (ಅದ್ವೈತಿಗಳು ಕರ್ತೃತ್ವಸ್ಥಾಣುತ್ವಗಳಲ್ಲಿ ಕರ್ತೃತ್ವವು ಕಾಲ್ಪನಿಕವು ಸ್ಥಾಣುತ್ವವು ಪಾರಮಾರ್ಥಿಕವು ಆಕಾಶದಲ್ಲಿ ನೀಲತ್ವವೂ, ರೂಪಾಭಾವವೂ ಎರಡೂ ಒಟ್ಟಿಗೆ ಇದ್ದಂತೆಯೇ ಕಾಲ್ಪನಿಕ ಪಾರಮಾರ್ಥಿಕಗಳೂ ಇವೆ ಅವುಗಳಿಗೆ ವಿರೋಧವಿಲ್ಲ, ಎನ್ನುತ್ತಾರೆ ಅದು ಅಯುಕ್ತವೆನ್ನುತ್ತಾರೆ) ಕರ್ತೃತ್ವಸ್ಥಾಣುತ್ವಗಳಲ್ಲಿ ಒಂದು ಕರ್ತೃತ್ವವು ಮಾಯೆಯಿಂದ ಎಂದನ್ನಕೂಡದು (ಏಕೆಂದರೆ) ಅಘಟಿತಘಟಕಸಂಪೂರ್ಣಐಶ್ವರ್ಯವುಳ್ಳ, ನಿನ್ನಲ್ಲಿ ಸ್ಥಾಣುತ್ವಕರ್ತೃತ್ವಗಳೆರಡೂ ವಿರುದ್ಧಗಳಲ್ಲ ನ ಯೋಗಿತ್ವಾತ್=ಲೋಕದಲ್ಲಿ ವಿರುದ್ಧಗಳಂತೆ ತೋರುವ ಆವೆರಡು ಧ್ಯಾನ ಮೊದಲಾದ ಉಪಾಯಗಳಿಂದ ಶ್ರೀಹರಿಗೆ ಉಂಟಾದುದಲ್ಲ ಮತ್ತೆ ಅಚಿಂತ್ಯ ಐಶ್ವರ್ಯವಿದ್ದಪ್ರಯುಕ್ತ (ಅಂದರೆ ಒಬ್ಬನಿಗೆ ತನಗೆ ಸಾಮರ್ಥ್ಯವಿಲ್ಲವಾದರೂ ಕಾರ್ಯವಿಶೇಷವನ್ನು ಉಪಾಯದಿಂದ ಸಾಧಿಸಿಕೊಳ್ಳುತ್ತಾನೆ ಹಾಗೆಯೇ ಉಪಾಸನಾದಿಗಳಿಂದಲ್ಲ, ಮತ್ತೆ ತನ್ನ ಸಾಮರ್ಥ್ಯದಿಂದಲೇ) (೩) ಎಲ್ಲಾ ಕಾರ್ಯ

ಗಳನ್ನು ಹುಟ್ಟಿಸುವ ಸಾಮರ್ಥ್ಯವಿರುವ ನಿನ್ನಲ್ಲಿ ಸ್ಥಾಣುತ್ವಕರ್ತೃಗಳೆರಡು ವಿರುದ್ಧ ಧರ್ಮಗಳು ಆಶ್ಚರ್ಯವಲ್ಲ, ಇದುಮೊದಲಾದ ಪ್ರಮಾಣಗಳಿಂದ ಅಚಿಂತ್ಯ ಐಶ್ವರ್ಯವಿದ್ದುದರಿಂದಲೇ, ವಿರುದ್ಧಗಳಾದ (ಬೇರೆ ಕಡೆ ಒಟ್ಟಿಗೆ ಇಲ್ಲದಿರುವ) ಧರ್ಮಗಳಿಗೆ ಶ್ರೀಹರಿಯಲ್ಲಿ ವಿರೋಧವಿಲ್ಲವೆಂದು (ಒಟ್ಟಿಗೆ ಇರುತ್ತವೆಯೆಂದು) ಹೇಳಿದೆ. ಎಲ್ಲಾವೇದಗಳಿಗೂ ಶ್ರೀಹರಿಯು ಸರ್ವಗುಣಪರಿಪೂರ್ಣನು, ಎಂಬಲ್ಲಿಯೇ ಮುಖ್ಯ ತಾತ್ಪರ್ಯವು

ವಿ|| (1) ಈಕ್ಷಿತೃತ್ವ ಮೊದಲಾದ ಗುಣಗಳು ಮಿಥ್ಯೆಯೆಂದು ಕಲ್ಪಿಸಿದರೆ ಮಹಾತಾತ್ಪರ್ಯ ವಿರೋಧವು ಬರುವುದು (2) ಏವಂಚ ಪರಬ್ರಹ್ಮನ ಸ್ವರೂಪದಂತೆ ಈಕ್ಷಿತೃತ್ವ ಮೊದಲಾದ ಶ್ರೀಹರಿಯ ಗುಣಗಳು ಎಲ್ಲಾ ವೇದಗಳಿಗೂ ಮಹಾತಾತ್ಪರ್ಯ ವಿಷಯವಾದುದರಿಂದ ಮಾಯೆಯಿಂದ ಕಲ್ಪಿಸಲ್ಪಟ್ಟವುಗಳಲ್ಲ, ಎಂದುಕ್ತವಾಯಿತು. (3) ಮಹಾತಾತ್ಪರ್ಯ ವಿಷಯವಾದುದಕ್ಕೂ. ಮಿಥ್ಯಾತ್ವಹೇಳುವುದಾದರೆ--ಪರಬ್ರಹ್ಮನ ಸ್ವರೂಪವಾದ ಜೀವ ಬ್ರಹ್ಮೈಕ್ಯಕ್ಕೂ ಮಿಥ್ಯಾತ್ವವು ಬರಬೇಕಾಗುವುದು. (4) ತಥಾಚ, ಸರ್ವರಿಗೂ ಮುಖ್ಯಪ್ರಯೋಜನವಾದ ಮೋಕ್ಷಕ್ಕೆ ಸಾಧನವಾದ ಜ್ಞಾನಕ್ಕೆ ವಿಷಯವಾದುದರಿಂದ ಶ್ರೀಹರಿಯು ಸರ್ವಗುಣಪರಿಪೂರ್ಣನೆಂಬುವುದು ಎಲ್ಲಾ ವೇದಗಳಿಗೂ ಮಹಾತಾತ್ಪರ್ಯ ವಿಷಯವಾಗಿದೆ. || ೩ ||

ಪೀ—ನ ಸ್ವರ್ಗಾದೇಃ ಫಲಾಂತರಂ. ಸ್ವರ್ಗ ಐಹಿಕಫಲ ಇವುಗಳು ಹೊರತು ಮೋಕ್ಷಾದಿರೂಪವಾದ ಪುರುಷಾರ್ಥವು ಇಲ್ಲವೆಂದು ಕೆಲವರು ಹೇಳುವುದರಿಂದ ಎಲ್ಲಾ ವೇದಗಳಿಗೆ ಮೋಕ್ಷವು ಪ್ರಯೋಜನವೆಂಬುವುದೇ ಹೇಗೆ ಕೂಡುತ್ತದೆ ಎಂದರೆ—

ಭಾ || (೧) ಮೋಕ್ಷೋ ಹಿ ಮಹಾಪುರುಷಾರ್ಥಃ । ತತ್ರಾಪಿ ಮೋಕ್ಷ ಏವಾರ್ಥಃ || (೨) ಅಂತೇಷು ರೇಮಿರೇ ಧೀರಾ ನ ತೇ ಮಧ್ಯೇಷು ರೇಮಿರೇ । ಅಂತಪ್ರಾಪ್ತಿಂ ಸುಖಂ ಪ್ರಾಹುರ್ದುಃಖಮಂತರಮೇತಯೋಃ । ಪುಣ್ಯಚಿತೋ ಲೋಕಃ ಕ್ಷೀಯತ ಇತ್ಯಾದಿಶ್ರುತಿಸ್ಮೃತಿಭ್ಯಃ || (೨) ಸ ಚ ವಿಷ್ಣುಪ್ರಸಾದಾದೇವ ಸಿದ್ಧ್ಯತಿ । ವಾಸುದೇವಮನಾರಾಧ್ಯ ಕೋ ಮೋಕ್ಷಂ ಸಮವಾಪ್ನುಯಾತ್ । ತುಷ್ಟೇ ತು ತತ್ರ ಕಿಮಲಭ್ಯಮನಂತ ಈಶೇ । ತತ್ಪ್ರಸಾದಾದವಾಪ್ನೋತಿ ಪರಾಂ ಸಿದ್ಧಿಂ ನ ಸಂಶಯಃ || (೪) ಯೇಷಾಂ ಸ ಏವ ಭಗವಾನ್ ದಯಯೇದನಂತಃ ಸರ್ವಾತ್ಮನಾಽಽಶ್ರಿತಪದೋ ಯದಿ ನಿರ್ವ್ಯಲೀಕಂ । ತೇ ವೈ ವಿದಂತ್ಯತಿತರಂತಿ ಚ ದೇವಮಾಯಾಂ ನೈಷಾಂ ಮಮಾಹಮಿತಿ ಧೀಃ ಶ್ವಸೃಗಾಲಭಕ್ಷ್ಯೇ || (೫) ತಸ್ಮಿನ್ ಪ್ರಸನ್ನೇ ಕಿಮಿಹಾಸ್ತ್ಯಲಭ್ಯಂ ಧರ್ಮಾರ್ಥಕಾಮೈರಲಮಲ್ಪಕಾಸ್ತೇ || (೬) ಋತೇ ಯದಸ್ಮಿನ್ಭವ ಈಶಜೀವಾಸ್ತಾಪತ್ರಯೇಣೋಪಹತಾ ನ ಶರ್ಮ । ಆತ್ಮಂಲ್ಲಭಂತೇ ಭಗವಂಸ್ತವಾಂಘ್ರಿಚ್ಛಾಯಾಂಸವಿದ್ಯಾಮತ ಆಶ್ರಯೇಮ || (೭) ಋತೇ ಭವತ್ಪ್ರಸಾದಾದ್ಧಿ ಕಸ್ಯ ಮೋಕ್ಷೋ ಭವೇದಿಹ । ತಮೇವಂ ವಿದ್ವಾನಿತ್ಯಾದಿಶ್ರುತಿಸ್ಮೃತಿಭ್ಯಃ || ೪ ||

ಅ || (೧) (ವೇದಶಾಸ್ತ್ರಾತ್ಪರಂ ನಾಸ್ತಿ ಋಗಾದಿವೇದಗಳೂ, ಭಾರತಾದಿಗಳೂ ಇವುಗಳಿಗಿಂತ ಉತ್ಕೃಷ್ಟವಾದ ಬೇರೆ ಶಾಸ್ತ್ರವಿಲ್ಲವೆಂದು ಹೇಳಿದ್ದರಿಂದ ವೇದವು ಮಹಾಶಾಸ್ತ್ರವು ಆದಕ್ಕೆ ಮಹಾಪುರುಷಾರ್ಥವೇ ಪ್ರಯೋಜನವಾಗಬೇಕು) ಮೋಕ್ಷವೇ ಮಹಾಪುರುಷಾರ್ಥವು. (ಆದಕಾರಣ ಮೋಕ್ಷವೇ

ವೇದಗಳಿಗೆ ಪ್ರಯೋಜನವು.) (ಅದು ಹೇಗೆಂದರೆ) **ಧರ್ಮಾರ್ಥಕಾಮಮೋಕ್ಷಾಣಾಂ ಯದತ್ಯಂತ ವಿಘಾತಕಂ** ಎಂದು ಪ್ರಸ್ತುತಗಳಾದ ಧರ್ಮಾದಿರೂಪ ಪುರುಷಾರ್ಥಗಳಲ್ಲಿಯೂ **ತತ್ರಾಪಿ ಮೋಕ್ಷ ಏವಾರ್ಥಃ ಆತ್ಯಂತಿಕತಯೇಷ್ಯತೇ** ಎಂದು ಹೇಳಿದ ಪ್ರಕಾರ ಮೋಕ್ಷವೇ ಮಹಾಪುರುಷಾರ್ಥವು. (**ತ್ರೈವರ್ಗ್ಯೋಽರ್ಥೋ ಯತೋ ನಿತ್ಯಂ ಕೃತಾಂತಭಯಸಂಯುತಃ** ಎಂಬುದರಿಂದ ಧರ್ಮಾರ್ಥಕಾಮಗಳಿಗೆ ನಾಶವಿದ್ದುದರಿಂದ ಮಹಾಪುರುಷಾರ್ಥತ್ವವಿಲ್ಲ) (೨) ಜ್ಞಾನಿಗಳು ಧರ್ಮಮೋಕ್ಷಗಳಲ್ಲಿ ಸಂತೋಷ ಗೊಳ್ಳುತ್ತಾರೆ. ಅವರು ಅರ್ಥಕಾಮಗಳಲ್ಲಿ ರಮಿಸುವುದಿಲ್ಲ ಮೋಕ್ಷಪ್ರಾಪ್ತಿಯನ್ನು ಸುಖವನ್ನಾ ಗಿಯೂ, ಧರ್ಮಪ್ರಾಪ್ತಿಯನ್ನು ಸುಖಸಾಧನವನ್ನಾಗಿಯೂ, ಹೇಳುತ್ತಾರೆ **ಅರ್ಥಾನಾಮರ್ಜನೇ ದುಃಖಂ** ಇತ್ಯಾದಿಗಳಿಂದ) ಧರ್ಮ ಮೋಕ್ಷಗಳ ಮಧ್ಯದಲ್ಲಿರತಕ್ಕ ಅರ್ಥಕಾಮಗಳನ್ನು ದುಃಖಕ್ಕೆ ಸಾಧನ ಗಳನ್ನಾಗಿ ಹೇಳುತ್ತಾರೆ (ಹೀಗೆ ಧರ್ಮವನ್ನು ಮೋಕ್ಷದೊಂದಿಗೆ ಸೇರಿಸಿದ ಕಾರಣ ಮೋಕ್ಷಕ್ಕೆ ಸಮಾನ ವೆಂದು ಹೇಳಕೂಡದೆನ್ನುತ್ತಾರೆ) ಪುಣ್ಯದಿಂದ ಲಭಿಸುವ ಸ್ವರ್ಗಾದಿಲೋಕವು (**ಯಾವದಿಂದ್ರೋ ಯಾವನ್ಮನುಃ** ಇತ್ಯಾದಿಗಳಲ್ಲಿ ಹೇಳಿದ ಪ್ರಕಾರ) ಕೆಲವು ಕಾಲದಲ್ಲಿ ಮಾತ್ರ ಇರತಕ್ಕುದು (ಪುಣ್ಯವು ಮುಗಿದೊಡನೆ ಭೂಮಿಯಲ್ಲಿ ಹುಟ್ಟುತ್ತಾನೆ.) ಇದುಮೊದಲಾದ ವೇದಸ್ಮೃತಿಗಳಿಂದ, ಮೋಕ್ಷವೇ ಮಹಾ ಪುರುಷಾರ್ಥವು (೩) ಮೋಕ್ಷವು ವಿಷ್ಣುವಿನ ಅನುಗ್ರಹದಿಂದಲೇ ಸಿಗುತ್ತದೆ (ಬೇರೆ ಯಾವುದ ರಿಂದಲೂ ಸಿಗಲಾರದು) ಶ್ರೀಹರಿಯನ್ನು ಆರಾಧಿಸದೆ ಮೋಕ್ಷವನ್ನು ಯಾರು ಹೊಂದಿಯಾರು? ನಾಶ ರಹಿತನಾದ ಸರ್ವೇಶ್ವರನಾದ ಶ್ರೀಹರಿಯು ಸಂತುಷ್ಟನಾಗಲು ಲಭಿಸದಿರುವುದು ಯಾವುದಿದೆ? ಶ್ರೀಹರಿಯ ಅನುಗ್ರಹದಿಂದಲೇ ಮೋಕ್ಷವನ್ನು ಹೊಂದುತ್ತಾನೆ ಸಂದೇಹವಿಲ್ಲ (೪) ಡಂಭ ಫಲದಲ್ಲಿ ಅಭಿಲಾಷೆ ಮೊದಲಾದ ದೋಷಗಳಿಲ್ಲದೆ ಸರ್ವರೀತಿಯಿಂದಲೂ ಯಾರು ಶ್ರೀಹರಿಯ ಚರಣಾರವಿಂದವನ್ನು ಆಶ್ರಯಿ ಸುತ್ತಾರೋ, ಅಂತಹವರಲ್ಲಿ ನಾಶವಿಲ್ಲದ ಶ್ರೀಹರಿಯು ಅನುಗ್ರಹಿಸಿದರೆ—ಅಂತಹವರಿಗೆ ನಾಯಿ ನರಿಗಳಿಗೆ ತಿನ್ನಲು ಯೋಗ್ಯವಾದ ಈ ಶರೀರದಲ್ಲಿ **ಅಹಂ ದೇಹಃ** ನಾನು ಶರೀರವು ಎಂಬ ಬುದ್ಧಿಯು ಅಜ್ಞಾನಿಗೂ ಹೇಗೆ ಇಲ್ಲವೋ ಹಾಗೆಯೇ ಶ್ರೀಹರಿಯ ಅನುಗ್ರಹಕ್ಕೆ ಪಾತ್ರರಾದವರಿಗೆ **ಮಮ ದೇಹಃ** ನನ್ನ ಶರೀರವು ಎಂದು ಸ್ವಾತಂತ್ರ್ಯಭ್ರಾಂತಿಯು ಇಲ್ಲ (ಶ್ರೀಹರಿಯ ಅನುಗ್ರಹದಿಂದಲೇ ನಿವೃತ್ತವಾಗುತ್ತದೆ) ಅವರು, ದೇವಮಾಯಾಂ=**ಮಾಯಾತು ಮಹಿಮಾ ಪ್ರೋಕ್ತಃ ಮಾಯೇತಿ ಮಹಿಮೋಚ್ಯತೇ** ಇತ್ಯಾದಿ ಪ್ರಮಾಣಗಳಿಂದ ಶ್ರೀಹರಿಯ ಮಹಿಮೆಯನ್ನು ತಿಳಿಯುತ್ತಾರೆ ದೇವಮಾಯಾಂ=ಕೈವಲೀನಾಮ **ಸಾ ಮಾಯಾ ಜಗದ್ಬಂಧಾತ್ಮಿಕಾ** ಇತ್ಯಾದಿ ಪ್ರಮಾಣಗಳಿಂದ ದೈವಾಧೀನವಾದ ಮಾಯೆಯನ್ನು ಅಂದರೆ ಸಂಸಾರವನ್ನು ದಾಟುತ್ತಾರೆ (೫) ಶ್ರೀಹರಿಯು ಸಂತುಷ್ಟನಾದರೆ ಇಲ್ಲಿ ಸಿಗದಿರುವುದು ಯಾವುದಿದೆ? ಧರ್ಮ ಅರ್ಥ ಕಾಮಗಳು ಬೇಡ. ಅವುಗಳಿಂದ ಸಿಗತಕ್ಕ ಫಲಗಳಿಗೆ ನಾಶವಿದೆ (೬) ಅಣಿಮಾದಿ ಸಂಪೂರ್ಣ ಐಶ್ವರ್ಯಸ್ವರೂಪಿಯಾದ ಶ್ರೀಹರಿಯೇ ಯಾವ ಕಾರಣದಿಂದ ಸತ್ಯವಾದ ಈ ಸಂಸಾರದಲ್ಲಿ ಜೀವರು ತಾಪತ್ರಯದಿಂದ ಸಂಬದ್ಧರಾದ ಪ್ರಯುಕ್ತ ಸುಖವನ್ನು ಹೊಂದಲಾರರೋ, ಆದಕಾರಣ ಸರ್ವಾಂತರ್ಯಾಮಿಯಾದ ಶ್ರೀಹರಿಯೇ ಪರಮ ಸುಖಾನುಭವವನ್ನು ಹುಟ್ಟಿಸುವ ನಿನ್ನ ಪಾದಾರ ವಿಂದದ ಛಾಯೆಯನ್ನು ತಾಪತ್ರಯದಲ್ಲಿ ಮಗ್ನರಾದ ನಾವು ಆಶ್ರಯಿಸುವೆವು. (೭) ನಿನ್ನ ಅನುಗ್ರಹ ವಿಲ್ಲದೆ ಯಾರಿಗೆ ಮೋಕ್ಷವಾಗುವುದು. (೮) ಆ ಶ್ರೀಹರಿಯನ್ನು **ಸಹಸ್ರಶೀರ್ಷಾ ಪುರುಷಃ** ಇತ್ಯಾದಿ ಪ್ರಕಾರ ತಿಳಿದವನು ಮುಕ್ತನಾಗುತ್ತಾನೆ, ಇದುಮೊದಲಾದ ವೇದಸ್ಮೃತಿಗಳಿಂದ ಮೋಕ್ಷವು ವಿಷ್ಣುವಿನ ಅನುಗ್ರಹದಿಂದಲೇ ಸಿಗುವುದೆಂದು ಸಿದ್ಧಿಸುತ್ತದೆ

ವಿ || (1) ಮೋಕ್ಷವು ವಿಷ್ಣುವಿನ ಪ್ರಸಾದವು ಹೊರತು ಬೇರೆ ಯಾವುದರಿಂದಲೂ ಸಿಗಲಾರದೆಂಬ ವಿಷಯದಲ್ಲಿ **ವಾಸುದೇವಮನಾರಾಧ್ಯ ಧರ್ಮಾರ್ಥಕಾಮೈರಲಮಲ್ಪಕಾಸ್ತೇ. ಋತೇ ಭವತ್ಪ್ರಸಾ-**

ದಾದ್ಧಿ ಎಂಬೀ ವಾಕ್ಯಗಳು ಪ್ರಮಾಣಗಳು. (2) ತುಷ್ಟೇ ತು ತತ್ರ ಇದುಮೊದಲಾದ ವಾಕ್ಯಗಳು ವಿಷ್ಣುವಿನ ಅನುಗ್ರಹದಿಂದಲೇ ಮೋಕ್ಷವು ಸಿಗುತ್ತದೆ ಎಂಬಲ್ಲಿ ಪ್ರಮಾಣಗಳು. ॥ ೪ ॥

ಭಾ ॥ (೧) ಸ ಚೋತ್ಕರ್ಷಜ್ಞಾನಾದೇವ ಭವತಿ । ಲೋಕಪ್ರಸಿದ್ಧೇಃ ॥ (೨) ಲೋಕಸಿದ್ಧಮವಿರುದ್ಧಮನ್ಯತ್ರಾಪ್ಯಂಗೀಕಾರ್ಯಂ ॥ (೩) ಅಹಲ್ಯಾಜಾರತ್ವಾದ್ಯಪಿ ದೋಷಕೃತೋಽಪಿ ತೇನ ಬಹುತರೋ ಲೇಪ ಆಸೀದಿತ್ಯುತ್ಕರ್ಷಮೇವ ವಕ್ತಿ ॥ (೪) ಬಹುನರಕಫಲೋ ಹ್ಯಸೌ ॥ (೫) ತಸ್ಯ ಲೋಮ ಚನಕ್ಷೀಯತ ಇತಿ ಶ್ರುತ್ಯಂತರಾಚ್ಚ ॥ (೬) ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮಿತಿ ತದುಕ್ತೇಶ್ಚ ॥ (೭) ಸತ್ಯಂ ಸತ್ಯಂ ಪುನಸ್ಸತ್ಯಂ ಶಪಥೈಶ್ಚಾಪಿ ಕೋಟಿಭಿಃ । ವಿಷ್ಣುಮಾಹಾತ್ಮ್ಯಲೇಶಸ್ಯ ವಿಭಕ್ತಸ್ಯ ಚ ಕೋಟಿಧಾ । ಪುನಶ್ಚಾನಂತಧಾ ತಸ್ಯ ಪುನಶ್ಚಾಪಿ ಹ್ಯನಂತಧಾ । ನೈಕಾಂಶಸಮಮಾಹಾತ್ಮ್ಯಾಃ ಶ್ರೀಶೇಷಬ್ರಹ್ಮಶಂಕರಾಃ । ಇತಿ ನಾರದೀಯೇ ॥ ೫ ॥

ಅ ॥ (೧) ಉತ್ತಮವಾದ ವಿಷ್ಣುವಿನ ಪ್ರಸಾದವು. ಶ್ರೀಹರಿಯು ಸರ್ವೋತ್ಕೃಷ್ಟನು ಎಂಬ ಜ್ಞಾನದಿಂದಲೇ ಉಂಟಾಗುತ್ತದೆ (ಏವಂಚ ಜ್ಞಾನವಮಾತ್ರದಿಂದ ಸಿಗುವ ಉತ್ತಮಪ್ರಸಾದವೇ ಮೋಕ್ಷಕ್ಕೆ ಕಾರಣವು) ಲೋಕದಲ್ಲಿ ಹಾಗೆ ಪ್ರಸಿದ್ಧಿಯಿದ್ದುದರಿಂದ, (ಅಂದರೆ - ಲೋಕದಲ್ಲಿ ರಾಜಾದಿಗಳನ್ನು ಹೊಗಳಿದರೆ—ಅವರ ಅನುಗ್ರಹವಾಗುತ್ತದೆ ಹಾಗೆಯೇ ಇಲ್ಲಿಯೂ ಇಟ್ಟುಕೊಳ್ಳಬೇಕು) (೨) (ಅಲೌಕಿಕನಾದ ಶ್ರೀಹರಿಯಲ್ಲಿ ಲೋಕಪ್ರಸಿದ್ಧವಾದುದನ್ನು ಅಂಗೀಕರಿಸಲಾಗುವುದಿಲ್ಲವೆಂದರೆ —)ಪ್ರಮಾಣಗಳಿಂದ ವಿರೋಧವು ಇಲ್ಲವಾದರೆ ಲೋಕಪ್ರಸಿದ್ಧವಾದುದನ್ನು ಶ್ರೀಹರಿಯಲ್ಲಿಯೂ ಅಂಗೀಕರಿಸಬೇಕು. (೩) (ಇಂದ್ರನ ಅನುಗ್ರಹವನ್ನು ಸಂಪಾದಿಸುವವನು ಅಹಲ್ಯಾಯೈ ಜಾರ ಎಂದು ಇಂದ್ರನ ನಿಂದೆಯನ್ನೇ ಮಾಡುತ್ತಾನೆ. ಆದಕಾರಣ ಅನುಗ್ರಹವು ಗುಣೋತ್ಕರ್ಷಜ್ಞಾನದಿಂದ ಆಗುತ್ತದೆಂದು ಹೇಳಿದ್ದು ಯುಕ್ತವಲ್ಲವೆಂದರೆ) ಅಹಲ್ಯಾದೇವಿಗೆ ಇಂದ್ರನು ಜಾರನು ಇತ್ಯಾದಿಗಳನ್ನು ಹೇಳುವ ವಾಕ್ಯವೂ, ಅಹಲ್ಯಾದೇವಿಯನ್ನು ಬಲಾತ್ಕಾರದಿಂದ ಸೆಳೆದರೂ ಇಂದ್ರನೇ ನಿನಗೆ ಸ್ತ್ರೀಯರನ್ನು ಬಲಾತ್ಕಾರದಿಂದ ಸೆಳದದ್ದಕ್ಕೆ ಫಲಭೂತವಾದ ದೋಷಲೇಪ ಅತಿ ಹೆಚ್ಚು ಆಗಲಿಲ್ಲವೆಂದು ಇಂದ್ರನ ಗುಣಾಧಿಕ್ಯವನ್ನೇ ಹೇಳುತ್ತದೆ (೪) (ಪರಸ್ತ್ರೀಯರನ್ನು ಸೆಳೆದರೆ ಅತಿಹೆಚ್ಚು ದೋಷಲೇಪವು ಹೇಗೆಂದರೆ) ಇತರರ ಸ್ತ್ರೀಯರನ್ನು ಬಲಾತ್ಕಾರದಿಂದ ಕೆಡಿಸಿದರೆ ಬಹುನರಕಗಳಲ್ಲಿ ದುಃಖವನ್ನನುಭವಿಸುವುದೇ ಅದಕ್ಕೆ ಫಲವು. ಹಿ= ಇದು ಸರ್ವಧರ್ಮಶಾಸ್ತ್ರಗಳಲ್ಲಿ ಪ್ರಸಿದ್ಧವು. ತತ್ಪರಾಣಾಂ ಪಾತಕಾನಾಂ ಫಲಮಂಧಂ ತಮಃ ಸ್ಮೃತಂ । ಎಂದು ಅಂಧಂತಮಸ್ಸು ಫಲವೆಂದು ಹೇಳಿದೆ ಪರದಾರೇಷು ತೇ ಬುದ್ಧಿಃ ನೈವ ಕಾರ್ಯಾ ಕಥಂಚನ । ಪರದಾರಾಽಭಿಗೃಧ್ನೋ ಹಿ ನರಃ ಪಾಪಂ ಸಮುಶ್ನುತೇ । ಅಯಶಃ ಪ್ರಾಪ್ನುಯಾದ್ಘೋರಂ ಮಹದ್ವಾ ಪ್ರಾಪ್ನುಯಾದ್ಭಯಂ । ಎಂದು ಭಾರತದಲ್ಲಿ ಇತ್ಯಾದಿ) (೫)(ಆ ಇಂದ್ರನಿಗೆ ದೋಷಲೇಪವು ಬರಲಿಲ್ಲವೆಂಬುದು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆಂದರೆ) ಅಹಲ್ಯಾದೇವಿಯನ್ನು ಕೆಡಿಸಿದುದರಿಂದ ಇಂದ್ರನಿಗೆ ರೋಮವೂ ಕೂಡ ಹಾಳಾಗಲಿಲ್ಲ (ಅತನಿಗೆ ಕೆಡಕು ಏನೂ ಆಗಲಿಲ್ಲ.) ಎಂದು ಶ್ರುತ್ಯಂತರವಿದೆ (೬) (ಶ್ರೀಹರಿಯ ಪ್ರಸಾದವು ಶ್ರೀಹರಿಯು ಸರ್ವೋತ್ತಮನೆಂಬ ಗುಣೋತ್ಕರ್ಷಜ್ಞಾನದಿಂದಲೇ ಸಿದ್ಧಿಸುವುದೆಂಬುವುದು ಯುಕ್ತಿಯಿಂದ ಮಾತ್ರ ಸಿದ್ಧಿಸುವುದಲ್ಲ ಆ ವಿಷಯದಲ್ಲಿ ಸರ್ವಶಾಸ್ತ್ರೋತ್ತಮವಾದ ಗೀತಾಪ್ರಮಾಣವೂ ಇದೆ ಎನ್ನುತ್ತಾರೆ.) ಯಾವಾತನು ಅಜ್ಞಾನವಿಲ್ಲದವನಾಗಿ ಹಿಂದೆ ಹೇಳಿದ

ಪ್ರಕಾರ ನನ್ನನ್ನು (ಶ್ರೀಕೃಷ್ಣನನ್ನು) ಪುರುಷೋತ್ತಮನನ್ನಾಗಿ ತಿಳಿಯುತ್ತಾನೋ ಸ ಸರ್ವವಿತ್ ಅವನು ಸರ್ವಜ್ಞನು, ಇದುಮೊದಲಾದ ಸ್ತುತಿರೂಪವಾಕ್ಯದಿಂದ (ಶ್ರೀಹರಿಯ ಪ್ರಸಾದವು ಗುಣಾಧಿಕ್ಯಜ್ಞಾನ ದಿಂದುಂಟಾಗುತ್ತದೆಂದು ತಿಳಿಯುತ್ತದೆ) (ಏವಂಚ ಎಲ್ಲಾ ವೇದಗಳಿಗೂ ಶ್ರೀಹರಿಯು ಸರ್ವಗುಣಪರಿ ಪೂರ್ಣನು, ಸರ್ವೋತ್ತಮನೆಂಬುವಲ್ಲಿಯೇ ಮಹಾತಾತ್ಪರ್ಯವೆಂದು ಸಿದ್ಧವಾಯಿತು) (೭)(ಬ್ರಹ್ಮರುದ್ರಾದಿ ದೇವತೆಗಳು ಸರ್ವೋತ್ತಮರೆಂದು ಪ್ರಸಿದ್ಧಿಯಿದ್ದುದರಿಂದ ಶ್ರೀವಿಷ್ಣುವು ಸರ್ವೋತ್ತಮನೆಂಬುವಲ್ಲಿಯೇ ಎಲ್ಲಾ ವೇದಗಳಿಗೂ ಮಹಾತಾತ್ಪರ್ಯವೆಂಬುದು ಹೇಗೆ? ಎಂದರೆ-) ಬ್ರಹ್ಮರುದ್ರನೊದಲಾದ ದೇವತೆಗಳಿ ಗಿಂತ ಶ್ರೀವಿಷ್ಣುವು ಸರ್ವೋತ್ಕೃಷ್ಟನು ಸರ್ವಗುಣಪರಿಪೂರ್ಣನು ಎಂಬುವುದು ಕೋಟಿ ಶಪಥಗಳಿಂದಲೂ ಸತ್ಯವೇ ಸತ್ಯವೇ ಸಂಶಯವಿಲ್ಲ ಶ್ರೀಹರಿಯ ಮಾಹಾತ್ಮ್ಯಗಳ ಲೇಶವನ್ನು ಕೋಟಿಪಾಲಾಗಿ ವಿಭಾಗ ಮಾಡಿದರೆ ಅದರಮಧ್ಯದಲ್ಲಿ ಯಾವುದು ಲೇಶವಿದೆಯೋ, ಅದನ್ನು ಪುನಃ ಅನಂತಪ್ರಕಾರ ವಿಭಾಗವಮಾಡಿ ಅದರ ಮಧ್ಯದಲ್ಲಿಯಾವುದು ಲೇಶವಿದೆಯೋ, ಆ ಲೇಶವನ್ನು ಪುನಃ ಅನಂತಪ್ರಕಾರ ವಿಭಾಗವಮಾಡಿ ಅದರಲ್ಲಿ ಯಾವುದು ಲೇಶವಿದೆಯೋ, ಆ ಲೇಶಕ್ಕೆ ಲಕ್ಷ್ಮೀದೇವಿ ಚತುರ್ಮುಖಬ್ರಹ್ಮ ಶೇಷ ರುದ್ರರು ಒಂದಂಶಕ್ಕೂ ಸಮಾನವಾದ ಮಾಹಾತ್ಮ್ಯಯುಳ್ಳವರಲ್ಲ, ಎಂದು ನಾರದೀಯ ಪುರಾಣದಲ್ಲಿದೆ ॥ ೫ ॥

ಭಾ ॥ (೧) ಅನ್ಯೋತ್ಕರ್ಷ ಐಕ್ಯಂ ಚ । ತಥೈವ ಸರ್ವಶಾಸ್ತ್ರೇಷು ಮಹಾಭಾರತಮುತ್ತಮಂ । ಕೋ ಹ್ಯನ್ಯಃ ಪುಂಡರೀಕಾಕ್ಷಾನ್ಮಹಾಭಾರತಕೃದ್ಭವೇತ್ । ಇತ್ಯಾದಿಗ್ರಂಥಾಂತರಸಿದ್ಧೋತ್ಕರ್ಷಮಹಾಭಾರತವಿರುದ್ಧಂ ॥ (೨) ತತ್ರ ಹಿ । (1)ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ । ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ಸಾಧಯಾಮ್ಯಹಂ । (2) ಯಸ್ಯ ಪ್ರಸಾದಜೋ ಬ್ರಹ್ಮಾ ರುದ್ರಶ್ಚ ಕ್ರೋಧಸಂಭವಃ । (3)ನ ತ್ವತ್ಸಮೋಽಸ್ತ್ಯಭ್ಯಧಿಕಃ । ಇತ್ಯಾದಿಷು ಸಾಧಾರಣಪ್ರಶ್ನಾವಸರ ಏವ ಮಹಾಂತಮುತ್ಕರ್ಷಂ ವಿಷ್ಣೋರ್ವಕ್ತಿ ॥ (೩) ಅನ್ಯತ್ರ ಯತ್ಕಿಂಚಿದುಕ್ತಾವಪ್ಯಸಾಧಾರಣ ಏವಾವಸರೇ ॥ (೪) ತದ್ಧಿ ಅಗ್ನ್ಯಾದೇರಪಿ ವೇದಾದಾವಸ್ತಿ ॥ (೫) (1) ತ್ವಮಗ್ನ ಇಂದ್ರೋ ವೃಷಭಃ ಸತಾಮಸಿ ತ್ವಂ ವಿಷ್ಣುರುರುಗಾಯೋ ನಮಸ್ಯಃ । (2) ವಿಶ್ವಸ್ಮಾದಿಂದ್ರ ಉತ್ತರ ಇತ್ಯಾದಿಷು ॥ ೬ ॥

ಅ ॥ (೧) ' ಹಾಗೆಯೇ ಸರ್ವಶಾಸ್ತ್ರಗಳಲ್ಲಿ ಮಹಾಬಾರತವು ಅತಿಶ್ರೇಷ್ಠವು ಶ್ರೀಹರಿಯು ಹೊರತು ಇನ್ನೊಬ್ಬನು ಯಾವನು ಮಹಾಭಾರತವನ್ನು ಮಾಡಿದವನು ಇರುವನು? ಇದುಮೊದಲಾದ ಗ್ರಂಥಾಂತರದಿಂದ ಮಹಾಭಾರತವು ಸರ್ವಶಾಸ್ತ್ರೋತ್ತಮವೆಂದು ಪ್ರಮಾಣಸಿದ್ಧವಾಗಿದೆ ಅಂತಹ ಮಹಾಭಾರತದಿಂದ ಕೆಲವು ಪುರಾಣಗಳಲ್ಲಿ ಬೇರೆಯವರು ಸರ್ವೋತ್ತಮರೆಂದೂ ಅವರಿಗೆ ಭಗವಂತನಿಂದ ಐಕ್ಯವೆಂದೂ ಹೇಳಿದ್ದು, ವಿರುದ್ಧವಾಗಿದೆ (ಆದಕಾರಣ ಅದನ್ನು ತೆಗೆದುಕೊಳ್ಳಕೂಡದು.) (೨) (ಮಹಾಭಾರತ ವಿರೋಧವು ಹೇಗೆಂದರೆ) ಆ ಮಹಾಭಾರತದಲ್ಲಿ, (1) ಶ್ರೀನಾರಾಯಣನಿಗೆ ಸಮಾನಿಕನು ಈಗ ಇಲ್ಲ, ಹಿಂದೆ ಇರಲಿಲ್ಲ, ಮುಂದೆ ಇರಲಾರನು ಈ ಸತ್ಯವಾಕ್ಯದಿಂದ ಎಲ್ಲಾ ಅರ್ಥಗಳನ್ನು ಸಾಧಿಸುತ್ತೇನೆ, (2) ' ಚತುರ್ಮುಖನು ಯಾರ ಅನುಗ್ರಹದಿಂದ ಹುಟ್ಟಿದ್ದಾನೋ, ರುದ್ರನು ಯಾರ ಕ್ರೋಧದಿಂದ ಹುಟ್ಟಿದ್ದಾನೋ" ಅಂತಹ ಶ್ರೀಹರಿಯೇ ಸರ್ವೋತ್ತಮನು (3) "ನಿನಗೆ ಸಮಾನಿಕನೇ ಇಲ್ಲವೆಂದಾದ ಮೇಲೆ ಉತ್ತಮನು ಹೇಗೆ ಇರುವನು' ಇದುಮೊದಲಾದ ವಾಕ್ಯಗಳಲ್ಲಿ ಸರ್ವೋತ್ತಮನು ಯಾರೆಂದು ಸಾಧಾರಣವಾಗಿ ಪ್ರಶ್ನಿಸುವಾಗಲೇ (ಅಂದರೆ ಶ್ರೀಹರಿಯ ಸ್ತುತಿಯನ್ನು ಪಕ್ರಮಿಸದೆ ಸ್ವರೂಪವನ್ನು

ಹೇಳುವ ಕಾಲದಲ್ಲಿಯೇ) ವೇದವ್ಯಾಸರು ಶ್ರೀವಿಷ್ಣುವಿಗೆ ಯಾವ ಪ್ರಮಾಣದಿಂದಲೂ ಸಂಕೋಚ ಮಾಡಲಿಕ್ಕೆ ಅಶಕ್ಯವಾದ ಉತ್ಕೃಷ್ಟತನವನ್ನು ಹೇಳಿರುತ್ತಾರೆ (೩) ಬೇರೆ ಪುರಾಣಗಳಲ್ಲಿ ಹೀಗೆಯೇ ರುದ್ರಾದಿಗಳು ಸರ್ವೋತ್ತಮರೆಂದು ಹೇಳಿದರೆ ಸಾಮ್ಯವೇ ಬರುವುದೆಂದರೆ) ಬೇರೆ ಪುರಾಣಗಳಲ್ಲಿ ರುದ್ರಾದಿಗಳಿಗೆ ಸರ್ವೋತ್ತಮತ್ವಾದಿಗಳನ್ನು ಹೇಳಿದರೂ ಅವರನ್ನು ಸ್ತುತಿಸುವ ಪ್ರಸಂಗದಲ್ಲಿಯೇ ರುದ್ರಾದಿಗಳಿಗೆ ಉತ್ಕೃಷ್ಟತ್ವಾದಿಗಳನ್ನು ಹೇಳಿದ್ದು. (೪) (ರುದ್ರಾದಿಗಳು ಸರ್ವೋತ್ತಮರೆಂದು ಅವರನ್ನು ಸ್ತುತಿಸುವ ಪ್ರಸಂಗದಲ್ಲಿ ಹೇಳಿದ್ದಾಗ್ಯೂ ಅದು ದುರ್ಬಲವು ಹೇಗೆ ಆಗುವುದು, ಎಂದರೆ) ಸ್ತುತಿಸುವ ಪ್ರಸಂಗದಲ್ಲಿ ಅಗ್ನಿ ಮೊದಲಾದ ದೇವತೆಗಳಿಗೂ ವೇದಮೊದಲಾದವುಗಳಲ್ಲಿ ಸರ್ವೋತ್ಕೃಷ್ಟತ್ವವು ಹೇಳಿದೆ. (ಅದನ್ನೂ ಒಡಂಬಡಬೇಕಾದೀತು) (೫) (ಎಲ್ಲಿ ಹೇಳಿಯದೆ ಎಂದರೆ) (1) ಎಲೋ ಅಗ್ನಿಯೇ ನೀನು ಪರಮೈಶ್ವರ್ಯಸಂಪನ್ನನು, ಸಜ್ಜನರಿಗೆ ನಿಯಾಮಕನು, ಸರ್ವತ್ರವ್ಯಾಪ್ತನು, ಚೆನ್ನಾಗಿಗಾನಮಾಡಲ್ಪಡತಕ್ಕವನು, ನಮಸ್ಕರಿಸಿಕೊಳ್ಳಲ್ಪಡತಕ್ಕವನು.) (2) ದೇವೇಂದ್ರನು ಎಲ್ಲರಿಗಿಂತಲೂ ಶ್ರೇಷ್ಠನು, ಇದುಮೊದಲಾದ ವೇದಗಳಲ್ಲಿ (ಅಗ್ನ್ಯಾದಿಗಳಿಗೂ ಸರ್ವೋತ್ತಮತ್ವವನ್ನು ಹೇಳಿದ್ದಾರೆ.) ॥ ೬ ॥

ಹೀ—ರುದ್ರಾದಿಗಳು ಸರ್ವೋತ್ತಮರೆಂದು ಕೆಲವು ಪುರಾಣಗಳಲ್ಲಿ ಹೇಳಿದ್ದನ್ನು ಸರ್ವಥಾ ಸ್ವೀಕರಿಸಕೂಡದೆನ್ನುತ್ತಾರೆ—

ಭಾ ॥ (೧) ತದ್ಗ್ರಂಥವಿರೋಧಾಚ್ಚ ॥ (೨) ತಥಾ ಹಿ ಸ್ಕಾಂದೇ ಶೈವೇ । ಯದಂತರಂ ವ್ಯಾಘ್ರಹರೀಂದ್ರಯೋರ್ವನೇ ಯದಂತರಂ ಮೇರುಗಿರೀಂದ್ರವಿಂಧ್ಯಯೋಃ । ಯದಂತರಂ ಸೂರ್ಯಸುರೇಡ್ಯಬಿಂಬಯೋಸ್ತದಂತರಂ ರುದ್ರಮಹೇಂದ್ರಯೋರಪಿ ॥ (೩) ಯದಂತರಂ ಸಿಂಹಗಜೇಂದ್ರಯೋರ್ವನೇ ಯದಂತರಂ ಸೂರ್ಯಶಶಾಂಕಯೋರ್ದಿವಿ । ಯದಂತರಂ ಜಾಹ್ನವಿಸೂರ್ಯಕನ್ಯಯೋಸ್ತದಂತರಂ ಬ್ರಹ್ಮಗಿರೀಶಯೋರಪಿ ॥ (೪) ಯದಂತರಂ ಪ್ರಲಯಜವಾರಿವಿಪ್ರುಷೋರ್ಯದಂತರಂ ಸ್ತಂಬಹಿರಣ್ಯಗರ್ಭಯೋಃ । ಸ್ಫುಲಿಂಗಸಂವರ್ತಕಯೋರ್ಯದಂತರಂ ತದಂತರಂ ವಿಷ್ಣುಹಿರಣ್ಯಗರ್ಭಯೋಃ ॥ (೫) ಅನಂತತ್ವಾನ್ಮಹಾವಿಷ್ಣೋಸ್ತದಂತರಮನಂತಕಂ। ಮಾಹಾತ್ಮ್ಯಸೂಚನಾರ್ಥಾಯ ಹ್ಯುದಾಹರಣಮೀರಿತಂ ॥ (೬) ತತ್ಸಮೋ ಹ್ಯಧಿಕೋ ವಾಪಿ ನಾಸ್ತಿ ಕಶ್ಚಿತ್ಕದಾಚನ । ಏತೇನ ಸತ್ಯವಾಕ್ಯೇನ ತಮೇವ ಪ್ರವಿಶಾಮ್ಯಹಂ । ಇತ್ಯಾದ್ಯಾಹ ॥ (೭) ತತ್ರೈವ ಶಿವಂ ಪ್ರತಿ ಮಾರ್ಕಂಡೇಯವಚನಂ । ಸಂಸಾರಾರ್ಣವನಿರ್ಮಗ್ನ ಇದಾನೀಂ ಮುಕ್ತಿಮೇಷ್ಯಸಿ । ಇತ್ಯಾದಿ ॥ (೮) ಪಾದ್ಮೇ ಶೈವೇ ಮಾರ್ಕಂಡೇಯಕಥಾಪ್ರಬಂಧೇ ಶಿವಾನ್ನಿಷಿಧ್ಯ ವಿಷ್ಣೋರೇವ ಮುಕ್ತಿಮಾಹ। ಅಹಂ ಭೋಗಪ್ರದೋ ವತ್ಸ ಮೋಕ್ಷದಸ್ತು ಜನಾರ್ದನಃ । ಇತ್ಯಾದಿ ॥ (೯) ಸಮುಬ್ರಾಹ್ಮವಿರೋಧಾಚ್ಚ ॥ ೭ ॥

ಅ ॥ (೧) ಶಿವನಿಗೇನೇ ಸರ್ವೋತ್ತಮತ್ವವನ್ನು ಹೇಳುವ ಪುರಾಣದಿಂದ ವಿರೋಧವು ಇರುತ್ತದೆ. (ಅಂದರೆ—ಶೈವ ಪುರಾಣದಲ್ಲಿಯೇ ಶಿವನು ಸರ್ವೋತ್ತಮನಲ್ಲ ಶ್ರೀವಿಷ್ಣುವೇ ಸರ್ವೋತ್ತಮನೆಂದು ಹೇಳಿದೆ.) (೨) ಶಿವನಿಗೇನೇ ಸರ್ವೋತ್ತಮತ್ವವನ್ನು ಹೇಳುವ ಸ್ಕಾಂದಪುರಾಣದಲ್ಲಿ ಅದನ್ನು ಪ್ರತಿಪಾದಿಸಿರುತ್ತಾರೆ ಕಾಡಿನಲ್ಲಿ ಹುಲಿ ಶ್ರೇಷ್ಠವಾದ ಸಿಂಹ ಇವುಗಳಿಗೂ, ಪರ್ವತ ಶ್ರೇಷ್ಠವಾದಮೇರು ವಿಂಧ್ಯಪರ್ವತ

ಇವುಗಳಿಗೂ, ಸೂರ್ಯಬಿಂಬ (ಕೆಳಗಿರತಕ್ಕದ್ದು) ಬೃಹಸ್ಪತ್ಯಾಚಾರ್ಯರ ಬಿಂಬ (ಮೇಲೆ ಇರತಕ್ಕದ್ದು.) ಇವುಗಳಿಗೂ, ಎಷ್ಟು ವ್ಯತ್ಯಾಸವಿದೆಯೋ, ಅಷ್ಟು ವ್ಯತ್ಯಾಸವು ರುದ್ರ ದೇವೇಂದ್ರ ಇವರಿಗೂ ಇದೆ. (೩) ಸಿಂಹ ಆನೆ, ಇವುಗಳಿಗೂ ಸೂರ್ಯ ಚಂದ್ರ ಇವರಿಗೂ, ಅಥವಾ ಸೂರ್ಯಮಂಡಲ ಚಂದ್ರಮಂಡಲ ಇವುಗಳಿಗೂ ಭಾಗೀರಥಿ, ಯಮುನಾ ಇವುಗಳಿಗೂ, ಎಷ್ಟು ವ್ಯತ್ಯಾಸವಿದೆಯೋ, ಅಷ್ಟು ವ್ಯತ್ಯಾಸವು ಚತುರ್ಮುಖಬ್ರಹ್ಮ ರುದ್ರ ಇವರಿಗೂ ಇದೆ (೪) ಪ್ರಲಯಸೀರು ಜಲಬಿಂದು, ಇವುಗಳಿಗೂ, ಕಂಬ ಚತುರ್ಮುಖ ಇವರಿಗೂ, ಬೆಂಕಿಕಿಡಿ ಪ್ರಲಯಕಾಲದಬೆಂಕಿ ಇವುಗಳಿಗೂ ಎಷ್ಟು ವ್ಯತ್ಯಾಸವಿದೆಯೋ, ಅಷ್ಟು ವ್ಯತ್ಯಾಸವು ಶ್ರೀಹರಿ ಚತುರ್ಮುಖಬ್ರಹ್ಮ ಇವರಿಗೂ ಇದೆ (೫) ಸರ್ವೋತ್ತಮನಾದ ಶ್ರೀವಿಷ್ಣುವು, ಸರ್ವದೇಶಗಳಲ್ಲಿ ವ್ಯಾಪ್ತನು ಸರ್ವಕಾಲಗಳಲ್ಲಿರುವವನು, ಸರ್ವಗುಣಪರಿಪೂರ್ಣನೂ ಆಗಿರುವುದರಿಂದ ಶ್ರೀವಿಷ್ಣುವಿಗೂ ಚತುರ್ಮುಖನಿಗೂ ಇದ್ದ ವ್ಯತ್ಯಾಸವು ನಿರವಧಿಕವಾದುದು ಶ್ರೀಹರಿಯ ಮಹಿಮೆಯು ಸಂಕ್ಷೇಪತಃ ಬುದ್ಧಿಯಲ್ಲಿ ನಿಲ್ಲುವುದಕ್ಕಾಗಿ ಉದಾಹರಣವನ್ನು ಹೇಳಿದ್ದು (ಅಲ್ಲದೆ ರುದ್ರ, ಇಂದ್ರ, ಬ್ರಹ್ಮ, ರುದ್ರ ಇವರಿಗೆ ವ್ಯತ್ಯಾಸವು ಇದ್ದಂತೆ ಚತುರ್ಮುಖಬ್ರಹ್ಮ, ವಿಷ್ಣು, ಇವರಿಗೆ ವ್ಯತ್ಯಾಸವು ಎಂದು ತೋರಿಸುವುದಕ್ಕಾಗಿ ದೃಷ್ಟಾಂತವನ್ನು ಹೇಳಿದ್ದಲ್ಲ.) (೬) ಆ ಶ್ರೀಹರಿಗೆ ಸಮಾನಿಕನಾಗಲೀ ಅವನಿಗಿಂತ ಉತ್ತಮನಾಗಲೀ ಯಾರೊಬ್ಬನೂ ಯಾವಾಗಲೂ ಇಲ್ಲವೇ ಇಲ್ಲ ಇಂತಹ ಯಥಾರ್ಥನುಡಿಯಿಂದ ಶ್ರೀಹರಿಯಿಂದುತ್ತಮನು ಸಮನಾಗಲೀ ಇಲ್ಲವೇ ಇಲ್ಲವೆಂದು ತಿಳಿದ ನಾನು ಮೋಕ್ಷವನ್ನೇ ಹೊಂದುವೆನು, ಇತ್ಯಾದಿಗಳನ್ನು ಹೇಳಿರುತ್ತಾರೆ (೭) ಶಿವಸರ್ವೋತ್ತಮತ್ವ ಪ್ರತಿಪಾದಕವಾದ ಆ ಸ್ಕಾಂದ ಪುರಾಣದಲ್ಲಿಯೇ ಶಿವನಿಂದ ಸರ್ವಥಾ ಮೋಕ್ಷವಾಗುವುದಿಲ್ಲವೆಂದು ಹೇಳಿ ಮಾರ್ಕಂಡೇಯಋಷಿಗಳು ಶಿವನಿಗೆ "ಎಲೋ ಶಿವನೇ ಸಂಸಾರಸಮುದ್ರದಲ್ಲಿ ಮುಳುಗಿದ ನೀನು ಈಗ ಮೋಕ್ಷವನ್ನು ಹೊಂದುವಿ" ಇತ್ಯಾದಿ ಪ್ರಕಾರ ಹೇಳಿರುವರು (೮) ಶಿವನಿಗೆ ಸರ್ವೋತ್ತಮತ್ವವನ್ನು ಹೇಳುವ ಪಾದ್ಮಪುರಾಣದಲ್ಲಿ ಮಾರ್ಕಂಡೇಯ ಋಷಿಗಳು ಕಥೆಯನ್ನು ಹೇಳುವ ಸಂದರ್ಭದಲ್ಲಿ ರುದ್ರದೇವರಿಂದ ಮೋಕ್ಷವಾಗುವುದಿಲ್ಲವೆಂದು ಹೇಳಿ ಶ್ರೀವಿಷ್ಣುವಿನಿಂದಲೇ ಅಧಿಕಾರಿಗಳಿಗೆ ಮೋಕ್ಷವಾಗುತ್ತದೆಂದು ಹೇಳಿರುತ್ತಾರೆ ಎಲೋ ಮಗನೇ ನಾನು ಭಜಕರಿಗೆ ಸಂಪದಾದಿ ಭೋಗಗಳನ್ನು ಕೊಡುವವನು ಶ್ರೀಪರಮಾತ್ಮನು ಮೋಕ್ಷವನ್ನು ಕೊಡುವವನು, ಇತ್ಯಾದಿ ವಿಷಯವನ್ನು ರುದ್ರದೇವರು ಹೇಳಿದ್ದಾರೆಂದು ಮಾರ್ಕಂಡೇಯ ಋಷಿಗಳು ಹೇಳಿರುತ್ತಾರೆ (೯) ಬ್ರಾಹ್ಮಪುರಾಣವು ವಿಷ್ಣು, ಶಿವ ಸ್ಕಂದ, ಸೂರ್ಯ, ವಿನಾಯಕ ಶಾಸ್ತ್ರಗಳಿಗೆ (ಅಂದರೆ ಶೈವ ವೈಷ್ಣವ ಪಕ್ಷಗಳಿಗೆ) ಸಮವಾದುದು ಅಂತಹ ಪುರಾಣದಲ್ಲಿ **ನಾಹಂ ನಚ ಶಿವೋಽನ್ಯೇ ಚ ತಚ್ಛಕ್ತ್ಯೇಕಾಂಶಭಾಗಿನಃ । ಬಾಲಃ ಕ್ರೀಡನಕೈರ್ಯದ್ವತ್ಕ್ರೀಡತೇಽಸ್ಮಾಭಿರಚ್ಯುತಃ** ಇದುಮೊದಲಾದ ವಚನಗಳಿಂದ ವಿರೋಧವು ಬರುವುದರಿಂದಲೂ (ವಿಷ್ಣುವಿನಿಂದ ಬೇರೆಯಾದ ರುದ್ರಾದಿಗಳು ಸರ್ವೋತ್ತಮರೆಂದು ಪುರಾಣಗಳಲ್ಲಿ ಹೇಳಿದ್ದನ್ನು ಸರ್ವಥಾ ಸ್ವೀಕರಿಸಕೂಡದು) ॥ ೭ ॥

ಪೀ— ಲೌಕಿಕಪ್ರತೀತಿಯು ಭ್ರಮೆಯಾಗಲಿ ಪುರಾಣಗಳು ವಿಪ್ರಲಂಭ (ಮೋಸಮಾಡಬೇಕೆಂಬ ಇಚ್ಛೆ)ಮೂಲಕಗಳಾಗಿರುವುದರಿಂದ ಮೋಹಕಗಳೂ ಆಗಲಿ, ಆದರೂ **ವಿಶ್ವಾಧಿಕೋ ರುದ್ರಃ ವಿಶ್ವಸ್ಮಾದಿಂದ್ರ ಉತ್ತರಃ** ಇದುಮೊದಲಾದ ವೇದಗಳಲ್ಲಿ ರುದ್ರಾದಿಗಳಿಗೆ ಸರ್ವೋತ್ತಮತ್ವವನ್ನು ಹೇಳಿದ್ದರಿಂದ ಅವುಗಳಿಂದ ವಿರೋಧವು ಬರುವುದು ಎಂದರೆ—

**ಭಾ ॥ (೧)ವೇದಶ್ಚೇತಿಹಾಸಾದ್ಯವಿರೋಧೇನ ಯೋಜ್ಯಃ । ಯದಿ ವಿದ್ಯಾದಿತಿ ವಚನಾತ್ ॥ (೨) ಅನಿರ್ಣಯಾಚ್ಚೇಂದ್ರಾದಿಶಂಕಯಾಽನ್ಯಥಾ ॥ (೩) ತತ್ರಾಪೀಷ್ಟಸಿದ್ಧಿಃ । ನಾಮವೈಶೇಷ್ಯಾತ್ ॥ (೪) ಅತೋ ಭಗವದುತ್ಕರ್ಷ ಏವ ಸರ್ವಾಗಮಾನಾಂ ಮಹಾತಾ-**

**ತ್ಪರ್ಯಂ ॥ (೫) ತಥಾಽಪಿ ಸ್ವತಃ ಪ್ರಾಮಾಣ್ಯಾತ್ಸನ್ನೇವೋಚ್ಯತೇ । ಅವಿರೋಧಾತ್ ॥ ೮ ॥**

**ಅ ॥** (೧) **ಯದಿ ವಿದ್ಯಾಚ್ಚತುರ್ವೇದಾನ್ ಸಾಂಗೋಪನಿಷದಾನ್ ದ್ವಿಜಃ । ನ ಚೇತ್ಪುರಾಣಂಸಂವಿದ್ಯಾನ್ನೈವ ಸ ಸ್ಯಾದ್ವಿಚಕ್ಷಣಃ** ಎಂಬ ಪ್ರಮಾಣದಿಂದ ಇತಿಹಾಸಾದಿಗಳಿಗೆ ವಿರೋಧವು ಬಾರದಂತೆ ವೇದಗಳಿಗ ಅರ್ಥವನ್ನು ಮಾಡಬೇಕು (ಅಂದರೆ **ವಿಶ್ವಾಧಿಕೋ ರುದ್ರಃ** ಎಂಬುದಕ್ಕೆ ರುದ್ರನಿಗಿಂತ ನಿಕೃಷ್ಟರಾದ ಇಂದ್ರಾದಿಗಳಿಗಿಂತ ರುದ್ರನು ಉತ್ತಮನು,ಎಂದು ವಿಶ್ವಶಬ್ದದ ಅರ್ಥವನ್ನು ಸಂಕೋಚ ಮಾಡಿಕೊಳ್ಳಬೇಕು ಅಥವಾ ವಿಶ್ವ=ವಿಷ್ಣುವಾಯುಗಳು ಉತ್ತಮರಾಗಿ ಉಳ್ಳವನು, ಇತ್ಯಾದ್ಯರ್ಥವನ್ನು ಇಟ್ಟುಕೊಳ್ಳಬೇಕು.) (೨) (ಇತಿಹಾಸಾದಿಗಳಲ್ಲಿ ಹೇಳಿದ ಅರ್ಥವನ್ನು ಇಟ್ಟುಕೊಳ್ಳದೆ ಯಥಾಶ್ರುತವಾಗಿ ವೇದಗಳಿಗೆ ಅರ್ಥ ಹೇಳಿದರೆ ಅನಿಷ್ಟ ಹೇಳುತ್ತಾರೆ ) ಇತಿಹಾಸಾದಿಗಳಲ್ಲಿಹೇಳಿದ ಅರ್ಥವನ್ನು ಇಟ್ಟುಕೊಳ್ಳದೆ **ವಿಶ್ವಾಧಿಕಃ** ಇತ್ಯಾದಿ ವೇದಗಳಿಂದ ರುದ್ರನು ಸರ್ವೋತ್ತಮನೆಂದು ಅರ್ಥ ಇಟ್ಟುಕೊಳ್ಳುವುದಾದರೆ **ವಿಶ್ವಸ್ಮಾದಿಂದ್ರ ಉತ್ತರಃ** ಇತ್ಯಾದಿ ವೇದಗಳಿಂದ ಇಂದ್ರಾದಿಗಳೂ ಸರ್ವೋತ್ತಮರೆಂದು ಸಂದೇಹವುಬರುವುದು ಆದರಿಂದ ನಿರ್ಣಯವು ಇಲ್ಲವೆಂದಾಗುವ ಪ್ರಯುಕ್ತವೂ ವೇದವು ಅಪ್ರಮಾಣವಾಗಬೇಕಾಗುವುದು ) (೩) (**ವಿಶ್ವಾಧಿಕೋ ರುದ್ರಃ** ಇದುಮೊದಲಾದ ವೇದವು ಶ್ರೀವಿಷ್ಣುವು ಸರ್ವೋತ್ತಮನೆಂಬುದಕ್ಕೆ ವಿರೋಧಿಯಲ್ಲವೆಂಬುದು ಮಾತ್ರವಲ್ಲ, ಪರಂತು) ಆ ವೇದದಲ್ಲಿಯೂ ನಮಗೆ ಪರಮಸಮ್ಮತವಾದ ಶ್ರೀವಿಷ್ಣುವು ಸರ್ವೋತ್ತಮನೆಂಬುವ ಅರ್ಥವು ಸಿದ್ಧಿಸುತ್ತದೆ (ಹೇಗೆಂದರೆ) (ರುದ್ರಮೊದಲಾದ ಎಲ್ಲಾಶಬ್ದಗಳು ಮಹಾಯೋಗ ವಿದ್ವದ್ರೂಢಿಗಳಿಂದ ವಿಷ್ಣುವಿನಲ್ಲಿಯೇ ಇರುವಕಾರಣ) ರುದ್ರಮೊದಲಾದ ಎಲ್ಲಾ ನಾಮಗಳುಳ್ಳವನು ಶ್ರೀವಿಷ್ಣುವೇ ಅಥವಾ ಶ್ರೀವಿಷ್ಣುವಿಗೇನೇ ರುದ್ರಾದಿ ಎಲ್ಲಾ ನಾಮಗಳಿದ್ದಪ್ರಯುಕ್ತ ಅವನೇ ಸರ್ವೋತ್ತಮನು (೪) ರುದ್ರಾದಿಗಳು ಸರ್ವೋತ್ತಮರೆಂಬಲ್ಲಿ ಪ್ರಮಾಣವಿಲ್ಲದಿರುವುದರಿಂದಲೂ **ನಾಸ್ತಿ ನಾರಾಯಣಸಮಂ** ಇದುಮೊದಲಾದ ಪ್ರಮಾಣಗಳಿಂದ ವಿರೋಧವಿರುವುದರಿಂದಲೂ ಎಲ್ಲಾ ವೇದಾದಿಗಳಿಗೂ ಶ್ರೀಹರಿಯು ಸರ್ವೋತ್ತಮನೆಂಬಲ್ಲಿಯೇ ಮುಖ್ಯ ತಾತ್ಪರ್ಯವು (೫) (ಇವುಗಳೆಲ್ಲವೂ ಇತಲಿ ರಾಜಾದಿಗಳಿಂದ ದ್ರವ್ಯಾದಿಗಳನ್ನು ಹೊಂದಲಿಕ್ಕೆ ನೀನು ಇಂದ್ರನು ಚಂದ್ರನೆಂದು ಹೊಗಳಿದಂತೆ ಮೋಕ್ಷವನ್ನು ಪಡೆಯಲಿಕ್ಕೆ ಶ್ರೀಹರಿಯ ಪ್ರಸಾದವನ್ನು ಹೊಂದುವುದಕ್ಕಾಗಿ ಶ್ರೀಹರಿಯು ಸರ್ವೋತ್ತಮನೆಂದು ಹೊಗಳಿದ್ದು ವಾಸ್ತವವಲ್ಲ ಗುಣೋತ್ಕರ್ಷವನ್ನು ಹೇಳುವ ವೇದವಾಕ್ಯಕ್ಕೆ ಸಮಾನವಾದ ಬೇರೆ ಪ್ರಮಾಣವಿಲ್ಲದಿರುವುದರಿಂದ ಅದು ಪಾರಮಾರ್ಥಿಕ ಸತ್ಯವೆಂದು ನಿಶ್ಚಯವಾಗಲಾರದು, ಎಂದರೆ) ಮೋಕ್ಷರೂಪ ಫಲವನ್ನುದ್ದೇಶಿಸಿ ಶ್ರೀಹರಿಯ ಅನುಗ್ರಹವನ್ನು ಹೊಂದುವುದಕ್ಕಾಗಿ ಹೇಳಿದಾಗ್ಯೂ ವೇದಗಳಿಗೆ ಸಂವಾದ (ಆ ಅರ್ಥವನ್ನು ಹೇಳುವ ಮತ್ತೊಂದು ಪ್ರಮಾಣ) ವನ್ನಪೇಕ್ಷಿಸದೆ ಜ್ಞಾನವನ್ನು ಗ್ರಹಿಸತಕ್ಕ ಸಾಕ್ಷಿಯಿಂದಲೇ ಪ್ರಾಮಾಣ್ಯವು ನಿಶ್ಚಿತವಾಗಿರುವುದರಿಂದ ಸತ್ಯವಾದುದೇ ಹೇಳಲ್ಪಡುತ್ತದೆ (ಅಂದರೆ ಜ್ಞಾನವನ್ನು ಗ್ರಹಿಸತಕ್ಕ ಸಾಕ್ಷಿಯೇ ಇದು ಪ್ರಮಾಣವೆಂದೂ ನಿಶ್ಚಯಿಸಿಕೊಳ್ಳುತ್ತದೆ) (ವೇದದಿಂದುಂಟಾಗತಕ್ಕ ಗುಣೋತ್ಕರ್ಷಾದಿ ಜ್ಞಾನಪ್ರಾಮಾಣ್ಯವು ನಿಶ್ಚಿತವಾಗೋಣ ವೇದಪ್ರತಿಪಾದ್ಯವಾದ ಗುಣೋತ್ಕರ್ಷರೂಪವಿಷಯವು ಅಸತ್ಯವೆಂದು ಸಂಶಯಪಡಕೂಡದು ) (ಪ್ರಾಮಾಣ್ಯವನ್ನು ಜ್ಞಾನಗ್ರಾಹಕಸಾಕ್ಷಿಯಿಂದಲೇ ಗ್ರಹಿಸಿಕೊಳ್ಳುವುದಾದರೆ—ಬೌದ್ಧಾದ್ಯಾಗಮಗಳಲ್ಲಿರತಕ್ಕ ವಿಷಯವೂ ಸತ್ಯವಾಗಬೇಕಾಗುವುದು ಎಂದರೆ—) (ಬೌದ್ಧಾದ್ಯಾಗಮಗಳಲ್ಲಿ ಪ್ರಾಮಾಣ್ಯಕ್ಕೆ ಪ್ರಸಕ್ತಿಯಿದ್ದರೂ ಪ್ರಬಲವಿರೋಧದಿಂದ ಪ್ರಾಮಾಣ್ಯವು ಬಾಧಿತವಾಗುತ್ತದೆ ಪ್ರಕೃತದಲ್ಲಿ) ವಿರೋಧವು ಯಾವುದೂ ಇಲ್ಲದಿರುವುದರಿಂದ (ಪ್ರಾಮಾಣ್ಯವು ಗೃಹೀತವೇ ಆಗುತ್ತದೆ )

**ವಿ ॥** (1) **ಅನೃತಜಡವಿರೋಧಿರೂಪ** ಇತ್ಯಾದಿ ಬೌದ್ಧಾಗಮದಿಂದುಂಟಾಗತಕ್ಕ ಜ್ಞಾನವು ಸಾಕ್ಷಿ

ಯಿಂದ ತಿಳಿಯಲ್ಪಡತಕ್ಕುದು. ಆ ಜ್ಞಾನದಲ್ಲಿದ್ದ ಪ್ರಾಮಾಣ್ಯವನ್ನು ಜ್ಞಾನಗ್ರಾಹಕ ಸಾಕ್ಷಿಯು ತಿಳಿಯು ವುದಿಲ್ಲವೆಂದಾದರೆ ಪ್ರಾಮಾಣ್ಯಕ್ಕೆ ಸ್ವತಸ್ತ್ವವಿಲ್ಲವೆಂದು ಹೇಳಬೇಕಾಗುವುದು ಸಾಕ್ಷಿಯು ತಿಳಿಯುತ್ತ ದೆಂದಾದರೆ—ಬೌದ್ಧಾಗಮದಲ್ಲಿದ್ದ ವಿಷಯವೂ ಸತ್ಯವಾಗಬೇಕಾಗುವುದು, ಎಂದರೆ-ಜ್ಞಾನವನ್ನು ಗ್ರಹಿಸ ತಕ್ಕ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುತ್ತದೆಂಬುದು ಸಾಮಾನ್ಯನ್ಯಾಯವು ಪ್ರಬಲಬಾಧಕವಿದ್ದರೆ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಆದಕಾರಣ ಇಲ್ಲಿಯೂ ಸಾಕ್ಷಿಯು ಬೌದ್ಧವಾಕ್ಯದಿಂದುಂಟಾದ ಜ್ಞಾನವನ್ನು ಮಾತ್ರ ಗ್ರಹಿಸಿದರೂ ಪ್ರಬಲಬಾಧಕರೂಪವಾದ ಅಪ್ರಾಮಾಣ್ಯಗ್ರಾಹಕ ಸಾಮಗ್ರಿಯಿಂದ ಪ್ರತಿಬದ್ಧವಾಗಿ ಪ್ರಾಮಾಣ್ಯವನ್ನೇ ಗ್ರಹಿಸುವುದಿಲ್ಲ (2) ಹೀಗೆ ಹೇಳಿದರೆ ಸ್ವತಸ್ತ್ವವು ಇಲ್ಲವೆಂದಾಗ ಬೇಕಾಗುವುದು ಎಂದೂ ಇಲ್ಲ ಏಕೆಂದರೆ **ಗ್ರಾಹ್ಯಪ್ರಾಮಾಣ್ಯವಿರೋಧ್ಯುಪಸ್ಥಾಪಕಸಾಮಗ್ರ್ಯಸ- ಮವಹಿತಜ್ಞಾನಗ್ರಾಹಕಗ್ರಾಹ್ಯತ್ವಂ ಸ್ವತಸ್ತ್ವಂ** ಗ್ರಾಹ್ಯವಾದ ಪ್ರಾಮಾಣ್ಯಕ್ಕೆ ವಿರೋಧಿಯಾದ ಸಾಮಗ್ರಿಯು ಇಲ್ಲದಿದ್ದು ಜ್ಞಾನವು ಯಾವುದರಿಂದ ಗೃಹೀತವಾಗುತ್ತದೋ ಅದರಿಂದಲೇ ಅದರಲ್ಲಿರತಕ್ಕ ಪ್ರಾಮಾಣ್ಯವೂ ಗೃಹೀತವಾಗುತ್ತದೆ ಅಂತಹುದು **ಸ್ವತಸ್ತ್ವವು.** (3) ಬೌದ್ಧವಾಕ್ಯದಿಂದುಂಟಾದ ಪ್ರಾಮಾಣ್ಯಗ್ರಹಣದಲ್ಲಿ ಅಪವಾದವು ಇದ್ದಂತೆಯೇ ಶ್ರೀವಿಷ್ಣುವು ಸರ್ವೋತ್ತಮನೆಂದು ಹೇಳುವವೇದ ದಿಂದುಂಟಾಗುವ ಪ್ರಾಮಾಣ್ಯಗ್ರಹಣದಲ್ಲಿ ಪ್ರಬಲವಿರೋಧವೇ ಇಲ್ಲ (4) ಅಥವಾ ಬ್ರಹ್ಮರುದ್ರರು ಸರ್ವೋತ್ತಮರೆಂದು ವೇದದಲ್ಲಿ ಹೇಳಿದ್ದನ್ನು ನಿರಾಕರಿಸಿದ್ದರಿಂದ ಅದೇ ವೇದದಲ್ಲಿ ಹೇಳಿದ ವಿಷ್ಣುವು ಸರ್ವೋತ್ತಮನೆಂಬುವಲ್ಲಿ ವಿಶ್ವಾಸವು ಹೇಗೆಂದರೆ ಬ್ರಹ್ಮರುದ್ರರು ಸರ್ವೋತ್ತಮರೆಂದು ಹೇಳಿದರೆ ಭಾರ ತಾದಿ ಸರ್ವೋತ್ತಮ ಶಾಸ್ತ್ರಗಳಿಂದ ವಿರೋಧವು ಇದ್ದಂತೆಯೇ ಇಲ್ಲಿ ವಿರೋಧವೇ ಇಲ್ಲ ॥ ೮ ॥

**ಪೀ**-ಬೇರೆಯವರು ಸರ್ವೋತ್ತಮರೆಂದು ಕಾಣದಿರುವುದರಿಂದ ಅದೇ ದೃಷ್ಟಾಂತದಿಂದ ಶ್ರೀಹರಿಯೂ ಸರ್ವೋತ್ತಮನಲ್ಲವೆಂದು ಸಾಧಿಸಲಿಕ್ಕೆ ಬರುವುದರಿಂದ ಈಶ್ವರನೂ ಸರ್ವೋತ್ತಮನಲ್ಲ, ಪುರುಷನಾದ ಪ್ರಯುಕ್ತ ಈ ಪುರುಷನಂತೆ ಎಂಬ ಅನುಮಾನವಿರೋಧವು ಬರುವುದು ಎಂದರೆ--

**ಭಾ ॥ (೧) ನ ಚ ಪ್ರಮಾಣಸಿದ್ಧಸ್ಯಾನ್ಯತ್ರಾದೃಷ್ಟ್ಯಾಪಹ್ನವೋ ಯುಕ್ತಃ । ಧರ್ಮವೈಚಿ- ತ್ರ್ಯಾದರ್ಥಾನಾಂ ॥ (೨) ಸ್ವತಃ ಪ್ರಾಮಾಣ್ಯಾನಂಗೀಕಾರೇ ಮಾನೋಕ್ತಾವಸ್ಯ- ದೋಷತ್ವಂ ಚ ಸಾಧಯೇದಿತ್ಯತಿಪ್ರಸಂಗಃ ॥ (೩) ಅನನ್ಯಾಪೇಕ್ಷಯಾ ಚ ತತ್ಪರತ್ವಂ ಸಿದ್ಧಮಾಗಮಾನಾಂ ॥ (೪) (1) ನಾರಾಯಣಪರಾ ವೇದಾಃ । (2) ಸರ್ವೇ ವೇದಾ ಯತ್ಪದಮಾಮನಂತಿ । (3) ವಾಸುದೇವಪರಾ ವೇದಾ ಇತಿ ॥ ೯ ॥**

**ಅ** ॥ (೧) ಶ್ರೀಹರಿಯು ಸರ್ವೋತ್ತಮನೆಂಬುವುದು ಅಪೌರುಷೇಯವಾದಕಾರಣ ದೋಷಲೇಶ ವಿಲ್ಲದ ವೇದರೂಪಪ್ರಮಾಣದಿಂದ ಸಿದ್ಧವಾಗಿದೆ ಆ ವಿಷ್ಣುಸರ್ವೋತ್ತಮತ್ವವು ಬೇರೆ ಯಾರಲ್ಲಿಯೂ ಕಾಣದಿರುವುದರಿಂದ ಅದನ್ನು ಬಿಡುವುದು ಸರ್ವಥಾ ಯುಕ್ತವಲ್ಲ ) (ಆದಕಾರಣ ಅನುಮಾನವು ಅಯು ಕ್ತವು.)ಗೋವು ಅಶ್ವ ಮೊದಲಾದ ವಸ್ತುಗಳಿಗೆ ಸಾಸ್ನಾ ಏಕಶಫ ಮೊದಲಾದ ಧರ್ಮಗಳಿಂದ ಮಹಿಷ(ಎಮ್ಮೆ) ಮೊದಲಾದವುಗಳಿಂದ ವೈಲಕ್ಷಣ್ಯವಿದೆ ಪ್ರಮಾಣಗಳಿಂದ ಬಾಧಿತವಾದುದನ್ನು ಊಹಿಸುವುದಾದರೆ ಆ ವೈಲಕ್ಷಣ್ಯವು ಬಾರದೆ ಹೋಗುವುದು (ಅಂದರೆ ಕುದುರೆಯು ಮಹಿಷಾದಿಗಳಿಂದ ವಿಲಕ್ಷಣವಲ್ಲ ಪಶು ವಾದ ಪ್ರಯುಕ್ತ, ಮಾಹಿಷದಂತೆ ಎಂದು ಊಹಿಸಬೇಕಾಗುವುದು ) (ಅಥವಾ ಚೈತ್ರಾದಿಗಳಲ್ಲಿ ಕಾಣದಿದ್ದ ಸರ್ವೋತ್ತಮತ್ವವು ಶ್ರೀಹರಿಗೆ ಹೇಗೆ ಕೂಡುತ್ತದೆಂದರೆ ಲೋಕದಲ್ಲಿ ಬೇರೆಬೇರೆ ಧರ್ಮಗಳಿಂದ ವಸ್ತು ಗಳಲ್ಲಿ ವೈಚಿತ್ರ್ಯವು ಕಂಡದೆ ಆದಕಾರಣ ಅಸಂಭಾವಿತವಲ್ಲ ) (೨) (ಸ್ವತಏವ ಪ್ರಾಮಾಣ್ಯವನ್ನು

ಇಟ್ಟುಕೊಳ್ಳುವುದಾದರೆ ಹೀಗೆ ಹೇಳಬಹುದಿತ್ತು ಅದನ್ನು ಒಡಂಬಡದಿದ್ದರೆ ಬಾಧಕವೇನೆಂದರೆ) ಯಾವುದರಿಂದ ಜ್ಞಾನವು ಬರುತ್ತದೋ, ಅದರಿಂದಲೇ ಅದು ಪ್ರಮಾಣವೆಂದು ಸ್ವತಃಪ್ರಾಮಾಣ್ಯವನ್ನೊಡಂಬಡದೆ ಸಂವಾದ (ಆ ಅರ್ಥವನ್ನೇ ಹೇಳುವ ಪ್ರಮಾಣಾಂತರ) ದಿಂದ ಪ್ರಾಮಾಣ್ಯವು ಗೃಹೀತವಾಗುತ್ತದೆಂದು ಒಡಂಬಟ್ಟು ಪ್ರಾಮಾಣ್ಯವನ್ನು ನಿಶ್ಚಯಿಸುವುದಕ್ಕಾಗಿ ಸಂವಾದಕ ಪ್ರಮಾಣವನ್ನು ಹೇಳಿದರೂ, ಆ ಉಕ್ತಿಯೂ ಪ್ರಮಾಣವೆಂದು ಇನ್ನೊಂದು ಸಂವಾದಕಪ್ರಮಾಣದಿಂದ ಸಾಧಿಸಬೇಕು ಅದು ಪ್ರಮಾಣವೆಂದು ಇನ್ನೊಂದು ಪ್ರಮಾಣದಿಂದ ಸಾಧಿಸಬೇಕು. ಹೀಗೆ ಅನವಸ್ಥಾರೂಪವಾದ ಅತಿಪ್ರಸಂಗವು ತಪ್ಪಿದ್ದಲ್ಲ ಅಥವಾ ವೇದಗಳನ್ನು ಯಾರೂ ಮಾಡಿದ್ದಲ್ಲ ಆದುದರಿಂದ ಅಪ್ತೋಕ್ತತ್ವರೂಪವಾದ ಗುಣವಿಲ್ಲದಿರುವುದರಿಂದ ಅಲ್ಲಿ ಹೇಳಿದ್ದನ್ನು ನಿಶ್ಚಯಿಸುವುದಕ್ಕಾಗಿ ಇನ್ನೊಂದು ಪ್ರಮಾಣ ಹೇಳಬೇಕು, ಎಂದರೆ ದೋಷ ಶಂಕೆಯಿಲ್ಲದಿರುವ ವೇದದಲ್ಲಿ ಹೇಳಿದ ವಿಷಯದಲ್ಲಿಯೂ ಇನ್ನೊಂದು ಪ್ರಮಾಣ ಹೇಳುವುದಾದರೆ—ದೋಷವಿಲ್ಲವೆಂದು ನಿಶ್ಚಯವಿದ್ದ ಸ್ಥಳದಲ್ಲಿಯೂ ದೋಷವಿಲ್ಲವೆಂದು ಸಾಧಿಸಬೇಕಾಗುವುದು, ಹೀಗೆ ಅತಿಪ್ರಸಂಗವು ಬರುವುದು (೩) ಪ್ರಯೋಜನವನ್ನಪೇಕ್ಷಿಸದೆ ಸರ್ವೋತ್ಕೃಷ್ಟನೆಂದು ಪ್ರತಿಪಾದಿಸಿದುದರಿಂದ ಎಲ್ಲಾ ವೇದಗಳೂ ಶ್ರೀಹರಿಗೆ ಗುಣಪೂರ್ಣತ್ವವನ್ನೇ ಪ್ರತಿಪಾದಿಸುತ್ತವೆಂದು ಸಿದ್ಧವಾಯಿತು (೪) ಹೇಗೆಂದರೆ—(1) ಎಲ್ಲಾ ವೇದಗಳೂ ಶ್ರೀನಾರಾಯಣನನ್ನೇ ಪ್ರತಿಪಾದಿಸುತ್ತವೆ (2)ಎಲ್ಲಾ ವೇದಗಳೂ ಯಾವ ಶ್ರೀಹರಿಯ ಸ್ವರೂಪವನ್ನು ಹೇಳುತ್ತವೆ (3) ವೇದಗಳೆಲ್ಲವೂ ವಾಸುದೇವನನ್ನೇ ಹೇಳುತ್ತವೆ

ವಿ || (1) ಪ್ರಯೋಜನದ ಅಪೇಕ್ಷೆಯು ಇಲ್ಲದೆ ವೇದಗಳು ಶ್ರೀಹರಿಗೆ ಗುಣಪೂರ್ಣತ್ವವನ್ನು ಹೇಳುತ್ತವೆಂದು ಇಲ್ಲಿ ಹೇಳಿತು ಮೋಕ್ಷವೇ ಮಹಾಪುರುಷಾರ್ಥವೆಂದು ಪ್ರಯೋಜನಾಪೇಕ್ಷೆಯಿದೆ, ಎಂದು ಹಿಂದೆ ಹೇಳಿದೆ ಹೀಗೆ ಪ್ರಯೋಜನದ ಅಪೇಕ್ಷೆಯಿಂದ ಶ್ರೀಹರಿಯು ಸರ್ವಗುಣಪರಿಪೂರ್ಣನೆಂಬ ಪಕ್ಷದಲ್ಲಿ ಪ್ರಯೋಜನದಿಂದ ಅದನ್ನು ಸಾಧಿಸಿರುವರು (2) ಪ್ರಯೋಜನದ ಅಪೇಕ್ಷೆಯಿಲ್ಲ ಎಂಬ ಪಕ್ಷದಲ್ಲಿ ಆಗಮಗಳಿಂದಲೇ ಅದು ಸಿದ್ಧವಾಗಿದೆ ಇವೆರಡು ಕಲ್ಪಗಳೂ **ಸರ್ವೇ ವೇದಾಸ್ತು ದೇವಾರ್ಥಾ ದೇವಾ ನಾರಾಯಣಾರ್ಥಕಾಃ । ನಾರಾಯಣಸ್ತು ಮೋಕ್ಷಾರ್ಥೋ ಮೋಕ್ಷೋ ನಾನ್ಯಾರ್ಥ ಇಷ್ಯತೇ । ಇತಿ ಮಧ್ಯಮಭಕ್ತಾನಾಮೇಕಾಂತಾನಾಂ ನ ಕಸ್ಯಚಿತ್ । ಅರ್ಥೋ ನಾರಾಯಣೋ ದೇವಃ ಸರ್ವಮನ್ಯತ್ತದರ್ಥಕಂ** ॥ ಸರ್ವ ವೇದಗಳು ದೇವತೆಗಳ ಜ್ಞಾನವನ್ನು ಹುಟ್ಟಿಸುತ್ತವೆ ದೇವತೆಗಳು ಶ್ರೀ ನಾರಾಯಣನ ಜ್ಞಾನವನ್ನು ಹುಟ್ಟಿಸುತ್ತಾರೆ ಶ್ರೀನಾರಾಯಣನನ್ನು ಮೋಕ್ಷಕ್ಕಾಗಿ ತಿಳಿಯಬೇಕು. ಮೋಕ್ಷಕ್ಕೆ ಇನ್ನೊಂದು ಪ್ರಯೋಜನವಿಲ್ಲ ಹೀಗೆ ಮಧ್ಯಮಭಕ್ತರ ಮನೋವ್ಯಾಪಾರವು ಉತ್ತಮಭಕ್ತರಿಗೆ ಯಾವ ಅರ್ಥದಲ್ಲಿಯೂ ಅಪೇಕ್ಷೆಯಿಲ್ಲ. ಶ್ರೀನಾರಾಯಣನೇ ಪರಮಪುರುಷಾರ್ಥನು ॥ ೯ ॥

ಪೀ—ಶ್ರೀಹರಿಯು ಸರ್ವೋತ್ತಮನೆಂಬೀ ಒಂದು ಅರ್ಥವನ್ನು ಪ್ರತಿಪಾದಿಸುವ ಎಲ್ಲಾ ವೇದರೂಪವಾದ ಒಂದು ವಾಕ್ಯಕ್ಕೆ ಪ್ರಯೋಜನಾಪೇಕ್ಷೆಯಿರುವುದು, ಇಲ್ಲದಿರುವುದು, ಎಂಬುದು ವಿರುದ್ಧವೆಂದರೆ—

**ಭಾ ॥ (೧) ನ ಚೈತದ್ವಿರುದ್ಧಂ । ಈಶ್ವರನಿಯಮಾತ್ ॥ (೨) ಅನಾದೌ ಚ ತತ್ಸಿದ್ಧಂ । ದ್ರವ್ಯಂ ಕರ್ಮ ಚ ಕಾಲಶ್ಚೇತ್ಯಾದೌ ॥ (೩) ಪ್ರಯೋಜಕತ್ವಂ ತು ಪೂರ್ವೋಕ್ತನ್ಯಾಯೇನ । ಅತಸ್ಸಿದ್ಧಮೇತತ್ ॥ (೪) ತಚ್ಚಾನನ್ಯಾಪೇಕ್ಷಾಚಿಂತ್ಯಶಕ್ತಿತ್ವ ಏವ ಯುಕ್ತಂ । ಅತೋ ನ ಮಾಯಾಮಯಮೇಕಂ ॥ (೫) ಅಚಲತ್ವಂ ತ್ವಪ್ರಹರ್ಷಮನಾನಂದಮದುಃಖಮಸುಖಂ ನಪ್ರಜ್ಞಂ ಅಸದ್ವಾ ಇತ್ಯಾದಿವತ್ ॥ ೧೦ ॥**

**ಅ ||** (೧) ಮಧ್ಯಮರು, ಉತ್ತಮರು, ಎಂದು ತಿಳಿಯುವವರು ಬೇರೆ ಬೇರೆಯಾಗಿರುವುದರಿಂದ ಪ್ರಯೋಜನಾಪೇಕ್ಷೆಯಿದೆ, ಇಲ್ಲ, ಎಂಬುದು ಎರಡು ವಿರುದ್ಧವಲ್ಲ. (ಮಧ್ಯಮಭಕ್ತರಿಗೆ ಮೋಕ್ಷವಾಗುವುದಕ್ಕಾಗಿ ಗುಣಪರಿಪೂರ್ಣನಾದ ಶ್ರೀಹರಿಯನ್ನು ಪ್ರತಿಪಾದಿಸುವೆನು, ಏಕಾಂತ ಭಕ್ತರಿಗೆ ಪ್ರಯೋಜನಾಪೇಕ್ಷೆಯಿಲ್ಲದೆ ಶ್ರೀಹರಿಯನ್ನು ಪ್ರತಿಪಾದಿಸುವೆನು, ಎಂದು ಜಡಭೂತವಾದ ವೇದಕ್ಕೆ ಚೇತನರಂತೆ ಪ್ರವೃತ್ತಿಯು ಹೇಗೆ ಕೂಡುತ್ತದೆ ಎಂದರೆ) ಶ್ರೀಹರಿಯು ಜಡಭೂತವಾದ ವೇದಕ್ಕೂ ಹಾಗೆ ಪ್ರೇರೇಪಿಸುವುದರಿಂದ (ಜಡಭೂತವಾದ ವೇದಕ್ಕೆ ಹೀಗೆ ಪ್ರವೃತ್ತಿಯು ಕೂಡುತ್ತದೆ.) (೨) (ಅನಾದಿನಿತ್ಯವಾದ ವೇದವನ್ನು ಈಶ್ವರನು ಪ್ರೇರಿಸುತ್ತಾನೆಂಬುದು ಹೇಗೆ ಕೂಡುತ್ತದೆಂದರೆ) ಅನಾದಿಪದಾರ್ಥವಿಷಯದಲ್ಲಿಯೂ ಶ್ರೀಹರಿಯು ಪ್ರೇರೇಪಿಸುತ್ತಾನೆಂಬುದು **ದ್ರವ್ಯಂ ಕರ್ಮ ಚ ಕಾಲಶ್ಚ** ಇತ್ಯಾದಿ ಪ್ರಮಾಣಗಳಲ್ಲಿ ಸಿದ್ಧವಾಗಿದೆ (೩) ಅನಾದಿನಿತ್ಯವಾದ ವೇದವನ್ನು ಶ್ರೀಹರಿಯು ಪ್ರೇರಿಸುತ್ತಾನೆಂಬುದು ಶ್ರೀಹರಿಗೆ ಅಚಿಂತ್ಯಶಕ್ತಿಯಿದ್ದ ಪ್ರಯುಕ್ತ ಕೂಡುತ್ತದೆ. (ಅಂದರೆ **ಅನಾದೀನಾಂ ಗುಣಾದೀನಾಂ ಯಥಾ ಗುಣ್ಯಾದಿತಂತ್ರತಾ । ತಥಾಽನಾದಿಶ್ರುತೇರಸ್ತು ಕ್ಷೇಮಾಯೇಶ್ವರತಂತ್ರತಾ ।** ಅನಾದಿನಿತ್ಯಗಳಾದ ಗಗನಾದಿಪರಿಮಾಣಾದಿಗಳಿಗೆ ಸ್ವಾಶ್ರಯಗಗನಾದಿಗಳ ಅಧೀನತೆಯು ಇದ್ದಂತೆಯೇ ಅನಾದಿಭೂತವಾದ ವೇದಕ್ಕೂ, ವೇದಪದಪ್ರವೃತ್ತಿನಿಮಿತ್ತಕ್ಕೂ, ಉತ್ಪತ್ತಿಯಿಲ್ಲದಿದ್ದರೂ ಅದು ವಿಷ್ಣುವಿನ ಅಧೀನವಾಗಿಯೇ ಇರುತ್ತದ) ಪ್ರಯೋಜನವನ್ನಪೇಕ್ಷಿಸಿಯೂ ಅಪೇಕ್ಷಿಸದೆಯೂ ವೇದವು ಶ್ರೀಹರಿಯು ಗುಣಪೂರ್ಣನು ಎಂದು ಪ್ರತಿಪಾದಿಸುತ್ತದೆ ಎಂಬ ಎರಡು ಪಕ್ಷದಲ್ಲಿಯೂ ವಿಷ್ಣುಸರ್ವೋತ್ತಮತ್ವರೂಪಮಹಾತಾತ್ಪರ್ಯ ವಿರೋಧವು ಬರುವುದರಿಂದ ಶ್ರೀಹರಿಗೆ ಈಕ್ಷಿತೃತ್ವಾದಿಗಳು ಮಾಯೆಯಿಂದ ಪರಿಕಲ್ಪಿತಗಳೆಂದು ಹೇಳಕೂಡದೆಂದು ಸಿದ್ಧವಾಯಿತು (೪) (ಈಕ್ಷಿತೃತ್ವಾದಿಗಳು ಮಿಥ್ಯೆಯು ಎಂಬಲ್ಲಿ ಪ್ರಮಾಣವಿಲ್ಲ ಹೇಗೆಂದರೆ (1) ಈಕ್ಷಿತೃತ್ವಕ್ಕೆ ಸ್ಥಾಣುತ್ವವು ಮಾಯಾಪರಿಕಲ್ಪಿತವೆಂದು ಹೇಳದೆ ಕೂಡುವುದಿಲ್ಲವೆಂಬೀ ಅನ್ಯಥಾನುಪಪತ್ತಿಯಿಂದ ಈಕ್ಷಿತೃತ್ವಕ್ಕೆ ಮಾಯಾಪರಿಕಲ್ಪಿತತ್ವವು ಕಲ್ಪಿಸಲ್ಪಡುತ್ತದೋ (2) ಪ್ರಮಾಣಾಂತರದಿಂದ ಕಲ್ಪಿಸಲ್ಪಡುತ್ತದೋ, (1)ನೇದ್ದು ಕೂಡಲಾರದು ಹೇಗೆಂದರೆ–**ತ್ವಯೀಶ್ವರೇ ಬ್ರಹ್ಮಣಿ ನೋ ವಿರುಧ್ಯತೇ** ಎಂದು ಬೇರೆ ಕಡೆ ಒಟ್ಟಿಗೆ ಇಲ್ಲದಿದ್ದರೂ ಧರ್ಮಗಳು ಅಘಟಿತಘಟಕ ಐಶ್ವರ್ಯ ಸಾಮರ್ಥ್ಯದಿಂದಲೇ ವಿರೋಧವಿಲ್ಲವೆಂದು ಹೇಳಿದಕಾರಣ ಈಕ್ಷಿತೃತ್ವಾದಿಗಳು ಮಾಯಾಪರಿಕಲ್ಪಿತಗಳಾಗದೆ ಪಾರಮಾರ್ಥಿಕಗಳೆಂದೇ ಕೂಡುವುದರಿಂದ ಅರ್ಥಾಪತ್ತಿಗೆ ಅವಕಾಶವಿಲ್ಲವೆನ್ನುತ್ತಾರೆ–) ಸ್ಥಾಣುವೂ ನೋಡುತ್ತದೆಂಬುದು ಸ್ವತಂತ್ರವಾದ ಅಘಟಿತಘಟಕ ಅಚಿಂತ್ಯಶಕ್ತಿಯಿದ್ದ ಪ್ರಯುಕ್ತವೇ ಕೂಡುತ್ತದೆ (2ನೇದ್ದೂ ಕೂಡಲಾರದು ಹೇಗೆಂದರೆ ಬೇರೆ ಪ್ರಮಾಣಗಳು ತೋರಿಬರಲಿಲ್ಲವೆನ್ನುತ್ತಾರೆ) ಆದಕಾರಣ ಯಾವ ಪ್ರಮಾಣವೂ ಇಲ್ಲದಿರುವುದರಿಂದ ಸ್ಥಾಣುತ್ವ ಈಕ್ಷಿತೃತ್ವಗಳಲ್ಲಿ ಈಕ್ಷಿತೃತ್ವವು ಮಾಯಾಪರಿಕಲ್ಪಿತವಲ್ಲ (೫) (**ನಿತ್ಯಃ ಸರ್ವಗತಃ ಸ್ಥಾಣುಃ ಅಚಲಃ** ಎಂಬಲ್ಲಿದ್ದ **ಅಚಲಃ** ಎಂಬುದಕ್ಕೆ ಪರಕೀಯರು ಚಲನವಿಲ್ಲದವನೆಂದು ಅರ್ಥ ಮಾಡಿರುವರು ಅದು ಅಯುಕ್ತವೆನ್ನುತ್ತಾರೆ–) ಲೌಕಿಕಸಂತೋಷವಿಲ್ಲದವನು, ಲೌಕಿಕ ಆನಂದವಿಲ್ಲದವನು, ಸರ್ವಾತ್ಮನಾ ದುಃಖವಿಲ್ಲದವನು, ಲೌಕಿಕಸುಖವಿಲ್ಲದವನು, ಲೌಕಿಕ ಅನಿತ್ಯಜ್ಞಾನವಿಲ್ಲದವನು, ಲೌಕಿಕ ಸತ್ತಾದಿಗಳಿಲ್ಲದವನು ಇತ್ಯಾದಿಗಳಂತೆಯೇ ಲೌಕಿಕ ಕ್ರಿಯಾವಿಲ್ಲದವನೆಂದೂ ಅರ್ಥವು

**ವಿ ||** (1) ಪರಬ್ರಹ್ಮನು ಸತ್ಯ ಜ್ಞಾನ ಆನಂದಸ್ವರೂಪನು ಎಂದು ಅಂಗೀಕರಿಸುವವನು ಲೌಕಿಕ ಸತ್ತಾ (ಪರತಂತ್ರಸತ್ತಾ) ಇಲ್ಲದವನು, ಅನಿತ್ಯಜ್ಞಾನವಿಲ್ಲದವನು, ವಿಷಯಗಳಿಂದುಂಟಾಗುವ ಅನಿತ್ಯ ಸುಖವಿಲ್ಲದವನು ಇತ್ಯಾದಿ ಪ್ರಕಾರ ಈ ವಾಕ್ಯಗಳಿಗೆ ಹೇಗೆ ಅರ್ಥ ಹೇಳುತ್ತೀರೋ, ಹಾಗೆಯೇ **ಅಚಲಃ** ಎಂಬುದಕ್ಕೂ ಲೌಕಿಕ ಕ್ರಿಯೆಯಿಲ್ಲದವನೆಂದು ಅರ್ಥ ಮಾಡಬೇಕು ಸರ್ವಥಾ ಕ್ರಿಯೆಯೇ ಇಲ್ಲವೆಂದು

**ಅರ್ಥ ಹೇಳುವುದಾದರೆ ಅಪ್ರಹರ್ಷಂ** ಇತ್ಯಾದಿಗಳಿಗೂ ಸರ್ವಥಾ ಆನಂದಾದಿಗಳು ಇಲ್ಲವೆಂದು ಅರ್ಥ **ಹೇಳಬೇಕಾಗುವುದು.** ವಿಶೇಷವಿಲ್ಲವಷ್ಟೆ! ॥ ೧೦ ॥

**ಟೀ—ವಿಜ್ಞಾನಮಾನಂದಂ ಬ್ರಹ್ಮ, ಸತ್ಯಂ ಜ್ಞಾನಂ** ಇದುಮೊದಲಾದ ಪ್ರಮಾಣಗಳಿಂದ ಶ್ರೀ ಹರಿಯು ಆನಂದರೂಪನು ಇತ್ಯಾದಿಪ್ರಕಾರ ಪ್ರಮಿತನಾದಪ್ರಯುಕ್ತ ಹಾಗೆ ಅರ್ಥವು ಕೂಡಿದರೂ ಪ್ರಕೃತ ದಲ್ಲಿ ಕೂಡಲಿಕ್ಕಿಲ್ಲ ಎಂದರೆ **ಅಚಲಃ** ಎಂಬಲ್ಲಿಯೂ ಹಾಗೆಯೇ ಕೂಡುತ್ತದೆ ಎನ್ನುತ್ತಾರೆ—

**ಭಾ ॥ (೧)ಕ್ರಿಯಾದೃಷ್ಟೇಃ । ತಪೋ ಮೇ ಹೃದಯಂ ಸಾಕ್ಷಾತ್ತನುರ್ವಿದ್ಯಾ ಕ್ರಿಯಾಽಽಕೃತಿಃ। ಇತ್ಯಾದ್ಯುಕ್ತೇಃ ॥ (೨) ಅತಶ್ಚ ನ ಮಾಯಾಮಯಂ ಸರ್ವಂ ॥ (೩) ಐಶ್ವರ್ಯಾದಿ- ವಾಚಿಭಗಶಬ್ದೇನೈವ ಸಂಬೋಧನಾಚ್ಚ ತಂ ತ್ವಾ ಭಗೇತ್ಯಾದೌ । ಸ್ವರೂಪತ್ವಾಚ್ಚ ನ ಮಾಯಾಮಯತ್ವಂ ಯುಕ್ತಂ ॥ (೪) ವಿಜ್ಞಾನಶಕ್ತಿರಹಮಾಸಮನಂತಶಕ್ತೇಃ । ಮಯ್ಯನಂತಗುಣೇಽನಂತೇ ಗುಣತೋಽನಂತವಿಗ್ರಹೇ ॥ (೫) ಪರಾಽಸ್ಯ ಶಕ್ತಿರ್ವಿವಿ- ಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ । ಇತ್ಯಾದಿವಚನಾತ್ ॥೨೪॥**

**ಅ** ॥ (೧) ಶ್ರೀಹರಿಗೆ ಚಲನಾದಿರೂಪವಾದ ಕ್ರಿಯೆಯು ಕಾಣುತ್ತದೆ (ಯಾವ ಪ್ರಮಾಣದಿಂದ ಎಂದರೆ) ನನ್ನ ಹೃದಯವು ಜ್ಞಾನರೂಪವಾದ ಆಲೋಚನವು ಶರೀರವು ಸಾಕ್ಷಾತ್ತಾಗಿ ವಿದ್ಯಾ ಸ್ವರೂಪವು ಆಕಾರವು ಕ್ರಿಯಾಸ್ವರೂಪವು. ಅಂದರೆ ತಪೋಽಭಿಮಾನೀ ರುದ್ರಸ್ತು ವಿಷ್ಣೋರ್ಹೃದಯ **ಮಾಶ್ರಿತಃ । ವಿದ್ಯಾರೂಪಾ ತಥೈವೋಮಾ ವಿಷ್ಣೋಸ್ತನುಮುಪಾಶ್ರಿತಾ । ಶೃಂಗಾರಾದ್ಯಾಕೃತಿಗತಃ ಕ್ರಿಯಾತ್ಮಾ ಪಾಕಶಾಸನಃ ॥** ಕೃಚ್ಛ್ರಚಾಂದ್ರಾಯಣ ಮೊದಲಾದ ತಪಸ್ಸಿಗೆ ಅಭಿಮಾನಿಯಾದ ರುದ್ರನು ನನ್ನ (ಶ್ರೀಹರಿಯ) ಹೃದಯದಿಂದ ಹುಟ್ಟಿದ್ದಾನೆ ಹೃದಯವನ್ನು ಆಶ್ರಯಿಸಿರುತ್ತಾನೆ ವಿದ್ಯೆಗಳಿಗೆ ಅಭಿ ಮಾನಿನಿಯಾದ ಪಾರ್ವತಿಯು ನನ್ನ ಶರೀರದಿಂದ ಹುಟ್ಟಿದವಳು ಶರೀರವನ್ನು ಆಶ್ರಯಿಸಿರುತ್ತಾಳೆ ಕ್ರಿಯೆ ಗಳಿಗೆ ಅಭಿಮಾನಿಯಾದ ದೇವೇಂದ್ರನು ಶೃಂಗಾರಾದ್ಯಾಕಾರದಿಂದ ಹುಟ್ಟಿದವನು ಆಕಾರವನ್ನು ಆಶ್ರಯಿಸಿ ದವನು. ಎಂದು ಭಗವಂತನ ವಾಕ್ಯಕ್ಕೆ ಆಚಾರ್ಯರೇ ಬೇರೆ ಕಡೆ ರೀತ್ಯಂತರದಿಂದ ಅರ್ಥ ಹೇಳಿದ ಪ್ರಯುಕ್ತ ಶ್ರೀಹರಿಗೆ ಕ್ರಿಯೆಯಿದೆ, ಎಂಬಲ್ಲಿ ಇದು ಪ್ರಮಾಣವಾಗುವುದು ಹೇಗೆಂದರೆ- **ಅಂಗೈಃ ಪರಾದ್ಯೇ ಹಿ ದೇವಾ ವಿಸೃಷ್ಟಾಸ್ತತ್ತದ್ಗುಣಾನ್ಪರಮೋ ಸಂಹರೇತ ।** ಇತ್ಯಾದಿ ಪ್ರಮಾಣಗಳಿಂದ ಶ್ರೀಭಗವಂತನ ಆಯಾವ ಅಂಶಗಳಿಂದ ಹುಟ್ಟಿದ ದೇವತೆಗಳು ಆಯಾವ ಅಂಗಗಳಲ್ಲಿರುವ ಗುಣಕ್ರಿಯಾದಿಗಳನ್ನು ಧ್ಯಾನಿಸ ಬೇಕು. ಹೇಗೆಂದರೆ ಶ್ರೀಹರಿಯ ಕಣ್ಣಿನಲ್ಲಿ ಮಹಾಪ್ರಕಾಶಕತ್ವ, ಮನಸ್ಸಿನಲ್ಲಿ ಸಂತೋಷಾತಿಶಯವನ್ನುಂಟು ಮಾಡುವಿಕೆ, ಮೊದಲಾದ ಗುಣಗಳನ್ನು ಸೂರ್ಯಚಂದ್ರಾದಿಗಳು ಧ್ಯಾನಿಸಿ ಆಯಾವ ಗುಣಗಳನ್ನು ಪಡದಿರು ತ್ತಾರೆ ಅಂತೆಯೇ ಇಲ್ಲಿಯೂ ತಪೋಭಿಮಾನಿಯಾದ ರುದ್ರನು ಶ್ರೀಹರಿಯ ಹೃದಯದಿಂದ ಹುಟ್ಟಿ ಹೃದಯ ವನ್ನು ಆಶ್ರಯಿಸುತ್ತಾ ಹೃದಯದಲ್ಲಿ ಸಂಹಾರಕತ್ವ ಮೊದಲಾದ ಗುಣಗಳನ್ನು ಧ್ಯಾನಿಸಿ ಶ್ರೀಹರಿಯ ಅನು ಗ್ರಹದಿಂದ ಸಂಹಾರಕನಾಗಿರುತ್ತಾನೆಂದೂ ವಿದ್ಯೆಗಳಿಗೆ ಅಭಿಮಾನಿಯಾದ ಪಾರ್ವತಿಯು ಶ್ರೀಹರಿಯ ಶರೀರ ದಿಂದ ಹುಟ್ಟಿ ಶರೀರವನ್ನು ಆಶ್ರಯಿಸುತ್ತಾ ಶರೀರದಲ್ಲಿ ಸೌಂದರ್ಯ ಮೊದಲಾದ ಗುಣಗಳನ್ನು ಧ್ಯಾನಿಸುತ್ತಿ ರುವ ಕಾರಣ ಶ್ರೀಲಕ್ಷ್ಮೀಭಾರತಿಯರು ಬಿಟ್ಟು ಇತರ ಸ್ತ್ರೀಯರಿಗಿಂತ ಸೌಂದರ್ಯ ಮೊದಲಾದ ಗುಣಾತಿ ಶಯವುಳ್ಳವಳಾಗಿರುತ್ತಾಳೆಂದೂ ಕ್ರಿಯಾಭಿಮಾನಿಯಾದ ದೇವೇಂದ್ರನು ಶ್ರೀಹರಿಯ ಆಕಾರದಿಂದ ಹುಟ್ಟಿ ಆಕಾರವನ್ನು ಆಶ್ರಯಿಸುತ್ತಾ ಭಗವದಾಕೃತಿಯಲ್ಲಿ ಜಗದ್ರಕ್ಷಣ ಶಾಸನ ಮೊದಲಾದ ಕ್ರಿಯೆಗಳನ್ನು ಧ್ಯಾನಿ ಸುತ್ತಿರುವ ಕಾರಣ ಸ್ವರ್ಗದಲ್ಲಿ ಪಾಲಕತ್ವ ಮೊದಲಾದ ಕ್ರಿಯೆಗಳುಳ್ಳವನಾಗಿರುತ್ತಾನೆಂದೂ, ದೇವತೆಗಳು

ಧ್ಯಾನಿಸಬೇಕು. ಇದುಮೊದಲಾದ ಪ್ರಮಾಣಗಳಿಂದ ಶ್ರೀಹರಿಯಲ್ಲಿ ಕ್ರಿಯೆಗಳಿವೆಂಬುದು ಸಿದ್ಧವಾಗುತ್ತದೆ (೨) (**ವಿಜ್ಞಾನಮಾನಂದಂ ಬ್ರಹ್ಮ** ಇತ್ಯಾದಿಗಳಲ್ಲಿ ವಿಜ್ಞಾನ ಆನಂದಾದಿಗಳು ಪರಬ್ರಹ್ಮ ಸ್ವರೂಪ ಗಳೆಂದಂಗೀಕರಿಸಿರುವುದರಿಂದ ಅವುಗಳು ನಿರವಕಾಶಗಳು (ಬೇರೆರೀತಿ ಅರ್ಥ ಮಾಡಲಶಕ್ಯಗಳು) ಗುಣಕ್ರಿಯಾದಿರೂಪಗಳಾದ ಬ್ರಹ್ಮಧರ್ಮಗಳೆಲ್ಲವೂ, ಮಾಯಾಪರಿಕಲ್ಪಿತಗಳಾಗಿರುವುದರಿಂದ ಕ್ರಿಯಾ ವಾಕ್ಯಗಳು ಸಾವಕಾಶಗಳು (ಬೇರೆರೀತಿ ಅರ್ಥ ಮಾಡಲಿಕ್ಕೆ ಶಕ್ಯಗಳು) ಆದಕಾರಣ ಪುನಃ ವೈಷಮ್ಯವಿದೆ ಎಂದರೆ) ಮಹಾತಾತ್ಪರ್ಯವಿರೋಧವಿದ್ದುದರಿಂದಲೇ ಯಾವುದೊಂದೂ ಮಾಯಾ ಪರಿಕಲ್ಪಿತವೆಂದು ಹೇಳಕೂಡದು (೩) ತಂ **ತ್ವಾ ಭಗ ಪ್ರವಿಶಾನಿ ಸ್ವಾಹಾ ಭಗ= ಐಶ್ವರ್ಯಸ್ಯ ಸಮಗಸ್ಯ ವೀರ್ಯಸ್ಯ ಯಶಸಃ ಶ್ರಿಯಃ । ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ।** ಎಂದು ಹೇಳಿದ ಐಶ್ವರ್ಯಾದಿ ಗುಣಗಳುಳ್ಳ ಶ್ರೀಹರಿಯೇ ಅಂತಹ ನಿನ್ನನ್ನು ಪ್ರವೇಶಿಸುತ್ತೇನೆ, ಅಂದರೆ ನಿನ್ನ ಪರಮಾನುಗ್ರಹದಿಂದ ಮೋಕ್ಷವನ್ನು ಹೊಂದುತ್ತೇನೆ ಇತ್ಯಾದಿಗಳಲ್ಲಿ ಐಶ್ವರ್ಯಾದಿಗುಣಗಳನ್ನು ಹೇಳುವ **ಭಗ** ಶಬ್ದದಿಂದಲೇ ಶ್ರೀಹರಿಯನ್ನು **ಭಗ** ಮಾಯಾಪರಿಕಲ್ಪಿತವಲ್ಲದ ಸತ್ಯವಾದ ಮಹದೈಶ್ವರ್ಯಸಂಪನ್ನನಾದ ಶ್ರೀಹರಿಯೇ ಎಂದು ಸಂಬೋಧಿಸಿದುದರಿಂದಲೂ, (ಶ್ರೀಹರಿಯ ಧರ್ಮಗಳು ಮಾಯೆಯಿಂದ ಕಲ್ಪಿತಗಳಲ್ಲ) (**ಭಗವನ್** ಎಂಬ ಅರ್ಥದಲ್ಲಿ **ಭಗ** ಎಂದು ಸಂಬೋಧಿಸಿದ್ದು ಎಂದು ಏಕೆ ಆಗಲಾರದೆಂದರೆ ಹಾಗೆ ಕಲ್ಪಿಸಲಿಕ್ಕೆ ಕಾರಣವಿಲ್ಲದಿರುವುದರಿಂದ ಅಶ್ರುತವಾದ **ಮತುಪ್** ಪ್ರತ್ಯಯವನ್ನು ಕಲ್ಪಿಸುವುದು ಯುಕ್ತವಲ್ಲ ಹೀಗೆ **ಭಗ** ಎಂದು ಸಂಬೋಧಿಸಿದರೆ— ಐಶ್ವರ್ಯ ಮೊದಲಾದ ಆರು ಗುಣಗಳು ಶ್ರೀಹರಿಯ ಸ್ವರೂಪಗಳೆಂದೇ ಸಿಗುತ್ತವೆ ಮಾಯಾಪರಿಕಲ್ಪಿತಗಳಲ್ಲವೆಂದು ಸಿಗುವುದಿಲ್ಲವೆಂದರೆ) ಐಶ್ವರ್ಯ ಮೊದಲಾದ ಗುಣಗಳು ಶ್ರೀಹರಿಯ ಸ್ವರೂಪಗಳಾಗಿರುವುದರಿಂದಲೂ, ನಿರವಧಿಕಗಳಾಗಿರುವುದರಿಂದಲೂ, ಆ ಗುಣಗಳು ಸ್ವಭಾವಸಿದ್ಧಗಳು, ಎಂದು ಹೇಳುವ ಪ್ರಮಾಣಗಳಿರುವುದರಿಂದಲೂ ಪರಶಕ್ತ್ಯಾದಿಗಳು ಇಮದರಿಂದಲೂ, ಮಾಯಾಪರಿಕಲ್ಪಿತಗಳೆಂದು ಹೇಳುವುದು ಯುಕ್ತ ವಲ್ಲ. (೪) (1) **ನಾಭಿಹ್ರದಾದಿಹ ಸತೋಽಂಭಸಿ ಯಸ್ಯ ಪುಂಸೋ ವಿಜ್ಞಾನಶಕ್ತಿರಹಮಾಸಮನಂತಶಕ್ತೇಃ** ಈ ನೀರಿನಲ್ಲಿ ಇರುವ ಅನಂತ ಶಕ್ತಿಯುಳ್ಳ ಯಾವ ಶ್ರೀಹರಿಯ ನಾಭಿಪದ್ಮದಿಂದ ದೇವತೆಗಳಲ್ಲಿ ಶ್ರೇಷ್ಠನಾಗಿರುವುದರಿಂದ ವಿಜ್ಞಾನಶಕ್ತಿಯುಳ್ಳ ನಾನು (ಚತುರ್ಮುಖಬ್ರಹ್ಮನು) ಹುಟ್ಟಿರುವೆನೋ ಅಂತಹ ಶ್ರೀಹರಿಯೇ ಸರ್ವೋತ್ತಮನು ಎಂದು ಭಾಗವತ ೩ನೇ ಸ್ಕಂಧದಲ್ಲಿ ಬ್ರಹ್ಮನ ವಾಕ್ಯವು (2) ನಿರವಧಿಕ ಜ್ಞಾನಾದಿ ಗುಣಗಳುಳ್ಳ, ಪ್ರತ್ಯೇಕವಾಗಿಯೂ, ಅಪರಿಮಿತಗಳಾದ ಗುಣಗಳುಳ್ಳ ಸಂಖ್ಯೆಯಿಲ್ಲದ ರೂಪಗಳುಳ್ಳ, ನನ್ನ ನಾಭಿಯಲ್ಲಿ, (**ಯದಾಸೀತ್ತತ ಏವಾದ್ಯಃ ಸ್ವಯಂಭೂಃ ಸಮಭೂದಜಃ** ಇರತಕ್ಕ ಕಮಲದಿಂದ ಚತುರ್ಮುಖಬ್ರಹ್ಮನು ಹುಟ್ಟಿದನು (3) ಶ್ರೀಹರಿಗೆ ಬಹುವಿಧವಾದ ಶಕ್ತಿಯೂ ಜ್ಞಾನಬಲ ಕ್ರಿಯೆಗಳೂ, ಇವೆಲ್ಲವೂ ಸರ್ವೋತ್ಕೃಷ್ಟವಾದವುಗಳು. ಸ್ವಾಭಾವಿಕವಾದವುಗಳು. ಇದುಮೊದಲಾದ ಪ್ರಮಾಣಗಳಿಂದ ಶ್ರೀಹರಿಯ ಶಕ್ತ್ಯಾದಿಗಳು, ಸರ್ವಥಾ ಮಾಯಾಪರಿಕಲ್ಪಿತಗಳಲ್ಲ ಮಾಯಾಪರಿಕಲ್ಪಿತಗಳೆಂದು ಇಟ್ಟುಕೊಂಡರೆ ಅನಂತತ್ವಾದಿಗಳು ಸರ್ವಥಾ ಕೂಡಲಾರವು ॥ ೨೪ ॥

**ತಾ ॥ (೧) ಅಚ್ಛೇದ್ಯತ್ವಾದಿಕಂ ಜೀವಸ್ಯಾಪಿ ತತ್ಸ(ಸ)ಮಮಿತ್ಯಾಹ । ಅಚ್ಛೇದ್ಯೋಽಯಮಿತಿ ॥ (೨) ನಿತ್ಯಂ ಸರ್ವಗತೇ ಸ್ಥಿತಃ । ಅಣುಶ್ಚಾಯಮಿತಿ ಸರ್ವಗತಸ್ಥಾಣುಃ । ಸರ್ವಗತೋ ವಿಷ್ಣುಸ್ತದಧೀನತ್ವಾದಿಕಂ ತತ್ಸ್ಥತ್ವಂ ॥ (೩) ಹೇತುತೋಽಪಿ ತತ್ಸ್ಥತ್ವಾನ್ನ ಚಲತೀತ್ಯಚಲಃ । ನಾದೇನ ಶಬ್ದೇನ ಸಹ ವರ್ತತ ಇತಿ ಸನಾದನ ಏವ ಸನಾತನಃ ॥ (೪) ನಿತ್ಯಂ ಸರ್ವಗತೇ ವಿಷ್ಣಾವಣುರ್ಜೀವೋ ವ್ಯವಸ್ಥಿತಃ । ನ ಚಾಸ್ಯ**

**ತದಧೀನತ್ವಂ ಹೇತುತೋಽಪಿ ವಿಚಾಲ್ಯತೇ । ನಿಷೇಧವಿಧಿಪಾತ್ರತ್ವಾತ್ಸನಾತನ ಇತಿ ಸ್ಮೃತಃ । ಇತಿ ಮಹಾವಿಷ್ಣುಪುರಾಣೇ ॥ ೧ ॥**

**ಅ ॥** (೧) ಅಚ್ಛೇದ್ಯತ್ವ ಮೊದಲಾದುದು ಜೀವನಿಗೂ ಶ್ರೀಹರಿಗೂ ಇಬ್ಬರಿಗೂ ಸಮವೇ ಆಗಿದೆ, ಎಂದು **ಅಚ್ಛೇದ್ಯೋಽಯಂ** ಎಂಬ ಶ್ಲೋಕದಿಂದ ಹೇಳಲ್ಪಟ್ಟಿದೆ (೨) (ನಿತ್ಯಃ ಸರ್ವಗತಃ ಸ್ಥಾಣುಃ ಎಂಬುದಕ್ಕೆ ಅರ್ಥ ಹೇಳುತ್ತಾರೆ) ಈ ಜೀವನು ನಿತ್ಯದಲ್ಲಿಯೂ ಸರ್ವತ್ರ ವ್ಯಾಪ್ತನಾದ ಶ್ರೀಹರಿಯಲ್ಲಿದ್ದವನು, ಅಣುವಾದವನು ಆದಕಾರಣ **ಸರ್ವಗತಸ್ಥಾಣುಃ**= ಎನಿಸುತ್ತಾನೆ ಸರ್ವಗತನು ಶ್ರೀವಿಷ್ಣುವು ನಿರಂತರದಲ್ಲಿಯೂ ಆ ಶ್ರೀಹರಿಯ ಅಧೀನನಾಗಿದ್ದು ಸೇವಾದಿಗಳನ್ನು ಮಾಡಿಕೊಂಡಿರುವುದರಿಂದ ಜೀವನು ಸರ್ವಗತಸ್ಥ ಎನಿಸುತ್ತಾನೆ (೩) (ಇಲ್ಲಿ **ಸರ್ವಗತಃ** ಎಂದಿಷ್ಟೆ ಸಾಕಾಗುತ್ತಿತ್ತು **ಸರ್ವಗತಸ್ಥ** ಎಂಬುದು ಬೇಡ ಆಕಾಶಾದಿಗಳಂತೆಯೆ ಸರ್ವಗತನಿಗೇನೇ ಅಚಲತ್ವವು ಕೂಡುತ್ತದೆ ಅಣು ಪದಾರ್ಥಕ್ಕೆ ಅಚಲತ್ವವು ಕೂಡಲಾರದು, ಎಂದರೆ-) ಜೀವನು ಸರ್ವದಾ ಶ್ರೀ ಹರಿಯ ಅಧೀನನೇ ಆಗಿರುತ್ತಾನೆ. ಆ ಅಧೀನತೆಯು ವರ ಮೊದಲಾದ ಯಾವ ಕಾರಣದಿಂದಲೂ ತಪ್ಪದಿರುವುದರಿಂದ ಜೀವನು **ಅಚಲಃ** ಎನಿಸುತ್ತಾನೆ (ಅಂದರೆ ಇಲ್ಲಿ **ಅಚಲ** ಎಂಬ ಪದದಿಂದ ಕ್ರಿಯೆ ಇಲ್ಲದವನೆಂದು ಹೇಳಲ್ಪಡುವುದಿಲ್ಲ ಮತ್ತೆ ಜೀವನು ಶ್ರೀಹರಿಯ ಅಧೀನನಾಗಿಯೇ ಇರುತ್ತಾನೆ ಆ ಅಧೀನತೆಯು ಕೆಲವು ವೇಳೆ ಇಲ್ಲವೆಂದಾಗಬಹುದಾದುದರಿಂದ ಸರ್ವಸಾಮ್ಯವು ತಥಾಚ ಶ್ರೀಹರಿಯ ಪೂಜಾದಿಗಳನ್ನು ಮಾಡಬಾರದು, ಎಂದು ಶಂಕಿಸಿದರೆ ಶ್ರೀಹರಿಯ ಅಧೀನತೆಯು ಯಾವಾಗಲೂ ವರ ಮೊದಲಾದ ಯಾವ ಕಾರಣ ವಿಶೇಷದಿಂದಲೂ ಸರ್ವಥಾ ನಾಶವಾಗುವದಿಲ್ಲವೆಂದು ತೋರಿಸುವುದಕ್ಕಾಗಿ **ಹೇತುತೋಽಪಿ** ಎಂದು ಹೇಳಿರುವರು (ಆದರೂ **ನಿತ್ಯಃ** ಎಂದು ಹೇಳಿದ್ದರಿಂದ **ಸನಾತನಃ** ಎಂದು ಪುನರುಕ್ತವಾಯಿತು ಎಂದರೆ) ವಿಧಿನಿಷೇಧರೂಪವಾದ ವೇದರೂಪ ಶಬ್ದದಿಂದ ಕೂಡಿದವನು ಸನಾದನನು. ಸನಾದನನೇ ಸನಾತನನು ಅಂದರೆ ವಿಧಿ ನಿಷೇಧಬದ್ಧನಾದುದರಿಂದ ಸದಾ ಶ್ರೀಹರಿಯ ಅಧೀನನು (ಅಂದರೆ ಸನಾತನ ಪದದಿಂದ ನಿತ್ಯತ್ವವು ಹೇಳಲ್ಪಡುವುದಿಲ್ಲ ಮತ್ತೆ ವಿಧಿನಿಷೇಧ ಬದ್ಧನಾದುದರಿಂದ ಜೀವನು ಸ್ವತಂತ್ರನಲ್ಲವೆಂದು ಹೇಳಲ್ಪಡುತ್ತದೆ) (೪) (**ಅಚ್ಛೇದ್ಯಃ** ಎಂಬ ಶ್ಲೋಕವು ಶ್ರೀಹರಿಯನ್ನೇ ಹೇಳುತ್ತದೆಂದು ಏಕೆ ಆಗಲಾರದು ಎಂದರೆ) ನಿತ್ಯದಲ್ಲಿಯೂ ಸರ್ವತ್ರವ್ಯಾಪ್ತನಾದ ಶ್ರೀಹರಿಯ ಅಧೀನನಾಗಿ ಅಣುವಾದ ಜೀವನು ಇರುತ್ತಾನೆ ಎಂತಹ ಕಾರಣಗಳಿಂದಲೂ ಜೀವನಿಗೆ ಶ್ರೀಹರಿಯ ಅಧೀನತ್ವವು ತಪ್ಪುವುದಿಲ್ಲ **ನ ಸುರಾಂ ಪಿಬೇತ್ ಅಹರಹಃ ಸಂಧ್ಯಾಮುಪಾಸೀತ** ಇತ್ಯಾದಿ ನಿಷೇಧ ವಿಧಿಗಳು ಉಳ್ಳವನಾದುದರಿಂದ **ಸನಾತನಃ** ಎನಿಸುತ್ತಾನೆ, ಎಂದು ಮಹಾವಿಷ್ಣುಪುರಾಣದಲ್ಲಿದೆ (ಹೀಗೆ ಸ್ಮೃತಿರೂಪ ಪ್ರಮಾಣದಿಂದ ಈ ಶ್ಲೋಕವು ಜೀವರನ್ನೂ ಹೇಳುತ್ತದೆ) ॥ ೧ ॥

**ತಾ ॥** (೧) **ಅಚ್ಛೇದ್ಯೋಽಯಮಿತ್ಯಾದಿ ಪುನರುಕ್ತಿಶ್ಚಾ(ಕ್ತಂ ಚಾ)ನ್ಯಥಾ ॥ (೨) ಯಸ್ಮಿನ್ನಯಂ ಸ್ಥಿತಃ ಸೋಽವ್ಯಕ್ತಾಚಿಂತ್ಯಾದಿರೂಪಃ ॥ (೩) ಏವಂ ಜ್ಞಾತಃ ಪರಮೇಶ್ವರಃ ಸರ್ವದುಃಖನಾಶಂ ಕರೋತೀತಿ ನಾನುಶೋಚಿತುಮರ್ಹಸಿ । ತೇಷಾಮಹಂ ಸಮುದ್ಧರ್ತೇತ್ಯಾದೇಃ ॥ (೪) ನ ತ್ವೇವಾಹಂ ಜಾತು ನಾಸಂ ನ ತ್ವಮಿತ್ಯುಭಯೋರಪಿ ಪ್ರಸ್ತುತತ್ವಾತ್ ॥ ೨ ॥**

**ಅ ॥** **ನೈನಂ ಛಿಂದಂತಿ** ಎಂಬುದರಿಂದ ಶ್ರೀಹರಿಗೆ ಅಚ್ಛೇದ್ಯತ್ವಾದಿಗಳನ್ನು ಹೇಳಿದ್ದರಿಂದ, **ಅಚ್ಛೇದ್ಯೋಽಯಂ** ಎಂಬ ಶ್ಲೋಕದಲ್ಲಿಯೂ ಶ್ರೀಹರಿಯನ್ನೇ ಹೇಳುತ್ತದೆಂದು ಇಟ್ಟುಕೊಂಡರೆ—ಅಚ್ಛೇದ್ಯ

ತ್ವಾದಿಗಳನ್ನು ಎರಡು ಸಲ ಹೇಳಿದಂತೆಯೇ ಆಗುವುದು ಆದಕಾರಣ **ಅಚ್ಛೇದ್ಯೋಽಯಂ** ಎಂಬ ಶ್ಲೋಕವು ಜೀವನನ್ನು ಹೇಳುತ್ತದೆ (೨) (ಜೀವನನ್ನು ಸಮೀಪದಲ್ಲಿ ಹೇಳಿದ ಪ್ರಯುಕ್ತ **ಅವ್ಯಕ್ತೋಽಯಂ** ಎಂಬುದೂ ಜೀವನನ್ನು ಹೇಳುತ್ತದೆಂದಾದರೆ ಯಾವ ಜೀವನಲ್ಲಿ ಶ್ರೀಹರಿಯು ನಿಯಾಮಕನಾಗಿ ಇದ್ದಾನೋ, ಆ ಶ್ರೀಹರಿಯು ಅವ್ಯಕ್ತಅಚಿಂತ್ಯಾದಿಸ್ವರೂಪವುಳ್ಳವನು. (ಇಲ್ಲಿ **ಯಸ್ಮಿನ್ನಯಂಸ್ಥಿತಃ** ಎಂದು ಹೇಳಿದ್ದರಿಂದ ಸರ್ವಗತಪದದಿಂದ ಶ್ರೀಹರಿಯೂ ಸಮೀಪದಲ್ಲಿ ಹೇಳಲ್ಪಟ್ಟವನೆಂದು ಸೂಚಿತ ವಾಯಿತು) (೩) (**ಅವ್ಯಕ್ತೋಽಯಂ** ಎಂಬ ಶ್ಲೋಕವು ಶ್ರೀಹರಿಯನ್ನು ಪ್ರತಿಪಾದಿಸುವುದೆಂದು ಇಟ್ಟುಕೊಂಡರೆ – **ತಸ್ಮಾದೇನಂ ವಿದಿತ್ವಾ** ಎಂಬ ಉತ್ತರಾರ್ಧವು ಅಯುಕ್ತವಾಗುವುದು ಶ್ರೀಹರಿಗೆ ಅವ್ಯಕ್ತಾದಿಗಳ ಜ್ಞಾನದಿಂದ ಯುದ್ಧದಿಂದುಂಟಾಗುವ ಶೋಕವಿಲ್ಲವೆಂದಾಗುತ್ತದೆಂಬುದು ಕೂಡುವುದಿಲ್ಲವಷ್ಟೆ. ಜೀವನು ಬಹು ಹಿಂದೆ ಪ್ರಸ್ತುತನಾದುದರಿಂದ ಜೀವನನ್ನು ಇಟ್ಟುಕೊಂಡರೆ ದೂರೋಕ್ತತ್ವ ದೋಷವೆಂದರೆ) ಹೀಗೆ ತಿಳಿಯಲ್ಪಟ್ಟ ಸರ್ವೇಶ್ವರನಾದ ಶ್ರೀಹರಿಯು ಎಲ್ಲಾ ದುಃಖವನ್ನು ಪರಿಹರಿಸುತ್ತಾನೆ ಆದಕಾರಣ ಅರ್ಜುನನೇ ನೀನು ದುಃಖಿಸಲಿಕ್ಕೆ ಯೋಗ್ಯನಾಗುವುದಿಲ್ಲ. (ಅಂದರೆ—ಇಲ್ಲಿ ಯುದ್ಧದಿಂದುಂಟಾಗುವ ಶೋಕವನ್ನು ನಿವಾರಣೆ ಮಾಡುವುದಲ್ಲ **ತಸ್ಮಾತ್** ಎಂಬುದರಿಂದ ಪರಾಮರ್ಶಮಾಡಿಕೊಳ್ಳುವುದೂ ಇಲ್ಲವೆಂದಲ್ಲ ಇಲ್ಲಿ ಜೀವನಲ್ಲಿಯೂ ಅಚ್ಛೇದ್ಯತ್ವಾದಿಗಳು ಇರುವುದರಿಂದ ಜೀವನಿಗೂ ಸ್ವಾತಂತ್ರ್ಯವಿದೆ ಶ್ರೀಹರಿಯನ್ನು ಪೂಜಿಸುವುದು ಏತಕ್ಕೆ ಎಂದರೆ **ಸನಾತನಃ** ಇತ್ಯಾದಿ ಶಬ್ದಗಳಿಂದ ಶ್ರೀಹರಿಗೆನೇ ಸ್ವಾತಂತ್ರ್ಯವನ್ನು ಹೇಳಿರುತ್ತಾರೆ ಅವನೇ ಸರ್ವಸ್ವತಂತ್ರನಾದ ಪ್ರಯುಕ್ತ ಸಂಸಾರಶೋಕವನ್ನು ಪರಿಹರಿಸುವವನೂ ಅವನೇ ಅಂತಹ ಶ್ರೀಹರಿಯನ್ನು ಅವ್ಯಕ್ತಮೊದಲಾದ ಗುಣಗಳಿಂದ ಯುಕ್ತನೆಂದು ತಿಳಿದರೇನೇ ಶ್ರೀಹರಿಯು ಸಂಸಾರದ ಎಲ್ಲಾ ದುಃಖಗಳನ್ನು ಪರಿಹರಿಸುತ್ತಾನೆ ಅದುಕಾರಣ ಯುದ್ಧಮೊದಲಾದ ವಿಹಿತಕರ್ಮದಿಂದ ಶ್ರೀಹರಿಯು ಅವ್ಯಕ್ತಾದಿರೂಪನೆಂದು ತಿಳಿದು ಸಂಸಾರದುಃಖವನ್ನು ಪರಿಹರಿಸು ಎಂದೇ ಹೇಳಲ್ಪಡುತ್ತದೆ) (ಅವರವರಿಗೆ ವಿಹಿತವಾದ ಕರ್ಮದಿಂದ ಭಗವಜ್ಜ್ಞಾನವು ಉಂಟಾಗುತ್ತದೆ ಶ್ರೀಹರಿಯನ್ನು ತಿಳಿದರೆ ಆ ಶ್ರೀಹರಿಯು ಎಲ್ಲಾ ದುಃಖಗಳನ್ನು ನಾಶಪಡಿಸುತ್ತಾನೆಂದು ಹೇಗೆ ಸಿದ್ಧಿಸುತ್ತವೆಂದರೆ) (**ಮಾಂ ಧ್ಯಾಯಂತ ಉಪಾಸತೇ** ನನ್ನನ್ನು ತಿಳಿದು ಯಾರು ಧ್ಯಾನಿಸುತ್ತಾ ಉಪಾಸನೆಮಾಡುತ್ತಾರೋ) ಅಂತಹರನ್ನು ನಾನು ಸಂಸಾರ ಸಮುದ್ರದಿಂದ ಉದ್ಧರಿಸುತ್ತೇನೆ, ಇತ್ಯಾದಿ ಪ್ರಮಾಣಗಳಿಂದ ಸಿದ್ಧಿಸುತ್ತದೆ (೪) ಹೀಗೆ ಈ ಪ್ರಕರಣವು ಜೀವೇಶ್ವರರಿಬ್ಬರನ್ನು ಹೇಳುತ್ತದೆಂದು ವ್ಯಾಖ್ಯಾನವಮಾಡಿ ಇಬ್ಬರನ್ನು ಹೇಳುತ್ತದೆಂಬುವಲ್ಲಿ ಯುಕ್ತಿಯನ್ನು ಹೇಳುತ್ತಾರೆ) **ನ ತ್ವೇವಾಹಂ ಜಾತು ನಾಸಂ ನ ತ್ವಂ** ಎಂದು ಜೀವೇಶ್ವರರಿಬ್ಬರೂ ಪ್ರಸ್ತುತರಾಗಿದ್ದಾರೆ ॥ ೨ ॥

ಪೀ––ಈ ಪ್ರಕರಣವು ಒಬ್ಬನನ್ನೇ ಹೇಳುತ್ತದೆಂದು ಏಕೆ ಆಗಲಾರದೆಂದರೆ ಎಲ್ಲಾ ಕಡೆಗಳಲ್ಲಿಯೂ ಜೀವೇಶ್ವರರಿಬ್ಬರ ಲಿಂಗವಿದ್ದಪ್ರಯುಕ್ತ ಈ ಪ್ರಕರಣವು ಇಬ್ಬರನ್ನು ಹೇಳತಕ್ಕುದು ಎಂದೇ ಯುಕ್ತವೆನ್ನುತ್ತಾರೆ —

**ತಾ ॥ (೧) ದೇಹಿನಃ ಶರೀರಿಣಃ ದೇಹೀತಿ ವಿಶೇಷಿತತ್ವಾಚ್ಚ ಜೀವಸ್ಯ ತತ್ರತತ್ರ ॥ (೨) ಅವಿನಾಶಿ ತು । ಯೇನ ಸರ್ವಮಿದಂ ತತಂ । ಅನಾಶಿನೋಽಪ್ರಮೇಯಸ್ಯ । ನ ಮ್ರಿಯತೇ ಭೂತ್ವಾ ಭವಿತಾ ನ । ಅವಿನಾಶಿನಂ । ಅವ್ಯಯಂ । ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮಿತ್ಯಾದಿ ಪರಮಾತ್ಮನಶ್ಚ ॥ (೩) ನ ಹಿ ಜೀವೇನ ತತಂ ಸರ್ವಂ । ನ ಚ ಮುಖ್ಯತೋಽಪ್ರಮೇಯೋಽಸೌ । ನ ಚ ನ ಮ್ರಿಯತೇ । ನ ಚಾವಿ-**

**ನಾಶಿನಂ ನಿತ್ಯಮಿತಿ ನಿತ್ಯತ್ವಾತಿರಿಕ್ತಮವಿನಾಶಿತ್ವಂ ತಸ್ಯ ॥ (೪) ನ ಚಾವ್ಯಕ್ತತ್ವಮ-ವಿಕಾರ್ಯತ್ವಂ ಚ ಮುಖ್ಯಂ । ನ ಚ ಭೂತ್ವಾ ಭವಿತಾ ವಾ ನೇತಿ ದೇಹಸ್ಯಾಪ್ಯನು-ತ್ಪತ್ತಿಃ ॥ (೫) ಪರಮಾತ್ಮನಸ್ತು ದೇಹವಿಯೋಗಾದಿಕಮಪಿ ನಾಸ್ತೀತ್ಯವಿನಾಶಿ ತ್ವಿತ್ಯಾ-ದಿವಿಶೇಷಣಂ ॥ ೩ ॥**

ಅ ॥ (೧) ಅನೇಕ ಶ್ಲೋಕಗಳಲ್ಲಿ ಜೀವನಿಗೆ ಮುದಿತನವನ್ನು ಹೊಂದುವ ದೇಹವುಳ್ಳವನೆಂದು ಅರ್ಥವಿರುವ **ಶರೀರಿಣಃ ದೇಹಿನಃ ದೇಹೀ** ಎಂದು ವಿಶೇಷಣ ಕೊಟ್ಟಿರುತ್ತಾರೆ (ಈ ವಿಶೇಷಣಗಳು ಜೀವರಿಗೇನೇ ಕೂಡುತ್ತವೆ ಶ್ರೀಹರಿಗೆ ಕೂಡುವುದಿಲ್ಲ) (೨) ಅವಿನಾಶಿ=ನಾಲ್ಕು ವಿಧ ನಾಶವಿಲ್ಲದವನು, **ಯೇನ ಸರ್ವಮಿದಂ ತತಂ ಅವಿಕಾರ್ಯೋಽಯಂ** ಇತ್ಯಾದಿ ವಿಶೇಷಣಗಳು ಶ್ರೀಹರಿಗೇನೇ ಕೂಡುತ್ತವೆ (೩) (**ದೇಹಿನಃ** ದೇಹಿತ್ವಾದಿ ವಿಶೇಷಣಗಳು ಜೀವನಿಗಿಂತ ಬೇರೆಯಾದ ಶ್ರೀಹರಿಯಲ್ಲಿ ಕೂಡದಿರುವುದರಿಂದ ಅಲ್ಲಲ್ಲಿ ಜೀವನು ಪ್ರತಿಪಾದಿಸಲ್ಪಡುತ್ತಾನೆಂದು ಒಪ್ಪಿಕೊಳ್ಳುವ ಆದರೂ ಅವಿನಾಶಿತ್ವ ಮೊದಲಾದ ವಿಶೇಷಣಗಳು ಜೀವರಿಗೂ ಕೂಡಬಹುದಾದುದರಿಂದ ಆ ವಾಕ್ಯಗಳು ಶ್ರೀಹರಿಯನ್ನೇ ಹೇಳುತ್ತವೆಂದು ನಿಶ್ಚಯವು ಹೇಗೆ? ಎಂದರೆ—)ಜೀವನಿಂದ ಸಂಪೂರ್ಣ ಜಗತ್ತು ವ್ಯಾಪ್ತವಾಗಿದೆ ಎಂದು ಹೇಳುವುದು ಅಗತ್ಯವು ಜೀವನು ಮುಖ್ಯವಾಗಿ ತಿಳಿಯಲು ಶಕ್ಯನಲ್ಲವೆಂದಲ್ಲ **ಅವಿನಾಶಿನಂ ನಿತ್ಯಂ** ಎಂಬುವಲ್ಲಿ ಜೀವನಿಗೆ ನಿತ್ಯತ್ವವು ಹೊರತು. ಬೇರೆಯೊಂದು ಅವಿನಾಶಿತ್ವವೂ ಇಲ್ಲ (೪) ಜೀವನಿಗೆ ಅವ್ಯಕ್ತತ್ವವೂ, ಅವಿಕಾರ್ಯತ್ವವೂ ಮುಖ್ಯವಾದುದು ಇಲ್ಲ (ಮುಖ್ಯವಾದುದು ಶ್ರೀಪರಮಾತ್ಮನಿಗೇನೇ.) **ಭೂತ್ವಾ ಭವಿತಾ ವಾ ನ** ಎಂಬಲ್ಲಿ ದೇಹಕ್ಕೂ ಉತ್ಪತ್ತಿಯಿಲ್ಲವೆಂಬುದು ಜೀವನಿಗೆ ಕೂಡುವುದಿಲ್ಲವಷ್ಟೆ (ಜೀವನ ದೇಹಕ್ಕೆ ಉತ್ಪತ್ತಿಯಿದೆ) (೫) ಶ್ರೀಪರಬ್ರಹ್ಮನಿಗಾದರೋ, ದೇಹವಿಯೋಗಾದಿಗಳೂ ಇಲ್ಲವೇ ಇಲ್ಲ ಆದಕಾರಣ **ಅವಿನಾಶಿ ತು** ಇದುಮೊದಲಾದ ವಿಶೇಷಣಗಳು (ಶ್ರೀಪರಬ್ರಹ್ಮನಿಗೇನೇ ಕೂಡುತ್ತವೆ. ಜೀವರಿಗೆ ಕೂಡುವುದಿಲ್ಲ)

ವಿ ॥ (1) ಭಾಷ್ಯದಲ್ಲಿ **ಅವಿನಾಶಿ ತು ತದ್ವಿದ್ಧಿ** ಎಂಬಲ್ಲಿ ಸರ್ವ ದೇಶಗಳಲ್ಲಿ ವ್ಯಾಪಗಳಾದ ವೇದಗಳನ್ನು ಇಟ್ಟುಕೊಂಡಿದ್ದಾರೆ ಇಲ್ಲಿ ತಾತ್ಪರ್ಯದಲ್ಲಿ ಶ್ರೀವಿಷ್ಣುವನ್ನು ಇಟ್ಟುಕೊಂಡಿದ್ದಾರೆ (2) ಭಾಷ್ಯದಲ್ಲಿ **ಅನಾಶಿನೋಽಪ್ರಮೇಯಸ್ಯ** ಎಂಬಲ್ಲಿ ಜೀವನನ್ನೂ. ಇಲ್ಲಿ ವಿಷ್ಣುವನ್ನೂ, (3)ಅಲ್ಲಿ **ನ ಜಾಯತೇ ಮ್ರಿಯತೇ ವಾ** ಎಂಬಲ್ಲಿ ಜೀವನನ್ನೂ ಇಲ್ಲಿ ಪೂರ್ವಾರ್ಧದಲ್ಲಿ ಶ್ರೀವಿಷ್ಣುವನ್ನೂ, ಉತ್ತರಾರ್ಧದಲ್ಲಿ ಜೀವನನ್ನೂ. (4) ಅಲ್ಲಿ **ವೇದಾವಿನಾಶಿನಂ ನಿತ್ಯಂ** ಎಂಬುವಲ್ಲಿ ಜೀವನನೂ ಇಲ್ಲಿ ವಿಷ್ಣುವನ್ನೂ, (5) ಅಲ್ಲಿ **ನೈನಂ ಛಿಂದಂತಿ ಶಸ್ತ್ರಾಣಿ** ಇತ್ಯಾದಿ ಎರಡು ಶ್ಲೋಕಗಳು ಜೀವನನ್ನೂ ಇಲ್ಲಿ ಪೂರ್ವಶ್ಲೋಕವು ವಿಷ್ಣುವನ್ನೂ ಮೇಲಿನ ಶ್ಲೋಕವು ಜೀವನನ್ನೂ ಹೇಳುತ್ತದೆಂದು ಹೇಳಿರುತ್ತಾರೆ ಹೀಗೆ ಹೇಳಿದ್ದರಿಂದ ಪರಸ್ಪರ ವಿರೋಧವು ಬಂತೆಂದು ಶಂಕಿಸಕೂಡದು ಏಕೆಂದರೆ—ತಾತ್ಪರ್ಯದಲ್ಲಿ ಮುಖ್ಯವೃತ್ತಿಯಿಂದಲೇ ಸಿಗತಕ್ಕ ಅರ್ಥವನ್ನು ಇಟ್ಟುಕೊಂಡು ಪುನರುಕ್ತಿ ಮೊದಲಾದ ಶಂಕೆಗಳನ್ನು ಪರಿಹರಿಸದೆ ಕೇವಲ ಅಮುಖ್ಯಾರ್ಥವನ್ನು ಇಟ್ಟುಕೊಂಡರೆ ಬಾಧಕಗಳನ್ನು ಹೇಳಿದೆ ಭಾಷ್ಯದಲ್ಲಿ ಪುನಃ ತಾತ್ಪರ್ಯವನ್ನನುಸರಿಸಿ ಮುಖ್ಯಾರ್ಥವನ್ನಂಗೀಕರಿಸಿಕೊಂಡೇ **ಅಪ್ರಮೇಯೇಶ್ವರಸರೂಪತ್ವಾತ್ ಅಜಾದಿಲಕ್ಷಣೇಶ್ವರಸರೂಪತ್ವಾತ್ ನಿತ್ಯಸರ್ವಗತಾದಿಲಕ್ಷಣೇಶ್ವರಸರೂಪತ್ವಾತ್** ಇತ್ಯಾದಿಗಳಿಂದ ಅರ್ಥಾಂತರವನ್ನು ಹೇಳಿದ್ದಾರೆ. ॥ ೩ ॥

**ತಾ ॥ (೧) ಯಸ್ಮಾದೇವಂಭೂತಸ್ತಸ್ಮಾತ್ಸ ಏವ ಸ್ವತಂತ್ರಸ್ತದಧೀನಮನ್ಯತ್ಸರ್ವಮತಃ ಸ ಏವ ಸರ್ವಪುರುಷಾರ್ಥದಃ । ಅತಸ್ತತ್ಪೂಜಾ ಸತ್ಕರ್ಮೈವ । ಅತಸ್ತದರ್ಥಂ ಯು-**

ಧ್ಯಸ್ಯ ‖ (೨) ಅನ್ಯೇಷಾಂ ತ್ವಂತವಂತ ಏವ ದೇಹಾಃ । ಪ್ರಾಕೃತದೇಹಿನಶ್ಚ । ಅತೋಽಸ್ವತಂತ್ರತ್ವಾನ್ನ ಹಂತುಂ ತೇಷಾಂ ಸಾಮರ್ಥ್ಯಂ ‖ (೩) ನಿತ್ಯತ್ವಾನ್ನ ಹನ್ಯತೇ ಚ । ತಸ್ಮಾದ್ಧಂತಾ ಹತ ಇತಿ ಮನ್ಯಮಾನೌ ನ ವಿಜಾನೀತಃ ‖ (೪) (ಕಿಂತು) ಯಸ್ಮಾದಯಮೇವ ಪರಮೇಶ್ವರಃ ಶರೀರವಿಯೋಗರೂಪೇಣಾಪಿ ನ ಮ್ರಿಯತೇ ತತ್ಸಂಯೋಗರೂಪೇಣಾಪಿ ನ ಜಾಯತೇ ಜೀವವತ್ಕದಾಪಿ । ಅತಸ್ಸ ಏವ ಸ್ವತಂತ್ರತ್ವಾತ್ಸರ್ವಸ್ಯ ಹಂತಾ ‖ (೫) ಜೀವಸ್ತು ತೇನ ಶರೀರೇ ಹನ್ಯಮಾನೇ ಸ್ವಯಂ ನ ಹನ್ಯತ ಇತ್ಯೇತಾವತ್ ‖ (೬) ಅತ ಏವಮವಿನಾಶಿತ್ವಾದೇಃ ಸ್ವಾತಂತ್ರ್ಯಾತ್ । ಸರ್ವಕರ್ತಾರಂ ಪರಮಾತ್ಮಾನಂ ಯೋ ವೇದ ಸ ಕಥಂ (ಕಂ) ಘಾತಯತಿ ಹಂತಿ ವಾ ‖ ೪ ‖

ಅ ‖ (೧) ಯಾವ ಕಾರಣದಿಂದ ಶ್ರೀಹರಿಯು ಸರ್ವಪ್ರಕಾರದಿಂದಲೂ ವಿನಾಶವಿಲ್ಲದವನೋ, ಆದ ಕಾರಣ ಶ್ರೀಹರಿಯೇ ಸರ್ವಸ್ವತಂತ್ರನು, ಮೋಕ್ಷವೊದಲಾದುದೆಲ್ಲವೂ ಆ ಶ್ರೀಹರಿಯ ಅಧೀನವೇ ಆಗಿದೆ. ಆದಕಾರಣ ಆ ಶ್ರೀಹರಿಯೇ ಮೋಕ್ಷವೊದಲಾದ ಪುರುಷಾರ್ಥಗಳನ್ನು ಕೊಡುವವನು ಆ ಶ್ರೀಹರಿಯು ಸತ್ಕರ್ಮದಿಂದ ಪೂಜಿಸಲ್ಪಟ್ಟವನಾಗಿಯೇ ಪುರುಷಾರ್ಥವನ್ನು ಕೊಡುತ್ತಾನೆ ಆದಕಾರಣ ಆ ಶ್ರೀಹರಿಯ ಪೂಜೆಯು ಸತ್ಕರ್ಮವೇ ಆಗಿದೆ ಶ್ರೀಹರಿಯೇ ಪುರುಷಾರ್ಥವನ್ನು ಕೊಡತಕ್ಕವನಾದುದರಿಂದ ಪುರುಷಾರ್ಥಪ್ರಾಪ್ತಿಗಾಗಿ ಯುದ್ಧಮಾಡು (ಯುದ್ಧವು ಪುರುಷಾರ್ಥಸಾಧಕವಾದ ಕ್ಷತ್ರಿಯನಿಗೆ ವಿಹಿತವಾದ ಸತ್ಕರ್ಮವಾದುದರಿಂದ ಯುದ್ಧವನ್ನು ಆಚರಿಸು, ಎಂದು ಭಾವವು.) (ಹೀಗೆ ಆಕಾಂಕ್ಷಾಕ್ರಮದಿಂದ ಸಂಗತಿಯನ್ನು ತಿಳಿಯಬೇಕು) (ಅಥವಾ **ನಾಸತಃ** ಎಂಬುದರ ಅಂಗವಾಗಿಯೂ **ಅನಾಶಿನಃ** ಎಂಬುದಕ್ಕೆ ಸಂಗತಿಯೆಂದು **ಅತಸ್ತದರ್ಥಂ** ಎಂಬುದರಿಂದ ಹೇಳಿದರು) (ಹೀಗೂ ಸಂಗತಿಯನ್ನು ಇಟ್ಟುಕೊಳ್ಳಬೇಕು) (೨) (**ಅಂತವಂತಃ** ಎಂಬುವುದಕ್ಕೆ ಅವಿನಾಶಿಯಾದ ಶ್ರೀಹರಿಯ ಪೂಜಗೋಸ್ಕರ ಯುದ್ಧಮಾಡು, ಎಂದು ಹಿಂದೆ ಹೇಳಿದ ಪ್ರಕಾರ ಶ್ರೀಹರಿಯು ಜೀವರಿಗಿಂತ ಉತ್ತಮನೆಂದು ಹೇಳುವುದಕ್ಕಾಗಿ ಜೀವರ ದೇಹವೂ ಅನಿತ್ಯವೆಂದು ಹೇಳಲ್ಪಡುತ್ತದೆಂದು ಸಂಗತಿಯು ಸಿದ್ಧವಾಗುವುದರಿಂದ **ನಾಯಂ ಹಂತಿ** ಎಂಬುದರಿಂದಲೂ ಸಂಗತಿಯು ಇದೆ ಎನ್ನುತ್ತಾರೆ) ಶ್ರೀಹರಿಗಿಂತ ಇತರರಾದ ಜೀವರ ದೇಹಗಳು ನಾಶವುಳ್ಳವುಗಳೇ ಆಗಿವೆ ಜೀವರು ಪ್ರಾಕೃತದೇಹವುಳ್ಳವರು ಆದುದರಿಂದಲೇ ಜೀವರು ಅಸ್ವತಂತ್ರರಾದುದರಿಂದ ಯಾರನ್ನೂ ಸಂಹರಿಸಲಿಕ್ಕೆ ಜೀವರಿಗೆ ಸಾಮರ್ಥ್ಯವಿಲ್ಲ (೩) ಮತ್ತು ಜೀವರು ನಿತ್ಯರಾದಪ್ರಯುಕ್ತ ಸಂಹರಿಸಿಕೊಳ್ಳಲ್ಪಡುವುದೂ ಇಲ್ಲ, ಯಾವ ಕಾರಣದಿಂದ ಅಸ್ವತಂತ್ರರಾದಪ್ರಯುಕ್ತ ಸಂಹರಿಸಲಿಕ್ಕೆ ಜೀವರಿಗೆ ಸಾಮರ್ಥ್ಯವಿಲ್ಲವೋ ನಿತ್ಯರಾದ ಪ್ರಯುಕ್ತ ಇತರರಿಂದ ಸಂಹರಿಸಿಕೊಳ್ಳಲ್ಪಡುವುದಿಲ್ಲವೋ, ಆದ ಕಾರಣ ಕೊಲ್ಲುವವನು, ಕೊಲ್ಲಲ್ಪಟ್ಟನು ಎಂದು ತಿಳಿಯುವವರು ಇಬ್ಬರೂ ತಿಳಿಯವರಲ್ಲ (೪) (**ನ ಜಾಯತೇ ಮ್ರಿಯತೇ ವಾ** ಎಂಬ ವೇದವು ಜೀವೇಶ್ವರರಿಗೆ ಅನಾದಿನಿತ್ಯತ್ವವನ್ನು ಪ್ರತಿಪಾದಿಸುತ್ತದೆಂದು ಹೇಳಿದೆ ಅಸ್ವತಂತ್ರನಾದುದರಿಂದ ಜೀವನು ಸಂಹರಿಸುವುದಿಲ್ಲ ನಿತ್ಯನಾದಪ್ರಯುಕ್ತ ಕೊಲ್ಲಲ್ಪಡುವುದಿಲ್ಲ ಎಂಬೀ ಅರ್ಥವನ್ನು ಸಾಧಿಸುವುದರಿಂದಲೂ ವೇದಕ್ಕೆ ಸಂಗತಿಯಿದೆ, ಎನ್ನುತ್ತಾರೆ ಹೇಗೆಂದರೆ—) ಯಾವ ಕಾರಣದಿಂದ ಶ್ರೀಹರಿಯೇ ಜೀವರಂತೆ ಎಂದಿಗೂ ಶರೀರವಿಯೋಗರೂಪದಿಂದಲೂ (ಅಂದರೆ ದೇಹವನ್ನು ಬಿಡುವುದರಿಂದಲೂ) ಮೃತನಾಗುವುದಿಲ್ಲ ಶರೀರಸಂಯೋಗರೂಪದಿಂದಲೂ (ಅಂದರೆ ಶರೀರವನ್ನು ಹೊಂದುವುದರಿಂದಲೂ) ಯಾವಾಗಲೂ ಹುಟ್ಟುವುದಿಲ್ಲ ಅದುಕಾರಣ ಶ್ರೀಹರಿಯೇ ಸರ್ವಸ್ವತಂತ್ರನಾದುದರಿಂದ ಸರ್ವರನ್ನು ಸಂಹರಿಸುವವನು (ಅಂದರೆ ನಿತ್ಯನಾದ ಜೀವನಿಗೆ ದೇಹವನ್ನು ಶ್ರೀಹರಿಯು ಹೊಂದಿಸುವುದರಿಂದ ಜನ್ಮವು ಬಿಡಿಸುವುದರಿಂದ ಸಾವು) ಹಾಗೆ ಶ್ರೀಹರಿಯು ಸ್ವರೂಪತಃ

ಇದ್ದವನೇ ದೇಹಸಂಯೋಗದಿಂದ ಹುಟ್ಟುವುದಿಲ್ಲ ಅದುಕಾರಣ ಅವನೇ ಸರ್ವಸ್ವತಂತ್ರನು. ಸ್ವತಂತ್ರ ನಾದ ಕಾರಣ ಶ್ರೀಹರಿಯೇ ಸಂಹಾರಕನು ) (೫) (**ನ ಹನ್ಯತೇ ಹನ್ಯಮಾನೇ ಶರೀರೇ** ಎಂಬುದಕ್ಕೆ **ಪೂರ್ವಾರ್ಧ**ದಲ್ಲಿ **ನ ಮ್ರಿಯತೇ ನಾಯಂ ಭೂತ್ವಾ** ಎಂಬ ಎರಡು ವಿಶೇಷಣಗಳಿಂದ ಲಬ್ಧವಾದ ಶ್ರೀ ಹರಿಗೇನೇ ಸ್ವಾತಂತ್ರ್ಯವು, ಜೀವನಿಗೆ ಇಲ್ಲ ಎಂಬುವುದರಿಂದ ಸಂಗತಿಯನ್ನು ತೋರಿಸುತ್ತಾರೆ ) ಆ ಶ್ರೀಹರಿ ಯಿಂದ ಶರೀರವು ಕೊಲ್ಲಲ್ಪಟ್ಟರೂ ಜೀವನು ತಾನು ಸಂಹರಿಸಿಕೊಳ್ಳಲ್ಪಡುವುದಿಲ್ಲವೆಂಬುದಷ್ಟೆ (ಅಂದರೆ– ಶ್ರೀಹರಿಯ ಸ್ವರೂಪದಂತೆ ಜೀವನ ಸ್ವರೂಪಕ್ಕೂ ನಿತ್ಯತ್ವವಿದ್ದಪ್ರಯುಕ್ತ ಶ್ರೀಹರಿಯಂತೆ ಜೀವನೂ ಸ್ವತಂತ್ರನೆಂದಾದರೆ—ಶ್ರೀಹರಿಯು ಜೀವನ ಶರೀರವನ್ನು ಕೊಲ್ಲುತ್ತಾನೆಂಬುದು ಕೂಡದೆ ಹೋಗುವುದು ಶರೀರವನ್ನು ಶ್ರೀಹರಿಯು ನಾಶಪಡಿಸುತ್ತಾನೆ ಆದುಕಾರಣ ಜೀವನು ಆಕಾಶಾದಿಗಳಂತೆ ಕೇವಲ ಸ್ವರೂಪದಿಂದ ಮಾತ್ರ ಸಂಹರಿಸಲ್ಪಡುವುದಿಲ್ಲವೆಂದಿಷ್ಟೇ ಹೇಳಬೇಕು ಸರ್ವಥಾ ಜೀವನು ಸ್ವತಂತ್ರನಲ್ಲ, ಶ್ರೀಹರಿಯೇ ಸ್ವತಂತ್ರನು, ಎಂಬ ಸಂಗತಿಯನ್ನು ಹೇಳಿದಂತೆ ಆಯಿತು ) (೬) ಅದುದರಿಂದ ಹಿಂದೆ ಹೇಳಿದ ಪ್ರಕಾರ ವಿನಾಶಾದಿಗಳಿಲ್ಲದಿರುವಪ್ರಯುಕ್ತ ಶ್ರೀಹರಿಯು ಸರ್ವಸ್ವತಂತ್ರನು ಆದುದರಿಂದ ಶ್ರೀ ಹರಿಯು ಸರ್ವಕರ್ತನು, ಎಂದು ಶ್ರೀಹರಿಯನ್ನು ಯಾರು ತಿಳಿಯುತ್ತಾನೋ, ಆತನು ಯಾರನ್ನು ಕೊಲ್ಲಿ ಸುತ್ತಾನೆ, ಕೊಲ್ಲುತ್ತಾನೆ? ॥ ೪ ॥

**ಪೀ— ವಾಸಾಂಸಿ ಜೀರ್ಣಾನಿ** ಎಂಬುದಕ್ಕೆ ಪೂರ್ವಶ್ಲೋಕದಲ್ಲಿಯೇ ಪ್ರಕೃತವಾದುದು ಜೀವನಿಗೆ ಅಸ್ವಾತಂತ್ರ್ಯವು, ಅದರಿಂದಲೂ ಸಂಗತಿಯನ್ನು ಹೇಳುತ್ತಾರೆ—

**ತಾ ॥ (೧) ವಾಸಸೋ ಜರಾವತ್ ಸ್ವಶರೀರಜರಾದಾವಸ್ವಾತಂತ್ರ್ಯದರ್ಶನಾತ್ಸರ್ವತ್ರಾ- ಸ್ವಾತಂತ್ರ್ಯಂ ಜ್ಞಾತವ್ಯಂ ಜೀವಸ್ಯ ॥ (೨) ಈಶ್ವರಸ್ಯ ತು ದೇಹಸ್ಯಾಪಿ ಛೇದಾದೇರ- ಭಾವಾತ್ ಸ್ವಾತಂತ್ರ್ಯಂ ॥ (೩) ನೈನಂ ಛಿಂದಂತೀತಿ ಛೇದನಾದ್ಯಭಾವಃ ಸಾಕ್ಷಾ- ದೇವ ದರ್ಶಯಿತುಂ ಶಕ್ಯತೇ ಸ್ವದೇಹಸ್ಯೇತಿ ವರ್ತಮಾನಾಪದೇಶಃ ॥ (೪) ಛೇದ- ನಾದಿಕಂ ತ್ವೀಶ್ವರೋ(ಽಹಂ) ಮೋಹಾಯ ಮೃಷೈವ ದರ್ಶಯತಿ(ಯಾಮಿ) ॥೨೪॥**

**ಅ** ॥ (೧) ಬಟ್ಟೆಗೆ ಜೀರ್ಣಾವಸ್ಥೆ ಬಂದಂತೆ ತನ್ನ ಶರೀರಕ್ಕೆ ವಾರ್ಧಿಕ್ಯಾದ್ಯವಸ್ಥೆಗಳು ಬರುವಾಗ ಅಸ್ವಾತಂತ್ರ್ಯವು ಕಂಡದ್ರಿಂದ ಜೀವನಿಗೆ ಎಲ್ಲೆಡೆಯಲ್ಲಿಯೂ ಅಸ್ವಾತಂತ್ರ್ಯವನ್ನು ತಿಳಿಯಬೇಕು (೨) (**ನೈನಂ ಛಿಂದಂತಿ** ಎಂಬುದಕ್ಕೆ **ವೇದಾವಿನಾಶಿನಂ** ಎಂಬುದರಿಂದ ಸಂಗತಿಯನ್ನು ಹೇಳಿದಾಗ್ಯೂ **ವಾಸಾಂಸಿ** ಎಂಬ ಪೂರ್ವಶ್ಲೋಕದಿಂದ ಪ್ರಕೃತವಾದ ಈಶ್ವರಸ್ವಾತಂತ್ರ್ಯದಿಂದಲೂ, ಸಂಗತಿ ಹೇಳು ತ್ತಾರೆ ) ಶ್ರೀಹರಿಯ ದೇಹಕ್ಕೂ ಛೇದಭೇದಾದಿಗಳು ಇಲ್ಲದಿರುವುದರಿಂದ ಸರ್ವಸ್ವಾತಂತ್ರ್ಯವನ್ನು ತಿಳಿಯಬೇಕು. (೩) (ಇಲ್ಲಿ **ನೈನಂ ಛಿಂದಂತಿ** ಎಂದು ವರ್ತಮಾನಕಾಲಿಕ ಪ್ರಯೋಗವನ್ನು ಮಾಡಿದುದ ರಿಂದ ಕಾಲಾಂತರದಲ್ಲಿ ಛೇದನಾದಿಗಳನ್ನು ಮಾಡಬಹುದೆಂದು ತಿಳಿಯುತ್ತದೆ ಅಂತಹ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುತ್ತಾರೆ ) **ನೈನಂ ಛಿಂದಂತಿ** ಎಂಬುದರಿಂದ ತನ್ನ ಶರೀರಕ್ಕೆ ಛೇದ ನಾದಿಗಳು ಇಲ್ಲವೆಂಬುದು ಪ್ರತ್ಯಕ್ಷವಾಗಿಯೇ ತೋರಿಸಲಿಕ್ಕೆ ಶಕ್ಯವಾಗುತ್ತದೆಂಬ ಅಭಿಪ್ರಾಯದಿಂದ ವರ್ತ ಮಾನಕಾಲದ ಪ್ರಯೋಗವು (ಅಂದರೆ ಕಾಲಾಂತರದಲ್ಲಿ ಛೇದನಾದಿಗಳನ್ನು ಮಾಡಬಹುದೆಂದು ತಿಳಿಸು ವುದಕ್ಕಾಗಿ ವರ್ತಮಾನಪ್ರಯೋಗವಲ್ಲ ಮತ್ತೆ ಈಗ ನನ್ನ ಶರೀರಕ್ಕೆ ಛೇದಾದಿಗಳು ಇಲ್ಲ ಯುದ್ಧಕಾಲ ದಲ್ಲಿ ನಾನಾವಿಧಗಳಾದ ಶಸ್ತ್ರಗಳ ಸಂಯೋಗದಿಂದ ಛೇದಾದಿಗಳು ಬರಲು ಅವಕಾಶವಿದ್ದರೂ ಛೇದಾದಿ ಗಳು ಇಲ್ಲವೆಂಬುದನ್ನು ಪ್ರತ್ಯಕ್ಷವಾಗಿಯೇ ತೋರಿಸಲಿಕ್ಕೆ ಶಕ್ಯವಾಗಿದೆ ಎಂದು ಸೂಚಿಸುವುದಕ್ಕಾಗಿ ವರ್ತ

ಮಾನಕಾಲಿಕವಾದ **ಛಿಂದಂತಿ ದಹತಿ** ಇತ್ಯಾದಿ ಪ್ರಯೋಗಗಳನ್ನು ಮಾಡಿದ್ದು) (೪) (ಇಲ್ಲಿ ಶ್ರೀಹರಿಯ ಸ್ವರೂಪಕ್ಕೆ ಮಾತ್ರ ಛೇದಾದಿಗಳು ಇಲ್ಲವೆಂದೆನ್ನಬೇಕು ಶರೀರಕ್ಕೆ ಹೇಳಲಾಗುವುದಿಲ್ಲ ಏಕೆಂದರೆ **ನಿಶಿತಶರೈರ್ವಿಭಿದ್ಯಮಾನತ್ವಚಿ** ಶ್ರೀಹರಿಯ ಶರೀರಕ್ಕೆ ಘಾಯವಾಗಿದೆ, ಎಂದು ಹೇಳಿದುದರಿಂದ **ಸ್ವದೇಹಸ್ಯ** ತನ್ನ ಶರೀರಕ್ಕೆ ಛೇದಾದಿಗಳು ಇಲ್ಲವೆಂದು ಹೇಳಿದ್ದು ಹೇಗೆ ಕೂಡುತ್ತದೆ? ಎಂದರೆ) ಸರ್ವ ಸ್ವತಂತ್ರನಾದ ಶ್ರೀ ಹರಿಯು ಛೇದ ಭೇದಾದಿಗಳನ್ನು ಮೂರ್ಖರಿಗೆ ಅಜ್ಞಾನವುಂಟಾಗುವದಕ್ಕಾಗಿ ಇಲ್ಲ ದಿದ್ದುದನ್ನೇ ತೋರಿಸುತ್ತಾನೆ (ಸರ್ವಸ್ವತಂತ್ರನಾದ ಶ್ರೀಹರಿಗೆ ಪಾರಮಾರ್ಥಿಕವಾಗಿ ಛೇದಾದಿಗಳು ಕೂಡಲಾರವು) || ೨೪ ||

ಪೀ—ಶ್ರೀಹರಿಯು ಸರ್ವತ್ರ ವ್ಯಾಪಿಸಿಕೊಂಡಿದ್ದಾನೆಂದಾದರೆ ನಮಗೆ ಏಕೆ ಕಾಣುವುದಿಲ್ಲ ಆದ ಕಾರಣ ಹಿಂದಿನ ಶ್ಲೋಕದಲ್ಲಿ **ಸರ್ವಗತಃ** ಎಂದು ಹೇಳಿದ್ದು ಕೂಡುವುದಿಲ್ಲ, ಎಂದರೆ—

## ಗೀ || ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ |
## ತಸ್ಮಾದೇನಂ ವಿದಿತ್ವೈವಂ ನಾನುಶೋಚಿತುಮರ್ಹಸಿ || ೨೫ ||

ಅ || ಅಯಂ= ಸರ್ವಗತನಾದ ಶ್ರೀಹರಿಯು, ಅವ್ಯಕ್ತಃ= ತನ್ನ ಇಚ್ಛೆಯಿಲ್ಲದೆ ಬೇರೆಯವರಿಗೆ ಕಾಣಿಸಿಕೊಳ್ಳತಕ್ಕವನಲ್ಲ. ಅಯಂ= ಶ್ರೀಹರಿಯು, ಅಚಿಂತ್ಯಃ= ಯಾರಿಗೂ ಆಲೋಚಿಲಿಕ್ಕೂ ಅಶಕ್ಯ ವಾದ ಸಾಮರ್ಥ್ಯವುಳ್ಳವನು, ಅಯಂ= ಶ್ರೀಹರಿಯು ಅವಿಕಾರ್ಯಃ= ಯಾವಾಗಲೂ ವಿಕಾರವೆಂಬ ನಾಶವಿಲ್ಲದವನು, ಎಂದು ಉಚ್ಯತೇ= ಹೇಳಲ್ಪಡುತ್ತಾನೆ (ಅಂದರೆ ಅಚಿಂತ್ಯವಾದ ಆ ಶಕ್ತಿಗೆ ಯಾವಾ ಗಲೂ ನಾಶವು ಬರಲಾರದು) ತಸ್ಮಾತ್= ಹಿಂದೆ ಹೇಳಿದ ಕ್ರಮದಿಂದ ಜೀವನು ನಿತ್ಯನಾದುದರಿಂದ (ಅಂದರೆ ಬಿಂಬ ಉಪಾಧಿ ಅವುಗಳ ಸನ್ನಿಧಿನಾಶ ನಿಮಿತ್ತವೂ, ಶಾಪಾದಿಪ್ರಯುಕ್ತವೂ, ಶಸ್ತ್ರಾಸ್ತ್ರಾದಿ ಗಳಿಂದಲೂ ನಾಶವು ಇಲ್ಲದಿರುವುದರಿಂದ ಜೀವನಿಗೆ ನಿತ್ಯತ್ವವಿದ್ದ ಪ್ರಯುಕ್ತ,) ಏನಂ= ಈ ಜೀವನನ್ನು, ಏವಂ= ನಿತ್ಯನೆಂದೂ, ವಿದಿತ್ವಾ= ತಿಳಿದು ಶೋಚಿತುಂ= ದುಃಖಿಸಲಿಕ್ಕೆ, ನಾರ್ಹಸಿ= ಯೋಗ್ಯನಾಗುವು ದಿಲ್ಲ ಅಥವಾ ತಸ್ಮಾತ್= ಶ್ರೀಹರಿಯೇ ಸರ್ವಸ್ವತಂತ್ರನಾದುದರಿಂದ ಸಂಪೂರ್ಣ ದುಃಖವನ್ನು ನಿವೃತ್ತಿ ಗೊಳಿಸಿ ಸರ್ವಪುರುಷಾರ್ಥವನ್ನು ಕೊಡತಕ್ಕವನಾದ ಪ್ರಯುಕ್ತ, ಏವಂ= ಯುದ್ಧ ಮೊದಲಾದ ಸತ್ಕರ್ಮದಿಂದ ಶ್ರೀಹರಿಯು ಅವ್ಯಕ್ತಾದಿರೂಪನೆಂದು ಏನಂ= ಶ್ರೀಹರಿಯನ್ನು, ವಿದಿತ್ವಾ= ತಿಳಿದು, ಶೋಚಿತುಂ= ಸಂಸಾರದುಃಖವನ್ನನುಭವಿಸಲಿಕ್ಕೆ, ನಾರ್ಹಸಿ= ಯೋಗ್ಯನಾಗುವುದಿಲ್ಲ (ಮುಕ್ತನಾ ಗುವಿ) (ಅಂದರೆ ಯುದ್ಧಮೊದಲಾದ ಸತ್ಕರ್ಮದಿಂದ ಶ್ರೀಹರಿಯನ್ನು ಆರಾಧಿಸಿ ಸಂಪೂರ್ಣ ದುಃಖವನ್ನು ಪರಿಹರಿಸಿಕೋ.) || ೨೫ ||

ಪೀ—ಶ್ರೀಹರಿಯು ಜ್ಞಾನಿಗಳಿಗೆ ಕಾಣಿಸಿಕೊಳ್ಳುತ್ತಾನೆ, ಧ್ಯಾನಿಸಿಕೊಳ್ಳುತ್ತಾನೆ, ಅನೇಕ ಅವತಾರ ಗಳನ್ನು ಮಾಡುವುದರಿಂದ ವಿಕಾರವನ್ನು ಹೊಂದುತ್ತಾನೆ, ಅದುಕಾರಣ **ಅವ್ಯಕ್ತೋಽಯಂ** ಇತ್ಯಾದಿ ಹೇಳಿದ್ದು ಹೇಗೆ ಕೂಡುತ್ತದೆ? ಎಂದರೆ—

**ಭಾ || ಅತ ಏವಾವ್ಯಕ್ತಾದಿರೂಪಃ || ೨೫ ||**

ಅ || ಅವ್ಯಕ್ತ ಸ್ವಭಾವವುಳ್ಳವನಾದಾಗ್ಯೂ ಅಚಿಂತ್ಯಶಕ್ತಿಯಿದ್ದಪ್ರಯುಕ್ತವೇ ಶ್ರೀಭಗವಂತನು ಅವ್ಯಕ್ತಾದಿರೂಪವುಳ್ಳವನಾಗಿರುತ್ತಾನೆ

ವಿ || **ಅತೋಽನಂತೇನ ತಥಾ ಹಿ ಲಿಂಗಂ** ಎಂಬ ಬ್ರಹ್ಮಸೂತ್ರದಲ್ಲಿಯೂ ಈ ಅರ್ಥವನ್ನು ನಿರೂಪಿಸಿರುತ್ತಾರೆ. ಶ್ರೀಹರಿಯು ಅವ್ಯಕ್ತನು, ಪ್ರತ್ಯಕ್ಷನು, ಎಂಬ ಎರಡು ವಿಷಯದಲ್ಲಿಯೂ ಪ್ರಮಾಣಗಳಿದ್ದುದರಿಂದ ಅಪರಿಚ್ಛಿನ್ನಶಕ್ತಿಯುಳ್ಳ ಶ್ರೀಹರಿಯು ಅನುಗ್ರಹಮಾಡಿ ಅವ್ಯಕ್ತನಾದಾಗ್ಯೂ, ಸಜ್ಜನರಿಗೆ ಪ್ರತ್ಯಕ್ಷನಾಗುತ್ತಾನೆ. ಅಲ್ಲದೆ **ತಸ್ಯಾಭಿಧ್ಯಾನಾತ್** ಎಂಬ ವೇದದಲ್ಲಿ ಹೇಳಲ್ಪಟ್ಟ ಶ್ರೀಹರಿಯು ಬಂಧನಿವೃತ್ತಿಯನ್ನು ಮಾಡಿ ಅನುಗ್ರಹಿಸುತ್ತಾನೆ ಎಂತ ತಿಳಿಯುತ್ತದೆ **ದೃಷ್ಟ್ವೈವತಂ ಮುಚ್ಯತೇ** ಎಂಬುದರಿಂದ ಶ್ರೀಭಗವಂತನ ಪ್ರಸಾದದಿಂದ ಪ್ರತ್ಯಕ್ಷ ದರ್ಶನವು. ಆ ಅಪರೋಕ್ಷ ಜ್ಞಾನದಿಂದಲೇ ಮೋಕ್ಷವು ಎಂದುಕ್ತವಾಯಿತು. || ೨೫ ||

ಪೀ—**ಅವ್ಯಕ್ತೋಽಯಂ** ಎಂಬುದು ಶ್ರೀಪರಬ್ರಹ್ಮವಿಷಯಕವೆಂದು ಹೇಳಿದೆ. ಅಲ್ಲಿ ಶ್ರೀಹರಿಗೆ ಅವ್ಯಕ್ತತ್ವಾದಿಗಳನ್ನು ಹೇಳಲಿಕ್ಕೆ ಸಂಗತಿಯೇನೆಂದರೆ—**ಸರ್ವಗತ ಸ್ಥಾಣು,** ಎಂಬಲ್ಲಿ ಶ್ರೀಹರಿಗೆ ಸರ್ವಗತತ್ವವನ್ನು ಹೇಳಿದ್ದಾರೆ. ಅಲ್ಲಿ ಶ್ರೀಹರಿಗೆ ದೇಹವು ಉಂಟೋ ಇಲ್ಲವೋ ಇದ್ದರೆ—ದೇಹವಿದ್ದು ಸರ್ವತ್ರ ಇರುವವನು ಸರ್ವತ್ರ ತೋರಬೇಕು ದೇಹವೇ ಇಲ್ಲವಾದರೆ ಶರೀರಭೇದಾದಿ ನಿರಾಸವೇ ಯುಕ್ತವಲ್ಲ, ಇದುಮೊದಲಾದ ಆಶಂಕೆಗಳನ್ನು ಪರಿಹರಿಸುತ್ತಾರೆ.—

**ತಾ || (೧) ಸರ್ವಗತಶ್ಚೇತ್ಪರಮಾತ್ಮಾ ಕಿಮಿತಿ ತಥಾ ನ ದೃಶ್ಯತ ಇತ್ಯತೋ ವಕ್ತಿ । ಅವ್ಯಕ್ತೋಽಯಮಿತಿ || (೨) ಕಥಮೇತದ್ಯುಜ್ಯತೇ । ಅಚಿಂತ್ಯಶಕ್ತಿತ್ವಾತ್ । ನ ಚ ಸಾ ಶಕ್ತಿಃ ಕದಾಚಿದನ್ಯಥಾ ಭವತಿ । ಅವಿಕಾರ್ಯತ್ವಾತ್ || (೩) ಯಾನಿ ಯಾನ್ಯಸ್ಯ ರೂಪಾಣಿ ತಾನಿ ಸರ್ವಾಣ್ಯಪ್ಯೇವಂಭೂತಾನೀತಿ ದರ್ಶಯಿತುಮೇನಮಯಮಿತ್ಯಾದಿ ಪೃಥಗ್ವಚನಂ । ಜೀವೇ ತು ಸರ್ವಜೀವೇಷ್ವನುಗಮಾರ್ಥಂ || ೧ ||**

ಅ || (೧) ಶ್ರೀಹರಿಯು ಸರ್ವತ್ರ ಇರುವವನೆಂದಾದರೆ ಹಾಗೆ ಏಕೆ ಕಾಣಿಸಿಕೊಳ್ಳುವುದಿಲ್ಲ, ಎಂದರೆ **ಅವ್ಯಕ್ತೋಽಯಂ** ಎನ್ನುತ್ತಾರೆ. (೨) ದೇಹವಿದ್ದರೆ ಅವ್ಯಕ್ತತ್ವವು ಹೇಗೆ ಕೂಡುತ್ತದೆಂದರೆ ಅಚಿಂತ್ಯಶಕ್ತಿಯಿದ್ದಪ್ರಯುಕ್ತ ಕೂಡುತ್ತದೆ ಆ ಅಚಿಂತ್ಯವಾದ ಶಕ್ತಿಯು ಯಾವಾಗಲೂ ವ್ಯತ್ಯಾಸವು ಆಗುವುದೇ ಇಲ್ಲ ಏಕೆಂದರೆ—ವಿಕಾರವನ್ನು ಹೊಂದಲು ಯೋಗ್ಯವೇ ಅಲ್ಲ. (೩) ಒಂದುಸಲ ಹೇಳಿದ್ರಿಂದಲೇ ಅರ್ಥವು ಸಿಗುವುದರಿಂದ **ನೈನಂ ಛಿಂದತಿ ಅವ್ಯಕ್ತೋಽಯಂ** ಇತ್ಯಾದಿ ಸ್ಥಳಗಳಲ್ಲಿ **ಏನಂ ಅಯಂ** ಇದುಮೊದಲಾದ ಪದಗಳನ್ನು ಅನೇಕಸಲ ಹೇಳಿದುದು. ಮೂಲರೂಪದಲ್ಲಿರುವ ಸರ್ವಗತತ್ವ, ಅವ್ಯಕ್ತತ್ವ, ಅಚಿಂತ್ಯಶಕ್ತಿತ್ವ ಮೊದಲಾದವುಗಳು ಶ್ರೀಹರಿಯ ಎಲ್ಲಾ ಅವತಾರ ರೂಪಗಳಲ್ಲಿಯೂ ಇವೆ ಎಂದು ತಿಳಿಸುತ್ತವೆ. (ಹೀಗಾದರೆ ಜೀವನಿಗೆ ರೂಪಗಳು ಹೆಚ್ಚು ಇಲ್ಲದಿರುವುದರಿಂದ **ಅಚ್ಛೇದ್ಯೋಽಯಂ** ಎಂಬಲ್ಲಿ **ಅಯಂ** ಎಂದು ಅನೇಕ ಸಲ ಹೇಳಿದ್ದು ವ್ಯರ್ಥವೆಂದರೆ) ಜೀವನಲ್ಲಿಯಾದರೋ, ಎಲ್ಲಾ ಜೀವರಲ್ಲಿಯೂ, ಹೀಗೆಯೇ ಅಚ್ಛೇದ್ಯತ್ವಾದಿಗಳು ಇವೆ ಎಂದು ತಿಳಿಸುವುದಕ್ಕಾಗಿ ಪ್ರತ್ಯೇಕಪ್ರತ್ಯೇಕ ಹೇಳಿದ್ದು || ೧ ||

ಪೀ—ಶ್ರೀಹರಿಗೆ ದೇಹವಿದೆ, ಆ ದೇಹಕ್ಕೆ ಭೇದಾದಿಗಳಿಲ್ಲ, ಎಲ್ಲಾ ಭಗವದ್ರೂಪಗಳಿಗೆ ಹೀಗೆಯೇ. ಈ ಎಲ್ಲಾ ಪ್ರಮೇಯಗಳೂ ವೇದಪ್ರಮಾಣಗಳಿಂದ ಸಿದ್ಧಿಸುತ್ತವೆನ್ನುತ್ತಾರೆ—

**ತಾ || (೧) ಸರ್ವಂ ಚೈತಚ್ಛ್ರುತಿಸಿದ್ಧಂ । ಸದ್ದೇಹಃ ಸುಖಗಂಧಶ್ಚ ಜ್ಞಾನಭಾಃ ಸತ್ಪರಾಕ್ರಮಃ । ಜ್ಞಾನಜ್ಞಾನಃ ಸುಖಸುಖಃ ಸ ವಿಷ್ಣುಃ ಪರಮೋಽಕ್ಷರಃ । ಇತಿ ಪೈಂಗಿ-**

ಶ್ರುತಿಃ ॥ (೨) ಅದೇಹೋ ದೇಹವಾಂಶ್ಚೈಕಃ ಪ್ರೋಚ್ಯತೇ ಪರಮೇಶ್ವರಃ । ಅಪ್ರಾಕೃತಶರೀರತ್ವಾದದೇಹ ಇತಿ ಕಥ್ಯತೇ ॥ (೩) ಶಿರಶ್ಚರಣಬಾಹ್ವಾದಿವಿಗ್ರಹೋಽಯಂ ಸ್ವಯಂ ಹರಿಃ । ಸ್ವಸ್ಮಾನ್ನಾನ್ಯೋ ವಿಗ್ರಹೋಽಸ್ಯ ತತಶ್ಚಾದೇಹ ಉಚ್ಯತೇ ॥ (೪) ಸ್ವಯಂ ಸ್ವರೂಪವಾನ್ಯಸ್ಮಾದ್ದೇಹವಾಂಶ್ಚೋಚ್ಯತೇ ತತಃ । ಶಿರಶ್ಚರಣಬಾಹ್ವಾದಿಃ ಸುಖಜ್ಞಾನಾದಿರೂಪಕಃ ॥ (೫) ಸ ಚ ವಿಷ್ಣೋರ್ನ ಚಾನ್ಯೋಽಸ್ತಿ ಯಸ್ಮಾತ್ಸೋಽಚಿಂತ್ಯಶಕ್ತಿಮಾನ್ । ದೇಹಯೋಗವಿಯೋಗಾದಿಸ್ತತೋ ನಾಸ್ಯ ಕಥಂಚನ ॥ (೬) ಗುಣರೂಪೋಽಪಿ ಭಗವಾನ್ ಗುಣಭುಕ್ಚ ಸದಾ ಶ್ರುತಃ । (೭) ಅಹಮಿತ್ಯಾತ್ಮಭೋಗೋ ಯತ್ಸರ್ವೇಷಾಮನುಭೂಯತೇ ॥ ಅಭಿನ್ನೇಽಪಿ ವಿಶೇಷೋಽಯಂ ಸದಾಽನುಭವಗೋಚರಃ । ವಿಶೇಷೋಽಪಿ ಹಿ ನಾನ್ಯೋಽತಃ ಸ ಚ ಸ್ವಸ್ಯಾಪಿ ಯುಜ್ಯತೇ । ನಾನವಸ್ಥಾ ತತಃ ಕ್ವಾಪಿ ಪರಮೈಶ್ವರ್ಯತೋ ಹರೇಃ ॥ (೮) ಯುಕ್ತ್ಯಾಯುಕ್ತತ್ವ-(ಅಯುಕ್ತಂ ಯುಕ್ತ)ಮಪಿ ಹಿ ಯದಧೀನಂ ಸದೇಷ್ಯತೇ । ಪ್ರಮಾಣಾವಗತೇ ತತ್ರ ಕುತ ಏವ ಹ್ಯಯುಕ್ತತಾ । ಇತ್ಯಾದಿಪರಮಶ್ರುತಿಃ ॥ ೨ ॥

ಅ ॥ (೧) ಇವೆಲ್ಲವೂ ಮುಂದೆ ಹೇಳುವ ವೇದಪ್ರಮಾಣಗಳಿಂದ ಸಿದ್ಧವಾಗುತ್ತವೆ. ಶ್ರೀವಿಷ್ಣುವು ಚ್ಛೇದಮೊದಲಾದ ದೋಷಗಳು ಇಲ್ಲದ ದೇಹವುಳ್ಳವನು, ಪುಣ್ಯಗಂಧವುಳ್ಳವನು, ಅಥವಾ ಸುಖಸ್ವರೂಪಗಂಧವುಳ್ಳವನು. ಹೆಚ್ಚಿನಪ್ರಕಾಶವುಳ್ಳವನು, ದೋಷವಿಲ್ಲದಪರಾಕ್ರಮವುಳ್ಳವನು, ಹೆಚ್ಚಿನ ಜ್ಞಾನವುಳ್ಳವನು, ಅತಿಶಯಿತಸುಖವುಳ್ಳವನು, ಸರ್ವೋತ್ತಮನು, ನಾಶರಹಿತನು, ಎಂದುಪೈಂಗಿ ಶ್ರುತಿಯು. (೨) (ಶ್ರೀಹರಿಗೆ ದೇಹವಿದೆ, ಎಂದರೆ **ಅಪಾಣಿಪಾದಃ ಬಾಹೂ ರಾಜನ್ಯಃ ಕೃತಃ** ಇತ್ಯಾದಿ ವೇದವಿರೋಧವು ಬರುತ್ತದೆ ಎಂದರೆ) ಸರ್ವೇಶ್ವರನಾದ ಶ್ರೀಹರಿಯೊಬ್ಬನೇ ಜಡಶರೀರವೂ ತನ್ನಿಂದ ಭಿನ್ನಶರೀರವೂ ಇಲ್ಲದಿರುವುದರಿಂದ ದೇಹವಿಲ್ಲದವನೆಂದೂ, ಸ್ವರೂಪಭೂತವೂ ಜ್ಞಾನಾನಂದಾತ್ಮಕವೂ ಆದ ದೇಹ ಇದ್ದುದರಿಂದ ದೇಹವುಳ್ಳವನೆಂದೂ ಹೇಳಲ್ಪಡುತ್ತಾನೆ. ಪ್ರಾಕೃತಶರೀರವಿಲ್ಲದಿರುವುದರಿಂದ ದೇಹವಿಲ್ಲದವನೆನಿಸುತ್ತಾನೆ (೩) ಶ್ರೀಹರಿಯು ಸಾಕ್ಷಾತ್ತಾಗಿ ಶಿರಸ್ಸು ಕಾಲು ತೋಳು ಮೊದಲಾದ ಶರೀರವುಳ್ಳವನು, ಶ್ರೀಪರಬ್ರಹ್ಮನಿಗೆ ತನ್ನಿಂದ ಬೇರೆಯಾದ ಶರೀರವು ಇಲ್ಲ ಆದುದರಿಂದಲೂ ಶ್ರೀಹರಿಯು **ಅದೇಹನು** ಎನಿಸುತ್ತಾನೆ (೪) ಶ್ರೀಹರಿಯು ಸ್ವರೂಪಭೂತದೇಹವುಳ್ಳವನಾದಕಾರಣ ದೇಹವುಳ್ಳವನೆಂದು ಹೇಳಲ್ಪಡುತ್ತಾನೆ ಸುಖಜ್ಞಾನಾದಿರೂಪ ಶಿರಸ್ಸುಪಾದ ತೋಳು ಮೊದಲಾದ ಅವಯವಗಳುಳ್ಳವನು. (೫) ಶ್ರೀಹರಿಯು ಅಚಿಂತ್ಯಶಕ್ತಿಯುಳ್ಳವನಾದ ಕಾರಣ ಆ ದೇಹವು ವಿಷ್ಣುವಿನಿಂದ ಬೇರೆಯಲ್ಲ ಆದಕಾರಣ ಶ್ರೀಹರಿಗೆ ದೇಹಸಂಬಂಧ ವಿಯೋಗಾದಿಗಳು ಹೇಗೂ ಬರಲಾರವು (೬) (ಸುಖಜ್ಞಾನಾದಿ ರೂಪವಾದ ದೇಹವು ಶ್ರೀವಿಷ್ಣುವಿಗಿಂತ ಬೇರೆಯಲ್ಲವೆಂದು ಹೇಳುವುದಾದರೆ-ಆ ಶ್ರೀಹರಿಯು ಸುಖಮೊದಲಾದ ಗುಣರೂಪನೆಂದು ಸಿಗುವುದು. ಅದು ಕೊಡುವುದಿಲ್ಲ **ಆನಂದಭುಕ್** ಇತ್ಯಾದಿಗಳಲ್ಲಿ ಆನಂದವನ್ನು ಉಣ್ಣುತ್ತಾನೆಂದು ಹೇಳಿದೆ ಒಬ್ಬನಿಗೆ ಭೋಕ್ತೃಭೋಗ್ಯಭಾವವು ಕೂಡಲಾರದೆಂದರೆ ) ಶ್ರೀಹರಿಯು ಜ್ಞಾನಾನಂದಾದಿಗುಣಸ್ವರೂಪನಾದರೂ ಸದಾ ಜ್ಞಾನಾನಂದಾದಿಗುಣಗಳನ್ನು ಉಣ್ಣುವವನೆಂದು ವೇದದಲ್ಲಿ ಪ್ರಸಿದ್ಧವಾಗಿದೆ. (೭) ಅಹಂ ಎಂದು ಆತ್ಮಭೋಗವು ಸರ್ವರಿಗೆ ಅನುಭವಸಿದ್ಧವೂ ಆಗಿದೆ. ಅಂದರೆ—ಅಹಮರ್ಥನು, ಆತ್ಮನು, ಆತನಿಗೆ **ಮಾಮಹಂ ಜಾನಾಮಿ** ಎಂದು ಅಬಾಧಿತವಾದ ಕರ್ತೃತ್ವಕರ್ಮತ್ವರೂಪವಾದ ವಿಶೇಷ ಜ್ಞಾನವಿದೆ. ತಥಾಚ

ಕರ್ತೃತ್ವ ಮಾತ್ರವಲ್ಲ ಕೇವಲ ಕರ್ಮತ್ವವು ಅಲ್ಲ, ಹೀಗೆ ವಿಶೇಷವು ಸರ್ವರಿಗೂ ಅನುಭವವಿಷಯಕವಾಗಿದೆ.) (ಹೀಗೆ ಅಹಮಿತ್ಯಾದಿಗಳಲ್ಲಿ ಅನುಭವಸಿದ್ಧವಾದಾಗ್ಯೂ ಅಭಿನ್ನದಲ್ಲಿ ಭೋಕ್ತೃಭೋಗ್ಯಭಾವಕ್ಕೆ ನಿಮಿತ್ತವು ಯಾವುದೆಂದರೆ) ಅಭಿನ್ನವಾದ ವಸ್ತುವಿನಲ್ಲಿ ಈ ವಿಶೇಷವು ಸದಾ ಅನುಭವವಿಷಯಕವಾಗಿದೆ (ಆದರಿಂದ ಅಭಿನ್ನವಾದ ವಸ್ತುವಿನಲ್ಲಿಯೂ ಭೋಕ್ತೃಭೋಗ್ಯಭಾವವು ಕೂಡುತ್ತದೆ) (ಈ ವಿಶೇಷವು ವಿಶೇಷಿಯಿಂದ ಭಿನ್ನವೋ, ಅಭಿನ್ನವೋ? ಭಿನ್ನವೆಂದಾದರೆ—ಭೇದಪರಂಪರೆಯಿಂದ ಅನವಸ್ಥೆಯು ಅಭಿನ್ನವೆಂದಾದರೆ ವಿಶೇಷ ವಿಶೇಷಿ ಎಂಬ ವ್ಯವಹಾರವೇ ಕೂಡಲಾರದು ಅಲ್ಲಿಯೂ ವಿಶೇಷವನ್ನಂಗೀಕರಿಸಿದರೆ ಅನವಸ್ಥಾ ದೋಷವು ಎಂದರೆ) ಆ ವಿಶೇಷವೂ ವಿಶೇಷಿಯಿಂದ ಬೇರೆಯಲ್ಲ. (ಆದಕಾರಣ ಭೇದ ಪರಂಪರೆಯಿಂದ ಅನವಸ್ಥಾದೋಷವಿಲ್ಲ.) ಆ ವಿಶೇಷವೂ ತನಗೂ ಕೂಡುತ್ತದೆ. (ಅಂದರೆ ಅದೇ ವಿಶೇಷವು ಭಿನ್ನವಾದ ವಸ್ತುವಿನಲ್ಲಿ ಭೋಕ್ತೃಭೋಗ್ಯಭಾವರೂಪ ಭೇದವನ್ನು ತೋರಿಸುತ್ತದೆ ಹಾಗೆಯೇ ವಿಶೇಷಿಯಿಂದ ತನಗೆ ಭೇದವಿಲ್ಲವಾದಾದರೂ ವಿಶೇಷತ್ವವನ್ನೂ ವಿಶೇಷಿಗೆ ವಿಶೇಷಿತ್ವವನ್ನೂ ತೋರಿಸುತ್ತದೆ ಹೀಗೆ ವಿಶೇಷಪರಂಪರೆಯಿಂದ ಅನವಸ್ಥಾದೋಷವು ಇಲ್ಲ) ಆದಕಾರಣ ಶ್ರೀಹರಿಗೆ ಪರಮೈಶ್ವರ್ಯವಿದ್ದುದರಿಂದ ಭೋಕ್ತೃಭೋಗ್ಯಭಾವವು ಭಿನ್ನವಾದಾಗ್ಯೂ ಕೂಡುತ್ತದೆ. ಆದಕಾರಣ ಎಲ್ಲಿಯೂ ಅನವಸ್ಥಾದೋಷವಿಲ್ಲ (೮) (ಅಭಿನ್ನವಾದ ತನಗೇನೇ ಭೋಕ್ತೃಭೋಗ್ಯಭಾವದಲ್ಲಿ ಅನುಪಪತ್ತಿಯನ್ನು ಪರಿಹರಿಸುವುದಕ್ಕಾಗಿ ಶ್ರೀಹರಿಗೆ ಐಶ್ವರ್ಯವು ಯಾವುದರಿಂದ ಎಂದರೆ—ಯುಕ್ತಾಯುಕ್ತತ್ವವೂ ಕೂಡ (ಅಂದರೆ-ರೂಪರಸಗಳೆರಡು ಒಂದೇ ವಸ್ತುವಿನಲ್ಲಿರುವುದರಿಂದ ಯುಕ್ತವು. ಗೋತ್ವ ಅಶ್ವತ್ವಗಳೆರಡು ಒಂದು ವಸ್ತುವಿನಲ್ಲಿರುವುದಿಲ್ಲ. ಇದು ಅಯುಕ್ತವು ಇವುಗಳೂ ಕೂಡ) ಯಾವ ಶ್ರೀಹರಿಯ ಅಧೀನವೆಂದು ಸದಾ ಇಷ್ಟವಾಗಿಯದೋ, ಅಂತಹ ಶ್ರೀಹರಿಯಲ್ಲಿ ಪ್ರಮಾಣಸಿದ್ಧವಾದ ವಿಷಯದಲ್ಲಿ ಅಯುಕ್ತತ್ವವು ಹೇಗೆ ಬರುವುದು? ಇದುಮೊದಲಾದುದು ಪರಮಶ್ರುತಿಯು

ವಿ ॥ ಒಬ್ಬನಿಗೇನೇ ಭೋಕ್ತೃತ್ವಭೋಗ್ಯತ್ವಾದಿಗಳು ಪ್ರಮಾಣಸಿದ್ಧವಾಗಿರುವುದರಿಂದ ಲೋಕದೃಷ್ಟಿಯಿಂದ ವಿರುದ್ಧಗಳಾದಾಗ್ಯೂ ಐಶ್ವರ್ಯಬಲದಿಂದಲೇ ಅಂಗೀಕರಿಸಬೇಕು ಪ್ರಮಾಣಸಿದ್ಧವಾಗದಿರುವುದನ್ನು ಸರ್ವಥಾ ಅಂಗೀಕರಿಸಕೂಡದು ॥ ೨ ॥

ಪೀ—ಒಬ್ಬ ಶ್ರೀಹರಿಗೇನೇ ಭೋಕ್ತೃತ್ವ ಭೋಗ್ಯತ್ವ ಮೊದಲಾದ ಗುಣಗಳೇ ಪ್ರಮಾಣಸಿದ್ಧಗಳಾಗಿವೆ. ದುಃಖಾದಿದೋಷಗಳಲ್ಲ, ಎಂಬಲ್ಲಿ ಪ್ರಮಾಣಾಂತರವನ್ನು ಹೇಳುತ್ತಾರೆ—

ತಾ ॥ (೧) ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ ।
ಚಿಂತ್ಯಾ ಅಚಿಂತ್ಯಾಶ್ಚ ತಥೈವ ದೋಷಾಃ ಶ್ರುತಾಶ್ಚ ನಾಜ್ಞೈರ್ಹಿ ತಥಾ ಪ್ರತೀತಾಃ॥
ಇತ್ಯಾದಿ ಚ ಋಗ್ವೇದೇ ಸೌಪರ್ಣಶಾಖಾಯಾಂ ॥ (೨) ಏಕಮೇವಾದ್ವಿತೀಯಂ
ನೇಹ ನಾನಾಸ್ತಿ ಕಿಂಚನ ॥ (೩) ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ
ನಾನೇವ ಪಶ್ಯತಿ ॥ (೪) ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।
ಏವಂ ಧರ್ಮಾನ್ ಪೃಥಕ್ಪಶ್ಯಂಸ್ತಾನೇವಾನುವಿಧಾವತಿ ॥ ೩ ॥

ಅ ॥ (೧) ಲೋಕದೃಷ್ಟಿಯಿಂದ ಅತ್ಯಂತವಿರುದ್ಧಗಳೆಂದು ತೋರಿದರೂ ವೇದದಲ್ಲಿ ಹೇಳಿದ ಗುಣಗಳು ಶ್ರೀಹರಿಯಲ್ಲಿ ಅವಿರುದ್ಧಗಳಾಗಿರುತ್ತವೆ ಲಕ್ಷ್ಮೀ ಬ್ರಹ್ಮಾದಿಗಳಿಂದ ಧ್ಯಾನಿಸಲಿಕ್ಕೆ ಶಕ್ಯಗಳೂ ಅಶಕ್ಯಗಳೂ ಆದ ಭಗವದ್ಗುಣಗಳು ವೇದಗಳಲ್ಲಿ ಹೇಳದಿದ್ದವುಗಳೂ ಇವೆ ಈ ವಿಷಯದಲ್ಲಿ ಸಂದೇಹವಿಲ್ಲ.

ವೇದಗಳ ತಾತ್ಪರ್ಯವನ್ನು ತಿಳಿದವರು ಶ್ರೀಹರಿಯಲ್ಲಿ ದೋಷಗಳಿವೆ, ಎಂದು ವೇದಗಳಲ್ಲಿ ಹೇಳಿರುತ್ತದೆ, ಎಂದು ತಿಳಿದರೂ ವಸ್ತುತಃ ವೇದಗಳಲ್ಲಿ ಶ್ರೀಹರಿಯ ದೋಷಗಳು ಹೇಳಲ್ಪಡಬೇ ಇಲ್ಲ, ಇತ್ಯಾದಿ ವಿಷಯವು ಋಗ್ವೇದದಲ್ಲಿ ಸೌಪರ್ಣಶಾಖೆಯಲ್ಲಿದೆ (೨) (ಭಗವದ್ಗುಣಗಳಿಗೆ ಶ್ರೀಹರಿಯಿಂದ ಭೇದವಿಲ್ಲದಿರುವುದರಿಂದ ರೂಪಾದಿಗಳೆಲ್ಲವೂ ಶ್ರೀಹರಿಯಿಂದ ಭೇದವಿಲ್ಲದವುಗಳು ಎಂಬಲ್ಲಿಯೂ ವೇದ ಪ್ರಮಾಣಗಳನ್ನು ಹೇಳುತ್ತಾರೆ) ಸರ್ವೋತ್ತಮನೊಬ್ಬನು, ಸಮಾನಿಕನೂ ಅಧಿಕನೂ ಇಲ್ಲದವನು, ಶ್ರೀಹರಿಯಲ್ಲಿ ಭಗವದ್ರೂಪಗಳಿಗೂ, ಗುಣಗಳಿಗೂ, ಅವಯವಗಳಿಗೂ ಕರ್ಮಗಳಿಗೂ, ಭೇದವಿಲ್ಲ (೩) (ಹಾಗಾದರೆ—ಭೇದಾಭೇದಗಳು ಇರಬೇಕಾಗುವವು ಎಂದರೆ—) ಯಾರು ಈ ಭಗವದ್ರೂಪಗಳಲ್ಲಿ ಭೇದಾಭೇದಗಳನ್ನು ತಿಳಿಯುತ್ತಾರೋ, ಅವರು ನರಕದ್ದೆಶೆಯಿಂದಲೂ ಅತಿಶಯವಾಗಿ ದುಃಖವಿರುವ ಅಂಧಂತಮಸ್ಸನ್ನು ಹೊಂದುತ್ತಾರೆ. ಹೇಗೆ ಪರ್ವತದ ಶಿಖರದಲ್ಲಿ ಸುರಿಸಲ್ಪಟ್ಟ ನೀರು ಕೆಳಗೆ ಇಳಿದು ಹೋಗುತ್ತದೋ, ಹೀಗೆಯೇ ಶ್ರೀಹರಿಯ ಗುಣಾದಿಗಳನ್ನು ಭಿನ್ನಗಳನ್ನಾಗಿ ತಿಳಿದವನು ಅವುಗಳನ್ನು ಅನುಸರಿಸಿ ಮಿಥ್ಯಾಜ್ಞಾನ ಬಂದ ಮೇಲೆ ಅಧೋಗತಿಗೆ ಹೋಗುತ್ತಾನೆ (ಅಂದರೆ ಅಂಧಂತಮನಸ್ಸಿನಲ್ಲಿ ಬೀಳುತ್ತಾನೆ ‖ ೩ ‖

ಟೀ—ಈ ವೇದವೊದಲಾವುಗಳೆಲ್ಲವೂ ಸರ್ವೈಕ್ಯವನ್ನು ಹೇಳುವುದಿಲ್ಲ ವಿಷಯದಲ್ಲಿ ಎಂಬ ಸ್ಮೃತಿರೂಪಪ್ರಮಾಣ ಹೇಳಿ ವ್ಯಾಖ್ಯಾನಮಾಡುತ್ತಾರೆ.—

ತಾ ‖ (೧) ಮತ್ಸ್ಯಕೂರ್ಮಾದಿರೂಪಾಣಾಂ ಗುಣಾನಾಂ ಕರ್ಮಣಾಮಪಿ । ತಥೈವಾವಯವಾನಾಂ ಚ ಭೇದಂ ಪಶ್ಯತಿ ಯಃ ಕ್ವಚಿತ್ ‖ ಭೇದಾಭೇದೌ ಚ ಯಃ ಪಶ್ಯೇತ್ಸ ಯಾತಿ ತಮ ಏವ ತು । ಪಶ್ಯೇದಭೇದಮೇವೈಷಾಂ ಬುಭೂಷುಃ ಪುರುಷಸ್ತತಃ ‖ (೨) ಅಭೇದೇಽಪಿ ವಿಶೇಷೋಽಸ್ತಿ ವ್ಯವಹಾರಸ್ತತೋ ಭವೇತ್ ‖ (೩) ವಿಶೇಷಿಣಾಂ ವಿಶೇಷಸ್ಯ ತಥಾ ಭೇದವಿಶೇಷಯೋಃ । ವಿಶೇಷಸ್ತು ಸ ಏವಾಯಂ ನಾನವಸ್ಥಾ ತತಃ ಕ್ವಚಿತ್ ‖ (೪) ಪ್ರಾದುರ್ಭಾವಾದಿರೂಪೇಷು ಮೂಲರೂಪೇಷು (ಚ) ಸರ್ವಶಃ । ನ ವಿಶೇಷೋಽಸ್ತಿ ಸಾಮರ್ಥ್ಯೇ ಗುಣೇಷ್ವಪಿ ಕದಾಚನ ‖ (೫) ಮತ್ಸ್ಯಕೂರ್ಮವರಾಹಾಶ್ಚ ನೃಸಿಂಹವಟುಭಾರ್ಗವಾಃ । ರಾಘವಃ ಕೃಷ್ಣಬುದ್ಧೌ ಚ ಕಲ್ಕಿವ್ಯಾಸೈತರೇಯಕಾಃ । ದತ್ತೋ ಧನ್ವಂತರಿರ್ಯಜ್ಞಃ ಕಪಿಲೋ ಹಂಸತಾಪಸೌ । ಶಿಂಶುಮಾರೋ ಹಯಾಸ್ಯಶ್ಚ ಹರಿಃ ಕೃಷ್ಣಶ್ಚ ಧರ್ಮಜಃ । ನಾರಾಯಣಸ್ತಥೇತ್ಯಾದ್ಯಾಃ ಸಾಕ್ಷಾನ್ನಾರಾಯಣಃ ಸ್ವಯಂ ‖ (೬) ಬ್ರಹ್ಮರುದ್ರೌ ಶೇಷವಿಪೌ ಶಕ್ರಾದ್ಯಾ ನಾರದಸ್ತಥಾ । ಸನತ್ಕುಮಾರಃ ಕಾಮಭವೋಽಪ್ಯನಿರುದ್ಧೋ ವಿನಾಯಕಃ । ಸುದರ್ಶನಾದ್ಯಾಯುಧಾನಿ ಪೃಥ್ವಾದ್ಯಾಶ್ಚಕ್ರವರ್ತಿನಃ । ಇತ್ಯಾದ್ಯಾ ವಿಷ್ಣುನಾಽವಿಷ್ಟಾ ಭಿನ್ನಾಃ ಸಂಸಾರಿಣೋ ಹರೇಃ ‖ (೭) ತೇಷ್ವೇವ ಲಕ್ಷ್ಮ್ಯಣಾದ್ಯೇಷು ತ್ರಿಷ್ವೇವಂ ಚ ಬಲಾದಿಷು। ನರಾರ್ಜುನಾದಿಷು ತಥಾ ಪುನರಾವೇಶ ಉಚ್ಯತೇ ‖ (೮) ಸ್ವಲ್ಪಸ್ತು ಪುನರಾವೇಶೋ ಧರ್ಮಪುತ್ರಾದಿಷು ಪ್ರಭೋಃ । ಏತಜ್ಜ್ಞಾನಾತಿ ಯಸ್ತಸ್ಮಿನ್ ಪ್ರೀತಿರಭ್ಯಧಿಕಾ ಹರೇಃ। ಸಂಕರಜ್ಞಾನಿನಸ್ತತ್ರ ಪಾತಸ್ತಮಸಿ ಚ ಧ್ರುವಂ । ಇತ್ಯಾದಿ (ಇತಿ ಚ) ಮಹಾವರಾಹೇ ‖ ೪ ‖ ‖ ೨೫ ‖

ಅ || (೧) ಮತ್ಸ್ಯಕೂರ್ಮ ಮೊದಲಾದ ಭಗವದ್ರೂಪಗಳಿಗೂ, ಭಗವದ್ಗುಣಗಳಿಗೂ, ಕರ್ಮಗಳಿಗೂ, ಹಾಗೆಯೇ ಅವಯವಗಳಿಗೂ, ಎಲ್ಲಿಯಾದರೂ ಸ್ವಲ್ಪ ಭೇದವನ್ನು ಯಾವಾತನು ನೋಡುತ್ತಾನೋ, ಭೇದಾಭೇದಗಳನ್ನು ಯಾವನು ನೋಡುವನೋ, ಅವನು ಅಂಧಂತಮಸ್ಸನ್ನೇ ಹೊಂದುತ್ತಾನೆ ಆದಕಾರಣ ತಿಳಿಯಲಿಚ್ಛಿಸುವ ಪುರುಷನು ಇವುಗಳಿಗೆ ಅಭೇದವನ್ನೇ ತಿಳಿಯಬೇಕು. (೨) (ಇವುಗಳಿಗೆ ಅತ್ಯಂತಾಭೇದವಿದ್ದರೆ ವ್ಯವಹಾರಭೇದಕ್ಕೆ ಕಾರಣವೇನೆಂದರೆ) ಇವುಗಳಿಗೆ ಅಭೇದವೆಂದಂಗೀಕರಿಸಿದರೂ *ವಿಶೇಷವದೆ. ಅದುಕಾರಣ ವ್ಯವಹಾರವು ಕೂಡುವುದು (೩) (ಅಭಿನ್ನಗಳಾದ ಗುಣಾದಿವಿಶೇಷಗಳಲ್ಲಿ ವಿಶೇಷವದೆ ಎಂದಂಗೀಕರಿಸಿದರೆ-ವಿಶೇಷಗಳಿಗೂ, ವಿಶೇಷಕ್ಕೂ, ಹಾಗೆಯೇ ಭೇದಕ್ಕೂ ವಿಶೇಷಕ್ಕೂ, (1) ಭೇದವೋ (2) ಅಭೇದವೋ, (1) ಭೇದವೆಂದಂಗೀಕರಿಸಿದರೆ ಅನವಸ್ಥಾದೋಷವು ತಪ್ಪಿದ್ದಲ್ಲ (2) ಅಭೇದವೆಂದರೆ— ವ್ಯವಹಾರವಿಶೇಷವೇ ಕೂಡಲಾರದು. ಅಲ್ಲಿಯೂ ವಿಶೇಷವದೆ ಎಂದಂಗೀಕರಿಸಿದರೆ—§ಅನವಸ್ಥಾ ದೋಷವೇ, ಎಂದರೆ— ) ವಿಶೇಷಿಗಳಿಗೂ ವಿಶೇಷಕ್ಕೂ ಹಾಗೆಯೇ ಭೇದಕ್ಕೂ ವಿಶೇಷಕ್ಕೂ, ಭೇದವೇ ಇಲ್ಲದಿರುವುದರಿಂದ ಭೇದಪರಂಪರೆಯಿಂದ ಎಲ್ಲಿಯೂ ಅನವಸ್ಥಾದೋಷವು ಇಲ್ಲವೇ ಇಲ್ಲ. (ವ್ಯವಹಾರವಿಶೇಷವೇ ಕೂಡಲಾರದು, ಎಂದೂ ಹೇಳಕೂಡದು. ಏಕೆಂದರೆ ಅಲ್ಲಿಯೂ ವಿಶೇಷವನ್ನಂಗೀಕರಿಸುತ್ತೇವೆ ಹಾಗಾದರೆ ವಿಶೇಷಪರಂಪರೆಯಿಂದ ಅನವಸ್ಥೆಯೆಂದೂ ಹೇಳಕೂಡದು ಏಕೆಂದರೆ—ಯಾವ ವಿಶೇಷವೇ ಅಭಿನ್ನಗಳಾದ ಗುಣಗುಣ್ಯಾದಿಗಳಲ್ಲಿ ವ್ಯವಹಾರಭೇದವನ್ನು ನಿರ್ವಹಿಸುತ್ತದೋ) ಆ ವಿಶೇಷವೇ (ವಿಶೇಷ ವಿಶೇಷಿ ಮೊದಲಾದ ವ್ಯವಹಾರಭೇದವನ್ನು ನಿರ್ವಹಿಸುತ್ತದೆಂದಂಗೀಕರಿಸುತ್ತೇವೆ) (೪) (ಮತ್ಸ್ಯಾದಿ ಭಗವದ್ರೂಪಗಳಿಗೆ ಅತ್ಯಂತಾಭೇದವೇ ಇಂದ್ರ ಅರ್ಜುನಾದಿಗಳಂತೆ **ಸರ್ವೇ ಗುಣಾ ಆವೃತಾ ಮಾನುಷತ್ವೇ ಯುಗಾನುಸಾರಾನ್ಮೂಲರೂಪಾನುಸಾರಾತ್** ಎಂದು ಹೇಳಿದಂತೆ ತಾರತಮ್ಯವೂ ಇಲ್ಲ, ಎನ್ನುತ್ತಾರೆ) ಪ್ರಾದುರ್ಭಾವರೂಪ, ಆವೇಶರೂಪ ಅಂತರ್ನಿಯಾಮಕರೂಪ ಇವುಗಳಿಗೂ ಎಲ್ಲಾ ‡ಮೂಲರೂಪಗಳಿಗೂ ಸಾಮರ್ಥ್ಯವಿಷಯದಲ್ಲಿಯೂ ಗುಣಗಳಲ್ಲಿಯೂ ಎಂದಿಗೂ ವಿಶೇಷವು ಇಲ್ಲವೇ ಇಲ್ಲ (೫) (ಮತ್ಸ್ಯಮೊದಲಾದ ಪ್ರಾದುರ್ಭಾವರೂಪಗಳು ಯಾವವೆಂದರೆ) ಮತ್ಸ್ಯ, ಕೂರ್ಮ, ವರಾಹ, ನರಸಿಂಹ ವಾಮನ ಪರಶುರಾಮ, ರಾಮಚಂದ್ರ, ಕೃಷ್ಣ, ಬುದ್ಧ, ಕಲ್ಕಿ, ವೇದವ್ಯಾಸ, ಮಹಿದಾಸ ದತ್ತ, ಧನ್ವಂತರಿ, ಯಜ್ಞ, ಕಪಿಲ, ಹಂಸ, ತಾಪಸ, ಶಿಂಶುಮಾರ ಹಯಗ್ರೀವ, ಹರಿ, ಧರ್ಮಪುತ್ರನಾದ ಕೃಷ್ಣ, ನಾರಾಯಣ ಇದುಮೊದಲಾದ ಭಗವದ್ರೂಪಗಳು ಸಾಕ್ಷಾತ್ ಶ್ರೀನಾರಾಯಣನೇ ಸ್ವಲ್ಪವೂ ವ್ಯತ್ಯಾಸವಿಲ್ಲ (೬) (ಬ್ರಹ್ಮರುದ್ರಾದಿಗಳೂ ಶ್ರೀಹರಿಯ ಅವತಾರಗಳೆಂದು ಬೇರೆಕಡೆ ಹೇಳಿದೆ, ಅವರನ್ನು ಆದಿಪದದಿಂದ ತೆಗೆದುಕೊಳ್ಳಬೇಕೋ ಬೇಡವೋ ಎಂದರೆ) ಚತುರ್ಮುಖಬ್ರಹ್ಮ, ರುದ್ರ, ಶೇಷ, ಗರುಡ, ಇಂದ್ರ, ಮೊದಲಾದವರೂ ನಾರದರೂ, ಸನತ್ಕುಮಾರರೂ ಮನ್ಮಥ ಅನಿರುದ್ಧ, ಗಣಪತಿ ಈ ದೇವತೆಗಳೂ, ಸುದರ್ಶನ ಮೊದಲಾದ ಆಯುಧಗಳೂ ಪೃಥುಮೊದಲಾದ ಚಕ್ರವರ್ತಿಗಳೂ ಈ ಮೊದಲಾದವರು ಶ್ರೀಹರಿಯ ಆವೇಶವುಳ್ಳವರು, ಇವರೆಲ್ಲರೂ ಸಂಸಾರಿಗಳು ಶ್ರೀಹರಿಯಿಂದ ಭೇದವುಳ್ಳವರೇ ಆಗಿರುತ್ತಾರೆ (ಏವಂಚ ಇವರಲ್ಲಿ ಶ್ರೀಹರಿಯು ಆವೇಶವಿಶೇಷವಿದ್ದುದರಿಂದ ಅವತಾರಗಳೆಂದು ಹೇಳಿದ್ದು) (೭) ಶೇಷ, ಸನತ್ಕುಮಾರ ಅನಿರುದ್ಧ, ಶಕ್ರ, ಯಮ, ಅಶ್ವಿನೀದೇವತೆಗಳು ಲಕ್ಷ್ಮಣ, ಭರತ, ಶತ್ರುಘ್ನ, ಬಲರಾಮ, ಪ್ರದ್ಯುಮ್ನ, ಅನಿರುದ್ಧ, ನರ, ಅರ್ಜುನ, ಯುಧಿಷ್ಠಿರ, ನಕುಲ, ಸಹದೇವರಾಗಿ

---

* ವಸ್ತುತಃ ಭೇದವಿಲ್ಲವಾದರೂ ಭೇದಕಾರ್ಯವಾದ ವ್ಯವಹಾರಾದಿಗಳನ್ನು ನಿರ್ವಹಿಸತಕ್ಕುದು ವಿಶೇಷವು

§ ಪ್ರಮಾಣವಿಲ್ಲದೆ ಅನಂತಾನಂತ ಸಜಾತೀಯ ಪದಾರ್ಥಗಳನ್ನು ಕಲ್ಪಿಸುತಾ, ಕೊನೆಯಲ್ಲಿರುವುದು, ಅನವಸ್ಥಾದೋಷವು

‡ ಯದ್ಯಪಿ ಮೂಲರೂಪವು ಒಂದೇ ಆದರೂ ಪೂರ್ವೇಂದ್ರೋಽಸೌ ಯಜ್ಞನಾಮಾ ರಮೇಶಃ ಇತ್ಯಾದಿ ಪ್ರಕಾರ ಕೃಷ್ಣಾದಿಗಳಿಗೆ ಯಜ್ಞಾದಿಗಳು ಮೂಲರೂಪಗಳು ಅವುಗಳಿಗೂ ಪ್ರಲಯಕಾಲದಲ್ಲಿರತಕ್ಕ ಶ್ರೀನಾರಾಯಣರೂಪವು ಮೂಲರೂಪವು ಹೀಗೆ ಸಾಕ್ಷಾತ್ ಪರಂಪರಾಸಂಬಂಧದಿಂದ ಮೂಲರೂಪವನ್ನು ಇಟ್ಟುಕೊಂಡು ಹೀಗೆ ಹೇಳಿದ್ದು

ಹುಟ್ಟಿರುತ್ತಾರೆ. ಅವರಲ್ಲಿ ವಿಶೇಷವಾಗಿ ಆವೇಶವು ಇದೆ, ಎಂದು ಹೇಳಲ್ಪಡುತ್ತದೆ. (ಮೂಲರೂಪದಲ್ಲಿ ಶ್ರೀಹರಿಯ ಆವೇಶವಿದ್ದುದರಿಂದ ಅವತಾರದಲ್ಲಿಯೂ ಆವೇಶವು ಸಿದ್ಧವಾದುದಾಗ್ಯೂ ಮರಳಿ ಈ ಅವತಾರಗಳಲ್ಲಿ ವಿಶೇಷತಃ ಆವೇಶವದೆ ಎಂದು ಸಿದ್ಧಿಸುತ್ತದೆ) (ಅ) (ಅರ್ಜುನ ಮೊದಲಾದ ನಾಲ್ವರಲ್ಲಿ ಒಂದೇ ರೀತಿಯ ಆವೇಶವಲ್ಲ, ಎನ್ನುತ್ತಾರೆ.) ಶ್ರೀಹರಿಗೆ ಧರ್ಮರಾಜ ಮೊದಲಾದವರಲ್ಲಿ ಅರ್ಜುನನಿಗಿಂತ ಆವೇಶವು ಸ್ವಲ್ಪ ಕಡಿಮೆ. ಈ ವಿಷಯವನ್ನು ಯಾವನು ತಿಳಿಯುತ್ತಾನೋ, ಆತನಲ್ಲಿ ಶ್ರೀಹರಿಗೆ ಅತ್ಯಧಿಕವಾದ ಪ್ರೀತಿಯು ಭಗವದವತಾರಗಳನ್ನು ಅವತಾರಗಳಲ್ಲವೆಂದೂ ಶ್ರೀಹರಿಯ ಪ್ರಾದುರ್ಭಾವರೂಪಗಳಲ್ಲದವುಗಳನ್ನು ಪ್ರಾದುರ್ಭಾವರೂಪಗಳೆಂದೂ. ತಿಳಿದುಕೊಳ್ಳುವುದು **ಸಂಕರಜ್ಞಾನವು.** ಹೀಗೆ ತಿಳಿದುಕೊಳ್ಳುವವನು ನಿಶ್ಚಯವಾಗಿಯೂ ಅಂಧಂತಮಸ್ಸಿನಲ್ಲಿ ಬೀಳುತ್ತಾನೆ, ಇತ್ಯಾದಿ ವಿಷಯವನ್ನು ಮಹಾವರಾಹಪುರಾಣದಲ್ಲಿ ಹೇಳಿದ್ದಾರೆ ॥ ೨೫ ॥

**ಪೀ**—ಜೀವನು ನಿತ್ಯನಾಗಲಿ, ಆದರೂ ದೇಹಸಂಯೋಗ ವಿಯೋಗರೂಪಗಳಾದ ಜನನಮರಣಗಳು ಇವೆಯಷ್ಟೆ ಯುದ್ಧದಲ್ಲಿ ಮರಣವು ನಿಶ್ಚಿತವೇ ಅದುಕಾರಣ ಮರಣನಿಮಿತ್ತವಾದ ದುಃಖವು ನನ್ನವರಿಗೆ ಬರುವುದೆಂದು ನನಗೆ ಶೋಕವೆಂದರೆ—

**ಗೀ ॥ ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಂ ।**
**ತಥಾಽಪಿ ತ್ವಂ ಮಹಾಬಾಹೋ ನೈನಂ ಶೋಚಿತುಮರ್ಹಸಿ ॥ ೨೬ ॥**

**ಅ ॥** ಏನಂ=ಜೀವನನ್ನು, ನಿತ್ಯಜಾತಂ=ದೇಹಸಂಯೋಗರೂಪವಾದ ಉತ್ಪತ್ತಿಯುಳ್ಳವನನ್ನಾಗಿಯೇ ನಿತ್ಯಂ ಮೃತಂ ವಾ=ದೇಹವಿಯೋಗರೂಪವಾದ ಮರಣವುಳ್ಳವನನ್ನಾಗಿಯೇ, ಮನ್ಯಸೇ ಅಥಚ=ತಿಳಿಯುವುದಾದರೆ, ತಥಾಽಪಿ=ಆದರೂ ಮಹಾಬಾಹೋ=ಅರ್ಜುನನೇ, ಏನಂ=ಈ ಜೀವನ ವಿಷಯದಲ್ಲಿ, ಶೋಚಿತುಂ=ದುಃಖಿಸಲಿಕ್ಕೆ, ನಾರ್ಹಸಿ=ಯೋಗ್ಯನಾಗುವುದಿಲ್ಲ ॥ ೨೬ ॥

**ಭಾ ॥ ಅಸ್ತ್ವೇವಮಾತ್ಮನೋ ನಿತ್ಯತ್ವಂ ತಥಾಽಪಿ ದೇಹಸಂಯೋಗವಿಯೋಗಾತ್ಮಕಜನಿ-ಮೃತೀ ಸ್ತ ಏವೇತ್ಯತ ಆಹ । ಅಥ ಚೇತಿ ॥ ೨೬ ॥**

**ಅ ॥** ಹಿಂದೆ ಹೇಳಿದ ಪ್ರಕಾರ ಜೀವನಿಗೆ ನಿತ್ಯತ್ವವನ್ನು ಅಂಗೀಕರಿಸಿಕೊಳ್ಳುವ ಆದರೂ (ಯುದ್ಧದಲ್ಲಿ ಮರಣವು ನಿಶ್ಚಿತವೇ ಆಗಿದೆ ಜನನಮರಣ ನಿಮಿತ್ತವಾದ ದುಃಖವು ನನ್ನವರಿಗೆ ಬರುವುದೆಂದು ನನಗೆ ಶೋಕವು ಆದುದರಿಂದ) ದೇಹಸಂಯೋಗ ವಿಯೋಗರೂಪಗಳಾದ ಜನನಮರಣಗಳು ಇವೆ ಎಂಬುದು ನಿಶ್ಚಿತವೇ, ಎಂದರೆ **ಅಥ ಚ** ಎಂದು ಹೇಳಿರುವರು

**ವಿ ॥ (1) ಅಸ್ತ್ವೇವಮಾತ್ಮನೋ** ನಿತ್ಯತ್ವಂ ಎಂದು ಹೇಳಿದ್ದರಿಂದ, ಜೀವನಿಗೆ ಅನಿತ್ಯತ್ವವನ್ನಂಗೀಕರಿಸಿಕೊಂಡು **ಅಥಚೈನಂ** ಎಂದದ್ದು, ಎಂದು ಮಾಯಾವಾದಿಗಳ ಅರ್ಥವು ನಿರಸ್ತವಾಯಿತು ಹೇಗೆಂದರೆ—**ಧ್ರುವಂ ಜನ್ಮ ಮೃತಸ್ಯ ಚ** ಎಂಬ ಉತ್ತರವಾಕ್ಯದಲ್ಲಿ ಸತ್ತವನಿಗೆ ಮರಳಿ ಉತ್ಪತ್ತಿಯನ್ನು ಹೇಳಿದ ಕಾರಣ ಜೀವನಿಗೆ ನಿತ್ಯತ್ವವು ಸಿದ್ಧವಾಗುವುದು ಅಲ್ಲದೆ **ಅವ್ಯಕ್ತಾದೀನಿ ಭೂತಾನಿ** ಎಂಬ ಉತ್ತರವಾಕ್ಯದಲ್ಲಿ ದೇಹಯೋಗ ವಿಯೋಗರೂಪಗಳಾದ ಜನನಮರಣಗಳನ್ನೂ ಹೇಳಿರುತ್ತಾರೆ ಆತ್ಮನು ಅನಿತ್ಯನೆಂದಾಗಿದ್ದರೆ—ಸ್ವರೂಪೋತ್ಪತ್ತಿಸ್ವರೂಪ ಮರಣಗಳನ್ನೇ ಹೇಳಬಹುದಿತ್ತು ಅದು ಕಾರಣ ಅದರಿಂದಲೂ ವಿರೋಧವು ಬರುತ್ತವೆ ॥ ೨೬ ॥

ಟೀ— ತಾನು ಯುಕ್ತಿಗಳನ್ನು ಹೇಳಿ ಶೋಕಮಾಡಬಾರದೆಂದು ಹಿಂದೆ ಹೇಳಿದ್ದಾರೆ ಅದರಲ್ಲಿ ದೇಹನಾಶವು ತಪ್ಪಿದ್ದಲ್ಲ, ಎಂದು ಹೇಳಿದ್ದನ್ನು ನಾವು ಸಾಧಿಸಬೇಕಾಗಿಲ್ಲ ನಿಮಗೂ ಸಿದ್ಧವೇ ಆಗಿದೆ. ಆದರಿಂದಲೇ ಶೋಕ ಮಾಡಬಾರದೆಂದು ಅಥ ಚೈನಂ ಎಂಬುದರಿಂದ ಹೇಳುತ್ತಾರೆ—

ತಾ ॥ (೧) ತಿಷ್ಠತು ತಾವದಯಂ ವಿಸ್ತಾರಃ । ಯಾವನ್ಮೋಕ್ಷಂ ಜೀವಸ್ಯ ಜನ್ಮಮರಣೇ ಸ್ವಯಮೇವ ಮನ್ಯಸೇ ನ ತು (ನನು) ನಿಯಮೇನ । ತಥಾಽಪಿ ತಾವನ್ಮಾತ್ರೇಣಾಪಿ ಜ್ಞಾನೇನ ಶೋಚಿತುಂ ನಾರ್ಹಸಿ ॥ (೨) ನಿತ್ಯಂ ಸನಾ(ದಾ)ತನಂ ಪ್ರೋ(ಚೋ)ಕ್ತಂ ನಿತ್ಯಂ ನಿಯತಮೇವ ಚ । ಇತಿ ಶಬ್ದನಿರ್ಣಯೇ ॥ ಅತ್ರ ತು ನಿಯತಂ । ಜಾತಸ್ಯ ಹಿ ಧ್ರುವ ಇತಿ ಪ್ರಕಾಶನಾತ್ ॥ ೨೬ ॥

ಅ ॥ (೧) ಹಿಂದಿನ ವಿಸ್ತಾರವೆಲ್ಲಾ ಇರಲಿ ಮೋಕ್ಷವಾಗುವ ಪರ್ಯಂತ ಜೀವರಿಗೆ ಹುಟ್ಟುಸಾವುಗಳು ನಿಶ್ಚಿತಗಳೇ ಎಂದು ತಾನಾಗಿಯೇ ನಿಯಮದಿಂದಲೇ ತಿಳಿಯುತ್ತಿ ಆದರೂ ಅಷ್ಟು ಜ್ಞಾನದಿಂದಲೂ ದುಃಖಿಸಲಿಕ್ಕೆ ಯೋಗ್ಯನಾಗುವುದಿಲ್ಲ. (ಹುಟ್ಟುಸಾವುಗಳು ನಿಶ್ಚಯವಾಗಿ ಬರುತ್ತವೆಂದು ನೀನೇ ತಿಳಿದಿರುತ್ತಿ ಆದಕಾರಣ ಅಂತಹ ವಿಷಯದಲ್ಲಿ ಶೋಕವು ಹೇಗೆ? (೨) (ನಿತ್ಯ ಎಂಬ ಪದಕ್ಕೆ ನಿಯಮವೆಂಬ ಅರ್ಥವಿದೆ ಎಂಬಲ್ಲಿ ಪ್ರಮಾಣ ಹೇಳುತ್ತಾರೆ) (1) ನಿತ್ಯ ಎಂಬುದಕ್ಕೆ ಸನಾತನ ಎಂದೂ, ನಿಯಮ ಎಂದೂ ಅರ್ಥವಿದೆ, ಎಂದು ಶಬ್ದನಿರ್ಣಯದಲ್ಲಿದೆ (2) ಈ ಶ್ಲೋಕದ ಅರ್ಥವನ್ನು ವಿವರಿಸುವ ಮುಂದಿನ ಶ್ಲೋಕದಲ್ಲಿ ನಿತ್ಯ ಎಂಬ ಪದಕ್ಕೆ ನಿಶ್ಚಿತವೆಂದು ಅರ್ಥವನ್ನು **ಜಾತಸ್ಯ ಹಿ ಧ್ರುವೋ ಮೃತ್ಯುಃ**=ಹುಟ್ಟಿದವನಿಗೆ ಮರಣವು ನಿಶ್ಚಿತವು ಎಂದು ವಿವರಿಸಿರುವುದರಿಂದ ಇಲ್ಲಿ ನಿಶ್ಚಿತವೆಂದು ಅರ್ಥವು ॥ ೨೬ ॥

ಗೀ ॥ ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।
ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥ ೨೭ ॥

ಅ ॥ ಜಾತಸ್ಯ=ಹುಟ್ಟಿದವನಿಗೆ, ಮೃತ್ಯುಃ=ಸಾವು, ಧ್ರುವಃ=ನಿಶ್ಚಿತವು ಮೃತಸ್ಯ ಚ=ಸತ್ತವನಿಗೆ, ಜನ್ಮ=ಹುಟ್ಟುವಿಕೆಯು, ಧ್ರುವಂ=ನಿಶ್ಚಿತವು. ತಸ್ಮಾತ್=ಹುಟ್ಟುಸಾವುಗಳು ನಿಶ್ಚಿತಗಳಾಗಿರುವುದರಿಂದ, ಅಪರಿಹಾರ್ಯೇ=ಸರ್ವಥಾ ಬಿಡಲಶಕ್ಯವಾದ, ಅರ್ಥೇ=ಸಾಯುವ ವಿಷಯದಲ್ಲಿ, ತ್ವಂ=ನೀನು, ಶೋಚಿತುಂ=ದುಃಖಿಸಲಿಕ್ಕೆ, ನಾರ್ಹಸಿ=ಯೋಗ್ಯನಾಗುವುದಿಲ್ಲ.

ವಿ ॥ (1) ಭೀಷ್ಮದ್ರೋಣಾದಿ ಜೀವರ ಸ್ವರೂಪಕ್ಕೆ ಹೇಗೂ ನಾಶವಿಲ್ಲ ದೇಹಗಳಿಗೆ ಹೇಗಾದರೂ ನಾಶ ತಪ್ಪಿದ್ದಲ್ಲ ಆದಕಾರಣ ಕ್ಷತ್ರಿಯರಿಗೆ ವಿಹಿತವಾದ ಭಗವತ್ಪೂಜಾರೂಪವಾದ ಯುದ್ಧದಿಂದ ನಿನಗೆ ಪುಣ್ಯವು ಲಭಿಸುವುದು ಅದುಕಾರಣ ಅವರು ಸಾಯುತ್ತಾರೆಂದು ಶೋಕಿಸದೆ ಯುದ್ಧಮಾಡಿ ಪುಣ್ಯವನ್ನು ಸಂಪಾದಿಸಿಕೊಳ್ಳು ॥ ೨೭ ॥

ಭಾ ॥ ಕುತೋಽಶೋಕಃ । ನಿಯತತ್ವಾದಿತ್ಯಾಹ । ಜಾತಸ್ಯೇತಿ ॥ ೨೭ ॥

ಅ ॥ ಶೋಕ ಮಾಡದಿರಲಿಕ್ಕೆ ಕಾರಣವೇನು? ಎಂದರೆ—ಜಾತಸ್ಯ ಎಂಬ ಶ್ಲೋಕದಿಂದ ಹುಟ್ಟಿದವನಿಗೆ ಸಾವು ನಿಶ್ಚಿತವಾಗಿದೆ, ಎಂದು ಹೇಳಿರುತ್ತಾರೆ ॥ ೨೭ ॥

ಟೀ—ಹುಟ್ಟು ಸಾವುಗಳು ನಿಶ್ಚಿತಗಳಾಗಿರುವುದರಿಂದ ಶೋಕವನ್ನು ನಿವಾರಣೆಮಾಡಿಕೊಳ್ಳಬೇಕು. ಅಲ್ಲದೆ ಜೀವರು ಅಸ್ವತಂತ್ರರೆಂದೂ ತಿಳಿಯಬೇಕೆನ್ನುತ್ತಾರೆ—

ತಾ ॥ ತಸ್ಮಾನ್ನಾತ್ರಾಶ್ಚರ್ಯಬುದ್ಧಿಃ ಕರ್ತವ್ಯಾ ॥ ೨೭ ॥

ಅ ॥ ಹುಟ್ಟು ಸಾವುಗಳು ನಿಶ್ಚಿತಗಳಾಗಿರುವುದರಿಂದಲೇ ಜೀವರು ಸ್ವತಂತ್ರರೆಂಬ ಬುದ್ಧಿಯನ್ನು ಸರ್ವಥಾ ಮಾಡಕೂಡದು ॥ ೨೭ ॥

ಗೀ ॥ ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।
ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿವೇದನಾ ॥ ೨೮ ॥

ಅ ॥ ಭಾರತ=ಅರ್ಜುನನೇ, ಭೂತಾನಿ=ಜೀವರ ಶರೀರಗಳು, ಅವ್ಯಕ್ತಾದೀನಿ=ಪ್ರಕೃತಿತತ್ವವೇ ಮೂಲಕಾರಣವಾಗಿ ಉಳ್ಳವುಗಳು, ವ್ಯಕ್ತಮಧ್ಯಾನಿ=ಪ್ರಕೃತಿಕಾರ್ಯವಾದ ಶರೀರವು ಸುಖದುಃಖಗಳನ್ನು ಭೋಗಿಸಲಿಕ್ಕೆ ಕಾರಣವಾಗಿ ಉಳ್ಳವುಗಳು ಅವ್ಯಕ್ತನಿಧನಾನ್ಯೇವ=ಪ್ರಕೃತಿಯಲ್ಲಿಯೇ ಹೋಗಿ ಸೇರ ತಕ್ಕವುಗಳು ತತ್ರ=ನಿಶ್ಚಯವಾಗಿ ಹುಟ್ಟುಸಾವುಗಳುಳ್ಳ ಅಂತಹ ಶರೀರಗಳಲ್ಲಿ, ಕಾ ಪರಿವೇದನಾ= ಶೋಕವು ಏತಕ್ಕೆ, (ಶೋಕವನ್ನು ಸರ್ವಥಾ ಮಾಡಕೂಡದು) ॥ ೨೮ ॥

ಭಾ ॥ ತದೇವ ಸ್ಪಷ್ಟಯತಿ ಅವ್ಯಕ್ತಾದೀನೀತಿ ॥ ೨೮ ॥

ಅ ॥ ಅವ್ಯಕ್ತಾದೀನಿ ಎಂಬ ಶ್ಲೋಕದಿಂದ ಜನ್ಮಮರಣಗಳ ಸ್ವರೂಪವನ್ನು ನಿರೂಪಿಸಿ ಹುಟ್ಟು ಸಾವುಗಳು ನಿಶ್ಚಿತವೇ ಎಂಬುದನ್ನು ವಿವರಿಸುತ್ತಾರೆ ॥ ೨೮ ॥

ಗೀ ॥ ಆಶ್ಚರ್ಯವತ್ಪಶ್ಯತಿ ಕಶ್ಚಿದೇನ-
ಮಾಶ್ಚರ್ಯವದ್ವದತಿ ತಥೈವ ಚಾನ್ಯಃ ।
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ
ಶ್ರುತ್ವಾಽಪ್ಯೇನಂ ವೇದ ನ ಚೈವ ಕಶ್ಚಿತ್ ॥ ೨೯ ॥

ಅ ॥ ಕಶ್ಚಿತ್=ಸಾತ್ವಿಕ ಸ್ವಭಾವವುಳ್ಳವನು, ಏನಂ=ಶ್ರೀಹರಿಯನ್ನು, ಆಶ್ಚರ್ಯವತ್ಪಶ್ಯತಿ= ಸರ್ವಸ್ವತಂತ್ರನಾಗಿರತಕ್ಕ ಶ್ರೀಪರಮಾತ್ಮನನ್ನೇ ಸರ್ವಸ್ವತಂತ್ರನನ್ನಾಗಿಯೇ ನೋಡುತ್ತಾನೆ ಅನ್ಯಶ್ಚ= ಮತ್ತೊಬ್ಬನು, ತಥೈವ=ನೋಡುವವನಂತೆ, ಆಶ್ಚರ್ಯವದ್ವದತಿ=ಸರ್ವಸ್ವತಂತ್ರನಾಗಿರತಕ್ಕ ಶ್ರೀ ಹರಿಯನ್ನೇ ಸ್ವತಂತ್ರನನ್ನಾಗಿಯೇ ಹೇಳುತ್ತಾನೆ ಅನ್ಯಶ್ಚ=ಸಾತ್ವಿಕ ಸ್ವಭಾವದವನು, ಏನಂ= ಶ್ರೀಹರಿಯನ್ನು ಆಶ್ಚರ್ಯವತ್=ಸರ್ವಸ್ವತಂತ್ರನಾಗಿರತಕ್ಕ ಶ್ರೀಪರಮಾತ್ಮನನ್ನೇ ಸ್ವತಂತ್ರನನ್ನಾ ಗಿಯೇ ಕೇಳುತ್ತಾನೆ ಕಶ್ಚಿತ್=ಸಾತ್ವಿಕ ಸ್ವಭಾದವನು, ಏನಂ=ಸರ್ವಸ್ವತಂತ್ರನಾದ ಶ್ರೀಹರಿ ಯನ್ನು ಶ್ರುತ್ವಾಽಪಿ=ಕೇಳಿದರೂ ಕೂಡ (ಅತ್ಯಂತ ಆಶ್ಚರ್ಯಕರವಾದ ವಸ್ತುವಾಗಿರುವುದರಿಂದ) ನೈವ ವೇದ=ತಿಳಿಯುವುದೇ ಇಲ್ಲ ಅಥವಾ ಏನಂ=ಈ ಜೀವನನ್ನು, ಕಶ್ಚಿತ್=ಯಾವನೊಬ್ಬ ಜೀವನು, ತಥೈವ=ಹಿಂದೆ ಹೇಳಿದ ಪ್ರಕಾರ, ಜೀವನು ಸ್ವರೂಪತಃ ನಿತ್ಯನು. ಶ್ರೀಹರಿಯ ಅಧೀನನು. ಸೂಕ್ಷ್ಮನು, ದೇಹಸಂಯೋಗ ವಿಯೋಗವುಳ್ಳವನು, ಇತ್ಯಾದಿ ಪ್ರಕಾರ ಪಶ್ಯತಿ=ನೋಡುತ್ತಾನೋ, ಸಃ=

ಅಂತಹ ನೋಡುವ ಪುರುಷನು, ಆಶ್ಚರ್ಯವತ್=ದುರ್ಲಭನೇ ಆಗಿರುತ್ತಾನೆ ಅನ್ಯಃ=ಮತ್ತೊಬ್ಬ ಯಾವನಾದರೊಬ್ಬನು, ತಥೈವ=ಹಿಂದೆ ಹೇಳಿದ ಪ್ರಕಾರವೇ. (ಅಂದರೆ—ಜೀವನು ಶ್ರೀಹರಿಯ ಅಧೀನನು, ಸ್ವರೂಪತಃ ನಾಶವಿಲ್ಲದವನು, ದೇಹನಾಶವುಳ್ಳವನು, ಎಂದು) ವದತಿ=ಹೇಳುತ್ತಾನೋ, ಸಃ= ಆಶ್ಚರ್ಯವತ್=ದುರ್ಲಭನೇ, ಅನ್ಯಃ=ಇನ್ನೊಬ್ಬನು ಯಾವನಾದರೂ, ಏನಂ=ಈ ಜೀವನನ್ನು, ಶೃಣೋತಿ=ಕೇಳುತ್ತಾನೋ, ಸಃ=ಆತನು, ಆಶ್ಚರ್ಯಃ=ದುರ್ಲಭನೇ, ಕಶ್ಚಿತ್=ಯಾವನಾದರೊಬ್ಬನು, ಏನಂ=ಜೀವನನ್ನು ಶ್ರುತ್ವಾಽಪಿ=ಕೇಳಿಯೂ, (ದೃಷ್ಟ್ವಾಽಪಿ=ನೋಡಿಯೂ, ಉಕ್ತ್ವಾಽಪಿ= ಹೇಳಿಯೂ,) ನ ವೇದ=ಚೆನ್ನಾಗಿ ತಿಳಿಯುವುದಿಲ್ಲ ॥ ೨೯ ॥

ಭಾ ॥ ದೇಹಯೋಗವಿಯೋಗಸ್ಯ ನಿಯತತ್ವಾದಾತ್ಮನಶ್ಚೇಶ್ವರಸರೂಪತ್ವಾತ್ಸರ್ವಥಾಽನಾಶಾನ್ನ ಶೋಕಃ ಕಾರ್ಯಃ ಇತ್ಯುಪಸಂಹರ್ತುಮೈಶ್ವರಂ ಸಾಮರ್ಥ್ಯಂ ಪುನರ್ದರ್ಶಯತಿ । ಆಶ್ಚರ್ಯವದಿತಿ । ದುರ್ಲಭತ್ವೇನೇತ್ಯರ್ಥಃ । ತದ್ಧಿ ಆಶ್ಚರ್ಯಂ ಲೋಕೇ। ದುರ್ಲಭೋಽಪೀಶ್ವರಸರೂಪತ್ವಾತ್ಸೂಕ್ಷ್ಮತ್ವಾಚ್ಚಾತ್ಮನಸ್ತದ್ದ್ರಷ್ಟಾ ॥ ೨೯ ॥

ಅ ॥ ಜೀವನಿಗೆ ದೇಹಸಂಬಂಧವೂ, ದೇಹವಿಯೋಗವೂ ನಿಯಮೇನ ಇರತಕ್ಕುದೇ ಜೀವನು ಶ್ರೀಹರಿಯ ಸಾರೂಪ್ಯವುಳ್ಳವನಾಗಿರುವುದರಿಂದಲೂ ಅಣುರೂಪ (ಸೂಕ್ಷ್ಮ) ನಾದುದರಿಂದಲೂ, ಸರ್ವಥಾ ನಾಶವಿಲ್ಲದವನು, ಆದಕಾರಣ ಶೋಕವಮಾಡಕೂಡದು, ಎಂದು ಉಪಸಂಹಾರ ಮಾಡುವುದಕ್ಕಾಗಿ ಆಶ್ಚರ್ಯವತ್ ಎಂಬ ಶ್ಲೋಕದಿಂದ ಅಘಟ್ಯಘಟಕವಾದ ಅಚಿಂತ್ಯವಾದ ಈಶ್ವರಸಾಮರ್ಥ್ಯವನ್ನು ತೋರಿಸುತ್ತಾರೆ ಆಶ್ಚರ್ಯವತ್ ಎಂಬುದಕ್ಕೆ ದುರ್ಲಭವಾಗಿರುವುದರಿಂದ ಎಂದರ್ಥವು ದುರ್ಲಭವಾದುದು ಲೋಕದಲ್ಲಿ ಆಶ್ಚರ್ಯವನ್ನುಂಟುಮಾಡುವುದು ಹಿ=ಆಶ್ಚರ್ಯಮನಿತ್ಯೇ ಇದುಮೊದಲಾದ ಸ್ಮೃತಿಪ್ರಸಿದ್ಧವು ಜೀವನು ಶ್ರೀಹರಿಯ ಸದೃಶನಾಗಿರುವುದರಿಂದಲೂ ಸೂಕ್ಷ್ಮನಾಗಿದ್ದುದರಿಂದಲೂ, ಈಶ್ವರನ ಅಧೀನನು, ಸೂಕ್ಷ್ಮನು ಇತ್ಯಾದಿ ಪ್ರಕಾರ ನೋಡುವವನು ದುರ್ಲಭನು (ಜೀವರ ಸ್ವರೂಪವನ್ನು ಚೆನ್ನಾಗಿ ತಿಳಿದವರೇ ದುರ್ಲಭರು ಸರಿಯಾಗಿ ತಿಳಿದವರು ಶೋಕ ಮಾಡುವುದಿಲ್ಲ, ಎಂದು ಭಾವವು) ॥ ೨೯ ॥

ತಾ ॥ (೧) ಕಿಂ ತರ್ಹ್ಯಾಶ್ಚರ್ಯೋ(ರ್ಯಂ) ಭಗವಾನೇವೇತ್ಯಾಹ । ಆಶ್ಚರ್ಯವದಿತಿ । ಆಶ್ಚರ್ಯಮೇವ ಸಂತಮೇನಮಾಶ್ಚರ್ಯವತ್ಪಶ್ಯತಿ ನ ಪುನರನಾಶ್ಚರ್ಯಂ । ಗಗನಂ ಗಗನಾಕಾರಂ ಸಾಗರಂ ಸಾಗರೋಪಮಂ । ಇತ್ಯಾದಿವತ್ ॥ (೨) ಆಶ್ಚರ್ಯೋ ಭಗವಾನ್ವಿಷ್ಣುರ್ಯಸ್ಮಾನ್ನೈತಾದೃಶಂ ಕ್ವಚಿತ್ । ತಸ್ಮಾತ್ತದ್ಗೋಚರಂ ಜ್ಞಾನಂ ತದ್ಗೋಚರವದೇವ ತು । ಇತಿ ಬ್ರಹ್ಮತರ್ಕೇ ॥ ಅನಾಶ್ಚರ್ಯವದಪ್ಯಸುರಾದಯಃ ಪಶ್ಯಂತೀತಿ ಕಶ್ಚಿದಿತಿ ವಿಶೇಷಣಂ ॥ ೨೯ ॥

ಅ ॥ (೧) ಜೀವರು ಆಶ್ಚರ್ಯಬುದ್ಧಿಯನ್ನು ಮಾಡಬೇಕೆಂದಾದರೆ--ಎಲ್ಲಿ ಮಾಡಬೇಕೆಂದರೆ— ಆಶ್ಚರ್ಯನು ಭಗವಂತನೇ ಎನ್ನುತ್ತಾರೆ (ಇಲ್ಲಿ ಆಶ್ಚರ್ಯನು ಇನ್ನೊಬ್ಬನೇ ಆಗಬೇಕು ಶ್ರೀಹರಿಯು ಆತನಿಗೆ ಸದೃಶನಾಗಬೇಕು ಶ್ರೀಹರಿಯು ಆಶ್ಚರ್ಯನಲ್ಲ, ಎಂದು ತೋರುವುದರಿಂದ ಆಶ್ಚರ್ಯನು ಭಗವಂತನೇ ಎಂದು ಹೇಳಿದ್ದು ಹೇಗೆ? ಎಂದರೆ) ಸರ್ವಸ್ವತಂತ್ರನೇ ಆದವನನ್ನು ಸ್ವತಂತ್ರನಂತೆ ನೋಡುತ್ತಾನೆ. ಅಸ್ವತಂತ್ರನನ್ನು ಸ್ವತಂತ್ರನಂತೆ ನೋಡುತ್ತಾನೆಂದಲ್ಲ (ಸ್ವತಂತ್ರನಾದವನಿಗೇನೇ ಸ್ವತಂತ್ರ

ಸಾಧವನ ಸಾದೃಶ್ಯವನ್ನು ಹೇಳಿದ್ದು.) (ಹೀಗಾದರೂ ಶ್ರೀಹರಿಯಿಂದ ಇತರವಾದುದು ಸ್ವತಂತ್ರ ವಸ್ತುವು ಇದೆ, ಎಂದಂಗೀಕರಿಸಬೇಕು ಶ್ರೀಹರಿಯೇ ಸ್ವತಂತ್ರನೆಂದಾದರೆ—ಆಶ್ಚರ್ಯವತ್ ಎಂಬ ಮಾತು ಕೂಡದೆ ಹೋಗುವುದು ತನಗೆ ತಾನೇ ದೃಷ್ಟಾಂತನೆಂಬುವುದು ಎಲ್ಲಿಯೂ ಕಂಡುಬರಲಿಲ್ಲ ಎಂದರೆ) ಆಕಾಶಕ್ಕೆ ಸದೃಶವಾದುದು ಆಕಾಶವೇ ಸಮುದ್ರಕ್ಕೆ ಸದೃಶವಾದುದು ಸಮುದ್ರವೇ (ಬೇರೆ ದೃಷ್ಟಾಂತವಿಲ್ಲ) ಇತ್ಯಾದಿಗಳಂತೆ. (ಏವಂಚ ಶ್ರೀಹರಿಯಿಂದ ಬೇರೆಯಾದುದು ಸ್ವತಂತ್ರವಾದುದು ಇಲ್ಲ ಎಂಬಲ್ಲಿ ತಾತ್ಪರ್ಯವು) (೨) ಶ್ರೀಹರಿಗೆ ಸದೃಶನು ಎಲ್ಲಿಯೂ ಇಲ್ಲದಿರುವುದರಿಂದ ಪೂಜ್ಯನಾದ ಶ್ರೀ ವಿಷ್ಣುವೇ ಆಶ್ಚರ್ಯನು ಆದಕಾರಣ ಭಗವಂತನ ಜ್ಞಾನವು ಭಗವದ್ವಿಷಯಕವಾದ ಜ್ಞಾನದಂತೆ, ಎಂದು ಬ್ರಹ್ಮತರ್ಕದಲ್ಲಿದೆ ಅಸ್ವತಂತ್ರನನ್ನೆಂಬಂತೆ ಅಸುರಾದಿಗಳು ನೋಡುತ್ತಾರೆ. ಆದಕಾರಣ ಕಶ್ಚಿತ್ ಎಂಬ ವಿಶೇಷಣವು (ಅಂದರೆ—ಯದ್ಯಪಿ ಶ್ರೀಹರಿಯು ಎಲ್ಲರಿಗೂ ಆಶ್ಚರ್ಯನೇ ಆದರೂ ವಿಪರೀತಜ್ಞಾನಿಗಳು ಹೆಚ್ಚು ಇದ್ದಾರೆ ಯಥಾರ್ಥಜ್ಞಾನಿಗಳು ಕೆಲವರೇ ಇರುವರು. ಆದಕಾರಣ **ಕಶ್ಚಿತ್** ಎಂಬ ವಿಶೇಷಣವು) ॥ ೨೯ ॥

**ಗೀ ॥ ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥ ೩೦ ॥**

ಅ ॥ ಭಾರತ=ಅರ್ಜುನನೇ, ಸರ್ವಸ್ಯ=ಎಲ್ಲಾ ಜೀವರ, ದೇಹೇ=ಸ್ಥೂಲದೇಹದಲ್ಲಿಯೂ ಸೂಕ್ಷ್ಮದೇಹದಲ್ಲಿಯೂ, ಲಿಂಗದೇಹದಲ್ಲಿಯೂ, ಅಯಂ=ಸರ್ವಸ್ವಾಮಿಯಾದ ಶ್ರೀಹರಿಯು, (ರಕ್ಷಕನಾಗಿರುತ್ತಾನೆ ಆದಕಾರಣ) ಅಥವಾ ದೇಹವು ನಾಶ ಹೊಂದಿದರೂ, ಅಯಂ ದೇಹೀ=ಈ ಜೀವನು, ನಿತ್ಯಂ=ಯಾವಾಗಲೂ, ಅವಧ್ಯಃ=ಸಂಹರಿಸಿಕೊಳ್ಳಲಶಕ್ಯನು, ತಸ್ಮಾತ್=ಶ್ರೀಹರಿಯು ರಕ್ಷಕನಾಗಿದ್ದುದರಿಂದ ನಿತ್ಯದಲ್ಲಿಯೂ ಸಂಹರಿಸಿಕೊಳ್ಳಲ್ಪಡದಿರುವ ಪ್ರಯುಕ್ತವೂ, ದೇಹಯೋಗ ವಿಯೋಗಗಳು ತಪ್ಪದಿರುವುದರಿಂದಲೂ, ಜೀವರಿಗೆ ಹೇಗೂ ನಾಶವಿಲ್ಲದಿರುವುದರಿಂದಲೂ, ಸರ್ವಾಣಿ ಭೂತಾನಿ=ಭೀಷ್ಮ ದ್ರೋಣ ಮೊದಲಾದ ಎಲ್ಲಾಜೀವರನ್ನುದ್ದೇಶಿಸಿ, ತ್ವಂ=ನೀನು, ಶೋಚಿತುಂ=ದುಃಖಪಡಲಿಕ್ಕೆ ನಾರ್ಹಸಿ=ಯೋಗ್ಯನಾಗುವುದಿಲ್ಲ ॥ ೩೦ ॥

ತಾ ॥ (೧) ದೇಹೀ ಕುತೋಽವಧ್ಯಃ ಯಸ್ಮಾದಯಮೀಶ್ವರಃ ಸರ್ವಸ್ಯ ಜೀವಸ್ಯ ಸೂಕ್ಷ್ಮೇ ಸ್ಥೂಲೇ ಚ ದೇಹೇ ರಕ್ಷಕತ್ವೇನಾವ(ನ)ಸ್ಥಿತಃ ಅತ ಏವಾವಧ್ಯಃ । ನ ಸ್ವಸಾಮರ್ಥ್ಯಂ ಕಸ್ಯಾಪಿ ॥ (೨) ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ । ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ । ಇತಿ ಹಿ ಭಾಗವತೇ ॥ (೩) ತತ್ರತತ್ರ ಸ್ಥಿತೋ ವಿಷ್ಣುರ್ನಿತ್ಯಂ ರಕ್ಷತಿ ನಿತ್ಯದಾ । ಅನಿತ್ಯದ್ವೈನಾನಿತ್ಯಂ ಚ ನಿತ್ಯಾನಿತ್ಯೇ ತತಸ್ತತಃ । ಭಾವಾಭಾವನಿಯಂತಾ ಹಿ ತದೇಕಃ ಪುರುಷೋತ್ತಮಃ । ಇತಿ ಪಾದ್ಮೇ ॥ ೩೦ ॥

ಅ ॥ (೧) ಜೀವನು ಏತಕ್ಕೆ ಸಂಹರಿಸಿಕೊಳ್ಳಲ್ಪಡುವುದಿಲ್ಲ. (ಅಂದರೆ—ಜೀವರು ನಿತ್ಯರೆಂದು ಹೇಳಿದೆ ಜೀವರು ಸ್ವಭಾವತಃ ನಿತ್ಯರೆಂದಾದರೆ--ಸರ್ವರೂ ಶ್ರೀಹರಿಯ ಅಧೀನರೆಂದದ್ದು ಕೂಡಲಾರದು. ಶ್ರೀಹರಿಯ ಸಾಮರ್ಥ್ಯದಿಂದ ಎಂದರೂ ನಿತ್ಯತ್ವವು ಸ್ವಾಭಾವಿಕವಾಗಿರುವುದರಿಂದ ಶ್ರೀ

ಹರಿಯ ಅಧೀನರೆಂಬುದು ಕೂಡಲಾರದು.) ಎಂದರೆ, ಯಾವ ಕಾರಣದಿಂದ ಈ ಶ್ರೀಹರಿಯು ಎಲ್ಲಾ ಜೀವರ ಸೂಕ್ಷ್ಮವಾದ ಲಿಂಗಶರೀರ ಚೈತನ್ಯಶರೀರಗಳಲ್ಲಿಯೂ, ಸ್ಥೂಲ ಶರೀರದಲ್ಲಿಯೂ ರಕ್ಷಕನಾಗಿರುತ್ತಾನೋ, ಅದುದರಿಂದಲೇ ಸಂಹರಿಸಿಕೊಳ್ಳಲ್ಪಡಲಶಕ್ಯನು ಯಾರೊಬ್ಬರಿಗೂ ಈಶ್ವರಾಧೀನ ಸಾಮರ್ಥ್ಯವಲ್ಲದೆ ಸ್ವತಃ ಸಾಮರ್ಥ್ಯವು ಇಲ್ಲವೇ ಇಲ್ಲ (೨) (ನಿತ್ಯತ್ವಾದಿಗಳು ಸ್ವಾಭಾವಿಕಗಳಾಗಿರುವುದರಿಂದ ಶ್ರೀಹರಿಯ ಅಧೀನಗಳೆಂಬುದು ಹೇಗೆ? ಎಂದರೆ) ಪ್ರಕೃತಿ ಮೊದಲಾದ ತತ್ವಗಳು, ಧರ್ಮ ಅಧರ್ಮಗಳು, ಕಾಲವೂ, ಪ್ರಕೃತ್ಯಾದಿಗಳ ಪರಿಣಾಮಾದಿಗಳು, ಪ್ರಕೃತ್ಯಾದಿ ತತ್ವಗಳ ಮತ್ತು ಅದರ ಪರಿಣಾಮಗಳ ಅಭಿಮಾನಿಯೂ (ಅಂದರೆ ಎಲ್ಲಾ ಚೇತನರೂ) ಇವೆಲ್ಲವೂ ಶ್ರೀಹರಿಯ ಅನುಗ್ರಹದಿಂದಲೇ ಇರುತ್ತವೆ, ಶ್ರೀಹರಿಯನ್ನು ಪೇಕ್ಷಿಸಿ ಇರುವುದಿಲ್ಲ (ಪ್ರಪಂಚ ಹುಟ್ಟತಕ್ಕ ವಸ್ತುಗಳ ಉಪಾದಾನಕಾರಣ ನಿಮಿತ್ತ ಕಾರಣಗಳ ಸ್ಥಿತಿಯೂ ಕೂಡ ಶ್ರೀಹರಿಯ ಅಧೀನವೇ. ನಿತ್ಯತ್ವಾದಿಗಳು ಸ್ವಾಭಾವಿಕಗಳಾದಾಗ್ಯೂ ಭಗವಂತನ ಅಧೀನಗಳಾಗಿವೆ, ಎಂದು ಸ್ಮೃತಿಸಿದ್ಧವಾದ ಪ್ರಯುಕ್ತ ಶ್ರೀಹರಿಯ ಅಧೀನಗಳೆಂಬುದು ಕೂಡುತ್ತದೆ) ಎಂದು ಭಾಗವತದಲ್ಲಿದೆ (೩) (ಜೀವರ ಸ್ಥಿತಿಯೂ ಕೂಡ ಶ್ರೀಹರಿಯ ಅಧೀನವೆಂಬುವಲ್ಲಿ ಈ ಸ್ಮೃತಿಯು ಪ್ರಮಾಣವಾಗಲಿ ಆದರೂ ಶ್ರೀಹರಿಯು ಜೀವರಲ್ಲಿದ್ದು ರಕ್ಷಿಸುತ್ತಿದ್ದಾನೆಂಬ ವಿಶೇಷವು ಹೇಗೆ ಸಿದ್ಧಿಸುತ್ತದೆ, ಎಂದರೆ) ನಿತ್ಯವಸ್ತುವಿನಲ್ಲಿಯೂ, ಅನಿತ್ಯ ವಸ್ತುವಿನಲ್ಲಿಯೂ ಇರತಕ್ಕ ಶ್ರೀಹರಿಯು ನಿತ್ಯರಾದ ಜೀವಾದಿಗಳನ್ನು ಸರ್ವದಾ ನಿತ್ಯರನ್ನಾಗಿಯೇ ರಕ್ಷಿಸುತ್ತಾನೆ ಅನಿತ್ಯಗಳಾದ ವಸ್ತುಗಳನ್ನು, ನಿತ್ಯಗಳನ್ನಾಗಿ ಮಾಡಿ ರಕ್ಷಿಸುವುದಿಲ್ಲ ಕೆಲವು ವೇಳೆಯೇ ರಕ್ಷಿಸುತ್ತಾನೆ ನಿತ್ಯಾನಿತ್ಯವಸ್ತುಗಳಿಗೆ ನಿಯಾಮಕನಾಗಿರುವುದರಿಂದ ನಿತ್ಯಾನಿತ್ಯವಸ್ತುಗಳೂ ಶ್ರೀಹರಿಯ ಅಧೀನಗಳಾಗಿಯೇ ಇರುತ್ತವೆ. ನಿತ್ಯಾನಿತ್ಯವಸ್ತುಗಳಿಗೆ ನಿಯಾಮಕನಾಗಿರುವುದರಿಂದಲೇ ಕ್ಷರಾಕ್ಷರ ಪುರುಷರಿಂದುತ್ತಮನಾದ ಶ್ರೀಹರಿಯೊಬ್ಬನೇ ಭಾವ ಅಭಾವಗಳೆಂಬ ನಿತ್ಯವಸ್ತುಗಳಿಗೆ ನಿಯಾಮಕನು, ಎಂದು ಪಾದ್ಮಪುರಾಣದಲ್ಲಿದೆ ॥೩೦॥

## ಗೀ ॥ ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।
## ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ಕ್ಷತ್ರಿಯಸ್ಯ ನ ವಿದ್ಯತೇ ॥೩೧॥

ಅ ॥ ಸ್ವಧರ್ಮಮಪಿ=ಆತ್ಮನಿಗೆ ವಿನಾಶವಿಲ್ಲದಿರುವುದರಿಂದಲೇ ಕಂಪವು ಕೂಡುವುದಿಲ್ಲವೆಂದಿಷ್ಟು ಮಾತ್ರವಲ್ಲ ಮತ್ತೆ ಯುದ್ಧವು ಕ್ಷತ್ರಿಯರಿಗೆ ಮುಖ್ಯಧರ್ಮವು, ಎಂದು, ಅಥವಾ ವಿಷ್ಣುದ್ವೇಷಿಗಳೂ, ಅವರ ಅನುಬಂಧಿಗಳೂ ಅದವರ ನಿಗ್ರಹವು ಅಲೌಕಿಕ ಶ್ರೇಯಸ್ಸಾಧನವೆಂದು ಅವೇಕ್ಷ್ಯ=ಚೆನ್ನಾಗಿ ತಿಳಿದುಕೊಂಡು, ವಿಕಂಪಿತುಂ=ಶರೀರದಲ್ಲಿ ಎಲ್ಲಾ ಅವಯವಗಳಲ್ಲಿ ನಡುವಿಕೆಯನ್ನು ಮಾಡುವುದಕ್ಕೆ ನಾರ್ಹಸಿ=ಯೋಗ್ಯನಾಗುವುದಿಲ್ಲ, ಕ್ಷತ್ರಿಯಸ್ಯ=ಕ್ಷತ್ರಿಯರಿಗೆ, ಧರ್ಮ್ಯಾತ್=ಪರಲೋಕದಲ್ಲಿ ಸುಖವನ್ನು ಹುಟ್ಟಿಸುವ, ಮತ್ತು ಸರ್ವಧಾರಕನಾದ ಶ್ರೀಹರಿಗೆ ಪೂಜಾರೂಪವಾದ, ಯುದ್ಧಾತ್=ಯುದ್ಧಕ್ಕಿಂತ, ಅನ್ಯತ್=ಬೇರೆ ಯಾವುದೊಂದೂ, ಶ್ರೇಯಃ=ಶ್ರೇಯಸ್ಸಾಧನವಾದುದು, ನ ವಿದ್ಯತೇ=ಇರುವುದಿಲ್ಲ, ಹಿ=ಶಾಸ್ತ್ರಗಳಲ್ಲಿ ಯುದ್ಧ ಮಾಡತಕ್ಕುದೆಂದು ಪ್ರಸಿದ್ಧವಾಗಿದೆ ॥ ೩೧ ॥

ಪೀ—ಅಲ್ಲದೆ ಮಹಾಶ್ರೇಯಸ್ಸುಂಟಾಗುವಾಗ ಯುದ್ಧದಿಂದ ಹಿಂತಿರಳುವುದು ಸರ್ವಥಾ ಅಯುಕ್ತವೆನ್ನುತ್ತಾರೆ—

## ಗೀ ॥ ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಂ ।
## ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಂ ॥ ೩೨ ॥

ಅ ॥ ಪಾರ್ಥ=ಅರ್ಜುನನೇ, ಸುಖಿನಃ=ಸುಖಕ್ಕೆ ಕಾರಣವಾದ ಪುಣ್ಯವುಳ್ಳ, ಕ್ಷತ್ರಿಯಾಃ= ಕ್ಷತ್ರಿಯರು, ಯದೃಚ್ಛಯಾ=ಅನಾಯಾಸದಿಂದ ಅಥವಾ ಶ್ರೀಹರಿಯ ಇಚ್ಛೆಯಿಂದ, ಉಪಪನ್ನಂ= ಪ್ರಾಪ್ತವಾದ, ಅಪಾವೃತಂ=ತೆಗೆಯಲ್ಪಟ್ಟ ಮುಚ್ಚಳವುಳ್ಳ, ಸ್ವರ್ಗದ್ವಾರಂ=ಪಾರಲೌಕಿಕ ಸುಖಕ್ಕೆ ಸಾಧನವಾದ, ಈದೃಶಂ=ಶ್ರೀಹರಿಯ ಪೂಜಾರೂಪವಾಗಿರುವುದರಿಂದ ಪುಣ್ಯವನ್ನುಂಟುಮಾಡುವ, ಯುದ್ಧಂ=ಯುದ್ಧವನ್ನು, ಲಭಂತೇ=ಹೊಂದುತ್ತಾರೆ ಅಥವಾ ಯಾವ ಕ್ಷತ್ರಿಯರು ಇಂತಹ ಯುದ್ಧವನ್ನು ಮಾಡುತ್ತಾರೋ, ಅವರು ಹೆಚ್ಚು ಸುಖವುಳ್ಳವರು ॥ ೩೨ ॥

ಪೀ—ಯುದ್ಧ ಮಾಡದಿದ್ದರೆ ಅನರ್ಥಪ್ರಾಪ್ತಿಯಾಗುತ್ತದೆಂದು ಹೇಳಿ ಅವಶ್ಯವಾಗಿ ಯುದ್ಧಮಾಡಬೇಕೆನ್ನುತ್ತಾರೆ—

**ಗೀ ॥ ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥ ೩೩ ॥**

ಅ ॥ ಇಮಂ ಧರ್ಮ್ಯಂ ಸಂಗ್ರಾಮಂ=ಪಾರಲೌಕಿಕ ಶ್ರೇಯಸ್ಸನ್ನುಂಟುಮಾಡುವ ಈ ಯುದ್ಧವನ್ನು, ಅಥ ನ ಕರಿಷ್ಯಸಿ ಚೇತ್=ಮಾಡದೆ ಹೋದರೆ, ತತಃ=ಕ್ಷತ್ರಿಯರಿಗೆ ವಿಹಿತವಾದ ಪುಣ್ಯಸಾಧನವಾದ ಯುದ್ಧವನ್ನು ಬಿಡುವುದರಿಂದ, ಸ್ವಧರ್ಮಂ=ಕ್ಷತ್ರಿಯರ ಧರ್ಮವನ್ನು, ಕೀರ್ತಿಂ ಚ=ಕೀರ್ತಿಯನ್ನು ಕೂಡ, ಹಿತ್ವಾ=ಬಿಟ್ಟು, ಪಾಪಂ=ನರಕಾದ್ಯನರ್ಥವನ್ನುಂಟುಮಾಡುವ ಪಾಪವನ್ನು, ಅವಾಪ್ಸ್ಯಸಿ=ಹೊಂದುವಿ ॥ ೩೩ ॥

**ಗೀ ॥ ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಂ ।**
**ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥ ೩೪ ॥**

ಅ ॥ ಭೂತಾನಿ ಚ=ಎಲ್ಲಾ ಜೀವರು, ತೇ=ನಿನಗೆ, ಅವ್ಯಯಾಂ=ಸರ್ವದೇಶ ಕಾಲಗಳಲ್ಲಿ ಹಬ್ಬಿಕೊಂಡಿರುವ, ಅಕೀರ್ತಿಂ=ಅಪಕೀರ್ತಿಯನ್ನು, ಕಥಯಿಷ್ಯಂತಿ=ಹೇಳುವರು, ಸಂಭಾವಿತಸ್ಯ ಚ=ಶೌರ್ಯ ಧೈರ್ಯ ಮೊದಲಾದ ಗುಣಗಳಿಂದ ಲೋಕದಲ್ಲಿ ದೊಡ್ಡ ಮನುಷ್ಯನೆಂದನ್ನಿಸಿಕೊಂಡವನಿಗೆ, ಅಕೀರ್ತಿಃ= ಅಪಕೀರ್ತಿಯು, ಮರಣಾತ್=ಸಾಯುವುದಕ್ಕಿಂತಲೂ, ಅತಿರಿಚ್ಯತೇ=ಹೆಚ್ಚಾದುದು (ದೊಡ್ಡ ಮನುಷ್ಯರಿಗೆ ಅಪಕೀರ್ತಿ ಬರುವುದಕ್ಕಿಂತ ಮರಣವೇ ಶ್ರೇಷ್ಠವು) ॥ ೩೪ ॥

**ಗೀ ॥ ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಂ ॥ ೩೫ ॥**

ಅ ॥ ಮಹಾರಥಾಃ=ಮಹಾರಥಿಕರಾದ ಕರ್ಣ ದುರ್ಯೋಧನಾದಿಗಳು, ತ್ವಾಂ=ನಿನ್ನನ್ನು ಭಯಾತ್=ಕರ್ಣ ದುರ್ಯೋಧನಾದಿಗಳಿಂದ ಹೆದರಿ, ರಣಾತ್=ಯುದ್ಧದೆಶೆಯಿಂದ, ಉಪರತಂ= ಹಿಂತೆರಳಿದವನನ್ನಾಗಿ, ಮಂಸ್ಯಂತೇ=ತಿಳಿದುಕೊಳ್ಳುವರು ಯೇಷಾಂ=ಯಾವ ಮಹಾರಥಿಕರಾದ ದುರ್ಯೋಧನಾದಿಗಳಿಗೆ, ಬಹುಮತಃ=ಶೌರ್ಯ ವೀರ್ಯ ಮೊದಲಾದ ಗುಣಗಳಿಂದ ಶ್ರೇಷ್ಠನೆಂದು ಸಮ್ಮತನು, ಭೂತ್ವಾ=ಆಗಿರುತ್ತೀಯೋ. (ಅವರ ಇದಿರಿನಲ್ಲಿಯೇ) ಲಾಘವಂ=ಲಘುಭಾವವನ್ನು (ಹೇಡಿತನವನ್ನು) ಯಾಸ್ಯಸಿ=ಹೊಂದುವಿ ॥ ೩೫ ॥

**ಗೀ ॥ ಅವಾಚ್ಯವಾದಾಂಶ್ಚ ಬಹೂನ್ವದಿಷ್ಯಂತಿ ತವಾಹಿತಾಃ ।**
**ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಂ ॥ ೩೬ ॥**

ಅ ॥ (ನಿನಗೆ ಲಾಘವವು ಬರುತ್ತದೆಂದು ಮಾತ್ರವಲ್ಲ, ಮತ್ತೆ) ತವ= ನಿನ್ನ, ಅಹಿತಾಃ= ಶತ್ರುಗಳಾದ ದುರ್ಯೋಧನಾದಿಗಳು, ತವ= ನಿನ್ನ, ಸಾಮರ್ಥ್ಯಂ= ಪರಾಕ್ರಮವನ್ನು, ನಿಂದಂತಃ= ನಿಂದಿಸುವವರಾಗಿ, ಬಹೂನ್= ಅನೇಕ ಪ್ರಕಾರಗಳಾದ, ಅವಾಚ್ಯವಾದಾನ್= ಹೇಳಲಯೋಗ್ಯ ಮಾತುಗಳನ್ನು, ವದಿಷ್ಯಂತಿ= ಹೇಳುವರು. ತತಃ= ಶತ್ರುಗಳಾದ ದುರ್ಯೋಧನಾದಿಗಳು ಮಾಡುವ ನಿಂದಾದಿಗಳನ್ನು ಕೇಳುವುದಕ್ಕಿಂತಲೂ, ದುಃಖತರಂ= ಅತಿಶಯಿತ ಕಷ್ಟವು, ಕಿಂ ನು?= ಬೇರೆ ಯಾವುದಿದೆ? (ಯಾವುದೂ ಇಲ್ಲ) (ಇದೇ ಅತ್ಯಂತ ದುಃಖಕರವಾದುದು) ॥ ೩೬ ॥

ಪೀ— ಯುದ್ಧದಲ್ಲಿ ಮರಣ ಹೊಂದಿದರೂ, ಜಯಿಸಿದರೂ ಎರಡು ಪಕ್ಷದಲ್ಲಿಯೂ ಕೆಡುಕು ಇಲ್ಲವೆನ್ನುತ್ತಾರೆ—

**ಗೀ ॥ ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ ।**
**ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥ ೩೭ ॥**

ಅ ॥ ಕೌಂತೇಯ= ಅರ್ಜುನನೇ, ಹತೋ ವಾ= ಯುದ್ಧದಲ್ಲಿ ಶತ್ರುಗಳಿಂದ ಸಂಹರಿಸಿಕೊಳ್ಳಲ್ಪಟ್ಟರೆ, ಸ್ವರ್ಗಂ= ಸ್ವರ್ಗವನ್ನು, ಪ್ರಾಪ್ಸ್ಯಸಿ= ಹೊಂದುವಿ, ಜಿತ್ವಾ ವಾ= ಶತ್ರುಗಳನ್ನು ಜಯಿಸಿದರೆ, ಮಹೀಂ= ಭೂಮಿಯನ್ನು, ಭೋಕ್ಷ್ಯಸೇ= ಅನುಭವಿಸುತ್ತಿ (ಆ ಮೇಲೆ ಸ್ವರ್ಗವನ್ನು ಹೊಂದುವಿ) ತಸ್ಮಾತ್= ಜಯಿಸಿದರೂ ಮರಣ ಹೊಂದಿದರೂ ಎರಡು ಕಲ್ಪದಲ್ಲಿಯೂ ಫಲವು ಸಿಗುವುದರಿಂದ, ಯುದ್ಧಾಯ ಕೃತನಿಶ್ಚಯಃ= ಕ್ಷತ್ರಿಯರಿಗೆ ಮುಖ್ಯಧರ್ಮವಾದ ಯುದ್ಧವನ್ನು ಅವಶ್ಯವಾಗಿ ಮಾಡಬೇಕೆಂದು ನಿಶ್ಚಯವುಳ್ಳವನಾಗಿ, ಯುದ್ಧಾಯ= ಯುದ್ಧಕ್ಕೋಸ್ಕರ, ಉತ್ತಿಷ್ಠ= ಸನ್ನದ್ಧನಾಗು. ॥ ೩೭ ॥

**ತಾ ॥ (೧) ಜಿತ್ವಾ ಸ್ವರ್ಗಂ (ಗೋ) ಮಹೀಂ (ಹೀ) ಚ ॥ (೨) ಯೇ ಯುಧ್ಯಂತೇ ಪ್ರಧನೇಷು ಶೂರಾಸ (ಸೋ ಯೇ ತನುತ್ಯಜಃ) ಇತಿ ಶ್ರುತೇಃ ॥ ೩೭ ॥**

ಅ ॥ (೧) ಶತ್ರುಗಳನ್ನು ಗೆದ್ದು ರಾಜ್ಯವನ್ನು ಹೊಂದುವಿ. ಆ ಮೇಲೆ ಸ್ವರ್ಗವನ್ನು ಹೊಂದುವಿ. (೨) ಯುದ್ಧದಲ್ಲಿ ಮರಣವನ್ನು ಹೊಂದಿ ಸ್ವರ್ಗವನ್ನು ಹೊಂದುವಿ. ಗೆದ್ದು ಭೂಮಿಯನ್ನು ಅನುಭವಿಸುವಿ. ಎಂದು ಆಪಾತತಃ ತೋರುವ ಅರ್ಥವೇ ಏಕೆ ಆಗಲಾರದೆಂದರೆ) **ಯೇ ಯುಧ್ಯಂತೇ ಪ್ರಧನೇಷು ಶೂರಾಸೋ ಯೇ ತನೂತ್ಯಜಃ ಯೇ ವಾ ಸಹಸ್ರದಕ್ಷಿಣಾಸ್ತಾಂಶ್ಚಿದೇವಾಪಿಗಚ್ಛತಾತ್** ಯಾವ ಶೂರರು, ಯುದ್ಧಗಳಲ್ಲಿ ಯುದ್ಧ ಮಾಡುತ್ತಾರೋ, ಯಾರು ಮರಣ ಹೊಂದುತ್ತಾರೋ, ಯಾರು ಸಹಸ್ರಸಾಂಖ್ಯ ದಕ್ಷಿಣೆಯನ್ನು ಕೊಡುತ್ತಾರೋ, ಅವರ ಸಮೀಪಕ್ಕೇನೇ ಈ ಪ್ರೇತವೂ ಹೋಗಲಿ, ಎಂದು ಪ್ರೇತಕ್ಕೆ ಸ್ವರ್ಗಪ್ರಾಪ್ತಿಯಾಗಲಿ, ಎಂದು ಯಮನೊಡನೆ ಪ್ರಾರ್ಥಿಸಿದುದರಿಂದ ಸಾಮ್ರಾಜ್ಯ ಭೋಗಾನಂತರದಲ್ಲಿಯೂ, ಸ್ವರ್ಗಪ್ರಾಪ್ತಿಯಾಗುತ್ತದೆ, ಎಂದು ಸಿದ್ಧಿಸುತ್ತದೆ ॥ ೩೭ ॥

**ಗೀ ॥ ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥ ೩೮ ॥**

ಅ || ಸುಖದುಃಖೇ ಸಮೇ ಕೃತ್ವಾ=ಸುಖದುಃಖಗಳನ್ನು ಸಮಗಳನ್ನಾಗಿ ಮಾಡಿಕೊಂಡು (ಅಂದರೆ—ಹೇಗೆ ದುಃಖವು ಬಿಡಲರ್ಹವೋ ಹಾಗೆಯೇ ವಿಷಯಗಳ ಅನುಭವದಿಂದುಂಟಾಗುವ ಸುಖವೂ ಕೂಡ ಬಿಡಲರ್ಹವು. ಹೀಗೆ ಬಿಡಲರ್ಹವಾಗಿರುವುದರಿಂದ ದುಃಖಕ್ಕೆ ಸಮವನ್ನಾಗಿ ಸುಖವನ್ನು ಮಾಡಿ) ಲಾಭಾಲಾಭೌ=ಬಿಡುವುದಕ್ಕೆ ಯೋಗ್ಯವಾಗಿರುವುದರಿಂದ ಅಲಾಭಕ್ಕೆ ಸಮವನ್ನಾಗಿ ಲಾಭವನ್ನು, ಕೃತ್ವಾ=ಮಾಡಿ, ಜಯಾಜಯೌ=ಅಪೇಕ್ಷಿಸಲಿಕ್ಕೆ ಯೋಗ್ಯವಾಗದಿರುವುದರಿಂದ ಪರಾಜಯಕ್ಕೆ ಸಮವನ್ನಾಗಿ ಜಯವನ್ನು, ಕೃತ್ವಾ=ಮಾಡಿ, (ಅಂದರೆ ಸುಖಾದಿಗಳಲ್ಲಿ ಅಭಿಲಾಷೆಯನ್ನು ಬಿಟ್ಟುಬಿಟ್ಟು ಯುದ್ಧವು ಭಗವತ್ಪೂಜಾರೂಪವಾದುದು ನಮಗೆ ವಿಹಿತವಾದ ಧರ್ಮವು, ಎಂದು ತಿಳಿದು) ಯುದ್ಧಾಯ=ಯುದ್ಧಕ್ಕೋಸ್ಕರ, ಯುಜ್ಯಸ್ವ=ಸಿದ್ಧನಾಗು ತತಃ=ಭಗವದ್ಭಕ್ತಿಪೂರ್ವಕವಾಗಿ ನೀನು ನಿನ್ನ ಧರ್ಮ ಮಾಡಿದುದರಿಂದ, ಪಾಪಂ=ಪಾಪವನ್ನು ನೈವ ಅವಾಪ್ಸ್ಯಸಿ=ಹೊಂದುವುದೇ ಇಲ್ಲ (ಪುಣ್ಯವನ್ನೇ ಹೊಂದುವಿ) || ೩೮ ||

**ಗೀ || ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು |**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ || ೩೯ ||**

ಅ || ಪಾರ್ಥ=ಅರ್ಜುನನೇ, ತೇ=ನಿನಗಾಗಿ, ಸಾಂಖ್ಯೇ=ಜೀವ ಪರಮಾತ್ಮ ಇವರ ಸ್ವರೂಪ ಜ್ಞಾನವು ಹುಟ್ಟುವುದಕ್ಕಾಗಿ, ಏಷಾ=**ನ ತ್ವೇವಾಹಂ** ಎಂದಾರಂಭಿಸಿ **ದೇಹೀ ನಿತ್ಯಮವಧ್ಯ** ಎಂಬ ಪರ್ಯಂತ, ಬುದ್ಧಿಃ=ಜೀವೇಶ್ವರರ ಸ್ವರೂಪವನ್ನು ತಿಳಿಸತಕ್ಕ ವಾಕ್ಯಗಳು, ಅಭಿಹಿತಾ=ಹೇಳಲ್ಪಟ್ಟವು. ಯೋಗೇ ತು=ಶ್ರೀಹರಿಯ ಅಪರೋಕ್ಷಜ್ಞಾನಕ್ಕೆ ಕಾರಣವಾದ ಉಪಾಯದ ಜ್ಞಾನವು ಬರುವುದಕ್ಕಾಗಿ, ಇಮಾಂ=**ತ್ರೈಗುಣ್ಯವಿಷಯಾಃ** ಎಂದಾರಂಭಿಸಿ ೬ನೆ ಅಧ್ಯಾಯ, ಸಮಾಪ್ತಿಪರ್ಯಂತ ಹೇಳುವ, ಬುದ್ಧಿಂ=ಉಪಾಯಗಳ ಜ್ಞಾನವನ್ನು ಹುಟ್ಟಿಸುವ ಮಾತುಗಳನ್ನು, ಶೃಣು=ಕೇಳು, (ಅಂದರೆ—ಕೇಳಿ ಆಸಕ್ತಿಯಿಟ್ಟು ಹೇಳಿದ ಪ್ರಕಾರ ಆಚರಿಸು) ಯಯಾ=ಯಾವ ನನ್ನ ಮಾತಿನಿಂದ ಹುಟ್ಟಿದ, ಬುದ್ಧ್ಯಾ=ಅಪರೋಕ್ಷಜ್ಞಾನದ ಉಪಾಯಭೂತವಾದ ಜ್ಞಾನದಿಂದ ಯುಕ್ತಃ=ಕೂಡಿದವನಾಗಿ, (ಸಾಧನವನ್ನು ಮಾಡಿ ಪರಬ್ರಹ್ಮನ ಸಾಕ್ಷಾತ್ಕಾರವನ್ನು ಸಂಪಾದಿಸಿಕೊಂಡು) ಕರ್ಮಬಂಧಂ=ಸಂಸಾರವನ್ನು, ಪ್ರಹಾಸ್ಯಸಿ=ಸಂಪೂರ್ಣವಾಗಿ ಬಿಡುತ್ತಿ (ಅಂದರೆ ಮೋಕ್ಷವನ್ನು ಹೊಂದುವಿ)

ವಿ || ಜೀವಬ್ರಹ್ಮರ ಸ್ವರೂಪಗಳನ್ನು ಹಿಂದೆ ಹೇಳಿರುತ್ತಾರೆ ಇನ್ನು ಪರಬ್ರಹ್ಮನ ಸಾಕ್ಷಾತ್ಕಾರಕ್ಕೆ ಕಾರಣವಾದ ಉಪಾಯವನ್ನು ನನ್ನಿಂದ ಕೇಳಿ ಹಾಗೆಯೇ ಆಚರಣೆಮಾಡಿ ಅಪರೋಕ್ಷಜ್ಞಾನವನ್ನು ಸಂಪಾದಿಸಿ ಶ್ರೀಹರಿಯ ಪರಮಾನುಗ್ರಹದಿಂದ ಮೋಕ್ಷವನ್ನು ಹೊಂದು || ೩೯ ||

ಹೀ—ಗೀತೆಯಲ್ಲಿದ್ದ ಸಾಂಖ್ಯ ಯೋಗಶಬ್ದಗಳು ಕಾಪಿಲಶಾಸ್ತ್ರ ಪಾತಂಜಲಶಾಸ್ತ್ರಗಳನ್ನು ಹೇಳುತ್ತವೆಂಬ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಪ್ರಮಾಣವನ್ನು ಹೇಳಿಕೊಂಡು ಅರ್ಥಹೇಳುತ್ತಾರೆ–

**ಭಾ || (೧) ಸಾಂಖ್ಯಂ ಜ್ಞಾನಂ | ಶುದ್ಧಾತ್ಮತತ್ತ್ವವಿಜ್ಞಾನಂ ಸಾಂಖ್ಯಮಿತ್ಯಭಿಧೀಯತೇ | ಇತಿ ಭಗವದ್ವಚನಾದ್ವ್ಯಾಸಸ್ಮೃತೌ || (೨) ಯೋಗ ಉಪಾಯಃ | ದೃಷ್ಟ್ವಾ ಯೋಗಾಃ ಪ್ರಯುಕ್ತಾಸ್ತು ಪುಂಸಾಂ ಶ್ರೇಯಃಪ್ರಸಿದ್ಧಯೇ | ಇತಿ ಪ್ರಯೋಗಾದ್ಭಾಗವತೇ || (೩) ನೇತರೌ ಸಾಂಖ್ಯಯೋಗಾವುಪಾದೇಯತ್ವೇನ ವಿವಕ್ಷಿತೌ | ಕುತ್ರಚಿತ್**

**ಸಾಮಸ್ತ್ಯೇನ । ಕರ್ಮಯೋಗ ಇತ್ಯಾದಿಪ್ರಯೋಗಾಚ್ಚ ॥ (೪) ನಿಂದಿತತ್ವಾಚ್ಚೇತರಯೋರ್ಮೋಕ್ಷಧರ್ಮೇಷು ಭಿನ್ನಮತತ್ವಮುಕ್ತ್ವಾ ಪಂಚರಾತ್ರಸ್ತುತ್ಯಾ ॥ (೫) ವೇದಾನಾಂ ತ್ವೇಕಾರ್ಥತ್ವಾನ್ನ ವಿರೋಧಃ । ಪಾರ್ಥಕ್ಯಂ ತು ಸಾಂಖ್ಯಾದ್ಯಪೇಕ್ಷಯಾ ಯುಕ್ತಂ ॥ ೧ ॥**

ಅ ॥ (೧) ದೋಷಲೇಶರಹಿತನಾದ ಶ್ರೀಪರಮಾತ್ಮನ ತತ್ವಜ್ಞಾನವು ಸಾಂಖ್ಯ ಎನಿಸುತ್ತದೆ ಎಂದು ವ್ಯಾಸಸ್ಮೃತಿಯಲ್ಲಿ ಭಗವಂತನ ವಚನವಿದ್ದುದರಿಂದ ಸಾಂಖ್ಯವೆಂದರೆ ಜ್ಞಾನವು. (೨) ಪುರುಷರಿಗೆ ಕೀರ್ತಿಯನ್ನು ಪ್ರಸಿದ್ಧಿಗೊಳಿಸುವುದಕ್ಕಾಗಿ ಉಪಾಯಗಳು ಕಾಣಲ್ಪಟ್ಟವು, ಆಚರಿಸಲ್ಪಟ್ಟವುಗಳೂ ಆಗಿವೆ, (**ತಾನಾತಿಷ್ಠತಿ ಯೋಽಸಮ್ಯಗುಪಾಯಾನ್ ಪೂರ್ವದರ್ಶಿತಾನ್**, ಎಂದು ಭಾಗವತದಲ್ಲಿ ಪ್ರಯೋಗಿಸಿರುವುದರಿಂದ **ಯೋಗ** ಶಬ್ದದಿಂದ ಉಪಾಯವು ಹೇಳಲ್ಪಡುತ್ತದೆ (೩) (ಆಪಾತತಃ ತೋರುವ ಅರ್ಥಗಳೇ ಏಕೆ ಆಗಲಾರವೆಂದರೆ—) ಕಾಪಿಲ ಪಾತಂಜಲಶಾಸ್ತ್ರರೂಪಗಳಾದ ಸಾಂಖ್ಯಯೋಗಗಳು ಯಾವ ಆಗಮದಲ್ಲಿಯೂ ಸಂಪೂರ್ಣ ಗ್ರಾಹ್ಯಗಳೆಂದು ಹೇಳಲೇ ಇಲ್ಲ. (ಪರಂತು **ಅಕ್ಷಪಾದಕಣಾದೌ ಚ ಸಾಂಖ್ಯಯೋಗೌ ಚ ಹೈತುಕಾಃ । ಸರ್ವವೇದವಿರುದ್ಧಂ ಚ ಕಪಿಲೋಽನ್ಯೋ ಜಗಾದ ಹ** ಇತ್ಯಾದ್ಯಾಗಮಗಳಲ್ಲಿ ಸರ್ವಥಾ ಗ್ರಾಹ್ಯಗಳಲ್ಲವೆಂದೇ ಹೇಳಿರುತ್ತಾರೆ ಗೀತೆಯಲ್ಲಿ ಹೇಳಿದ ಸಾಂಖ್ಯಯೋಗಶಬ್ದದಿಂದ ಹೇಳಲ್ಪಟ್ಟ, ಜ್ಞಾನ, ಜ್ಞಾನೋಪಾಯಗಳು **ಬುದ್ಧ್ಯಾ ಯುಕ್ತಃ** ಇತ್ಯಾದಿ ಪ್ರಮಾಣಗಳಿಂದ ಗ್ರಾಹ್ಯಗಳೆಂದೇ ಹೇಳಿರುತ್ತಾರೆ ಆದಕಾರಣ ಇಲ್ಲಿದ್ದ ಸಾಂಖ್ಯಯೋಗಶಬ್ದಗಳಿಂದ ಕಾಪಿಲ ಪಾತಂಜಲ ಶಾಸ್ತ್ರಗಳನ್ನೂ ಇಟ್ಟುಕೊಳ್ಳಕೂಡದು.) (ಹಾಗಾದರೆ ಆ ಶಾಸ್ತ್ರಗಳಲ್ಲಿ ಹೇಳಿದ ಪ್ರಕೃತಿಪುರುಷವಿಭಾಗಾದಿಗಳು ಗ್ರಾಹ್ಯಗಳಾಗಿರುವುದರಿಂದ ಅದರಂತೆ ಇದೂ ಗ್ರಾಹ್ಯವೆಂದು ಏಕೆ ಹೇಳಬಾರದೆಂದರೆ) ಸಾಮಸ್ತ್ಯೇನ=ಸಮಸ್ತ ಭಾಗವೂ ಅಗ್ರಾಹ್ಯವೇ ಹಾಗಾದರೆ ಏಕದೇಶವು ಗ್ರಾಹ್ಯವಾಗಿರುವುದರಿಂದ ಅದೂ ಗ್ರಾಹ್ಯವಾಗಬೇಕೆಂದು ಹೇಳುವುದಾದರೆ ಬುದ್ಧಜಿನಾದಿ ಶಾಸ್ತ್ರದಲ್ಲಿ ಹೇಳಿದ ಪ್ರತ್ಯಕ್ಷಾನುಮಾನ ಪ್ರಾಮಾಣ್ಯವು **ಅಹಿಂಸಾ ಪರಮೋ ಧರ್ಮಃ** ಇತ್ಯಾದಿಗಳು ಗ್ರಾಹ್ಯಗಳಾಗಿರುವುದರಿಂದ ಸಂಪೂರ್ಣ ಶಾಸ್ತ್ರವೂ ಗ್ರಾಹ್ಯವಾಗಬೇಕಾಗುವುದು ) ಮತ್ತು **ಯೋಗೇ ತ್ವಿಮಾಂ ಶೃಣು** ಎಂದು ಹೇಳಿದ ಯೋಗದಲ್ಲಿಯೇ **ಕರ್ಮಯೋಗೋ ವಿಶಿಷ್ಯತೇ** ಕರ್ಮರೂಪವಾದ ಉಪಾಯವು ಎಂದು ಪ್ರಯೋಗಿಸಿರುವರು ಪಾತಂಜಲ ಶಾಸ್ತ್ರಗಳಲ್ಲಿ **ಕರ್ಮಯೋಗ** ಶಬ್ದವನ್ನು ಪ್ರಯೋಗಿಸಲಿಲ್ಲ ಯೋಗಶಬ್ದಮಾತ್ರವಿದೆ. ಆದುದರಿಂದಲೂ ಆ ಶಾಸ್ತ್ರಗಳು ವಿವಕ್ಷಿತಗಳಲ್ಲ (೪) (ಗ್ರಾಹ್ಯಗಳೆಂದು ಹೇಳದಿರುವುದರಿಂದ ಮಾತ್ರ ಸಾಂಖ್ಯಶಾಸ್ತ್ರ ಯೋಗಶಾಸ್ತ್ರಗಳನ್ನು ತೆಗೆದುಕೊಳ್ಳಕೂಡದೆಂದಲ್ಲ. ಮತ್ತೆ) **ಮೋಕ್ಷಧರ್ಮ**ಗಳಲ್ಲಿ ಸಾಂಖ್ಯಶಾಸ್ತ್ರ ಯೋಗಶಾಸ್ತ್ರ ಮೊದಲಾದವುಗಳು ವಿರುದ್ಧ ಮತಗಳೆಂದು ಹೇಳಿ ಪಂಚರಾತ್ರಾಗಮವನ್ನು ಸ್ತುತಿಸಿದ್ದರಿಂದ ಸಾಂಖ್ಯಶಾಸ್ತ್ರ ಯೋಗಶಾಸ್ತ್ರಗಳನ್ನು ನಿಂದಾಮಾಡಿದಂತೆಯೇ ಆಯಿತು (೫) (ಹಾಗಾದರೆ ವೇದಾರಣ್ಯಕವನ್ನು ಸ್ತುತಿಸದಿರುವುದರಿಂದ ಅದನ್ನೂ ನಿಂದಿಸಿದಂತೆಯೇ ಆಗುವುದು ಎಂದರೆ—) ವೇದಗಳಿಗೆ ಪಂಚರಾತ್ರಾಗಮದಿಂದ ಐಕ್ಯಾರ್ಥವಿದ್ದುದರಿಂದ (ಪಂಚರಾತ್ರಾಗಮವನ್ನು ಸ್ತುತಿಸುವಾಗ ವೇದಗಳನ್ನೂ ಸ್ತುತಿಸಿದಂತೆಯೇ ಆಗುವುದು ) (**ಜ್ಞಾನಾನ್ಯೇತಾನಿ ಭಿನ್ನಾನಿ** ಬೇರೆ ಬೇರೆ ಅರ್ಥವುಳ್ಳವುಗಳೆಂದು ವೇದಾರಣ್ಯಕಗಳಿಗೆ ಪಂಚರಾತ್ರಾಗಮದಿಂದ ವಿರುದ್ಧಾರ್ಥವನ್ನು ಹೇಳಿದ ಕಾರಣ ವೇದ ಪಂಚರಾತ್ರಾಗಮಗಳು ಏಕಾರ್ಥಕಗಳಾಗುವುದು ಹೇಗೆಂದರೆ—) ಸಾಂಖ್ಯಾದಿ ಶಾಸ್ತ್ರಗಳೇ ಪ್ರಸಕ್ತಗಳಾಗಿರುವುದರಿಂದ ಅವುಗಳಿಂದಲೇ ವೇದ ಪಂಚರಾತ್ರಾಗಮಗಳಿಗೆ ಭೇದವನ್ನು ಹೇಳಿದ್ದು. ಏವಂಚ ವೇದಗಳಿಗೂ ಪಂಚರಾತ್ರಾಗಮಕ್ಕೂ ಭೇದ ಹೇಳಿದ್ದಲ್ಲ ಅವುಗಳು ವಿಷ್ಣುರೂಪ ಒಂದೇ ಅರ್ಥವನ್ನೇ ಹೇಳುವವವುಗಳು (ಸಾಂಖ್ಯಾದಿ ಶಾಸ್ತ್ರಗಳಿಗೂ ವೇದ ಪಂಚರಾತ್ರಗಳಿಗೂ ಐಕಾರ್ಥ್ಯವಿಲ್ಲ )

ವಿ ॥ (೧) **ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ । ಜ್ಞಾನಾನ್ಯೇತಾನಿ ಭಿನ್ನಾನಿ ಉತಾಹೋ ನೇತಿ ಚೋದ್ಯತಾಂ ।** ಎಂದು ಜನಮೇಜಯರಾಜನು ಪ್ರಶ್ನಿಸಿದಾಗ ವೈಶಂಪಾಯನಾಚಾರ್ಯರು **ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ । ಜ್ಞಾನಾನ್ಯೇತಾನಿ ಭಿನ್ನಾನಿ ನಾತ್ರ ಕಾರ್ಯಾ ವಿಚಾರಣಾ ॥ ಸಾಂಖ್ಯಸ್ಯ ವಕ್ತಾ ಕಪಿಲಃ ಪರಮರ್ಷಿಃ ಸ ಉಚ್ಯತೇ । ಹಿರಣ್ಯಗರ್ಭೋ ಯೋಗಸ್ಯ ವಕ್ತಾ ಚೈವ ಚತುರ್ಮುಖಃ ।** ಇತ್ಯಾದಿಗಳಿಂದ ಸಾಂಖ್ಯಾದಿ ಶಾಸ್ತ್ರಗಳು ಪಂಚರಾತ್ರಾಗಮದಿಂದ ವಿರುದ್ಧಾಭಿಪ್ರಾಯವುಳ್ಳವುಗಳೆಂದು ಹೇಳಿ **ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಂ । ಜ್ಞಾನೇಷ್ವೇತೇಷು ರಾಜೇಂದ್ರ ಸರ್ವೇಷ್ವೇತದ್ವಿಶಿಷ್ಯತೇ** ಎಂದು ಪಂಚರಾತ್ರಾಗಮವನ್ನು ಸ್ತುತಿಸಿದ್ದಾರೆ ಪರಸ್ಪರ ವಿರುದ್ಧಾರ್ಥ ಉಳ್ಳವುಗಳಲ್ಲಿ ಒಂದನ್ನು ಸ್ತುತಿಸಿದರೆ ಇತರವಾದುದನ್ನು ನಿಂದಿಸಿದಂತೆಯೇ ಆಗುವುದು (2) **ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ** ಎಂಬ ಪ್ರಶ್ನವಾಕ್ಯದಲ್ಲಿ **ವೇದಾರಣ್ಯಕ** ಪದದಿಂದ **ಪಂಚರಾತ್ರಾಗಮವನ್ನೂ, ಪಂಚರಾತ್ರಸ್ಯ ಕೃತ್ಸ್ನಸ್ಯ** ಎಂಬ ಉತ್ತರವಾಕ್ಯದಲ್ಲಿ **ಪಂಚರಾತ್ರಸ್ಯ** ಎಂಬುದರಿಂದ **ವೇದಾರಣ್ಯಕವನ್ನೂ** ಇಟ್ಟುಕೊಳ್ಳಬೇಕು. ತಥಾಚ ವೇದ ಪಂಚರಾತ್ರಾಗಮಗಳೆರಡೂ ವಿಷ್ಣುಸರ್ವೋತ್ತಮತ್ವಾದಿ ರೂಪವಾದ ಒಂದೇ ಅರ್ಥವನ್ನು ಹೇಳತಕ್ಕವುಗಳು ॥ ೧ ॥

ಪೀ—ಪಂಚರಾತ್ರಾಗಮಕ್ಕೂ ವೇದಗಳಿಗೂ ಐಕಾರ್ಥ್ಯವಿದೆ, ಎಂಬ ವಿಷಯದಲ್ಲಿಯೇ ಇನ್ನೊಂದು ಪ್ರಮಾಣ ಹೇಳುತ್ತಾರೆ—

**ಭಾ ॥ (೧) ತತ್ರೈವ ಚಿತ್ರಶಿಖಂಡಿಶಾಸ್ತ್ರೇ ಪಂಚರಾತ್ರಮೂಲೇ ವೇದೈಕ್ಯೋಕ್ತೇಶ್ಚ ॥ (೨) ಏವಮೇವ ಸರ್ವತ್ರ ಸಾಂಖ್ಯಯೋಗಶಬ್ದ ಉಪಾಯವಾಚಕೋ ವರ್ಣನೀಯಃ ॥ (೩) ಯುಕ್ತೇಶ್ಚ । ಜ್ಞಾನಂ ಹಿ ಜೈವಮುಕ್ತಂ । ಉಪಾಯಶ್ಚ ವಕ್ಷ್ಯತೇ ॥ (೪) ಬುದ್ಧ್ಯತೇಽನಯೇತಿ ಬುದ್ಧಿಃ । ಸಾಂಖ್ಯವಿಷಯೇ ಯಯಾ ವಾಚಾ ಬುದ್ಧ್ಯತೇ ಸಾ ವಾಗಭಿಹಿತೇತ್ಯರ್ಥಃ ॥ ೨ ॥ ॥ ೩೯,೪೦ ॥**

ಅ ॥ (೧) ಮೋಕ್ಷಧರ್ಮದಲ್ಲಿಯೇ ಚಿತ್ರಶಿಖಂಡಿ ಶಾಸ್ತ್ರಕ್ಕೆ (ಅಂದರೆ **ಯೇ ಹಿ ತೇ ಯತಯಃ ಖ್ಯಾತಾಃ ಸಪ್ತ ಚಿತ್ರಶಿಖಂಡಿನಃ । ತೈರೇಕಮತಿಭಿರ್ಭೂತ್ವಾ ಯತ್ಪ್ರೋಕ್ತಂ ಶಾಸ್ತ್ರಮುತ್ತಮಂ । ವೇದೈಶ್ಚತುರ್ಭಿಃ ಸಮಿತಂ ಕೃತಂ ಮೇರೌ ಮಹಾಗಿರೌ ॥** ಇತ್ಯಾದಿ ಪ್ರಮಾಣಗಳಿಂದ **ಸಪ್ತರ್ಷಯೋ ಮರೀಚ್ಯತ್ರಿಮುಖಾಶ್ಚಿತ್ರಶಿಖಂಡಿನಃ** ಎನಿಸಿದ ಮರೀಚಿ ಮೊದಲಾದ ಏಳು ಋಷಿಗಳು ಒಂದೇ ಬುದ್ಧಿಯುಳ್ಳವರಾಗಿ ಮಹಾಮೇರುಪರ್ವತವಲ್ಲಿ ಮಾಡಿದ ಶಾಸ್ತ್ರವು ನಾಲ್ಕು ವೇದಗಳಿಗೆ ಸಮಾನವಾದುದು. ಆದುದರಿಂದಲೇ ಅತ್ಯುತ್ತಮವಾದುದು ಪಂಚರಾತ್ರವೇ ಮೂಲವಾಗಿ ಉಳ್ಳದ್ದು. ಇಂತಹ ಚಿತ್ರಶಿಖಂಡಿಶಾಸ್ತ್ರಕ್ಕೆ) ನಾಲ್ಕು ವೇದಗಳಿಂದ ಸಮಾನವಾದ ಅರ್ಥವಿದ್ದಪ್ರಯುಕ್ತ ವೇದಗಳಿಂದ ಐಕ್ಯವನ್ನು ಹೇಳಿರುತ್ತಾರೆ (ಆಗ ಅದಕ್ಕೂ ಮೂಲಭೂತವಾದ ಪಂಚರಾತ್ರಾಗಮಕ್ಕೆ ವೇದೈಕ್ಯವು ಸುತರಾಂ ಸಿದ್ಧಿಸುತ್ತದೆ.) (ಚಿತ್ರಶಿಖಂಡಿಶಾಸ್ತ್ರವು ಪಂಚರಾತ್ರಾಗಮ ಮೂಲಕವೆಂಬುದು ವೈಖಾನಸಸಂಹಿತೆಯ ಉಪಕ್ರಮದಲ್ಲಿಯೇ ಸ್ಪಷ್ಟವಾಗಿದೆ ) (೨) ಇದೇಪ್ರಕಾರ **ಜ್ಞಾನಯೋಗೇನ ಸಾಂಖ್ಯಾನಾಂ, ಸಾಂಖ್ಯಯೋಗೌ ಪೃಥಗ್ಬಾಲಾಃ** ಇತ್ಯಾದಿಗಳಲ್ಲಿ ಗೀತೆಯಲ್ಲಿ ಎಲ್ಲಾ ಕಡೆಗಳಲ್ಲಿಯೂ ಸಾಂಖ್ಯಯೋಗ ಶಬ್ದಗಳು ಜ್ಞಾನ, ಉಪಾಯಗಳೆಂಬ ಅರ್ಥವುಳ್ಳವುಗಳು, ಎಂದು ಹೇಳಬೇಕು (೩) ವಿಶೇಷಯುಕ್ತಿ ಇದ್ದಪ್ರಯುಕ್ತವೂ **ಏಷಾ ತೇಽಭಿಹಿತಾ ಸಾಂಖ್ಯೇ** ಎಂಬಲ್ಲಿ ಸಾಂಖ್ಯಯೋಗ ಶಬ್ದಗಳು ಜ್ಞಾನ ಉಪಾಯ

ಗಳೆಂಬ ಅರ್ಥಗಳನ್ನೇ ಹೇಳುತ್ತವೆ. (ಹೇಗೆಂದರೆ—ಈ ಗೀತೆಯಲ್ಲಿ ಹಿಂದೆ ಹೇಳಿದ ಅರ್ಥ ಮುಂದೆ ಹೇಳುವ ಅರ್ಥ ಇವುಗಳಲ್ಲಿ ಸಾಂಖ್ಯಯೋಗ ಎಂಬ ಶಬ್ದಗಳನ್ನೇ ಪ್ರಯೋಗಿಸಿರುವರು. ಹಿಂದೆ ಹೇಳಿದ ಅರ್ಥವೂ ಮುಂದೆ ಹೇಳುವ ಅರ್ಥವೂ ಜ್ಞಾನ ಉಪಾಯಗಳೇ. ಆದಕಾರಣ ಸಾಂಖ್ಯಯೋಗ ಶಬ್ದಾರ್ಥ ಗಳು ಜ್ಞಾನ ಉಪಾಯಗಳೆಂದು ಹೇಳುವುದೇ ಯುಕ್ತಗಳು) (ಜೀವವಿಷಯ ಜ್ಞಾನವನ್ನು ಹಿಂದೆ ಹೇಳ ದಿರುವುದರಿಂದ ಜೀವಸಂಬಂಧಿಯಾದ ಜ್ಞಾನವನ್ನು ಹೇಳಿದ್ದಾರೆಂಬುದು ಹೇಗೆ ಎಂದರೆ) ಜ್ಞಾನಕ್ಕೆ ವಿಷಯ ವಾಗಿರುವುದರಿಂದ ಜ್ಞಾನ ಎನಿಸಿಕೊಂಡ ಜೀವಸಂಬಂಧಿಯಾದ ಅನಾರೋಪಿತ (ಯಥಾರ್ಥ) ಸ್ವರೂಪವು ಹಿಂದೆ ಹೇಳಲ್ಪಟ್ಟದೆ (ಯದ್ಯಪಿ ಈಶ್ವರತತ್ವವನ್ನು ಹೇಳಿರುತ್ತಾರೆ ಆದರೂ ಜೀವರು ಅನಾದಿನಿತ್ಯ ರೆಂಬುವಲ್ಲಿ ದೃಷ್ಟಾಂತವಾಗಿ ಹೇಳಿದ್ದು) ಜ್ಞಾನೋಪಾಯವು ಮುಂದೆ ಹೇಳಲ್ಪಡುವುದು (೪) (ಬುದ್ಧಿ ಯೆಂದರೆ ಜ್ಞಾನವು, ಅದನ್ನು ಹುಟ್ಟಿಸುವುದು, ಇಲ್ಲಿ ಜ್ಞಾನವು ಹೇಳಲ್ಪಡಲಿಲ್ಲ ಕೇಳಲ್ಪಡುವುದೂ ಅಲ್ಲ. ಆದಕಾರಣ ಬುದ್ಧಿರಭಿಹಿತಾ=ಬುದ್ಧಿಯು ಹೇಳಲ್ಪಟ್ಟಿತು ಇಮಾಂ ಶೃಣು=ಬುದ್ಧಿಯನ್ನು ಕೇಳು, ಎಂದದ್ದು ಹೇಗೆ? ಎಂದರೆ—) ಬುಧ್ಯತೇ ಅನಯಾ=ಮಾತಿನಿಂದ ತಿಳಿಯಲ್ಪಡುತ್ತದೆ, ಎಂಬ ವ್ಯುತ್ಪತ್ತಿಯಿಂದ ಬುದ್ಧಿಃ=ಮಾತು. ಏವಂಚ ಯಾವ ಮಾತಿನಿಂದ ಜ್ಞಾನರೂಪ ವಿಷಯವು ತಿಳಿಯ ಲ್ಪಡುತ್ತದೋ ಅಂತಹ ಮಾತು ಹೇಳಲ್ಪಟ್ಟಿತು ॥ ೨ ॥ ॥ ೩೯, ೪೦ ॥

ಟೀ—ಸಾಂಖ್ಯ ಯೋಗ ಶಬ್ದಗಳು ಸಾಂಖ್ಯಶಾಸ್ತ್ರ ಯೋಗಶಾಸ್ತ್ರಗಳನ್ನು ಹೇಳುತ್ತವೆ, ಎಂಬ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಪ್ರಮಾಣವನ್ನು ಹೇಳಿ ಸಾಂಖ್ಯಯೋಗ ಶಬ್ದಗಳ ಅರ್ಥ ಹೇಳುತ್ತಾರೆ—

ತಾ ॥ (೧) ಸಮ್ಯಕ್ತತ್ವದೃಶಿಃ ಸಾಂಖ್ಯಂ ಯೋಗಸ್ತತ್ಸಾಧನಂ ಸ್ಮೃತಂ । ಇತಿ ಶಬ್ದನಿರ್ಣ- ಯೇ ॥ (೨) ಬ್ರಹ್ಮತರ್ಕಸ್ತರ್ಕಶಾಸ್ತ್ರಂ ವಿಷ್ಣುನಾ ಯತ್ಸಮೀರಿತಂ । ಅಕ್ಷಪಾದ- ಕಣಾದೌ ಚ ಸಾಂಖ್ಯಯೋಗೌ ಚ ಹೈತುಕಾಃ । ಬೌದ್ಧಪಾಶುಪತಾದ್ಯಾಸ್ತು ಪಾ- ಷಂಡಾ ಇತಿ ಕೀರ್ತಿತಾಃ ॥ (೩) ಮೀಮಾಂಸಾ ತ್ರಿವಿಧಾ ಪ್ರೋಕ್ತಾ ಬ್ರಾಹ್ಮೀ ದೈವೀ ಚ ಕಾರ್ಮಿಕೀ । ಬ್ರಹ್ಮತರ್ಕಂ ಚ ಮೀಮಾಂಸಾಂ ಸೇವೇತ ಜ್ಞಾನಸಿದ್ಧಯೇ । ವೈದಿಕಜ್ಞಾನವೈರೂಪ್ಯಾನ್ನಾನ್ಯತ್ಸೇವೇತ ಪಂಡಿತಃ । ಇತ್ಯನ್ಯಸಾಂಖ್ಯಯೋಗಯೋ- ರ್ನಿಷಿದ್ಧತ್ವಾನ್ನಾರದೀಯೇ ॥ (೪) ಸಾಂಖ್ಯಸ್ಯ ನಿರೀಶ್ವರತ್ವಾದುಕ್ತತ್ವಾಚ್ಚೇಶ್ವರಸ್ಯ । ಸಾಂಖ್ಯೈರ್ಯೋಗೈಶ್ಚ ವಿಹಿತಹಿಂಸಾಯಾ ಅಪ್ಯನರ್ಥಹೇತುತ್ವಾಂಗೀಕಾರಾ(ಕೃತ- ತ್ವಾ)ತ್ । ಅತ್ರ ತು ಯುದ್ಧವಿಧಾನಾಚ್ಚ ಮೋಕ್ಷಾರ್ಥತ್ವೇನೈವ ಕರ್ಮಬಂಧಂ ಪ್ರಹಾಸ್ಯಸೀತಿ । ಪರಮಸಾಂಖ್ಯಯೋಗಯೋಶ್ಚೋಕ್ತಾರ್ಥತ್ವೇನೈವ ನ ವಿರೋಧಃ ॥ ೩೯ ॥

ಅ ॥ (೧) ಚೆನ್ನಾಗಿ ಖ್ಯಾತಿಯು (ಪ್ರಸಿದ್ಧಿಯು) ಸಾಂಖ್ಯಂ=ಜ್ಞಾನವು, ಯುಜ್ಯತೇ ಅನೇನ= ಇದರಿಂದ ಸಂಬಂಧಿಸಲ್ಪಡುತ್ತದೆ ಎಂಬ ವ್ಯುತ್ಪತ್ತಿಯಿಂದ ಯೋಗಃ=ಜ್ಞಾನದ ಉಪಾಯವು, ಚೆನ್ನಾಗಿ ತತ್ವಜ್ಞಾನವು ಸಾಂಖ್ಯವೆನಿಸುತ್ತದೆ ಜ್ಞಾನಕ್ಕೆ ಸಾಧನವಾದುದು ಯೋಗವೆನಿಸುತ್ತದೆ, ಎಂದು ಶಬ್ದ ನಿರ್ಣಯದಲ್ಲಿದೆ. (೨) ಶ್ರೀವಿಷ್ಣುವಿನಿಂದ ಹೇಳಲ್ಪಟ್ಟ ತರ್ಕಶಾಸ್ತ್ರವು ಬ್ರಹ್ಮತರ್ಕವೆನಿಸುತ್ತದೆ ಅಕ್ಷ ಪಾದ ಕಣಾದ ಇವರಿಂದ ಮಾಡಲ್ಪಟ್ಟ ಶಾಸ್ತ್ರಗಳೂ, ಸಾಂಖ್ಯಯೋಗ ಶಾಸ್ತ್ರಗಳೂ ಶುಷ್ಕತರ್ಕವೇ ಪ್ರಧಾನ ವಾಗಿ ಉಳ್ಳವುಗಳು, ಬೌದ್ಧ ಪಾಶುಪತ ಮೊದಲಾದವರು ವೇದಬಾಹ್ಯರು. (೩) ಪರಬ್ರಹ್ಮನನ್ನು ಪ್ರತಿ

ಪಾದಿಸತಕ್ಕುದು ದೇವತೆಗಳನ್ನು ಪ್ರತಿಪಾದಿಸತಕ್ಕುದು, ಕರ್ಮಗಳನ್ನು ಪ್ರತಿಪಾದಿಸತಕ್ಕುದು, ಎಂದು ಮೀಮಾಂಸಾ ಶಾಸ್ತ್ರವು ಮೂರು ವಿಧವಾದುದು. ಜ್ಞಾನವು ಸಿದ್ಧಿಯಾಗುವುದಕ್ಕಾಗಿ ಬ್ರಹ್ಮತರ್ಕವನ್ನು ಮೀಮಾಂಸಾ ಶಾಸ್ತ್ರವನ್ನು ಸೇವಿಸಬೇಕು ವಿಚಾರ (ಮಾಡಬೇಕು.) ಆದಕಾರಣ ಜ್ಞಾನಿಯಾದವನು ಇತರ ಶಾಸ್ತ್ರಗಳು ವೇದದಲ್ಲಿ ಹೇಳಿದ ಜ್ಞಾನಕ್ಕೆ ವಿರೋಧಿಯಾದ ಜ್ಞಾನಕ್ಕೆ ಕಾರಣವಾಗಿರುವುದರಿಂದ ಬೇರೆ ಶಾಸ್ತ್ರವನ್ನು ಸರ್ವಥಾ ಸೇವಿಸಬಾರದು ಹೀಗೆ (ಇಲ್ಲಿ ಹೇಳಿದ ಸಾಂಖ್ಯಯೋಗಗಳನ್ನು **ಬುದ್ಧ್ಯಾಯುಕ್ತಃ** ಎಂದು ಸ್ತುತಿಸಿದುದರಿಂದಲೂ) ಇತರಗಳಾದ ಸಾಂಖ್ಯಯೋಗ ಶಾಸ್ತ್ರಗಳನ್ನು ನಾರದೀಯ ಪುರಾಣದಲ್ಲಿ ನಿಷೇಧಿಸಿದ್ದಾರೆ (ಆದಕಾರಣ ಆ ಪದಗಳಿಂದ ಆ ಶಾಸ್ತ್ರಗಳನ್ನು ಇಟ್ಟುಕೊಳ್ಳಕೂಡದು) (೪) (ಮತ್ತು ಸಾಂಖ್ಯ ಪದದಿಂದ ಪ್ರಸಿದ್ಧವಾದ ಸಾಂಖ್ಯ ಶಾಸ್ತ್ರವನ್ನು ಇಟ್ಟುಕೊಂಡರೆ ಬಾಧಕವದೆ) ಹೇಗೆಂದರೆ **ನ ಜಾಯತೇ ಮ್ರಿಯತೇ** ಇತ್ಯಾದಿಗಳಲ್ಲಿ ಶ್ರೀಹರಿಯನ್ನು ಹೇಳಿದ್ದಾರೆ ಸಾಂಖ್ಯ ಶಾಸ್ತ್ರದಲ್ಲಿ ಈಶ್ವರನೇ ಇಲ್ಲವೆಂದು ಹೇಳುತ್ತದೆ (ಆದಕಾರಣ ಇಲ್ಲಿ ಸಾಂಖ್ಯವೆಂದರೆ-ಶಾಸ್ತ್ರವಿಶೇಷವಲ್ಲ) ಮತ್ತು ಸಾಂಖ್ಯರೂ, ಪತಂಜಲರೂ, ವಿಹಿತವಾದ ಹಿಂಸೆಯೂ ಅನರ್ಥಕ್ಕೆ ಕಾರಣವೆಂದಂಗೀಕರಿಸಿರುತ್ತಾರೆ (ಆದುದರಿಂದಲೂ ಇಲ್ಲಿ ಸಾಂಖ್ಯಯೋಗ ಶಬ್ದಗಳು ಪ್ರಸಿದ್ಧಶಾಸ್ತ್ರಪರಗಳಲ್ಲ) ಇಲ್ಲಿ ಪೂರ್ವೋತ್ತರ ಪ್ರಕರಣಗಳಲ್ಲಿ ಯುದ್ಧವು ಅವಶ್ಯ ಕರ್ತವ್ಯವೆಂದು ಹೇಳಿದ್ದಾರೆ (ಹಾಗಾದರೆ ಸಾಂಖ್ಯಾದಿಗಳು ಹಿಂಸೆಯು ಪಾರತ್ರಿಕ ಅನರ್ಥಕ್ಕೆ ಕಾರಣವೆಂದೇ ಹೇಳುತ್ತಾರೆ ಐಹಿಕ ಅನರ್ಥಕ್ಕೆ ಕಾರಣವೆಂದು ಹೇಳುವುದಿಲ್ಲ ಇಲ್ಲಿ ಐಹಿಕ ರಾಜ್ಯವು ಸಿಗುವುದಕ್ಕಾಗಿಯೇ ಹಿಂಸೆಯನ್ನು ಹೇಳಿದ್ದು ಆದಕಾರಣ ವಿರೋಧವಿಲ್ಲವೆಂದರೆ) ಮೋಕ್ಷವನ್ನು ಹೊಂದುವುದಕ್ಕಾಗಿಯೇ ಸಂಸಾರವನ್ನು ಬಿಡುತ್ತಿ, ಎಂದದ್ದು (ಸಾಂಖ್ಯ ಯೋಗ ಶಬ್ದಗಳಿಗೆ ಯುಕ್ತಿಪೂರ್ವಕವಾಗಿ ಅರ್ಥಾಂತರವನ್ನು ಹೇಳುತ್ತಾರೆ) ಪರಮಸಾಂಖ್ಯ ಯೋಗಗಳು ಪೂರ್ವೋತ್ತರ ಪ್ರಕರಣದಲ್ಲಿ ಹೇಳಿದ ಅರ್ಥವನ್ನು ಹೇಳುವುದರಿಂದ (ಆ ಅರ್ಥವನ್ನು ಇಟ್ಟುಕೊಂಡರೆ) ವಿರೋಧವು ಬರುವುದಿಲ್ಲ. ||೩೯||

**ಗೀ || ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ |**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ || ೪೦ ||**

**ಅ ||** ಇಹ= ಯೋಗ ಎನಿಸಿದ ಅಪರೋಕ್ಷಜ್ಞಾನಕ್ಕೆ ಕಾರಣವಾದ ಫಲೇಚ್ಛೆಯಿಲ್ಲದಿರುವ ಶ್ರೀವಿಷ್ಣುವಿನ ಪೂಜಾರೂಪವಾದ ನಿವೃತ್ತಕರ್ಮ ವಿಷಯದಲ್ಲಿ ಅಭಿಕ್ರಮನಾಶಃ= ಪ್ರಾರಂಭ ಮಾತ್ರ ಮಾಡಿದರೂ ನಿಷ್ಫಲತ್ವವು ನ=ಇಲ್ಲ (ಅಂದರೆ— ನಿವೃತ್ತಧರ್ಮಗಳನ್ನು ಮಾಡಲಿಕ್ಕೆ ಪ್ರಾರಂಭ ಮಾಡಿದರೂ ಅದು ನಿಷ್ಫಲವಾಗುವುದಿಲ್ಲ) ಪ್ರತ್ಯವಾಯಃ= ಪ್ರಾರಂಭ ಮಾತ್ರ ಮಾಡಿ ಪೂರ್ಣವಾಗದೆ ಮಧ್ಯದಲ್ಲಿ ನಿಂತು ಹೋದರೂ ಪ್ರಾರಂಭಿಸಿದವನು ಅದಕ್ಕಿಂತ ಬೇರೆ ಧರ್ಮಗಳನ್ನು ಮಾಡದಿದ್ದರೂ, ಪಾಪವೂ ನ ವಿದ್ಯತೇ= ಬರುವುದಿಲ್ಲ ಅಸ್ಯ ಧರ್ಮಸ್ಯ= ಶ್ರೀವಿಷ್ಣುಪೂಜಾರೂಪವಾದ ನಿಷ್ಕಾಮಕರ್ಮದ, ಸ್ವಲ್ಪಮಪಿ= ಅತ್ಯಲ್ಪ ಆಚರಣವೂ, (ಅಂದರೆ ಎಳ್ಳಷ್ಟು ನಿಷ್ಕಾಮ ಕರ್ಮವನ್ನು ಮಾಡಿದರೂ) ಮಹತಃ ಭಯಾತ್= ದೊಡ್ಡದಾದ ಸಂಸಾರ ಭಯದಿಂದ, ತ್ರಾಯತೇ= ಕಾಪಾಡುತ್ತದೆ (ಆದಕಾರಣ ಅಲ್ಲಿ ಆಸಕ್ತಿಯನ್ನು ಮಾಡು) ||೪೦||

**ಪೀ**— ಯೋಗವನ್ನತಿಕ್ರಮಿಸಿದರೆ—ನಾಶವೂ ಪ್ರತ್ಯವಾಯವೂ ಇಲ್ಲ, ಎಂಬ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಪೂರ್ವಾರ್ಧಕ್ಕೆ ಸ್ಮೃತಿಪ್ರಮಾಣ ಹೇಳಿ ಅರ್ಥ ಹೇಳುತ್ತಾರೆ—

**ತಾ || (೧) ಪ್ರಾರಂಭಮಾತ್ರಮಚ್ಛ್ವಾವಾ ವಿಷ್ಣುಧರ್ಮೋ ನ ನಿಷ್ಫಲಾ | ನ ಚಾನ್ಯಧರ್ಮಾಕರಣಾದ್ದೋಷವಾನ್ವಿಷ್ಣುಧರ್ಮಕೃತ್ | ಇತ್ಯಾಗ್ನೇಯೇ || (೨) ಸ್ತೋಚಿತೇನೈವ**

**ಧರ್ಮೇಣ ವಿಷ್ಣುಪೂಜಾಮೃತೇ ಕ್ವಚಿತ್ । ನಾಪ್ರವೃತ್ತಿಃ ಪ್ರವೃತ್ತಿರ್ವಾ ಯತ್ರ ಧರ್ಮಃ ಸವೈಷ್ಣವಃ ॥ (೩) ಏನಂ ಧರ್ಮಂ ಚ(ತು) ದೇವಾದ್ಯಾ ವರ್ತಂತೇ ಸಾತ್ವಿಕಾ ಜನಾಃ । ಏಷ ಕಾರ್ತಯುಗೋ ಧರ್ಮಃ ಪಾಂಚರಾತ್ರಶ್ಚ ವೈದಿಕಃ ॥ (೪) ತತ್ಪ್ರೀತ್ಯರ್ಥಂ ವಿನಾಽನ್ಯಸ್ಮೈ ನೋದಬಿಂದುಂ ನ ತಂಡುಲಂ । ದದ್ಯಾನ್ನಿರಾಶೀಶ್ಚ(ಚ) ಸದಾ ಭವೇದ್ಭಕ್ತಶ್ಚ ಕೇಶವೇ ॥ (೫) ನೈತತ್ಸಮೋಽಧಿಕೇ ವಾಪಿ ಕುರ್ಯಾಚ್ಛಂಕಾಮಪಿ ಕ್ವಚಿತ್ । ಜಾನೀಯಾತ್ತದಧೀನಂ ಚ ಸರ್ವಂ ತತ್ತತ್ತ್ವವಿತ್ಸದಾ ॥ (೬) ಯಥಾಕ್ರಮಂ ತು ದೇವಾನಾಂ ತಾರತಮ್ಯವಿದೇವ ಚ । ಏಷ ಭಾಗವತೋ ಮುಖ್ಯಃ ॥ (೭) ತ್ರೇತಾದಿಷು ವಿಶೇಷತಃ । ಏಷ ಧರ್ಮೋಽತಿಫಲದೋ ವಿಶೇಷೇಣ ಪುನಃ ಕಲೌ । ಏವಂ ಭಾಗವತೋ ಯಸ್ತು ಸ ಏವ ಹಿ ವಿಮುಚ್ಯತೇ ॥ ೧ ॥**

ಅ ॥ (೧) ವೈಷ್ಣವಧರ್ಮ ವಿಷಯದಲ್ಲಿ ಕೇವಲ ಪ್ರಾರಂಭವಾಗಲೀ, ಕೇವಲ ಇಚ್ಛೆಯಾಗಲೀ, ನಿಷ್ಫಲವಾಗುವುದಿಲ್ಲ. (ಅಂದರೆ ವೈಷ್ಣವ ಧರ್ಮವನ್ನು ಪ್ರಾರಂಭ ಮಾಡಿದರೂ, ಮಾಡುತ್ತೇನೆಂದು ಇಚ್ಛಿಸಿದರೂ ಪ್ರತಿಬಂಧಕ ಬಂದರೂ ಸರ್ವಥಾ ಫಲವಿಲ್ಲವೆಂದಾಗುವುದಿಲ್ಲ) ವೈಷ್ಣವ ಧರ್ಮಗಳನ್ನು ಮಾಡುವವನು ಬೇರೆ ಧರ್ಮಗಳನ್ನು ಮಾಡದಿರೋಣದರಿಂದ ವಿಧ್ಯತಿಕ್ರಮ ರೂಪವಾದ ದೋಷವುಳ್ಳವನಾಗುವುದಿಲ್ಲ, ಎಂದು ಆಗ್ನೇಯ ಪುರಾಣದಲ್ಲಿ ಹೇಳಿದೆ (೨) (ಆ ವಿಷ್ಣು ಧರ್ಮವನ್ನೇ ಸ್ಮೃತಿಯಿಂದ ವಿವರಿಸುತ್ತಾರೆ) ತಮ್ಮ ವರ್ಣಾಶ್ರಮಗಳಿಗೆ ವಿಹಿತವಾದ ಧರ್ಮದಿಂದಲೇ ಶ್ರೀವಿಷ್ಣುವಿನ ಪೂಜೆ ಮಾಡಬೇಕೆಂದು ಎಲ್ಲಿಯೂ ಯಾವಾಗಲೂ ವಿಹಿತವಾದ ಕರ್ಮದಲ್ಲಿಯೂ ಶ್ರೀವಿಷ್ಣುವಿನ ಪೂಜೆಯೆಂದನುಸಂಧಾನ ಮಾಡದೆ ಪ್ರವೃತ್ತಿಮಾಡುವುದಿಲ್ಲ ಹಾಗೆಯೇ ಶ್ರೀವಿಷ್ಣುವಿನ ಪೂಜೆ ಮಾಡಬೇಕೆಂದು ಹೊರತು ನಿಷಿದ್ಧವಾದ ಬ್ರಹ್ಮಹತ್ಯಾದಿಗಳಲ್ಲಿ ಅಥವಾ ಇತರ ದೇವತಾ ಪೂಜಾದಿಗಳಲ್ಲಿ ವಿಷ್ಣುಪೂಜೆಯೆಂದನುಸಂಧಾನಮಾಡಿಕೊಳ್ಳದೆ ನಿಷಿದ್ಧಪರಿತ್ಯಾಗವೂ ಮಾಡುವುದಿಲ್ಲ, ಎಂಬುವುದು ವೈಷ್ಣವ ಧರ್ಮವು. (೩) (ಅಂತಹ ಧರ್ಮದಲ್ಲಿ ಅಧಿಕಾರಿ ಕಾಲಪ್ರಮಾಣಗಳನ್ನು ಹೇಳುತ್ತಾರೆ) ಈ ಧರ್ಮವನ್ನು ದೇವತೆಗಳೇ ಮೊದಲಾದ ಸಾತ್ವಿಕ ಜನರು ಅನುಸರಿಸುತ್ತಾರೆ. ಇದು ಕೃತಯುಗದ ಧರ್ಮವು ಪಂಚರಾತ್ರಾಗಮದಲ್ಲಿ ಹೇಳಿದ್ದು ವೇದೋಕ್ತವಾದುದು (೪) ಶ್ರೀಹರಿಯ ಪ್ರೀತಿಹೊರತು ಬೇರೆ ಉದ್ದೇಶದಿಂದ ಇತರರಿಗೆ ನೀರಿನ ಕಣವನ್ನಾಗಲೀ ಅಕ್ಕಿಯನ್ನಾಗಲೀ ಕೊಡಕೂಡದು ಫಲೇಚ್ಛೆಯನ್ನು ಬಿಟ್ಟು ಸದಾ ಶ್ರೀಹರಿಯಲ್ಲಿಯೇ ಭಕ್ತಿಮಾಡಿಕೊಂಡಿರಬೇಕು (೫) (ಶ್ರೀಹರಿಗೆ ಸಮಾನಿಕನು ಇದ್ದಾನೆ, ಉತ್ತಮನಿದ್ದಾನೆಂಬ ವಿಷಯದಲ್ಲಿ ಎಲ್ಲಿಯೂ ಸಂದೇಹವನ್ನು ಮಾಡಕೂಡದು ಎಲ್ಲವೂ ಭಗವಂತನ ಅಧೀನವೆಂದೇ ತಿಳಿಯಬೇಕು ಸದಾ ಶ್ರೀಹರಿಯ ತತ್ವವನ್ನು ತಿಳಿಯಬೇಕು (೬) ಶಾಸ್ತ್ರದಲ್ಲಿ ಹೇಳಿದ ಕ್ರಮವನ್ನನುಸರಿಸಿ ದೇವತೆಗಳ ತಾರತಮ್ಯವನ್ನು ತಿಳಿದವನೇ ಆಗಬೇಕು, ಇದು ಮುಖ್ಯವಾದ ಭಾಗವತ ಧರ್ಮವು. (೭) ತ್ರೇತಾಯುಗದಲ್ಲಿ ಕೃತಯುಗಕ್ಕಿಂತಲೂ ವಿಶೇಷವಾಗಿ ಹೆಚ್ಚು ಫಲವನ್ನು ಕೊಡುತ್ತದೆ ಅದಕ್ಕಿಂತಲೂ ವಿಶೇಷವಾಗಿ ಕಲಿಯುಗದಲ್ಲಿ ಹೆಚ್ಚು ಫಲವನ್ನು ಕೊಡುತ್ತದೆ ಹೀಗೆ ಯಾವಾತನು ಭಗವಂತನಿಗೆ ವಿಶೇಷವಾಗಿ ಭಕ್ತನಾಗುತ್ತಾನೋ, ಅವನೇ ಮುಕ್ತನಾಗುತ್ತಾರೆ ॥ ೧ ॥

ಪೀ--ತ್ರೈವಿದ್ಯನಿಗೂ ಮೋಕ್ಷವು ಸಿಗುವುದರಿಂದ ಭಗವದ್ಭಕ್ತನಿಗೇನೇ ಮೋಕ್ಷವೆಂಬುದು ಹೇಗೆ? ಎಂದರೆ—

**ತಾ ॥ (೧) ತ್ರೈವಿದ್ಯಸ್ತ್ವಪರೋ ಧರ್ಮೋ ನಾನಾದೈವತಪೂಜನಂ । ತತ್ರಾಪಿ ವಿಷ್ಣುರ್ಜ್ಞಾತವ್ಯಃ ಸರ್ವೇಭ್ಯೋಽಭ್ಯಧಿಕೋ ಗುಣೈಃ ॥ (೨) ಸಮರ್ಪಯತಿ ಯಜ್ಞಾದ್ಯ-**

ಮಂತತಸ್ತ್ವೇವ ವಿಷ್ಣವೇ । ತ್ರೈವಿದ್ಯಧರ್ಮಾ (ರ್ಮಾಃ) ಪುರುಷಃ ಸ್ವರ್ಗಂ (ರ್ಗೇ)
ಭುಕ್ತ್ವಾ ನಿವರ್ತತೇ ॥ (೩) ಪುನಃ ಕುರ್ಯಾತ್ಪುನಸ್ಸ್ವರ್ಗಂ ಯಾತಿ ಯಾವದ್ಧರೇ-
ರ್ವಶೇ । ಸರ್ವಾನ್ದೇವಾನ್ನವಿಜ್ಞಾಯ ತತ್ಕರ್ಮ್ಯೇವ ಸದಾ ಭವೇತ್ ॥ (೪) ಸಮ್ಯ-
ಕ್ತತ್ತ್ವಾಪರಿಜ್ಞಾನಾದನ್ಯಕರ್ಮಕೃತೇರಪಿ । ಸ್ವರ್ಗಾದಿಪ್ರಾರ್ಥನಾಚ್ಚೈವ ರಾಗಾದೇ-
ಶ್ಚಾಪರಿಕ್ಷಯಾತ್ । ಸದಾ ವಿಷ್ಣೋರಸ್ಮರಣಾತ್ತ್ರೈವಿದ್ಯೋ ನಾಪ್ನುಯಾತ್ಪರಂ ॥
(೫) ಕ್ರಮೇಣ ಮುಚ್ಯತೇ ವಿಷ್ಣೌ ಕರ್ಮಾಣ್ಯಂತೇ ಸಮರ್ಪಯನ್ । ಯದಿ ಸ-
ರ್ವಾಣಿ ಕರ್ಮಾಣಿ ನಿಯಮಾಜ್ಜನ್ಮಭಿಃ ಶುಭೈಃ ॥ (೬) ಪರಂ ವಿಷ್ಣುಂ ನ
ಯೋ ವೇತ್ತಿ ಕುರ್ವಾಣೋಽಪಿ ತ್ರಯೀಕ್ರಿಯಾಃ । ನಾಸೌ ತ್ರೈವಿದ್ಯ ಇತ್ಯು-
ಕ್ತೋ ವೇದವಾದೀ ಸ ಉಚ್ಯತೇ ॥ (೭) ವಾದೋ ವಿವಾದಃ ಸಂಪ್ರೋಕ್ತೋ
ವಾದೋ ವಚನಮೇವ ಚ । ವೇದೋಕ್ತೇ ವಿಷ್ಣುಮಾಹಾತ್ಮ್ಯೇ ವಿವಾದಾತ್ಪತನಾ-
ದಪಿ । ಅಥವಾ ನಿರರ್ಥಕಾತ್ಪಾಠಾದ್ವೇದವಾದೀ ಸ ಉಚ್ಯತೇ ॥ (೮) ವೇದವಾದ-
ರತೋ ನ ಸ್ಯಾನ್ನ ಪಾಷಂಡೀ ನ ಹೈತುಕೀ । ತೇಭ್ಯೋ ಯಾತಿ ತಮೋ ಘೋರ-
ಮಂಧಂ ಯಸ್ಮಾನ್ನ ಚೋತ್ಥಿತಿಃ । ಅನಾರಂಭಮನಂತಂ ಚ ನಿತ್ಯದುಃಖಂ ಸುಖೋ-
ಜ್ಝಿತಂ । ವಪ್ರಂ ಯದ್ವೇದಗದಿತಂ ಯತ್ರ ಯಾಂತ್ಯಸುರಾದಯಃ । ಬುದ್ಧಿರ್ನಿರ್ಣೀ
ತತತ್ತ್ವಾನಾಮೇಕಾ ವಿಷ್ಣುಪರಾಯಣಾ । ಬಹುಶಾಖಾ ಹ್ಯನಂತಾಶ್ಚ ಬುದ್ಧಯೋ
ಽವ್ಯವಸಾಯಿನಾಂ । ಇತಿ ಬ್ರಹ್ಮವೈವರ್ತೇ ॥ ೨ ॥ ॥ ೪೦,೪೧ ॥

ಅ ॥ (೧) ಋಗ್ವೇದ ಯಜುರ್ವೇದ ಸಾಮವೇದಗಳಲ್ಲಿ ಆಪಾತತಃ ತೋರುವ ಧರ್ಮವು ಬೇರೊಂದು
ಧರ್ಮವು. (ಮುಖ್ಯಧರ್ಮವಲ್ಲ) ಅನೇಕ ದೇವತೆಗಳನ್ನು ಪೂಜಿಸುವುದು. ಅದರಲ್ಲಿಯೂ ಎಲ್ಲರಿಗಿಂ
ತಲೂ ಶ್ರೀಹರಿಯು ಹೆಚ್ಚು ಗುಣಗಳುಳ್ಳವನೆಂದು ತಿಳಿಯಬೇಕು. (೨) ಮೂರು ವೇದಗಳಲ್ಲಿ ಆಪಾತತಃ
ತೋರುವ ಧರ್ಮಗಳನ್ನು ಮಾಡುವ ಪುರುಷನು ಯಾಗ ಮೊದಲಾದುದನ್ನು ಮಾಡಿ ಕೊನೆಗೆ ಶ್ರೀಕೃಷ್ಣಾ
ರ್ಪಣಮಸ್ತು ಎಂದು ಹೇಳಿ ವಿಷ್ಣುವಿಗೇನೇ ಸಮರ್ಪಿಸುತ್ತಾನೆ ಸ್ವರ್ಗದಲ್ಲಿ ಸುಖವನ್ನನುಭವಿಸಿ ಪುಣ್ಯವು
ಕ್ಷೀಣವಾದಾಗ ಸ್ವರ್ಗದಿಂದ ಹಿಂತಿರಳುತ್ತಾನೆ (೩) ಪುನಃ ಕರ್ಮವನ್ನು ಮಾಡುತ್ತಾನೆ ಎಲ್ಲಾ ದೇವ
ತೆಗಳು ಶ್ರೀಹರಿಯ ಅಧೀನದಲ್ಲಿದ್ದಾರೆಂದು ತಿಳಿಯುವ ಪರ್ಯಂತ ಸ್ವರ್ಗಕ್ಕೆ ಹೋಗುತ್ತಾನೆ ಅಷ್ಟರ
ವರೆಗೆ ಯಾವಾಗಲೂ ಅಂತಹ ಕರ್ಮವುಳ್ಳವನೇ ಆಗುತ್ತಾನೆ (೪) (ತ್ರೈವಿದ್ಯನಿಗೂ ಭಗವಜ್ಜ್ಞಾನಾದಿ
ಗಳು ಇದ್ದಪ್ರಯುಕ್ತ ಅದೇ ಮೋಕ್ಷಕ್ಕೆ ಕಾರಣವಾಗಿರುವುದರಿಂದ ಸ್ವರ್ಗವನ್ನು ಭೋಗಿಸಿ ಹಿಂತಿರಳುತ್ತಾನೆ,
ಎಂಬುದು ಹೇಗೆ ಕೂಡುತ್ತದೆ ಎಂದರೆ—) ಚೆನ್ನಾಗಿ ತತ್ವಜ್ಞಾನವಿಲ್ಲದಿರುವುದರಿಂದಲೂ, ಬೇರೆಯವರ
ಉದ್ದೇಶದಿಂದ ಕರ್ಮಗಳನ್ನು ಮಾಡುವುದರಿಂದಲೂ, ಸ್ವರ್ಗಾದಿಗಳು ಸಿಗಬೇಕೆಂದು ಪ್ರಾರ್ಥಿಸಿದುದ
ರಿಂದಲೂ, ವಸ್ತುಗಳಲ್ಲಿ ರಾಗಾದಿಗಳು ಕಡಿಮೆಯಾಗದಿರುವುದರಿಂದಲೂ, ಸರ್ವದಾ ಶ್ರೀವಿಷ್ಣುವಿನ ಸ್ಮರ
ಣೆಯಿಲ್ಲದಿರುವುದರಿಂದಲೂ ತ್ರೈವಿದ್ಯನು ಸರ್ವೋತ್ತಮನಾದ ಶ್ರೀಹರಿಯನ್ನು ಹೊಂದಲಾರನು. (೫)
ಅಂತ್ಯದಲ್ಲಿ ಕರ್ಮಗಳನ್ನು ವಿಷ್ಣುವಿನಲ್ಲಿ ಸಮರ್ಪಿಸುವ ತ್ರೈವಿದ್ಯಪುರುಷನು ನಿಯಮವಾಗಿ ಪ್ರತ್ಯೇಕವಾಗಿ
ಎಲ್ಲಾ ಕರ್ಮಗಳನ್ನು ಶುಭಗಳಾದ ಅನೇಕ ಜನ್ಮಗಳಿಂದ ಮಾಡಿ ಶ್ರೀವಿಷ್ಣುವಿನಲ್ಲಿ ಪಿಸರ್ಮಸುತ್ತಾನೋ,
ಅಂತಹನು ಕ್ರಮದಿಂದ ಮುಕ್ತನಾಗುತ್ತಾನೆ (೬) ಮೂರು ವೇದಗಳಲ್ಲಿ ಹೇಳಿದ ಕರ್ಮಗಳನ್ನು ಮಾಡಿ
ದರೂ ಯಾವನು ಶ್ರೀವಿಷ್ಣುವನ್ನು ಸರ್ವೋತ್ತಮನೆಂದು ತಿಳಿಯುವುದಿಲ್ಲವೋ, ಇವನು ತ್ರೈವಿದ್ಯನೆನಿಸು

ವುದಿಲ್ಲ. ಅವನು ವೇದವಾದೀ ಎನಿಸುತ್ತಾನೆ (೭) ಹೇಗೆಂದರೆ ವಾದವೆಂದರೆ ವಿವಾದವು, ಮತ್ತು ವಚನವು ವೇದಗಳಲ್ಲಿ ಹೇಳಿದ ವಿಷ್ಣುಸರ್ವೋತ್ತಮತ್ವಾದಿರೂಪವಾದ ವಿಷ್ಣುಮಹಿಮೆಯಲ್ಲಿ ವಿವಾದಪೂರ್ವಕವಾಗಿ ಪಠನ ಮಾಡುವುದರಿಂದಲೂ, ನಿರರ್ಥಕವಾಗಿ(ಅಂದರೆ ಅರ್ಥವನ್ನು ತಿಳಿಯದೆ) ಪಠನಮಾಡುವುದರಿಂದಲೂ ವೇದವಾದೀ ಎನಿಸುತ್ತಾನೆ. (೮) (ವೇದವಾದಿತ್ವವು ಇಂತಹುದೇ ಎಂದಾಗಲಿ ಆದರೂ ಅದರಿಂದಲೇ ಮೋಕ್ಷಾದಿಗಳು ಸಿದ್ಧಿಸುವುದರಿಂದ ಭಗವದ್ಭಕ್ತನಿಗೇನೇ ಮೋಕ್ಷವೆಂದುದು ಹೇಗೆ? ಎಂದರೆ—) ವೇದ ವಾದದಲ್ಲಿ ಆಸಕ್ತನೂ ಪಾಷಂಡಿಯೂ (ಬೌದ್ಧ ಪಾಶುಪತಾದಿಗಳಂತೆಯೂ) ಅಕ್ಷಪಾದಾದಿಗಳಂತೆಯೂ ಆಗಬಾರದು (ಏವಂಚ ಪಾಷಂಡಾದಿಗಳಂತೆಯೇ ವೇದವಾದಿಯೂ ನಿಷಿದ್ಧನಾದ ಪ್ರಯುಕ್ತ ವೇದವಾದಿತ್ವವು ಮೋಕ್ಷಕ್ಕೆ ಸಾಧನವಲ್ಲ ) ವಿಷ್ಣುಸರ್ವೋತ್ತಮತ್ವಾದಿಗಳಲ್ಲಿ ಸಂಶಯ, ಪಾಷಂಡವಾದ, ಹೇತುವಾದಗಳಿಂದ, ಸರ್ವಥಾ ಹಿಂತಿರಳದಿರುವುದರಿಂದ ಭಯಂಕರವಾದ ಅಂಧಂತಮಸ್ಸನ್ನು ಹೊಂದುತ್ತಾನೆ. (೯) (ಏಳುಕೋಟಿಯೋಜನ ವಿಸ್ತೀರ್ಣವಾದ ತಮೋಲೋಕವು ಪ್ರಾಕೃತವಾದುದರಿಂದ ಉತ್ಪತ್ತಿ ವಿನಾಶಗಳಿದ್ದ ಕಾರಣ ಉತ್ಪತ್ತಿವಿನಾಶಗಳು ಇಲ್ಲವೆಂದುದು ಹೇಗೆ? ಎಂದರೆ—) ಲಿಂಗಶರೀರ ಭಂಗವಾಗಿ ಅಂಧಂತಮಸ್ಸನ್ನು ಹೊಂದಿದಮೇಲೆ ಆಗತಕ್ಕ ದುಃಖಾನುಭವಕ್ಕೆ ಮಧ್ಯದಲ್ಲಿ ವಿಚ್ಛೇದವಿಲ್ಲದಿರುವುದರಿಂದ ತಮಸ್ಸನ್ನು ಹೊಂದಿದವನು ಪುನಃ ಹುಟ್ಟುವುದಿಲ್ಲ. ಹೀಗೆ ತಮಸ್ಸಿನಲ್ಲಿ ಆಗತಕ್ಕ ದುಃಖಾನುಭವಕ್ಕೆ ಆದಿಯೂ ಇಲ್ಲ, ಅಂತವೂ ಇಲ್ಲ ನಿತ್ಯದಲ್ಲಿಯೂ ದುಃಖವೇ ಇರುವುದರಿಂದ ದುಃಖಾನುಭವಕ್ಕೂ ನಾಶವಿಲ್ಲ. ಸುಖಲೇಶವೂ ಇಲ್ಲ ಅಂತಹ ಅಂಧಂತಮಸ್ಸು ತನ್ನಲ್ಲಿಗೆ ಯಾರು ಬರುತ್ತಾರೋ, ಅಂತಹವರನ್ನು ಹಿಂತಿರಳದಂತೆ ಮಾಡುತ್ತದೆ, ಅಥವಾ ಯಾವಾಗಲೂ ಸಂಸಾರಕ್ಕೆ ಹಿಂತಿರಳದಂತೆ ಆವರಿಸಿಕೊಂಡು ಇರುತ್ತದೆ, ಅಥವಾ ಆನಂದವನ್ನು ಸಿಗದಂತೆ ಮಾಡುತ್ತದೆ ಅದುಕಾರಣ ಯಾವ ತಮಸ್ಸು ಪಪ್ರಂ ಅನಂತಂ ಇತ್ಯಾದಿಪ್ರಕಾರ ವೇದಗಳಲ್ಲಿ ಹೇಳಲ್ಪಟ್ಟದೋ, ಇಂತಹ ಯಾವ ಲೋಕಕ್ಕೆ ಅಸುರಾದಿಗಳು ಹೋಗುತ್ತಾರೋ, ಅಂತಹ ಅಂಧಂತಮಸ್ಸಿಗೆ ಹೋಗುತ್ತಾರೆ (೧೦) (ವೈಷ್ಣವಧರ್ಮಕ್ಕೆ ಇಂತಹ ಮಹಿಮೆಯಿದ್ದರೆ -ಅದನ್ನು ಕೆಲವರು ಮಾತ್ರ ಮಾಡಲಿಕ್ಕೆ ಕಾರಣವೇನು? ಎಲ್ಲರೂ ಏಕೆ ಮಾಡುವುದಿಲ್ಲ? ಎಂದರೆ—) ತತ್ವನಿಶ್ಚಯವನ್ನು ಮಾಡಿಕೊಂಡವರ ಬುದ್ಧಿ ಮಾತ್ರ ವಿಷ್ಣುಸರ್ವೋತ್ತಮತ್ವಾದಿರೂಪವಾದ ಒಂದೇ ಅರ್ಥವನ್ನು ವಿಷಯೀಕರಿಸಿಕೊಳ್ಳುತ್ತದೆ ತತ್ವನಿಶ್ಚಯವಿಲ್ಲದವರ ಬುದ್ಧಿಗಳು ಪರಸ್ಪರ ವಿರುದ್ಧಗಳಾದ ಬಹು ಪಕ್ಷಗಳನ್ನು ಸ್ವೀಕರಿಸತಕ್ಕವುಗಳು ಪ್ರತ್ಯೇಕವಾಗಿ ಅನಂತಗಳೂ ಆಗಿವೆ, ಎಂದು ಬ್ರಹ್ಮವೈವರ್ತದಲ್ಲಿದೆ.

ವಿ ‖ ಕೆಲವರು ಮಾತ್ರ ನಿಶ್ಚಯಿಸಿಕೊಂಡಿರುವುದರಿಂದ ಅಂತಹವರು ಮಾತ್ರ ಐಕಮತ್ಯದಿಂದ ವಿಷ್ಣುವಿನಲ್ಲಿ ಆಸಕ್ತರು ಬಹುಮಂದಿ ನಿರ್ಣಯಮಾಡಿಕೊಳ್ಳದೆ ಬಹುಪಕ್ಷಗಳನ್ನು ಸ್ವೀಕಾರಮಾಡಿಕೊಂಡಿರುವುದರಿಂದ ಪರಸ್ಪರ ವಿರೋಧದಿಂದ ಶ್ರೀವಿಷ್ಣುವಿನಲ್ಲಿ ಆಸಕ್ತರಲ್ಲ ‖ ೨ ‖ ‖ ೪೦, ೪೧ ‖

ಪೀ— ಜ್ಞಾನೋಪಾಯವನ್ನು ವಿಷಯೀಕರಿಸಿಕೊಂಡಿರುವ ವಚನಗಳು ಪರಸ್ಪರ ವಿರುದ್ಧಗಳಾದವುಗಳು ಹೆಚ್ಚು ಇವೆ. ಅದುಕಾರಣ ಒಂದರಲ್ಲಿಯೇ ನಾನು ವಿಶ್ವಾಸವನ್ನು ಹೇಗೆ ಮಾಡಲಿ? ಎಂದರೆ—

**ಗೀ ‖ ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ |**
**ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಂ ‖ ೪೧ ‖**

ಅ ‖ ಕುರುನಂದನ= ಕುರುಕುಲದಲ್ಲಿ ಹುಟ್ಟಿದ ಅರ್ಜುನನೇ, ವ್ಯವಸಾಯಾತ್ಮಿಕಾ= ಪ್ರಮಾಣಗಳಿಂದ ನಿಶ್ಚಯಿಸಲ್ಪಟ್ಟ ಅರ್ಥಗಳ ಯಥಾರ್ಥಜ್ಞಾನವನ್ನು ಹುಟ್ಟಿಸುವ, ಬುದ್ಧಿಃ= ವಾಕ್ಯವು, ಇಹ=

ಪೌರುಷೇಯಗ್ರಂಥಗಳಲ್ಲಿಯೂ, ಅಪೌರುಷೇಯಗಳಾದ ವೇದಗಳಲ್ಲಿಯೂ, ಏಕಾ ಹಿ=ಒಂದೇ ಉಪಾಯವನ್ನು ವಿಷಯೀಕರಿಸಿಕೊಳ್ಳುತ್ತದೆ (ಆ ವಿಷಯದಲ್ಲಿ ಸಂಶಯವಿಲ್ಲ. ಆ ಉಪಾಯವೇ ವೈಷ್ಣವ ಧರ್ಮಗಳನ್ನು ಆಚರಿಸಲಿಕ್ಕೆ ಕಾರಣವು.) ಅವ್ಯವಸಾಯಿನಾಂ=ಯಥಾರ್ಥ ಜ್ಞಾನವಿಲ್ಲದವರ, ಬುದ್ಧಯಃ=ಜ್ಞಾನೋಪಾಯವನ್ನು ತಿಳಿಸುವ ವಾಕ್ಯಗಳು ಬಹುಶಾಖಾಃ=ವಿರುದ್ಧಗಳಾದ ಅನೇಕಾರ್ಥಗಳನ್ನು ತಿಳಿದುಕೊಳ್ಳತಕ್ಕವುಗಳು ಅನಂತಾಶ್ಚ=ಸಂಖ್ಯೆಯಿಲ್ಲದವುಗಳೂ ಆಗಿವೆ

ವಿ || ಯಥಾರ್ಥ ಜ್ಞಾನವಿಲ್ಲದ ದುರ್ವಾದಿಗಳು ಹೇಳುವ ವಾಕ್ಯಗಳು ಅನೇಕವಿದ್ದರೂ ಆ ವಿಷಯದಲ್ಲಿ ಯಾವುದೊಂದು ಪ್ರಮಾಣವೂ ಇಲ್ಲ. ನಾನು ಹೇಳಿದ ವಾಕ್ಯಗಳು ಯಥಾರ್ಥ ಜ್ಞಾನವನ್ನು ಹುಟ್ಟಿಸುತ್ತವೆ ಆದಕಾರಣ ಅವುಗಳಲ್ಲಿ ವಿಶ್ವಾಸವಿಟ್ಟು ಹಾಗೆಯೇ ಆಚರಿಸು || ೪೧ ||

ಪೀ—ವ್ಯವಸಾಯಾತ್ಮಿಕಾ ಎಂಬ ಶ್ಲೋಕದಲ್ಲಿ ಪ್ರತಿಜ್ಞೆ ಮಾಡಿದ ಯೋಗವನ್ನು ಹೇಳುವುದಿಲ್ಲ. ಬುದ್ಧ್ಯಾ ಯುಕ್ತಃ ಇತ್ಯಾದಿಗಳಂತೆಯೇ ಯೋಗವನ್ನು ಸ್ತುತಿಸಿದ್ದೂ ಅಲ್ಲ ಆದಕಾರಣ ವ್ಯವಸಾಯಾತ್ಮಿಕಾ ಎಂಬ ಶ್ಲೋಕವು ಏತಕ್ಕೆ ಎಂದರೆ—

**ಭಾ || (೧) ಯೋಗ ಇಮಾಂ ಬುದ್ಧಿಂ ಶೃಣ್ವಿತ್ಯುಕ್ತಂ | ಬಹ್ವ್ಯೋ ಹಿ ಬುದ್ಧಯೋ ಮತಭೇದಾತ್ | ತತ್ಕಥಮೇಕತ್ರ ನಿಷ್ಠಾಂ ಕರೋಮೀತ್ಯತ ಆಹ | ವ್ಯವಸಾಯಾತ್ಮಿಕೇತಿ || (೨) ಸಮ್ಯಗ್ಯುಕ್ತಿನಿರ್ಣೀತಾನಾಂ ಮತಾನಾಮೈಕ್ಯಮೇವೇತ್ಯರ್ಥಃ || ೪೧ ||**

ಅ || (೧) ಜ್ಞಾನೋಪಾಯ ವಿಷಯಕವಾದ ಮುಂದೆ ಹೇಳುವ ಮಾತನ್ನು ಕೇಳಿ ಅದರಲ್ಲಿ ವಿಶ್ವಾಸವಿಟ್ಟು ಹಾಗೆಯೇ ಆಚರಿಸು, ಎಂದು ಹೇಳಿದೆ. ಜ್ಞಾನೋಪಾಯವನ್ನು ಹೇಳುವ ವಚನಗಳು ಪರಸ್ಪರ ವಿರುದ್ಧಗಳಾಗಿರುತ್ತವೆ ಹೇಗೆಂದರೆ ಒಂದು ಮತವನ್ನು ಅಂಗೀಕರಿಸಿದವರು ಒಂದನ್ನು ಜ್ಞಾನಸಾಧನವೆನ್ನುತ್ತಾರೆ. ಇತರರು ಇನ್ನೊಂದು ಮತವನ್ನು ಆಶ್ರಯಿಸಿ ಆ ಮತವನ್ನು ಖಂಡಿಸಿ ಬೇರೊಂದು ಜ್ಞಾನಸಾಧನವೆನ್ನುತ್ತಾರೆ ಇದರಲ್ಲಿ ಇದೇ ಯಥಾರ್ಥವು, ಅದು ಅಲ್ಲ, ಎಂಬುವಲ್ಲಿ ನಿಯಾಮಕವಿಲ್ಲ ಆದಕಾರಣ ನೀನು ಹೇಳಿದ ಮಾತಿನಲ್ಲಿಯೇ ವಿಶ್ವಾಸವನ್ನು ನಾನು ಹೇಗೆ ಮಾಡಲಿ ಎಂದರೆ ವ್ಯವಸಾಯಾತ್ಮಿಕಾ ಎಂಬ ಶ್ಲೋಕವು ಹೊರಟಿದೆ (೨) (ಸರ್ವರಿಗೂ ತಂತಮ್ಮ ಅರ್ಥದಲ್ಲಿ ಸಂದೇಹವು ಇಲ್ಲದಿರುವುದರಿಂದ ಎಲ್ಲಾ ಮತಗಳೂ ನಿಶ್ಚಯವನ್ನು ಹುಟ್ಟಿಸುವವುಗಳೇ ಆಗಿವೆ ಆದಕಾರಣ ನಿಶ್ಚಯಾತ್ಮಕವಾದುದು ಒಂದು ಎಂಬುದು ಹೇಗೆ ಕೂಡುತ್ತದೆ ಎಂದರೆ ಚೆನ್ನಾಗಿ ಪ್ರಮಾಣ ಸಾಮಾನ್ಯದಿಂದ ನಿಶ್ಚಯಿಸಲ್ಪಟ್ಟ ಮತಗಳಿಗೆ ಐಕ್ಯವೇ

ವಿ || ಪ್ರಮಾಣಗಳಿಂದುಂಟಾದ ನಿರ್ಣಯವೇ ಇಲ್ಲಿ ವ್ಯವಸಾಯ ಶಬ್ದದ ಅರ್ಥವು ಕೇವಲ ನಿಶ್ಚಯವಲ್ಲ ಆದಕಾರಣ ಅವರವರಿಗೆ ನಿಶ್ಚಯವಿದ್ದುದು ಪ್ರಯೋಜಕವಲ್ಲ ಆದಕಾರಣ ಪ್ರಮಾಣಸಿದ್ಧವಾದ ಮತವನ್ನೇ ಇಟ್ಟುಕೊಳ್ಳಬೇಕು ಪ್ರಾಮಾಣಿಕ ಸಿದ್ಧಾಂತದಲ್ಲಿ ಸಂದೇಹಕ್ಕೆ ಅವಕಾಶವೇ ಇಲ್ಲ ಅಪ್ರಾಮಾಣಿಕಗಳಾದ ಅರ್ಥಗಳಲ್ಲಿ ಸಂಶಯವು ಬಂದರೂ ಯಾವುದೊಂದು ಬಾಧಕವೂ ಇಲ್ಲ ಅದು ಕಾರಣ ಯಥಾರ್ಥಜ್ಞಾನವನ್ನು ಹುಟ್ಟಿಸುವ ನನ್ನ ಮಾತಿನಲ್ಲಿ ವಿಶ್ವಾಸವಿಟ್ಟು ಹಾಗೆಯೇ ಆಚರಿಸು. || ೪೧ ||

**ಗೀ || ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ |**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ || ೪೨ ||**

**ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಂ ।**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥ ೪೩ ॥**
**ಭೋಗೈಶ್ವರ್ಯಪ್ರಸಕ್ತಾನಾಂ ತಯಾಽಪಹೃತಚೇತಸಾಂ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥ ೪೪ ॥**

ಅ ॥ ಪಾರ್ಥ=ಅರ್ಜುನನೇ, ವೇದವಾದರತಾಃ=ವೇದಗಳಿಂದ ಆಪಾತತಃಹೇಳಲ್ಪಡುವ ಕರ್ಮಾದಿ ರೂಪಗಳಾದ ಅರ್ಥಗಳಲ್ಲಿಯೇ ಆಸಕ್ತರಾದ, ಅಥವಾ ಅರ್ಥಜ್ಞಾನವಿಲ್ಲದೆ ಕೇವಲ ವೇದಗಳನ್ನು ಪಠಿಸುವ ಅವಿಪಶ್ಚಿತಃ=ವೇದಗಳ ತಾತ್ಪರ್ಯಾರ್ಥವನ್ನು ತಿಳಿಯದಿರುವ ಅನ್ಯತ್ ನಾಸ್ತೀತಿವಾದಿನಃ=ಸ್ವರ್ಗಕ್ಕಿಂತ ಬೇರೆಯಾದ ಮೋಕ್ಷಾದಿ ಫಲಗಳೂ ಬ್ರಹ್ಮಸ್ವರೂಪವೂ ಇಲ್ಲವೆಂದು ಹೇಳುವ, ಕಾಮಾತ್ಮಾನಃ=ಐಹಿಕ ಫಲದಲ್ಲಿ ಆಸಕ್ತವಾದ ಮನಸುಳ್ಳ, ಅಥವಾ ಭೋಗಗಳಲ್ಲಿಯೇ ಮನಸ್ಸನ್ನು ಇಟ್ಟ, ಸ್ವರ್ಗಪರಾಃ= ಸ್ವರ್ಗವೇ ಪರಮ ಪುರುಷಾರ್ಥವೆಂದು ತಿಳಿದಿರುವ ಜನರು, ಜನ್ಮಕರ್ಮಫಲಪ್ರದಾಂ=ಜನ್ಮರೂಪವಾದ ಕರ್ಮ, ಅದರ ಫಲ, ಇವುಗಳನ್ನು ಕೊಡುವ, ಅಥವಾ ಬಹು ಸಂಸಾರ ಫಲವನ್ನು ಕೊಡುವ ಕ್ರಿಯಾ ವಿಶೇಷಬಹುಲಾಂ=ಯಾಗ ಮೊದಲಾದ ಕರ್ಮವಿಶೇಷಗಳನ್ನು ಹೇಳುವ, ಯಾಮಿಮಾಂ ಪುಷ್ಪಿತಾಂ= ಯಾವ ಈ ಪುಷ್ಪಸ್ಥಾನೀಯವಾದ ಸ್ವರ್ಗಮೊದಲಾದ ಫಲಗಳನ್ನು ಹೇಳುವ, ವಾಚಂ=ವೇದವಾಕ್ಯವನ್ನು ಬೋಗೈಶ್ವರ್ಯಗತಿಂ ಪ್ರತಿ=ಭೋಗ ಐಶ್ವರ್ಯಗಳ ಪ್ರಾಪ್ತಿಯನ್ನು ಕುರಿತು ಅಂದರೆ ಭೋಗಗಳೂ ಐಶ್ವರ್ಯಗಳೂ ಇವುಗಳ ಪ್ರಾಪ್ತಿಗಾಗಿಯೇ ವೇದಗಳು ಪ್ರವೃತ್ತಗಳಾಗಿವೆ ಎಂದು ಹೇಳುತ್ತಾರೆ ತಯಾ ವಾಚಾ=ಆ ವೇದವಾಕ್ಯದಿಂದ, ಅಪಹೃತಚೇತಸಾಂ=ಅಪಹರಿಸಲ್ಪಟ್ಟ ಮನಸ್ಸುಳ್ಳ, ಭೋಗೈಶ್ವರ್ಯಪ್ರಸಕ್ತಾನಾಂ=ಭೋಗಗಳೂ ಐಶ್ವರ್ಯಗಳೂ ಇವುಗಳಲ್ಲಿಯೇ ಸಂಬದ್ಧವಾದ ಮನಸ್ಸುಳ್ಳ ಜನರ, ವ್ಯವಸಾಯಾತ್ಮಿಕಾ=ಚೆನ್ನಾಗಿ ಪ್ರಮಾಣಗಳಿಂದ ನಿಶ್ಚಯಿಸಲ್ಪಟ್ಟ ಅರ್ಥಗಳ ನಿಶ್ಚಯರೂಪವಾದ ಬುದ್ಧಿಃ=ಜ್ಞಾನವು, ಸಮಾಧೌ=ಶ್ರೀಹರಿಯಲ್ಲಿ ಮನಸ್ಸನ್ನು ಇಡುವುದಕ್ಕಾಗಿ, ನ ವಿಧೀಯತೇ=ವಿಧಿಸಲ್ಪಡುವುದಿಲ್ಲ.

ವಿ ॥ ಚೆನ್ನಾಗಿ ಅರ್ಥವನ್ನು ನಿಶ್ಚಯಿಸಿಕೊಂಡವರು ಶ್ರೀಹರಿಯಲ್ಲಿ ಮನಸ್ಸನ್ನು ಇಟ್ಟರೆ ಅದು ಮೋಕ್ಷಕ್ಕೆ ಸಾಧನವಾಗುತ್ತದೆ ಇತರರದ್ದು ಆಗಲಾರದು ॥ ೪೨,೪೩,೪೪ ॥

ಪೀ—ಯಾಮಿಯಾಂ ಇತ್ಯಾದಿ ಮೂರು ಶ್ಲೋಕಗಳಿಗೆ ಪ್ರಕೃತವಾದ ಯೋಗವಿಷಯದಲ್ಲಿ ಉಪ ಯೋಗವು ಇಲ್ಲದಿರುವುದರಿಂದ ಸಂಗತಿ ತೋರಿಸುತ್ತಾರೆ—

**ಭಾ ॥ (೧) ಸ್ಮರವೈದಿಕಾನಿ ಮತಾನಿ ಅವ್ಯವಸಾಯಾತ್ಮಕಾನಿ ನ ತು ವೈದಿಕಾನಿ । ಕೇಽಪಿ ಹಿ ಕೇಚಿತ್ಕರ್ಮಾಣಿ ಸ್ವರ್ಗಾದಿಫಲಾನ್ಯೇವಾಹುರಿತ್ಯತ ಆಹ । ಯಾಮಿಮಾಮಿತಿ । ಯಾಮಾಹುಸ್ತಯೇತ್ಯನ್ವಯಃ ॥ (೨) ಮೋಕ್ಷಫಲಮಪೇಕ್ಷ್ಯ ಸ್ವರ್ಗಾದಿಪುಷ್ಪಯು- ಕ್ತಾಂ ವಾಚಂ ಪ್ರವದಂತಿ ॥ (೩) ವೇದವಾದರತಾಃ । ಕರ್ಮಾದಿವಾಚಕವೇದವಾ- ದರತಾಃ । ವೇದೈರ್ಯನ್ಮುಖತ ಉಚ್ಯತೇ ತತ್ರೈವ ರತಾಃ । ನಾನ್ಯದಸ್ತೀತಿ ವಾದಿ- ನಃ ॥ (೪) ಪರೋಕ್ಷವಿಷಯಾ ವೇದಾಃ । ಪರೋಕ್ಷಪ್ರಿಯಾ ಇವ ಹಿ ದೇವಾಃ । ಮಾಂ ವಿಧತ್ತೇಽಭಿಧತ್ತೇ ಮಾಮಿತ್ಯಾದಿಭಿಃ ಪಾರೋಕ್ಷ್ಯೇಣ ಪ್ರಾಯೋ ಭಗವಂತಂ**

**ವದಂತಿ ॥ (೫) ಭೋಗೈಶ್ವರ್ಯಗತಿಂ ಪ್ರತಿ ತತ್ಪ್ರಾಪ್ತಿಂ ಪ್ರತಿ । ತತ್ಪ್ರಾಪ್ತಿಫಲಾ ಏವ ವೇದಾ ಇತಿ ವದಂತೀತ್ಯರ್ಥಃ ॥ (೬) ತೇಷಾಂ ಸಮ್ಯಗ್ಯುಕ್ತಿನಿರ್ಣಯಾತ್ಮಿಕಾ ಬುದ್ಧಿಃ । ಸಮಾಧೌ ಸಮಾಧ್ಯರ್ಥೇ ನ ವಿಧೀಯತೇ । ಸಮ್ಯಙ್ನಿರ್ಣೀತಾರ್ಥಾನಾಂ ಹೀಶ್ವರೇ ಮನಸ್ಸಮಾಧಾನಂ ಸಮ್ಯಗ್ಭವತಿ । ತದ್ಧಿ ಮೋಕ್ಷಸಾಧನಂ ॥ (೭) ಉಕ್ತಂ ಚೈತದನ್ಯತ್ರ । ನ ತಸ್ಯ ತತ್ತ್ವಗ್ರಹಣಾಯ ಸಾಕ್ಷಾದ್ವರೀಯಸೀರಪಿ ವಾಚಸ್ಸಮಾಸನ್ । ಸ್ವಪ್ನೇ ನಿರುಕ್ತ್ಯಾ ಗೃಹಮೇಧಿಸೌಖ್ಯಂ ನ ಯಸ್ಯ ಹೇಯಾನುಮಿತಂ ಸ್ವಯಂ ಸ್ಯಾದಿತಿ ॥ ೪೨, ೪೩, ೪೪ ॥**

**ಅ** ॥ (೧) (ಅವೈದಿಕ ಪ್ರಮಾಣಗಳಿಂದ ತತ್ತ್ವಾರ್ಥನಿಶ್ಚಯವಾಗದಿರುವ) ಮತಗಳು ತತ್ತ್ವನಿಶ್ಚಯವನ್ನು ಹುಟ್ಟಿಸುವುದಿಲ್ಲವೆಂದಾಗಲಿ (ವೈದಿಕ ಪ್ರಮಾಣಗಳಿಂದ ತತ್ತ್ವಾರ್ಥನಿಶ್ಚಯವನ್ನು ಹುಟ್ಟಿಸುವ) ಮತಗಳೂ ಕೂಡ ತತ್ತ್ವನಿಶ್ಚಯವನ್ನುಂಟುಮಾಡುವುದಿಲ್ಲವೆಂಬುದು ಆಗಲಾರವು ಯಥಾರ್ಥಜ್ಞಾನವನ್ನು ಹುಟ್ಟಿಸುವ ವೈದಿಕಮತವನ್ನು ಅವಲಂಬಿಸುವವರೂ ಕೂಡ ಕೆಲವರು, ವೈದಿಕಗಳಾದ ಎಲ್ಲಾ ಕರ್ಮಗಳಿಗೂ ಸ್ವರ್ಗಾದಿಗಳೇ ಫಲಗಳೆನ್ನುತ್ತಾರೆ (ಐಹಿಕ ಫಲಗಳನ್ನು ಅಪೇಕ್ಷಿಸಿ ಮಾಡಿದ ಕರ್ಮಗಳಿಗೇನೇ ಸ್ವರ್ಗಾದಿಫಲಗಳೂ ಶ್ರೀಹರಿಗೆ ಪ್ರೀತಿಕರವಾಗಲಿ, ಎಂಬ ಬುದ್ಧಿಯಿಂದ ಮಾಡಿದ ನಿಷ್ಕಾಮ ಕರ್ಮಗಳಿಂದ ಜ್ಞಾನವು ಉಂಟಾಗುತ್ತದೆ, ಎಂದು ನಿಮ್ಮ ಅಭಿಪ್ರಾಯವು ಹೀಗೆ ಪರಸ್ಪರ ವಿರೋಧವಿದ್ದುದರಿಂದ ಯಥಾರ್ಥನಿಶ್ಚಯವು ಆಗುವುದಿಲ್ಲ ) ಎಂದರೆ—(ಅವರು ವೈದಿಕಾಭಾಸರು ಎಂದು ತೋರಿಸುವುದಕ್ಕಾಗಿ ಅವರ ನಿಂದೆಯನ್ನು) **ಯಾಮಿಮಾಂ** ಇತ್ಯಾದಿಗಳಿಂದ ಹೇಳುತ್ತಾರೆ ಯಾವ ವೇದವಾಕ್ಯವನ್ನು ಹೇಳುತ್ತಾರೋ ಅಂತಹ ವೇದವಾಕ್ಯದಿಂದ ಎಂದು ಅನ್ವಯವು (೨) (ವಾಕ್ಯವು ಪುಷ್ಪಿತವಾಗುವುದು ಹೇಗೆಂದರೆ) ಮೋಕ್ಷರೂಪಫಲವನ್ನು ಪೇಕ್ಷಿಸಿ ಸ್ವರ್ಗಮೊದಲಾದ ಪುಷ್ಪಗಳಿಂದ ಕೂಡಿದ ಮಾತನ್ನು ಹೇಳುತ್ತಾರೆ (ಅಂದರೆ ಫಲಕ್ಕಿಂತ ಪುಷ್ಪವು ಅತ್ಯಲ್ಪವು ಹೀಗೆಯೇ ಮೋಕ್ಷಕ್ಕಿಂತ ಸ್ವರ್ಗವು ಅತ್ಯಲ್ಪವು ಆದಕಾರಣ ಪುಷ್ಪದ ಉಪಮಾನವು (೩) (**ವೇದವಾದರತಾಃ** ಎಂಬುದು ನಿಂದೆಯನ್ನು ಹೇಳುತ್ತದೆಂಬುದು ಹೇಗೆಂದರೆ —) ಆಪಾತತಃ ಕರ್ಮಾದಿಗಳನ್ನು ಹೇಳತಕ್ಕ ವೇದಗಳಲ್ಲಿ ಆಸಕ್ತರು ಅಂದರೆ ವೇದಗಳಿಂದ ವಿಚಾರಮಾಡದೆ ಆಪಾತತಃ ಯಾವ ಅರ್ಥವು ತೋರುತ್ತದೋ, ಅವುಗಳಲ್ಲಿಯೇ ಆಸಕ್ತರಾದವರು ಆಪಾತತಃ ತೋರತಕ್ಕ ಅರ್ಥಕ್ಕಿಂತ ಬೇರೆ ಅರ್ಥವೇ ಇಲ್ಲವೆಂದು ಹೇಳುವವರು. (೪) (ಆಪಾತತಃ ತೋರುವ ಅರ್ಥಕ್ಕಿಂತ ಬೇರೆ ಅರ್ಥವು ಯಾವುದು? ಯಾವ ಪ್ರಮಾಣದಿಂದ ಅದನ್ನು ತಿಳಿಯಬೇಕು? ಎಂದರೆ—) ವೇದಗಳು ಅತಿಗೋಪ್ಯವಾದ ಭಗವದ್ರೂಪವಾದ ಅರ್ಥವನ್ನು ಹೇಳುವವುಗಳು ವೇದಗಳಿಗೆ ಅಭಿಮಾನಿಗಳಾದ ದೇವತೆಗಳು ಅತಿಗೋಪ್ಯವಾದ ಭಗವದ್ರೂಪ ಅರ್ಥದಲ್ಲಿ ಪ್ರೀತಿಯುಳ್ಳವರು (ಕರ್ಮಗಳನ್ನೇ ಹೇಳತಕ್ಕ ವೇದಗಳು) ನನಗಾಗಿಯೇ ವಿಧಿಸುತ್ತವೆ (ಇಂದ್ರಾದಿಗಳನ್ನು ಹೇಳತಕ್ಕ ವೇದಗಳು) ನನ್ನನ್ನೇ ಹೇಳುತ್ತವೆ. ಇದುಮೊದಲಾದ ವೇದಗಳಿಂದ ಪರೋಕ್ಷವಾಗಿ ಪ್ರಾಯಶಃ ಶ್ರೀಹರಿಯನ್ನೇ ವೇದಗಳು ಹೇಳುತ್ತವೆ (೫) ಭೋಗೈಶ್ವರ್ಯಗತಿಂ ಪ್ರತಿ=ಭೋಗ ಐಶ್ವರ್ಯಗಳ ಪ್ರಾಪ್ತಿಗಾಗಿ ವೇದಗಳು ಭೋಗೈಶ್ವರ್ಯಗಳ ಪ್ರಾಪ್ತಿಯೇ ಫಲವಾಗಿ ಉಳ್ಳವುಗಳು ಎಂದು ಹೇಳುತ್ತಾರೆ ಎಂದರ್ಥವು (೬) ಭೋಗೈಶ್ವರ್ಯಗಳಲ್ಲಿಯೇ ಆಸಕ್ತರಾದವರಿಗೆ ಚೆನ್ನಾಗಿ ಯುಕ್ತಿನಿರ್ಣಯರೂಪವಾದ ಮನೋವೃತ್ತಿಯು ಶ್ರೀಹರಿಯಲ್ಲಿ ಮನಸ್ಸನ್ನು ಇಡುವುದಕ್ಕಾಗಿ ಆಗುವುದಿಲ್ಲ (ಅಂದರೆ ಅವರ ಮನೋವ್ಯಾಪಾರವು ಚೆನ್ನಾಗಿ ಯುಕ್ತಿನಿರ್ಣಯರೂಪವಾದುದಾಗುವುದಿಲ್ಲ ) ಆದುದರಿಂದಲೇ ಶ್ರೀಹರಿಯಲ್ಲಿ ಮನಸ್ಸನ್ನು ಚೆನ್ನಾಗಿ ಇಡಲಿಕ್ಕಾಗುವುದಿಲ್ಲ ಶ್ರೀಹರಿಯಲ್ಲಿ ಮನಸ್ಸನ್ನು ಇಡುವುದೇ ಮೋಕ್ಷಕ್ಕೆ ಸಾಧನವು (೭) (ಇದು ಅನುಭವಸಿದ್ಧ ಮಾತ್ರ

ಫಲ್ಲ. ಮತ್ತೆ ಪುರಾಣಗಳಲ್ಲಿಯೂ ಹೇಳಿದೆ, ಎನ್ನುತ್ತಾರೆ-) ಶ್ರೀಹರಿಯಲ್ಲಿಯೇ ಮನಸ್ಸನ್ನು ಇಡುವುದರಿಂದ ಮೋಕ್ಷವು ಲಭಿಸುತ್ತದೆಂಬುದು ಭಾಗವತದಲ್ಲಿ ಹೇಳಲ್ಪಟ್ಟಿದೆ ಯಾವ ಶ್ರೀಹರಿಗೆ ಗೃಹಸ್ಥಾಶ್ರಮಿಗಳ ಸೌಖ್ಯವು ಬಿಡಲರ್ಹವಾಗಿ ತತ್‌ಕ್ಷಣದಲ್ಲಿ ವಿನಾಶವನ್ನು ಹೊಂದತಕ್ಕುದಾದುದರಿಂದ ಸ್ವಪ್ನದಲ್ಲಿ ತೋರುವ ಅರ್ಥದಂತೆ ತಾನಾಗಿ ಅನುಮಿತವಾಗುವುದಿಲ್ಲವೋ, ಆದಕಾರಣ ಅಪೌರುಷೇಯಗಳಾಗಿರುವ ಪ್ರಯುಕ್ತ ನಿರ್ದೋಷಗಳಾಗಿರುವುದರಿಂದ ಪ್ರಶಸ್ತಗಳಾದ ವೇದವಚನಗಳೂ ಕೂಡ ಮುಖ್ಯವಾಗಿ ಭಗವತ್ತತ್ವವನ್ನು ತಿಳಿಸಲಿಕ್ಕೆ ಸಮರ್ಥಗಳಾಗುವುದಿಲ್ಲ.

ವಿ || ಇದು ಹೇಯವು (ಬಿಡಲರ್ಹವು), ಇದು ಉಪಾದೇಯವು (ಸ್ವೀಕಾರಕ್ಕೆ ಯೋಗ್ಯವು) ಎಂದು ತಿಳಿದುಕೊಂಡು ಹೇಯವನ್ನು ಬಿಡಬೇಕು .ಉಪಾದೇಯವಾದುದನ್ನು ತೆಗೆದುಕೊಳ್ಳಬೇಕು. ಇದೇ ಚೆನ್ನಾಗಿ ನಿಶ್ಚಿತವಾದ ಅರ್ಥವು. ಅದು ಮೋಕ್ಷಸಾಧನವೆಂಬುದು ವೇದಾದಿಗಳಲ್ಲಿ ಪ್ರಸಿದ್ಧವೇ ಆಗಿದೆ. || ೪೨, ೪೩, ೪೪ ||

ಪೀ—ತತ್ವನಿಶ್ಚಯವಿಲ್ಲದಿರುವ ಬುದ್ಧಿಯೇ ವೈಷ್ಣವ ಧರ್ಮಗಳಲ್ಲವೆಂದಾಗಲಿಕ್ಕೆ ಕಾರಣವೆಂದಾದರೆ—ಅಂತಹ ಬುದ್ಧಿಯನ್ನು ಬಿಡಬೇಕಾಗುವುದು. ಅಂತಹ ಬುದ್ಧಿಗೆ ಕಾರಣವು ಯಾವುದು? ಎಂದು ಪ್ರಶ್ನಿಸುತ್ತಾರೆ—

ತಾ || (೧) ಅವ್ಯವಸಾಯಬುದ್ಧಿಃ ಕೇಷಾಂ | ಯಾಂ ವಾಚಮವಿಪಶ್ಚಿತಃ ಪ್ರವದಂತಿ ತಯಾಽಪಹೃತಚೇತಸಾಂ ಬುದ್ಧಿರ್ವ್ಯವಸಾಯಾತ್ಮಕತ್ವೇನ ಸಮಾಧಾನೇ ನ ವರ್ತತೇ || (೨) ಯಥಾ ವಸ್ತು ತಥಾ ಜ್ಞಾನಂ ತತ್ಸಾಮ್ಯಾತ್ಸಮಮೀರಿತಂ | ವಿಷಮಂ ತ್ವನ್ಯಥಾಜ್ಞಾನಂ ಸಮಾಧಾನಂ ಸಮುಸ್ಥಿತಿಃ | ನ ತದ್ಭವತ್ಯಸದ್ವಾಕ್ಯೈರ್ವಿಷಮೀಕೃತಚೇತಸಾಂ || (೩) ಸ್ವರ್ಗಾದಿಪುಷ್ಪವಾದ್ಯೇವ ವಚನಂ ಯದಚೇತಸಾಂ | ನ ಮನ್ಯಂತೇ ಫಲಂ ಮೋಕ್ಷಂ ವಿಷ್ಣುಸಾಮೀಪ್ಯರೂಪಕಂ | ಫಲದಂ ಚ ನ ಮನ್ಯಂತೇ ತಂ ವಿಷ್ಣುಂ ಜಗತಃ ಪತಿಂ || (೪) ಭೋಗೈಶ್ವರ್ಯಾನು(ದಿ)ಗತ್ಯರ್ಥಂ ಕ್ರಿಯಾಬಾಹುಲ್ಯಸಂತತಾಂ | ಬಹುಸಂಸಾರಫಲದಾಮಂತೇ ತಮಸಿ ಪಾತಿನೀಂ || ಯಾಂ ವದಂತಿ ದುರಾತ್ಮಾನೋ ವೇದವಾಕ್ಯವಿವಾದಿನಃ | ತಯಾ ಸಮ್ಮೋಹಿತಧಿಯಾಂ ಕಥಂ ತತ್ತ್ವಜ್ಞತಾ ಭವೇತ್ || ಇತಿ ಚ || ೧ ||

ಅ || (೧) (ತತ್ವನಿಶ್ಚಯವಿಲ್ಲದ ಬುದ್ಧಿಯು ಯಾರಿಗೆ ಉಂಟಾಗುತ್ತದೆ? ಎಂದರೆ—) ಯಾವ ವೇದವಚನವನ್ನು ಅಸಜ್ಜನರು ಹೇಳುತ್ತಾರೋ, ಅಂತಹ ಕೆಟ್ಟ ಮಾತಿನಿಂದ ಪ್ರಶಸ್ತವಲ್ಲದ ಮನಸ್ಸುಳ್ಳವರ ಬುದ್ಧಿಯು ತತ್ವನಿಶ್ಚಯವನ್ನು ಮಾಡಿಕೊಡುವುದರಲ್ಲಿ ದೃಢವಾಗುವುದಿಲ್ಲ (೨) (ಸ್ಮೃತಿಪ್ರಮಾಣದಿಂದ ಶ್ಲೋಕಗಳ ಅರ್ಥ ಹೇಳುತ್ತಾರೆ—) ವಸ್ತುವು ಹೇಗೆ ಇದೆಯೋ ಹಾಗೆ ತಿಳಿದುಕೊಳ್ಳುವುದು, ವಸ್ತುವು ಇದ್ದಂತೆ ತಿಳಿದುಕೊಳ್ಳುವುದರಿಂದ ಸಮವೆನಿಸುತ್ತದೆ ವಸ್ತುವು ಇದ್ದುದಕ್ಕಿಂತ ವಿಪರೀತವಾಗಿ ತಿಳಿದುಕೊಳ್ಳುವುದು ವಿಷಮವೆನಿಸುತ್ತದೆ (ಅಂದರೆ ಭ್ರಾಂತಿಯಾಗುತ್ತದೆ) ವಸ್ತುವು ಹೇಗೆ ಇದೆಯೋ ಹಾಗೆಯೇ ದೃಢವಾಗಿ ತಿಳಿದುಕೊಳ್ಳುವುದು ಸಮಾಧಾನವೆನಿಸುತ್ತದೆ. ಅಂತಹ ಸಮಾಧಾನವು ದುರ್ವಾಕ್ಯಗಳಿಂದ ಭೋಗ ಐಶ್ವರ್ಯಗಳಲ್ಲಿಯೇ ಆಸಕ್ತರಾದವರಿಗೆ ಬರುವುದಿಲ್ಲ (೩) (ಅಸಜ್ಜನರ ಮಾತು ವೈಷಮ್ಯಕ್ಕೆ ಕಾರಣವು ಹೇಗೆ ಆಗುವುದೆಂದರೆ—) ಭೋಗ ಐಶ್ವರ್ಯಗಳಲ್ಲಿ ಸಂಬದ್ಧವಾದ ಮನಸ್ಸುಳ್ಳವ

ಮಾತು ಮೋಕ್ಷಕ್ಕಿಂತ ಅಲ್ಪವಾಗಿರುವುದರಿಂದ ಪುಷ್ಪಸಮಾನ ಸ್ವರ್ಗಾದಿಗಳನ್ನು ಮಹಾಪ್ರಯೋಜನ ಗಳೆಂದು ಹೇಳುತ್ತದೆ ಶ್ರೀ ವಿಷ್ಣುವಿನ ಸಾಮಿಪ್ಯರೂಪವಾದ ಮೋಕ್ಷವನ್ನು ಪ್ರಯೋಜನವನ್ನಾಗಿ ಅಂತ ಹವರು ಆ ವಚನದಿಂದ ತಿಳಿಯುವುದಿಲ್ಲ ಮತ್ತು ಸರ್ವಜಗತ್ತಿಗೂ ಸ್ವಾಮಿಯಾದ ಶ್ರೀ ವಿಷ್ಣುವು ಫಲ ವನ್ನು ಕೊಡತಕ್ಕವನೆಂದೂ ತಿಳಿಯುವುದಿಲ್ಲ (೪) ಭೋಗಗಳೂ ಐಶ್ವರ್ಯಗಳೂ ಸಿಗುವುದಕ್ಕಾಗಿ ಬಹು ಕ್ರಿಯೆಗಳನ್ನು ಹೇಳುವ ಮತ್ತು ಬಹು ಸಂಸಾರಫಲಗಳನ್ನು ಕೊಡತಕ್ಕ(ಅಂದರೆ ಜನ್ಮಾದಿರೂಪವಾದ ಕರ್ಮ ಫಲವನ್ನು ಹೇಳುವ ಅಥವಾ ಉತ್ಪತ್ತಿ) ಅದಕ್ಕೆ ಸಾಧನವಾದ ಬಾಹ್ಯಕರ್ಮ, ಅಂತರಕರ್ಮ (ಸರ್ವವೂ ಮಿಥ್ಯೆಯೆಂದು ತಿಳಿದುಕೊಳ್ಳುವಿಕೆ) ಅವುಗಳ ಫಲಭೂತವಾದ ದುಃಖಾದಿಗಳೂ, ಇವುಗಳನ್ನು ಕೊಡತಕ್ಕ ಕೊನೆಗೆ ಅಂಧಂತಮಸ್ಸನ್ನು ಹೊಂದಿಸಿಕೊಡುವುದೂ ಎಂದು ಯಾವ ವಾಕ್ಯವನ್ನು ವೇದವಾಕ್ಯಗಳಲ್ಲಿ ವಿವಾದವುಳ್ಳ ಅಥವಾ ವೇದವಾಕ್ಯಗಳಿಂದ ಕೂಡಿ ವಿವಾದ ಮಾಡುವ ದುರ್ಜನರು ಹೇಳುತ್ತಾರೋ, ಅಂತಹ ವಾಕ್ಯದಿಂದ ಅಜ್ಞಾನವನ್ನು ಹೊಂದಿದವರಿಗೆ ತತ್ವಜ್ಞಾನವು ಹೇಗೆ ಬಂದೀತು? ಎಂದು ಹೇಳಿದೆ ॥ ೧ ॥

ಪೀ – ನಾನ್ಯದಸ್ತಿ ಇದುಮೊದಲಾದ ಅರ್ಥದಲ್ಲಿ ವೇದಪ್ರಮಾಣ ಹೇಳುತ್ತಾರೆ—

ಶಾ ॥ (೧) ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ। ನಾಕಸ್ಯ ಪೃಷ್ಠೇ(ತೇ) ಸುಕೃತೇ ತೇಽನುಭೂತ್ವಾ ಇಮಂ ಲೋಕಂ ಹೀನತರಂ ವಾ ವಿಶಂತಿ ॥ ಇತಿ ಚಾಥರ್ವಣೀಶ್ರುತಿಃ ॥ (೨) ವೇದವಾದರತೋ ನಸ್ಯಾನ್ನ ಪಾಷಂಡೀ ನ ಹೈತುಕೀ । ಇತಿ ಹಿ (ಚ) ಭಾಗವತೇ ॥ (೩) ಯೇ ನ ಜಾನಂತಿ ತಂ ವಿಷ್ಣುಂ ಯಾಥಾತಥ್ಯೇನ ಸಂಶಯಾತ್ (ಯಾಥಾರ್ಥ್ಯೇನ ಸಸಂಶಯಾಂ) । ಜಿಜ್ಞಾಸವಶ್ಚ ನಿತರಾಂ ಶ್ರದ್ಧಾವಂತಃ ಸುಸಾಧವಃ ॥ ನಿರ್ಣೀತ್ಯಾಶಾಮುಭಾವೇನ ಕೇವಲಂ ಜ್ಞಾನವರ್ಜಿತಾಃ । ತೇ ಯಾಜ್ಞಿಕಾಃ ಸ್ವರ್ಗಭೋಗಕ್ಷಯೇ ಯಾಂತಿ ಮನುಷ್ಯತಾಂ ॥ (೪) ಯೈರ್ನಿಶ್ಚಿತಂ ಪರತ್ವಂ ತು ವಿಷ್ಣೋಃ ಪ್ರಾಯೋ ನ ಯಾತನಾಂ । ಬ್ರಹ್ಮಹತ್ಯಾದಿಭಿರಪಿ ಯಾಂತ್ಯಾಧಿಕ್ಯೇ ಚಿರಂ ನ ತು । ವಿಶೇಷ ಏವ ತೇಷಾಂ ತು ತದನ್ಯೇಷಾಂ ವಿಪರ್ಯಯಃ ॥ (೫) ಯೇ ತು ಭಾಗವತಾಚಾರ್ಯೈಃ ಸಮ್ಯಗ್ಯಜ್ಞಾದಿ ಕುರ್ವತೇ । ಬಹಿರ್ಮುಖಾ ಭಗವತೋ ನಿವೃತ್ತಾಶ್ಚ ವಿಕರ್ಮಣಃ ॥ (೬) ದಕ್ಷಿಣಾತರ್ಪಿತಾನಾಂ ತು ಹ್ಯಾ(ತ ಆ)ಚಾರ್ಯಾಣಾಂ ತು ತೇಜಸಾ । ಯಾಂತಿ ಸ್ವರ್ಗಂ ತತಃ ಕ್ಷಿಪ್ರಂ ತಮೋಽಂಧಂ ಪ್ರಾಪ್ನುವಂತಿ ಚ । ತದನ್ಯೇ ನೈವ ಚ ಸ್ವರ್ಗಂ ಯಾಂತಿ ವಿಷ್ಣುಬಹಿರ್ಮುಖಾಃ ॥ ಇತಿ ನಾರದೀ(ರಾಯಣೀ)ಯೇ ॥ ೨ ॥ ॥ ೪೨, ೪೩, ೪೪ ॥

ಅ ॥ (೧) ಚೆನ್ನಾಗಿ ಮೂಢರಾದವರು, ಯಾಗ ತಟಾಕಾದಿ ನಿರ್ಮಾಣ ಇವುಗಳನ್ನೇ ಶ್ರೇಷ್ಠಗಳನ್ನಾಗಿ ತಿಳಿಯುವವರಾಗಿ ಭಗವಜ್ಞಾನಾದಿಗಳು ಶ್ರೇಯಸ್ಸಾಧನವೆಂದು ತಿಳಿಯುವುದಿಲ್ಲ ಅವರು ಸ್ವರ್ಗದಲ್ಲಿ ಪುಣ್ಯದಿಂದ ಸಿಗುವ ಭೋಗಗಳನ್ನು ಅನುಭವಿಸಿ ಈ ಲೋಕವನ್ನೂ ಇದಕ್ಕಿಂತಲೂ ಹೀನವಾದ ಲೋಕವನ್ನೂ ಹೊಂದುತ್ತಾರೆ, ಎಂದು ಅಥರ್ವಣಶ್ರುತಿಯು (೨) (ವೇದವಾದರತತ್ವವು ನಿಷಿದ್ಧವಾಗಿದೆ. ಎಂಬಲ್ಲಿ ಪ್ರಮಾಣಾಂತರವನ್ನು ಹೇಳುತ್ತಾರೆ) ವೇದೋಕ್ತವಾದ ವಿಷ್ಣುಮಾಹಾತ್ಮ್ಯೆಯನ್ನು ವಿವಾದ ಪೂರ್ವಕವಾಗಿ ಪರನ ಮಾಡಿದ್ದರಿಂದ ವೇದವಾದದಲ್ಲಿ ಆಸಕ್ತನೂ ಪಾಷಂಡಿಯೂ ಹೈತುಕಿಯೂ ಆಗ ಬಾರದು, ಎಂದು ಭಾಗವತದಲ್ಲಿದೆ (೩) (ಅದನ್ನು ಸ್ಮೃತಿಯಿಂದ ವಿವರಿಸುತ್ತಾರೆ) ಯಾರು ವಿಷ್ಣು

ವನ್ನು ಯಥಾರ್ಥವಾಗಿ ತಿಳಿಯುವುದಿಲ್ಲವೋ, ಮತ್ತೆ ರಾಜನಂತೆ ಉತ್ತಮನನ್ನಾಗಿ ತಿಳಿಯುತ್ತಾರೆ ನಿರವಧಿಕ ಸರ್ವೋತ್ತಮನೆಂಬುವವಿಷಯದಲ್ಲಿ ಸಂಶಯಪಡುತ್ತಾರೋ, ಚೆನ್ನಾಗಿ ತಿಳಿಯಬೇಕೆಂದು ಇಚ್ಛಿಸುವವರು, ಶ್ರದ್ಧೆಯುಳ್ಳವರು, ಅತಿ ಸಾಧುಗಳು, ನಿರ್ಣಯ ಮಾಡತಕ್ಕವರು ಇಲ್ಲದಿರುವುದರಿಂದ ಜ್ಞಾನವಿಲ್ಲದವರು. ಅಂತಹ ಯಾಜ್ಞಿಕರು ಸ್ವರ್ಗದಲ್ಲಿ ಭೋಗಗಳನ್ನು ಅನುಭವಿಸಿ ಮುಗಿದ ಮೇಲೆ ಮನುಷ್ಯರಾಗಿ ಭೂಲೋಕದಲ್ಲಿ ಹುಟ್ಟುತ್ತಾರೆ. (೪) ಯಾರು ವಿಷ್ಣುವು ಸರ್ವೋತ್ತಮನೆಂದು ನಿಶ್ಚಯಿಸಿರುವರೋ, ಅವರು ಪ್ರಾಯಶಃ ನರಕಯಾತನೆಯನ್ನು ಬ್ರಹ್ಮಹತ್ಯಾದಿಗಳಿಂದಲೂ ಹೊಂದುವುದಿಲ್ಲ. ಬ್ರಹ್ಮಹತ್ಯಾದಿಗಳಿಗಿಂತಲೂ ಹೆಚ್ಚು ಪಾಪವನ್ನು ಮಾಡಿದರೂ ಅಲ್ಪಕಾಲದಲ್ಲಿಯೇ ನರಕಯಾತನೆಯನ್ನು ಅನುಭವಿಸುತ್ತಾರೆ. ಬಹುಕಾಲದಲ್ಲಿ ಅನುಭವಿಸುವುದಿಲ್ಲ. ಹೀಗೆ ಯಥಾರ್ಥ ನಿಶ್ಚಯವುಳ್ಳವರಿಗೆ ವಿಶೇಷವಿದೆ (ಯಜ್ಞಾದಿಗಳಿಂದಲೇ ಭಗವದ್ದ್ವೇಷಿಗಳಿಗೂ ಸ್ವರ್ಗವು ಸಿಗುವುದರಿಂದ ಜಿಜ್ಞಾಸಾದಿಗಳು ಏಕೆ? ಎಂದರೆ) ವಿಪರೀತ ಜ್ಞಾನಿಗಳಿಗೆ ಅಶ್ವಮೇಧಾದಿಗಳಿಂದಲೂ ಸ್ವರ್ಗವು ಸಿಗುವುದಿಲ್ಲ. (೫) (ಭಗವದ್ದ್ವೇಷಿಗಳಾದ ದುರ್ಯೋಧನಾದಿಗಳಿಗೇನೇ ಸ್ವರ್ಗಾದಿಗಳು ಲಭಿಸಿರುವುದರಿಂದ ಸ್ವರ್ಗವು ಇಲ್ಲವೆಂಬುದು ಹೇಗೆ? ಎಂದರೆ) ಯಾರು ಭಗವದ್ಭಕ್ತರಾದ ಆಚಾರ್ಯರಿಂದ ಚೆನ್ನಾಗಿ ಯಾಗ ಮೊದಲಾದವುಗಳನ್ನು ಮಾಡಿಸುತ್ತಾರೋ, ಅಂತಹ ಶ್ರೀಹರಿಗೆ ವಿರುದ್ಧರಾದವರು ಬ್ರಹ್ಮಹತ್ಯಾದಿ ವಿಕರ್ಮಗಳಿಂದ ನಿವೃತ್ತರಾದವರು ದಕ್ಷಿಣೆಯಿಂದಲೇ ತೃಪ್ತಿಯನ್ನು ಹೊಂದಿದ ಋತ್ವಿಕ್‌ಗಳಾದ ಆಚಾರ್ಯರ ತೇಜಸ್ಸಿನಿಂದಲೇ ಸ್ವರ್ಗವನ್ನು ಹೊಂದುತ್ತಾರೆ ಆ ಮೇಲೆ ಶೀಘ್ರದಲ್ಲಿ ಅಂಧಂತಮಸ್ಸನ್ನು ಹೊಂದುತ್ತಾರೆ ಅವರು ವಿನಹ ಬೇರೆಯವರು ಶ್ರೀವಿಷ್ಣುವಿಗೆ ವಿರುದ್ಧರಾದವರು ಸ್ವರ್ಗವನ್ನುಹೊಂದುವುದೇ ಇಲ್ಲ ಎಂದು ನಾರದೀಯದಲ್ಲಿದೆ. ॥ ೪೨ ೪೩ ೪೪ ॥

ಪೀ—**ಯೋಗೇ ತ್ವಿಮಾಂ ಶೃಣು** ಎಂಬುವುದರಿಂದ ಯೋಗೋಪದೇಶವನ್ನು ಪ್ರತಿಜ್ಞಾ ಮಾಡಿ, ಅದರಲ್ಲಿ ವಿಶ್ವಾಸ ಹುಟ್ಟುವುದಕ್ಕಾಗಿ **ಬುದ್ಧ್ಯಾ ಯುಕ್ತಃ** ಇತ್ಯಾದಿಗಳಿಂದ ಯೋಗವನ್ನು ಸ್ತುತಿಸಿ **ವ್ಯವಸಾಯಾತ್ಮಿಕಾ ಬುದ್ಧಿಃ** ಎಂಬುದರಿಂದ ತನ್ನ ಮಾತಿನಲ್ಲಿ ಆಸಕ್ತಿ ಹುಟ್ಟುವುದಕ್ಕಾಗಿ **ಬಹುಶಾಖಾಃ** ಎಂಬುದರಿಂದ ಅವೈದಿಕಗಳಾದ ಮತಗಳು ಗ್ರಾಹ್ಯಗಳಲ್ಲವೆಂದು ಹೇಳಿ ವೈದಿಕಮತಗಳಲ್ಲಿಯೂ ಆಪಾತತಃ ತೋರುವ ಅರ್ಥಗಳನ್ನು **ಯಾಮಿಮಾಂ** ಇತ್ಯಾದಿ ಮೂರು ಶ್ಲೋಕಗಳಿಂದ ನಿಂದಿಸಿ **ತ್ರೈಗುಣ್ಯವಿಷಯಾಃ** ಇತ್ಯಾದಿಗಳಿಂದ ೬ನೇ ಅಧ್ಯಾಯ ಸಮಾಪ್ತಿ ಪರ್ಯಂತ ಯೋಗ ಎನಿಸಿದ ಉಪಾಯವನ್ನು ಪದೇಶಿಸುತ್ತಾರೆ—

## ಗೀ ॥ ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।
## ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥೪೫॥

**ಅ** ॥ ವೇದಾಃ=ವೇದಗಳು ತ್ರೈಗುಣ್ಯವಿಷಯಾಃ=ಸತ್ವರಜಸ್ತಮೋಗುಣಗಳ ಕಾರ್ಯಗಳಾದ ಸ್ವರ್ಗಾದಿಗಳೇ ವಿಷಯ (ಆಪಾತತಃ ತೋರುವ ಅರ್ಥ) ಗಳಾಗಿ ಉಳ್ಳವುಗಳು (ಅಂದರೆ—ಆಪಾತತಃ ತೋರುವ ಸ್ವರ್ಗಾದಿಗಳೇ ಫಲವಾಗಿವುಳ್ಳ ಕರ್ಮಾದಿಗಳನ್ನು ಹೇಳುತ್ತವೆಂದು (ತೋರುತ್ತವೆ ಆದಕಾರಣ ಅರ್ಜುನ=ಅರ್ಜುನನೇ, ತ್ವಂ=ನೀನು, ನಿಸ್ತ್ರೈಗುಣ್ಯಃ ಭವ=ಅಲ್ಪಫಲವುಳ್ಳ ಸ್ವರ್ಗಾದಿಗಳಿಂದ ಹೊರಟು ಹೋಗು. (ಅಂದರೆ—ಆಪಾತತಃ ತೋರುವ ಅರ್ಥದಲ್ಲಿ ಭ್ರಾಂತಿಯನ್ನು ಮಾಡಬೇಡ ನಶ್ವರಗಳಾದ ಸ್ವರ್ಗಮೊದಲಾದ ಫಲಗಳನ್ನು ಇಚ್ಛಿಸಬೇಡ) ಅಥವಾ ವೇದಗಳು ತ್ರೈಗುಣ್ಯವಿಷಯಾಃ=ಸತ್ವರಜಸ್ತಮೋ ಗುಣಗಳ ಸಂಬಂಧಿಯಾದ ಸ್ವರ್ಗಮೊದಲಾದ ಅಸ್ಥಿರಫಲವು ಅಥವಾ ಸಂಸಾರಬಂಧನವು, ಇವು

ಗಳೆಂಬ ವಿಷವನ್ನು ಹೋಗಲಾಡಿಸುವವುಗಳು. (ಅಂದರೆ ಮೋಕ್ಷಕ್ಕೆ ಕಾರಣವಾದ ಭಗವತ್ಸ್ವರೂಪವನ್ನು ಹೇಳುವವುಗಳು.) (ಅವುಗಳನ್ನಾಶ್ರಯಿಸಿ) ನಿಸ್ತ್ರೈಗುಣ್ಯಃ ಭವ= ವೇದಗಳಿಗೆ ತಾತ್ಪರ್ಯವಿಷಯವಾದ ಭಗವದ್ರೂಪವಾದ ಅರ್ಥವನ್ನು ತಿಳಿದುಕೊಂಡು ಕ್ಷುದ್ರಫಲಗಳುಳ್ಳ ಸ್ವರ್ಗವೊದಲಾದ ಆಪಾತತಃ ತೋರುವ ಅರ್ಥದಲ್ಲಿ ಭ್ರಾಂತಿಯನ್ನು ಮಾಡಬೇಡ (ಅಂದರೆ ಸ್ವರ್ಗಾದಿಗಳನ್ನು ಇಚ್ಛಿಸಬೇಡ) ನಿರ್ದ್ವಂದ್ವಃ= ದುಃಖಕ್ಕೆ ಸಮವಾದ ಸುಖಾದಿಗಳುಳ್ಳವನು ಅಥವಾ ಸುಖವುಂಟಾದಾಗ ಮೇಲ್ಕೆ ದುಃಖವುಂಟಾದಾಗ ಕೀಳ್ಮೆಗಳಿಲ್ಲದವನು, ಅಥವಾ ಸುಖದುಃಖಗಳನ್ನು ಸಹಿಸಿಕೊಂಡಿರುವವನು, ನಿತ್ಯಸತ್ವಸ್ಥಃ= ನಿತ್ಯದಲ್ಲಿಯೂ ಸಾಧುಗುಣಗಳಿರುವ ಶ್ರೀವಿಷ್ಣುವಿನಲ್ಲಿ ಇರುವವನು (ಅಂದರೆ ಸದಾ ಶ್ರೀವಿಷ್ಣುವಿನ ಸ್ಮರಣೆವುಳ್ಳವನಾಗು) ಆತ್ಮವಾನ್ = ಪರಮಾತ್ಮನು ನನಗೆ ಸ್ವಾಮಿಯೆಂದು ಜ್ಞಾನವುಳ್ಳವನಾಗು ನಿರ್ಯೋಗಕ್ಷೇಮಃ= ಮೊದಲು ಹೊಂದದಿದ್ದ ಫಲಗಳನ್ನು ಸಂಪಾದಿಸುವುದು ಯೋಗವು, ಮೊದಲು ಹೊಂದಿದ್ದ ಪದಾರ್ಥವನ್ನು ರಕ್ಷಿಸಿಕೊಂಡಿರುವುದು ಕ್ಷೇಮವು ಶಾಸ್ತ್ರವಿರುದ್ಧ ವಿಷಯದಲ್ಲಿ ಯೋಗಕ್ಷೇಮಗಳನ್ನು ಬಿಟ್ಟವನಾಗು ಅಥವಾ ಅಂತಹ ಯೋಗಕ್ಷೇಮಗಳ ಇಚ್ಛೆಯಿಲ್ಲದವನಾಗು ॥ ೪೫ ॥

ಭಾ ॥ (೧) ತಾಂ ಯೋಗಬುದ್ಧಿಮಾಹ । ತ್ರೈಗುಣ್ಯವಿಷಯಾ ಇತ್ಯಾದಿನೇತರದಪೋದ್ಯ ॥ (೨) ವೇದಾನಾಂ ಪರೋಕ್ಷಾರ್ಥತ್ವಾತ್ತ್ರಿಗುಣಸಂಬಂಧಿಸ್ವರ್ಗಾದಿಪ್ರತೀತಿತೋಽರ್ಥ ಇವ ಭಾತಿ ॥ (೩) ಪರೋಕ್ಷವಾದೀ ವೇದೋಽಯಮಿತಿ ಹ್ಯುಕ್ತಂ । ಅತಃ ಪ್ರಾತೀತಿಕೇಽರ್ಥೇ ಭ್ರಾಂತಿಂ ಮಾ ಕುರ್ವಿತ್ಯರ್ಥಃ ॥ (೪) ವಾದೋ ವಿಷಯಕತ್ವಂ ಚ ಮುಖತೋ ವಚನಂ ಸ್ಮೃತಮಿತ್ಯಭಿಧಾನಂ । ನ ತು ವೇದಪಕ್ಷೋ ನಿಷಿಧ್ಯತೇ ॥ (೫) ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ । ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥ (೬) ಸರ್ವೇ ವೇದಾ ಯತ್ಪದಮಾಮನಂತಿ । ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಂ । ಆಚಾರಶ್ಚೈವ ಸಾಧೂನಾಮಾತ್ಮನೋ ರುಚಿರೇವ ಚ । ವೇದಪ್ರಣಿಹಿತೋ ಧರ್ಮೋ ಹ್ಯಧರ್ಮಸ್ತದ್ವಿಪರ್ಯಯಃ ॥ ಇತಿ ವೇದಾನಾಂ ಸರ್ವಾತ್ಮನಾ ವಿಷ್ಣುಪರತ್ವೋಕ್ತೇಃ । ತದ್ವಿಹಿತಸ್ಯ ತದ್ವಿರುದ್ಧಸ್ಯ ಚ ಧರ್ಮಾಧರ್ಮತ್ವೋಕ್ತೇಶ್ಚ ॥ ೪೫ ॥

ಅ ॥ (೧) ತ್ರೈಗುಣ್ಯವಿಷಯಾಃ ಎಂದಾರಂಭಿಸಿ ೭ನೇ ಅಧ್ಯಾಯ ಸಮಾಪ್ತಿಪರ್ಯಂತ ತನ್ನ ಮಾತಿನಲ್ಲಿ ವಿಶ್ವಾಸಹುಟ್ಟುವುದಕ್ಕಾಗಿ ಅದಕ್ಕೆ ಪ್ರತಿಬಂಧಕವಾದುದನ್ನು ತಡೆದು ಅಥವಾ ಕೆಲವು ವಾಕ್ಯಗಳಿಂದ ಯೋಗವಿರುದ್ಧವಾದುದನ್ನು ತಿರಸ್ಕರಿಸಿ ಅಥವಾ ಬಹೂನಿ ಮೇ ವ್ಯತೀತಾನಿ ಇತ್ಯಾದಿಗಳಿಂದ ಪ್ರಸಂಗಸಂಗತಿಯಿಂದ ಪ್ರಾಪ್ತವಾದುದನ್ನು ಬಿಟ್ಟು ಹಿಂದೆ ಪ್ರತಿಜ್ಞೆಮಾಡಿದ ಯೋಗಬುದ್ಧಿಯನ್ನು ಹೇಳುತ್ತಾರೆ (೨) (ವೇದಾಸ್ತ್ರೈಗುಣ್ಯವಿಷಯಾಃ ತ್ವಂ ತು ನಿಸ್ತ್ರೈಗುಣ್ಯಃ ಭವ ಎಂಬುದರಿಂದ ವೇದಗಳನ್ನು ಬಿಡಬೇಕೆಂದು ಹೇಳುತ್ತಾರೆ ಎಂದು ಆಪಾತತಃ ತೋರುತ್ತದೆ ಈ ಭ್ರಾಂತಿಯನ್ನು ಹೋಗಲಾಡಿಸುವುದಕ್ಕಾಗಿ ಅವುಗಳ ಅರ್ಥ ಹೇಳುತ್ತಾರೆ) ಋಗಾದಿ ವೇದಗಳು ಪರೋಕ್ಷಾರ್ಥ (ಕಣ್ಣಿಗೆ ಕಾಣದ ವಸ್ತು) ಗಳನ್ನು ಹೇಳುವವುಗಳಾದುದರಿಂದ ಸತ್ವರಜಸ್ತಮೋ ಗುಣಗಳಿಂದುಂಟಾಗುವ ಸ್ವರ್ಗ ಪಶು ಪುತ್ರಾದಿಗಳೂ ಸ್ವರ್ಗಾದಿ ಫಲಗಳಿಗೆ ಸಾಧನವಾದ ಧರ್ಮಾದಿಗಳೂ ಅರ್ಥವೆಂದು ಆಪಾತತಃ ತೋರಿದರೂ ಅವು ಮುಖ್ಯ ವಿಷಯ ಪ್ರಯೋಜನಗಳಲ್ಲ (ಮತ್ತೆ ಶ್ರೀಹರಿಯು ಮುಖ್ಯ ಪ್ರತಿಪಾದ್ಯನು ಮೋಕ್ಷವು ಮಹಾಪ್ರಯೋಜನವು ಎಂದು ಭಾಷ್ಯಕಾರರ ಅಭಿಪ್ರಾಯವೆಂದು ಇವ ಶಬ್ದದಿಂದ ಸೂಚಿತ

ವಾಯಿತು.) (೩) ವೇದಗಳು ಪರೋಕ್ಷಾರ್ಥಗಳನ್ನು ಹೇಳುತ್ತವೆಂಬುದು ಹೇಗೆ ಎಂದರೆ ಈ ವೇದವು ಪರೋಕ್ಷಾರ್ಥವನ್ನು ಹೇಳುತ್ತದೆ, ಎಂದು ಮೊದಲು ಹೇಳಿಯಾಗಿದೆ ಹೀಗೆ ಶ್ರೀಹರಿಯನ್ನು ಮುಖ್ಯವಾಗಿ ಹೇಳುವ ಪ್ರಯುಕ್ತ ಧರ್ಮ ಅಧರ್ಮ ಸ್ವರ್ಗ ನರಕಾದಿಗಳು ವಿಷಯ ಪ್ರಯೋಜನಗಳೆಂಬುದು ಅಮುಖ್ಯವಾಗಿರುವ ಕಾರಣ ಆ ಆಪಾತತಃ ತೋರುವ ಅರ್ಥವೇ ಮುಖ್ಯವೆಂಬ ಭ್ರಾಂತಿಯನ್ನು ಮಾಡಬೇಡ ಎಂದಭಿಪ್ರಾಯವು (೪) (ಆಪಾತತಃಪ್ರತಿಪಾದಿಸುವುದು ಎಂಬ ಅರ್ಥವು ಹೇಗೆ ಸಿಗುತ್ತದೆ ಎಂದರೆ) ವಾದಃ ವಿಷಯಕತ್ವಂ ಎಂಬ ಪದಗಳಿಂದ ಮುಖತಃ ವಚನವೆಂಬ ಅರ್ಥವು ಸಾಮಾನ್ಯತಃ ತೋರುವ ಅರ್ಥವು ಪ್ರತಿಪಾದಿಸಲ್ಪಡುತ್ತದೆ, ಎಂದು ಕೋಶವು (ವೇದವಾದರತಾಃ ಎಂಬುವಲ್ಲಿಯೂ ವಾದಪದದ ಅರ್ಥವನ್ನು ಇದೇ ರೀತಿಯಾಗಿ ಇಟ್ಟುಕೊಳ್ಳಬೇಕು.) (ವೇದವನ್ನೇ ಬಿಡು ಎಂಬ ಅರ್ಥವೇ ಆಗಲಿ ಎಂದರೆ—) ವೇದಗಳ ಪರಮ ಸಿದ್ಧಾಂತಾರ್ಥವು ನಿಷೇಧಿಸಲ್ಪಡುವುದಿಲ್ಲ (ಅಂತೂ ವೇದಗಳ ಆಪಾತಾರ್ಥವನ್ನು ಬಿಡು ಮುಖ್ಯಾರ್ಥವನ್ನು ಬಿಡಬೇಡ ಎಂದರ್ಥವು.) (೫) (ವೇದಾದಿಗಳ ಪರಮಸಿದ್ಧಾಂತಾರ್ಥವು ಯಾವುದೆಂದರೆ) ವೇದ ರಾಮಾಯಣ ಪುರಾಣ ಭಾರತ ಇವುಗಳ ಬುಡದಲ್ಲಿಯೂ ಕೊನೆಯಲ್ಲಿಯೂ ಮಧ್ಯದಲ್ಲಿಯೂ ಎಲ್ಲೆಡೆಯಲ್ಲಿಯೂ ಶ್ರೀವಿಷ್ಣುವೇ ಹೇಳಲ್ಪಡುತ್ತಾನೆ (೬) ಎಲ್ಲಾ ವೇದಗಳೂ ಭಗವತ್ಸ್ವರೂಪವನ್ನೇ ಪರಮ ಮುಖ್ಯವೃತ್ತಿಯಿಂದ ಸಾಧಿಸುತ್ತವೆ) ಕೃಚ್ಛ್ರ ಚಾಂದ್ರಾಯಣ ಮೊದಲಾದ ತಪಸ್ಸುಗಳೂ ಶ್ರೀಹರಿಯನ್ನುದ್ದೇಶಿಸಿ ಹೊರಟವುಗಳೆಂದು ಹೇಳುತ್ತವೆ) (೭) ಎಲ್ಲಾ ವೇದಗಳು ಧರ್ಮಗಳಿಗೆ ಮೂಲವು ವೇದಜ್ಞರಾದ ಮನ್ವಾದಿಗಳು ಮಾಡಿದ ಸ್ಮೃತಿಗಳು (ಶೀಲ) ಮನಸ್ಸಿನ ವ್ಯಾಪಾರವಿಶೇಷವೂ, ಸಜ್ಜನರ ಆಚಾರವೂ (ಧರ್ಮಬುದ್ಧಿಯಿಂದ ಸತ್ಕರ್ಮಗಳ ಅನುಷ್ಠಾನವು ಆಸೂರ್ಯದರ್ಶನಾತ್ತಿಷ್ಠೇತ್ತತಸ್ತೂಪವಿಶೇತ ವಾ ಸೂರ್ಯನು ಕಾಣುವ ವರೇಗೆ ನಿಂತುಕೊಂಡು ಜಪಿಸಬೇಕು ಆ ಮೇಲೆ ಕೂತುಕೊಂಡು ಜಪಿಸುವುದು ಎಂದು ವಿಕಲ್ಪವಾಗಿ ಹೇಳುತ್ತದೆ ಅಥವಾ ಏಕಕಾಲದಲ್ಲಿ ಮಾಡಲಿಕ್ಕೆ ಶಕ್ಯಗಳಾದ ಧರ್ಮಗಳ ಮಧ್ಯದಲ್ಲಿ ಯಾವುದರಲ್ಲಿ ತನ್ನ ಮನಸ್ಸಿಗೆ ಅಭಿರುಚಿ ಇದೆಯೋ ಅದನ್ನೇ ಮಾಡಬೇಕು, ಎಂದು ಮನಸ್ಸಿನ ಅಭಿರುಚಿಯು ಆತ್ಮರುಚಿಯು ವೇದದಲ್ಲಿ ವಿಹಿತವಾದುದು ಧರ್ಮವು ಅದಕ್ಕೆ ವಿರುದ್ಧವಾದುದು ಅಧರ್ಮವು, ಇದುಮೊದಲಾದ ಪ್ರಮಾಣಗಳಿಂದ ವೇದಗಳು ಸರ್ವಪ್ರಕಾರದಿಂದ ವಿಷ್ಣುವನ್ನೇ ಹೇಳುತ್ತವೆಂದು ಹೇಳಿದೆ ವೇದದಲ್ಲಿ ಮಾಡಬೇಕೆಂದು ಹೇಳಿದ್ದು ಧರ್ಮವು, ವೇದವಿರುದ್ಧವಾದುದು ಅಧರ್ಮವು, ಎಂದುಕ್ತವಾಯಿತು

ವಿ || ಧರ್ಮ ಶಬ್ದದಿಂದ ನಿವೃತ್ತ ಧರ್ಮವನ್ನು ಇಟ್ಟುಕೊಳ್ಳಬೇಕು ಫಲೇಚ್ಛೆಯಿಲ್ಲದೆ ಶ್ರೀಹರಿಯನ್ನು ಸಂತೋಷಗೊಳಿಸುವುದಕ್ಕಾಗಿ ಮಾಡತಕ್ಕ ಧರ್ಮವು ನಿವೃತ್ತಧರ್ಮವೆನಿಸುತ್ತದೆ ಪ್ರವೃತ್ತ ಧರ್ಮವು (ಕಾಮ್ಯ ಕರ್ಮವು) ಯೋಗಕ್ಕೆ ಅನುಕೂಲವಲ್ಲ ಮತ್ತೆ ಪ್ರತಿಬಂಧಕವಾಗಿದೆ ಆದಕಾರಣ ಅದು ವೇದದ ಪರಮ ಸಿದ್ಧಾಂತವಲ್ಲ. || ೪೫ ||

ಪೀ—ವೇದಗಳು ತ್ರೈಗುಣ್ಯವಿಷಯಕಗಳಾಗಿರುವುದರಿಂದ ಅವುಗಳನ್ನು ಬಿಟ್ಟು ನಿಸ್ತ್ರೈಗುಣ್ಯನಾಗು ಎಂಬ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುತ್ತಾರೆ—

**ತಾ || (೧) ತ್ರೈಗುಣ್ಯಾಖ್ಯಂ ವಿಷಂ ಯಾಪಯಂತಿ ಅಪಗಮಯಂ(ಮಂ)ತೀತಿ ತ್ರೈಗುಣ್ಯ-ವಿಷಯಾಃ । ಆಶ್ರಿತ್ಯ ವೇದಾಂ ಪುಮಾಂಸ್ತ್ರೈಗುಣ್ಯವಿಷಹಾರಿಣಃ । ನಿಸ್ತ್ರೈಗು-ಣ್ಯೋ ಭವೇನ್ನಿತ್ಯಂ ವಾಸುದೇವೈಕಸಂಶ್ರಯಃ । ಇತಿ (ಚ) ॥ (೨) ಸತ್ತ್ವಃ ಸಾಧು ಗುಣಾದ್ವಿಷ್ಣುರಾತ್ಮಾ ಸಂತತಿಹೇತುತಃ । ಇತಿ ಚ ॥ (೩) ಸಂತತವಿಷ್ಣುಸ್ಮರಣಂ ವಿ-**

**(ಶಾನ್ನಿ)ತ್ಯಸತ್ತ್ವಸ್ಥತ್ವಂ । ಪರಮಾತ್ಮಾ ಮಮ ಸ್ವಾಮೀತಿ ಜ್ಞಾನಮಾತ್ಮವತ್ತ್ವಂ ತೇನೈಕ್ಯಜ್ಞಾನಂ ನಿವಾರಯತಿ । ವಿರುದ್ಧಯೋಗಕ್ಷೇಮೇಚ್ಛಾವರ್ಜಿತಃ । ಅನ್ಯಥಾ ಉತ್ಥಾನಾದೇರಪ್ಯಯೋಗಾತ್ ॥ ೪೫ ॥**

ಅ ॥ (೧) (ತ್ರೈಗುಣವೆಂಬ ವಿಷಯವನ್ನು ಹೊಗಲಾಡಿಸುವುದರಿಂದ ವೇದಗಳು ತ್ರೈಗುಣ್ಯವಿಷಯಗಳೆನಿಸುತ್ತವೆ. ಸಾಮಾನ್ಯ ತೋರುವ ಅರ್ಥವು ಏಕೆ ಆಗದೆಂದರೆ ಆ ಅರ್ಥದಲ್ಲಿ ಸ್ಮೃತಿಪ್ರಮಾಣ ಹೇಳುತ್ತಾರೆ) ಪುರುಷನು ತ್ರೈಗುಣ್ಯವೆಂಬ ವಿಷವನ್ನು ನಾಶಗೊಳಿಸುವ ವೇದಗಳನ್ನು ಆಶ್ರಯಿಸಿ ನಿತ್ಯದಲ್ಲಿಯೂ ಶ್ರೀವಾಸುದೇವನನ್ನು ಆಶ್ರಯಿಸಿ ನಿಸ್ತ್ರೈಗುಣ್ಯನಾಗಬೇಕು (೨) ಶ್ರೀಹರಿಯು ಸಾಧು ಗುಣಗಳಿರುವವನಾದುದರಿಂದ ಸತ್ವನೆಂದು ವ್ಯಾಪ್ತಿಗೆ ಕಾರಣನಾದುದರಿಂದ ಆತ್ಮನೆಂದೂ ಅನ್ನಿಸುತ್ತಾನೆ (೩) ನಿರಂತರದಲ್ಲಿಯೂ ಶ್ರೀವಿಷ್ಣುವನ್ನು ಸ್ಮರಿಸುವುದರಿಂದ ಜೀವನು ನಿತ್ಯಸತ್ವಸ್ಥನೆನಿಸುತ್ತಾನೆ ಪರಮಾತ್ಮನು ನನಗೆ ಸ್ವಾಮಿಯು ಎಂಬ ಜ್ಞಾನವು ಆತ್ಮವತ್ವವು ಅದರಿಂದ ಐಕ್ಯಜ್ಞಾನವನ್ನು ನಿವಾರಿಸುತ್ತಾರೆ (ಅಂದರೆ—ನಿರಂತರದಲ್ಲಿಯೂ ಶ್ರೀವಿಷ್ಣುವನ್ನು ಸ್ಮರಿಸಬೇಕೆಂದು ಮಾತ್ರ ವಿಧಿಸಿದರೆ—ಐಕ್ಯವೆಂದು ಅರ್ಥ ಇಟ್ಟುಕೊಂಡರೂ ಶ್ರೀವಿಷ್ಣುವಿನ ಸ್ಮರಣವು ಸಿಗುತ್ತದೆ ಆದಕಾರಣ ಆತ್ಮವಾನ್ ಎಂದು ಹೇಳಿದ್ರಿಂದ ಐಕ್ಯರೂಪ ಅರ್ಥವು ಕೂಡುವುದಿಲ್ಲವೆಂದು ಹೇಳಿ ಯೋಗ್ಯರೀತಿಯಿಂದ ಸ್ಮರಣಪ್ರಕಾರವನ್ನು ಹೇಳುತ್ತಾರೆ ವಿರುದ್ಧಗಳಾದ ಯೋಗಕ್ಷೇಮಗಳ ಇಚ್ಛೆಯನ್ನು ಬಿಟ್ಟವನಾಗಬೇಕು ಸರ್ವಧಾ ಯೋಗಕ್ಷೇಮಗಳನ್ನು ಬಿಟ್ಟರೆ **ಯೋಗಮಾತಿಷ್ಠ ಉತ್ತಿಷ್ಠ**, ಇತ್ಯಾದಿಗಳಿಂದ ಉದ್ಯೋಗ ಮಾಡು ಎಂದು ಹೇಳಿದ್ದು ತಪ್ಪಾಗಬೇಕಾಗುವುದು ॥ ೪೫ ॥

**ಗೀ ॥ ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।**
**ತಾವಾನ್ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥ ೪೬ ॥**

ಅ ॥ ಉದಪಾನೇ=ಭಾವಿಯಲ್ಲಿ, ಯಾವಾನರ್ಥಃ=ಸ್ನಾನಪಾನಾದಿರೂಪವಾದ ಎಷ್ಟು ಪ್ರಯೋಜನವು ಆಗುತ್ತದೋ, ತಾವಾನ್=ಅಂತಹ ಸ್ನಾನಪಾನಾದಿರೂಪವಾದ ಎಲ್ಲಾ ಪ್ರಯೋಜನವೂ ಸರ್ವತಃ ಸಂಪ್ಲುತೋದಕೇ=ನಾಲ್ಕು ದಿಕ್ಕಿನಲ್ಲಿಯೂ ನೀರಿನಿಂದ ವ್ಯಾಪ್ತವಾದ ಮಹಾಸಮುದ್ರದಲ್ಲಿ (ಸೇರುತ್ತದೆ.) ಹೀಗೆಯೇ, ಸರ್ವೇಷು ವೇದೇಷು=ಎಲ್ಲಾ ವೇದಗಳಲ್ಲಿ ಹೇಳಿದ ಕಾಮ್ಯ ಕರ್ಮಗಳನ್ನು ಮಾಡುವುದರಿಂದ, ಯಾವಾನರ್ಥಃ=ಸ್ವರ್ಗಾದಿರೂಪವಾದ ಎಷ್ಟು ಫಲವು, ಆಗುತ್ತದೊ, ತಾವಾನರ್ಥಃ=ಅಂತಹ ಎಲ್ಲಾ ಫಲವು ವಿಜಾನತಃ=ಪರೋಕ್ಷಜ್ಞಾನಿಯಾದ, ಬ್ರಾಹ್ಮಣಸ್ಯ=ಬ್ರಹ್ಮಾಪರೋಕ್ಷ ಜ್ಞಾನಿಗೆ ಆಗುತ್ತದೆ, (ಮಹಾನಂದರೂಪವಾದ ಮೋಕ್ಷಫಲದಲ್ಲಿ ಕ್ಷುದ್ರ ಆನಂದರೂಪವಾದಫಲವು ಅಂತರ್ಭೂತವಾಗುತ್ತದೆ ಅಥವಾ ಪ್ರಕೃತಿರೂಪವಾದ ಮಹಾಪ್ರಲಯೋದಕದಲ್ಲಿರತಕ್ಕ, ಶ್ರೀಪರಮಾತ್ಮನು ಸಂತುಷ್ಟನಾಗುತ್ತಿರಲು ಎಂತಹ ಧರ್ಮಮೋಕ್ಷಾದಿಗಳು ಆಗುತ್ತವೋ ಅಂತಹುಗಳು ಸಮಸ್ತ ವೇದಗಳ ವಿಶೇಷಾರ್ಥವನ್ನು ತಿಳಿದ ಜ್ಞಾನಿಗೆ (ಅಂದರೆ-ಕರ್ಮಗಳು ಭಗವಜ್ಞಾನವನ್ನು ಹುಟ್ಟಿಸುವವುಗಳು, ಶ್ರೀಹರಿಯೇ ಸಮಸ್ತ ವೇದಗಳಿಂದ ಮುಖ್ಯ ಪ್ರತಿಪಾದ್ಯನು, ಸ್ವರ್ಗ ಮೊದಲಾದ ಫಲಶ್ರವಣವು ಅಭಿರುಚಿಗಾಗಿ ಇತ್ಯಾದಿಗಳನ್ನು ತಿಳಿದ ಜ್ಞಾನಿಗೆ) ಆಗುತ್ತವೆ (ಆದಕಾರಣ ಆಪಾತತಃ ತೋರಿದ ಅರ್ಥದಲ್ಲಿ ಭ್ರಾಂತಿಯನ್ನು ಮಾಡಬೇಡ) ॥ ೪೬ ॥

**ಭಾ ॥ (೧)ತಥಾಽಪಿ ಕಾಮ್ಯಕರ್ಮಿಣಾಂ ಫಲಂ ಜ್ಞಾನಿನಾಂ ನ ಭವತೀತಿ ಸಾಮ್ಯಾಮೋವೇ-ಕ್ಷ್ಯತ ಆಹ । ಯಾವಾನರ್ಥ ಇತಿ ॥ (೨) ಯಥಾ ಯಾವಾನರ್ಥಃ ಪ್ರಯೋಜನ-**

ಮುದಪಾನೇ ಕೂಪೇ ಭವತಿ ತಾವಾನ್ ಸರ್ವತಃ ಸಂಪ್ಲುತೋದಕೇಽಂತರ್ಭವ-ತ್ಯೇವ । ಏವಂ ಸರ್ವೇಷು ವೇದೇಷು ಯತ್ಫಲಂ ತದ್ವಿಜಾನತೋಽಪಿ ಜ್ಞಾನಿನೋ ಬ್ರಾಹ್ಮಣಸ್ಯ ಫಲೇಽಂತರ್ಭವತಿ ॥ (೩) ಬ್ರಹ್ಮಾಣತೀತಿ ಬ್ರಾಹ್ಮಣಃ । ಅಪರೋಕ್ಷ-ಜ್ಞಾನೀ । ಸ ಹಿ ಬ್ರಹ್ಮ ಗಚ್ಛತಿ । ವಿಜಾನತ ಇತಿ ಜ್ಞಾನಫಲತ್ವಂ ತಸ್ಯ ದರ್ಶಯತಿ ॥ ೪೬ ॥

ಅ ॥ (೧) (ಯದ್ಯಪಿ ಜ್ಞಾನಫಲವಾದ ಮೋಕ್ಷವು ಕಾಮ್ಯಕರ್ಮಿಗಳಿಗೆ ಆಗುವುದಿಲ್ಲ) ಆದರೂ (ಅವರ ನಿಂದಾದಿಗಳು ಕೂಡುವುದಿಲ್ಲ. ಏಕೆಂದರೆ) ಕಾಮ್ಯಕರ್ಮಿಗಳ ಫಲವಾದ ಸ್ವರ್ಗ ಮೊದಲಾದುದು ಜ್ಞಾನಿಗಳಿಗೆ ಆಗುವುದಿಲ್ಲ ಹೀಗೆ ಜ್ಞಾನಮಾರ್ಗ ಕರ್ಮಮಾರ್ಗಗಳಿಗೆ ಸಾಮ್ಯವೆ ನಿಯಮದಿಂದ ಯೋಗವನ್ನು ಮಾಡಬೇಕಾಗಿಲ್ಲ ಎಲ್ಲಾ ಫಲಗಳನ್ನು ಹೊಂದಿಸದಿರುವುದರಿಂದ, ಎಂದಾಕ್ಷೇಪಿಸುತ್ತಿರಲು **ಯಾವಾನರ್ಥಃ** ಎಂಬುವುದರಿಂದ, ಸಮಾಧಾನ ಹೇಳುತ್ತಾರೆ (೨) (ಕೆಲವರು ಈ ಶ್ಲೋಕಕ್ಕೆ ಕರ್ಮ ವನ್ನು ಮಾತ್ರ ಬಿಡಬೇಕೆಂಬುವಲ್ಲಿ ತಾತ್ಪರ್ಯವೆನ್ನುತ್ತಾರೆ ಬೇರೆಯವರು ಎಷ್ಟು ಕರ್ಮಗಳಿಂದೊಡ ಗೂಡಿದ ಜ್ಞಾನವು ಮೋಕ್ಷಕ್ಕೆ ಸಾಧನವೋ ಅಷ್ಟನ್ನು ಮಾತ್ರ ಅಭ್ಯಾಸಮಾಡಬೇಕು ಎಲ್ಲಾ ವೇದಗಳನ್ನು ಅಭ್ಯಾಸಮಾಡಿ ಆಯುಷ್ಯವನ್ನು ಕಳೆಯಕೂಡದು ಎಂಬ ತಾತ್ಪರ್ಯವೆನ್ನುತ್ತಾರೆ. ಅದನ್ನು ನಿರಾ ಕರಿಸುವುದಕ್ಕಾಗಿ ವ್ಯಾಖ್ಯಾನಮಾಡುತ್ತಾರೆ) ಹೇಗೆ ಎಂತಹ ಪ್ರಯೋಜನವು ಬಾವಿಯಲ್ಲಿ ಆಗುತ್ತದೋ ಅಷ್ಟು ಪ್ರಯೋಜನವು ಜಲರಾಶಿರೂಪವಾದ ಸಮುದ್ರದಿಂದ ಆಗಿಯೇ ಆಗುತ್ತದೆ ಈ ರೀತಿಯಲ್ಲಿ ಸಮಸ್ತವೇದಗಳಲ್ಲಿ ಹೇಳಿದ ಕಾಮ್ಯಕರ್ಮಗಳಿಗೆ ಎಂತಹ ಫಲವೋ ಅಷ್ಟು ಫಲವು ಬ್ರಹ್ಮಾಪರೋಕ್ಷ ಜ್ಞಾನಿಯ ಫಲದಲ್ಲಿ ಸೇರುತ್ತದೆ (೩) ಪರಬ್ರಹ್ಮನನ್ನು ತಿಳಿಯುವ ಕಾರಣ ಬ್ರಾಹ್ಮಣನು ಅಪರೋಕ್ಷ ಜ್ಞಾನಿಯು. ಅವನು ಪರಬ್ರಹ್ಮನನ್ನು ತಿಳಿಯುತ್ತಾನೆ. ವಿಜಾನತಃ ಎಂಬುದರಿಂದ ಪರೋಕ್ಷಜ್ಞಾನಕ್ಕೆ ಅಪರೋಕ್ಷ ಜ್ಞಾನವೇ ಫಲವೆಂದು ತೋರಿಸುತ್ತಾನೆ.

ವಿ ॥ ಜ್ಞಾನಿಗಳ ಫಲವು ಮಹಾ ಸಮುದ್ರದ ನೀರಿನಂತೆ ಮಹತ್ತಾದುದು ಕರ್ಮಿಗಳ ಫಲವು ಬಾವಿಯ ನೀರಿನಂತೆ ಅತ್ಯಂತ ಅಲ್ಪವು ಆದಕಾರಣ ಅವುಗಳಿಗೆ ಸಾಮ್ಯವಿಲ್ಲ ಅಂತೂ ಅಲ್ಪ ಅಸ್ಥಿರ ಫಲ ವುಳ್ಳ ಕರ್ಮಗಳನ್ನು ನಿಂದಿಸಿ ಮಹತ್ತಾದ ಅನಂತ ಫಲವುಳ್ಳ ಜ್ಞಾನಕ್ಕೆ ಸಾಧನವಾದ ಯೋಗವನ್ನು ಮಾಡು ಎಂದು ಹೇಳಿದ್ದು ಯುಕ್ತವೇ ॥ ೪೬ ॥

ಪೀ—ಉದಪಾನ ಶಬ್ದ ಸರ್ವತಃ ಸಂಪ್ಲುತೋದಕ ಶಬ್ದಗಳಿಗೆ ಸ್ಮೃತಿ ಹೇಳಿ ಅರ್ಥ ಹೇಳುತ್ತಾರೆ–

ತಾ ॥ (೧) ಉದ್ರೇಕಾತ್ಪಾತ್ರರಾಹಿತ್ಯಾದನತ್ವಾಚ್ಚಾಖಿಲಸ್ಯ ಚ । ಪ್ರಲಯೇಽಪ್ಯುದಪಾ-ನೋಽಸೌ ಭಗವಾನ್ಹರಿರೀಶ್ವರಃ ॥ (೨) ಪ್ರಕೃತಿಹ್ಯುದರರೂಪೇಣ ಸರ್ವಮಾವೃತ್ಯ ತಿಷ್ಠತಿ । ಪ್ರಲಯೇಽತೋ ಲಯಂ ಪ್ರಾಹುಃ ಸರ್ವತಃ ಸಂಪ್ಲುತೋದಕಂ ॥ ಇತಿ ಚ ॥ (೩) ಯಾವತ್ಪ್ರಯೋಜನಂ ವಿಷ್ಣೋಃ ಸಕಾಶಾತ್ಸಾಧಕಸ್ಯ ಚ(ತು) । ಧರ್ಮ-ಮೋಕ್ಷಾದಿಕಂ ತಾವತ್ಸರ್ವವೇದವಿದೋ ಭವೇತ್ ॥ (೪) ವೇದಾರ್ಥನಿರ್ಣಯೋ ಯಸ್ಮಾದ್ವಿಷ್ಣೋರ್ಜ್ಞಾನಂ ಪ್ರಕೀರ್ತಿತಂ । ಜ್ಞಾನಾತ್ (ನ)ಪ್ರಸನ್ನಶ್ಚ ಹರಿರ್ಯ-ತೋಽಖಿಲಫಲಪ್ರದಃ ॥ ಇತಿ ಚ ॥ (೫) ಸರ್ವತಃ ಸಂಪ್ಲುತೋದಕೇಽಪ್ಯುದ್ರಿಕ್ತಃ

**ಪಾಲಕವರ್ಜಿತಃ । ಕಾಲಾದ್ಯನಶ್ಚ ಯೋ ವಿಷ್ಣುಸ್ತಸ್ಮಾದ್ಯಾವತ್ಫಲಂ ತಾವತ್ಸರ್ವ-ವೇದೇಷು ವಿಶೇಷಜ್ಞಸ್ಯೈವ ಭವತೀತ್ಯರ್ಥಃ ॥ ೧ ॥**

ಅ ॥ (೧) ಸರ್ವೇಶ್ವರನಾದ ಶ್ರೀಹರಿಯು ಸರ್ವೋತ್ಕೃಷ್ಟನಾದುದರಿಂದಲೂ, ರಕ್ಷಕರಿಲ್ಲದಿರುವುದರಿಂದಲೂ, ಪ್ರಲಯಕಾಲದಲ್ಲಿಯೂ ಎಲ್ಲಾದಕ್ಕೂ ಚೇಷ್ಟಕನಾದುದರಿಂದಲೂ ಉದಪಾನನೆನಿಸುತ್ತಾನೆ. (೨) (ಪ್ರಳಯಕಾಲದಲ್ಲಿ ಎಲ್ಲಾ ಕಾರ್ಯಗಳೂ ನಷ್ಟಗಳಾಗಿರುವುದರಿಂದ **ಸರ್ವತಃ ಸಂಪ್ಲುತೋದಕ** ಎಂಬುದರಿಂದ ಪ್ರಲಯವನ್ನು ಹೇಗೆ ತೆಗೆದುಕೊಳ್ಳುವುದು ಎಂದರೆ) ಪ್ರಕೃತಿಯು ಜಲರೂಪದಿಂದ ಎಲ್ಲಾ ವಸ್ತುವನ್ನು ಪ್ರಲಯಕಾಲದಲ್ಲಿ ಆವರಿಸಿಕೊಂಡು ಇರುತ್ತದೆ ಆದಕಾರಣ ಸರ್ವತಃ ಸಂಪ್ಲುತೋದಕವೆಂದರೆ— ಪ್ರಲಯವೆನ್ನುತ್ತಾರೆ (೩) ವಿಷ್ಣುವಿನ ದೆಸೆಯಿಂದ ಸಾಧಕನಾದ ಪುರುಷನಿಗೆ ಧರ್ಮಮೋಕ್ಷ ಮೊದಲಾದುದು ಎಷ್ಟು ಪ್ರಯೋಜನವು ಸಿಗುವುದೋ, ಅಷ್ಟು ಪ್ರಯೋಜನವು ಸಮಸ್ತವೇದಗಳನ್ನು ತಿಳಿದವನಿಗೇನೇ ಆಗುವುದು (೪) (ವೇದಜ್ಞಾನದಿಂದ ವಿಷ್ಣುವು ಫಲವನ್ನು ಏಕೆ ಕೊಡುತ್ತಾನೆ ಎಂದರೆ) ಸಮಸ್ತವೇದಗಳ ಅರ್ಥ ನಿರ್ಣಯವು ವಿಷ್ಣುಜ್ಞಾನವೆನಿಸುತ್ತದೆ ಜ್ಞಾನದಿಂದ ಸಂತುಷ್ಟನಾದ ಶ್ರೀಹರಿಯು ಎಲ್ಲಾ ಫಲಗಳನ್ನು ಕೊಡುತ್ತಾನೆ (೫) ಪ್ರಲಯಕಾಲದಲ್ಲಿಯೂ ಸರ್ವೋತ್ಕೃಷ್ಟನೂ, ರಕ್ಷಕರಿಲ್ಲದವನೂ, ಕಾಲಾದಿಗಳಿಗೆ ಪ್ರೇರಕನೂ ಆದ ಯಾವ ಶ್ರೀಹರಿಯೋ ಅಂತಹ ಶ್ರೀಹರಿಯಿಂದ ಎಷ್ಟು ಫಲವಾಗುತ್ತದೋ, ಅಷ್ಟು ಫಲವು ಸಮಸ್ತ ವೇದಗಳ ವಿಶೇಷ ಅರ್ಥವನ್ನು ತಿಳಿದವನಿಗೇನೇ ಆಗುತ್ತದೆ ॥ ೧ ॥

ಪೀ— ಇಲ್ಲಿ ಯಾರೋ ಒಬ್ಬನು ಉತ್ಕೃಷ್ಟವಾದ ಗುಣಗಳುಳ್ಳವನೆಂದು ತೋರುತ್ತದೆ ಅವನು ವಿಷ್ಣುವೆಂಬುದು ಹೇಗೆ ಎಂದರೆ—

**ತಾ ॥ (೧) ಸರ್ವೇ ಹಿ ವಿಷ್ಣೋರನ್ಯೇ ಪ್ರಲಯಕಾಲೇ ನೋದ್ರಿಕ್ತಾಃ । ಯೇ ಚೋದ್ರಿಕ್ತಾ ಮುಕ್ತಾ ರಮಾ ಚ ತೇಽಪಿ ನ ಪಾಲಕವರ್ಜಿತಾಃ । ವಿಷ್ಣುಪಾಲ್ಯತ್ವಾತ್ ॥ (೨) ನಚ ಮುಕ್ತಾಃ ಕಾಲಾದಿಚೇಷ್ಟಕಾಃ। ನ ಚೋದ್ರಿಕ್ತತ್ವಂ ತೇಷಾಂ ತದ್ವ(ತಾವ)ತ್ । ಅತಃ ಉದಪಾನೋ ವಿಷ್ಣುರೇವ । ಪ್ರಲಯೋ ವಿಶೇಷತೋಽಪಿ ॥ (೩) ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸ । ತಮ ಆಸೀತ್ತಮಸಾ ಗೂ-ಳ್ಹಮಗ್ರೇಽಪ್ರಕೇತಂ ಸಲಿಲಂ ಸರ್ವಮಾ ಇದಂ ॥ (೪) ಆಪೋ ವಾ ಇದಮಗ್ರೇ ಸಲಿಲ ಆಸೀತ್ಸಲಿಲ ಏಕೋ ದ್ರಷ್ಟಾಽದ್ವೈತೋ ಭವತೀತ್ಯಾದಿಶ್ರುತಿಭ್ಯಶ್ಚ ॥೪೬॥**

ಅ ॥ (೧) ಶ್ರೀಹರಿಯಿಂದ ಬೇರೆಯವರೆಲ್ಲರೂ ಪ್ರಲಯ ಕಾಲದಲ್ಲಿ ಉತ್ಕೃಷ್ಟರಲ್ಲ (ಮುಕ್ತರೂ ಲಕ್ಷ್ಮಿದೇವಿಯೂ ಉತ್ಕೃಷ್ಟರಾದುದರಿಂದ ವಿಷ್ಣುವೇ ಎಂದು ನಿಶ್ಚಯವು ಹೇಗೆ ಆಗುವುದು ಎಂದರೆ) ಯಾರು ಉತ್ಕೃಷ್ಟರು ಮುಕ್ತರೋ ಲಕ್ಷ್ಮೀದೇವಿಯೋ, ಅವರೂ ಕೂಡ ಶ್ರೀವಿಷ್ಣುವಿನಿಂದ ರಕ್ಷಿಸಿಕೊಳ್ಳಲ್ಪಡುವವರಾದುದರಿಂದ ರಕ್ಷಕರಿಲ್ಲದವರಲ್ಲ (೨) (ಮುಕ್ತರು ಉದಪಾನರೆನಿಸುವುದಿಲ್ಲವೆಂಬುವಲ್ಲಿ ಹೇತ್ವಂತರವನ್ನು ಹೇಳುತ್ತಾರೆ) ಮುಕ್ತರು ಕಾಲಾದಿಗಳಿಗೆ ಪ್ರೇರಕರಲ್ಲ ಮುಕ್ತರು ಉತ್ಕೃಷ್ಟರಾದರೂ ಶ್ರೀವಿಷ್ಣುವಿನಂತೆ ಸರ್ವೋತ್ಕೃಷ್ಟರಲ್ಲ ಆದಕಾರಣ ಉದಪಾನನು ಶ್ರೀವಿಷ್ಣುವೇ. ಉತ್ಕೃಷ್ಟತ್ವಾದಿಗಳೇ ಇತರರಿಗೆ ಕೂಡದಿರುವಾಗ ಪ್ರಲಯಕಾಲದಲ್ಲಿ ವಿಶೇಷಾಕಾರವಾಗಿಯೂ ಸರ್ವೋತ್ಕೃಷ್ಟನೇ (೩) ಆ ಪರಬ್ರಹ್ಮನೊಬ್ಬನು ವಾಯುವಿನ ಪ್ರೇರಣೆಯಿಲ್ಲದೆ ತನ್ನ ಸಾಮರ್ಥ್ಯದಿಂದಲೇ ಜೀವಾದಿಗಳಿಗೆ ಪ್ರೇರಕನಾಗಿದ್ದನು ಅವನಿಂದ ಬೇರೆ ಉತ್ತಮವಾದ ವಸ್ತುವು ಯಾವುದೂ ಇರಲಿಲ್ಲ ಶ್ರೀಹರಿಯೇ ಸರ್ವೋ

ತ್ಕೃಷ್ಟನಾಗಿದ್ದನು. ಪರಃ=ಸರ್ವೋತ್ಕೃಷ್ಟನಾದ ಶ್ರೀವಿಷ್ಣುವಿನಿಂದ ಬೇರೆಯಾದ, ತಮಃ=ಚಿತ್ಪ್ರಕೃತಿಯು, ಇದಂ ಸರ್ವಂ=ಈ ಎಲ್ಲಾ ಪ್ರದೇಶದಲ್ಲಿ, ಅಪ್ರಕೇತಂ=ತಿಳಿಯಲ್ಪಡದಿದ್ದ, ಸಲಿಲಂ=ನೀರಾಗಿ, ಆಃ=ಇತ್ತು, ತಮಸಾ=ತಮಃ ಎನಿಸಿದ, ತೇನ=ಆ ನೀರಿನಿಂದ ಅಗ್ರೇ=ಪ್ರಲಯಕಾಲದಲ್ಲಿ, ಗೂಹಿತಂ ಆಸೀತ್=ಎಲ್ಲವೂ ಮುಚ್ಚಲ್ಪಟ್ಟಿತ್ತು (೪) ಇದಮಗ್ರೇ=ಪ್ರಲಯಕಾಲದಲ್ಲಿ, ಸಲಿಲಂ=ಪ್ರಕೃತ್ಯಾತ್ಮಕವಾದ ನೀರು, ಆಸೀತ್=ಇತ್ತು, ಸಲಿಲೇ=ನೀರಿನಲ್ಲಿ, ಅಅಪಃ=ಸರ್ವಧಾರಕ್ಷಕರಿಲ್ಲದ ದ್ರಷ್ಟಾ=ಸರ್ವಜ್ಞನಾದ, ಅದ್ವೈತಃ=ಸಮರೂ ಅಧಿಕರೂ ಇಲ್ಲದ. (ಅಂದರೆ ಸರ್ವೋತ್ತಮನಾದ) ಏಕಃ=ಶ್ರೀಹರಿಯೊಬ್ಬನೇ, ಭವತಿ=ಇದ್ದನು, ಇದುಮೊದಲಾದ ವೇದಪ್ರಮಾಣಗಳಿಂದ (ಶ್ರೀಹರಿಯೊಬ್ಬನೇ ಸರ್ವೋತ್ಕೃಷ್ಟನು) ॥ ೪೬॥

## ಗೀ ॥ ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।
## ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ ॥೪೭॥

ಅ ॥ ಪಾರ್ಥ=ಅರ್ಜುನನೇ, ತೇ=ನಿನಗೆ, (ಅಂದರೆ ನೀನೇ ಮೊದಲಾದ ಬ್ರಾಹ್ಮಣ ಮೊದಲಾದ ಎಲ್ಲಾ ವರ್ಣಗಳೂ ಆಶ್ರಮಗಳೂ ಇವುಗಳಿಂದೊಡಗೂಡಿದ ಜ್ಞಾನಿಗಳಿಗೆಲ್ಲರಿಗೂ) ಕರ್ಮಣ್ಯೇವ=ಕರ್ಮಮಾಡುವುದರಲ್ಲಿಯೇ ಅಧಿಕಾರಃ=ಯೋಗ್ಯತೆಯು ಫಲೇಷು=ಸ್ವರ್ಗಮೊದಲಾದ ಫಲಗಳನ್ನು ಇಚ್ಛಿಸುವ ವಿಷಯದಲ್ಲಿ, ಕದಾಚನ=ಯಾವಾಗಲೂ, ಮಾ ಅಧಿಕಾರಃ=ಅಧಿಕಾರವಿಲ್ಲ (ಏವಂಚ ಕರ್ಮವನ್ನು ಮಾಡಲೇಬೇಕು ಫಲೇಚ್ಛೆಯನ್ನು ಮಾಡಬಾರದು) (ಆದಕಾರಣ ನೀನು) ಕರ್ಮಫಲಹೇತುಃ=ಕರ್ಮಗಳನ್ನು ಮಾಡುವ ವಿಷಯದಲ್ಲಿ ಕರ್ಮಫಲವೇ ಕಾರಣವಾಗಿ ಉಳ್ಳವನು, ಮಾ ಭೂಃ=ಆಗಬೇಡ ತೇ=ಅಂತಹ ನಿನಗೆ, (ಎಲ್ಲಾ ಜ್ಞಾನಿಗಳಿಗೂ) ಅಕರ್ಮಣಿ=ಕರ್ಮಗಳನ್ನು ಮಾಡದೆ ಇರುವ ವಿಷಯದಲ್ಲಿ, ಸಂಗಃ=ಸ್ನೇಹವು, ಮಾಽಸ್ತು=ಇಲ್ಲದಿರಲಿ, ಅಥವಾ ಕರ್ಮಫಲಹೇತುಃ ಮಾಭೂಃ=ಕರ್ಮಫಲಕ್ಕೆ ಕಾರಣನಾದ ಶ್ರೀಹರಿಯಿಂದ ಐಕ್ಯವನ್ನು ಮನಸ್ಸಿನಿಂದಲೂ ಆಲೋಚಿಸಬೇಡ

ವಿ ॥ ಸ್ವರ್ಗಾದಿರೂಪವಾದ ಅಲ್ಪ ಅಸ್ಥಿರ ಫಲವಿಲ್ಲವಾದರೂ ಮೋಕ್ಷರೂಪವಾದ ಸ್ಥಿರವಾದ ಮಹಾಪುರುಷಾರ್ಥಕ್ಕೆ ಸಾಧನಗಳಾದ ಜ್ಞಾನ ಭಕ್ತಿ ವೈರಾಗ್ಯ ಭಗವತ್ಪ್ರಸಾದಗಳೆಂಬ ಫಲಗಳಿವೆ ಜ್ಞಾನಭಕ್ತ್ಯಾದಿಗಳ ಇಚ್ಛೆಯು ನಿಂದಿತವಲ್ಲ, ಪರಂತು ವೃಣೀಮಹೇ ತೇ ಪರಿತೋಷಣಾಯ ಎಂದು ಶಾಸ್ತ್ರದಲ್ಲಿ ವಿಹಿತವೂ ಆಗಿದೆ. ಆದಕಾರಣ ಜ್ಞಾನಭಕ್ತ್ಯಾದಿಗಳನ್ನು ಇಚ್ಛಿಸಬೇಕು ಫಲವನ್ನು ಇಚ್ಛಿಸಬಾರದು ಆದಕಾರಣ ವರ್ಣಾಶ್ರಮಗಳಿಗೆ ಉಚಿತಗಳಾದ ಕರ್ಮಗಳನ್ನು ಕ್ಷುದ್ರಫಲೇಚ್ಛೆಯಿಂದ ಮಾಡಬಾರದು ಭಗವಂತನ ಪ್ರೀತಿಗಾಗಿ ಮಾಡಲೇ ಬೇಕು ॥ ೪೭ ॥

ಪೀ—ಜ್ಞಾನಿಗಳಿಗೆ ಕರ್ಮವಿಲ್ಲವೆಂದು ಹೇಳಿ ಈಗ ಅಜ್ಞಾನಿಗಳಿಗೆ ಕರ್ಮವನ್ನು ಹೇಳುತ್ತಾರೆ, ಎಂಬ ಅನ್ಯಥಾವ್ಯಾಖ್ಯಾನವನ್ನು ನಿರಾಕರಿಸುವುದಕ್ಕಾಗಿ ಹೇಳುತ್ತಾರೆ—

**ಭಾ ॥ (೧) ಕಾಮಾತ್ಮನಾಂ ನಿಂದಾ ಕೃತಾ ಕಥಂ । ಏಷಾಂ ಸ್ವರ್ಗಕಾಮೋ ಯಜೇತೇತ್ಯಾದೌ ಕಾಮಸ್ಯಾಪಿ ವಿಹಿತತ್ವಾದಿತ್ಯತ ಆಹ । ಕರ್ಮಣ್ಯೇವೇತಿ ॥ (೨) ತ ಇತ್ಯುಪಲಕ್ಷಣಾರ್ಥಂ । ತವಜ್ಞಾನಿನೋಽಪಿ ನ ಫಲಕಾಮುಕರ್ತವ್ಯತಾ ಕಿಮನ್ಯೇಷಾಂ । ನ ತ್ವಸ್ತಿ ಕೇಷಾಂಚಿನ್ನ ತೇಽಸ್ತೀತಿ ॥ (೩) ಸ ಹಿ ಜ್ಞಾನೀ ನರಾಂಶ ಇಂದ್ರಶ್ಚ ।**

**ಮೋಹಾದಿಸ್ತ್ವಭಿಭವಾದೇಃ** ॥ (೪) **ಯದಿ ತೇಷಾಂ ಶುದ್ಧಸತ್ತ್ವಾನಾಂ ನ ಸ್ಯಾಜ್ಜ್ಞಾನಂ ಕ್ವಾನ್ಯೇಷಾಂ । ಉಪದೇಶಾದೇಶ್ಚ ಸಿದ್ಧಂ ಜ್ಞಾನಂ ತೇಷಾಂ । ಪಾರ್ಥಾಕ್ಷ್ಯಿಷೇಣೇತ್ಯಾದಿಜ್ಞಾನಿಗಣನಾಚ್ಚ** ॥ ೧ ॥

ಅ ॥ (೧) ಐಹಿಕ ಫಲವನ್ನಪೇಕ್ಷಿಸಿ ಕರ್ಮವನ್ನು ಮಾಡುವವರಿಗೆ **ಯಾಮಿಮಾಂ** ಇತ್ಯಾದಿಗಳಿಂದ ಯಾವ ನಿಂದೆಯು ಮಾಡಲ್ಪಟ್ಟಿದೋ, ಅದು ಯುಕ್ತವಲ್ಲ, ಏಕೆಂದರೆ **ಸ್ವರ್ಗಕಾಮೋ ಯಜೇತ** ಇತ್ಯಾದಿಗಳಲ್ಲಿ ಯಾಗದಂತೆ ಸ್ವರ್ಗೇಚ್ಛೆಯೂ ವಿಹಿತವಾಗಿದೆ, (ವಿಹಿತಕರ್ಮವನ್ನು ಮಾಡುವವರು ನಿಂದ್ಯರಾಗುವುದಿಲ್ಲ ಅವರೂ ನಿಂದ್ಯರಾಗುವುದಾದರೆ ಯಾಗವೂ ನಿಂದ್ಯವಾಗಬೇಕಾಗುವುದು.) ಎಂದರೆ **ಕರ್ಮಣ್ಯೇವ** ಎಂದು ಹೇಳಿರುತ್ತಾರೆ (೨) **ತೇ** ಎಂಬುದರಿಂದ ಎಲ್ಲಾ ವರ್ಣಗಳನ್ನೂ ಎಲ್ಲಾ ಆಶ್ರಮಗಳನ್ನೂ ಇಟ್ಟುಕೊಳ್ಳಬೇಕು ಕರ್ಮವನ್ನು ಮಾಡುವುದರಲ್ಲಿ ಅಧಿಕಾರಿಯಾದ ಜ್ಞಾನಿಯಾದ ನೀನೂ ಕೂಡ ಫಲವನ್ನು ಇಚ್ಛಿಸಿ ಕರ್ಮ ಮಾಡಬಾರದು ಇತರರಾದ ಅಜ್ಞಾನಿಗಳು ಮಾಡಬಾರದೆಂದು ಸುತರಾಂ ಸಿದ್ಧವು. (ಅಂದರೆ—ಜ್ಞಾನಿಗಳು ಫಲೇಚ್ಛೆಯಿಂದ ಕರ್ಮ ಮಾಡಿದರೂ ಅತ್ಯಂತ ಬಾಧಕವಾಗುವುದಿಲ್ಲ ಫಲೇಚ್ಛೆಯಿಂದ ತಡೆಯಲ್ಪಡತಕ್ಕದು ಜ್ಞಾನವು ಮೊದಲೇ ಬಂದಿರುತ್ತದೆ ಅಪರೋಕ್ಷ ಜ್ಞಾನಿಗಳಿಗೆ ಮೋಕ್ಷವು ನಿಶ್ಚಿತವೇ ಆಗಿದೆ ಆದರೂ ಕಾಮ್ಯಕರ್ಮವನ್ನು ಮಾಡಿದರೆ ಅದರ ಫಲವನ್ನು ಭೋಗಿಸಬೇಕಾಗಿರುವುದರಿಂದ ಮೋಕ್ಷವು ವಿಲಂಬವಾಗಿ ಸಿಗುವುದು. ಆದಕಾರಣ ಕರ್ಮವನ್ನು ಜ್ಞಾನಿಗಳೂ ಮಾಡಬಾರದು ಎಂದದ್ದು ಅಜ್ಞಾನಿಗಳು ಮಾಡಬಾರದೆಂದು ಸುತರಾಂ ಸಿದ್ಧಿಸುತ್ತದೆ. ಇದಕ್ಕಾಗಿ ಬ್ರಾಹ್ಮಣಾದಿ ಎಲ್ಲಾ ವರ್ಣಗಳಿಗೂ ಬ್ರಹ್ಮಚರ್ಯಾದ್ಯಾಶ್ರಮಗಳಿಗೂ ಉಪಲಕ್ಷಕವಾದ * ತೇ ಎಂಬ ಪದವನ್ನು ಹೇಳಿರುವರು ) (ತೇ ಎಂಬುದು ಉಪಲಕ್ಷಕವೆಂದು ಏಕೆ ಇಟ್ಟುಕೊಳ್ಳಬೇಕೆಂದರೆ)—ಅಜ್ಞಾನಿಗಳಾಗಲೀ ಜ್ಞಾನಿಗಳಾಗಲೀ ಕೆಲವರು ಫಲೇಚ್ಛೆಯಿಂದ ಕರ್ಮಮಾಡಬಹುದು, ಜ್ಞಾನಿಯಾದ ನೀನು ಕರ್ಮಮಾಡಬಾರದೆಂದರ್ಥವಲ್ಲ (ಏಕೆಂದರೆ—**ಕಾಮಾನ್ಯಃ ಕಾಮಯತೇ ಸ ಕಾಮಭಿರ್ಜಾಯತೇ ತತ್ರ ತತ್ರ** ಇತ್ಯಾದಿಗಳಲ್ಲಿ ಸರ್ವರೂ ಫಲೇಚ್ಛೆಯಿಂದ ಕರ್ಮವನ್ನು ಮಾಡಬಾರದೆಂದು ಹೇಳಿದೆ (೩) (ಅರ್ಜುನನು ಜ್ಞಾನಿಯೆಂಬುವುದು ಹೇಗೆ ಸಿದ್ಧವಾಗುತ್ತದೆ ಎಂದರೆ) **ವಿಷ್ಣೋರ್ವಾಯೋರನಂತಸ್ಯ ತ್ರಿಭಿರಂಶೈರ್ನರಃ ಸ್ಮೃತಃ** । ಎಂಬ ಪ್ರಮಾಣದಿಂದ ನರನ ಅಂಶವಿದ್ದ ಪ್ರಯುಕ್ತವೂ ಇಂದ್ರನ ಅವತಾರನಾದುದರಿಂದಲೂ ಅರ್ಜುನನು ಜ್ಞಾನಿಯು ಹಿ = ನರನ ಅಂಶದಿಂದ ಕೂಡಿದ ಇಂದ್ರನಾದುದರಿಂದ ಜ್ಞಾನಿಯೆಂಬುದು ಪ್ರಮಾಣಪ್ರಸಿದ್ಧವು (ಹಾಗಾದರೆ **ಯಜ್ಜ್ಞಾತ್ವಾ ನ ಪುನರ್ಮೋಹಂ** ಎಂದು ಅರ್ಜುನನಿಗೆ ಮೋಹ ಹೇಳಿದ್ದು ಹೇಗೆ ಕೂಡುತ್ತದೆ? ಮತ್ತು **ಬುದ್ಧಿಂ ಮೋಹಯಸೀವ ಮೇ ತದೇಕಂ ವದ ನಿಶ್ಚಿತ್ಯ** ಇತ್ಯಾದಿ ಪ್ರಶ್ನೆ ಮಾಡಿದ್ದು ಹೇಗೆ ಕೂಡುತ್ತದೆ? ಎಂದರೆ)ಪ್ರಬಲವಾದ ಪ್ರಾರಬ್ಧಕರ್ಮ, ಭೂಸಂಬಂಧ ಮಾನುಷಾನ್ನೋಪಭೋಗ ಪ್ರಬಲವಿಕರ್ಮ ಇತ್ಯಾದಿಗಳಿಂದ ಜ್ಞಾನವು ಮರೆಯಾಗುವ ಪ್ರಯುಕ್ತ ಮೋಹವು ವಿಶೇಷಜ್ಞಾನ ತಿಳಿದಿದ್ದು ಸ್ಥಿರಗೊಳಿಸುವುದು ಇತ್ಯಾದಿಗಳಿಗಾಗಿ ಪ್ರಶ್ನೆಮಾಡಿದ್ದು (೪) (**ಸತ್ತ್ವಾತ್ಸಂಜಾಯತೇ ಜ್ಞಾನಂ** ಸತ್ವಗುಣದಿಂದ ಜ್ಞಾನವು ಹುಟ್ಟುತ್ತದೆ ಸತ್ವಗುಣವು ಜ್ಞಾನಕ್ಕೆ ಕಾರಣವು ) ಪರಿಶುದ್ಧವಾದ ಸತ್ವಗುಣಗಳುಳ್ಳ ದೇವತೆಗಳಿಗೂ ಜ್ಞಾನವು ಇಲ್ಲವಾದರೆ ಇತರರಿಗೆ ಜ್ಞಾನವು ಹೇಗೆ ಬರುವುದು? ಮತ್ತು **ಏತದುಹೈವೇಂದ್ರೋ ವಿಶ್ವಾಮಿತ್ರಾಯ ಪ್ರೋವಾಚ** ಇತ್ಯಾದಿ ರೂಪವಾದ ಉಪದೇಶವು **ತೌ ಹ ದ್ವಾತ್ರಿಂಶತಂ ವರ್ಷಾಣಿ ಬ್ರಹ್ಮಚರ್ಯ ಮೂಷತುಃ** ಎಂದು ಇಂದ್ರನಿಗೆ ಚತುರ್ಮುಖನಲ್ಲಿ ಬ್ರಹ್ಮಚರ್ಯವ್ರತವನ್ನಾಚರಿಸುವುದು ಇತ್ಯಾದಿಗಳಿಂದ ದೇವತೆಗಳಿಗೆ ಜ್ಞಾನವು ಇದೆ, ಎಂದು ಸಿದ್ಧವಾಗುತ್ತದೆ (ಅರ್ಜುನನು ಜ್ಞಾನಿಯೆಂಬುವಲ್ಲಿ ಪ್ರಮಾಣಾಂತರವನ್ನು ಹೇಳುತ್ತಾರೆ)

---

* ತನ್ನ ಅರ್ಥವನ್ನು ಬಿಡದೆ ಬೇರೆ ಅರ್ಥವನ್ನು ತೆಗೆದುಕೊಳ್ಳುವುದು, ಉಪಲಕ್ಷಕವು

**ಯೇಽನ್ಯೇ ವಿಭೀಷಣಹನೂಮದುಪೇಂದ್ರದತ್ತಾಃ ಪಾರ್ಥಾಷ್ಟಿಷೇಣವಿದುರಶ್ರುತಸೇನ-ಭೂಪಾಃ । ತೇ ವೈ ವಿದಂತ್ಯತಿತರಂತಿ ಚ ದೇವಮಾಯಾಂ** ಇತ್ಯಾದಿಗಳಲ್ಲಿ ಬ್ರಹ್ಮದೇವರು ಅರ್ಜುನನನ್ನು ಜ್ಞಾನಿಗಳಲ್ಲಿ ಗಣನಮಾಡಿದ್ದಾರೆ

ವಿ ॥ ಇದರಿಂದ ಜ್ಞಾನಿಯಾದ ಅರ್ಜುನನಿಗೇನೇ **ಕರ್ಮಣ್ಯೇವಾಧಿಕಾರಸ್ತೇ** ಎಂದು ಕರ್ಮವನ್ನು ಹೇಳಿದ್ರಿಂದ ಇಲ್ಲಿ ಅಜ್ಞಾನಿಗೆ ಕರ್ಮವು ಹೇಳಲ್ಪಡುತ್ತದೆ, ಎಂಬ ಪರರ ವ್ಯಾಖ್ಯಾನವು ನಿರಸ್ತವಾಯಿತು. ॥ ೧ ॥

ಪೀ—**ಮಾ ಫಲೇಷು ಕದಾಚನ** ಎಂಬ ನಿಷೇಧವು ಫಲಕ್ಕೆ ಫಲಕಾಮ ನಿಷೇಧವೆಂದು ಹೇಳಿದ್ದು ಹೇಗೆ? ಎಂದರೆ—

**ಭಾ ॥ (೧) ಕಾಮನಿಷೇಧ ಏವಾತ್ರ । ಫಲಾನಿ ಹ್ಯಸ್ವಾತಂತ್ರ್ಯೇಣ ಭವಂತಿ ॥ (೨) ನ ಹಿ ಕರ್ಮಫಲಾನಿ ಕರ್ಮಾಭಾವೇ ಯತ್ನತೋಽಪಿ ಭವಂತಿ । ಭವಂತಿ ಚ ಕಾಮ್ಯಕರ್ಮಿಣೋ ವಿಪರೀತಪ್ರಯತ್ನೇಽಪ್ಯವಿರೋಧೇ ॥ (೩) ಅತಃ ಕರ್ಮಾಕರಣ ಏವ ಪ್ರತ್ಯವಾಯೋ ನ ತು ಜ್ಞಾನಾದಿನಾ ವಾಽಕಾಮನಯಾ ಫಲಾಪ್ರಾಪ್ತೌ । ಅತಃ ಕರ್ಮಣ್ಯೇವಾಧಿಕಾರಃ । ಅತಸ್ತದೇವ ಕಾರ್ಯಂ ॥ (೪) ನ ತು ಕಾಮೇನ ಜ್ಞಾನಾದಿನಿಷೇಧೇನ ವಾ ಫಲಪ್ರಾಪ್ತಿಃ ॥ ೨ ॥**

ಅ ॥ (೧) **ಫಲೇಷು** ಎಂಬುದರಿಂದ ಫಲವಿಷಯಕವಾದ ಕಾಮವನ್ನು ಇಟ್ಟುಕೊಳ್ಳಬೇಕು ಇಲ್ಲಿ ಫಲಕಾಮ ವಿಷಯವನ್ನೇ ನಿಷೇಧಿಸಿದ್ದು ಫಲವೆಂಬ ವಿಷಯವನ್ನು ನಿಷೇಧಿಸಿದ್ದಲ್ಲ (ಏಕೆಂದರೆ) ಯಾವ ವಿಷಯದಲ್ಲಿ ಪುರುಷನಿಗೆ ಮಾಡಲಿಕ್ಕೂ ಮಾಡದಿರಲಿಕ್ಕೂ ಸ್ವಾತಂತ್ರ್ಯವಿದೆಯೋ ಅಲ್ಲಿಯೇ ನಿಷೇಧವು ಫಲಗಳಲ್ಲಿ ಮಾಡಲಿಕ್ಕೂ ಮಾಡದಿರಲಿಕ್ಕೂ ಸ್ವಾತಂತ್ರ್ಯವಿಲ್ಲ (ಅದುಕಾರಣ ಮುಖ್ಯಾರ್ಥದಲ್ಲಿ ಬಾಧಕ ವಿದ್ದ ಪ್ರಯುಕ್ತ ಅಮುಖ್ಯವಾದ ಅರ್ಥವನ್ನು ಇಟ್ಟುಕೊಂಡದ್ದು ) (೨) (ಫಲಗಳನ್ನು ಮಾಡಲಿಕ್ಕೂ ಮಾಡದಿರಲಿಕ್ಕೂ ಸ್ವಾತಂತ್ರ್ಯವು ಏಕೆ ಇಲ್ಲವೆಂದರೆ—ಫಲವನ್ನು ಸಂಪಾದಿಸುವ ವಿಷಯದಲ್ಲಿ ಸ್ವಾತಂತ್ರ್ಯ ವಿಲ್ಲವೆನ್ನುತ್ತಾರೆ.) ಕರ್ಮ ಮಾಡದಿದ್ದರೆ ಎಷ್ಟು ಪ್ರಯತ್ನಪಟ್ಟರೂ ಕರ್ಮಫಲಗಳು ಆಗುವುದಿಲ್ಲವಷ್ಟೆ (ಫಲವನ್ನು ಸಂಪಾದಿಸದಿರುವ ವಿಷಯದಲ್ಲಿಯೂ ಸ್ವಾತಂತ್ರ್ಯವಿಲ್ಲವೆನ್ನುತ್ತಾರೆ ) ಕಾಮ್ಯಕರ್ಮಗಳನ್ನು ಮಾಡಿ ನನಗೆ ಕರ್ಮದ ಫಲವು ಬೇಡ ಎಂದು ಪ್ರಯತ್ನ ಮಾಡಿದರೂ ಶ್ರೀಹರಿಯ ಅಪರೋಕ್ಷಜ್ಞಾನವಿಲ್ಲ ವಾದರೆ ಕಾಮ್ಯಕರ್ಮದ ಫಲಗಳಾದ ಐಶ್ವರ್ಯಾದಿಗಳು ಕಾಮ್ಯಕರ್ಮಿಗಳಿಗೆ ಬಂದೇ ಬರುತ್ತವೆ, ಹೀಗೆ ಫಲವನ್ನು ಸಂಪಾದಿಸದಿರುವ ವಿಷಯದಲ್ಲಿಯೂ ಪುರುಷನಿಗೆ ಸಾಮರ್ಥ್ಯವಿಲ್ಲ (೩) ಹಿಂದೆ ಹೇಳಿದ ಪ್ರಕಾರ **ತೇ ಫಲೇಷು** ಎಂಬ ಎರಡು ಪದಗಳಿಗೆ ಅರ್ಜುನ ಮೊದಲಾದ ಎಲ್ಲಾ ವರ್ಣಾಶ್ರಮಿಗಳಿಗೂ ಕರ್ಮಮಾಡುವುದರಲ್ಲಿಯೇ ಅಧಿಕಾರವು ಫಲಕಾಮನಾದಲ್ಲಿ ಅಧಿಕಾರವಿಲ್ಲವೆಂದು ಲಕ್ಷಣಿಕಾ (ಅಮುಖ್ಯಾ)ರ್ಥವನ್ನು ಇಟ್ಟುಕೊಳ್ಳಬೇಕೆಂದು ಸಿದ್ಧವಾಗೋಣ. **ಕುರ್ವನ್ನೇವೇಹ ಕರ್ಮಾಣಿ** "ಮನುಷ್ಯಾದಿ ಜನ್ಮಗಳಲ್ಲಿ ಬದುಕಲಿಚ್ಛಿಸುವವನು ಸಾಯುವ ತನಕ ಭಗವತ್ಪೂಜಾರೂಪಗಳಾದ ತಮಗೆ ಉಚಿತಗಳಾದ ನಿಷ್ಕಾಮಕರ್ಮಗಳನ್ನು ಸರ್ವಥಾ ಮಾಡಲೇ ಬೇಕು" ಎಂದು ಹೇಳಿ **ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ** ಹೀಗೆ ಕರ್ಮಗಳನ್ನು ಮಾಡತಕ್ಕ ನಿನಗೆ ಪಾಪಲೇಪವಾಗುವುದಿಲ್ಲ, ಅಂದರೆ ತಮಗೆ ಉಚಿತಗಳಾದ ನಿಷ್ಕಾಮಕರ್ಮಗಳಿಂದ ಭಗವತ್ಪೂಜೆಯನ್ನು ಮಾಡತಕ್ಕ ಅಲ್ಪಾಧಿಕಾರಿಗೂ ಹಿಂದು ಮುಂದಿನ ಪಾಪಗಳು ಬಾಧಿಸುವುದಿಲ್ಲ ಜ್ಞಾನಾಧಿಕಾರಿಯು ಆಗುತ್ತಾನೆ. ತನಗೆ ಉಚಿತವಾದ ಕರ್ಮ

ಮಾಡದಿದ್ದರೆ ಕರ್ಮಲೇಪವು ಆಗಿಯೇ ಆಗುತ್ತದೆ. (ಅಂದರೆ ಭಗವತ್ಪೂಜೆಯನ್ನು ಮಾಡದಿದ್ದವನಿಗೆ ಪಾಪಗಳು ಬಂದೇ ಬರುತ್ತವೆ ಜ್ಞಾನದಲ್ಲಿ ಅಧಿಕಾರಿಯಾಗುವುದಿಲ್ಲ. ಆದಕಾರಣ ಕರ್ಮಗಳನ್ನು ಮಾಡಲೇಬೇಕು.) ಎಂದು ಹೇಳಿದ್ದರಿಂದ ಕರ್ಮ ಮಾಡದಿದ್ದರೇನೇ ಪ್ರತ್ಯವಾಯವು. ಅಜ್ಞಾನಿಗಳಿಗೆ ತಮಗೆ ಉಚಿತವಾದ ಕರ್ಮ ಮಾಡದಿದ್ದರೆ ಪೂರ್ವೋತ್ತರ ಪಾಪಬಾಧರೂಪ ಅನಿಷ್ಟಪ್ರಾಪ್ತಿಯೂ ಜ್ಞಾನ ರೂಪ ಇಷ್ಟಾಪ್ರಾಪ್ತಿಯೂ (ಜ್ಞಾನಿಗಳಿಗೂ ಮುಕ್ತಿಯಲ್ಲಿ ಆನಂದಹ್ರಾಸರೂಪವಾದ ಅನಿಷ್ಟಪ್ರಾಪ್ತಿಯೂ, ಸ್ವರೂಪಾವಿರ್ಭಾವರೂಪವಾದ ಇಷ್ಟಾಪ್ರಾಪ್ತಿಯೂ) ಆಗುತ್ತದೆ ಹೇಗೆ ಜ್ಞಾನ ಮೊದಲಾದ ಸಾಧನಗಳಿಂದ ಮೋಕ್ಷವನ್ನು ಹೊಂದುವವನಿಗೆ ಸ್ವರ್ಗಾದಿಗಳು ಸಿಗದಿರುವುದು ಹೇತುವಾಗುವುದಿಲ್ಲವೋ, (ದೊಡ್ಡ ಫಲವು ಸಿಗುವಾಗ ಅಲ್ಪಫಲಹಾನಿಯನ್ನು ಯಾರೂ ಎಣಿಸುವುದಿಲ್ಲವಷ್ಟೆ.) ಹಾಗೆಯೇ ನಿಷ್ಕಾಮ ಕರ್ಮದಿಂದ ಮಹಾಫಲವಾದ ಜ್ಞಾನಾದಿಗಳು ಲಭಿಸುವುದರಿಂದ ಇಚ್ಛೆಯಿಲ್ಲದೆ ಕಾಮ್ಯಫಲವು ಸಿಗದಿದ್ದರೂ ಪ್ರತ್ಯವಾಯವು (ಅನರ್ಥವು) ಬರುವುದಿಲ್ಲ ಕರ್ಮ ಮಾಡದಿದ್ದರೆ ಪ್ರತ್ಯವಾಯವು ಬರುವುದರಿಂದ ಕರ್ಮ ಮಾಡುವುದರಲ್ಲಿಯೇ ಅಧಿಕಾರವು. ಫಲೇಚ್ಛೆಯನ್ನು ಮಾಡದಿದ್ದರೆ ಪ್ರತ್ಯವಾಯವು ಬಾರದಿರುವುದರಿಂದ ಫಲವನ್ನು ಇಚ್ಛಿಸುವುದರಲ್ಲಿ ಅಧಿಕಾರವಿಲ್ಲ ಹೀಗೆ ಕರ್ಮದಲ್ಲಿಯೇ ಅಧಿಕಾರವಿದ್ದಪ್ರಯುಕ್ತ ಮೂಲದಲ್ಲಿ ಲಿಙ್ ಲೋಟ್ ತವ್ಯಪ್ರತ್ಯಯ ಪಂಚಮಲಕಾರಗಳಿಂದ ಕರ್ಮವನ್ನು ವಿಧಿಸಿದುದು ಯುಕ್ತವು. (೪) ಜ್ಞಾನಾದಿಗಳಿಗೆ ಸಾಧನವಾದ ನಿಷ್ಕಾಮ ಕರ್ಮವನ್ನು ಮಾಡದೆ ಜ್ಞಾನಿಯಿಂದ ಫಲಪ್ರಾಪ್ತಿಯಾಗುವುದಿಲ್ಲವೋ, ಹಾಗೆಯೇ ಫಲವನ್ನು ಇಚ್ಛಿಸುವುದರಲ್ಲಿ ಅಧಿಕಾರವಿಲ್ಲದಿರುವುದರಿಂದ ಫಲವನ್ನು ಹೊಂದುವುದಕ್ಕೆ ಫಲೇಚ್ಛೆಯನ್ನು ಮಾಡಬಾರದು

ವಿ ॥ ಅಜ್ಞಾನಿಗಳು ನಿವೃತ್ತಕರ್ಮಗಳನ್ನು ಮಾಡದೆ ಕೇವಲ ಕಾಮ್ಯಕರ್ಮವನ್ನು ಮಾಡಿ ಸ್ವರ್ಗಾದಿಗಳನ್ನು ಪಡೆಯುವಂತೆ ಜ್ಞಾನಿಗಳು ಜ್ಞಾನಾದಿಗಳಿಗೆ ಸಾಧನವಾದ ನಿಷ್ಕಾಮ ಕರ್ಮವನ್ನು ಮಾಡದೆ ಕಾಮ್ಯಕರ್ಮವನ್ನು ಮಾಡಿ ಸ್ವರ್ಗಾದಿ ಫಲವನ್ನು ಸಂಪಾದಿಸಬಾರದು ॥ ೨ ॥

ಪೀ—ಕರ್ಮವೇ ವಿಧಿಸಲ್ಪಟ್ಟದ್ದು, ಫಲೇಚ್ಛೆಯಲ್ಲವೆಂದಾದರೆ ಸ್ವರ್ಗಕಾಮೋ ಯಜೇತ ಇದು ಮೊದಲಾದ ವಾಕ್ಯಗಳಿಗೆ ತಾತ್ಪರ್ಯವೇನು? ಎಂದರೆ—

ಭಾ ॥ (೧) ಕಾಮವಚನಾನಾಂ ತು ತಾತ್ಪರ್ಯಂ ಭಗವತೈವೋಕ್ತಂ । ರೋಚನಾರ್ಥಂ ಫಲಶ್ರುತಿಃ । ಯಥಾ ಭೈಷಜ್ಯರೋಚನಮಿತ್ಯಾದಿ ಭಾಗವತೇ ॥ (೨) ಅತ ಏವ ಕಾಮೀ ಯಜೇತೇತ್ಯರ್ಥಃ । ನ ತು ಕಾಮೀ ಭೂತ್ವೇತ್ಯರ್ಥಃ ॥ (೩) ನಿಷ್ಕಾಮಂ ಜ್ಞಾನಪೂರ್ವಂ ಚೇತಿ ವಚನಾತ್ । ವಕ್ಷ್ಯಮಾಣೇಭ್ಯಶ್ಚ ॥ (೪) ವಸಂತೇ ವಸಂತೇ ಜ್ಯೋತಿಷಾ ಯಜೇತೇತ್ಯಾದಿಭ್ಯಶ್ಚ । ಅತೋ ಮಾ ಕರ್ಮಫಲಹೇತುರ್ಭೂಃ । ಕರ್ಮಫಲಂ ತತ್ಪ್ರತೌ ಹೇತುರ್ಯಸ್ಯ ಸ ಕರ್ಮಫಲಹೇತುಃ ಸ ಮಾ ಭೂಃ ॥ ತರ್ಹಿ ನ ಕರೋಮೀತ್ಯತ ಆಹ । ಮಾ ತ ಇತಿ । ಕರ್ಮಾಕರಣೇ ಸ್ನೇಹೋ ಮಾಽಸ್ತ್ವಿತ್ಯರ್ಥಃ ॥ (೫) ಅನ್ಯಫಲಾಭಾವೇಽಪಿ ಮತ್ಪ್ರಸಾದಾಖ್ಯಫಲಭಾವಾತ್ । ಇಚ್ಛಾ ಚ ತಸ್ಯ ಯುಕ್ತಾ । ವೃಣೀಮಹೇ ತೇ ಪರಿತೋಷಣಾಯ—ಇತ್ಯಾದಿಮಹದಾಚಾರಾತ್ ॥ (೬) ಅನಿಂದನಾದ್ವಿಶೇಷತ ಇತರನಿಂದನಾಚ್ಚ ॥ (೭) ಸಾಮಾನ್ಯಂ ವಿಶೇಷೋ ಬಾಧತ ಇತಿ ಚ ಪ್ರಸಿದ್ಧಂ । ಸರ್ವಾಣಾನಯನ್ನೈಕಂ ಮೈತ್ರಮಿತ್ಯಾದೌ ॥ (೮)

**1)ಅತೋ ನೈಕಾತ್ಮ್ಯತಾಂ ಮೇ ಸ್ಪೃಹಯಂತಿ ಕೇಚಿತ್ 2) ಭಕ್ತಿಮನ್ವಿಚ್ಛಂತಃ ಬ್ರಹ್ಮ ಜಿಜ್ಞಾಸಾ 3) ವಿಜ್ಞಾಯ ಪ್ರಜ್ಞಾಂ ದ್ರಷ್ಟವ್ಯ ಇತ್ಯಾದಿವಚನೇಭ್ಯಃ ॥ (೯) ಸ್ವಾರ್ಥ-ಸೇವಕಂ ಪ್ರತಿ ನ ತಥಾ ಸ್ನೇಹಃ । ಕಿಂ ದದಾಮೀತ್ಯುಕ್ತೇ ಸೇವಾದಿಯಾಚಕಂ ಪ್ರತಿ ಬಹುತರಃ ಸ್ನೇಹ ಇತಿ ಲೋಕಪ್ರಸಿದ್ಧನ್ಯಾಯಾಚ್ಚ ಭಕ್ತಿಜ್ಞಾನಾದಿಪ್ರಾರ್ಥನಾ ಕಾ-ರ್ಯೇತಿ ಸಿದ್ಧಂ ॥ ೩ ॥ ॥ ೪೭ ॥**

ಅ ॥ (೧) ಸ್ವರ್ಗವನ್ನು ಇಚ್ಛಿಸುವವನು ಯಾಗ ಮಾಡಬೇಕು ಎಂದು ಹೇಳುವ **ಸ್ವರ್ಗಕಾಮೋ ಯಜೇತ** ಇತ್ಯಾದಿ ವಾಕ್ಯಗಳಿಗೆ ತಾತ್ಪರ್ಯವು ಸರ್ವಪೂಜ್ಯರಾದ ವೇದವ್ಯಾಸರಿಂದಲೇ ಹೇಳಲ್ಪಟ್ಟಿದೆ· "ಅನಾದಿ ಕಾಲದಿಂದುಂಟಾಗತಕ್ಕ ವಿಷಯ ವಾಸನಾದಿಂದ ಕೂಡಿದ ಅಂತಃಕರಣವುಳ್ಳವರು ತತ್ಕ್ಷಣದಲ್ಲಿ ಜ್ಞಾನಕ್ಕೆ ಸಾಧನವಾದ, ಫಲೇಚ್ಛೆಯಿಲ್ಲದ ನಿವೃತ್ತಕರ್ಮವನ್ನು ಮಾಡಲಿಕ್ಕೆ ಶಕ್ತರಾಗುವುದಿಲ್ಲ. ಆದ ಕಾರಣ ಅಂತಹವರಿಗೆ ಕರ್ಮದಲ್ಲಿ ಅಭಿರುಚಿಯು ಹುಟ್ಟುವುದಕ್ಕಾಗಿ **ಸ್ವರ್ಗಕಾಮಃ** ಇತ್ಯಾದಿ ಫಲ ವನ್ನು ಹೇಳುವ ವೇದಗಳು ಪ್ರವೃತ್ತಗಳಾಗಿವೆ. (ಕರ್ಮವನ್ನು ಮಾಡಲಿಕ್ಕೆ ಪ್ರವೃತ್ತಿ ಮಾಡಿದರೆ ಕ್ರಮ ವಾಗಿ ಮೆಲ್ಲಗೆ ಫಲೇಚ್ಛೆಯನ್ನು ಬಿಡಿಸಬಹುದೆಂದು ವೇದದ ಅಭಿಪ್ರಾಯವು.) ಹೇಗೆ ಮದ್ದನ್ನು ಕುಡಿ ಸುವ ಮೊದಲು ನಾಲಿಗೆಯ ರುಚಿಗಾಗಿ ಬೆಲ್ಲ ಸಕ್ಕರೆಗಳನ್ನು ತಿನ್ನಿಸುವರೋ, ಅದರಂತೆಯೇ ವೇದಗಳು ಫಲವನ್ನು ತೋರಿಸಿ ಅಭಿರುಚಿಯನ್ನು ಹುಟ್ಟಿಸಿ ಕ್ರಮದಿಂದ ನಿಷ್ಕಾಮ ಕರ್ಮಗಳನ್ನು ವಿಧಿಸುತ್ತವೆ" ಎಂದು ಭಾಗವತದಲ್ಲಿದೆ (೨) (ಹಿಂದೆ ಹೇಳಿದ ಪ್ರಕಾರ ಕರ್ಮವೇ ವಿಧಿಸಲ್ಪಡತಕ್ಕುದು ಫಲೇ ಚ್ಛೆಯು ವಿಧಿಸಲ್ಪಡತಕ್ಕುದಲ್ಲವೆಂದು ಸಿದ್ಧವಾಯಿತು ) ಆದಕಾರಣ **ಕಾಮೀ ಯಜೇತ** ಫಲೇಚ್ಛೆಯು ಳ್ಳವನು ಯಾಗ ಮಾಡಬೇಕೆಂದು ಫಲೇಚ್ಛೆಯನ್ನನುವಾದ ಮಾಡಿ ಯಾಗವನ್ನು ವಿಧಿಸಿದ್ದಲ್ಲದೆ ಫಲೇಚ್ಛೆ ಯನ್ನು ಮಾಡಬೇಕೆಂದು ವಿಧಿಸುವುದಿಲ್ಲ. (ಅಂದರೆ ಫಲೇಚ್ಛೆಯಿಂದ ಕೂಡಿದ ಯಾಗವನ್ನು ವಿಧಿಸುವು ದೆಂದರ್ಥವಲ್ಲ. ಏವಂಚ ಕಾಮವನ್ನು ವಿಧಿಸುವುದಲ್ಲ. ಮತ್ತೆ ಕಾಮವನ್ನನುವಾದವಮಾಡಿ ಪ್ರಮಾ ಣಾಂತರದಿಂದ ಸಿಗದಿದ್ದ ಯಾಗವನ್ನೇ ವಿಧಿಸುವುದು ) (೩) (ಇಲ್ಲಿ ಭಾಸ್ಕರಾಚಾರ್ಯರ ಆಕ್ಷೇಪವು ) (ಯಾವ ಕರ್ಮವನ್ನು ಮಾಡದಿದ್ದರೆ—ಪ್ರತ್ಯವಾಯುವು ದೋಷವು) ಇದೆಯೋ, ಅದು ನಿತ್ಯವು. ಬ್ರಾಹ್ಮಣ್ಯಾದಿಗಳನ್ನೇ ನಿಮಿತ್ತವಾಗಿ ಇಟ್ಟುಕೊಂಡು ವಿಹಿತವಾದ ಸಂಧ್ಯಾವಂದನೆ ಮೊದಲಾದುದು. ಯಾವ ಕರ್ಮವನ್ನು ಮಾಡದಿದ್ದರೆ—ಪ್ರತ್ಯವಾಯುವಿದೆಯೋ, ನೈಮಿತ್ತಿಕ ಗ್ರಹಣ ಸ್ನಾನಾದಿಗಳನ್ನು ನಿಮಿತ್ತವಾಗಿ ಇಟ್ಟುಕೊಂಡು ವಿಹಿತವಾದುದು ನೈಮಿತ್ತಿಕವು. (ಅನಿತ್ಯವು ) ಇಂತಹ ನಿತ್ಯನೈಮಿತ್ತಿಕ ಕರ್ಮಗಳನ್ನು ಮೋಕ್ಷವನ್ನಿಚ್ಛಿಸುವವನು ಫಲೇಚ್ಛೆಯನ್ನು ತೊರೆದು ಮಾಡಬೇಕು ಅಲ್ಲದೆ ಜ್ಯೋತಿ ಷ್ಟೋಮಾದಿಗಳನ್ನು ಫಲೇಚ್ಛೆಯನ್ನು ತೊರೆದು ಮಾಡಕೂಡದು ಏಕೆಂದರೆ—ಫಲೇಚ್ಛೆಯಿಲ್ಲದೆ ಜ್ಯೋತಿಷ್ಟೋಮಾದಿಗಳನ್ನು ಮಾಡಬೇಕೆಂಬುವಲ್ಲಿ ಪ್ರಮಾಣವಿಲ್ಲ ಆದಕಾರಣ ಈ ವ್ಯಾಖ್ಯಾನವು ಅಯುಕ್ತವು, ಎಂದರೆ) (ಜ್ಯೋತಿಷ್ಟೋಮ ಮೊದಲಾದುದನ್ನೆ ಆರಂಭಿಸಿ ಅಂತಹ ಯಜ್ಞವಿಷಯದಲ್ಲಿ) **ನಿಷ್ಕಾಮಂ ಜ್ಞಾನಪೂರ್ವಂ ಚ** ಎಂದು ಫಲೇಚ್ಛೆಯನ್ನು ಬಿಟ್ಟು ಜ್ಞಾನಪೂರ್ವಕವಾಗಿ ಯಾಗವನ್ನು ವಿಧಿಸಿದ್ರಿಂದ ಫಲೇಚ್ಛೆಯಿಲ್ಲದೆ ಯಾಗ ಮಾಡಬೇಕೆಂಬವಲ್ಲಿ ಪ್ರಮಾಣವಿದ್ದುದರಿಂದ ನಮ್ಮ ವ್ಯಾಖ್ಯಾ ನವು ಯುಕ್ತವು. ಅಂದರೆ—ಫಲೇಚ್ಛೆಯಿಲ್ಲದೇನೇ ಯಾಗಾದಿಗಳನ್ನು ಮಾಡಬೇಕು ಎಂದು ಹೇಳಿದ್ರಿಂದ ಯಜ್ಞ ಮೊದಲಾದ ಕರ್ಮಗಳನ್ನು ವಿಧಿಸಿದಂತೆಯೇ ಆಯಿತು. **ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ** ಇತ್ಯಾದಿ ಮುಂದೆ ಹೇಳುವ ವಾಕ್ಯಗಳಿಂದಲೂ ಕಾಮನಾವನ್ನು ತೊರೆದು ಮಾಡಬೇಕೆಂದು ಸಿದ್ಧಿಸುತ್ತದೆ. (೪) ಮತ್ತು **ವಸಂತೇ ವಸಂತೇ ಜ್ಯೋತಿಷಾ ಯಜೇತ ವಿಶ್ವಜಿತಾ ಯಜೇತ** ಇತ್ಯಾದಿ

ಗಳಲ್ಲಿ ನಿತ್ಯನೈಮಿತ್ತಿಕಕರ್ಮಗಳಿಂದ ಬೇರೆಯಾದ ಜ್ಯೋತಿಷ್ಟೋಮಕಯಜ್ಞಃ ವಿಶ್ವಜಿನ್ನಾಮಕಯಜ್ಞ ಮೊದಲಾದುದನ್ನು ಫಲವನ್ನು ಹೇಳದೆ ವಿಧಿಸಿದ್ದಾರೆ. (ಅಲ್ಲಿಯೂ **ಸ್ವರ್ಗಕಾಮ** ಎಂಬ ಪದವನ್ನು ಇಟ್ಟುಕೊಳ್ಳಬೇಕೆಂದು ನಿರ್ಣಯಿಸಿರುತ್ತಾರೆ, ಎಂದರೆ—ಸ್ವರ್ಗಕಾಮನಾದಿಗಳಿದ್ದವರಿಗೆ ಮಾತ್ರ ಅಧ್ಯಾಹಾರ ಮಾಡಬೇಕು. ಹೊರತು ಮುಮುಕ್ಷುಗಳಿಗೆ ಸ್ವರ್ಗಕಾಮಪದಾಧ್ಯಾಹಾರವಿಲ್ಲ) ಕರ್ಮಫಲವನ್ನು ಇಚ್ಛಿಸಬಾರದಾದಕಾರಣ ಕರ್ಮಫಲ ಹೇತುವು ಆಗಬೇಡ ಅಂದರೆ ಕರ್ಮವನ್ನು ಮಾಡಲಿಕ್ಕೆ ಕರ್ಮಫಲವು ಹೇತುವಾಗಿ ಉಳ್ಳವರು ಆಗಬೇಡ (ಫಲವನ್ನು ಇಚ್ಛಿಸಬಾರದೆಂದಾದರೆ ಕರ್ಮವು ಸ್ವಭಾವತಃ ದುಃಖಕರವಾದುದರಿಂದ ಅದನ್ನು ಮಾಡಲಾರೆನೆಂದರೆ) **ಮಾ ತೇ** ಕರ್ಮವನ್ನು ಮಾಡದಿರುವ ವಿಷಯದಲ್ಲಿ ಸ್ನೇಹವು ಬೇಡ (ಕರ್ಮವನ್ನು ಸರ್ವಥಾ ಮಾಡದಿರಬೇಡ)(೫) ಬೇರೆ ಫಲವು ಇಲ್ಲವಾದರೂ ನನ್ನ ಪ್ರಸಾದ ಭಕ್ತಿ ಜ್ಞಾನ ವೈರಾಗ್ಯ ಮೊದಲಾದ ಉತ್ತಮ ಫಲಗಳಿವೆ (ಹೀಗಾದರೆ—ಶ್ರೀಹರಿಯ ಪ್ರಸಾದಾದಿಗಳನ್ನು ಇಚ್ಛಿಸಿಕೊಂಡು ಕರ್ಮವನ್ನು ಮಾಡಬೇಕೆಂದು ಹೇಳಿದಂತೆ ಆಯಿತು ಅದು ಯುಕ್ತವಲ್ಲ **ಮಾ ಫಲೇಷು** ಇತ್ಯಾದಿಗಳಲ್ಲಿ ಇಚ್ಛೆಯು ನಿಂದಿತವಾಗಿದೆ ಇಲ್ಲವಾದರೆ ಸ್ವರ್ಗಾದಿಗಳನ್ನು ಇಚ್ಛಿಸಬೇಕಾಗುವುದು ಆದ ಕಾರಣ ಇದು ಭಗವಂತನ ಅಭಿಪ್ರಾಯವೆಂದು ಹೇಳಿದ್ದು ಯುಕ್ತವಲ್ಲ ಎಂದರೆ) (ತಪಸ್ಸು ಮೊದಲಾದುದು ಯಾವುದು ಮಾಡಲ್ಪಟ್ಟಿತೋ, ಅವೆಲ್ಲವನ್ನು) ನಿನ್ನನ್ನು ಸಂತೋಷಗೊಳಿಸುವುದಕ್ಕಾಗಿ ಒಡಂಬಡುತ್ತೇವೆ, ಎಂದು ಭಗವಂತನನ್ನು ಸಂತೋಷಗೊಳಿಸುವುದು, ಪ್ರಾರ್ಥಿಸುವುದು, ಎಂಬ ಮಹಾತ್ಮರ ಆಚಾರವನ್ನು ಪ್ರತಿಪಾದಿಸುವ ವಚನದಿಂದ ಭಗವಂತನನ್ನು ಸಂತೋಷಗೊಳಿಸತಕ್ಕುದು, ಎಂದು ತಿಳಿಯುವುದರಿಂದ ಅಧಿಕಾರಿಗಳಿಗೆ ಭಗವತ್ಪ್ರಸಾದದ ಇಚ್ಛೆಯು ನಿಷಿದ್ಧವಲ್ಲ (೬) (ಹಾಗಾದರೆ ಭಗವತ್ಪ್ರೀತಿಕಾಮನಾವನ್ನೂ ಮಾಡಬಾರದೆಂಬ ವಿಷಯದಲ್ಲಿ **ಯಾಮಿಮಾಂ** ಇತ್ಯಾದಿ ಪ್ರಮಾಣವಿದೆ, ಎಂದು ಹೇಳಿದೆ, ಎಂದರೆ) ಭಗವಂತನನ್ನು ಸಂತೋಷಗೊಳಿಸಬಾರದು ಎಂದು ಸ್ಪಷ್ಟ ವಿಶೇಷ ನಿಂದಾವಚನವಿಲ್ಲ. (ಅಂದರೆ ಮಹಾತ್ಮರ ಆಚಾರವು ಭಗವತ್ಪ್ರೀತಿಕಾಮನಾವನ್ನು ಮಾಡಬೇಕೆಂದು ಹೇಗೆ ತಿಳಿಸುತ್ತದೋ, ಹಾಗೆಯೇ **ಕಾಮಾನ್ಯಃ ಕಾಮಯತೇ** ಇದುಮೊದಲಾದ ವಚನವು ಸ್ವರ್ಗಮೊದಲಾದ ಇತರ ಕಾಮಗಳನ್ನು ನಿಷೇಧಿಸಿದಂತೆ ಭಗವತ್ಪ್ರಸಾದಾದಿಗಳನ್ನು ನಿಷೇಧಿಸುವುದಿಲ್ಲ, ಮತ್ತೆ ಸಾಮಾನ್ಯವನ್ನು ವಿಶೇಷವು ಬಾಧಿಸುತ್ತದೆಂಬುದು ಲೋಕಪ್ರಸಿದ್ಧವಾದುದರಿಂದ ಸಾಮಾನ್ಯವಾಗಿ ಇಚ್ಛೆಯನ್ನು ನಿಂದಿಸುತ್ತದೆ ಆದಕಾರಣ ಮಹಾತ್ಮರ ಆಚಾರದಿಂದ ಭಗವತ್ಪ್ರೀತಿಕಾಮನಾ ಹೊರತು ಬೇರೆ ಇಚ್ಛೆಯನ್ನು ಮಾಡಬಾರದು, ಎಂದು ಸಂಕೋಚಮಾಡಿಕೊಳ್ಳಲ್ಪಡುತ್ತದೆ) (೭) ಆಚಾರವು ಭಗವತ್ಪ್ರೀತಿಕಾಮನಾವನ್ನು ಮಾಡಬೇಕೆಂಬ ವಿಶೇಷವಿಷಯಕವು **ಕಾಮಾನ್ಯಃ ಕಾಮಯತೇ** ಇತ್ಯಾದಿ ಕಾಮನಿಂದಾ ವಚನವು ಸಾಮಾನ್ಯವಿಷಯಕವು ಸಾಮಾನ್ಯವಿಷಯಕ ಪ್ರಮಾಣವನ್ನು ವಿಶೇಷವಿಷಯಕ ಪ್ರಮಾಣವು ಬಾಧಿಸುತ್ತದೆ ಎಂಬುವುದು ಎಲ್ಲರನ್ನು ಕರೆ, ಒಬ್ಬ ಮೈತ್ರನನ್ನು ಬೇಡ ಇತ್ಯಾದಿಗಳಲ್ಲಿ ಪ್ರಸಿದ್ಧವೇ ಆಗಿದೆ. (೮) (ಪ್ರಮಾಣಾಂತರಗಳನ್ನು ಹೇಳುತ್ತಾರೆ) ಆದಕಾರಣ (1) ಭಕ್ತಿಯನ್ನು ಇಚ್ಛಿಸುವ ಮಹಾನುಭಾವರು ಕೆಲವರು ನನ್ನ ಸಾಯುಜ್ಯವನ್ನು ಇಚ್ಛಿಸುವುದಿಲ್ಲ (2) ಬ್ರಹ್ಮಜ್ಞಾನಂ ಮೇ ಭೂಯಾತ್ ಎಂದು ಇಚ್ಛೆಯು ಇರುವಾಗ ವಿಚಾರವಾದ ಮೇಲೆ ಬ್ರಹ್ಮಜ್ಞಾನವು ಆಗುತ್ತದೆ ಹೀಗೆ ಬ್ರಹ್ಮವಿಷಯಕ ವಿಚಾರವು ಜ್ಞಾನಕ್ಕೆ ಸಾಧನವಾಗಿದೆ, ಇಚ್ಛೆಯಿಂದ ಸಾಧ್ಯವಾದುದು (3) ತಿಳಿದು ಪ್ರಜ್ಞೆಯನ್ನು ಸಂಪಾದಿಸಬೇಕು. ಭಗವಂತನನ್ನು ಅಪರೋಕ್ಷೀಕರಿಸಬೇಕು, ಇತ್ಯಾದಿ ಪ್ರಮಾಣಗಳಿಂದ (ಜ್ಞಾನೇಚ್ಛೆಯನ್ನು ಮಾಡಬೇಕೆಂಬುವುದು ಸಿದ್ಧವಾಯಿತು. (೯) ಸ್ವಾರ್ಥಕ್ಕಾಗಿ ಸೇವಿಸುವವನಲ್ಲಿ ಅಷ್ಟು ಪ್ರೀತಿಯಿಲ್ಲ ನಿನಗೆ ಏನು ಕೊಡಬೇಕೆಂದು ಕೇಳಿದಾಗ ಫಲಾಪೇಕ್ಷೆಯಿಲ್ಲದ ನಿನ್ನ ಸೇವೆ ಮಾತ್ರ ಸಾಕೆಂದು ಹೇಳುವವನಲ್ಲಿ ಹೆಚ್ಚಿನ ಸ್ನೇಹವು ಇದೆ, ಎಂಬ ಲೋಕನ್ಯಾಯದಿಂದಲೂ (ಅಂದರೆ—ನಿನ್ನ ಸೇವೆಯಿಂದ ನಿನ್ನ ಪ್ರೀತಿಯೇ ನನಗಾಗಲಿ ಎಂದು ನಿರುಪಾಧಿಕ ಸೇವೆಯನ್ನು ಮಾಡತಕ್ಕ ಭೃತ್ಯನಲ್ಲಿ ರಾಜನಿಗೆ ಎಂತಹ ಪ್ರೀತಿಯು ಇದೆಯೋ ಅಂತಹ

ಪ್ರೀತಿಯು ತನ್ನ ಪ್ರಯೋಜನಕ್ಕಾಗಿ ರಾಜನನ್ನು ಸೇವಿಸತಕ್ಕ ಭೃತ್ಯನಲ್ಲಿ ರಾಜನಿಗೆ ಇಲ್ಲ, ಎಂದು ಲೋಕ ಸಿದ್ಧವ್ಯಾಪ್ತಿಯುಳ್ಳ ಅನುಮಾನದಿಂದಲೂ (ತಥಾಚ ವಿಷ್ಣುಭಕ್ತ್ಯಾದಿಕಂ ವೈಷ್ಣವೈಃ ಪ್ರಾರ್ಥನೀಯಂ ತತ್ಪರಮಪ್ರೀತಿಸಾಧನತ್ವಾತ್ ಯದ್ಯತ್ಪರಮಪ್ರೀತಿಸಾಧನಂ ತತ್ತದೀಯೈಃ ಪ್ರಾರ್ಥನೀಯಂ ಯಥಾ ರಾಜಭೃತ್ಯೈಃ ರಾಜಸೇವಾದಿಕಂ= ಶ್ರೀವಿಷ್ಣುವಿನ ಪರಮಪ್ರೀತಿಗೆ ಸಾಧನವಾಗಿರುವುದರಿಂದ ವೈಷ್ಣವರು ವಿಷ್ಣುಭಕ್ತ್ಯಾದಿಗಳನ್ನು ಪ್ರಾರ್ಥಿಸಬೇಕು, ರಾಜಭೃತ್ಯಾದಿಗಳು ರಾಜಸೇವಾದಿಗಳನ್ನು ಪ್ರಾರ್ಥಿಸಿದಂತೆಯೆ ಎಂದು ಲೋಕಸಿದ್ಧವ್ಯಾಪ್ತಿಯುಳ್ಳ ಅನುಮಾನದಿಂದಲೂ) ಭಗವಂತನ ಭಕ್ತಿಜ್ಞಾನಾದಿಗಳನ್ನು ಪ್ರಾರ್ಥಿಸ ಬೇಕೆಂದು ಸಿದ್ಧವಾಯಿತು. ॥ ೪೭ ॥

ಪೀ—ಐಕ್ಯಭಾವನೆಯನ್ನು ಮಾಡಕೂಡದೆನ್ನುವಲ್ಲಿ ಕರ್ಮಣ್ಯೇವಾಧಿಕಾರಸ್ತೇ ಎಂಬುವುದರಿಂದ ಹೇತುವು ಹೇಳಲ್ಪಡುತ್ತದೆ. ಅದರಲ್ಲಿ ಅರ್ಜುನನಿಗೆ ಕರ್ಮವನ್ನು ಮಾಡುವ ವಿಷಯದಲ್ಲಿ ಮಾತ್ರ ಸಾಮರ್ಥ್ಯವಿದೆ. ಫಲದಾನದಲ್ಲಿ ಸಾಮರ್ಥ್ಯವಿಲ್ಲ ಎಂದೇ ಹೇಳಲ್ಪಡುತ್ತದೆ ಆದಕಾರಣ ಈ ಶ್ಲೋಕದಿಂದ ಎಲ್ಲಾ ಜೀವರಿಗೆ ಶ್ರೀ ಹರಿಯಿಂದ ಐಕ್ಯವಿಲ್ಲವೆಂದು ಸಾಧಿಸಲ್ಪಡುತ್ತದೆ ಎಂಬುದು ಹೇಗೆ? ಎಂದರೆ—

ತಾ ॥ (೧) ಕರ್ಮಾಧಿಕಾರಿಣ ಏವ ತ್ವದಾದಯೋ ಜೀವಾಃ । ಫಲಂ ತು ಮದಾಯತ್ತ- ಮಿತಿ ಭಾವಃ ॥ (೨) ಮಾ .ಕರ್ಮಫಲಹೇತುರ್ಭೂರ್ನೇಶ್ವರೋಽಹಮಿತಿ ಭಾವಂ ಕುರು ॥ (೩) ಏಷ ಉ ಏವ ಶುಭಾಶುಭೈಃ ಕರ್ಮಫಲೈರೇನಂ ಸಂಯೋಜಯತಿ ನ ಸ್ವಯಂ ಸಂಯುಕ್ತೋ ಭವತಿ ಯದೇನಂ ಕರ್ಮಫಲೈಃ ಸಂಯೋಜಯತಿ ನ ಸ್ವಯಂ ಸಂಯುಕ್ತೋ ಭವತಿ ತಸ್ಮಾದನ್ಯ ಏವಾಸೌ ಭಗವಾನ್ವೇದಿತವ್ಯ ಇತಿ (೪) ಪೈಂಗಿಶ್ರುತಿಃ ॥ ೪೭ ॥

ಅ ॥ (೧) ನೀನೇ ಮೊದಲಾದ ಎಲ್ಲಾ ಜೀವರೂ ಕರ್ಮವನ್ನು ಮಾಡುವುದರಲ್ಲಿ ಅಧಿಕಾರವುಳ್ಳವರೆ ಆಗಿರುವಿರಿ ಫಲವು ನನ್ನ ಅಧೀನವು ಎಂದು ಭಾವವು (ಅಂದರೆ ಇಲ್ಲಿ ತೇ ಎಂಬುದರಿಂದ ಅರ್ಜುನನನ್ನು ಮಾತ್ರ ಇಟ್ಟುಕೊಳ್ಳುವುದಲ್ಲ ಎಲ್ಲಾ ಜೀವರನ್ನೂ ಇಟ್ಟುಕೊಳ್ಳಬೇಕು ಜೀವರಿಗೆ ಫಲದಾನದಲ್ಲಿ ಸಾಮರ್ಥ್ಯವಿಲ್ಲ. ಶ್ರೀಹರಿಗೇನೇ ಫಲವನ್ನು ಕೊಡುವ ಸಾಮರ್ಥ್ಯವು ಇದರಿಂದ ಜೀವೇಶ್ವರರಿಗೆ ಅಭೇದ ವಿಲ್ಲವೆಂದು ಸಿದ್ಧವಾಯ್ತು (೨) ಮಾ ಕರ್ಮ ಫಲಹೇತುರ್ಭೂಃ ಕರ್ಮಫಲವನ್ನು ಕೊಡತಕ್ಕ ಶ್ರೀ ಹರಿಯೇ ನಾನೆಂದು ಭಾವಿಸಬೇಡ (೩) (ಏಕೆಂದರೆ—) ಶ್ರೀಹರಿಯೇ ಜೀವನಿಗೆ ಶುಭಾಶುಭಕರ್ಮ ಫಲಗಳನ್ನು ಕೊಡುತ್ತಾನೆ. ಕರ್ಮಫಲಗಳನ್ನು ಕೊಡತಕ್ಕ ಅಧಿಕಾರಿಯು ತಾನಾದರೂ ಆ ಕರ್ಮಫಲ ಗಳನ್ನು ತಾನು ಉಣ್ಣುವುದಿಲ್ಲ. ಜೀವನಿಗೆ ಕರ್ಮಫಲಗಳನ್ನುಣ್ಣಿಸಿದರೂ ತಾನು ಉಣ್ಣುವುದಿಲ್ಲ ಆದ ಕಾರಣ ಶ್ರೀಹರಿಯು ಜೀವರಿಂದ ಭಿನ್ನನೆಂದೇ ತಿಳಿಯತಕ್ಕದು, ಎಂದು ಪೈಂಗಿಶ್ರುತಿಯು. ॥ ೪೭ ॥

ಗೀ ॥ ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।
ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ॥೪೮॥

ಅ ॥ ಧನಂಜಯ=ಅರ್ಜುನನೇ, ಯೋಗಸ್ಥಃ= ಜ್ಞಾನೋಪಾಯದಲ್ಲಿ (ಜ್ಞಾನಕ್ಕೆ ಮುಖ್ಯಕಾರಣ ವಾದ ನಿಷ್ಕಾಮಕರ್ಮದಲ್ಲಿ) ಆಸಕ್ತನಾದವನಾಗಿ, ಸಂಗಂ=ಫಲಸ್ನೇಹವನ್ನು, ತ್ಯಕ್ತ್ವಾ ಬಿಟ್ಟು, (ತ ಏವ= ಫಲದಲ್ಲಿ ಅನುರಾಗವನ್ನು ಬಿಟ್ಟದ್ದರಿಂದಲೇ) ಸಿದ್ಧ್ಯಸಿದ್ಧ್ಯೋಃ=ಸ್ವರ್ಗಾದಿ ಫಲವು ಸಿದ್ಧಿಯಾದರೂ

ಆಗದಿದ್ದರೂ, ಸಮೋ ಭೂತ್ವಾ= ಸಮನಾಗಿ, (ಅಂದರೆ ಫಲವು ಸಿಕ್ಕಿದಾಗ ಸಂತೋಷವನ್ನೂ ಫಲವು ಸಿಗದಿರುವಾಗ ದುಃಖವನ್ನೂ ಹೊಂದದೆ ಸಮನಾಗಿಯೇ ಇದ್ದು) (ಕೇವಲ ಶ್ರೀಹರಿಯ ಅನುಗ್ರಹಕ್ಕಾಗಿ) ಕರ್ಮಾಣಿ= ನಿನಗೆ ವಿಹಿತಗಳಾದ ಧರ್ಮಗಳನ್ನು, ಕುರು= ಮಾಡು, ಸಮತ್ವಂ=ಫಲವನ್ನು ಹೊಂದಿದಾಗ ಸಂತೋಷವನ್ನು ಹೊಂದದೆಯೂ, ಫಲವು ಸಿಗದಿರುವಾಗ ದುಃಖಹೊಂದದೆಯೂ ಇದ್ದು ಶ್ರೀಹರಿಯು ಪ್ರೀತನಾಗಲಿ, ಎಂಬ ಬುದ್ಧಿಯಿಂದ ತಂತಮ್ಮ ವರ್ಣಾಶ್ರಮಗಳಿಗೆ ವಿಹಿತಗಳಾದ ಧರ್ಮಗಳನ್ನು ಮಾಡುವುದೇ ಯೋಗಃ= ಯೋಗವೆಂದು ಉಚ್ಯತೇ= ಹೇಳಲ್ಪಡುತ್ತದೆ || ೪೮ ||

ಭಾ || (೧) ಪೂರ್ವಶ್ಲೋಕೋಕ್ತಂ ಸ್ಪಷ್ಟಯತಿ | ಯೋಗಸ್ಥ ಇತಿ | ಯೋಗಸ್ಥ ಉಪಾಯಸ್ಥಃ | ಸಂಗಂ ಫಲಸ್ನೇಹಂ ತ್ಯಕ್ತ್ವಾ || (೨) ತತ ಏವ ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ | ಸ ಏವ ಚ ಮಯೋಕ್ತೋ ಯೋಗಃ || ೪೮ ||

ಅ || (೧) ಫಲೇಚ್ಛೆಯನ್ನು ಬಿಟ್ಟು ನನ್ನ ಪ್ರಸಾದಾದಿಗಳ ಉದ್ದೇಶದಿಂದಲೇ ಕರ್ಮಮಾಡು ಎಂದು ಕರ್ಮಣ್ಯೇವಾಧಿಕಾರಸ್ತೇ ಎಂಬ ಪೂರ್ವ ಶ್ಲೋಕದಲ್ಲಿ ಹೇಳಿದುದನ್ನೇ ಯೋಗಸ್ಥಃ ಎಂಬ ಶ್ಲೋಕದಿಂದ ಸ್ಪಷ್ಟೀಕರಿಸುತ್ತಾರೆ ಯೋಗಸ್ಥಃ=(ಫಲೇಚ್ಛೆಯಿಲ್ಲದಿರುವಿಕೆ, ಫಲವು ದೊರೆತರೂ ದೊರೆಯದೆ ಇದ್ದರೂ ಸಮನಾಗಿರುವಿಕೆ, ಶ್ರೀಭಗವಂತನಲ್ಲಿ ಅರ್ಪಿಸುವಿಕೆ, ಇತ್ಯಾದಿಗಳಿಂದ ಕೂಡಿದ ಕರ್ಮಗಳೇ ಯೋಗವು ) ಜ್ಞಾನೋಪಾಯವನ್ನು ಮಾಡುವವನಾಗಿ, ಸಂಗಂ= ಫಲಸ್ನೇಹವನ್ನು ಬಿಟ್ಟು, (೨) ಸಂಗವನ್ನು ಬಿಟ್ಟಪ್ರಯುಕ್ತವೇ, ಫಲವು ಲಭಿಸಿದರೂ ಲಭಿಸದೆ ಹೋದರೂ ಸಮವಾಗಿ ಯಾವುದು ಸಮತ್ವವೋ ಅದೇ ನನ್ನಿಂದ ಹೇಳಲ್ಪಟ್ಟ ಯೋಗವು

ವಿ || ಸಂಗಂ ತ್ಯಕ್ತ್ವಾ= ಶ್ರೀಹರಿಯು ನನಗೆ ಸಂತುಷ್ಟನಾಗಲಿ, ಎಂಬ ಇಚ್ಛೆಯನ್ನು ಬಿಟ್ಟು, ಎಂದು ಅದ್ವೈತಿಗಳು ವ್ಯಾಖ್ಯಾನಮಾಡಿರುವರು ಭಗವಂತನ ಪ್ರಸಾದದ ಇಚ್ಛೆಯು ಆವಶ್ಯಕವೆಂದು ಮೊದಲು ಹೇಳಿರುವುದರಿಂದ ಅದು ಅಯುಕ್ತವೇ. || ೪೮ ||

ತಾ || ಸಂಗಂ ಫಲಸ್ನೇಹಂ || ೪೮ ||

ಅ || ಸಂಗಂ= ಫಲಸ್ನೇಹವನ್ನು || ೪೮ ||

ಪೀ—ಕರ್ಮರೂಪವಾದ ಪುರುಷಾರ್ಥೋಪಾಯವು ಜ್ಞಾನರೂಪವಾದ ಪುರುಷಾರ್ಥೋಪಾಯಕ್ಕಿಂತ ನಿಕೃಷ್ಟವಾಗಿದೆ ಎನ್ನುತ್ತಾರೆ—

ಗೀ || ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ |
ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ || ೪೯ ||

ಅ || ಧನಂಜಯ= ಅರ್ಜುನನೇ, ಬುದ್ಧಿಯೋಗಾತ್= ಮೋಕ್ಷಕ್ಕೆ ಸಾಧನವಾದ ಜ್ಞಾನಯೋಗಕ್ಕಿಂತ ಕರ್ಮ= ಸ್ವರ್ಗಾದಿಗಳನ್ನುದ್ದೇಶಿಸಿ ಮಾಡಿದ ಕಾಮ್ಯಕರ್ಮವು ದೂರೇಣ ಅವರಂ= ಅತ್ಯಂತ ನಿಕೃಷ್ಟವು ಹಿ= ಪ್ರಮಾಣಪ್ರಸಿದ್ಧವು. (ಆದಕಾರಣ) ಬುದ್ಧೌ= ಮೋಕ್ಷಕ್ಕೆ ಸಾಧನವಾದ ಜ್ಞಾನರೂಪ ಉಪಾಯದಲ್ಲಿ, ಶರಣಂ= ಜ್ಞಾನಕ್ಕೆ ಉಪಾಯಭೂತವಾದ ಯೋಗಾನುಷ್ಠಾನರೂಪವಾದ ಸ್ಥಿತಿಯನ್ನು ಅನ್ವಿಚ್ಛ= ಮಾಡು (ಜ್ಞಾನವನ್ನು ಸಂಪಾದಿಸಿಕೊಳ್ಳು) (ಕರ್ಮವು ಜ್ಞಾನಕ್ಕಿಂತ ನಿಕೃಷ್ಟವು ಹೇಗೆ

ಆಗುವುದೆಂದರೆ) ಫಲಹೇತವಃ=ಕರ್ಮಮಾಡುವ ವಿಷಯದಲ್ಲಿ ಫಲವೇ ಕಾರಣವೆಂದು ತಿಳಿದವರು, (ಕಾಮ್ಯ ಕರ್ಮಿಗಳು) ಕೃಪಣಾಃ=(ಇಮಂ ಲೋಕಂ ಹೀನತರಂ ವಾ ವಿಶಂತಿ ಎಂದು ಹೇಳಿದ ಕಾರಣ) ದೀನರು ದುಃಖವುಳ್ಳವರು ಅಥವಾ ಜ್ಞಾನ ಹುಟ್ಟಿದ ಮೇಲೂ ವಿಷ್ಣುವನ್ನೇ ಶರಣು ಹೊಂದು. ಏಕೆಂದರೆ=ಜೀವಬ್ರಹ್ಮೈಕ್ಯವನ್ನು ತಿಳಿಯುವವರು, ತಮಸ್ಸನ್ನು ಹೊಂದುವವರು. ॥ ೪೯ ॥

ಪೀ— ಯೋಗೋಪದೇಶವನ್ನು ಪಕ್ರಮಿಸಿ ಕರ್ಮವು ಬುದ್ಧಿಯೋಗಕ್ಕಿಂತ ನಿಕೃಷ್ಟವೆಂದು ಏಕೆ ಹೇಳುವುದೆಂದರೆ—

**ಭಾ ॥ ಇತಶ್ಚ ಯೋಗಾಯ ಯುಜ್ಯಸ್ವೇತ್ಯಾಹ । ದೂರೇಣೇತಿ । ಬುದ್ಧಿಯೋಗಾಜ್ಜ್ಞಾನ-ಲಕ್ಷಣಾದುಪಾಯಾತ್ । ದೂರೇಣ ಅತೀವ । ಅತೋ ಬುದ್ಧೌ ಶರಣಂ ಜ್ಞಾನೇ ಸ್ಥಿತಿಂ । ಫಲಂ ಕರ್ಮಕೃತೌ ಹೇತುರ್ಯೇಷಾಂ ತೇ ಫಲಹೇತವಃ ॥ ೪೯ ॥**

ಅ ॥ ಕರ್ಮವು ನಿಕೃಷ್ಟವಾದ ಕಾರಣ ಜ್ಞಾನೋಪಾಯಕ್ಕೋಸ್ಕರ ಪ್ರಯತ್ನ ಮಾಡು, ಎಂದು **ದೂರೇಣ** ಎಂಬ ಶ್ಲೋಕದಿಂದ ಹೇಳುತ್ತಾರೆ (ಅಂದರೆ— **ಯಾವಾನರ್ಥಃ** ಎಂಬ ಶ್ಲೋಕದಲ್ಲಿ ಕರ್ಮ ಫಲವು ಜ್ಞಾನಫಲಕ್ಕಿಂತ ಕಡಿಮೆಯಾದಕಾರಣ ಯೋಗಕ್ಕೆ ಪ್ರಯತ್ನಿಸು, ಎಂದು ಹೇಳಿದ್ದಾರೆ **ದೂರೇಣ** ಎಂಬ ಶ್ಲೋಕದಲ್ಲಿ ಆ ವಿಷಯದಲ್ಲಿಯೇ ಕರ್ಮರೂಪ ಪುರುಷಾರ್ಥೋಪಾಯಕ್ಕೆ ಜ್ಞಾನರೂಪ ಉಪಾಯಕ್ಕಿಂತ ನಿಕೃಷ್ಟತ್ವರೂಪವಾದ ಹೇತ್ವಂತರವು ಹೇಳಲ್ಪಡುತ್ತದೆ) ಬುದ್ಧಿಯೋಗಾತ್=ಜ್ಞಾನರೂಪ ಉಪಾಯಕ್ಕಿಂತ, ದೂರೇಣ=ಅತ್ಯಂತವಾಗಿ ಆದಕಾರಣ, ಬುದ್ಧೌ=ಜ್ಞಾನದಲ್ಲಿ, ಶರಣಂ=ಜ್ಞಾನಕ್ಕೆ ಉಪಾಯಭೂತವಾದ ನಿವೃತ್ತ ಕರ್ಮಾನುಷ್ಠಾನರೂಪವಾದ ಸ್ಥಿತಿಯನ್ನು, ಫಲಹೇತವಃ=ಫಲೇಚ್ಛೆಯು ಕರ್ಮ ಮಾಡುವ ವಿಷಯದಲ್ಲಿ ಕಾರಣವಾಗಿ ಉಳ್ಳವರು (ಅಂದರೆ ಫಲವನ್ನಪೇಕ್ಷಿಸಿ ಕರ್ಮಮಾಡುವವರು) ॥ ೪೯ ॥

ಪೀ—ಜ್ಞಾನಕ್ಕಿಂತ ಕರ್ಮವು ನಿಕೃಷ್ಟವೆಂದು ಹೇಳಿದೆ ಹಾಗಾದರೆ ಜ್ಞಾನವು ಉತ್ತಮವಾಗಿರುವುದರಿಂದ ಜ್ಞಾನಾವಸ್ಥೆಯಲ್ಲಿ ಈಶ್ವರೈಕ್ಯವನ್ನು ತಿಳಿಯುವುದು ಯುಕ್ತವೆಂದರೆ—

**ತಾ ॥ (೧) ಬುದ್ಧೌ ಜಾತಾಯಾಮಪಿ ವಿಷ್ಣುಮೇವ ಶರಣಮನ್ವಿಚ್ಛ । ಅಜ್ಞಾನಾಂ ಜ್ಞಾನಿನಾಂ ಚೈವ ಮುಕ್ತಾನಾಂ ಶರಣಂ ಹರಿಃ । ತಂ ಯೋ ಸ್ವೈಕ್ಯೇನ ಮನ್ಯಂತೇ ಸರ್ವಭಿನ್ನಂ ಗುಣೋಚ್ಛ್ರಯಾತ್ । ಕೃಪಣಾಸ್ತೇ ತಮಸ್ಯಂಧೇ ನಿಪತಂತಿ ನ ಸಂಶಯಃ ॥ (೨) ನ ತೇಷಾಮುತ್ಥಿತಿಃ ಕ್ವಾಪಿ ನಿತ್ಯಾತಿಶಯದುಃಖಿನಾಂ । ಗುಣಭೇದವಿದಾಂ ವಿಷ್ಣೋರ್ಭೇದಾಭೇದವಿದಾಮಪಿ । ದೇಹಕರ್ಮಾದಿಷು ತಥಾ ಪ್ರಾದುರ್ಭಾವಾದಿಕೇಽಪಿ ವಾ ॥ (೩) ಸ್ವೋದ್ರಿಕ್ತಾನಾಂ ತದೀಯಾನಾಂ ನಿಂದಾಂ ಕುರ್ವಂತಿ ಯೇಽಪಿ ಚ । ಸರ್ವೇಷಾಮಪಿ ಚೈತೇಷಾಂ ಗತಿರೇಷಾ ನ ಸಂಶಯಃ ॥ ಇತಿ ನಾರದೀಯೇ ॥ ೪೯ ॥**

ಅ ॥ (೧) ಜ್ಞಾನವು ಹುಟ್ಟಿದ ಮೇಲೆಯೂ ಶ್ರೀವಿಷ್ಣುವನ್ನೇ ಮರೆ ಹೊಕ್ಕು, ಅಜ್ಞಾನಿಗಳಿಗೂ ಜ್ಞಾನಿಗಳಿಗೂ, ಮುಕ್ತರಿಗೂ ಸಹ ಶ್ರೀಹರಿಯೇ ರಕ್ಷಕನು ಅಂತಹ ಸರ್ವಗುಣಪೂರ್ಣನಾದುದರಿಂದ ಸರ್ವರಿಂದ ಭಿನ್ನನಾದ ಶ್ರೀಹರಿಯನ್ನು ತನ್ನಿಂದ ಅಭಿನ್ನನೆಂದು ಯಾರು ತಿಳಿಯುತ್ತಾರೋ, ಅವರು ಕೃಪಣರು

ಅಂಧತಮಸ್ಸಿನಲ್ಲಿ ಬೀಳುತ್ತಾರೆ, ಸಂಶಯವಿಲ್ಲ (೨) ನಿತ್ಯದಲ್ಲಿ ಅತಿಶಯ ದುಃಖವುಳ್ಳ ಅವರು ಯಾವಾಗಲೂ ಹಿಂತೆರಳುವುದಿಲ್ಲ. ಶ್ರೀವಿಷ್ಣುವಿಗೂ ಅವನ ಗುಣಗಳಿಗೂ ಭೇದವನ್ನು ತಿಳಿದವರೂ, ದೇಹ ಕರ್ಮಾದಿಗಳಲ್ಲಿಯೂ, ಅವತಾರಾದಿ ರೂಪಗಳಲ್ಲಿಯೂ ಭೇದಾಭೇದವನ್ನು ತಿಳಿದವರಿಂಗೂ (೩) ತಮಗಿಂತ ಉತ್ತಮರಾದ ವಿಷ್ಣುಭಕ್ತರ ನಿಂದೆಯನ್ನು ಮಾಡುವವರೆಲ್ಲರಿಗೂ, ಅಂಧಂತಮಸ್ಸೇ ಗತಿಯು. ಸಂದೇಹವಿಲ್ಲ, ಎಂದು ನಾರದೀಯದಲ್ಲಿದೆ ॥ ೪೯ ॥

ಪೀ—ಈಗ ಕರ್ಮಫಲಕ್ಕಿಂತ ಜ್ಞಾನಫಲವು ವಿಲಕ್ಷಣವಾಗಿದೆ, ಎನ್ನುತ್ತಾರೆ—

## ಗೀ ॥ ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।
## ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಂ ॥೫೦॥

ಅ ॥ ಇಹ=ಮುಮುಕ್ಷುವರ್ಗದಲ್ಲಿ ಬುದ್ಧಿಯುಕ್ತಃ=ಭಗವಂತನ ಅಪರೋಕ್ಷಜ್ಞಾನವುಳ್ಳವನು, ಉಭೇ ಸುಕೃತದುಷ್ಕೃತೇ=ಪುಣ್ಯಪಾಪಗಳೆರಡನ್ನೂ, ಜಹಾತಿ=ಬಿಡುತ್ತಾನೆ, (ಅಂದರೆ ಪುಣ್ಯದ ಮಧ್ಯದಲ್ಲಿ ಉಪಾಸನಾದಿಗಳಿಂದುಂಟಾದ, ಜ್ಞಾನವನ್ನು ವೃದ್ಧಿಗೊಳಿಸುವ ಮತ್ತು ಮೋಕ್ಷದಲ್ಲಿ ಆನಂದಾಧಿಕ್ಯವನ್ನುಂಟುಮಾಡುವ ಪುಣ್ಯ ಹೊರತು ಉಳಿದ ಅನಿಷ್ಟವಾದ ಮಾನುಷ್ಯಸ್ವರ್ಗಾದಿಗಳನ್ನು ಹೊಂದಿಸಿಕೊಡುವ ಪುಣ್ಯವನ್ನು ಬಿಡುತ್ತಾನೆ ಎಲ್ಲಾ ಪಾಪವನ್ನು ಬಿಡುತ್ತಾನೆ) ತಸ್ಮಾತ್=ಹೀಗೆ ಜ್ಞಾನವು ಎಲ್ಲಾ ಕ್ಲೇಶಗಳನ್ನು ನಿವೃತ್ತಿಗೊಳಿಸಿ ಪರಮಾನಂದಾನುಭವಕ್ಕೆ ಕಾರಣವಾಗಿರುವುದರಿಂದ, ಯೋಗಾಯ=ಜ್ಞಾನೋಪಾಯಕರ್ಮೋಸ್ಕರ, ಯುಜ್ಯಸ್ವ=ಸನ್ನದ್ಧನಾಗು ಪ್ರಯತ್ನಿಸು, ಯೋಗಃ=ಜ್ಞಾನೋಪಾಯವು, ಕರ್ಮಸು=ಕರ್ಮಗಳಲ್ಲಿ ಕೌಶಲಂ=ಶ್ರೇಷ್ಠವು ಅಥವಾ ಕರ್ಮಗಳ ಮಧ್ಯದಲ್ಲಿ ಭಗವಂತನ ಜ್ಞಾನವನ್ನು ಸಂಪಾದಿಸಿಕೊಂಡು ಫಲದಲ್ಲಿ ಸ್ನೇಹತೊರೆದು ಭಗವಂತನ ಪ್ರೀತಿಗಾಗಿ ಮಾಡತಕ್ಕ ಕರ್ಮವು ಕೌಶಲ (ಶ್ರೇಷ್ಠ)ವೆನಿಸುತ್ತದೆ. ಅದೇ ಯೋಗವು ಆದಕಾರಣ ಫಲಸ್ನೇಹವಿಲ್ಲದ ಕರ್ಮವೇ ಜ್ಞಾನೋಪಾಯವು ॥ ೫೦ ॥

ಭಾ ॥ (೧) ಜ್ಞಾನಫಲಮಾಹ । ಬುದ್ಧಿಯುಕ್ತ ಇತಿ । ಸುಕೃತಮಪ್ಯಪ್ರಿಯಂ ಮಾನುಷ್ಯಾದಿಫಲಂ ಜಹಾತಿ । ನ ಬೃಹತ್ಫಲಮುಪ್ಯುಪಾಸನಾದಿನಿಮಿತ್ತಂ ॥ (೨) ನ ಹಾಸ್ಯ ಕರ್ಮ ಕ್ಷೀಯತೇ । ಅವಿದಿತ್ವಾಽಸ್ಮಿಂಲ್ಲೋಕೇ ಜುಹೋತಿ ಯಜತೇ ತಪಸ್ತಪ್ಯತೇ ಬಹೂನಿ ವರ್ಷಸಹಸ್ರಾಣ್ಯಂತವದೇವಾಸ್ಯ ತದ್ಭವತೀತ್ಯಾದಿಶ್ರುತಿಸ್ಮೃತಿಭ್ಯಃ । ಅತಃ ಕರ್ಮಕ್ಷಯಶ್ರುತಿರಜ್ಞಾನಿವಿಷಯಾ ಸರ್ವತ್ರ ॥ (೩) ಉಭಯಕ್ಷಯಶ್ರುತಿರಪ್ಯನಿಷ್ಟವಿಷಯಾ । ನ ಹೀಷ್ಟಪುಣ್ಯಕ್ಷಯೇ ಕಿಂಚಿತ್ಪ್ರಯೋಜನಂ । ನ ಚೇಷ್ಟನಾಶೋ ಜ್ಞಾನಿನೋ ಯುಕ್ತಃ । ಇಷ್ಟಾಶ್ಚ ಕೇಚಿದ್ವಿಷಯಾಃ ॥ (೪) (1) ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ (2) ಪ್ರಜಾಪತೇಃ ಸಭಾಂ ವೇಶ್ಮ ಪ್ರಪದ್ಯೇ(3) ಯಶೋಽಹಂ ಭವಾನಿ ಬ್ರಾಹ್ಮಣಾನಾಂ (4) ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾ (5) ಅಸ್ಮಾಚ್ಛರೀರಾತ್ಮನೋ ಯದ್ಯತ್ಕಾಮಯತೇ ತತ್ತತ್ಸೃಜತೇ (6) ಕಾಮಾನ್ನೀ ಕಾಮರೂಪ್ಯನುಸಂಚರನ್ (7) ಸ ಏಕಧಾ ಭವತೀತ್ಯಾದಿಶ್ರುತಿಭ್ಯಃ ॥ ೧ ॥

**ಅ ॥ (೧) ಬುದ್ಧಿಯುಕ್ತಃ** ಎಂಬ ಶ್ಲೋಕದಿಂದ ಜ್ಞಾನಫಲವು ಕಾಮ್ಯಕರ್ಮಫಲಕ್ಕಿಂತ ವಿಲಕ್ಷಣವೆನ್ನುತ್ತಾರೆ. (ಬುದ್ಧಿಯುಕ್ತಃ=ಪರೋಕ್ಷಜ್ಞಾನಿಯು) (ಇಲ್ಲಿ ದುಷ್ಕೃತದಂತೆ ಸುಕೃತವನ್ನು ಎಲ್ಲಾದನ್ನು ಬಿಡುವುದಿಲ್ಲ. ಅದನ್ನು ಸಂಕೋಚಮಾಡಿಕೊಳ್ಳಬೇಕೆನ್ನುತ್ತಾರೆ.) ಸುಕೃತ ಪುಣ್ಯವಾದುದಾಗ್ಯೂ ಅಪ್ರಿಯವಾದ ಮಾನುಷ್ಯ ರಾಜಭೋಗಾದಿ ಫಲವನ್ನು ಬಿಡುತ್ತಾರೆ (ಮೋಕ್ಷವಾಗುವುದಕ್ಕಿಂತ ಮೊದಲು ಜ್ಞಾನ ಭಕ್ತಿ ವೈರಾಗ್ಯ ಮೊದಲಾದ ಗುಣಗಳ ಅಭಿವೃದ್ಧಿಗೆ ಕಾರಣವಾದುದು ಮೋಕ್ಷವಾದ ಮೇಲೆ ಜ್ಞಾನ ಮೊದಲಾದ ಗುಣಗಳ ಅಭಿವೃದ್ಧಿಗೂ ಆನಂದಾಭಿವೃದ್ಧಿಗೂ ಕಾರಣವಾದುದೂ ಆದ ಉಪಾಸನಾ ನಿವೃತ್ತಕರ್ಮಗಳಿಂದುಂಟಾದ ಸುಕೃತವನ್ನು ಬಿಡುವುದಿಲ್ಲ (೨) (ಸುಕೃತ ಶಬ್ದದಿಂದ ಪ್ರಿಯಸುಕೃತವನ್ನು ಇಟ್ಟುಕೊಳ್ಳಬೇಕೆಂದು ಸಂಕೋಚಮಾಡಿಕೊಳ್ಳುವುದು ಏತಕ್ಕೆಂದರೆ) ಈ ಜ್ಞಾನಿಯ ಕರ್ಮವು (ಅಂದರೆ—ಮುಕ್ತಿಯಿಂದ ಮೊದಲು ಜ್ಞಾನಮೊದಲಾದ ಗುಣಗಳ ಅಭಿವೃದ್ಧಿಯನ್ನು ಮಾಡತಕ್ಕುದೂ, ಆ ಮೇಲೆ ಆನಂದ ವೃದ್ಧಿಯನ್ನು ಮಾಡತಕ್ಕುದೂ ಆದ ಉಪಾಸನಾದಿಗಳಿಂದುಂಟಾದ ಸುಕೃತವು) (ಕರ್ಮದ ಫಲವೂ ಅನಂತವಾಗಿರುವುದರಿಂದ) ನಾಶಹೊಂದುವುದಿಲ್ಲ ಪರಮಾತ್ಮನನ್ನು ತಿಳಿಯದೆ ಈ ಲೋಕದಲ್ಲಿ ಹೋಮಿಸುತ್ತಾನೋ, ದಾನಮಾಡುತ್ತಾನೋ, ಸಾವಿರಾರು ವರ್ಷಗಳಲ್ಲಿ ಕೃಚ್ಛ್ರಚಾಂದ್ರಾಯಣ ಮೊದಲಾದ ತಪಸ್ಸು ಮಾಡುತ್ತಾನೋ ಅವೆಲ್ಲವೂ ನಾಶವುಳ್ಳದ್ದೇ ಆಗುತ್ತದೆ, ಇದುಮೊದಲಾದ ವೇದಗಳಿಂದ (ಜ್ಞಾನಿಗಳ ಸುಕೃತಕ್ಕೆ ನಾಶವಿಲ್ಲವೆಂದು ತೋರುತ್ತದೆ ) ಹಾಗಾದರೆ **ನಾಸ್ತ್ಯಕೃತಃ ಕೃತೇನ** ಮೋಕ್ಷವು ಕರ್ಮದಿಂದ ಸಿದ್ಧಿಸುವುದಿಲ್ಲ, ಎಂದು ಇದ್ದಪ್ರಯುಕ್ತ ಈ ವೇದಗಳು ಅಬಾಧಿತವಾದ ಅರ್ಥವನ್ನು ನಿರ್ಧರಿಸಲಿಕ್ಕೆ ಸಮರ್ಥಗಳಲ್ಲ, ಎಂದರೆ) **ನ ಹಾಸ್ಯ** ಎಂಬ ವಿಶೇಷಶ್ರುತಿಯು ಪ್ರಬಲವಾದ ಪ್ರಯುಕ್ತ **ಕ್ಷೀಯಂತೇ ಚಾಸ್ಯ ಕರ್ಮಾಣಿ** ಎಂದು ಕರ್ಮಗಳು ನಾಶಹೊಂದುತ್ತವೆಂದು ಹೇಳುವ ವೇದವು ಎಲ್ಲಾ ಕಡೆಗಳಲ್ಲಿಯೂ ಅಜ್ಞಾನಿವಿಷಯಕವು (ಅಂದರೆ ಅಜ್ಞಾನಿಗಳ ಕರ್ಮವು ನಾಶವಾಗುತ್ತದೆಂದು ಅರ್ಥವು ) (೩) **ಕ್ಷೀಯಂತೇ ಚಾಸ್ಯ ಕರ್ಮಾಣಿ** ಎಂದು ಜ್ಞಾನಿಗಳದ್ದು ಕರ್ಮವು ನಾಶವಾಗುತ್ತದೆಂದು ತೋರುತ್ತದೆಂದರೆ **ನ ಹಾಸ್ಯ** ಎಂಬ ನಿರವಕಾಶ ಶ್ರುತಿವಿರೋಧದಿಂದ ಜ್ಞಾನಿಗಳ ದುಷ್ಕರ್ಮವು ನಾಶಹೊಂದುತ್ತದೆಂದು ಅರ್ಥವು. **ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ** ಎಂದು ಜ್ಞಾನಿಗಳ ಪುಣ್ಯಪಾಪಗಳಿಗೆ ನಾಶವು ಬರುತ್ತದೆಂದು ಹೇಳುವ ವೇದವು ಇದೆ ಎಂದರೆ—) ಪುಣ್ಯಪಾಪಗಳು ಎರಡೂ ನಾಶವಾಗುತ್ತವೆಂದು ಹೇಳುವ ವೇದವು ಅನಿಷ್ಟವಾದ ಪುಣ್ಯವೂ ಎಲ್ಲಾ ಪಾಪವೂ ನಾಶಹೊಂದುತ್ತದೆಂದೇ ಹೇಳುತ್ತದೆ (ಮತ್ತು ಜ್ಞಾನಿಗಳದ್ದು ಎಲ್ಲಾ ಪುಣ್ಯಗಳೂ ನಾಶಹೊಂದುತ್ತವೆಂಬುದು ಯುಕ್ತಿವಿರುದ್ಧವೂ ಆಗಿದೆ. ಹೇಗೆಂದರೆ ಉಪಾಸನಾದಿಗಳಿಂದುಂಟಾದ ಸುಕೃತವು ಜ್ಞಾನಿಗಳಿಗೆ ಇಷ್ಟವೋ, ಅನಿಷ್ಟವೋ, ಇಷ್ಟವೆಂದರೆ - ಆ ಇಷ್ಟವಾದ ಪುಣ್ಯವು ಅವರವರ ಇಚ್ಛೆಯಿಂದ ನಾಶಹೊಂದುತ್ತದೆ ಎಂದರೆ —) ಇಷ್ಟವಾದ ಪುಣ್ಯವು ನಾಶ ಹೊಂದಿದರೆ ಯಾವುದೊಂದು ಪ್ರಯೋಜನವೂ ಇಲ್ಲ (ಆದಕಾರಣ ಜ್ಞಾನಿಯು ಇಷ್ಟವಾದ ಪುಣ್ಯವು ನಾಶವಾಗಬೇಕೆಂದು ಸರ್ವಥಾ ಇಚ್ಛಿಸಲಾರ.) (ಪುಣ್ಯವು ಇಷ್ಟವಾದುದಾಗ್ಯೂ ಜ್ಞಾನಸ್ವಭಾವದಿಂದಲೇ ನಾಶ ಹೊಂದುತ್ತದೆ ಎಂದರೆ) ಜ್ಞಾನಿಯಾದವನಿಗೆ ಇಷ್ಟವಾದ ಪುಣ್ಯವು ನಾಶವಾಗುವುದು ಯುಕ್ತವಲ್ಲ (ಏಕೆಂದರೆ ಜ್ಞಾನವು ಪುರುಷಾರ್ಥವಾಗದೆ ಹೋಗುವುದು.) (ಉಪಾಸನಾದಿಗಳಿಂದುಂಟಾದ ಸುಕೃತವು ಜ್ಞಾನಿಗೆ ಅನಿಷ್ಟವು ಎಂದರೆ—ಅನಿಷ್ಟವೆಂದು ಹೇಳಲಿಕ್ಕೆ ಕಾರಣವೇ ಇಲ್ಲ.) (ಫಲವಿಲ್ಲದಿರುವುದರಿಂದ ಅನಿಷ್ಟವೆಂದರೆ) ಮೋಕ್ಷದಲ್ಲಿ ಅಲೌಕಿಕಗಳಾದ ಕೆಲವು ವಿಷಯಗಳು ಇಷ್ಟಗಳಾಗಿವೆ (ಅವುಗಳ ಪ್ರಾಪ್ತಿಯು ಸುಕೃತಫಲವು ) (೪) (ಮುಕ್ತನು ಮೋಕ್ಷದಲ್ಲಿ ವಿಷಯಗಳನ್ನು ಇಚ್ಛಿಸುತ್ತಾನೆಂದು ಯಾವ ಪ್ರಮಾಣದಿಂದ ಸಿದ್ಧಿಸುತ್ತದೆ ಎಂದರೆ) (1) ಬ್ರಹ್ಮಜ್ಞಾನಿಯು ಪಿತೃಗಳನ್ನು ನೋಡಬೇಕೆಂದು ಇಚ್ಛಿಸಿದರೆ—ಈ ಜ್ಞಾನಿಯ ಇಚ್ಛಾಮಾತ್ರದಿಂದಲೇ ಪಿತೃಗಳು ಜ್ಞಾನಿಯ ಇದಿರು ಬಂದು ನಿಲ್ಲುತ್ತಾರೆ (2) ಬ್ರಹ್ಮರುದ್ರ ಮೊದಲಾದ ಪ್ರಜೆಗಳಿಗೆ ಸ್ವಾಮಿಯಾದ ಶ್ರೀವಿಷ್ಣುವಿನ ಸಭಾ

ಗೃಹವನ್ನು ಅಥವಾ ಸಭೆಯನ್ನು ಮನೆಯನ್ನಾಗಲೀ ಹೊಂದುವೆನು (3) ಬ್ರಾಹ್ಮಣ ಮೊದಲಾದ ಎಲ್ಲಾ ವರ್ಣಗಳ ಮಧ್ಯದಲ್ಲಿ ಅಥವಾ ಬ್ರಾಹ್ಮಣರಿಂದ ನಾನು ಯಶಸ್ಸುಳ್ಳವನು ಆಗುವೆನು. (4) ಸ್ತ್ರೀಯರಿಂದ ಕ್ರೀಡಿಸುತ್ತಾರೆ ವಾಹನಗಳಿಂದ ಸಂಚರಿಸುತ್ತಾರೆ. (5) ಮುಕ್ತನು ಯಾವುದು ಯಾವುದನ್ನು ಇಚ್ಛಿಸುತ್ತಾನೋ, ಅದದನ್ನು ಕರ್ಮವು ತನ್ನಿಂದ ಸಂತೋಷಿಸಲ್ಪಟ್ಟ ಶ್ರೀಪರಮಾತ್ಮನ ಪ್ರಸಾದದಿಂದ ಸೃಷ್ಟಿಸುತ್ತದೆ (6) ಇಚ್ಛಾನುಸಾರವಾದ ಅನ್ನವುಳ್ಳವನಾಗಿ ಇಚ್ಛಾನುಸಾರವಾದ ರೂಪವುಳ್ಳವನಾಗಿ ಸಂಚರಿಸುತ್ತಿರುತ್ತಾನೆ (7) ಭೂಮೋಪಾಸಕನು ಮುಕ್ತಿಯಲ್ಲಿ ಇಚ್ಛಾನುಸಾರವಾಗಿ ಒಂದು ರೂಪವುಳ್ಳವನೂ, ಹತ್ತುರೂಪವುಳ್ಳವನೂ ಆಗುತ್ತಾನೆ ಇದುಮೊದಲಾದ ವೇದಪ್ರಮಾಣಗಳಿಂದ ಇಷ್ಟಗಳಾದ ವಿಷಯಗಳ ಪ್ರಾಪ್ತಿಯು ಸುಕೃತಫಲವೆಂದು ಹೇಳಲ್ಪಡತ್ತದೆ

ವಿ ॥ (1) ಉಪಾಸನಾ, ನಿವೃತ್ತಕರ್ಮ, ಇತ್ಯಾದಿಗಳನ್ನೇ ಅಪರೋಕ್ಷಜ್ಞಾನಿಯು ಮಾಡುವುದಿಲ್ಲ. ಕರ್ಮದಿಂದ ಪುಣ್ಯವು ಉಂಟಾಗುವುದಿಲ್ಲ, ಎಂಬ ಪರರ ವ್ಯಾಖ್ಯಾನವು **ಆತ್ಮಾನಮೇವ ಲೋಕಮುಪಾಸೀತ** ಎಂದು ಉಪಾಸನವನ್ನು ವಿಧಾನಮಾಡಿ **ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮ ಕ್ಷೀಯತೇ** ಎಂದು ಉಪಾಸನೆಯಿಂದುಂಟಾದ ಪುಣ್ಯವು ನಾಶಹೊಂದುವುದಿಲ್ಲ, ಎಂದು ಹೇಳಿದ್ದರಿಂದ ನಿರಸ್ತವಾಯ್ತು ಹೀಗೆ ಮುಕ್ತನಿಗೂ ವಿಷಯಗಳಲ್ಲಿ ಅಭಿಲಾಷೆಯು ಇದೆ ಎಂದು ಸಮರ್ಥಿಸಿರುವರು ಈಗ ಅದನ್ನು ಆಕ್ಷೇಪಿಸಿ ಮುಕ್ತನಿಗೆ ವಿಷಯಭೋಗಪ್ರಕಾರವನ್ನು ಸಮರ್ಥಿಸುತ್ತಾರೆ (2) ಹೇಗೆಂದರೆ ಮುಕ್ತನು ಸುಖರೂಪ ಪ್ರಯೋಜನಕ್ಕಾಗಿ ವಿಷಯಗಳನ್ನು ಇಚ್ಛಿಸುತ್ತಾನೆಂದು ಹೇಳಲಾಗುವುದಿಲ್ಲ ಏಕೆಂದರೆ ಸ್ವಯೋಗ್ಯ ಬಿಂಬಾಪರೋಕ್ಷಜ್ಞಾನದಿಂದ ಆವರಣರೂಪವಾದ (ತನ್ನ ಗುಣಗಳಿಗೆ ಆಚ್ಛಾದಕವಾದ) ಅವಿದ್ಯೆಯು ನಾಶವಾದಾಗ ಆತ್ಮನ ಸ್ವರೂಪಭೂತವಾದ ಸುಖವು ಅಭಿವ್ಯಕ್ತವಾಗುವುದು ಆಗ ಮನೋವೃತ್ತಿರೂಪವಾದ ಬಾಹ್ಯಸುಖವು ಇಲ್ಲವೇ ಇಲ್ಲ (3) ಲಿಂಗ ಶರೀರವೇ ದುಃಖವನ್ನು ಹೊಂದಿಸತಕ್ಕುದಾದ ಪ್ರಯುಕ್ತ ಅವಿದ್ಯೆಯು (ಲಿಂಗಶರೀರವು) ನಾಶವಾದೊಡನೆಯೇ ದುಃಖವೂ ನಾಶವಾಗುವುದರಿಂದ ದುಃಖನಿವೃತ್ತಿಗಾಗಿ ಮುಕ್ತನು ವಿಷಯಗಳನ್ನು ಇಚ್ಛಿಸುತ್ತಾನೆಂದೂ ಆಗುವುದಿಲ್ಲ, ಎಂದರೆ—ಅವಿದ್ಯೆಯು ಮಾತ್ರ ಆತ್ಮಸ್ವರೂಪಕ್ಕೆ ಆವರಣವಲ್ಲ ಈಶ್ವರೇಚ್ಛೆಯೂ ಆತ್ಮಸ್ವರೂಪಕ್ಕೆ ಆವರಣವಾಗಿದೆ (4) ಏವಂಚ ಅಪರೋಕ್ಷಜ್ಞಾನಾನಂತರದಲ್ಲಿ ಕರ್ಮಗಳು ನಾಶವಾದಾಗ ಕಾರ್ಯಗಳಿಗೆ ನಿಯಾಮಕನಾದ ಚತುರ್ಮುಖನಿಂದ ಕೂಡಿ ಹೋದವರಿಗೆ ಸತ್ವರಜಸ್ತಮೋಗುಣಗಳಿಂದ ಪರದಲ್ಲಿರತಕ್ಕ ವಿರಜಾನದಿಯಲ್ಲಿ ಸ್ನಾನ ಮಾಡಿದ್ದರಿಂದ ಮೊದಲೇ ಸುಟ್ಟ ಬಟ್ಟೆಯಂತಿರುವ ಲಿಂಗಶರೀರಕ್ಕೆ ಸರ್ವಥಾ ನಾಶವಾದಾಗ ಸಂಪೂರ್ಣ ಅನಿಷ್ಟನಿವೃತ್ತಿಯಾಗುತ್ತದೆ. ಆ ಮೇಲೆ ಪ್ರಲಯಕಾಲದಲ್ಲಿ ಶ್ರೀಹರಿಯ ಉದರವನ್ನು ಪ್ರವೇಶ ಮಾಡಿದವರಿಗೆ ಬಹುತರವಾದ ಸ್ವರೂಪಸುಖವು ಅಭಿವ್ಯಕ್ತವಾಗುತ್ತದೆ. ಪೂರ್ಣವಾದ ಸ್ವರೂಪಸುಖವು ಅಭಿವ್ಯಕ್ತವಾಗುವುದಿಲ್ಲ ಅಪರೋಕ್ಷಜ್ಞಾನವು ಹುಟ್ಟಿದ ಮೇಲೆ ಮಾಡಿದ ನಿವೃತ್ತಕರ್ಮದಿಂದ ಸಂತುಷ್ಟನಾದ ಶ್ರೀಹರಿಯು ಸೃಷ್ಟಿಯಾದ ಮೇಲೆ ಶ್ವೇತದ್ವೀಪವು ಆವಿರ್ಭೂತವಾಗುತ್ತಿರಲು ಅಲ್ಲಿದ ಶ್ರೀಹರಿಯನ್ನು ನೋಡಿದ ಮೇಲೆ ತನ್ನ ಇಚ್ಛಾರೂಪವಾದ ಆವರಣವನ್ನು ತೆಗೆದು ಮೋಕ್ಷದಲ್ಲಿ ಮುಕ್ತರಿಗೆ ವಿಷಯಗಳನ್ನು ಭೋಗಿಸುವುದಕ್ಕಾಗಿ ವಿಷಯಗಳನ್ನು ಹುಟ್ಟಿಸಿ ಅವುಗಳನ್ನು ಭೋಗಿಸಿ ಕೇವಲ ಜ್ಞಾನದಿಂದ ಅಭಿವ್ಯಕ್ತವಾಗದಿರುವ ಸ್ವರೂಪಸುಖವನ್ನು ಪ್ರಕಟೀಕರಿಸುತ್ತಾನೆ. (5) ಜ್ಞಾನದಿಂದ ಅವಿದ್ಯೆಯು ನಿವೃತ್ತವಾಗುತ್ತದೆ ಎಂಬ ವಿಷಯದಲ್ಲಿ **ಭಿದ್ಯತೇ ಹೃದಯಗ್ರಂಥಿಃ** ಇತ್ಯಾದಿ ಪ್ರಮಾಣಗಳನ್ನು ಇಟ್ಟುಕೊಳ್ಳಬೇಕು (6) ಅಂತೂ ಅಪರೋಕ್ಷಜ್ಞಾನವು ಹುಟ್ಟಿದ ಮೇಲೆ ಕ್ಷೀಣಕರ್ಮವುಳ್ಳವರಾಗಿ ಅರ್ಚಿರಾದಿ ಮಾರ್ಗದಿಂದ ವೈಕುಂಠದಲ್ಲಿದ್ದ ಶ್ರೀಹರಿಯನ್ನೂ ಸತ್ಯಲೋಕದಲ್ಲಿದ್ದ ಚತುರ್ಮುಖನನ್ನೂ ಯಾರು ಹೊಂದಿರುತ್ತಾರೋ ಯಾರು ಬ್ರಹ್ಮಾಂಡವು ಲಯವಾದಾಗ ಶಂತಮ್ಮಿಂದ

ಉತ್ತಮರಲ್ಲಿ ಪ್ರವೇಶಿಸಿ ದೇಹಬಿಟ್ಟು ತಂತಮಗೆ ಉಚಿತವಾದ ಮಾರ್ಗದಿಂದ ಪುತ್ ಎಂದು ಹೆಸರುಳ್ಳ ಚತುರ್ಮುಖನನ್ನು ಹೊಂದಿರುತ್ತಾರೋ, ಅವರೆಲ್ಲರೂ, ಪುನ್ನಾಮಕನಾದ ಚತುರ್ಮುಖನಿಂದ ಕೂಡಿ ವಿರಜಾನದಿಯಲ್ಲಿ ಸ್ನಾನಮಾಡಿ ಲಿಂಗಶರೀರವಿಲ್ಲದವರಾಗಿ ಸಂಪೂರ್ಣ ಅನಿಷ್ಟವನ್ನು ಕಳೆದುಕೊಂಡು ಮಹಾಪ್ರಲಯದಲ್ಲಿ ಶ್ರೀಹರಿಯ ಉದರದಲ್ಲಿದ್ದು ಹೆಚ್ಚಾಗಿ ಅಭಿವ್ಯಕ್ತವಾದ ಸ್ವರೂಪಸುಖವನ್ನು ಅನುಭವಿಸುತ್ತಾ ಪುನಃ ಸೃಷ್ಟಿಯಾಗುವಾಗ ಶ್ವೇತದ್ವೀಪವೂ ಆವಿರ್ಭೂತವಾದಾಗ ಅಲ್ಲಿರತಕ್ಕ ಶ್ರೀಹರಿಯನ್ನು ಅಪರೋಕ್ಷೀಕರಿಸಿ ಅಪರೋಕ್ಷಜ್ಞಾನ ಬಂದ ಮೇಲೆ ಮಾಡಿದ ಸತ್ಕರ್ಮದಿಂದ ಶ್ರೀಹರಿಯ ಇಚ್ಛಾರೂಪವಾದ ಆವರಕವನ್ನು ಕಳೆದುಕೊಂಡವರಾಗಿ ಜ್ಞಾನವು ಬಂದ ಮೇಲೆ ಮಾಡಿದ ನಿವೃತ್ತಕರ್ಮದಿಂದುಂಟಾದ ಭಗವತ್ಪ್ರಸಾದಾನುಸಾರವಾಗಿ ಪ್ರಾಪ್ತವಾದ ಶುದ್ಧ ಸತ್ವದಿಂದುಂಟಾದ ವಿಷಯಭೋಗದಿಂದ ಚೆನ್ನಾಗಿ ಅಭಿವ್ಯಕ್ತವಾದ ಸ್ವರೂಪಸುಖವುಳ್ಳವರಾಗಿ ತಮಗೆ ಕ್ಲಪ್ತಗಳಾದ ಸ್ಥಾನಗಳಲ್ಲಿ ಇರುತ್ತಾರೆ (7) ಇದೇ ಅಭಿಪ್ರಾಯದಿಂದ (ಅಂದರೆ ಜ್ಞಾನದಿಂದಲೇ ಅವಿದ್ಯೆ ಮೊದಲಾದ ಎಲ್ಲಾ ಅನಿಷ್ಟಗಳು ನಿವೃತ್ತಿಯಾಗಿ ಹೆಚ್ಚು ಸ್ವರೂಪಸುಖವು ಅಭಿವ್ಯಕ್ತವಾಗುತ್ತದೆ, ಎಂಬ ಅಭಿಪ್ರಾಯದಿಂದಲೇ) **ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ ಸಮ್ಯಕ್ ಜ್ಞಾನೇನ ಬ್ರಹ್ಮಚರ್ಯೇಣ ಚ । ತಥೈವ ಜ್ಞಾನಕರ್ಮಭ್ಯಾಂ ಪ್ರಾಪ್ಯತೇ ಬ್ರಹ್ಮ ಶಾಶ್ವತಂ** ಇದುಮೊದಲಾದ ವೇದಗಳಲ್ಲಿ ಮುಕ್ತಿಯು ಕೇವಲ ಜ್ಞಾನದಿಂದ ಸಾಧ್ಯವೆಂದೂ, ಜ್ಞಾನಕರ್ಮ ಸಮುಚ್ಚಯ ಸಾಧ್ಯವೆಂದೂ, ಹೇಳಿದೆ. ಅಂದರೆ—ಜ್ಞಾನವೇ ಮೋಕ್ಷಕ್ಕೆ ಪ್ರಧಾನ ಸಾಧನವು. ಕರ್ಮವು ಮೋಕ್ಷದಲ್ಲಿ ಆನಂದಾತಿಶಯವನ್ನುಂಟುಮಾಡುತ್ತದೆ ಅಂದರೆ ಮೋಕ್ಷದಲ್ಲಿ ಪೂರ್ಣಾನಂದವು ಸಿಗುವುದಕ್ಕಾಗಿ ಅವಶ್ಯವಾಗಿ ಕರ್ಮವನ್ನು ಮಾಡಬೇಕು ॥ ೧ ॥

ಪೀ—ಕೇವಲ ಜ್ಞಾನದಿಂದ ಸಾಧ್ಯವಾದುದು ಯಾವುದು ಸ್ವರೂಪ ಸುಖವಿದೆಯೋ. ಅದೇ ಬಹಳವಿದೆ ಆದಕಾರಣ ಕರ್ಮದಿಂದ ಸಾಧ್ಯವಾಗುವ ವಿಷಯಭೋಗದಿಂದ ಅಭಿವ್ಯಕ್ತವಾಗುವ ಸುಖವನ್ನು ಏಕೆ ಅಂಗೀಕರಿಸುವುದು ಎಂದರೆ—

**ಭಾ ॥ (೧) ಬಹುತ್ವೇಽಪ್ಯಾತ್ಮಸುಖಸ್ಯ ಪುನರಿಷ್ಟತ್ವಾತ್ಕರ್ಮಸುಖೇನ ವಿರೋಧಃ । ಅನುಭವಶಕ್ತಿಶ್ಚೇಶ್ವರಪ್ರಸಾದಾತ್ । ಶ್ರುತೇಶ್ಚ ॥ (೨) ನ ಚ ಶರೀರಪಾತಾತ್ಪೂರ್ವಮೇತತ್ । ಸ ತತ್ರ ಪರ್ಯೇತಿ । ಏತಮಾನಂದಮಯಮಾತ್ಮಾನಮುಪಸಂಕ್ರಮ್ಯೇತ್ಯಾದ್ಯುತ್ತರತ್ರ ಶ್ರವಣಾತ್ ॥ (೩) ನ ಚೈಕೀಭೂತ ಏವ ಬ್ರಹ್ಮಣಾ ಸಹ । ಮಗ್ನಸ್ಯ ಹಿ ಪರೇಽಜ್ಞಾನೇ ಕಿಂ ನ ದುಃಖತರಂ ಭವೇದಿತ್ಯಾದಿನಿಂದನಾನ್ಮೋಕ್ಷಧರ್ಮೇ ॥ (೪) ಪರಿಹಾರೇ ಪೃಥಗ್ಭೋಗಾಭಿಧಾನಾಚ್ಚ ॥ (೫) ಶುಕಾದೀನಾಂ ಪೃಥಗ್ದೃಷ್ಟೇಶ್ಚ । ಜಗದ್ವ್ಯಾಪಾರವರ್ಜಮಿತಿ ಐಶ್ವರ್ಯಮರ್ಯಾದೋಕ್ತೇಶ್ಚ । ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾ ಇತಿ ಚ ॥ ೨ ॥**

ಅ ॥ (೧) ಸ್ವರೂಪ ಸುಖವು ಬಹಳವಾಗಿದ್ದರೂ, ಕರ್ಮ ಸುಖವು (ಅಂದರೆ ಅಪರೋಕ್ಷಜ್ಞಾನವು ಹುಟ್ಟಿದ ಮೇಲೆ ಮಾಡಿದ ನಿವೃತ್ತ ಕರ್ಮದಿಂದ ಸಾಧ್ಯವಾದ ವಿಷಯಾನುಭವದಿಂದ ವ್ಯಕ್ತವಾಗುವ ಸುಖವು) ಪುನಃ ಇಷ್ಟವಾದ ಪ್ರಯುಕ್ತ ಅಂತಹ ಕರ್ಮ ಸುಖವನ್ನು ಅಂಗೀಕರಿಸಿದರೂ ವಿರೋಧವಿಲ್ಲ (ಲೋಕದಲ್ಲಿ ಶರೀರ ಇಂದ್ರಿಯಗಳಿದ್ದವರಿಗೇನೇ ವಿಷಯಗಳನ್ನನುಭವಿಸುವ ಸಾಮರ್ಥ್ಯವಿದ್ದ ಪ್ರಯುಕ್ತ ಮುಕ್ತರಿಗೆ ಶರೀರೇಂದ್ರಿಯಗಳು ಇಲ್ಲದಿರುವುದರಿಂದ ಅವರಿಗೆ ವಿಷಯಾನುಭವದಲ್ಲಿ ಸಾಮರ್ಥ್ಯವು ಹೇಗೆ? ಎಂದರೆ—) ಶ್ರೀ ಹರಿಯ ಪ್ರಸಾದದಿಂದ ವಿಷಯಗಳನ್ನು ಅನುಭವಿಸಲಿಕ್ಕೆ ಶಕ್ತಿಯು. (ಅಂದರೆ ಪ್ರಸ

ನ್ನನಾದ ಶ್ರೀಹರಿಯು ತನ್ನ ಶರೀರವನ್ನೇ ಭೋಗಕ್ಕಾಗಿ ಕೊಡುತ್ತಾನೆ ಪ್ರಾಕೃತ ಶರೀರ ಇಂದ್ರಿಯುಗಳನ್ನು ಬಿಟ್ಟಿದ್ದರಿಂದ ಮುಕ್ತರಿಗೆ ಪ್ರಾಕೃತ ದೇಹವಿಲ್ಲವಾದರೂ ಶ್ರೀಹರಿಯನ್ನು ಪ್ರವೇಶ ಮಾಡಿದ ಮುಕ್ತನಿಗೆ ಶ್ರೀಹರಿಯ ಶರೀರದಿಂದಲೇ ಪಿಶಾಚಿಗಳಂತೆಯೇ ಭೋಗಶಕ್ತಿಯು ಕೂಡುತ್ತದೆ ಈ ವಿಷಯವನ್ನೇ **ಬ್ರಾಹ್ಮೇಣ ಜೈಮಿನಿಃ** ಎಂಬ ಸೂತ್ರದಲ್ಲಿಯೂ **ಅದತ್ತೇ ಹರಿಹಸ್ತೇನ, ಗಚ್ಛಾಮಿ ವಿಷ್ಣುಪಾದಾಭ್ಯಾಂ** ಇತ್ಯಾದಿ ಸ್ಮೃತಿಗಳಲ್ಲಿಯೂ ವಿವರಿಸಿರುವರು ) **ಕಾಮರೂಪ್ಯನುಸಂಚರನ್** ಕ್ರೀಡಾರ್ಥವಾಗಿ ಶರೀರವನ್ನು ತೆಗೆದುಕೊಳ್ಳುತ್ತಾನೆ, ಎಂದು ಹೇಳುವ ವೇದವಿದ್ದ ಪ್ರಯುಕ್ತವೂ ಕೂಡಾ ಮುಕ್ತನಿಗೆ ವಿಷಯಾನುಭವವು ಕೂಡುತ್ತದೆ (೨) (ಹಿಂದೆ ಹೇಳಿದ ಶ್ರುತಿಗಳಲ್ಲಿ ತೋರುವ ವಿಷಯೇಚ್ಛಾದಿಗಳು ಅಂತಿಮ ಶರೀರವು ಪಾತವಾಗುವುದಕ್ಕಿಂತ ಮೊದಲ, ಜೀವನ್ಮುಕ್ತಿದಶೆಯಲ್ಲಿ ಎಂದು ಏಕೆ ಆಗಲಾರದು? ಎಂದರೆ ಅಂತಿಮ ಶರೀರವು ಪಾತವಾಗುವುದಕ್ಕಿಂತ ಮೊದಲೇ ವಿಷಯೇಚ್ಛಾದಿಗಳು ಎಂದು ಹೇಳಕೂಡದು (1) (ಈ ಶರೀರವನ್ನು ಬಿಟ್ಟು ಮೋಕ್ಷಕ್ಕೆ ಹೋಗಿ) ಮೋಕ್ಷದಲ್ಲಿ ಮುಕ್ತನು ತಿರುಗಾಡುತ್ತಿರುತ್ತಾನೆ (೨) (ಈ ಲೋಕವನ್ನು ಬಿಟ್ಟು) ಆನಂದಮಯನಾದ ವಾಸುದೇವನ ಸಮಾಪಕ್ಕೆ ಹೋಗಿ (ಸಂಚರಿಸುತ್ತಾ ಸಾಮಗಾನ ಮಾಡುತ್ತಿರುತ್ತಾನೆ) ಇತ್ಯಾದಿ ಪ್ರಕಾರ ಚರಮ ಶರೀರ ಬಿದ್ದ ಮೇಲೆ ಪರಮುಕ್ತಿದಶೆಯಲ್ಲಿಯೇ ಶ್ರುತವಾಗಿದೆ (೩) (1) (ಅದ್ವೈತವಾದಿಗಳು ಹೀಗೆ ಹೇಳುತ್ತಾರೆ ಬ್ರಹ್ಮ ಒಂದೇ ತತ್ವವು ಅದೇವೇ ಅವಿದ್ಯಾ ಅಂತಃಕರಣಾದಿರೂಪವಾದ ಉಪಾಧಿಗಳ ಭೇದದಿಂದ ಭಿನ್ನವಾಗಿ ಜೀವಭಾವವನ್ನು ಹೊಂದುತ್ತದೆ ಅದರಲ್ಲಿ ಯಾವ ಜೀವನಿಗೆ ಜ್ಞಾನವು ಹುಟ್ಟುತ್ತದೋ, ಜ್ಞಾನದಿಂದಲೇ ಉಪಾಧಿಯು ನಾಶವಾದಾಗ ಆ ಜೀವನು ಬ್ರಹ್ಮನಿಂದ ಐಕ್ಯಹೊಂದುತ್ತಾನೆ. ಆ ವಿಷಯದಲ್ಲಿ ಮಾಯಾವಾದಿಗಳು ಜೀವಬ್ರಹ್ಮ ಭೇದಕ್ಕೂ ಉಪಾಧಿಗೂ ಮಿಥ್ಯಾತ್ವವನ್ನು ತಿಳಿಯುತ್ತಾರೆ ಭಾಸ್ಕರಾಚಾರ್ಯರು ಜೀವಬ್ರಹ್ಮ ಭೇದವು ಸತ್ಯವೆನ್ನುತ್ತಾರೆ ಅಂತಹ ಜ್ಞಾನಿಯು ಪರಬ್ರಹ್ಮನಿಂದ ಐಕ್ಯಹೊಂದಿದಾಗ ಕ್ರಿಯಾಕಾರಕ ಫಲರೂಪವಾದ ಎಲ್ಲಾ ಭೇದವು ನಾಶವಾಗುತ್ತದೆಂದಂಗೀಕರಿಸುವುದರಿಂದ ವಿಷಯಭೋಗವು ಮೋಕ್ಷದಲ್ಲಿ ಹೇಗೆ? ಯಾವುದಕ್ಕಾಗಿ ಪುಣ್ಯವು ಇರುವುದು ಎಂದು ಪರರು ಹೇಳುತ್ತಾರೆ ಅದನ್ನು ದೂಷಿಸುತ್ತಾರೆ ) ಆ ಜೀವನು ಬ್ರಹ್ಮನಿಂದ ಐಕ್ಯವನ್ನು ಹೊಂದುತ್ತಾನೆ ಎಂಬುವುದೂ ಭಿನ್ನಾಭಿನ್ನನೆಂಬ ಮಾಯಿಮತವೂ ಯುಕ್ತವಲ್ಲ (ಏಕೆಂದರೆ— **ಪರಮಾತ್ಮಾನಮಾಸಾದ್ಯ ತದ್ಭೂತಾಃ ಯತಯೋಽಮಲಾಃ । ಅಮೃತತ್ವಾಯ ಕಲ್ಪಂತೇ ನ ನಿವರ್ತಂತಿ ಚಾಭಿಭೋಃ** ತದ್ಭೂತಾಃ= ಶ್ರೀಹರಿಯ ಅಧೀನರಾಗಿರುವ ಯತಿಗಳು ಶ್ರೀಹರಿಯನ್ನು ಹೊಂದಿ ಮುಕ್ತರಾಗುತ್ತಾರೆ ಹಿಂದೆ ತೆರಳುವುದಿಲ್ಲ, ಎಂದು ಭೀಷ್ಮಾಚಾರ್ಯರು, ತದ್ಭೂತಾಃ= ತಸ್ಮಿನ್‌ಭೂತಾಃ, ಶ್ರೀಹರಿಯ ಅಧೀನರರೆಂಬ ಅಭಿಪ್ರಾಯದಿಂದ ಹೇಳೋಣ, ತದೇವ ಭೂತಾಃ=ಮುಕ ರು ಬ್ರಹ್ಮನೇ ಆಗುತ್ತಾರೆ, ಎಂಬ ಅರ್ಥಾಂತರವನ್ನು ಆಶಂಕಿಸಿಕೊಂಡು ಧರ್ಮರಾಜನು **ಆಜನ್ಮಮರಣಂ ವಾ ತೇ ಸ್ಮರಂತ್ಯುತ ವಾಽನಘ** ಎಂದು ವಿಕಲ್ಪಿಸಿಕೊಂಡು ಜ್ಞಾನಿಗಳಿಗೆ ಮೋಕ್ಷದಲ್ಲಿ ಬ್ರಹ್ಮನಿಂದ ಐಕ್ಯವೆಂದು ಹೇಳುವುದಾದರೆ—(1)ಆ ಜ್ಞಾನಿಗಳು ಜನ್ಮಾರಭ್ಯ ಮರಣ ಪರ್ಯಂತ ಸಂಸಾರದಲ್ಲಿ ಅನುಭೂತವಾದ ದುಃಖವನ್ನು ಸ್ಮರಿಸುವುದಾದರೆ–**ಮೋಕ್ಷೇ ದೋಷೋ ಮಹಾನೇಷ ಪ್ರಾಪ್ಯ ಸಿದ್ಧಿಂ ಗತಾನೃಷೀನ್, ಯದಿ ತತ್ರೈವ ವಿಜ್ಞಾನೇ ವರ್ತಂತೇ ಯತಯಃ ಪರೇ** ಮೊದಲು ಸಿದ್ಧಿ ಹೊಂದಿದ ಋಷಿಗಳ ಬಳಿಗೆ ಬಂದು ಬೇರೆ ಯತಿಗಳೂ ಮೋಕ್ಷದಲ್ಲಿ ಮೊದಲು ಅನುಭವಿಸಿದ ದುಃಖದ ಸ್ಮರಣವುಳ್ಳವರಾದರೆ ಮೋಕ್ಷದಲ್ಲಿ ಇದು ಮಹಾ ಪ್ರಸಿದ್ಧ ದೋಷವು (1) (ಬ್ರಹ್ಮನಿಂದ ಐಕ್ಯ ಹೊಂದಿದರೂ ಸಂಸಾರದಲ್ಲಿ ಅನುಭೂತವಾದ ದುಃಖವನ್ನು ಸ್ಮರಿಸುವುದಿಲ್ಲವೆಂದಾದರೆ) ಪೂರ್ವದಲ್ಲಿ ಅನುಭೂತವಾದುದಕ್ಕೆ ಸ್ಮರಣವಿಲ್ಲವಾದರೆ–ನಿಬಿಡವಾದ ಅಜ್ಞಾನದಲ್ಲಿ ಮುಳುಗಿದ (ಸರ್ವಥಾ ಜ್ಞಾನವಿಲ್ಲದಿರುವ) ಚೇತನನಿಗೆ ದುಃಖಾತಿಶಯವು ನಿಶ್ಚಯವಾಗಿಯೂ ಬರಬೇಕಾಗುವುದು, ಎಂದು ಮೋಕ್ಷಧರ್ಮದಲ್ಲಿ ಈ ಪಕ್ಷವನ್ನು ನಿಂದಿಸಿರುವುದರಿಂದ ಸರ್ವಥಾ ಬ್ರಹ್ಮನಿಂದ ಐಕ್ಯವಲ್ಲ (೪) (ಧರ್ಮರಾಜನು ಭೀಷ್ಮಾಚಾರ್ಯರು

ಹೇಳಿದ್ದನ್ನು ನಿಂದಿಸಿದರೂ ಭೀಷ್ಮಾಚಾರ್ಯರು ಹೇಳಿದ್ದು ಅಸತ್ಯ ಹೇಗೆ ಆಗುವುದು? ಪರಿಹಾರದಲ್ಲಿ ಭೀಷ್ಮಾಚಾರ್ಯರು ಹೇಳಿದ ದೋಷವನ್ನು ಉದ್ಧರಿಸಬಹುದು ಎಂದರೆ ) ನಾನು ಐಕ್ಯವನ್ನು ಹೇಳಲಿಲ್ಲ, ಮತ್ತೆ ನೀನು ವ್ಯತ್ಯಾಸವಾಗಿ ಗ್ರಹಿಸಿಕೊಂಡು ದೂಷಿಸಿದ್ದು ಎಂಬ ಅಭಿಪ್ರಾಯದಿಂದ **ತಥಾಽಪಿ ತತ್ವಂ ಪರಮಂ ಶೃಣು ಸಮ್ಯಙ್ಮಯೇರಿತಂ । ಇಂದ್ರಿಯಾಣಿ ಚ ಬುದ್ಧ್ಯಂತೇ ಸ್ವದೇಹಂ ದೇಹಿನೋ ನೃಪ ॥ ಕರಣಾನ್ಯಾತ್ಮನಸ್ತಾನಿ ಸೂಕ್ಷ್ಮ್ಯಃ ಪಶ್ಯತಿ ತೈಸ್ತು ಸಃ ॥** ಆದರೂ ನಾನು ಹೇಳತಕ್ಕ ಪರಮ ಸೂಕ್ಷ್ಮ ತತ್ವವನ್ನು ಕೇಳು. ಪರಮ ತತ್ವದಲ್ಲಿರತಕ್ಕ ಮುಕ್ತನ ಇಂದ್ರಿಯಗಳು ಸ್ವರೂಪಭೂತ ದೇಹ ವುಳ್ಳ ಪರಮಾತ್ಮನನ್ನೂ, ಮುಕ್ತರನ್ನೂ, ಜೀವರನ್ನೂ ವಿಷಯಗಳನ್ನೂ, ತಿಳಿಯುತ್ತವೆ ಜೀವನಿಗೆ ಇಂದ್ರಿಯಗಳು ಕರಣಗಳು. ಸ್ಥೂಲದೇಹರಹಿತವಾದ ಮುಕ್ತನು ಇಂದ್ರಿಯಗಳಿಂದ ನೋಡುತ್ತಾನೆ ಎಂದು ಭೀಷ್ಮಾಚಾರ್ಯರು ಪರಿಹಾರವಾಕ್ಯದಲ್ಲಿ ಮುಕ್ತರು ಪರಮಾತ್ಮನಿಂದ ಭಿನ್ನರೆಂದು ಹೇಳಿ ಮುಕ್ತರಿಗೆ ಪ್ರತ್ಯೇಕ ಭೋಗವನ್ನು ಹೇಳಿರುತ್ತಾರೆ ಆದುದರಿಂದಲೂ (ಬ್ರಹ್ಮನಿಂದ ಐಕ್ಯವಲ್ಲ ) (೫) ಜೀವನ್ಮುಕ್ತರಾದ ಶುಕಾದಿಗಳಿಗೆ ತಾವು ಶ್ರೀಹರಿಯಿಂದ ಬೇರೆಯೆಂದು ಪ್ರತ್ಯಕ್ಷವಿದೆ (ಆದುದರಿಂದಲೂ ಜೀವಬ್ರಹ್ಮೈಕ್ಯವಿಲ್ಲ ) ಸೃಷ್ಟಿ ಮೊದಲಾದ ಜಗದ್ವ್ಯಾಪಾರಗಳನ್ನು ಬಿಟ್ಟು ಅಭೀಷ್ಟಗಳನ್ನು ಹೊಂದು ತ್ತಾನೆ, ಎಂದು ಮುಕ್ತನಿಗೆ ಐಶ್ವರ್ಯಾವಧಿಯನ್ನು ಹೇಳಿದ್ದರಿಂದ (ನಿರವಧಿಕ ಐಶ್ವರ್ಯವುಳ್ಳ ಶ್ರೀಹರಿ ಯಿಂದ ಮುಕ್ತನಿಗೆ ಐಕ್ಯವು ಕೂಡುವುದಿಲ್ಲ ) ಈ ಜ್ಞಾನವನ್ನು ಹೊಂದಿ ನನ್ನ ಸಾರೂಪ್ಯವನ್ನು ಹೊಂದಿ ರುತ್ತಾರೆ, ಎಂಬ ಕೃಷ್ಣನ ಮಾತಿನಿಂದಲೂ ಮುಕ್ತನಿಗೆ ಐಕ್ಯವಲ್ಲ.

ವಿ ॥ ಶುಕಾದೀನಾಂ ಇದುಮೊದಲಾದ ಮೂರು ವಾಕ್ಯಗಳಿಂದ ಮುಕ್ತರಿಗೂ ಬ್ರಹ್ಮನಿಗೂ, ಭೇದವದೆ, ಎಂಬುವಲ್ಲಿ ಕ್ರಮವಾಗಿ ಪ್ರತ್ಯಕ್ಷ ಅನುಮಾನ ಆಗಮಗಳನ್ನು ತೋರಿಸಿದರು. ॥ ೨ ॥

**ಪೀ**—ಆ ಮೂರು ಪ್ರಮಾಣಗಳಲ್ಲಿ ಪ್ರತ್ಯಕ್ಷವು ಬಾಧಕವಲ್ಲ ಶುಕಾದಿಗಳು ಯದ್ಯಪಿ ಜ್ಞಾನಿಗಳು ಆದರೂ ಅವರ ಉಪಾಧಿಗಳು ನಷ್ಟಗಳಾಗದಿರುವುದರಿಂದ ಆ ಉದಾಧಿನಿಮಿತ್ತ ಭೇದವು ಕಾಣುತ್ತದೆ ಪ್ರಾರಬ್ಧಕರ್ಮವು ನಷ್ಟವಾಗಿ ಉಪಾಧಿನಾಶವಾದರೆ ಬ್ರಹ್ಮನೇ ಆಗುತ್ತಾರೆ ಬೇರೆ ಕಾಣುವುದಿಲ್ಲ ಎಂದರೆ—

**ಭಾ ॥ (೧) ಉಪಾಧಿನಾಶೇ ನಾಶಾಚ್ಚ ಪ್ರತಿಬಿಂಬಸ್ಯ ॥ (೨) ನ ಚೈಕೀಭೂತಸ್ಯ ಪೃಥಕ್ ಜ್ಞಾನೇ ಮಾನಂ ಪಶ್ಯಾಮಃ । ಆಸಂ ದುಃಖೀ ನಾಸಮಿತಿ ಜ್ಞಾನವಿರೋಧಾಚ್ಚೇಶ್ವ- ರಸ್ಯ । ಅನೇನ ರೂಪೇಣೇತಿ ಚ । ಭೇದಾಭಾವಾತ್ ॥ (೩) ನ ಚ ಪ್ರತಿಬಿಂಬಸ್ಯ ಬಿಂಬೈಕ್ಯಂ ಲೋಕೇ ಪಶ್ಯಾಮಃ । ಉಪಾಧಿನಾಶೇ ಮಾನಂ ವಾ । ಮಗ್ನಸ್ಯ ಹಿ ಪರೇಽಜ್ಞಾನ ಇತಿ ದುಃಖಾತ್ಮಕತ್ವೋಕ್ತೇಶ್ಚ ॥ (೪) ಯಾವದಾತ್ಮಭಾವಿತ್ವಾದಿತ್ಯು- ಪಾಧಿನಿತ್ಯತ್ವಾಭಿಧಾನಾಚ್ಚ । ಅತೋಽನ್ಯವಚನಂ ಪ್ರತೀಯಮಾನಮುಪಾಧ್ಯಪಚಾ- ರಿಕಂ ॥ ೩ ॥**

**ಅ** ॥ (೧) ಜೀವರು ಪರಬ್ರಹ್ಮನಿಗೆ ಪ್ರತಿಬಿಂಬಭೂತರೆಂದು ಮೊದಲು ಸ್ಪಷ್ಟವಾಗಿ ಸಮರ್ಥಿ ಸಿಯದೆ ಅದರಲ್ಲಿ ಜೀವರದ್ದಾದ ಉಪಾಧಿಗೆ ನಾಶವನ್ನು ಅಂಗೀಕರಿಸಿದರೆ ಜೀವರಿಗೂ ನಾಶವು ಬರ ಬೇಕಾಗುವುದು. (ಕನ್ನಡಿಯಲ್ಲಿ ಮುಖವನ್ನು ನೋಡುವಾಗ ಕನ್ನಡಿಯು ಉಪಾಧಿಯು ಮೋರೆಯು ಪ್ರತಿಬಿಂಬವು—ಕನ್ನಡಿ ಮೊದಲಾದ ಉಪಾಧಿಗಳಿಗೆ ನಾಶವು ಬಂದಾಗ ಮೋರೆ ಮೊದಲಾದ ಪ್ರತಿಬಿಂಬ

ಗಳಿಗೆ ನಾಶವು ಕಂಡದೆ. (ಏವಂಚ ಜೀವಂಗೆ ನಾಶವು ಬರುವುದಾದರೆ ಮೋಕ್ಷವನ್ನು ಯಾರೂ ಅಪೇಕ್ಷಿಸದೆ ಹೋಗಬೇಕಾಗುವುದು ಆದಕಾರಣ ಉಪಾಧಿಯು ನಾಶವಾಗುತ್ತದೆನ್ನುವುದು ಯುಕ್ತವಲ್ಲ) (೨) (ಶುಕಾದಿಗಳ ಉಪಾಧಿಗಳಿಗೆ ನಾಶವಾಗದಿದ್ದ ಪ್ರಯುಕ್ತ ಅವರು ಪರಬ್ರಹ್ಮನಿಂದ ಬೇರೆಯಾಗಿ ಕಾಣಲ್ಪಡುತ್ತಾರೆ ಎಂದು ಹೇಳಿದ್ದು ಅಯುಕ್ತವೆನ್ನುತ್ತಾರೆ) ವಸ್ತುತಃ ಐಕ್ಯವಿದ್ದ ಜೀವರಿಗೆ ಉಪಾಧಿ ಪ್ರಯುಕ್ತ ಭೇದವದೆ ಎಂದು ತಿಳಿಯುವುದರಲ್ಲಿ ಯಾವುದೊಂದು ಪ್ರಮಾಣವನ್ನೂ ಕಾಣಲಾರೆವು. (ಹಾಗಾದರೆ— ಆಕಾಶವು ಒಂದೇ ಆದಾಗ್ಯೂ ಘಟ ಮೊದಲಾದ ಉಪಾಧಿಗಳಿಂದ ಬೇರೆಯಾಗಿ ಘಟಾಕಾಶ ಮಠಾಕಾಶ ಎಂದು ತಿಳಿಯುತ್ತದೆ ಅದೇ ಪ್ರಕಾರ ಒಬ್ಬ ಬ್ರಹ್ಮನೇ ಉಪಾಧಿವಶದಿಂದ ಶುಕಾಚಾರ್ಯರು ಇತ್ಯಾದಿ ಪ್ರಕಾರದಿಂದ ತಿಳಿಯಲ್ಪಡುತ್ತಾರೆ— ಎಂದರೆ ಆಕಾಶದಲ್ಲಿಯೂ ಸ್ವಾಭಾವಿಕವಾಗಿಯೇ ಪ್ರದೇಶಭೇದವದೆ ಎಂದಂಗೀಕರಿಸುವುದರಿಂದ ಉಪಾಧಿಕೃತವೆಂದು ಒಪ್ಪುವುದಿಲ್ಲ ಏವಂಚ ಸತ್ಯೋಪಾಧಿ ಭೇದ ಮತದಲ್ಲಿ ಈ ದೂಷಣವು, ಅಂದರೆ ಸತ್ಯವಾದ ಉಪಾಧಿಯಿಂದಮಾಡಲ್ಪಟ್ಟ ಸತ್ಯಭೇದವೆಂದು ಹೇಳುವ ಮತದಲ್ಲಿ ವಸ್ತುತಃ ಏಕೀಭೂತನಾದ ಬ್ರಹ್ಮನಲ್ಲಿ ಉಪಾಧಿಕೃತವಾದ ಭೇದಜ್ಞಾನವದೆ ಎಂಬಲ್ಲಿ ಪ್ರಮಾಣವಿಲ್ಲವೆಂದು ಹೇಳಿದ್ದು) (೩) ಮತ್ತು ಬ್ರಹ್ಮ ಒಂದೇ ತತ್ವವು ಬ್ರಹ್ಮನೇ ಉಪಾಧಿಯಿಂದ ಜೀವಭಾವವನ್ನು ಹೊಂದುತ್ತಾನೆ, ಅಂದರೆ ಜೀವಬ್ರಹ್ಮರಿಗೆ ಭೇದವು ಔಪಾಧಿಕವೇ ಐಕ್ಯವು ಸ್ವಾಭಾವಿಕವು, ಎಂದು ಹೇಳುವವನ ಹತ್ತಿರ(1)ಬ್ರಹ್ಮನು ನಿರ್ದುಃಖವಾದ ಸ್ವರೂಪವನ್ನೇ ಅನುಸಂಧಾನ ಮಾಡುತ್ತಾನೆ, ಜೀವನಲ್ಲಿರುವ ದುಃಖವನ್ನು ಅನುಸಂಧಾನ ಮಾಡಿಕೊಳ್ಳುವುದಿಲ್ಲ, ಜೀವನಲ್ಲಿರುವ ದುಃಖವನ್ನು ಜೀವನೇ ಅನುಸಂಧಾನ ಮಾಡಿಕೊಳ್ಳುತ್ತಾನೆ ಎಂದು ಹೇಳುತ್ತಿಯೋ,(2)ಅಥವಾ ಜೀವನಲ್ಲಿರುವ ದುಃಖವನ್ನು ಬ್ರಹ್ಮನೇ ಅನುಸಂಧಾನ ಮಾಡಿಕೊಳ್ಳುತ್ತಾನೋ, 1ನೇದ್ದು ಅಯುಕ್ತವು ಹೇಗೆಂದರೆ ಭೇದವು ಔಪಾಧಿಕವು ಅಭೇದವು ಸ್ವಾಭಾವಿಕವು, ಎಂದಭಿಮಾನವಿದ್ದರೂ ಹಸ್ತ ಪಾದ ಮೊದಲಾದ ಉಪಾಧಿಗಳಿಗೆ ಭೇದವಿದ್ದರೂ ಹಸ್ತಪಾದಾದಿಗಳಲ್ಲಿದ್ದ ಸುಖಾದಿಗಳನ್ನು ಭೋಗಿಸುವವನು ಒಬ್ಬನೇ ಎಂದನುಭವವು ಶ್ರೀಹರಿಗೆ ಜೀವರಿಂದ ಐಕ್ಯವೆಂದಾದರೆ ಜೀವರಲ್ಲಿದ್ದ ದುಃಖಾದಿಗಳ ಅನುಭವವೂ ಬರಬೇಕಾಗುವುದು ಅದು ವಿರುದ್ಧವು (೩) ಬ್ರಹ್ಮಭಾವದಿಂದ ಇರುತ್ತೇನೆ ಯಾವಾಗಲೂ ದುಃಖಿಯಾಗಿ ಇರುವುದಿಲ್ಲ, ಎಂದು ಶ್ರೀಹರಿಗೆ ಅನುಭವವಿದ್ದುದರಿಂದ ಆದರಿಂದ ವಿರೋಧವು ಬರುವ ಪ್ರಯುಕ್ತ (ಜೀವರಲ್ಲಿರುವ ದುಃಖವನ್ನು ಶ್ರೀಹರಿಯು ಅನುಸಂಧಾನ ಮಾಡಿಕೊಳ್ಳುತ್ತಾನೆಂಬ 2ನೇ ಪಕ್ಷವೂ ಅಯುಕ್ತವು) (ಜೀವರೂಪದಿಂದ ದುಃಖವುಳ್ಳವನಾಗಿದ್ದೇನೆ, ಬ್ರಹ್ಮರೂಪದಿಂದ ಅಲ್ಲ ಎಂಬ ವ್ಯವಸ್ಥೆಯಿಂದ ಅನುಸಂಧಾನಮಾಡಿಕೊಳ್ಳುವುದರಿಂದ ವಿರೋಧವಿಲ್ಲ ಎಂದರೆ) ಜೀವರೂಪಕ್ಕೂ ಬ್ರಹ್ಮರೂಪಕ್ಕೂ ಭೇದವಿಲ್ಲದಿರುವುದರಿಂದ ಜೀವರೂಪದಿಂದ ದುಃಖವುಳ್ಳವನಾಗಿದ್ದೇನೆ, ಬ್ರಹ್ಮರೂಪದಿಂದ ಅಲ್ಲ ಎಂಬುದೂ ಯುಕ್ತವಲ್ಲ (ಉಪಾಧಿಯು ಭೇದಕವಾಗುವುದಿಲ್ಲ ಎಂದು ಹಿಂದೆ ಉಕ್ತವಾಗಿದೆ) (೪) (ಉಪಾಧಿನಾಶವಾದರೆ ಪ್ರತಿಬಿಂಬನಾಶವಾಗುತ್ತದೆಂದು ಹೇಳಿದ್ದು ಅಯುಕ್ತವು ಏಕೆಂದರೆ ಬಿಂಬ ಪ್ರತಿಬಿಂಬಗಳಿಗೆ ಭೇದವಿದ್ದರೆ ಉಪಾಧಿನಾಶವಾದಾಗ ಪ್ರತಿಬಿಂಬ ನಾಶವಾಗುತ್ತದೆಂಬುದು ಕೂಡಬಹುದು. ಬಿಂಬ ಪ್ರತಿಬಿಂಬಗಳಿಗೆ ಸ್ವಾಭಾವಿಕವಾಗಿ ಭೇದವೇ ಇಲ್ಲ ಮತ್ತೆ ಬಿಂಬವೇ ಪ್ರತಿಬಿಂಬವು ಗ್ರೀವಾದಲ್ಲಿದ್ದ ಮುಖದಲ್ಲಿ ಎಂತಹ ಲಕ್ಷಣವಿದೆಯೋ ಕನ್ನಡಿಯಲ್ಲಿದ್ದ ಪ್ರತಿಮುಖದಲ್ಲಿಯೂ ಅಂತಹ ಲಕ್ಷಣನೇ ಇದೆ, ಎಂದು ಅಭೇದ ವಿಷಯಕ ಪ್ರತ್ಯಕ್ಷವು ತೋರುತ್ತದೆ ಅಲ್ಲದೆ ವೇದಪ್ರಮಾಣವೂ ಇದೆ **ನೇಕ್ಷೇತೋದ್ಯಂತಮಾದಿತ್ಯಂ ನಾಸ್ತಂಯಂತಂ ಕದಾಚನ। ನೋಪರಕ್ತಂ ನ ವಾರಿಸ್ಥಂ ನ ಮಧ್ಯಂ ನಭಸೋ ಗತಂ** ಎಂಬ ಸ್ಮೃತಿಯಲ್ಲಿ ಉದಯಿಸಿಕೊಂಡು ಬರತಕ್ಕ ಸೂರ್ಯನಲ್ಲಿ ಆದಿತ್ಯಶಬ್ದ ಪ್ರಯೋಗವಿದ್ದಂತೆಯೇ ನೀರಿನಲ್ಲಿದ್ದ ಪ್ರತಿಬಿಂಬದಲ್ಲಿಯೂ ಆದಿತ್ಯಶಬ್ದ ಪ್ರಯೋಗವಿದೆ ಭೇದವು ದರ್ಪಣ ಮೊದಲಾದ ಉಪಾಧಿ ಪ್ರಯುಕ್ತವಾಗಿದೆ ತಥಾಚ ಉಪಾಧಿ ನಾಶವಾದರೆ ಭೇದವು ನಾಶವಾಗುತ್ತದೆಂದಾಗಲಿ ಪ್ರತಿಬಿಂಬವು ನಾಶವಾಗುತ್ತದೆಂದು ಏಕೆ ಹೇಳಬೇಕು ಹೀಗೆಯೇ ಜೀವನೂ ಪರಬ್ರಹ್ಮನ ಪ್ರತಿ

ಬಿಂಬನಾದುದರಿಂದ ಉಪಾಧಿ ನಾಶದಿಂದ ಭೇದವೇ ನಾಶವಾಗಲಿ, ಜೀವನಿಗೆ ಹೇಗೆ ನಾಶವು ಎಂದರೆ— ತದೇವೇದಂ=ಅದೇ ಇದು. ಎಂಬ ಪ್ರತ್ಯಭಿಜ್ಞೆಯೇ ಸಿದ್ಧವಾಗಲಿಲ್ಲವೆನ್ನುತ್ತಾರೆ) ಪ್ರತಿಬಿಂಬಕ್ಕೆ ಬಿಂಬದಿಂದ ಐಕ್ಯವನ್ನು ಲೋಕದಲ್ಲಿ ತಿಳಿಯಲಾರೆವು (ಸುತ್ತೆ ನ್ಯೂನಪರಿಮಾಣ ಅಧಿಕ ಪರಿಮಾಣ ಚಲನೆ ಅಚಲನೆ ಇತ್ಯಾದಿಗಳಿಂದ ಬಿಂಬ ಪ್ರತಿಬಿಂಬಗಳಿಗೆ ಭೇದವನ್ನೇ ತಿಳಿಯುತ್ತೇವೆ.) ಬಿಂಬ ಪ್ರತಿಬಿಂಬಗಳಾದ ಜೀವ ಬ್ರಹ್ಮರೂಪಗಳಿಗೆ ಔಪಾಧಿಕ ಭೇದವಿದೆ, ಎಂದು ಹೇಳಿದ್ದು ನಮಗೆ ಅನಿಷ್ಟವಲ್ಲ. ಜೀವದಲ್ಲಿರುವ ಉಪಾಧಿಯು ನಾಶವಾಗುತ್ತದೆಂಬುವಲ್ಲಿ ಪ್ರಮಾಣವಿಲ್ಲದಿರುವುದರಿಂದ ಉಪಾಧಿಯು ನಿತ್ಯವಾದ ಪ್ರಯುಕ್ತ ಪರರಿಗೇನೇ ಅನಿಷ್ಟವು. ಸ್ವರೂಪವೇ ಜೀವೋಪಾಧಿಯಾದುದರಿಂದ ತನ್ನಿಮಿತ್ತಕವಾದ ಭೇದವೂ ಸ್ವಾಭಾವಿಕವಾಗಿರುವುದರಿಂದ ಮೋಕ್ಷದಲ್ಲಿಯೂ ಇದೆ, ಎನ್ನುತ್ತಾರೆ) ಉಪಾಧಿಯು ನಾಶವಾಗುತ್ತದೆಂಬುವಲ್ಲಿ ಪ್ರಮಾಣವನ್ನು ನೋಡಲಾರೆವು (ಅಷ್ಟುಮಾತ್ರವಲ್ಲ ಉಪಾಧಿಯು ನಾಶವಾಗುತ್ತದೆಂದಂಗೀಕರಿಸಿದರೆ ಬಾಧಕವು ಇದೆ ಎನ್ನುತ್ತಾರೆ) (ದೇಹ ಇಂದ್ರಿಯಾದಿರೂಪವಾದ ಉಪಾಧಿಯು ಇಲ್ಲವಾದರೆ ಪೂರ್ವದಲ್ಲಿ ಅನುಭೂತವಾದ ಸ್ಮರಣಾದಿಗಳಿಗೆ ಲೋಪವು ಬರಬೇಕಾಗುವುದರಿಂದ) **ಮಗ್ನಸ್ಯ ಹಿ ಪರೇಽಜ್ಞಾನೇ ಕಿಂ ನ ದುಃಖತರಂ ಭವೇತ್** ಎಂದು ಹೇಳಿದ ಪ್ರಕಾರ ಚೇತನನಿಗೆ ದುಃಖಸ್ವರೂಪತ್ವವೇ ಬರಬೇಕಾಗುವುದು (೪) (ಉಪಾಧಿಯು ನಿತ್ಯವೆಂಬ ವಿಷಯದಲ್ಲಿ ಪ್ರಮಾಣವೂ ಇದೆ ಎನ್ನುತ್ತಾರೆ) **ಯಾವದಾತ್ಮಭಾವಿತ್ವಾತ್** ಜೀವನೂ ಜೀವೋಪಾಧಿಯೂ ಪರಮಾತ್ಮನು ಇರುವ ವರೆಗೆ ಇರುತ್ತಾರೆ **ಉಪಾಧೇಶ್ಚೈವ ನಿತ್ಯತ್ವಾತ್ ನೈವ ಜೀವೋ ವಿನಶ್ಯತಿ । ಸ್ವರೂಪತ್ವಾದುಪಾಧೇಶ್ಚ ನ ಭಿನ್ನೋಪಾಧಿಕಲ್ಪನಂ ।** ಇತ್ಯಾದಿ ಪ್ರಮಾಣಗಳಿಂದ ಉಪಾಧಿಗೆ ನಿತ್ಯತ್ವವನ್ನು ಹೇಳಿದ್ದಾರೆ, ಬಿಂಬ ಪ್ರತಿಬಿಂಬಗಳಿಗೆ ಭೇದವು ಪ್ರತ್ಯಕ್ಷವಾಗಿಯೇ ತೋರುವುದರಿಂದ ಬೇರೆ ವಚನವು ಸಮ್ಮತವಾದುದಾಗ್ಯೂ ಅಮುಖ್ಯವು ॥ ೩ ॥

ಪೀ—ಸಂದೇಹಕ್ಕೆ ವಿಷಯವಾಗದೆ ನಾರದರ ಪ್ರತ್ಯಕ್ಷವೂ ಕೂಡ ಮುಕ್ತರಿಗೆ ಬ್ರಹ್ಮನಿಂದ ಭೇದವನ್ನು ಸಾಧಿಸುತ್ತದೆ, ಎನ್ನುತ್ತಾರೆ—

**ಭಾ ॥ (೧) ದೃಷ್ಟಾಶ್ಚ ತೇ ಭಗವತೋ ಭಿನ್ನಾ ನಾರದೇನ ॥ (೨) ಪ್ರತಿಶಾಖಂ ಚ ಸ ಏಕಧೇತ್ಯಾದಿಷು ಭೇದೇನ ಪ್ರತೀಯಂತೇ ॥ (೩) ವಿರೋಧೇ ತು ಯುಕ್ತಿಮತಾಮೇವ ಬಲವತ್ತ್ವಂ । ಯುಕ್ತಯಶ್ಚಾತ್ರೋಕ್ತಾ ಮಗ್ನಸ್ಯ ಹೀತ್ಯಾದಯಃ । ಅತೋ ಜಲೇ ಜಲೈಕೀಭಾವವದೇಕೀಭಾವಃ ॥ (೪) ಉಕ್ತಂ ಚ ಯಥೋದಕಂ ಶುದ್ಧೇ ಶುದ್ಧಂ ಯಥಾ ನದ್ಯ ಇತ್ಯಾದೌ ॥ (೫) ತತ್ರಾಪ್ಯನ್ಯೋನ್ಯಾತ್ಮಕತ್ವೇ ವೃದ್ಧ್ಯಸಂಭವಃ । ಅಸ್ತಿ ಚೇಷತ್ಸಮುದ್ರೇಽಪಿ ದ್ವಾರಿ । ಮಹತ್ವಾದನ್ಯತ್ರಾದೃಷ್ಟಿಃ ॥ ೪ ॥**

ಅ ॥ (೧) ಸಕಲಕರ್ಮಗಳನ್ನು ಬಿಟ್ಟಿರತಕ್ಕ ಮುಕ್ತರು ಶ್ರೀಹರಿಯಿಂದ ಭಿನ್ನರು, ಎಂದು ನಾರದರಿಂದ ಪ್ರತ್ಯಕ್ಷವಾಗಿ ಕಾಣಲ್ಪಟ್ಟಿರುತ್ತಾರೆ (ಇದು ಮೋಕ್ಷಧರ್ಮದಲ್ಲಿ ಸ್ಪಷ್ಟವಾಗಿದೆ (1) **ಪ್ರಾಪ್ಯ ಶ್ವೇತಂ ಮಹಾದ್ವೀಪಂ ನಾರದೋ ಭಗವಾನೃಷಿಃ । ದದರ್ಶ ತಾನೇವ ನರಾನ್ ಶ್ವೇತಾನ್ ಚಂದ್ರಪ್ರಭಾನ್ ಶುಭಾನ್–(2) ಏವಂ ಸ್ತುತಃ ಸ ಭಗವಾನ್ ಗುಹ್ಯೈಸ್ತಥ್ಯೋಽಶ್ಚನಾಮಭಿಃ । ತಂ ಮುನಿಂ ದರ್ಶಯಾಮಾಸ ನಾರದಂ ವಿಶ್ವರೂಪಧೃಕ್ ।** ಇತ್ಯಾದಿಗಳಲ್ಲಿ ಮುಕ್ತರನ್ನು ನೋಡಿ ಶ್ರೀಹರಿಯನ್ನು ಸ್ತೋತ್ರಮಾಡಿ ಕಂಡನು ಎಂದು ಹೇಳುತ್ತದೆ ಇದರಿಂದ ಮುಕ್ತರು ಶ್ರೀಹರಿಯಿಂದ ಭಿನ್ನರೆಂದು ನಾರದರು ಕಂಡಿದ್ದಾರೆಂದು ತಿಳಿಯುತ್ತದೆ) (೨) ಮುಕ್ತರಿಗೂ ಶ್ರೀಹರಿಗೂ ಭೇದವಿದೆ ಎಂಬಲ್ಲಿ ಸ್ಮೃತಿಯನ್ನು ಹೇಳಿ ವೇದವನ್ನು ಹೇಳುತ್ತಾರೆ.) **ಸ ಏಕಧಾ ಭವತಿ ತ್ರಿಧಾ ಭವತಿ ಪಂಚಧಾ ಸಪ್ತಧಾ ನವಧಾ**

**ಪುನಶ್ಚೈಕಾದಶಃ ಸ್ಮೃತಃ,** ಎಂದು ಛಾಂದೋಗ್ಯದಲ್ಲಿ ಭೂಮನ ಜ್ಞಾನದಿಂದ ಮುಕ್ತರಿಗೆ ಅನೇಕ ರೂಪಗಳು ಬರುತ್ತವೆಂದು ಹೇಳಿದ್ದಾರೆ. ಹಾಗೆಯೇ **ಸ ಪಂಚಧಾ ಸಪ್ತಧಾ ದಶಧಾ ಭವತಿ** ಎಂದು ಪಾರಾಶರ್ಯಾಯಣ ಶ್ರುತಿಯಲ್ಲಿಯೂ **ಅಥೈಕ ಏವ ಸನ್ ಗಂಧವದ್ಬ್ರೀತಿರಿಚ್ಯತೇ** ಎಂಬ ಶಾಂಡಿಲ್ಯಶ್ರುತಿಯಲ್ಲಿಯೂ, ಪ್ರತಿಶಾಖೆಯಲ್ಲಿ ಮುಕ್ತರಿಗೆ ಶ್ರೀಹರಿಯ ಇಚ್ಛೆಯಿಂದ ಅನೇಕ ರೂಪಗಳು ಬರುತ್ತವೆಂದು ಹೇಳಿದ್ದರಿಂದ ಮುಕ್ತರು ಶ್ರೀಹರಿಯಿಂದ ಭಿನ್ನರಾಗಿಯೇ ಇರುತ್ತಾರೆ (೩) (ಮುಕ್ತಿಯಲ್ಲಿ ಮುಕ್ತರಿಗೆ ಶ್ರೀಹರಿಯಿಂದ ಭೇದವಿದೆ ಎಂಬಲ್ಲಿ ಪ್ರಮಾಣವಿದ್ದಂತೆ ಅಭೇದವಿದೆ ಎಂಬ ವಿಷಯದಲ್ಲಿಯೂ **ಪರೇಽವ್ಯಯೇ ಸರ್ವ ಏಕೀಭವಂತಿ** ಇದುಮೊದಲಾದ ಪ್ರಮಾಣ ವಾಕ್ಯಗಳಿವೆ ಆದಕಾರಣ ಭಿನ್ನರೇ ಎಂಬ ನಿರ್ಣಯವು ಹೇಗೆ? ಎಂದರೆ—) ಪ್ರಮಾಣಗಳಿಗೆ ಪರಸ್ಪರ ವಿರೋಧವು ಬಂದರೆ – ಯುಕ್ತಿಯುಳ್ಳ ವಾಕ್ಯಗಳೇ ಪ್ರಬಲಗಳು (ಪ್ರಬಲ ವಿರೋಧದಿಂದ ದುರ್ಬಲಕ್ಕೆ ಬಾಧವು) ಮುಕ್ತಿಯಲ್ಲಿ ಮುಕ್ತರಿಗೂ ಬ್ರಹ್ಮನಿಗೂ ಭೇದವೇ ಎಂಬ ಪಕ್ಷದಲ್ಲಿ **ಮಗ್ನಸ್ಯ ಹಿ** ಇದುಮೊದಲಾದ ಯುಕ್ತಿಗಳೂ ಹೇಳಲ್ಪಟ್ಟಿವೆ (ಭೇದವಾಕ್ಯಗಳೇ ಪ್ರಬಲಗಳು ಎಂಬುದಕ್ಕೆ ಪ್ರತ್ಯಕ್ಷಪ್ರಮಾಣವೂ ಅನುಕೂಲವಾಗಿದೆ) (ಹಾಗಾದರೆ- **ಏಕೀಭವಂತಿ** ಎಂಬುದಕ್ಕೆ ಏನ ಅಭಿಪ್ರಾಯವೆಂದರೆ) ಜಲವು ಜಲದಿಂದ ಏಕೀಭೂತವಾಯಿತು, ಎಂಬ ವಾಕ್ಯಕ್ಕೆ ಒಂದೇ ಸ್ಥಾನದಲ್ಲಿ ಸೇರಿತು ಎಂದು ಹೇಳಿದಂತೆಯೇ, **ಪರೇಽವ್ಯಯೇ ಸರ್ವ ಏಕೀಭವಂತಿ** ಎಂದು ಮುಕ್ತರಿಗೆ ಭಗವಂತನಿಂದ ಐಕ್ಯ ಹೇಳಿದ್ದು ಕೂಡ ಕ್ಷೀರಸಮುದ್ರ ಮೊದಲಾದ ಒಂದೇ ಸ್ಥಾನದಲ್ಲಿ ಸೇರಿದರು ಎಂದರ್ಥವು **ಸಾಯಂ ಗಾವಃ ಗೋಷ್ಠೇ ಏಕೀಭೂತಾಃ** ಸಾಯಂಕಾಲದಲ್ಲಿ ಗೋವುಗಳು ಒಂದೇ ಸ್ಥಾನದಲ್ಲಿ ಸೇರಿದವು ಎಂದು ಪ್ರಯೋಗವು ಕಂಡಂತೆ ಇಲ್ಲಿಯೂ ಇಟ್ಟುಕೊಳ್ಳುವುದು (೪) ಈ ಅರ್ಥವು ಯುಕ್ತಿಸಿದ್ಧ ಮಾತ್ರವಲ್ಲ, ಶ್ರುತಿಸಿದ್ಧವೂ ಆಗಿದೆ ಎನ್ನುತ್ತಾರೆ) **ಯಥೋದಕಂ ಶುದ್ಧೇ- ಶುದ್ಧಮಾಸಿಕ್ತಂ ತಾದೃಗೇವ ಭವತಿ । ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ** ಶುದ್ಧವಾದ ನೀರಿನಲ್ಲಿ ಶುದ್ಧವಾದ ನೀರನ್ನು ಹಾಕಿದರೆ—ಒಂದು ಸ್ಥಾನದಲ್ಲಿ ಸೇರುತ್ತದೆ, ಎಂದೇ ಹೇಳಬೇಕು. ವೃದ್ಧಿಯು ಕಾಣುವುದರಿಂದ ಅದೇ ಆಗುವುದಿಲ್ಲವಷ್ಟೆ ಹೀಗೆಯೇ ಜ್ಞಾನಿಗಳಿಗೆ ಸ್ವಾಮಿಯಾದ ಚತುರ್ಮುಖನೂ ಕೂಡ ಮುಕ್ತನಾಗಿ ಶ್ರೀಹರಿಗೆ ಸದೃಶನೇ ಆಗುತ್ತಾನೆ ಶ್ರೀಹರಿಯೇ ಆಗುವುದಿಲ್ಲ (ಬೇರೆಯವರು ಶ್ರೀಹರಿಯಿಂದ ಅಭಿನ್ನರಾಗುವುದಿಲ್ಲವೆಂದು ಸುತರಾಂ ಸಿದ್ಧವು) (2) **ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇಽಸ್ತಂ ಗಚ್ಛಂತಿ** ಹೇಗೆ ಹರಿಯುವ ನದಿಗಳು ತಮ್ಮ ನಾಮರೂಪಗಳನ್ನು ಬಿಡದೆ ಸಮುದ್ರದಲ್ಲಿ ಮಿಶ್ರವಾಗಿ ಒಂದು ಸ್ಥಾನದಲ್ಲಿ ಸೇರುತ್ತವೋ, ಹಾಗೆಯೇ ಷೋಡಶಕಲಾಭಿಮಾನಿ ದೇವತಾ ಸಮೂಹವೂ, ತಮ್ಮ ನಾಮರೂಪಗಳನ್ನು ಬಿಡದೆ ಶ್ರೀ ಹರಿಯ ಸಮೀಪಕ್ಕೆ ಹೋಗುತ್ತವೆ. ಇತ್ಯಾದಿಗಳಲ್ಲಿ ಐಕ್ಯರೂಪ ಅರ್ಥವು ಸರ್ವಥಾ ಕೂಡುವುದಿಲ್ಲ ಬೇರೆ ಅರ್ಥವೇ ಆಗಬೇಕೆಂದು ಹೇಳಿದ್ದಾರೆ (೫) ಆ ನೀರೂ ಪರಸ್ಪರ ಒಟ್ಟಿಗೆ ಸೇರಿ ಒಂದಾಗುತ್ತದೆಂದಾದರೆ— ಅದರಲ್ಲಿ ವೃದ್ಧಿಯು ಕೂಡದೆ ಹೋಗುವುದು. (ಸಮುದ್ರದಲ್ಲಿ ವೃದ್ಧಿಯು ಇಲ್ಲವೇ ಇಲ್ಲ ಎಂದರೆ) ಸಮುದ್ರದಲ್ಲಿಯೂ ಕೂಡ ಸ್ವಲ್ಪ ವೃದ್ಧಿಯು ಕಾಣುತ್ತದೆ ಗಂಗೆ ಮೊದಲಾದ ನದಿಗಳಿಗೆ ಸಮುದ್ರದಿಂದ ಸಂಗಮವಾಗುವ ಸ್ಥಳದಲ್ಲಿ ಸಮುದ್ರದಲ್ಲಿ ಪ್ರವೇಶವಾಗುವುದಕ್ಕಾಗಿ ಅತಿ ಶೀಘ್ರದಿಂದ ಹೋಗುವ ನದೀಜಲಗಳು ಸಮೃದ್ಧಗಳಾಗಿ ಕಾಣುವುದರಿಂದ ಸಮುದ್ರದಲ್ಲಿ ಅಭಿವೃದ್ಧಿಯು ಕಾಣುತ್ತದೆ (ಬೇರೆ ಕಡೆ ಏಕೆ ಕಾಣುವುದಿಲ್ಲವೆಂದರೆ) ಸಮುದ್ರದ ಜಲವು ಮಹತ್ತಾದ ಪ್ರಯುಕ್ತ ಬೇರೆ ಕಡೆ ವೃದ್ಧಿಯು ಕಾಣುವುದಿಲ್ಲ ॥ ೪ ॥

ಪೀ—ಪಾತ್ರಾದಿಗಳಲ್ಲಿದ್ದ ನೀರಿನಲ್ಲಿ ವೃದ್ಧಿಯು ಕಾಣುವುದರಿಂದ ಭೇದವು ಇದ್ದಂತೆಯೇ ಸಮುದ್ರದ ನೀರಿನಲ್ಲಿಯೂ ವೃದ್ಧಿಯು ಕಾಣುವುದರಿಂದ ಸಮುದ್ರಕ್ಕೆ ಸೇರಿದ ನದಿಯ ನೀರಿನಿಂದ ಸಮುದ್ರದ ನೀರು ಬೇರೆ, ಎಂಬ ಅನುಮಾನದಿಂದ ಮಾತ್ರ ನೀರಿನಲ್ಲಿ ಭೇದವು ಸಿದ್ಧಿಸುವುದಲ್ಲ. ಮತ್ತೆ ಪ್ರತ್ಯಕ್ಷದಿಂದಲೂ ಸಿದ್ಧಿಸುತ್ತದೆ ಎನ್ನುತ್ತಾರೆ

ಭಾ ॥ (೧) ತಾ ಏವಾಪೋ ದದೌ ತಸ್ಯ ಸ ಋಷಿಃ ಶಂಸಿತವ್ರತ ಇತಿ ಮಹಾಕೌರ್ಮೇ ಸಮರ್ಥಾನಾಂ ಭೇದಜ್ಞಾನಾಚ್ಚ ॥ (೨) ನೈವ ತತ್ಪ್ರಾಪ್ನುವಂತ್ಯೇತೇ ಬ್ರಹ್ಮೇಶಾನಾದಯಸ್ಸರಾಃ । ಯತ್ತೇ ಪದಂ ಹಿ ಕೈವಲ್ಯಮಿತಿ ನಿಷೇಧಾಚ್ಚ ನಾರದೀಯೇ ॥ (೩) ಸವಿಚಾರಶ್ಚ ನಿರ್ಣಯಃ ಕೃತೋ ಮೋಕ್ಷಧರ್ಮೇಷು । ಬಲವಾಂಶ್ಚ ಸವಿಚಾರೋ ನಿರ್ಣಯೋ ವಾಕ್ಯಮಾತ್ರಾತ್ ॥ (೪) ಅತೋ ಯತ್ರ ನಾನ್ಯತ್ಪಶ್ಯತೀತ್ಯಾದ್ಯಪಿ ತದಧೀನಸತ್ತಾವಾಚಿ । ಅನ್ಯಥಾ ಕಥಮೈಶ್ವರ್ಯಾದಿ ಸ್ಯಾತ್ ॥ (೫) ನ ಚ ತನ್ಮಾಯಾಮಯಮಿತ್ಯುಕ್ತಂ । ಅನ್ಯಥಾ ಕಥಂ ತತ್ರೈವ ಸ ಏಕಧೇತ್ಯಾದಿ ಬ್ರೂಯಾತ್ ॥ (೬) ನ ಚ ನ ಹ ವೈ ಶರೀರಸ್ಯೇತ್ಯಾದಿವಿರೋಧಃ । ವೈಲಕ್ಷಣ್ಯಾತ್ತಚ್ಛರೀರಾಣಾಂ । ಅಭೌತಿಕಾನಿ ಹಿ ತಾನಿ । ನಿತ್ಯೋಪಾಧಿವಿನಿರ್ಮಿತಾನೀಶ್ವರಶಕ್ತ್ಯಾ । ತಥಾ ಚೋಕ್ತಂ । ಶರೀರಂ ಜಾಯತೇ ತೇಷಾಂ ಷೋಡಶ್ಯಾ ಕಲಯೈವ ಚೇತಿ ನಾರಾಯಣಾಷ್ಟಾಕ್ಷರಕಲ್ಪೇ ॥ ೫ ॥

ಅ ॥ (೧) ಇಂದ್ರದೇವರ ಕಮಂಡಲುವಿನಿಂದ ತೆಗೆದು ತನ್ನ ಕಮಂಡಲುವಿಗೆ ಹಾಕಿಕೊಂಡ ನೀರನ್ನೇ ವಸಿಷ್ಠ ಋಷಿಗಳು ಇಂದ್ರನಿಗೆ ಕೊಟ್ಟರು ಎಂದು ಮಹಾಕೌರ್ಮ ಪುರಾಣದ ವಚನನಿಂದ ಸಮರ್ಥರಾದ ವಸಿಷ್ಠಾದಿಗಳು ಜಲದಲ್ಲಿ ಭೇದವನ್ನು ಕಂಡ ಪ್ರಯುಕ್ತವೂ (ಜಲದಲ್ಲಿ ಭೇದವು ಸಿದ್ಧವಾಗುತ್ತದೆ) (೨) ಎಲೋ ಶ್ರೀಹರಿಯೇ ನಿನ್ನ ಸರ್ವೋತ್ತಮತ್ವರೂಪವಾದ ಸ್ವರೂಪವನ್ನು ಬ್ರಹ್ಮರುದ್ರಾದಿ ದೇವತೆಗಳೂ ಸರ್ವಥಾ ಹೊಂದುವುದೇ ಇಲ್ಲ ಎಂದು ನಾರಾದೀಯ ಪುರಾಣದಲ್ಲಿ ಬ್ರಹ್ಮಾದಿಗಳಿಗೆ ಶ್ರೀಪರಬ್ರಹ್ಮನಿಂದ ಮುಕ್ತಿಯಲ್ಲಿಯೂ ಅಭೇದವನ್ನು ನಿಷೇಧಮಾಡಿರುವುದರಿಂದಲೂ ಮುಕ್ತರಿಗೆ ಭೇದವನ್ನು ಹೇಳತಕ್ಕ ವಾಕ್ಯವೇ ಪ್ರಬಲವು. (೩) ಮೋಕ್ಷಧರ್ಮದಲ್ಲಿ **ಬಹವಃ ಪುರುಷಾ ಬ್ರಹ್ಮನ್** ಇತ್ಯಾದಿಗಳಿಂದ ಪೂರ್ವಪಕ್ಷವು ಪ್ರಬಲವೋ ಉತ್ತರಪಕ್ಷವು ಪ್ರಬಲವೋ, ಎಂಬ ವಿಚಾರಪೂರ್ವಕವಾಗಿ ಜೀವೇಶ್ವರರಿಗೆ ಭೇದವನ್ನು ನಿರ್ಣಯಿಸಿರುವರು. (ಅಂದರೆ **ಬಹವಃ ಪುರುಷಾ ಬ್ರಹ್ಮನ್ನುತಾಹೋ ಏಕ ಏವ ತು** ಎಲೋ ವೈಶಂಪಾಯನಾಚಾರ್ಯರೇ ಪುರುಷರು ಬಹುಮಂದಿಯೋ ಒಬ್ಬನೋ ಬಹುಮಂದಿಯೆಂದಾದರೆ, **ಕೋ ಹ್ಯತ್ರ ಪುರುಷಶ್ರೇಷ್ಠಸ್ತಂ ಭವಾನ್ವಕ್ತುಮರ್ಹತಿ** ಆ ಬಹು ಪುರುಷರಲ್ಲಿ ಶ್ರೇಷ್ಠನಾದವನನ್ನು ಹೇಳಬೇಕೆಂದು ಜನಮೇಜಯರಾಜನು ಪ್ರಶ್ನೆ ಮಾಡಿದಾಗ **ನೈತದಿಚ್ಛಂತಿ ಪುರುಷಮೇಕಂ** ಎಂದು ಪುರುಷನೊಬ್ಬನೆಂಬ ಪಕ್ಷವನ್ನು ತಿರಸ್ಕರಿಸಿ ಪುರುಷರು ಬಹುಮಂದಿ ಎಂಬ ಪಕ್ಷವನ್ನು ಇಟುಕೊಂಡು ಎಲ್ಲಾ ಪುರುಷರಿಗೂ ಕಾರಣನೂ, ಸರ್ವಗುಣಪೂರ್ಣನೂ ಸರ್ವೋತ್ತಮನೂ ಆದ ಪುರುಷನನು, ವೈಶಂಪಾಯನಾಚಾರ್ಯರು ಪ್ರತಿಜ್ಞಾಪೂರ್ವಕವಾಗಿ ಹೇಳಿ ಜೀವೇಶ್ವರರಿಗೆ ಭೇದವೇ ಎಂಬುದನ್ನು ನಿರ್ಧರಿಸಿರುತ್ತಾರೆ ಸಂಸಾರದಲ್ಲಿ ಭೇದವುಳ್ಳವರಿಗೆ ಮೋಕ್ಷದಲ್ಲಿ ಅಭೇದವು ಸರ್ವಥಾ ಕೂಡಲಾರದು) **ಏಕೀಭವಂತಿ** ಇದು ಮೊದಲಾದ ಕೇವಲ ವಾಕ್ಯಕ್ಕಿಂತ ವಿಚಾರಪೂರ್ವಕವಾದ ನಿರ್ಣಯವು ಪ್ರಬಲವು (೪) (ಭೇದಪಕ್ಷವು ಪ್ರಬಲವಾದ ಪ್ರಯುಕ್ತ ಮುಕ್ತರಿಗೆ ಬ್ರಹ್ಮನಿಂದ ಭೇದವನ್ನು ಹೇಳುವುದಾದರೆ **ಯತ್ರ ನಾನ್ಯತ್ಪಶ್ಯತಿ-ಸ ಭೂಮಾ** ಎಂದು ಛಾಂದೋಗ್ಯದಲ್ಲಿ ತನ್ನಿಂದ ಭಿನ್ನವಾದುದು ಇಲ್ಲ ಎಂದು ಹೇಗೆ ಕೂಡುತ್ತದೆ ಎಂದರೆ) ವಿಚಾರ ಪೂರ್ವಕವಾಗಿ ಮಾಡಿದ ನಿರ್ಣಯ ವಿರೋಧವಿದ್ದುದರಿಂದಲೇ ಇದ್ದ ಬೇರೆ ವಸ್ತುಗಳೆಲ್ಲವೂ ಭಗವಂತನ ಅಧೀನಗಳಾಗಿಯೇ ಇರುತ್ತವೆಂದು **ಯತ್ರ ನಾನ್ಯತ್ಪಶ್ಯತಿ** ಇತ್ಯಾದಿ ವಾಕ್ಯವು ಹೇಳುತ್ತದೆ (ಅಂದರೆ **ಯದಧೀನಂ ವಿನಾ ನಾನ್ಯತ್ಕಿಂಚಿದಸ್ತಿ ಕಥಂಚನ । ಸ ಭೂಮೋಕ್ತೋऽಭಿಪೂರ್ಣತ್ವಾತ್** ಎಂಬ ಪ್ರಮಾಣದಿಂದ ಯಾವ ಶ್ರೀ ಪರಬ್ರಹ್ಮನನ್ನು ತಿಳಿದರೆ—

ಬೇರೆ ಸ್ವತಂತ್ರವಾದುದನ್ನು ನೋಡುವುದಿಲ್ಲ. ಇದ್ದುದೆಲ್ಲವೂ ಭಗವದಧೀನವಾಗಿಯೇ ಇದೆ, ಎಂದೇ ತಿಳಿಯುತ್ತಾನೆ, ಎಂದೇ ಈ ವಾಕ್ಯದ ಅರ್ಥವು ) ಬೇರೆ ವಸ್ತುಗಳೇ ಇಲ್ಲವೆಂದಾದರೆ—ವೇದವೊದಲಾದವುಗಳಲ್ಲಿ ಹೇಳಿದ ಸರ್ವನಿಯಾಮಕತ್ವ, ಸರ್ವೇಶ್ವರತ್ವ, ಸರ್ವಜ್ಞತ್ವ ಮೊದಲಾದುದು ಹೇಗೆ ಕೂಡಬಹುದು? (೫) (ಮಾಯಾಪರಿಕಲ್ಪಿತವಾದುದೇ ವೇದಾದಿಗಳಲ್ಲಿ ಹೇಳಲ್ಪಡುತ್ತದೆಂದರೆ—) ಅದೆಲ್ಲವೂ ಮಾಯಾಪರಿಕಲ್ಪಿತವಲ್ಲವೆಂದು ಹೇಳಲ್ಪಟ್ಟಿದೆ ಮಾಯಾಪರಿಕಲ್ಪಿತವೆಂದು ಹೇಳುವುದಾದರೆ ಅಂದರೆ ಭೂಮನು ಅದ್ವಿತೀಯ ಎರಡನೇ ವಸ್ತುವಿಲ್ಲದವನೆನ್ನುವುದಾದರೆ—ಭೂಮ ಪ್ರಕರಣದಲ್ಲಿಯೇ ಆತನ ಜ್ಞಾನದಿಂದ ಮೋಕ್ಷವನ್ನು ಹೊಂದಿದವನಿಗೆ ಬ್ರಹ್ಮನಿಂದ ಭೇದವನ್ನು ಅಂಗೀಕರಿಸಿ ಆತನ ಅನುಗ್ರಹದಿಂದುಂಟಾದ ವಿಚಿತ್ರಶಕ್ತಿ (ವಿಶೇಷ) ಬಲದಿಂದ **ಸ ಏಕಧಾ ಸ ತ್ರಿಧಾ ಭವತೀತ್ಯಾದಿ**ಗಳಲ್ಲಿ ನಾನಾ ರೂಪಗಳಿಂದ ಭೋಗನಿರ್ವಾಹವಾಗುವುದಕ್ಕಾಗಿ ಆ ಮುಕ್ತನು ಭಿನ್ನನಾಗಿಯೇ ಭೋಗಿಸುತ್ತಿರುತ್ತಾನೆಂದು ವೇದವು ತಾತ್ಪರ್ಯಪೂರ್ವಕವಾಗಿ ಹೇಳುವುದು ಹೇಗೆ ಕೂಡುವುದು? (೬) (ನಾರದರು ಶ್ವೇತದ್ವೀಪದಲ್ಲಿ ಯಾರನ್ನು ಶ್ರೀಹರಿಯಿಂದ ಭಿನ್ನರನ್ನಾಗಿ ಕಂಡಿದ್ದಾರೋ, ಅವರಿಗೆ ಶರೀರವಿದ್ದ ಪ್ರಯುಕ್ತ ಅವರು ಮುಕ್ತರೇ ಆಗುವುದಿಲ್ಲ ಶರೀರವಿದ್ದವರೂ ಮುಕ್ತರೆಂದಂಗೀಕರಿಸಿದರೆ **ನ ಹ ವೈ ಸ ಶರೀರಸ್ಯ ಸತಃ ಪ್ರಿಯಾಪ್ರಿಯಯೋರಪಹತಿರಸ್ತಿ** ಇದುವೊದಲಾದ ವೇದಗಳಿಂದ ವಿರೋಧವು ಬರುವುದು, ಎಂದರೆ) **ನ ಹ ವೈ ಸಶರೀರಸ್ಯ** ಇದು ಮೊದಲಾದ ವೇದಗಳಿಂದ ವಿರೋಧವು ಬರುವುದಿಲ್ಲ ಏಕೆಂದರೆ—ಮುಕ್ತರ ಶರೀರಗಳು (ಅಮುಕ್ತರ ಶರೀರಗಳಿಗಿಂತ) ವಿಲಕ್ಷಣಗಳಾಗಿವೆ ಆ ಶರೀರಗಳು ಪಾಂಚಭೌತಿಕ (ಜಡ)ಗಳಲ್ಲ ಮತ್ತು ಆ ಶರೀರಗಳು ನಿತ್ಯೋಪಾಧಿಯಿಂದ ನಿರ್ಮಿಸಲ್ಪಟ್ಟವುಗಳಾಗಿರುವುದರಿಂದ (ವಿಕಾರವುಳ್ಳವುಗಳಾದಾಗ್ಯೂ) ಶ್ರೀಹರಿಯ ಅಘಟ್ಯಘಟಕವಾದ ಅಚಿಂತ್ಯಶಕ್ತಿಯಿಂದ ಅವುಗಳಿಗೆ (ವಿನಾಶವಿಲ್ಲ ) ತಥಾಚ ಮುಕ್ತರ ಶರೀರವು **ಆತ್ಮೈವಾಸ್ಯ ಷೋಡಶೀಕಲಾ** ಎಂಬ ಪ್ರಮಾಣದಿಂದ ಜೀವಸ್ವರೂಪವೇ ಆದ ಹದಿನಾರನೇ ಕಲೆಯಿಂದ ಹುಟ್ಟುತ್ತದೆ, ಎಂತ ಅಷ್ಟಾಕ್ಷರ ಕಲ್ಪದಲ್ಲಿ ಹೇಳಿದೆ

ವಿ || ವೇದದಲ್ಲಿ ಶರೀರವಿದ್ದವರಿಗೆ ದುಃಖವಿದೆ ಎಂದು ಹೇಳಿದ್ದು ಅನರವರ ಕರ್ಮಾಧೀನವಾದ ಜಡ ಶರೀರವಿದ್ದ ಅಮುಕ್ತರಿಗೆ ಶ್ವೇತದ್ವೀಪದಲ್ಲಿ ನಾರದರು ಕಂಡ ಮುಕ್ತರಶರೀರಗಳು ಚಿನ್ಮಯಗಳು ಅವುಗಳು ಜಡಗಳಾದಾಗ್ಯೂ **ಸ್ವೇಚ್ಛಯಾ ವಾ ಶರೀರಾಣಿ ತೇಜೋರೂಪಾಣಿ ಕಾನಿಚಿತ್ । ಸ್ವೀಕೃತ್ಯ ಜಾಗರಿತವದ್ಭುಕ್ತ್ವಾ ತ್ಯಾಗಃ ಕದಾಚನ** ಎಂದು ತಮ್ಮ ಇಚ್ಛೆಯಿಂದಲೇ ಕ್ರೀಡಾರ್ಥವಾಗಿ ಶರೀರವನ್ನು ತೆಗೆದುಕೊಳ್ಳುತ್ತಾರೆ, ಬಿಡುತ್ತಾರೆಂದು ಹೇಳಿದ್ದರಿಂದ ಅವುಗಳು ಕರ್ಮಾಧೀನಗಳಲ್ಲ ಆದಕಾರಣ **ಜ್ಯೋತಿರ್ಮಯೇಷು ದೇಹೇಷು ಸ್ವೇಚ್ಛಯಾ ವಿಶ್ವಮೋಕ್ಷಿಣಃ । ಭುಂಜತೇ ಸುಸುಖಾನ್ಯೇವ ನ ದುಃಖಾದೀನ್ ಕದಾಚನ** ಎಂದು ಪ್ರಮಾಣದಿಂದ ಆ ಶರೀರಗಳು ದುಃಖಜನಕಗಳಾಗುವುದಿಲ್ಲ ತಥಾಚ ಆ ಶರೀರಗಳು ಮುಕ್ತರದ್ದಾದುದರಿಂದ **ನ ಹ ವೈ ಸಶರೀರಸ್ಯ** ಇದುಮೊದಲಾದ ವೇದ ವಿರೋಧವಿಲ್ಲ || ೫ ||

ಪೀ—ಮುಕ್ತರಿಗೆ ಶರೀರಗಳಿದ್ದರೆ—**ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ** ಎಂದು ಶರೀರವಿಲ್ಲವೆಂದು ಹೇಳಿದ್ದು ಹೇಗೆ ಎಂದರೆ -

**ಭಾ || (೧) ವದಂತಿ ಚ ಲೌಕಿಕಾದ್ವೈಲಕ್ಷಣ್ಯೇಽಭಾವಶಬ್ದಂ । ಅಪ್ರಹರ್ಷಮನಾನಂದಂ ಸುಖದುಃಖಬಾಹ್ಯ ಇತ್ಯಾದಿಷು । ನಿರುಕ್ತ್ಯಭಾವಾಚ್ಚ ನ ತಾನಿ ಶರೀರಾಣಿ । ತಥಾಹಿ ಶ್ರುತಿಃ । ಅಶಾರೀತಿಃ ತಚ್ಛರೀರಮಭವದಿತಿ । ನ ಹಿ ತಾನಿ ಶೀರ್ಣಾನಿ ಭವಂತಿ ।**

**ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚೇತಿ ವಚನಾತ್ ॥ (೨) ಸಾಮ್ಯಾತ್ಪ್ರಯೋಗಃ । ಪ್ರಯೋಗಾಚ್ಚ ।(1)ಅನಿಂದ್ರಿಯಾ ಅನಾಹಾರಾ ಅನಿಸ್ಪಂದಾಸ್ಸುಗಂಧಿನಃ ।(2)ದೇಹೇಂದ್ರಿಯಾಸುಹೀನಾನಾಂ ವೈಕುಂಠಪುರವಾಸಿನಾಮಿತ್ಯಾದಿ ದೃಷ್ಟದೇಹೇಷ್ವೇವ ॥ (೩) ನ ಚೈಷಾಽನ್ಯಾ ಗೌಣೀ ಮುಕ್ತಿಃ । ಬಹುನಾಽತ್ರ ಕಿಮುಕ್ತೇನ ಯಾವಚ್ಛ್ವೇತಂ ನ ಗಚ್ಛತಿ । ಯೋಗೀ ತಾವನ್ನ ಮುಕ್ತಃ ಸ್ಯಾದೇಷ ಶಾಸ್ತ್ರಸ್ಯ ನಿರ್ಣಯ ಇತ್ಯಾದಿತ್ಯಪುರಾಣೇ ತದನ್ಯಮುಕ್ತಿನಿಷೇಧಾತ್ ॥ (೪) ಯೇ ತ್ವತ್ರೈವ ಭಗವಂತಂ ಪ್ರವಿಶಂತಿ ತೇಽಪಿ ಪಶ್ಚಾತ್ತತ್ರೈವ ಯಾಂತಿ ॥ (೫) ಯೋಗ್ಯತ್ವಂ ಚಾತ್ರ ವಿವಕ್ಷಿತಂ । ಯುಧಿಷ್ಠಿರಪ್ರಶ್ನ ಇತರನಿಂದನಾಚ್ಚ । ಸಾಯುಜ್ಯಂ ಚ ಗ್ರಹವತ್ । ತದುಕ್ತೇಶ್ಚ ॥ (೬) ಭುಂಜತೇ ಪುರುಷಂ ಪ್ರಾಪ್ಯ ಯಥಾ ದೇವಗ್ರಹಾದಯಃ । ತಥಾ ಮುಕ್ತಾವುತ್ತಮಾಯಾಂ ಬಾಹ್ಯಾನ್ಭೋಗಾಂಸ್ತು ಭುಂಜತ ಇತಿ ನಾರಾಯಣಾಷ್ಟಾಕ್ಷರಕಲ್ಪೇ ॥ ೬ ॥**

ಅ ॥ (೧) ಲೌಕಿಕ ಆನಂದಾದಿಗಳಿಂದ ವೈಲಕ್ಷಣ್ಯವಿದ್ದರೆ ಅಭಾವ ಶಬ್ದವನ್ನು ಹೇಳುತ್ತಾರೆ ಇಲ್ಲ ಎನ್ನುತ್ತಾರೆ ಲೌಕಿಕ ಸಂತೋಷವಿಲ್ಲದವನು, ಲೌಕಿಕಾನಂದವಿಲ್ಲದವನು, ಲೌಕಿಕ ಸಂಪೂರ್ಣ ಸುಖದುಃಖಗಳಿಲ್ಲದವನು ಇತ್ಯಾದಿಗಳಲ್ಲಿ ಲೌಕಿಕಾನಂದಾದಿಗಳಿಲ್ಲದಿರುವಕಾರಣ ಆನಂದಾದಿಗಳಿಲ್ಲವೆಂದು ಅಭಿಜ್ಞರು ಹೇಳುತ್ತಾರೆ ಮುಕ್ತರ ಶರೀರಗಳಲ್ಲಿ ನಾಶಹೊಂದುವಿಕೆ ಎಂದು ಶರೀರ ಶಬ್ದದ ಅರ್ಥವು ಇಲ್ಲದಿರುವುದರಿಂದಲೂ ಅವುಗಳು ಶರೀರಗಳಲ್ಲ ವಿನಾಶಾದಿಗಳನ್ನು ಹೊಂದುವ ಕಾರಣ ಶರೀರವೆನಿಸುತ್ತದೆ, ಎಂದು ಶರೀರವೆಂಬ ಶಬ್ದಕ್ಕೆ ಪದತಾಡಿತವಾದ ಅರ್ಥವನ್ನು ವೇದವು ಹೇಳುತ್ತದೆ ಮುಕ್ತರ ಶರೀರಗಳು ನಾಶಹೊಂದತಕ್ಕವುಗಳಲ್ಲ ಮುಕ್ತರ ಶರೀರಗಳು ಸೃಷ್ಟಿಕಾಲದಲ್ಲಿಯೂ ಹುಟ್ಟುವುದಿಲ್ಲ ಪ್ರಲಯ ಕಾಲದಲ್ಲಿ ಲಯಹೊಂದುವುದಿಲ್ಲ, ಇದು ಮೊದಲಾದ ಪ್ರಮಾಣಗಳಿಂದ (ಈ ಅರ್ಥವು ಸಿದ್ಧವಾಗುತ್ತದೆ ) (೨) (ಹೀಗಾದರೆ **ಶರೀರಂ ಜಾಯತೇ ತೇಷಾಂ** ಎಂದು ಮುಕ್ತರ ಶರೀರಗಳಲ್ಲಿ ಶರೀರ ಶಬ್ದ ಪ್ರಯೋಗವು ಹೇಗೆಂದರೆ.) ಅಸ್ಮದಾದಿಗಳ ಶರೀರಗಳಲ್ಲಿದ್ದಂತೆಯೇ ಮುಕ್ತರ ಶರೀರಗಳಿಗೂ ಕೈ ಕಾಲು ಮೊದಲಾದ ಅವಯವಗಳು ಸಮಗಳಾಗಿರುವುದರಿಂದ ಗೌಣ (ಅಮುಖ್ಯ) ಪ್ರಯೋಗವು ಸರ್ವಥಾ ಶರೀರವಿಲ್ಲವೆಂಬ ಅರ್ಥವೇ ಏಕೆ ಆಗಲಾರದೆಂದರೆ) (1) ಪ್ರಾಕೃತ ಇಂದ್ರಿಯಗಳಿಲ್ಲದವರು, ಪ್ರಾಕೃತಾಹಾರವಿಲ್ಲದವರು, ಸ್ಪಂದವಿಲ್ಲದವರು, ಸುಗಂಧವುಳ್ಳವರು, (2)ಪ್ರಾಕೃತ ದೇಹ ಇಂದ್ರಿಯ ಶ್ವಾಸ ಉಚ್ಛ್ವಾಸಗಳಿಲ್ಲದಿರುವ ವೈಕುಂಠಪುರದಲ್ಲಿ ಆವಾಸಿಸುತ್ತಿರುವವರಿಗೆ, ಇತ್ಯಾದಿಗಳಲ್ಲಿ ನಾರದಾದಿಗಳು ಕಂಡದೇಹವುಳ್ಳ ಮುಕ್ತರಲ್ಲಿಯೇ (ಈ ಎರಡು ವಾಕ್ಯಗಳಲ್ಲಿ ದೇಹವಿಲ್ಲವೆಂಬ ಪ್ರಯೋಗವು ಅನ್ಯಥಾ ಕೂಡದಿರುವುದರಿಂದ ಸರ್ವಥಾ ಶರೀರವಿಲ್ಲವೆಂಬುವ ಅರ್ಥವು ಕೂಡುವುದಿಲ್ಲ ಮತ್ತೆ ಪ್ರಾಕೃತ ಶರೀರವಿಲ್ಲ, ಅಪ್ರಾಕೃತವಾದ ಶರೀರವಿದೆ ಎಂಬ ಅರ್ಥವನ್ನು ಅವಶ್ಯವಾಗಿ ಹೇಳಬೇಕು, ಹೀಗೆ ಸಿದ್ಧಿಸುವುದು ಕೇವಲ ಸಂಭಾವನಾ ಮಾತ್ರದಿಂದ ಅಲ್ಲ ಹೀಗೆ ಪ್ರಯೋಗಮಾಡಿದ್ದರಿಂದಲೂ ಸಿದ್ಧಿಸುತ್ತದೆ (೨) (ನಾರದರು ಶ್ವೇತದ್ವೀಪದಲ್ಲಿರುತ್ತಿದ್ದ ಮುಕ್ತರನ್ನು ಕಂಡಿದ್ದಾರೆಂದಾಗಲಿ ಆದರೂ ನಮಗೆ ಪ್ರತ್ಯಕ್ಷ ವಿರೋಧವಿಲ್ಲ ಏಕೆಂದರೆ ಶ್ವೇತದ್ವೀಪ ಪ್ರಾಪ್ತಿಯೆಂಬುದು ನಿರ್ಗುಣ ಮುಕ್ತಿಯಿಂದ ಬೇರೆಯಾದ ಗೌಣೀಮುಕ್ತಿಯು ನಿರ್ಗುಣ ಮುಕ್ತಿಯಲ್ಲಿಯೇ ನಾವು ಐಕ್ಯವನ್ನು ಹೇಳುತ್ತೇವೆ ಎಂದರೆ) ಇದು ನಿರ್ಗುಣಮುಕ್ತಿಯಿಂದ ಇತರವಾದ ಗೌಣೀಮುಕ್ತಿಯಲ್ಲ ಈ ವಿಷಯದಲ್ಲಿ ಹೆಚ್ಚು ಹೇಳಿ ಏನು ಪ್ರಯೋಜನವು? ಶ್ವೇತ ದ್ವೀಪಕ್ಕೆ ಹೋಗುವ ಪರ್ಯಂತ ಯೋಗಿಯು ಮುಕ್ತನಾಗಲಾರನು. ಇದು ಸರ್ವ ಶಾಸ್ತ್ರದ ನಿರ್ಣ

ಯವು, ಎಂಬೀ ಆದಿತ್ಯಪುರಾಣದಲ್ಲಿ ಶ್ವೇತದ್ವೀಪ ಪ್ರಾಪ್ತಿಯಿಂದ ವ್ಯತಿರಿಕ್ತವಾದ ಮುಕ್ತಿಯನ್ನು ನಿಷೇಧಿಸಿದ್ದರಿಂದ ಶ್ವೇತದ್ವೀಪ ಪ್ರಾಪ್ತಿಯೇ ಮುಕ್ತಿಯು. (೪) (ಹಾಗಾದರೆ-ಶಿಶುಪಾಲಾದಿಗಳು ಶ್ವೇತದ್ವೀಪಕ್ಕೆ ಹೋಗದೆ ರಾಜಸೂಯ ಯಾಗವಾದದಲ್ಲಿಯೇ **ಚೈದ್ಯದೇಹೋತ್ಥಿತಂ ಜ್ಯೋತಿರ್ವಾಸುದೇವಮುಪಾವಿಶತ್** ಎಂಬ ಭಾಗವತ ಪ್ರಮಾಣದಿಂದ ಶ್ರೀ ಭಗವಂತನನ್ನು ಪ್ರವೇಶಿಸಿ **ದೃಷ್ಟ್ವಾ ಭವದ್ಭಿರ್ನನು ರಾಜಸೂಯೇ ಚೈದ್ಯಸ್ಯ ಕೃಷ್ಣಂ ದ್ವಿಷತೋಽಪಿ ಸಿದ್ಧಿಃ** ಎಂಬ ಪ್ರಮಾಣದಿಂದ ಮುಕ್ತರಾಗಿದ್ದಾರೆಂದು ತೋರುವ ಪ್ರಯುಕ್ತ ಶ್ವೇತದ್ವೀಪ ಪ್ರಾಪ್ತಿಯೇ ಮುಕ್ತಿಯೆಂಬುದು ಹೇಗೆ? ಎಂದರೆ) ಯಾರು ಇಲ್ಲಿಯೇ ಶ್ರೀಹರಿಯನ್ನು ಪ್ರವೇಶಿಸುತ್ತಾರೋ, ಅವರೂ ಕೂಡಾ ಆ ಮೇಲೆ ಶ್ವೇತದ್ವೀಪಕ್ಕೇನೇ ಹೋಗುತ್ತಾರೆ (ಶ್ವೇತದ್ವೀಪಕ್ಕೆ ಹೋದಮೇಲೆಯೇ ಮುಕ್ತರಾಗುತ್ತಾರೆ) (೫) (**ಕೇಚಿದತ್ರೈವ ಮುಚ್ಯಂತೇ**— ಇತ್ಯಾದಿಗಳನ್ನು ಹೇಳಿ **ಮಹಾಜ್ಞಾನಾ ಗಚ್ಛಂತಿ ಕ್ಷೀರಸಾಗರಂ** ಎಂದು ಮಹಾ ಜ್ಞಾನಿತ್ವರೂಪ ಯೋಗ್ಯತೆಯಿರುವವರಿಗೇನೇ ಶ್ವೇತದ್ವೀಪ ಪ್ರಾಪ್ತಿಯನ್ನು ಹೇಳಿದ್ದರಿಂದ ಶ್ವೇತದ್ವೀಪಕ್ಕೆ ಹೋಗದೆ ಮೋಕ್ಷವಾಗುವುದಿಲ್ಲ, ಎಂಬ ನಿಯಮವು ಯುಕ್ತವಲ್ಲ ಎಂದರೆ) ಎಲ್ಲರೂ ಶ್ವೇತದ್ವೀಪಕ್ಕೆ ಹೋಗುತ್ತಾರೆ. ಆದರೂ ಶ್ವೇತದ್ವೀಪದಲ್ಲಿ ಆವಾಸಮಾಡುವುದು ಮಹಾಜ್ಞಾನಿಗಳೇ ಅದಕ್ಕೆ ಮಹಾಜ್ಞಾನಿತ್ವರೂಪವಾದ ಯೋಗ್ಯತೆಯೂ ಬೇಕು **ಅಜನ್ಮಮರಣಂ ವಾ ತೇ ಸ್ಮರಂತ್ಯುತ ನ ವಾಽನಘ** ಎಂದು ಯುಧಿಷ್ಠಿರನು ಪ್ರಶ್ನೆ ಮಾಡಿದಾಗ ನಿರ್ಗುಣಮುಕ್ತಿಯನ್ನು ನಿಂದಿಸಿದ್ದರಿಂದಲೂ **ಬಹುನಾಽತ್ರ** ಎಂಬ ವಾಕ್ಯವು ಶ್ವೇತದ್ವೀಪಪ್ರಾಪ್ತಿ ವ್ಯತಿರಿಕ್ತವಾದ ಮೋಕ್ಷವಿಲ್ಲವೆಂದು ಹೇಳುತ್ತದೆ ಅಥವಾ ಸಗುಣ ಮುಕ್ತಿಯಿಂದ ಇತರವಾದ ನಿರ್ಗುಣಮುಕ್ತಿಯನ್ನು ಪ್ರಶ್ನಿಸಿದಾಗ ಯುಧಿಷ್ಠಿರನು **ಮುಗ್ಧಸ್ಯ** ಇತ್ಯಾದಿನಾ ನಿಂದಿಸಿರುತ್ತಾನೆ. (ನಿರ್ಗುಣಮುಕ್ತಿಯಲ್ಲಿ ಮುಕ್ತರ ಸಮೂಹಕ್ಕೆ ಬ್ರಹ್ಮನಿಂದ ಐಕ್ಯವೆಂದರೆ) ಹೇಗೆ ಪಿಶಾಚಿಯು ಮತ್ತೊಬ್ಬ ಪುರುಷನನ್ನು ಪ್ರವೇಶಿಸಿ ಭೋಗಿಸುತ್ತದೋ, ಹಾಗೆಯೇ ಮುಕ್ತನಿಗೆ ಶ್ರೀಹರಿಯನ್ನು ಪ್ರವೇಶಿಸಿ ಭೋಗಿಸುವುದೇ ಸಾಯುಜ್ಯವು ಐಕ್ಯವಲ್ಲ ಮತ್ತು ಸಾಯುಜ್ಯವನ್ನು ಬೋಧಿಸುವ ಪುರಾಣಬಲದಿಂದಲೂ ಆಗಮವಾಕ್ಯದಿಂದಲೂ ಶ್ರೀಹರಿಯಿಂದ ಕೂಡಿಕೊಂಡು ಶ್ರೀಹರಿಯ ಶರೀರದಲ್ಲಿ ಒಟ್ಟಿಗೆ ಇರುವುದೇ ಸಾಯುಜ್ಯವು-- ಏವಂಚ ಸಾಯುಜ್ಯ ಶಬ್ದದಿಂದ ಭೇದವೇ ತಿಳಿಯುತ್ತದೆ ಐಕ್ಯವಲ್ಲ (೬) ದೇವತೆಗಳು ಪಿಶಾಚಿಗಳು ಇತ್ಯಾದಿಗಳು ಹೇಗೆ ಪುರುಷನನ್ನು ಹೊಂದಿ ಭೋಗಿಸುತ್ತಾರೋ ಹಾಗೆಯೇ ಸಾಯುಜ್ಯರೂಪವಾದ ಉತ್ತಮ ಮುಕ್ತಿಯಲ್ಲಿ (ಶ್ರೀಹರಿಯನ್ನು ಪ್ರವೇಶಿಸಿ) ಬಾಹ್ಯ ಭೋಗಗಳನ್ನುಣ್ಣುತ್ತಾರೆ, ಎಂದು ನಾರಾಯಣಾಷ್ಟಾಕ್ಷರಕಲ್ಪದಲ್ಲಿ ಹೇಳಿರುತ್ತದೆ ॥ ೬೦ ॥

ಭಾ ॥ (೧) ಅತೋಽನಿಷ್ಟಸ್ಯೈವ ಮೋಕ್ಷಃ । ಸೋಽಸ್ತ್ಯೇವ ಸರ್ವಾತ್ಮನಾ । ಅದುಃಖಂ ಸರ್ವದುಃಖವಿವರ್ಜಿತಾಃ ಅಶೋಕಮಹಿಮಂ ಯತ್ರ ಗತ್ವಾ ನ ಶೋಚತೀತ್ಯಾದಿ-ಶ್ರುತಿಭ್ಯಃ । ವಿಶೇಷವಚನಾಭಾವಾಚ್ಚ ॥ (೨) ಯೇಷಾಂ ಶ್ವೇತದ್ವೀಪವ್ಯತೇ ತೇ ಸ ಸಾಯುಜ್ಯಂ ಪ್ರಾಪ್ತಾಃ । ಸಾಮೀಪ್ಯಾದ್ಯೇವ ತೇಷಾಂ । ಅತಃ ಪ್ರಾರಬ್ಧಕರ್ಮ-ಶೇಷಭಾವಾತ್ತದ್ಭುಕ್ತ್ವಾ ಸಾಯುಜ್ಯಂ ಗಚ್ಛಂತಿ ॥ (೩) ತಚ್ಚೋಕ್ತಂ । ಸಂಕರ್ಷ-ಣಾದಯಸ್ಸರ್ವೇ ಸ್ವಾಧಿಕಾರಾದನಂತರಂ । ಪ್ರವಿಶಂತಿ ಪರಂ ದೇವಂ ವಿಷ್ಣುಂ ನಾ-ಸ್ತ್ಯತ್ರ ಸಂಶಯ ಇತಿ ನ್ಯಾಸಯೋಗೇ । ಅತೋಽನಿಷ್ಟಸ್ಯ ಸರ್ವಾತ್ಮನಾ ವಿಯೋಗಃ ॥ (೪) ಪರಬ್ರಹ್ಮತ್ವಮಿಚ್ಛಾಮಿ ಪರಮಾತ್ಮನ್ ಜನಾರ್ದನೇತ್ಯಾದಿನಾ ಬ್ರಹ್ಮಾದಿಭಿರಪಿ ಪ್ರಾರ್ಥಿತತ್ವಾತ್ ॥ (೫) ನ ಮೋಕ್ಷಸದೃಶಂ ಕಿಂಚಿದಧಿಕಂ ವಾ ಸುಖಂ ಕ್ವಚಿತ್ । ಋತೇ ವೈಷ್ಣವಮಾನಂದಂ ವಾಙ್ಮನೋಗೋಚರಂ ಮಹದಿತ್ಯಾದೇಶ್ಚ ಬ್ರಹ್ಮಾದಿ-

**ಪದಾದಪ್ಯಧಿಕತಮಂ ಸುಖಂ ಚ ಮೋಕ್ಷ ಇತಿ ಸಿದ್ಧಂ || (೬) ಅತೋ ಯೋಗಾಯ ಯುಜ್ಯಸ್ವ | ಜ್ಞಾನೋಪಾಯಾಯ | ತದ್ಧಿ ಕರ್ಮಕೌಶಲಂ || ೬ || || ೫೦ ||**

**ಅ ||** (೧) ಆದಕಾರಣ ಅನಿಷ್ಟವಾದ ಸುಕೃತಕ್ಕೇನೇ ವಿಯೋಗವು (ಸುಕೃತವನ್ನು ಬಿಡುವ ವಿಷಯದಲ್ಲಿ ಸಂಕೋಚವಿದ್ದಂತೆ ಅನಿಷ್ಟತ್ಯಾಗದಲ್ಲಿ ಸಂಕೋಚವಿಲ್ಲ ಮತ್ತೆ) ಅನಿಷ್ಟತ್ಯಾಗವು ಸರ್ವಪ್ರಕಾರದಿಂದಲೂ ಆಗಿಯೇ ಆಗುತ್ತದೆ ದುಃಖಲೇಶವಿಲ್ಲದಿರುವುದು. ಸಂಪೂರ್ಣ ದುಃಖವಿಲ್ಲದಿರುವವರು, ಶೋಕವಿಲ್ಲದ ಆನಂದಾದಿ ಮಹಿಮೆಯುಳ್ಳದ್ದು ಅಥವಾ ಶೋಕವಿಲ್ಲದಿರುವುದು ಹಿಮಬಾಧೆಯಿಲ್ಲದಿರುವುದು ಎಲ್ಲಿಗೆ ಹೋಗಿ ದುಃಖಿಸುವುದಿಲ್ಲವೋ ಇದುಮೊದಲಾದ ವೇದಪ್ರಮಾಣಗಳಿಂದ (ಅನಿಷ್ಟವಿಲ್ಲವೇ ಇಲ್ಲ ) ಮತ್ತು ಅಲ್ಪವಾದ ಅನಿಷ್ಟವದೆ ಎಂದು ಹೇಳುವ ವಿಶೇಷವಚನವಿಲ್ಲದಿರುವುದರಿಂದಲೂ (ಸಂಪೂರ್ಣ ಅನಿಷ್ಟ ನಿವೃತ್ತಿಯಾಗುತ್ತದೆಂದು ಹೇಳುವುದೇ ಯುಕ್ತವು ) (೨) (ಸಂಕರ್ಷಣಾದಿಗಳು ಸಮಷ್ಟಿಜೀವರಾದುದರಿಂದ ಅಂದರೆ ಭಗವಂತನ ಸಾಮೀಪ್ಯವನ್ನು ಚೆನ್ನಾಗಿ ಹೊಂದಿರುವವರಾದುದರಿಂದ ಮುಕ್ತರು ಅಂತಹವರಿಗೆ ಬಲರಾಮ ಲಕ್ಷ್ಮಣಾದಿರೂಪಗಳಲ್ಲಿ ದುಃಖವು ಕಾಣುತ್ತದೆ ಅದೇವೇ ವಿಶೇಷಪ್ರಮಾಣವು ಎಂದರೆ—) ಯಾರಿಗೆ ಸ್ವಲ್ಪ ದುಃಖವು ಕಾಣುತ್ತದೋ, ಅವರು ಮುಕ್ತರಲ್ಲ (ಸಾಯುಜ್ಯಯೋಗ್ಯರಿಗೆ ಸಾಯುಜ್ಯವಿಲ್ಲವಾದರೆ ಮುಕ್ತಿಯು ಇಲ್ಲದಿರುವುದರಿಂದ ಅವರು ಮುಕ್ತರು ಎಂದದ್ದಕ್ಕೆ ಏನು ಗತಿಯು? ಎಂದರೆ) ಸಾಮೀಪ್ಯಾದಿಗಳೇ ಅವರು ಮುಕ್ತರೆಂದದ್ದಕ್ಕೆ ಕಾರಣವು (ಅವರು ಮುಕ್ತರು ಏಕೆ ಆಗಲಿಲ್ಲ ಎಂದಗೆ—) ಅವರಿಗೆ ದುಃಖವು ಕಾಣುವುದರಿಂದ ಅದಕ್ಕೆ ಕಾರಣವಾದ ಪ್ರಾರಬ್ಧಕರ್ಮ ಶೇಷವು ಇದ್ದುದರಿಂದ ಮುಕ್ತರಾಗಲಿಲ್ಲ, ಪ್ರಾರಬ್ಧಕರ್ಮ ಶೇಷವನ್ನು ಭೋಗಿಸಿ ಸಾಯುಜ್ಯವನ್ನು ಹೊಂದುತ್ತಾರೆ (೩) (ಪ್ರಾರಬ್ಧಕರ್ಮ ಶೇಷವನ್ನು ಭೋಗಿಸಿದೊಡನೆ ಮುಕ್ತಿಯೆಂಬ ವಿಷಯದಲ್ಲಿ ಆಗಮ ಸಮ್ಮತಿಯನ್ನು ಹೇಳುತ್ತಾರೆ) ಸಂಕರ್ಷಣಾದಿಗಳೆಲ್ಲರೂ ತಂತಮ್ಮ ಅಧಿಕಾರ ಸಮಾಪ್ತಿಯಾದ ಮೇಲೆ ಸರ್ವೋತ್ತಮನಾದ ಶ್ರೀವಿಷ್ಣುವನ್ನು ಪ್ರವೇಶಿಸುತ್ತಾರೆ ಈ ವಿಷಯದಲ್ಲಿ ಸಂಶಯವಿಲ್ಲ ಎಂದು ವ್ಯಾಸಯೋಗವೆಂಬ ಗ್ರಂಥದಲ್ಲಿ ಆ ಪ್ರಮೇಯವು ಹೇಳಲ್ಪಟ್ಟಿದೆ ಆದಕಾರಣ ಅನಿಷ್ಟವು ಸಂಪೂರ್ಣನಿವೃತ್ತಿಯಾಗುತ್ತದೆ (೪) ಎಲೋ ಪರಬ್ರಹ್ಮನೇ ಮುಕ್ತತ್ವವನ್ನು ಇಚ್ಛಿಸುತ್ತೇನೆ, ಇದುಮೊದಲಾದ ಪ್ರಮಾಣಗಳಿಂದ ದುಃಖವಿಲ್ಲದ ಬ್ರಹ್ಮಾದಿಗಳಿಂದಲೂ ಪ್ರಾರ್ಥಿಸಿಕೊಳ್ಳಲ್ಪಡುವುದರಿಂದ (ಮೋಕ್ಷವು ಅನಿಷ್ಟ ನಿವೃತ್ತಿಸ್ವರೂಪಮಾತ್ರವಲ್ಲ ಮತ್ತೆ ಪರಮ ಸುಖರೂಪವೂ ಆಗಿದೆಂದು *ಅನುಮಾನ ಆಗಮಗಳಿಂದ ತಿಳಿಯುತ್ತದೆ (೫) ಶ್ರೀವಿಷ್ಣುವಿನ ಆನಂದ ಹೊರತು ಬೇರೆ ಯಾವುದೊಂದು ಮೋಕ್ಷಕ್ಕೆ ಸದೃಶವಾದುದು ಇಲ್ಲ ಎಲ್ಲಿಯೂ ಹೆಚ್ಚು ಸುಖವೂ ಇಲ್ಲ ಇದುಮೊದಲಾದ ಪ್ರಮಾಣಗಳಿಂದ ಬ್ರಹ್ಮದೇವರಿಗೆ ಬ್ರಹ್ಮಪದಕ್ಕಿಂತಲೂ, ಶೇಷ ದೇವರಿಗೆ ಶೇಷಪದಕ್ಕಿಂತಲೂ ಅತ್ಯಧಿಕವಾದ ಸುಖವೇ ಮೋಕ್ಷವೆಂದು ಸಿದ್ಧವಾಯ್ತು (೬) ಆದಕಾರಣ ಜ್ಞಾನವು ಮಹಾಫಲವಾಗಿರುವ ಕಾರಣ ಯೋಗಾಯ=ಜ್ಞಾನೋಪಾಯಕ್ಕೋಸ್ಕರ ಸನ್ನದ್ಧನಾಗು ಆ ಯೋಗವೇ ಕರ್ಮಕೌಶಲವೆನಿಸುತ್ತದೆ.

ವಿ || **ಸಮತ್ವಂ ಯೋಗ ಉಚ್ಯತೇ** ಎಂದು ಯೋಗವನ್ನು ವ್ಯಾಖ್ಯಾನಮಾಡಿರುವುದರಿಂದ ತಿರುಗಿ **ಯೋಗಃ ಕರ್ಮಸು ಕೌಶಲಂ** ಎಂದು ಅರ್ಥ ಹೇಳಿದ್ದು ಏಕೆ? ಎಂದರೆ ಇದು ಯೋಗವನ್ನು ಸ್ತುತಿಸಿದ್ದು ಕರ್ಮಗಳ ಮಧ್ಯದಲ್ಲಿ ಫಲೇಚ್ಛೆಯನ್ನು ಬಿಟ್ಟು ಶ್ರೀಹರಿಗೆ ತೃಪ್ತಿಯಾಗಲಿ, ಎಂಬ ಬುದ್ಧಿಯಿಂದ ಮಾಡಲ್ಪಡತಕ್ಕ ಕರ್ಮವು **ಯೋಗವು.** ಅಂಗಗಳಿಂದೊಡಗೂಡಿದ ನಿವೃತ್ತಕರ್ಮವು **ಕೌಶಲವು. ಯೋಗವು**

---

* ಬ್ರಹ್ಮಾದಿಗಳ ಮೋಕ್ಷವು ಬ್ರಹ್ಮಾದಿಗಳ ಪದಕ್ಕಿಂತಲೂ ಹೆಚ್ಚು ಸುಖರೂಪವಾಗಿದೆ ಪದ ಹೊಂದಿದ ಬ್ರಹ್ಮಾದಿಗಳಿಂದ ಪ್ರಾರ್ಥಿಸಲ್ಪಡುವುದರಿಂದ ಎಂಬ ಅನುಮಾನವು

ಪುರುಷನಿಗೆ ಕೌಶಲರೂಪವೆಂದು ಸ್ತುತಿಸಿದ್ದು. ಅಥವಾ ಕರ್ಮಗಳಲ್ಲಿ ಯೋಗವು ಪ್ರಶಸ್ತವೆಂದು ಅರ್ಥವು. || ೫೦ ||

ಪೀ—ಹಿಂದೆ ಹೇಳಿದ ಜ್ಞಾನಸಾಧನ ಯೋಗವನ್ನೂ ಜ್ಞಾನಫಲಮೋಕ್ಷವನ್ನೂ ವಿವರಿಸುತ್ತಾರೆ—

**ಗೀ || ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ |**
**ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಂ || ೫೧ ||**

ಅ || ಬುದ್ಧಿಯುಕ್ತಾಃ=ಶಾಸ್ತ್ರಗಳಿಂದುಂಟಾದ ಹರಿಸರ್ವೋತ್ತಮತ್ವಾದಿ ಜ್ಞಾನವುಳ್ಳವರು, ಕರ್ಮಜಂ ಫಲಂ ತ್ಯಕ್ತ್ವಾ=ಕರ್ಮದಿಂದುಂಟಾದ ನಶ್ವರಗಳಾದ ಸ್ವರ್ಗವೊದಲಾದ ಫಲಗಳನ್ನುದ್ದೇಶಿಸಿ ಕರ್ಮಗಳನ್ನು ಮಾಡದೆ (ಕರ್ಮಗಳಲ್ಲಿ ಸ್ವಾತಂತ್ರ್ಯಾಭಿಮಾನವನ್ನು ತೊರೆದು ಶ್ರೀಹರಿಗೆ ತೃಪ್ತಿಯಾಗಲಿ ಎಂಬ ಬುದ್ಧಿಯಿಂದ ಭಗವಂತನ ಆರಾಧನರೂಪವಾದ ನಿಷ್ಕಾಮ ಕರ್ಮವನ್ನು ಮಾಡಿ) ಮನೀಷಿಣಃ=ಶ್ರೀಹರಿಯ ಅಪರೋಕ್ಷಜ್ಞಾನವುಳ್ಳವರಾಗಿ ಜನ್ಮಬಂಧವಿನಿರ್ಮುಕ್ತಾಃ=ಜನನ ಮರಣಾದಿ ರೂಪವಾದ ಸಂಸಾರಬಂಧದಿಂದ ಅತ್ಯಂತವಾಗಿ ಬಿಡುಗಡೆಯನ್ನು ಹೊಂದಿದವರಾಗಿ, ಅನಾಮಯಂ=ಯಾವ ದೋಷಗಳೂ ಇಲ್ಲದಿರುವ ಪದಂ=ಮೋಕ್ಷವನ್ನು, ಗಚ್ಛಂತಿ=ಹೊಂದುತ್ತಾರೆ ಹಿ=ಪ್ರಮಾಣಪ್ರಸಿದ್ಧವು || ೫೧ ||

**ಭಾ || (೧) ತದುಪಾಯಮಾಹ | ಕರ್ಮಜಮಿತಿ || (೨) ಕರ್ಮಜಂ ಫಲಂ ತ್ಯಕ್ತ್ವಾ | ಅಕಾಮನಯಾ ಈಶ್ವರಾಯ ಸಮರ್ಪ್ಯ || (೩) ಬುದ್ಧಿಯುಕ್ತಾಃ ಸಮ್ಯಗ್ಜ್ಞಾನಿನೋ ಭೂತ್ವಾ ಪದಂ ಗಚ್ಛಂತಿ || (೪) ಸಯೋಗಕರ್ಮಜ್ಞಾನಸಾಧನಂ ತನ್ಮೋಕ್ಷಸಾಧನಮಿತಿ ಭಾವಃ || ೫೧ ||**

ಅ || (೧) ಜ್ಞಾನದ ಉಪಾಯಭೂತವಾದ ಯೋಗವನ್ನೂ ಜ್ಞಾನವೇ ಉಪಾಯವಾಗಿಯುಳ್ಳ ಮೋಕ್ಷವನ್ನೂ ಕೂಡ **ಕರ್ಮಜಂ** ಎಂಬ ಶ್ಲೋಕದಿಂದ ವಿವರಿಸುತ್ತಾರೆ (೨) ಕರ್ಮಜಂ ಫಲಂ ತ್ಯಕ್ತ್ವಾ=ಫಲವನ್ನಿಚ್ಛಿಸದೆ ಶ್ರೀಹರಿಗೆ ಸಮರ್ಪಿಸಿ (೩) ಬುದ್ಧಿಯುಕ್ತಾಃ=ಶಾಸ್ತ್ರಗಳಿಂದುಂಟಾದ ತತ್ತ್ವಜ್ಞಾನ (ಪರೋಕ್ಷಜ್ಞಾನ) ವುಳ್ಳವರಾಗಿ ಮೋಕ್ಷವನ್ನು ಹೊಂದುತ್ತಾರೆ (೪) ಸಂಕಲ್ಪ ತ್ಯಾಗಾದಿರೂಪಗಳಾದ ಎಲ್ಲಾ ಅಂಗಗಳ ಸಮೂಹಗಳಿಂದ ಕೂಡಿದ ಯೋಗ ಎನ್ನಿಸಿದ ನಿವೃತ್ತಕರ್ಮವು ಜ್ಞಾನಕ್ಕೆ ಸಾಧನವು ಆ ಜ್ಞಾನವು ಮೋಕ್ಷಕ್ಕೆ ಸಾಧನವು || ೫೧ ||

**ತಾ || (೧) ಯಥಾವದ್ವಿಷ್ಣುಂ ಜ್ಞಾತ್ವಾ ತದರ್ಥತ್ವೇನ ಕರ್ಮಕರಣಮಿತ್ಯೇತತ್ಕರ್ಮಕೌಶಲಮೇವ ಯೋಗಃ || (೨) ಭಗವಜ್ಜ್ಞಾನಮೇವ ಬುದ್ಧಿಃ || ೫೦, ೫೧ ||**

ಅ || (೧) (ಶಾಸ್ತ್ರಗಳಲ್ಲಿ ಹೇಳಿದ ಪ್ರಕಾರ ಶ್ರೀಹರಿಯನ್ನು ತಿಳಿದು ಫಲಗಳಲ್ಲಿ ಸ್ನೇಹವನ್ನು ಬಿಟ್ಟು ಶ್ರೀಹರಿಯನ್ನುದ್ದೇಶಿಸಿ ಕರ್ಮಗಳನ್ನು ಮಾಡುವುದೆಂಬ ಕರ್ಮಕೌಶಲವೇ ಯೋಗವೆನಿಸುತ್ತದೆ (೨) ಭಗವಜ್ಜ್ಞಾನವೇ ಬುದ್ಧಿಯು (ಅಂದರೆ—**ಬುದ್ಧಿಯುಕ್ತಃ** ಎಂಬ ಶ್ಲೋಕಾರ್ಥವನ್ನು ವಿವರಿಸತಕ್ಕ **ಕರ್ಮಜಂ** ಎಂಬ ಶ್ಲೋಕದಲ್ಲಿ ಭಗವಂತನ ಜ್ಞಾನವು ಅಪರೋಕ್ಷಜ್ಞಾನಕ್ಕೆ ಸಾಧನವೆಂದು ಹೇಳಿದ್ದರಿಂದ **ಬುದ್ಧಿಯುಕ್ತಃ** ಎಂಬ ಶ್ಲೋಕದಲ್ಲಿಯೂ **ಯೋಗಸ್ಥಃ** ಎಂಬ ಶ್ಲೋಕದಲ್ಲಿಯೂ ಭಗವಂತನ ಜ್ಞಾನವನ್ನೇ ಇಟ್ಟುಕೊಳ್ಳಬೇಕು || ೫೦, ೫೧ ||

ಟೀ—ಮೋಕ್ಷಕ್ಕೆ ಸಾಧನವಾದ ಜ್ಞಾನವನ್ನಪೇಕ್ಷಿಸುವವನು ಶ್ರೀಹರಿಯ ಆರಾಧನರೂಪಗಳಾದ ಫಲೇಚ್ಛೆಯಿಲ್ಲದ ಕರ್ಮಗಳನ್ನು ಎಷ್ಟು ಕಾಲದ ಪರ್ಯಂತ ಮಾಡಬೇಕೆಂದರೆ—

ಗೀ ‖ ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।
ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ‖ ೫೨ ‖

ಅ ‖ ಯದಾ= ಯಾವಾಗ, ತೇ=ನಿನ್ನ, ಬುದ್ಧಿಃ=ಅಂತಃಕರಣವು, ಮೋಹಕಲಿಲಂ= ಮಿಥ್ಯಾ ಜ್ಞಾನರೂಪವಾದ ದೋಷವನ್ನು, ವ್ಯತಿತರಿಷ್ಯತಿ= ಪರಿತ್ಯಾಗಮಾಡುತ್ತದೋ, (ಯಥಾರ್ಥಜ್ಞಾನವುಳ್ಳದ್ದಾಗುತ್ತದೋ) ತದಾ=ಆಗ, ಶ್ರುತಸ್ಯ=ದೊಡ್ಡವರಿಂದ ಕೇಳಲ್ಪಟ್ಟ, ಶ್ರೋತವ್ಯಸ್ಯ ಚ=ಕೇಳಲು ಯೋಗ್ಯಗಳಾದ ತಮಗೆ ವಿಹಿತಗಳಾದ ಸರ್ವಕರ್ಮಗಳ ಮತ್ತು ವೇದಶ್ರವಣಾದಿಗಳ, ನಿರ್ವೇದಂ= ಅತ್ಯಂತ ಲಾಭವನ್ನು, ಗಂತಾಸಿ= ಹೊಂದುವಿ

ವಿ ‖ ತಮಗೆ ವಿಹಿತಗಳಾದ ಸರ್ವ ಕರ್ಮಗಳಿಗೂ ವೇದಾದಿಗಳ ಶ್ರವಣಾದಿಗಳಿಗೂ ಅಜ್ಞಾನ, ವಿಪರೀತ ಜ್ಞಾನಗಳ ನಿವೃತ್ತಿಯೇ ಫಲವು ಆದಕಾರಣ ಅಜ್ಞಾನಾದಿಗಳು ನಿವೃತ್ತಿಯಾಗಿ ತತ್ವಜ್ಞಾನವು ಹುಟ್ಟುವಪರ್ಯಂತ, ಮುಕ್ತಿಕಾರಣವಾದ ಜ್ಞಾನಕ್ಕೆ ಸಾಧನವಾದ ನಿವೃತ್ತಧರ್ಮಾನುಷ್ಠಾನ ರೂಪವಾದ ಯೋಗವನ್ನು ಮಾಡಬೇಕು ‖ ೫೨ ‖

ಭಾ ‖ (೧) ಕಿಯತ್ಪರ್ಯಂತಮವಶ್ಯಂ ಕರ್ತವ್ಯಾನಿ ಮುಮುಕ್ಷೋರ್ಹ್ಯೈವಂ ಕರ್ಮಾಣೀ-ತ್ಯಾಹ । ಯದೇತಿ ‖ (೨) ನಿರ್ವೇದಂ ನಿತರಾಂ ಲಾಭಂ । ಪ್ರಯೋಗಾತ್ ತಸ್ಮಾದ್ ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯೇತ್ಯಾದಿ । ನ ಹಿ ತತ್ರ ವೈರಾಗ್ಯಮುಪಪದ್ಯತೇ । ತಥಾಸತಿ ಪಾಂಡಿತ್ಯಾದಿತಿ ಸ್ಯಾತ್ ‖ (೩) ನ ಚ ಜ್ಞಾನಿನಾಂ ಭಗವನ್ಮಹಿಮಾದಿಶ್ರ-ವಣೇ ವಿರಕ್ತಿರ್ಭವತಿ ‖ (೪) ಆತ್ಮಾರಾಮಾ ಹಿ ಮುನಯೋ ನಿರ್ಗ್ರಂಥಾ ಅಪ್ಯುರು-ಕ್ರಮೇ । ಕುರ್ವಂತ್ಯಹೈತುಕೀಂ ಭಕ್ತಿಮಿತ್ಥಂಭೂತಗುಣೋ ಹರಿರಿತಿ ವಚನಾತ್ । ಅನುಷ್ಠಾನಾಚ್ಚ ಶುಕಾದೀನಾಂ ‖ (೫) ನ ಚ ತೇಷಾಂ ಫಲಂ ನಾಸ್ತಿ । ತಸ್ಯೈವ ಮಹತ್ಸುಖತ್ವಾತ್ತೇಷಾಂ ‖ ೧ ‖

ಅ ‖ (೧) ಮೋಕ್ಷಸಾಧನ ಜ್ಞಾನವನ್ನು ಇಚ್ಛಿಸುವವನು ಹೀಗೆ ಫಲಕಾಮನಾದಿಗಳನ್ನು ತೊರೆದು ಶ್ರೀಹರಿಯ ಆರಾಧನರೂಪಗಳಾದ ಕರ್ಮಗಳನ್ನು ಎಷ್ಟು ಕಾಲಪರ್ಯಂತ ಅವಶ್ಯವಾಗಿ ಮಾಡಬೇಕೆಂದು ಆಕಾಂಕ್ಷೆಯು ಬಂದರೆ—ಯದಾ ಎಂಬ ಶ್ಲೋಕದಿಂದ ಉತ್ತರಿಸುತ್ತಾರೆ. (ಯೋಗವು ಜ್ಞಾನಸಾಧನವು ಸಾಧ್ಯವು ಸಿಗುವ ಪರ್ಯಂತ ಸಾಧನವನ್ನು ಮಾಡಲೇಬೇಕು ಆದಕಾರಣ ಈ ಆಕಾಂಕ್ಷೆಯೇ ಅಯುಕ್ತವೆಂದರೆ—ಯೋಗವು ಸಾಕ್ಷಾತ್ತಾಗಿ ಜ್ಞಾನಸಾಧನವಲ್ಲ ಮತ್ತೆ ಶ್ರವಣಾದಿಗಳೇ ಜ್ಞಾನಸಾಧನಗಳು, ಯೋಗವು ಅದೃಷ್ಟದ್ವಾರಾ ಅಂತಃಕರಣಕ್ಕೆ ನೈರ್ಮಲ್ಯವನ್ನುಂಟುಮಾಡಿ ಶ್ರವಣ ಮನನ ನಿದಿಧ್ಯಾಸನ ಸಾಕ್ಷಾತ್ಕಾರ ಸಂಪ್ರಜ್ಞಾತಸಮಾಧಿ ಅಸಂಪ್ರಜ್ಞಾತ ಸಮಾಧಿಗಳಿಗೆ ಉಪಕಾರಕವಾಗುತ್ತದೆ ಉಪಕಾರಕವಾದುದು ಸಕೃದನುಷ್ಠೇಯ, ಅಸಕೃದನುಷ್ಠೇಯ ಎಂದು ಎರಡು ವಿಧ. ಪ್ರಕೃತ ಅವಹನನ (ಬತ್ತ ಕುಟ್ಟುವುದು) ಮೊದಲಾದವುಗಳಂತೆ ಅನೇಕಾವರ್ತಿ ಅನುಷ್ಠಿತವಾದ ಯೋಗವು ಶ್ರವಣಾದಿಗಳ ಸ್ವರೂಪಕ್ಕೆ ಉಪಕಾರಕವಾಗುತ್ತದೋ, ಅಥವಾ ಒಂದಾವರ್ತಿ ಮಾಡಿದ ಪ್ರಯಾಜಾದಿಗಳಂತೆ ಫಲೋಪ

ಕಾರವಾಗುತ್ತದೋ, ಎಂದು ಶಂಕೆಯ ಅಭಿಪ್ರಾಯವು ಯೋಗವು ಶ್ರವಣಾದಿಗಳ ಸ್ವರೂಪಕ್ಕೆ ಉಪಕಾರಕವಾಗಿರುವುದರಿಂದ ಅನೇಕಾವರ್ತಿ ಅನುಷ್ಠಾನ ಮಾಡುತ್ತಿರಬೇಕೆಂದುತ್ತರವು.) (೨) (ನಿರ್ವೇದಂ=ವೈರಾಗ್ಯವನ್ನು, ಎಂದು ಸಂಕರಾಚಾರ್ಯರು ಅರ್ಥ ಹೇಳುವುದು ಅಯುಕ್ತವೆನ್ನುತ್ತಾರೆ) ನಿರ್ವೇದಂ=ಅತ್ಯಂತ ಲಾಭವನ್ನು, (ನಿರ್ವೇದ ಎಂಬ ಶಬ್ದಕ್ಕೆ ವೈರಾಗ್ಯವೆಂಬ ಅರ್ಥವು ರೂಢವಾಗಿರುವುದರಿಂದ ಲಾಭವೆಂಬ ಅರ್ಥವು ಸಿಗುವುದು ಹೇಗೆ? ಎಂದರೆ) (1) ಗೀತೆಯಲ್ಲಿ ನಿರ್ವೇದ ಶಬ್ದವನ್ನು ಪ್ರಯೋಗಿಸಿದ್ರಿಂದ (2) ಅಪರೋಕ್ಷಜ್ಞಾನದಿಂದ ಮೋಕ್ಷವಾಗುವ ಪ್ರಯುಕ್ತ ಪರಬ್ರಹ್ಮನನ್ನು ಹೊಂದಲಿಕ್ಕೆ ಯೋಗ್ಯನಾದವನು ಆಗಮದಿಂದ ಹುಟ್ಟುವ ಶ್ರವಣರೂಪ ಜ್ಞಾನವನ್ನು, ಸಂಪಾದಿಸಿ ಯುಕ್ತಿರೂಪ ಬಲ ಸಹಿತವಾದ ಯುಕ್ತಿಜನ್ಯ ಮನನರೂಪಜ್ಞಾನವನ್ನು ಹೊಂದಬೇಕು ಇತ್ಯಾದಿ ವೇದದಲ್ಲಿದ್ದ ಪ್ರಯೋಗದಿಂದಲೂ (ಲಾಭವೆಂಬುವ ಅರ್ಥವು ಸಿದ್ಧವಾಗುತ್ತದೆ ಈ ವೇದದಲ್ಲಿಯೂ ವೈರಾಗ್ಯವೆಂಬ ಅರ್ಥವನ್ನು ಏಕೆ ಹೇಳಬಾರದೆಂದರೆ.) ಅಲ್ಲಿ ವೈರಾಗ್ಯವೆಂಬ ಅರ್ಥವು ಸರ್ವಥಾ ಕೂಡುವುದಿಲ್ಲ (ಏಕೆಂದರೆ) ಅಲ್ಲಿ ವೈರಾಗ್ಯವೆಂಬ ಅರ್ಥವು ಇಷ್ಟವಾಗಿದ್ದರೆ—ಪಾಂಡಿತ್ಯಾತ್=ಪಾಂಡಿತ್ಯದಿಂದ, ಎಂದು ಪಂಚಮೀ ವಿಭಕ್ತಿ ಪ್ರಯೋಗವು ಬರಬೇಕಿತ್ತು (ಪಾಂಡಿತ್ಯಂ ಎಂದು ದ್ವಿತೀಯಾವಿಭಕ್ತಿಯು ಕೂಡದೆ ಹೋಗುವುದು) (ನಿರ್ವಿಂದತೇ ನಿರ್ವಿಂದತಿ ಎಂದು ವೈರಾಗ್ಯವೆಂಬ ಅರ್ಥದಲ್ಲಿ ಪ್ರಯೋಗವೂ ಕಂಡುಬರಲಿಲ್ಲ ಲಾಭಾರ್ಥದಲ್ಲಿಯೇ ಪ್ರಯೋಗವು) (2) (ಕೇವಲ ಗೀತೆಯಲ್ಲಿ ಪ್ರಯೋಗ ಮಾತ್ರ ಮಾಡಿದ್ರಿಂದ ಲಾಭವೆಂಬ ಅರ್ಥವಾಗಬೇಕೆಂದು ಹೇಳಿದ್ದಲ್ಲ ಮತ್ತೆ ವೈರಾಗ್ಯವೆಂಬ ಅರ್ಥವು ಸರ್ವಥಾ ಕೂಡುವುದೂ ಇಲ್ಲವೆನ್ನುತ್ತಾರೆ) ಜ್ಞಾನಿಗಳಿಗೆ ಶ್ರೀಹರಿಯ ಮಹಿಮೆ ಮತ್ತು **ಚರಿತಂ ವೈಷ್ಣವಾನಾಂ ಚ ವಿಷ್ಣೋರ್ದ್ರೇಕಾಯ ಕಥ್ಯತೇ** ಎಂಬ ಪ್ರಮಾಣದಿಂದ ಶ್ರೀಹರಿಯ ಮಹಿಮೆಗೆ ಉಪಯುಕ್ತವಾದ ಹರಿಭಕ್ತರ ಮಹಿಮೆ ಮೊದಲಾದುದನ್ನು ಕೇಳುವ ವಿಷಯದಲ್ಲಿ ವೈರಾಗ್ಯವು ಬರುವದಿಲ್ಲವಷ್ಟೆ (೪) (ಏಕೆ ಬರುದಿಲ್ಲವೆಂದರೆ) ಸ್ವರೂಪಸುಖದಲ್ಲಿ ಕ್ರೀಡಿಸಿಕೊಂಡಿರುವ ಉತ್ತಮಾಧಿಕಾರಿಗಳಾದ ಮುಕ್ತರು ತಮಗೆ ಪ್ರಯೋಜನೋದ್ದೇಶವಿಲ್ಲದಿದ್ದರೂ ಶ್ರೀ ಭಗವಂತನಲ್ಲಿ, ನಿರ್ನಿಮಿತ್ತವಾಗಿ ಶ್ರವಣಾದಿರೂಪವಾದ (**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ । ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ** ಎಂಬ) ಭಕ್ತಿಯನ್ನು ಮಾಡುತ್ತಾರೆ ಏಕೆಂದರೆ-ಶ್ರೀ ಹರಿಯು ಫಲಕಾಮನೆಯಿಲ್ಲದಿರುವ ಭಕ್ತರ ಮನಸ್ಸನ್ನು ವಶೀಕರಿಸುವುದರಲ್ಲಿ ಸಮರ್ಥವಾದ ಗುಣಗಳು ಇರುವವನು. (ಹೀಗಿರಲು ಬಹುಜನ್ಮಗಳಲ್ಲಿ ಭಕ್ತಿ ಮೊದಲಾದ ಸಾಧನಗಳನ್ನು ಹೆಚ್ಚು ಮಾಡಿ ಮೋಕ್ಷದಲ್ಲಿ ಆನಂದಾತಿಶಯವನ್ನು ಇಚ್ಛಿಸುವ ಶುಕಾಚಾರ್ಯರೇ ಮೊದಲಾದವರು ಶ್ರೀಹರಿಯಲ್ಲಿ ಭಕ್ತಿಯನ್ನು ಮಾಡುತ್ತಾರೆಂದು ಸುತರಾಂ ಸಿದ್ಧವಾಗುತ್ತದೆ) ಶುಕಾಚಾರ್ಯರೇ ಮೊದಲಾದವರು ಶ್ರವಣಾದಿಗಳನ್ನು ಮಾಡುತ್ತಿರುತ್ತಾರೆ (ಆದಕಾರಣ ಅವರ ಆಚಾರವೂ ಈ ವಿಷಯದಲ್ಲಿ ಪ್ರಮಾಣವು) (೫) (ಶುಕಾದಿಗಳು ಶ್ರವಣಾದಿಗಳನ್ನು ಮಾಡಿದರೂ ಫಲವಿಲ್ಲ ಅವರಿಗೆ ಶ್ರವಣಾದಿಗಳ ಫಲವಾದ ಜ್ಞಾನವು ಮೊದಲೇ ಪ್ರಾಪ್ತವಾಗಿದೆ ಫಲವಿಲ್ಲವೆಂದನುಸಂಧಾನ ಮಾಡುವುದೇ ಇಲ್ಲಿ ವೈರಾಗ್ಯವು ಇಷ್ಟವಾಗಿದೆ ಹೀಗೆಯೇ ಸಂಕರಾಚಾರ್ಯರು ಹೇಳಿರುವರು **ತದಾ ಶ್ರೋತವ್ಯಂ ಚ ಶ್ರುತಂ ಚ ನಿಷ್ಫಲಂ ಪ್ರತಿಪದ್ಯತೇ** ಆಗ ಕೇಳಲರ್ಹವಾದುದೂ ಕೇಳಿದ್ದೂ ಎಲ್ಲವೂ ನಿಷ್ಫಲವಾಗುತ್ತದೆ ಎಂದು ಹೇಳಿರುವರು **ಲೋಕ**ದಲ್ಲಿದ್ದ ಜನರು ಮಾಡಬೇಕೆಂಬುವುದಕ್ಕಾಗಿ ಅಥವಾ ಭಾವನಾಖ್ಯವಾದ ಅನಾದಿ ಸಂಸ್ಕಾರಬಲದಿಂದ ಶ್ರವಣಾದಿಗಳನ್ನು ಮಾಡುವುದು ಎಂದು ಶಂಕಿಸಿದರೆ) ಆ ಶುಕಾದಿಗಳ ಶ್ರವಣಾದಿಗಳಿಗೆ ಫಲಭೂತವಾದ ಸುಖವು ಇಲ್ಲವೆಂದಲ್ಲ ರಸಿಕರಾದ ಆ ಶುಕಾದಿಗಳಿಗೆ ಆ ಶ್ರವಣಾದಿಗಳೇ ಮಹಾಫಲವಾಗಿವೆ ॥ ೧ ॥

**ಪೀ**—ಬೇರೆ ಫಲವಿಲ್ಲವಾದರೂ ಶ್ರವಣಾದಿಗಳೇ ಶುಕಾದಿಗಳಿಗೆ ಮಹಾ ಸುಖರೂಪವೆಂಬುವುದು ಸಂಭಾವನೆಯಾಗಲಿ, ನಿಶ್ಚಯವು ಹೇಗೆ? ಎಂದರೆ—





**ಭಾ ॥ (೧) ಯಾ ನಿರ್ವೃತಿಸ್ತನುಭೃತಾಂ ತವ ಪಾದಪದ್ಮಧ್ಯಾನಾದ್ಭವಜ್ಜನಕಥಾಶ್ರವಣೇನ ವಾ ಸ್ಯಾತ್ । ಸಾ ಬ್ರಹ್ಮಣಿ ಸ್ವಮಹಿಮನ್ಯಪಿ ನಾಥ ಮಾಭೂತ್ಕಿಮ್ವಂತಕಾಸಿಲುಲಿತಾತ್ಪತತಾಂ ವಿಮಾನಾದಿತ್ಯಾದಿವಚನಾತ್ ॥ (೨) ತೇಷಾಮುಪ್ಯುಪಾಸನಾದಿಫಲಸ್ಯ ಸಾಧಿತತ್ವಾತ್ ॥ (೩) ತಾರತಮ್ಯಾಧಿಗತೇಶ್ಚ ॥ (೪) ತಥಾ ಹಿ । ಯದಿ ತಾರತಮ್ಯಂ ನ ಸ್ಯಾತ್ । (1) ನಾಂತ್ಯಂತಿಕಂ ವಿಗಣಯಂತ್ಯಪಿ ತೇ ಪ್ರಸಾದಂ । (2) ನೈಕಾತ್ಮ್ಯತಾಂ ಮೇ ಸ್ಪೃಹಯಂತಿ ಕೇಚಿತ್ । (3) ಏಕತ್ವಮಪ್ಯುತ ದೀಯಮಾನಂ ನ ಗೃಹ್ಣಂತೀತಿ ಮುಕ್ತಿಮಪ್ಯನಿಚ್ಛತಾಮಪಿ ಮೋಕ್ಷ ಏವ ಫಲಂ ತಮಿಚ್ಛತಾಮಪಿ ಸ ಭವತಿ ಸುಪ್ರತೀಕಾದೀನಾಮಿತಿ ಕಥಮನಿಚ್ಛತಾಂ ಸ್ತುತಿರುಪಪನ್ನಾ ಸ್ಯಾತ್ ॥೨॥**

ಅ ॥ (೧) (ಧ್ರುವನು ಶ್ರೀಭಗವಂತನನ್ನು ಸಾಕ್ಷಾತ್ಕರಿಸಿಕೊಂಡ ಮೇಲೆ ಹೇಳುವ ವಚನವು.) ಎಲೋ ಶ್ರೀ ಪರಮಾತ್ಮನೇ ಶರೀರ ಪೋಷಣೆಯಿಂದ ಫಲವನ್ನು ಹೊಂದಿದ ರಸಿಕರಿಗೆ ನಿನ್ನ ಪಾದಾರವಿಂದಧ್ಯಾನದಿಂದ ಅಥವಾ, ನಿನ್ನ ಮತ್ತು ನಿನ್ನ ಭಕ್ತ ಜನರ ಕಥೆಯನ್ನು ಕೇಳಿದ್ದರಿಂದ ಯಾವ ಸುಖವು ಆಗುತ್ತದೋ, ಅಂತಹ ಸುಖವು ಸ್ವರೂಪಾನಂದವನ್ನು ಅನುಭವಿಸುತ್ತಿರುವ ಪರಬ್ರಹ್ಮನಲ್ಲಿದ್ದವನಿಗೂ ಜೀವನ್ಮುಕ್ತನಿಗಾಗಲೀ ಬರಲಾರದು ಹೀಗೆ ಇರಲು ಯಮನ ಖಡ್ಗದಿಂದ ಛಿನ್ನವಾದ ಅಥವಾ ಶ್ರೀಹರಿಯ ಹುಬ್ಬುಗಳ ವಿಲಾಸವೆಂಬ ಖಡ್ಗದಿಂದ ಚಂಚಲೀಕೃತವಾದ ಸ್ವರ್ಗದಿಂದ ಕೆಳಗೆ ಬೀಳುವವರಿಗೆ ಅಂತಹ ಸುಖವು ಆಗುವುದಿಲ್ಲವೆಂದು ಏನು ಹೇಳಬೇಕು, ಇದು ಮೊದಲಾದ ಪ್ರಮಾಣಗಳಿಂದ ನಿಶ್ಚಯವಾಗುತ್ತದೆ (೨) (ಕೇವಲ ತತ್ಕಾಲದಲ್ಲಿ ಉಂಟಾಗತಕ್ಕ ಸುಖವು ಶ್ರವಣಾದಿಗಳ ಫಲವೆಂದಲ್ಲ. ಮತ್ತೆ ಮೋಕ್ಷದಲ್ಲಿ ಆನಂದ ವೃದ್ಧಿಯೂ ಶ್ರವಣಾದಿಗಳ ಫಲವು ಎನ್ನುತ್ತಾರೆ) ಆ ಜ್ಞಾನಿಗಳಿಗೂ ಕೂಡ ಉಪಾಸನಾದಿಗಳಿಂದ ಫಲವು ಸಿಗುತ್ತದೆಂದು **ನ ಬೃಹತ್ಫಲಮುಪಾಸನಾದಿನಿಮಿತ್ತಂ** ಇತ್ಯಾದಿಗಳಿಂದ ಸಾಧಿಸಲ್ಪಟ್ಟಿದೆ. (೩) (ಜ್ಞಾನವು ಹುಟ್ಟಿದ ಮೇಲೆ ಮಾಡಿದ ಉಪಾಸನಾದಿಗಳಿಗೂ ಫಲವು ಇದ್ದರೆ ಸ್ವರ್ಗದಂತೆ ಮೋಕ್ಷದಲ್ಲಿಯೂ ತಾರತಮ್ಯವು ಬರಬೇಕಾಗುವುದು ಅದು ಯುಕ್ತವಲ್ಲ ಆ ವಿಷಯದಲ್ಲಿ ಪ್ರಮಾಣವಿಲ್ಲ **ಪರಮಂ ಸಾಮ್ಯಮುಪೈತಿ** ಇದು ಮೊದಲಾದ ಪ್ರಮಾಣ ವಿರೋಧವು ಬರುವುದೆಂದರೆ—) (ಇದು ನಮಗೆ ಅನಿಷ್ಟವಲ್ಲ ಮೋಕ್ಷದಲ್ಲಿಯೂ) ನೀಚೋಚ್ಚಭಾವವಿದೆ ಎಂದು ಸ್ಪಷ್ಟವಾಗಿ ತಿಳಿಯುತ್ತದೆ ಪ್ರಮಾಣವಿರೋಧವೂ ಇಲ್ಲ (೪) (ಯಾವ ಪ್ರಮಾಣದಿಂದ ಮುಕ್ತರಿಗೆ ತಾರತಮ್ಯವಿದೆ ಎಂದು ತಿಳಿದುಬರುತ್ತದೆ ಎಂದರೆ) ಮುಕ್ತರಿಗೆ ತಾರತಮ್ಯವಿದೆ ಎಂಬುದನ್ನು ಸ್ಪಷ್ಟವಾಗಿ ಹೇಳಿದ್ದಾರೆ ಮುಕ್ತರಿಗೆ ತಾರತಮ್ಯವು ಇಲ್ಲವೆಂದಾದರೆ—ಮೋಕ್ಷವನ್ನು ಇಚ್ಛಿಸದಿರುವ ಏಕಾಂತಭಕ್ತರಿಗೆ ಮೋಕ್ಷವೇ ಫಲವು. ಮೋಕ್ಷವನ್ನು ಇಚ್ಛಿಸುವ ಸುಪ್ರತೀಕ ಮೊದಲಾದ ಭಕ್ತರಿಗೆ ಮೋಕ್ಷವಾಗುತ್ತದೆಂದು ಅಂಗೀಕರಿಸಬೇಕಾಗುವುದು ತಥಾಚ **ನಾತ್ಯಂತಿಕಂ** ಎಂಬುವುದರಿಂದ ಮೋಕ್ಷವನ್ನು ಇಚ್ಛಿಸದಿರುವವರನ್ನು ಸ್ತುತಿಸಿದ್ದು ಹೇಗೆ ಕೂಡುವುದು? (ಆದಕಾರಣ ಹಾಗೆ ಸ್ತುತಿಸಿದ್ದು ಅನ್ಯಥಾ ಕೂಡದಿರುವುದರಿಂದ ಮೋಕ್ಷವನ್ನು ಇಚ್ಛಿಸುವವರ ಮುಕ್ತಿಗಿಂತ ಮೋಕ್ಷವನ್ನು ಇಚ್ಛಿಸದಿರುವವರ ಮೋಕ್ಷವು ಶ್ರೇಷ್ಠವೆಂದು ತಿಳಿಯುತ್ತದೆ (1) (**ನಾತ್ಯಂತಿಕಂ** ಎಂಬುದು ಶ್ರೀಹರಿಯನ್ನು ಕುರಿತು ಸನಕಾದಿಗಳ ವಾಕ್ಯವು) ಶ್ರೀಹರಿಯೇ ಏಕಾಂತಭಕ್ತರು ಮೋಕ್ಷಕ್ಕೆ ಕಾರಣವಾದ ನಿನ್ನ ಪ್ರಸಾದವನ್ನು ಗಣನೆಮಾಡುವುದಿಲ್ಲ (2) (**ನೈಕಾತ್ಮತಾಂ ಸ್ಪೃಹಯಂತಿ** ಎಂಬುದು ದೇವಹೂತಿಯನ್ನು ಕುರಿತು ಕಪಿಲ ದೇವರ ವಾಕ್ಯವು) **ಹರೌ ನಿಯತಚಿತ್ತತ್ವಾದ್ಗೃಹವತ್ತತ್ಪ್ರವೇಶನಾತ್ । ಮೋಕ್ಷಂ ತಾದಾತ್ಮ್ಯಮಿತ್ಯಾಹುರ್ನ ತದ್ರೂಪತ್ವತಃ ಕ್ವಚಿತ್** ಎಂಬ ಪ್ರಮಾಣರೀತ್ಯಾ ನನ್ನ ತಾದಾತ್ಮ್ಯರೂಪ ಸಾಯುಜ್ಯ

ಮೋಕ್ಷವನ್ನು ಕೆಲವರು ಇಚ್ಛಿಸುವುದಿಲ್ಲ. (3) ಏಕತ್ವಂ ಎಂಬ ವಾಕ್ಯವು ದೇವಹೂತಿಯನ್ನು ಕುರಿತು ಕಪಿಲನ ವಾಕ್ಯವು ) **ಸಾಲೋಕ್ಯಸಾರ್ಷ್ಟಿಸಾಮೀಪ್ಯಸಾರೂಪ್ಯೈಕತ್ವಮಪ್ಯುತ । ದೀಯಮಾನಂ ನ ಗೃಹ್ಣಂತಿ ವಿನಾ ಮತ್ಸೇವನಂ ಜನಾಃ ।** ಏಕಾಂತಭಕ್ತರು ನನ್ನ ಸೇವೆ ಹೊರತು ಸಾಲೋಕ್ಯ ಸಮಾನೈಶ್ವರ್ಯ ಸಾಮೀಪ್ಯ ಸ್ವಾರೂಪ್ಯ ಸಾಯುಜ್ಯರೂಪ ಮೋಕ್ಷವನ್ನು ನಾನು ಕೊಟ್ಟರೂ ತೆಗೆದು ಕೊಳ್ಳುವುದಿಲ್ಲ

**ವಿ ॥ ನೇಚ್ಛಂತಿ ಸಾಯುಜ್ಯಮಪಿ ಫಲತ್ವೇನ ಹರಿರ್ಯದಿ । ದದಾತಿ ಭಕ್ತಿಸಂತುಷ್ಟ ಆಜ್ಞಾತ್ವೇನೈವ ಗೃಹ್ಯತೇ । ತಾದೃಶಾನಾಂ ಸುಖಾಧಿಕ್ಯಂ ಪುನರ್ಮುಕ್ತೌ ಭವಿಷ್ಯತಿ ।** ಏಕಾಂತಭಕ್ತರು ಸಾಯುಜ್ಯರೂಪಮೋಕ್ಷವನ್ನು ಫಲರೂಪವಾಗಿ ಇಚ್ಛಿಸುವುದಿಲ್ಲ ಶ್ರೀಹರಿಯು ಭಕ್ತಿಗೆ ಮೆಚ್ಚಿ ಕೊಟ್ಟರೆ ಆಜ್ಞೆಯೆಂದು ತೆಗೆದುಕೊಳ್ಳುತ್ತಾರೆ. ಅಂತಹವರಿಗೆ ಮುಕ್ತಿಯಲ್ಲಿ ಪುನಃ ಸುಖವು ಅಧಿಕವಾಗುವುದು ॥ ೨ ॥

**ಭಾ ॥ (೧) ವಚನಾಚ್ಚ । ಯಥಾ ಭಕ್ತಿವಿಶೇಷೋಽತ್ರ ದೃಶ್ಯತೇ ಪುರುಷೋತ್ತಮೇ । ತಥಾ ಮುಕ್ತಿವಿಶೇಷೋಽಪಿ ಜ್ಞಾನಿನಾಂ ಲಿಂಗಭೇದನೇ । ಯೋಗಿನಾಂ ಭಿನ್ನಲಿಂಗಾನಾಮಾವಿರ್ಭೂತಸ್ವರೂಪಿಣಾಂ । ಪ್ರಾಪ್ತಾನಾಂ ಪರಮಾನಂದಂ ತಾರತಮ್ಯಂ ಸದೈವ ಹೀತಿ ॥ (೨) ನ ತ್ವಾಮತಿಶಯಿಷ್ಯಂತಿ ಮುಕ್ತಾವಪಿ ಕಥಂಚನ । ಮದ್ಭಕ್ತಿಯೋಗಾಜ್ಞಾನಾಚ್ಚ ಸರ್ವಾನತಿಶಯಿಷ್ಯಸೀತಿ ಚ ॥ (೩) ಸಾಮ್ಯವಚನಂ ತು ಪ್ರಾಚುರ್ಯವಿಷಯಂ ದುಃಖಾಭಾವವಿಷಯಂ ಚ । ತಥಾ ಚೋಕ್ತಂ । ದುಃಖಾಭಾವಃ ಪರಾನಂದೋ ಲಿಂಗಭೇದಃ ಸಮಾ ಮತಾಃ । ತಥಾಽಪಿ ಪರಮಾನಂದೋ ಜ್ಞಾನಭೇದಾತ್ತು ಭಿದ್ಯತ ಇತಿ ನಾರಾಯಣಾಷ್ಟಾಕ್ಷರಕಲ್ಪೇ ॥ (೪) ಅತೋ ನ ವೈರಾಗ್ಯಂ ಶ್ರುತಾದಾವತ್ರ ವಿವಕ್ಷಿತಂ ॥ (೫) ನ ಚ ಸಂಕೋಚೇ ಮಾನಂ ಕಿಂಚಿತ್ । ವಿದ್ಯಮಾನ ಇತರತ್ರ ಪ್ರಯೋಗೇ ॥ (೬) ಮಹದ್ಭಿಃ ಶ್ರವಣೀಯಸ್ಯ ಶ್ರುತಸ್ಯ ಚ ವೇದಾದೇಃ ಫಲಂ ಪ್ರಾಪ್ಸ್ಯಸೀತ್ಯರ್ಥಃ ॥ ೩ ॥ ॥ ೫೨ ॥**

**ಅ ॥** (೧) ಆಗಮಗಳಿಂದ ಮೋಕ್ಷದಲ್ಲಿಯೂ ತಾರತಮ್ಯವಿದೆ ಎಂದು ತಿಳಿಯುತ್ತದೆ ಪುರುಷೋತ್ತಮನಾದ ಶ್ರೀಹರಿಯಲ್ಲಿ ಹೇಗೆ ಭಕ್ತಿವಿಶೇಷವು ಉಂಟಾಗುತ್ತದೋ ಹಾಗೆಯೇ ವಿರಜಾಸ್ನಾನದಿಂದ ಲಿಂಗಶರೀರವು ನಾಶವಾದಮೇಲೆ ಜ್ಞಾನಿಗಳಿಗೆ ಮೋಕ್ಷವಿಶೇಷವು (ಅಂದರೆ ಆನಂದಾತಿಶಯವು) ಸಿಗುವುದು ನಷ್ಟವಾದ ಲಿಂಗಶರೀರವುಳ್ಳ, ಅತಿಶಯವಾಗಿ ಸ್ವರೂಪಾವಿರ್ಭಾವವುಳ್ಳ ಪರಮಾನಂದವನ್ನು ಪಡೆದಿರುವ ಧ್ಯಾನಿಸುತ್ತಿರುವ ಮುಕ್ತರಿಗೆ ಯಾವಾಗಲೂ ತಾರತಮ್ಯವು ಇದೆ (೨) **ಮೋಕ್ಷ**ದಲ್ಲಿಯೂ ಕೂಡ ಯಾರೊಬ್ಬರಿಗೂ ಹೇಗೂ ಕೂಡ ನಿನ್ನನ್ನು (ಶ್ರೀಹರಿಯನ್ನು) ಅತಿಕ್ರಮಿಸಲು ಸಾಧ್ಯವಿಲ್ಲ. ನನ್ನಲ್ಲಿ ವಿಶೇಷವಾಗಿ ಭಕ್ತಿಮಾಡಿರುವ ಪ್ರಯುಕ್ತವೂ ಜ್ಞಾನವಿಶೇಷವಿದ್ದುದರಿಂದಲೂ ನೀನು ಎಲ್ಲರನ್ನೂ ಅತಿಕ್ರಮಿಸುವಿ (ಎಲ್ಲರಿಗಿಂತ ಶ್ರೇಷ್ಠನಾಗಿರುವಿ) (೩) (ಮುಕ್ತರಿಗೆ ತಾರತಮ್ಯ ಹೇಳಿದರೆ **ಪರಮಂ ಸಾಮ್ಯಮುಪೈತಿ** ಇದು ಮೊದಲಾದ ವೇದಪ್ರಮಾಣಗಳಿಂದ ವಿರೋಧವು ಬರುವುದೆಂದರೆ—) ಸಾಮ್ಯವಚನವು ತಂತಮ್ಮ ಯೋಗ್ಯತಾನುಸಾರ ಪೂರ್ಣತ್ವವಿದೆಯೆಂದೂ ದುಃಖಲೇಶವಿಲ್ಲವೆಂದೂ ಹೇಳುತ್ತದೆ (ಅಂದರೆ ಯೋಗ್ಯತಾನುಸಾರ ಪೂರ್ಣತ್ವವನ್ನೂ ದುಃಖಾಭಾವವನ್ನೂ ಹೊಂದುತ್ತಾರೆಂದು ಅರ್ಥವು ) (ಪೂರ್ಣತ್ವಾದಿಗಳಿಂದಲೇ ಸಾಮ್ಯವು ಬೇರೆ ಗುಣಗಳಿಂದ ಅಲ್ಲ ಎಂಬುವುದು ಯಾವ

ಪ್ರಮಾಣದಿಂದ ತಿಳಿಯುವುದೆಂದರೆ—)ಹಿಂದೆ ಹೇಳಿದ **ತಥಾ ಮುಕ್ತಿವಿಶೇಷಃ** ಇತ್ಯಾದಿ ಪ್ರಮಾಣವು ಅನ್ಯಥಾ ವಿರುದ್ಧವಾಗುವುದರಿಂದಲೂ ವಿಶೇಷ ವಚನದಿಂದಲೂ ತಿಳಿಯುತ್ತದೆಂದು ಉಕ್ತವಾಗಿದೆ. ದುಃಖಲೇಶವೂ ಇಲ್ಲದಿರುವುದೂ, ಯೋಗ್ಯತಾನುಸಾರ ಪೂರ್ಣಾನಂದವೂ ಲಿಂಗಶರೀರ ನಾಶವೂ ಇವುಗಳು ಮುಕ್ತರಿಗೆಲ್ಲರಿಗೂ ಸಮಗಳೇ ಆಗಿವೆ ಆದರೂ ಜ್ಞಾನ ಭಕ್ತಿ ಮೊದಲಾದುವುಗಳ ತಾರತಮ್ಯದಿಂದ ಪರಮಾನಂದದಲ್ಲಿಯೂ ತಾರತಮ್ಯವಿದೆ, ಎಂದು ನಾರಾಯಣಾಷ್ಟಾಕ್ಷರಕಲ್ಪದಲ್ಲಿ ಹೇಳಿದೆ (೪) ಜ್ಞಾನಿಗಳೂ ಕೂಡ ಶ್ರೀಹರಿಯ ಮಹಿಮಾದಿಗಳನ್ನು ಕೇಳಬೇಕಾಗಿರುವುದರಿಂದ ಈ ಶ್ಲೋಕದಲ್ಲಿ ಶಾಸ್ತ್ರಶ್ರವಣಾದಿಗಳಲ್ಲಿ ವೈರಾಗ್ಯವೆಂಬುವುದು ಸರ್ವಥಾ ಇಷ್ಟವಲ್ಲ (೫) (ಹಾಗಾದರೆ-ಶ್ರೀಹರಿಯ ಮಹಿಮಾದಿಗಳ ಶ್ರವಣಾದಿಗಳನ್ನು ಬಿಟ್ಟು, ಬೇರೆಯವರ ಮಹಿಮಾದಿಗಳ ಶ್ರವಣಾದಿಗಳಲ್ಲಿ ವೈರಾಗ್ಯವನ್ನು ಇಟ್ಟುಕೊಳ್ಳಬೇಕೆಂದರೆ) ಬೇರೆ ಕಡೆ ಪ್ರಯೋಗವು ಇರುವಾಗ ಹೀಗೆ ಅರ್ಥಸಂಕೋಚ ಮಾಡಿಕೊಳ್ಳುವ ವಿಷಯದಲ್ಲಿ ಯಾವದೊಂದು ಪ್ರಮಾಣವೂ ಇಲ್ಲ. (ಅಂದರೆ—ನಿರ್ವೇದ ಶಬ್ದಕ್ಕೆ ವೈರಾಗ್ಯವೆಂಬ ಒಂದೇ ಅರ್ಥವು ನಿಶ್ಚಿತವಾಗಿದ್ದರೆ— ಅದರ ಬಲದಿಂದ ಶ್ರೋತವ್ಯ ಮೊದಲಾದ ಶಬ್ದಗಳಿಗೆ ಅರ್ಥ ಸಂಕೋಚವನ್ನು ಮಾಡಬಹುದಿತ್ತು. ನಿರ್ವೇದ ಶಬ್ದಕ್ಕೆ ಅತ್ಯಂತ ಲಾಭವೆಂಬ ಅರ್ಥದಲ್ಲಿ **ಪಾಂಡಿತ್ಯಂ ನಿರ್ವಿದ್ಯ** ಇದು ಮೊದಲಾದ ಶ್ರೌತ ಪ್ರಯೋಗವಿರುವಾಗ ಅರ್ಥಸಂಕೋಚಮಾಡಿಕೊಳ್ಳುವುದಕ್ಕೆ ಕಾರಣವೇ ಇಲ್ಲ (೬) (ಹಾಗಾದರೆ— ನಿರ್ವೇದ ಶಬ್ದಕ್ಕೆ ಲಾಭವೆಂಬ ಅರ್ಥ ಇಟ್ಟುಕೊಂಡರೂ ದುಷ್ಟ ಶಾಸ್ತ್ರವನ್ನು ಕೇಳಬಾರದು ಆದಕಾರಣ ಅಸಚ್ಛಾಸ್ತ್ರಾದಿಗಳಲ್ಲಿ ಶ್ರೋತವ್ಯತ್ವಾದಿಗಳು ಬಾರದಿರುವುದಕ್ಕಾಗಿ ಅರ್ಥಸಂಕೋಚ ಮಾಡಿಕೊಳ್ಳಲೇ ಬೇಕೆಂದರೆ) (ಸಜ್ಜನರಿಂದ) ಕೇಳಲರ್ಹವಾದ ಮತ್ತೂ ಕೇಳಲ್ಪಟ್ಟ ವೇದಾದಿಗಳ ಫಲವನ್ನು ಹೊಂದುವಿ, ಎಂದರ್ಥವು

ವಿ || **ಶ್ರೋತವ್ಯಸ್ಯ ಶ್ರುತಸ್ಯ ಚ** ಇತ್ಯಾದಿಗಳಲ್ಲಿ ಯೋಗ್ಯವಾಗಿರುವುದರಿಂದ **ಮಹದ್ಭಿಃ** ಎಂದು ಕರ್ತೃಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು ಆಗ ಅಸಚ್ಛಾಸ್ತ್ರಾದಿಗಳು ಪೂಜ್ಯರಿಗೆ ಕೇಳಲರ್ಹಗಳೇ ಅಲ್ಲ ಮತ್ತು ಶ್ರೋತವ್ಯವೂ (ಕೇಳಲರ್ಹವು) ಶ್ರುತವೂ (ಕೇಳಲ್ಪಟ್ಟದ್ದು) ಆದುದು ವೇದಾದಿಗಳೇ ಅವುಗಳೇ ಮೋಕ್ಷಕ್ಕೆ ಉಪಯುಕ್ತವಾದ ಜ್ಞಾನವನ್ನು ಹುಟ್ಟಿಸುತ್ತವೆ, ಎಂಬೀ ಪ್ರಕರಣ ಬಲದಿಂದಲೂ ಅಸಚ್ಛಾಸ್ತ್ರಾದಿಗಳಲ್ಲಿ ಬರುವುದೇ ಇಲ್ಲ ಆದಕಾರಣ ಅದಕ್ಕಾಗಿ ಸಂಕೋಚಮಾಡಿಕೊಳ್ಳುವುದಿಲ್ಲ ಅಥವಾ ಅಸಚ್ಛಾಸ್ತ್ರಶ್ರವಣವು ಮಹಾ ಪಾತಕಗಳಲ್ಲಿ ಪರಿಗಣಿತವಾಗಿರುವುದರಿಂದ ಶ್ರೋತುಂ ಯೋಗ್ಯಂ ಶ್ರೋತವ್ಯಂ=ಕೇಳಲಿಕ್ಕೆ ಯೋಗ್ಯವಾದುದು ಶ್ರೋತವ್ಯವು ಏವಂಚ ಶ್ರವಣಯೋಗ್ಯತ್ವರೂಪವಾದ ಶ್ರೋತವ್ಯತ್ವವು ಅಸಚ್ಛಾಸ್ತ್ರದಲ್ಲಿ ಇಲ್ಲ ಆದಕಾರಣ ಶ್ರೋತವ್ಯ ಪದದಿಂದಲೇ ಅಸಚ್ಛಾಸ್ತ್ರ ನಿರಾಸವು ಆಗುವುದರಿಂದ ಲಾಭವೆಂಬ ಅರ್ಥ ಇಟ್ಟುಕೊಂಡರೆ-ಸಂಕೋಚಮಾಡಿಕೊಳ್ಳಬೇಕಾಗಿಲ್ಲ. ಮತ್ತೂ **ತ್ರೈಗುಣ್ಯವಿಷಯಾ ವೇದಾಃ** ಎಂದು ವೇದ ಮೊದಲಾದ ಸಚ್ಛಾಸ್ತ್ರಗಳ ಪ್ರಕರಣವಾಗಿರುವುದರಿಂದ ಅಸಚ್ಛಾಸ್ತ್ರಕ್ಕೆ ಪ್ರಸಕ್ತಿಯೇ ಇಲ್ಲ. ಏವಂಚ ಲಾಭವೆಂಬ ಅರ್ಥ ಇಟ್ಟುಕೊಂಡರೆ ಸಂಕೋಚಮಾಡಿಕೊಳ್ಳಬೇಕಾಗಿಲ್ಲ. ' || ೫೨ ||

ಪೀ—ಹಿಂದಿನ ಶ್ಲೋಕದಲ್ಲಿ ಹೇಳಿದ ಮೋಹಕಲಿಲವು ಯಾವುದು? ಅದನ್ನು ದಾಟುವುದು ಹೇಗೆ ಎಂದಾಶಂಕೆಯು ಬಂದರೆ-ಪುರುಷರಲ್ಲಿ ಅಧಮ ಮಧ್ಯಮ ಉತ್ತಮ ಅವಸ್ಥಾದಿಗಳನ್ನು ತೋರಿಸಿ ಹಿಂದಿನ ಶ್ಲೋಕದಲ್ಲಿ ಹೇಳಿದ ಯೋಗಾನುಷ್ಠಾನದ ಅವಧಿಯನ್ನೇ ಸ್ಪಷ್ಟೀಕರಿಸುತ್ತಾರೆ.

**ಗೀ || ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ |**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ || ೫೩ ||**

ಅ || ಶ್ರುತಿವಿಪ್ರತಿಪನ್ನಾ=ಪರೋಕ್ಷತತ್ವ ನಿಶ್ಚಯಕ್ಕಿಂತ ಮೊದಲು ವೇದಗಳಿಂದ ವಿರುದ್ಧವಾಗಿರುವ (ಅಂದರೆ ಆಪಾತತಃ ತೋರುವ ಅರ್ಥದಿಂದ ವಿರುದ್ಧಾರ್ಥ ವಿಷಯಕವಾದ ಅಥವಾ ಸಂದೇಹ ಯುಕ್ತವಾದ) ತೇ=ನಿನ್ನ, ಬುದ್ಧಿಃ=ಅಂತಃಕರಣವು, ಯದಾ=ಯಾವಕಾಲದಲ್ಲಿ, ನಿಶ್ಚಲಾ=ವೇದಗಳ ಅರ್ಥಕ್ಕೆ ಅನುಕೂಲವಾದ ತತ್ವನಿಶ್ಚಯದಿಂದ, ದುಶ್ಶಾಸ್ತ್ರಗಳಿಂದ, ಇದೋ ಅದೋ ಎಂಬ ಸಂಶಯ ವಿರಹಿತವಾಗಿಯೂ, ವಿರುದ್ಧಾರ್ಥಗಳನ್ನು ವಿಷಯೀಕರಿಸದೆ ಯಥಾರ್ಥವಾಗಿ ವಸ್ತುಗಳನ್ನು ತಿಳಿಸುವುದಾಗಿಯೂ, ಸ್ಥಾಸ್ಯತಿ=ಇರುತ್ತದೋ, (ಅದರಿಂದ, ಸಮಾಧಿಃ=ಅಸಂಪ್ರಜ್ಞಾತ ಭಗವದ್ಧ್ಯಾನವುಂಟಾಗುತ್ತದೆ) ಸಮಾಧೌ=ಅಸಂಪ್ರಜ್ಞಾತ ಧ್ಯಾನವುಂಟಾದರೆ—(ಅಪರೋಕ್ಷ ಜ್ಞಾನವುಂಟಾಗುತ್ತದೆ.) (ಆ ಬ್ರಹ್ಮದರ್ಶನದಿಂದ ಪರಮಾನಂದವನ್ನು ಹೊಂದಿರುವಕಾರಣ, ಭೇರೀತಾಡನಾದಿಗಳಿಂದಲೂ) ಅಚಲಾ=ಹಂದಾಡದಿರುವ (ದೃಢವಾದ) ಬುದ್ಧಿಃ=ಮನಸ್ಸು ಸ್ಥಾಸ್ಯತಿ =ಇರುತ್ತದೋ, ತದಾ=ಆಗ, ಯೋಗಂ=ಅಪರೋಕ್ಷಜ್ಞಾನರೂಪ ಉಪಾಯವನ್ನು, (ಜ್ಞಾನೋಪಾಯವನ್ನು ಮಾಡಿದ್ದಕ್ಕೆ ಫಲವನ್ನು,) ಅವಾಪ್ಸ್ಯಸಿ=ಹೊಂದುವಿ

ವಿ || (1) ಶ್ರುತಿವಿಶೇಷದಿಂದ ಶುತ್ಯರ್ಥ ನಿರ್ಣಯವನ್ನು ಹೊಂದಿದ್ದಾಗಿ, ಇದೋ ಅದೋ ಎಂದು ಚಾಂಚಲ್ಯವಿಲ್ಲದೆ. ಯಾವಾಗ ಇರುತ್ತದೋ, ಆಗ ವೇದಾರ್ಥ ನಿಶ್ಚಯದಿಂದ ಚಾಂಚಲ್ಯವಿಲ್ಲದೆ ಅಪರೋಕ್ಷಜ್ಞಾನವುಂಟಾಗುತ್ತದೆ ಅದರಿಂದ ವಿಷ್ಣುವಿನಲ್ಲಿ ಸ್ಥಿರವಾದ ಬುದ್ಧಿಯುಂಟಾಗುತ್ತದೆ ಆ ಮೇಲೆ ಮೋಕ್ಷವನ್ನು ಹೊಂದುವಿ ಮೋಹಕಲಿಲವೆಂದರೆ—ಮನಸ್ಸಿನಲ್ಲಿ ಶ್ರುತಿ ವಿರುದ್ಧತ್ವರೂಪದೋಷವು. (2) ತರಣವೆಂದರೆ—ವೇದಾರ್ಥಕ್ಕೆ ಅನುಕೂಲವಾದ ನಿಶ್ಚಯದಿಂದ ದೃಢವಾಗಿ ಇರುವಿಕೆ. ಇಂತಹ ಅವಸ್ಥೆಯನ್ನು ಹೊಂದುವುದೇ ಯೋಗಾನುಷ್ಠಾನದ ಅವಧಿಯು || ೫೩ ||

**ಭಾ || (೧) ತದೇವ ಸ್ಪಷ್ಟಯತಿ | ಶ್ರುತಿವಿಪ್ರತಿಪನ್ನೇತಿ || (೨) ಪೂರ್ವಂ ಶ್ರುತಿಭಿರ್ವೇದೈರ್ವಿಪ್ರತಿಪನ್ನಾ ವಿರುದ್ಧಾ ಸತೀ ವೇದಾರ್ಥಾನುಕೂಲೇನ ತತ್ತ್ವನಿಶ್ಚಯೇನ ವಿಪರೀತವಾಗ್ಭಿರಪಿ ನಿಶ್ಚಲಾ ಭವತಿ || (೩) ತತಶ್ಚ ಸಮಾಧಾವಚಲಾ ಬುದ್ಧಿರ್ಬ್ರಹ್ಮಪ್ರತ್ಯಕ್ಷದರ್ಶನೇನ ಭೇರೀತಾಡನಾದಾವಪಿ ಪರಮಾನಂದಮಗ್ನತ್ವಾತ್ | ತದಾ ಯೋಗಮವಾಪ್ಸ್ಯಸಿ ಉಪಾಯಸಿದ್ಧೋ ಭವಸೀತ್ಯರ್ಥಃ || ೫೩ ||**

ಅ || (೧) ಹಿಂದಿನ ಶ್ಲೋಕದಲ್ಲಿ ಹೇಳಿದ ಯೋಗಾನುಷ್ಠಾನದ ಅವಧಿಯನ್ನೇ ಶ್ರುತಿವಿಪ್ರತಿಪನ್ನಾ ಎಂಬ ಶ್ಲೋಕದಿಂದ ಸ್ಪಷ್ಟೀಕರಿಸುತ್ತಾರೆ (೨) (ಶ್ಲೋಕಾರ್ಥವನ್ನು ಹೇಳುತ್ತಾರೆ) ಪರೋಕ್ಷ ತತ್ವನಿಶ್ಚಯವಾಗುವುದಕ್ಕಿಂತ ಮೊದಲು ಬುದ್ಧಿಯು ವೇದಗಳಿಂದ ವಿರುದ್ಧವಾದುದಾಗಿ ಯಾವಾಗ ವೇದಾರ್ಥಕ್ಕೆ ಅನುಕೂಲವಾದ ತತ್ವನಿಶ್ಚಯವಿದ್ದುದರಿಂದ ಅಪಶಾಸ್ತ್ರಗಳಿಂದಲೂ ಸಂಶಯವಿಲ್ಲದಿರುವುದಾಗಿರುತ್ತದೋ, (೩) ಅದರಿಂದ ಬುದ್ಧಿಯು ಭಗವದ್ಧ್ಯಾನ ಮಾಡುವ ವಿಷಯದಲ್ಲಿ ದೃಢವಾಗುತ್ತದೆ ಪರಬ್ರಹ್ಮನ ಅಪರೋಕ್ಷಜ್ಞಾನದಿಂದ ಉತ್ಕೃಷ್ಟಾನಂದದಲ್ಲಿ ಮಗ್ನನಾಗಿರುವುದರಿಂದ ಭೇರೀತಾಡನಾದಿಗಳು ಆದರೂ ಚಲಿಸದೆ ದೃಢವಾಗಿರುವುದೋ, ಆಗ ಉಪಾಯದಿಂದ ಫಲವನ್ನು ಹೊಂದಿದವನಾಗುತ್ತಿ ಎಂದರ್ಥವು || ೫೩ ||

ಪೀ—ನಿರ್ವೇದ ಪದದಿಂದ ವೈರಾಗ್ಯವು ಹೇಳಲ್ಪಡುತ್ತದೆಂಬ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುತ್ತಾರೆ

**ತಾ || (೧) ನಿರ್ವೇದಂ ನಿತರಾಂ ಲಾಭಂ | ಬುದ್ಧಿರ್ಮೋಹೋ ಯದಾ ನ ಸ್ಯಾದನ್ಯಥಾಜ್ಞಾನಲಕ್ಷಣಃ | ಶ್ರೋತವ್ಯಶ್ರುತಸಾಫಲ್ಯಂ ತದಾ ಪ್ರಾಪ್ನೋತಿ ಮಾನವಃ || (೨) ಶ್ರುತಿ-**

ಮಾರ್ಗಂ ಪ್ರಪನ್ನಾ ತು ತದರ್ಥಜ್ಞಾನನಿಶ್ಚಲಾ । ಸಮಾಧಾನೇನ ತು ಪುನರಾಪ-
ರೋಕ್ಷ್ಯಾಚ್ಚ ನಿಶ್ಚಲಾ । ವಿಷ್ಣೌ ಪ್ರಾಪ್ಸ್ಯತಿ ತದ್ಯೋಗಂ ಮುಕ್ತೋ ಭೂತ್ವಾ ತದ-
ಶ್ನುತ ಇತಿ ಪೈಂಗಿಶ್ರುತೌ ವಿಶೇಷೇಣ ಪ್ರತಿಪನ್ನಾ ॥ ೫೨,೫೩ ॥

ಅ ॥ (೧) (1) ನಿರ್ವೇದಂ=ಅತ್ಯಂತ ಲಾಭವನ್ನೂ. (2) ವಿಪರೀತ ಜ್ಞಾನರೂಪವಾದ ಬುದ್ಧಿ ಮೋಹವು ಯಾವಾಗ ಬರುವುದಿಲ್ಲವೋ, ಆಗ ಮನುಷ್ಯನು ಕೇಳಲರ್ಹ ಮತ್ತೂ ಕೇಳಲ್ಪಟ್ಟ ಸರ್ವಕರ್ಮಗಳ ಮತ್ತು ವೇದಾದಿಗಳ ಸಾಫಲ್ಯವನ್ನು ಹೊಂದುತ್ತಾನೆ (೨) ಬುದ್ಧಿಯು ವೇದ ಮಾರ್ಗವನ್ನು ಹೊಂದಿದ್ದಾಗಿ ವೇದಾರ್ಥಜ್ಞಾನದಿಂದ ದೃಢವಾಗುತ್ತದೆ ವೇದಾರ್ಥ ನಿಶ್ಚಯದಿಂದ ಭೇರೀತಾಡನಾದಿಗಳು ಆದರೂ ಮನಸ್ಸು ಶ್ರೀಹರಿಯಲ್ಲಿ ದೃಢವಾಗಿರುವುದು ಸಮಾಧಾನವು ಅದರಿಂದ ಅಪರೋಕ್ಷ ಜ್ಞಾನ ಉಂಟಾಗುತ್ತದೆ. ಅದರಿಂದ ವಿಷ್ಣುವಿನಲ್ಲಿ ಮನಸ್ಸು ದೃಢವಾಗುತ್ತದೆ ಮುಕ್ತನಾಗಿ ಭಗವಂತನಲ್ಲಿ ಯೋಗವನ್ನು ಹೊಂದುತ್ತಾನೆ. ಪರಬ್ರಹ್ಮನನ್ನು ಹೊಂದುತ್ತಾನೆ ಎಂದು ಪೈಂಗಿ ಶ್ರುತಿಯಲ್ಲಿ ಹೇಳಿದೆ. ಶ್ರುತಿವಿಪ್ರತಿಪನ್ನಾ ಎಂಬುದಕ್ಕೆ ವೇದಾರ್ಥವನ್ನು ನಿಶ್ಚಯಿಸಿಕೊಳ್ಳುವುದರಲ್ಲಿ ವಿಶೇಷವಾಗಿ ಪ್ರವೃತ್ತವಾದುದು, ಎಂದರ್ಥವು. ಶ್ರುತಿವಿರುದ್ಧವೆಂದರ್ಥವಲ್ಲ.

ವಿ ॥ ನಿನ್ನ ಮನೋವ್ಯಾಪಾರವು ವೇದಮಾರ್ಗವನ್ನು ವಿಶೇಷವಾಗಿ ಹೊಂದಿದ್ದಾಗಿ ವೇದಾರ್ಥವನ್ನು ನಿಶ್ಚಯಿಸಿಕೊಳ್ಳುವುದರಲ್ಲಿ ಪ್ರವೃತ್ತವಾಗುತ್ತದೆ ವೇದಾರ್ಥಶ್ರವಣದಿಂದ ಅಜ್ಞಾನವು ಹೋಗಿ ದೃಢವಾಗುತ್ತದೆ ಮನನದಿಂದ ಸಂಶಯವಿಪರ್ಯಯಗಳ ನಿರಾಸವಾಗುತ್ತದೆ ವೇದಾರ್ಥ ನಿಶ್ಚಯದಿಂದ ದೃಢವಾಗಿ ಶ್ರೀಹರಿಯನ್ನು ಧ್ಯಾನಿಸುತ್ತಿರುತ್ತಾನೆ. ಆದರಿಂದ ಅಪರೋಕ್ಷಜ್ಞಾನಹೊಂದಿ ಮುಕ್ತನಾಗುತ್ತಾನೆ ॥ ೫೨, ೫೩ ॥

ಗೀ ॥ ಅರ್ಜುನ ಉವಾಚ

ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।
ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಂ ॥ ೫೪ ॥

ಅ ॥ ಅರ್ಜುನನು ಪುನಃ ಪ್ರಶ್ನೆಮಾಡುತ್ತಾನೆ. ಕೇಶವ=ಬ್ರಹ್ಮರುದ್ರರಿಗೆ ಪ್ರವರ್ತಕನಾದ ಶ್ರೀಕೃಷ್ಣನೇ, ಸಮಾಧಿಸ್ಥಸ್ಯ=ಸಮಾಧ್ಯವಸ್ಥೆಯನ್ನು (ಚಿತ್ತೈಕಾಗ್ರತೆಯನ್ನು) ಹೊಂದಿದ, ಸ್ಥಿತಪ್ರಜ್ಞಸ್ಯ= ಸ್ಥಿರವಾದ ಯಥಾರ್ಥ ಜ್ಞಾನವುಳ್ಳ ಅಪರೋಕ್ಷಜ್ಞಾನಿಗೆ, ಕಾ ಭಾಷಾ=ವ್ಯವಹಾರಕ್ಕೆ ಕಾರಣವಾದ ಲಕ್ಷಣವೇನು? ಸ್ಥಿತಧೀಃ=ಅಪರೋಕ್ಷಜ್ಞಾನಿಯು, ಕಿಂ ಪ್ರಭಾಷೇತ=ಯಾವ ವಿಷಯದಲ್ಲಿ ಮಾತನ್ನಾಡುವನು? ಕಿಮಾಸೀತ=ಯಾವಕಾರಣದಿಂದ ಕೂತುಕೊಳ್ಳುತ್ತಾನೆ, ಕಿಂ ವ್ರಜೇತ=ಯಾವುದಕ್ಕಾಗಿ ಓಡಾಡಿಕೊಂಡಿರುತ್ತಾನೆ? (ಯಾವ ಉದ್ದೇಶದಿಂದ ಪ್ರವೃತ್ತಿಮಾಡುತ್ತಾನೆ) ॥ ೫೪ ॥

ಪೀ—ಪ್ರಜ್ಞಾ ಎಂಬ ಶಬ್ದಕ್ಕೆ ಕೇವಲ ಬುದ್ಧಿಯೆಂಬ ಅರ್ಥವು, ಎಂಬ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಸ್ಥಿತಪ್ರಜ್ಞ ಶಬ್ದದ ಅರ್ಥವನ್ನು ಹೇಳುತ್ತಾರೆ—

ಭಾ ॥ (೧) ಸ್ಥಿತಾ ಪ್ರಜ್ಞಾ ಜ್ಞಾನಂ ಯಸ್ಯ ಸ ಸ್ಥಿತಪ್ರಜ್ಞಃ । ಭಾಷ್ಯತೇಽನಯೇತಿ ಭಾಷಾ ಲಕ್ಷಣಮಿತ್ಯರ್ಥಃ ॥ (೨) ಉಕ್ತಂ ಲಕ್ಷಣಮನುವದತಿ ಲಕ್ಷಣಾಂತರಂ ಪೃಚ್ಛಾಮೀತಿ ಜ್ಞಾಪಯಿತುಂ ಸಮಾಧಿಸ್ಥಸ್ಯೇತಿ ॥ (೩) ಕಂ ಬ್ರಹ್ಮಾಣಮೀಶಂ ರುದ್ರಂ ಚ ವರ್ತ-

**ಯತೀತಿ ಕೇಶವಃ । ತಥಾ ಹಿ ನಿರುಕ್ತಿಃ ಕೃತಾ ಹರಿವಂಶೇಷು ರುದ್ರೇಣ ಕೈಲಾಸ-ಯಾತ್ರಾಯಾಂ ॥ (೪) ಹಿರಣ್ಯಗರ್ಭಃ ಕಃ ಪ್ರೋಕ್ತ ಈಶಃ ಶಂಕರ ಏವ ಚ । ಸೃಷ್ಟ್ಯಾದಿನಾ ವರ್ತಯತಿ ತೌ ಯತಃ ಕೇಶವೋ ಭವಾನಿತಿ ವಚನಾಂತರಾಚ್ಚ ॥ (೫) ಕಿಮಾಸೀತ ಕಿಂ ಪ್ರತ್ಯಾಸೀತ । ನ ಚಾರ್ಜುನೋ ನ ಜಾನಾತಿ ತಲ್ಲಕ್ಷಣಾದಿಕಂ । ಜಾನಂತಿ ಪೂರ್ವರಾಜಾನೋ ದೇವರ್ಷಯಸ್ತಥೈವ ಚ । ತಥಾಽಪಿ ಧರ್ಮಾನ್ ಪೃಚ್ಛಂತಿ ವಾರ್ತಾಯೈ ಗುಹ್ಯವಿತ್ತಯೇ । ನ ತೇ ಗುಹ್ಯಾಃ ಪ್ರತೀಯಂತೇ ಪುರಾಣೇಷ್ವಲ್ಪಬುದ್ಧಿನಾಮಿತಿ ವಚನಾತ್** ॥ ೫೪ ॥

ಅ ॥ (೧) ಚೆನ್ನಾಗಿ ದೃಢವಾಗಿ ಉಂಟಾದ ಅಪರೋಕ್ಷಜ್ಞಾನವುಳ್ಳವನು ಸ್ಥಿತಪ್ರಜ್ಞನು ಲಕ್ಷಣದಿಂದ ಜ್ಞಾನಿಯೆಂದು ವ್ಯವಹರಿಸಲ್ಪಡುತ್ತಾನೆ ಭಾಷಾ=ಲಕ್ಷಣವು (೨) (ಎಲ್ಲಾ ಜ್ಞಾನಿಗಳನ್ನು ತೆಗೆದುಕೊಳ್ಳಬಾರದೆಂಬ ಉದ್ದೇಶದಿಂದ **ಸಮಾಧಿಸ್ಥಸ್ಯ** ಎಂಬ ವಿಶೇಷಣವು, ಎಂದು **ಲಬ್ಧಸಮಾಧಿಪ್ರಜ್ಞಸ್ಯ ಲಕ್ಷಣಬುಬುತ್ಸಯಾಽರ್ಜುನ ಉವಾಚ** ಎಂದು ಸಂಕರಾಚಾರ್ಯರು ಹೇಳಿರುತ್ತಾರೆ ಇದು ಅಯುಕ್ತವೆಂಬ ಅಭಿಪ್ರಾಯದಿಂದ ಹೇಳುತ್ತಾರೆ) (ಸಾಮಾನ್ಯವಾಗಿ ಎಲ್ಲಾ ಜ್ಞಾನಿಗಳಿಗೆ ಲಕ್ಷಣವೇನು ಎಂದೇ ಪ್ರಶ್ನೆಯು ಹಾಗಾದರೆ **ಸಮಾಧಿಸ್ಥಸ್ಯ** ಎಂಬುದು ಏಕೆ ಹೇಳಿದ್ದು. ಎಂದರೆ—) **ಸಮಾಧಾವಚಲಾ ಬುದ್ಧಿಃ** ಎಂಬುದರಿಂದ ಹೇಳಿದ ಜ್ಞಾನಿಗಳ ಸಾಮಾನ್ಯ ಲಕ್ಷಣವನ್ನು **ಸಮಾಧಿಸ್ಥಸ್ಯ** ಎಂಬುದರಿಂದ ಅನುವಾದ ಮಾಡಿರುತ್ತಾರೆ. (ಅನುವಾದವು ಏತಕ್ಕೆಂದರೆ—) ಈ ಲಕ್ಷಣವು ನನಗೆ ತಿಳಿದಿದೆ, ಬೇರೆ ಲಕ್ಷಣವನ್ನು ಪ್ರಶ್ನೆ ಮಾಡುತ್ತೇನೆ, ಎಂದು ತಿಳಿಸುವುದಕ್ಕಾಗಿ **ಸಮಾಧಿಸ್ಥಸ್ಯ** ಎಂದು ಹೇಳಿದ್ದು (೩) (ಕಶ್ಚ ಅಶ್ಚ ಈಶಶ್ಚ ಕೇಶಾಃ=ಬ್ರಹ್ಮ ವಿಷ್ಣು ರುದ್ರರು ಇವರು ಯಾರಿಗೆ ಅವಯವಭೂತರಾಗಿರುತ್ತಾರೋ, ಅವನು ಕೇಶವಃ ಪರಮಾತ್ಮನು, ಎಂದು ಭಾಸ್ಕರಾಚಾರ್ಯರು **ಏತಚ್ಛ್ರುತ್ವಾವಚನಂ ಕೇಶವಸ್ಯ** ಎಂಬಲ್ಲಿ ನಿರ್ವಚನ ಮಾಡಿರುವರು ಅದು ಅಯುಕ್ತವೆನ್ನುತ್ತಾರೆ) ಕಂ=ಚತುರ್ಮುಖನನ್ನು, ಈಶಂ=ರುದ್ರನನ್ನು, ಆಯಾಯ ಕಾರ್ಯಗಳಲ್ಲಿ ಪ್ರೇರೇಪಿಸುವುದರಿಂದ, ಕೇಶವಃ=ಶ್ರೀಪರಮಾತ್ಮನು ಹಾಗೆ ರುದ್ರದೇವರು ಹರಿವಂಶಗಳಲ್ಲಿ ಕೈಲಾಸಯಾತ್ರೆಯಲ್ಲಿ **ಕೋ ಬ್ರಹ್ಮೇತಿ ಸಮಾಖ್ಯಾತ ಈಶೋಽಹಂ ಸರ್ವದೇಹಿಷು । ಆವಾಂ ತವಾಂಗೇ ಸಂಭೂತೌ ತತಃ ಕೇಶವನಾಮವಾನ್** ॥ ಎಂದು ನಿರ್ವಚನ ಮಾಡಿದ್ದಾರೆ (೪) ಚತುರ್ಮುಖನು **ಕಃ**, ಎಂದೂ, ರುದ್ರನು **ಈಶಃ** ಎಂದೂ ಅನ್ನಿಸಿಕೊಳ್ಳುತ್ತಾರೆ— ಶ್ರೀಹರಿಯೇ ನೀನು ಸೃಷ್ಟ್ಯಾದಿಗಳಿಂದ ಬ್ರಹ್ಮ ರುದ್ರರನ್ನು ಕಾರ್ಯಗಳಲ್ಲಿ ಪ್ರೇರಿಸುವುದರಿಂದ **ಕೇಶವಃ** ಎನಿಸಿಕೊಂಡವನು, ಎಂಬ ಪ್ರಮಾಣಾಂತರದಿಂದಲೂ ಈ ಅರ್ಥವು ಸಿದ್ಧವಾಗುತ್ತದೆ. (೫) ಯಾವ ಕಾರಣದಿಂದ ಕೂತುಕೊಳ್ಳುತ್ತಾನೆ ಅರ್ಜುನನು ಜ್ಞಾನಿಗಳ ಲಕ್ಷಣವನ್ನೂ, ಜ್ಞಾನಿಗಳ ಪ್ರವೃತ್ತಿಯು ಕೂಡಲ್ಕಿಕಿಲ್ಲ ಎಂಬುದನ್ನೂ ಸಮಾಧಾನವನ್ನೂ ತಿಳಿಯುವುದಿಲ್ಲವೆಂದಲ್ಲ ಹಿಂದಿನ ರಾಜರೂ, ಹಾಗೆಯೇ ದೇವರ್ಷಿಗಳೂ ತಿಳಿಯುತ್ತಾರೆ ಆದರೂ ಗುರುಗಳಿಗೂ ತಮಗೂ ಪ್ರಸಿದ್ಧಿ ಬರುವುದಕ್ಕಾಗಿ, ಜನರಿಗೆ ಗುಹ್ಯಾರ್ಥವನ್ನು ತಿಳಿಸುವುದಕ್ಕಾಗಿಯೂ ಧರ್ಮಗಳನ್ನು ಪ್ರಶ್ನೆಮಾಡುತ್ತಾರೆ ಆ ಗುಹ್ಯಾರ್ಥಗಳು ಪುರಾಣಾದಿಗಳಲ್ಲಿ ಪ್ರಶ್ನೋತ್ತರಗಳಿಲ್ಲದೆ ಕೇವಲ ಉಕ್ತಿಯಿಂದ ಅಲ್ಪಜ್ಞಾನಿಗಳಿಗೆ ಸ್ಪಷ್ಟವಾಗಿ ತೋರುವುದಿಲ್ಲ (ಪ್ರಶ್ನೆ ಮಾಡದೆ ಗ್ರಂಥದಲ್ಲಿ ಬರೆದಿಡಲಿಕ್ಕೂ ಆಗುವುದಿಲ್ಲ) ಎಂಬ ಪ್ರಮಾಣದಿಂದ ಸಿದ್ಧವಾಗುತ್ತದೆ ॥ ೫೪ ॥

**ತಾ ॥ ಕಾ ಭಾಷಾ । ಕಥಂ ಭಾಷ್ಯತೇ । ಕೈರ್ಗುಣೈಃ । ಸಮಾಧಿಸ್ಥಸ್ಯ ವಿಷಮಬುದ್ಧಿವರ್ಜಿತಸ್ಯ** ॥ ೫೪ ॥

ಅ || ಯಾವ ಗುಣಗಳಿಂದ ಹೇಗೆ ವ್ಯವಹರಿಸಲ್ಪಡುತ್ತಾನೆ ಸಮಾಧಿಸ್ಥಸ್ಯ=ವಿಷಮಬುದ್ಧಿಯಿಲ್ಲದಿರುವವನ. || ೫೪ ||

ಗೀ || ಶ್ರೀಭಗವಾನುವಾಚ

ಪ್ರಜಹಾತಿ ಯದಾ ಕಾಮಾನ್ ಸರ್ವಾನ್ಪಾರ್ಥ ಮನೋಗತಾನ್ |
ಆತ್ಮನ್ಯೇವಾಽಽತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ || ೫೫ ||

ಅ || ಶ್ರೀಕೃಷ್ಣನು ಅರ್ಜುನನ ಪ್ರಶ್ನೆಗೆ ಉತ್ತರ ಕೊಡುತ್ತಾನೆ ಪಾರ್ಥ=ಅರ್ಜುನನೇ, ಮನೋಗತಾನ್=ಅಂತಃಕರಣದಲ್ಲಿರುವ, ಸರ್ವಾನ್=ಎಲ್ಲಾ, ಕಾಮಾನ್=ವಿಷಯಗಳ ಇಚ್ಛೆಯನ್ನು, ಕಾಮಕ್ರೋಧಾದಿಗಳನ್ನು, (ವಿರುದ್ಧ ಕಾಮಗಳನ್ನು) ಯದಾ=ಯಾವಾಗ, ಪ್ರಜಹಾತಿ=ಪರಿತ್ಯಾಗಮಾಡುತ್ತಾನೋ, ಆತ್ಮನ್ಯೇವ=ಪರಮಾತ್ಮನಲ್ಲಿಯೆ ಮನಸ್ಸನ್ನು ಇಟ್ಟವನಾಗಿ, ಆತ್ಮನಾ=ಶ್ರೀಹರಿಯ ಪ್ರಸಾದದಿಂದ, ತುಷ್ಟಃ=ಸಂತೋಷಯುಕ್ತನಾಗಿರುತ್ತಾನೊ, ತದಾ=ಆಗ, ಸ್ಥಿತಪ್ರಜ್ಞಃ=ಅಪರೋಕ್ಷಜ್ಞಾನಿಯೆಂದು, ಉಚ್ಯತೇ=ಹೇಳಲ್ಪಡುತ್ತಾನೆ. || ೫೫ ||

ಭಾ || (೧) ಗಮನಾದಿಪ್ರವೃತ್ತಿರ್ನಾತ್ಯಭಿಸಂದಿಪೂರ್ವಿಕಾ | ಮತ್ತಾದಿಪ್ರವೃತ್ತಿವದಿತಿ | ಯಾ ನಿಶೇತ್ಯಾದಿನಾ ದರ್ಶಯಿಷ್ಯನ್ ತಲ್ಲಕ್ಷಣಂ ಪ್ರಥಮತ ಆಹ | ಪ್ರಜಹಾತೀತಿ || (೨) ಏವಂ ಪರಮಾನಂದತೃಪ್ತಃ ಕಿಮರ್ಥಮೇವಂ ಪ್ರವೃತ್ತಿಂ ಕರೋತೀತಿ ಪ್ರಶ್ನಾಭಿಪ್ರಾಯಃ || (೩) ಪ್ರಾರಬ್ಧಕರ್ಮಣೇಷತ್ತಿರೋಹಿತಬ್ರಹ್ಮಣೋ ವಾಸನಯಾ ಪ್ರಾಯೋಽಲ್ಪಾಭಿಸಂಧಿಪೂರ್ವಿಕಾ ಗಮನಾದಿಪ್ರವೃತ್ತಯಃ ಸಂಭವಂತೀತ್ಯಾಶಯವಾನ್ಪರಿಹರತಿ || (೪) ಪ್ರಾಯಃ ಸರ್ವಾನ್ ಪ್ರಜಹಾತಿ | ಶುಕಾದೀನಾಮಪೀಷದ್ದರ್ಶನಾತ್ || ೧ ||

ಅ || (೧) ಮತ್ತ (ಹುಚ್ಚ) ಮೊದಲಾದವರ, ಪ್ರವೃತ್ತಿಯು ಹೇಗೆ ಪ್ರಯೋಜನೇಚ್ಛೆಯಿಲ್ಲದಿರುವುದೋ, ಹಾಗೆಯೇ ಅಪರೋಕ್ಷಜ್ಞಾನಿಗಳ ಗಮನ (ಹೋಗುವಿಕೆ) ಮೊದಲಾದವುಗಳ ಪ್ರವೃತ್ತಿಯೂ ಹೆಚ್ಚಿನ ಪ್ರಯೋಜನೇಚ್ಛೆಯಿಲ್ಲದಿರುವುದು, ಎಂಬೀ ವಿಷಯವನ್ನು ಯಾ ನಿಶಾ ಇದು ಮೊದಲಾದ ಶ್ಲೋಕಗಳಿಂದ ಮುಂದೆ ತೋರಿಸುವವರಾಗಿ ಈಗ **ಪ್ರಜಹಾತಿ** ಎಂಬ ಶ್ಲೋಕದಿಂದ ಅಪರೋಕ್ಷಜ್ಞಾನಿಗಳಿಗೆ ಲಕ್ಷಣ ಹೇಳುತ್ತಾರೆ. (೨) ನಗರಿ ಮೊದಲಾದುವುಗಳನ್ನು ಬಡೆದರೂ ಬಾಹ್ಯ ವಸ್ತುಗಳ ಜ್ಞಾನವಿಲ್ಲದಿರುವವನಾಗುತ್ತಾನೆಂದು ಹೇಳಿದ ಪ್ರಕಾರ ಪರಮಾನಂದದಿಂದ ತೃಪ್ತನಾದವನು ಏಕೆ ಪ್ರವೃತ್ತಿ ಮಾಡುತ್ತಾನೆಂದು ಕಿಮಾಸೀತ ಇತ್ಯಾದಿಗಳಿಂದ ಪ್ರಶ್ನೆಮಾಡುವವನ ಅಭಿಪ್ರಾಯವು (ಅಂದರೆ-ಪರಮಾನಂದದಿಂದ ತೃಪ್ತನಾಗಿದ್ದರೆ ಪ್ರವೃತ್ತಿಯನ್ನು ಏಕೆ ಮಾಡುತ್ತಾನೆ ಮಾಡದೆ ಹೋದಾನು ಪ್ರವೃತ್ತಿಯನ್ನಾದರೂ ಮಾಡುತ್ತಾನೆ ಆದಕಾರಣ ಪರಮಾನಂದದಿಂದ ತೃಪ್ತನೆಂದು ಹೇಳಿದ್ದು ಅಯುಕ್ತವೆಂಬ ಆಕ್ಷೇಪವು ಅಭಿಪ್ರೇತವು ಇದು ಉಪೇಕ್ಷಣೀಯವಲ್ಲವೆಂದಭಿಪ್ರಾಯವು (೩) (ಪ್ರವೃತ್ತಿಮಾಡಲಿಕ್ಕೆ ಕಾರಣವನ್ನು ಹೇಳದಿದ್ದರೆ-ಈ ಆಕ್ಷೇಪವು ಪರಿಹೃತವಾಗುವುದಿಲ್ಲವೆಂದು ಶಂಕಾ ಬಂದರೆ ಪ್ರವೃತ್ತಿಕಾರಣವನ್ನು ಹೇಳುತ್ತಾರೆ) ಪರಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಂಡವನಿಗೂ ಪ್ರಾರಬ್ಧಕರ್ಮದಿಂದ ಬ್ರಹ್ಮಾಪರೋಕ್ಷಜ್ಞಾನವು ಸ್ವಲ್ಪ ಮರೆಯಾದಾಗ ಹಿಂದಿನ ಸಂಸ್ಕಾರದಿಂದ ಅಲ್ಪ ಪ್ರಯೋಜನದ ಆಕಾಂಕ್ಷೆಯಿಂದ ಗಮನಾದಿ ಪ್ರವೃತ್ತಿಯು ಕೂಡಬಹುದೆಂಬ ಅಭಿಪ್ರಾಯವುಳ್ಳವರಾಗಿ ಹಿಂದಿನ ಆಕ್ಷೇಪವನ್ನು ಯಾ ನಿಶಾ

ಇತ್ಯಾದಿ ಶ್ಲೋಕಗಳಿಂದ ಪರಿಹರಿಸುತ್ತಾರೆ (೪) (ಎಲ್ಲಾ ಕಾಮಗಳ ಸಂಪೂರ್ಣ ಬಿಡುವಿಕೆಯು ಅಪರೋಕ್ಷಜ್ಞಾನಿಗಳ ಲಕ್ಷಣವು ಹೀಗೆ ಇರುತ್ತಾ ಅಲ್ಪವಾದ ಪ್ರಯೋಜನೇಚ್ಛೆಯಿದೆ, ಎಂಬುದು ಹೇಗೆ ಕೂಡುತ್ತದೆ? ಎಂದರೆ) ಅಪರೋಕ್ಷ ಜ್ಞಾನಿಗಳು ಬಹಳವಾಗಿ ಎಲ್ಲಾ ಕಾಮುಗಳನ್ನು ಬಿಡುತ್ತಾರೆ ಶುಕಾಚಾರ್ಯರೇ ಮೊದಲಾದ ಅಪರೋಕ್ಷಜ್ಞಾನಿಗಳಿಗೂ ಸ್ವಲ್ಪ ವಿರುದ್ಧ ಕಾಮವು (ಕೆಟ್ಟ ಇಚ್ಛೆಯು) ಕಂಡದೆ (ಈ ವಿಷಯವು ದೈತ್ಯಾದಿಗಳಿಗೆ ವರವನ್ನು ಈಯುವುದು ಭಿಕ್ಷಾಟನ ಮಾಡುವುದು, ಇದು ಮೊದಲಾದ ಪ್ರವೃತ್ತಿಯಿಂದಲೂ, ಯಥಾಃಯುದ್ಧ್ಯದ್ಧರೋ ಹರಿಂ ಇತ್ಯಾದಿ ವೇದಗಳಿಂದಲೂ ತಿಳಿದುಬರುತ್ತದೆ) ॥ ೧ ॥

ಹೀ---ಜ್ಞಾನಿಗಳಿಗೆ ಒಳ್ಳೇ ಇಚ್ಛೆಯು ಸರ್ವದಾ ಇದ್ದೇ ಇದೆ ಆದುದರಿಂದಲೂ ಪ್ರಾಯಶಃ ಎಂದು ಹೇಳಿದ ಸಂಕೋಚವು ಯುಕ್ತವೆನ್ನುತ್ತಾರೆ

**ಭಾ ॥ (೧) ತ್ವತ್ಪಾದಭಕ್ತಿಮಿಚ್ಛಂತಿ ಜ್ಞಾನಿನಸ್ತತ್ತ್ವದರ್ಶಿನ ಇತ್ಯುಕ್ತೇಸ್ತಾಮಿಚ್ಛಂತಿ ॥ (೨) ಯದಾ ತ್ವಿಂದ್ರಾದೀನಾಮಾಗ್ರಹೋ ದೃಶ್ಯತೇ ತದಾಽಭಿಭೂತಂ ತೇಷಾಂ ಜ್ಞಾನಂ ॥ (೩) ತಚ್ಚೋಕ್ತಂ । ಆಧಿಕಾರಿಕಪುಂಸಾಂ ತು ಬೃಹತ್ಕರ್ಮತ್ವಕಾರಣಾತ್ । ಉದ್ಭವಾಭಿಭವೌ ಜ್ಞಾನೇ ತತೋಽನ್ಯೇಭ್ಯೋ ವಿಲಕ್ಷಣಾ ಇತಿ ॥ (೪) ಅತ ಏವ ವೈಲಕ್ಷಣ್ಯಾದನಧಿಕಾರಿಣಾಮಾಗ್ರಹಾದಿ ಚೇದಸ್ತಿ ನ ತೇ ಜ್ಞಾನಿನ ಇತ್ಯವಗಂತವ್ಯಂ ॥ ೨ ॥**

॥ಅ॥ (೧) ಭಗವತ್ತತ್ತ್ವವನ್ನು ಅಪರೋಕ್ಷವಾಗಿ ತಿಳಿದಿರುವ ಜ್ಞಾನಿಗಳು ನಿನ್ನ ಪಾದಾರವಿಂದದಲ್ಲಿ ಭಕ್ತಿಯನ್ನು ಇಚ್ಛಿಸುತ್ತಾರೆಂದು ಹೇಳಿದ್ರಿಂದ ಭಕ್ತಿಯನ್ನೂ ಜ್ಞಾನಾದಿಗಳನ್ನೂ ಇಚ್ಛಿಸುತ್ತಾರೆಂಬುದು ಸಿದ್ಧವಾಗುತ್ತದೆ (೨) (ಬಹಳವಾಗಿ ವಿರುದ್ಧಕಾಮುಗಳ ಬಿಡುವಿಕೆಯು ಅಪರೋಕ್ಷ ಜ್ಞಾನಿಗಳ ಲಕ್ಷಣವೆಂದರೆ ಇಂದ್ರಿಯಾದಿ ದೇವತೆಗಳಿಗೆ ಬಹಳ ವಿರುದ್ಧಕಾಮುಗಳು ಕಂಡದ್ರಿಂದ ಅವರೂ ಅಪರೋಕ್ಷಜ್ಞಾನಿಗಳಲ್ಲವೆಂದಾಗಬೇಕಾಗುವದು ಎಂದರೆ) ಯಾವಾಗ ಇಂದ್ರಾದಿ ದೇವತೆಗಳಿಗೆ ವಿರುದ್ಧಕಾಮುಗಳು ಕಾಣುತ್ತವೋ ಆಗ ಅವರ ಬ್ರಹ್ಮಾಪರೋಕ್ಷ ಜ್ಞಾನವು ಮರೆಯಾಗಿರುತ್ತದೆ. (೨) (ಅವರಿಗೆ ಅಪರೋಕ್ಷಜ್ಞಾನವು ಮರೆಯಾಗುವ ಕಾಲಕ್ಕೇನೇ ವಿರುದ್ಧಕಾಮುಗಳು ಬರುತ್ತವೆ ಎಂಬುದನ್ನು ಪ್ರಮಾಣದಿಂದ ದೃಢೀಕರಿಸುತ್ತಾರೆ) ಮಹಾಧಿಕಾರಿಗಳು ಅಲ್ಪಾಧಿಕಾರಿಗಳು ಎಂಬ ಅಧಿಕಾರದಲ್ಲಿದ್ದ ದೇವತೆಗಳಿಗೆ ಶ್ರೇಷ್ಠ ಕಾಮುಗಳಿರುವ ಕಾರಣದಿಂದ ಜ್ಞಾನದಲ್ಲಿ ಆವಿರ್ಭಾವ ತಿರಸ್ಕಾರಗಳು ಇರುತ್ತವೆ ಆದಕಾರಣ ಅವರು ಮನುಷ್ಯರಿಗಿಂತ ಅತ್ಯಂತ ವಿಲಕ್ಷಣರಾಗಿರುತ್ತಾರೆ ಎಂಬೀ ಪ್ರಮೇಯವು ಉಕ್ತವಾಗಿದೆ (೪) ಆದಕಾರಣ ಹೀಗೆ ಆಗಮದಲ್ಲಿ ಹೇಳಿದ ವಿಶೇಷವಿರುವುದರಿಂದಲೇ ಅನಧಿಕಾರಿಗಳಾದ ಮನುಷ್ಯರಿಗೆ ವಿರುದ್ಧಕಾಮುಕ್ರೋಧ ಮತ್ಸರ ಮೊದಲಾದುವುಗಳು ಇದ್ದರೆ ಅವರು ಅಪರೋಕ್ಷ ಜ್ಞಾನಿಗಳಲ್ಲವೆಂದೇ ತಿಳಿಯಬೇಕು.

ವಿ ॥ (1) **ಪ್ರಜಾಪಾಶ್ಚ ತಥಾ ದೇವಾಃ ಮಹಾಧೀಕಾರಿಣಃ ಸ್ಮೃತಾಃ॥ ಋಷ್ಯಶೀತಿಸ್ತಥಾ ಸಪ್ತ ಪಿತರೋಽಪ್ಸರಸಾಂ ಶತಂ । ಗಂಧರ್ವಾಣಾಂ ತಥಾ ರಾಜ್ಞಾಂ ವಿಂಶದನ್ಯಾಸು ಜಾತಿಷು । ಅಲ್ಪಾಧಿಕಾರಿಣಃ ಪ್ರೋಕ್ತಾಃ ಅನಧೀಕಾರಿಣಃ ಪರೇ ॥** ಇತ್ಯಾದಿ ಪ್ರಮಾಣಗಳಿಂದ ಮಹಾಧಿಕಾರಿಗಳು ಅಲ್ಪಾಧಿಕಾರಿಗಳು ಎಂದು ಅಧಿಕಾರಿಗಳು ಎರಡು ವಿಧರು (೩) ಶುಭಾಶುಭಗಳನ್ನು ಹೊಂದಿಕೊಂಡು ಪ್ರಯತ್ನವಿಲ್ಲದೆ ಪ್ರಾಯಶಃ ವಿರುದ್ಧಗಳಾದ ಸಮಸ್ತಕಾಮುಗಳನ್ನು ಬಿಟ್ಟವರು ಅಪರೋಕ್ಷಜ್ಞಾನಿಗಳು ॥ ೨ ॥

**ಪೀ**—ಪ್ರಶ್ನವಾಕ್ಯದಲ್ಲಿ ಸಮಾಧಿಸ್ಥಸ್ಯ ಎಂಬ ಪದವಿರುವುದರಿಂದ ಅಸಂಪ್ರಜ್ಞಾತ ಸಮಾಧಿಸ್ಥನಿಗೆ **ಲಕ್ಷಣ** ಹೇಳುವುದೆಂದು ಏಕೆ ಆಗಬಾರದೆಂದರೆ—

**ಭಾ ॥ (೧) ನ ಚಾತ್ರ ಸಮಾಧಿಂ ಕುರ್ವತೋ ಲಕ್ಷಣಮುಚ್ಯತೇ । ಯಃ ಸರ್ವತ್ರಾನಭಿಸ್ನೇಹ ಇತಿ ಸ್ನೇಹನಿಷೇಧಾತ್ ॥ (೨) ನ ಹಿ ಸಮಾಧಿಂ ಕುರ್ವತಸ್ತಸ್ಯ ಶುಭಾಶುಭಪ್ರಾಪ್ತಿರಸ್ತಿ । ಅಸಂಪ್ರಜ್ಞಾತಸಮಾಧೇಃ ।' (೩) ಸಂಪ್ರಜ್ಞಾತೇ ತ್ವವಿರೋಧಃ । ತಥಾಽಪಿ ನ ತತ್ರೈವೇತಿ ನಿಯಮಃ ॥ (೪) ಕಾಮಾದಯೋ ನ ಜಾಯಂತೇ ಹ್ಯಪಿ ವಿಕ್ಷಿಪ್ತಚೇತಸಾಂ । ಜ್ಞಾನಿನಾಂ ಜ್ಞಾನನಿರ್ಧೂತಮಲಾನಾಂ ದೇವಸಂಶ್ರಯಾದಿತಿ ಸ್ಮೃತೇಃ ॥ ೩ ॥**

**ಅ** ॥ (೧) ಐಹಿಕ ಸಮಸ್ತ ಭೋಗವಿಷಯಗಳಲ್ಲಿ ಅತ್ಯಂತ ಆಸಕ್ತಿಯಿಲ್ಲದವನೆಂದು ಸ್ನೇಹವನ್ನು ನಿಷೇಧಮಾಡಿದ್ದರಿಂದ ಈ ಶ್ಲೋಕದಲ್ಲಿ ಸಮಾಧಿಯನ್ನು ಮಾಡುವ ಜ್ಞಾನಿಯ ಲಕ್ಷಣವನ್ನು ಹೇಳುತ್ತದೆಂದು ಹೇಳಕೂಡದು (೨) (ಸಮಾಧ್ಯವಸ್ಥೆಯಲ್ಲಿದ್ದವನಿಗೆ ಸ್ನೇಹನಿಷೇಧವು ಅನುಗುಣವೇ ಆಗಿದೆ ಎಂದರೆ) (ಇಲ್ಲಿ ಸ್ನೇಹವನ್ನು ಮಾತ್ರ ನಿಷೇಧಿಸುವದಲ್ಲ ಮತ್ತೆ ತತ್ತತ್ಪ್ರಾಪ್ಯ ಶುಭಾಶುಭಂ ಎಂದು ಶುಭಾಶುಭ ಪ್ರಾಪ್ತಿಯು ಉಕ್ತವಾಗಿದೆ ಅಸಂಪ್ರಜ್ಞಾತ ಸಮಾಧಿಸ್ಥನಿಗೆ ಬಾಹ್ಯ ಪದಾರ್ಥಗಳ ಅನುಸಂಧಾನವು ಇಲ್ಲದಿರುವುದರಿಂದ ಶುಭಾಶುಭ ಪ್ರಾಪ್ತಿಯಿರುವುದಿಲ್ಲ· (ಬಾಹ್ಯ ಪದಾರ್ಥಗಳ ಅನುಸಂಧಾನವಿದ್ದವನು ಸಂಪ್ರಜ್ಞಾತ ಸಮಾಧಿಯುಳ್ಳವನು ಶುಭಾಶುಭಪ್ರಾಪ್ತಿಪೂರ್ವಕವಾಗಿ ಸ್ನೇಹ ಶೂನ್ಯತ್ವರೂಪ ಲಕ್ಷಣವು ಅಸಂಪ್ರಜ್ಞಾತ ಸಮಾಧ್ಯವಸ್ಥೆಯಲ್ಲಿದ್ದವನಿಗೆ ಇರುವುದಿಲ್ಲ) (೩) (ಹೀಗಾದರೆ— ಸಂಪ್ರಜ್ಞಾತ ಸಮಾಧ್ಯವಸ್ಥೆಯಲ್ಲಿದ್ದವನಿಗೇನೇ ಲಕ್ಷಣವಾಗಲಿ ಎಂದರೆ) ಯದ್ಯಪಿ ಸಂಪ್ರಜ್ಞಾತ ಸಮಾಧಿಸ್ಥನಿಗೆ ಶುಭಾಶುಭ ಪ್ರತೀತಿಯು ಕೂಡುವುದರಿಂದ ಅಸಂಭವವೆಂಬ ಲಕ್ಷಣದೋಷವಿಲ್ಲವಾದರೂ ಕಾಮಾದಿಗಳ ಪರಿತ್ಯಾಗವು ಸಮಾಧ್ಯವಸ್ಥೆಯಲ್ಲಿದ್ದ ಪುರುಷನಿಗೇನೇ ಎಂಬ ನಿಯಮವಿಲ್ಲ (ಸಮಾಧ್ಯವಸ್ಥೆಯನ್ನು ಹೊಂದದೆ ಇರುವ ಕೇವಲ ಜ್ಞಾನಿಗೂ ಕಾಮಾದಿಗಳ ಪರಿತ್ಯಾಗ ರೂಪ ಲಕ್ಷಣವಿದೆ ಆದುದರಿಂದ ಸಂಪ್ರಜ್ಞಾತ ಸಮಾಧಿಸ್ಥನಿಗೆ ಲಕ್ಷಣವೆಂದು ಹೇಳಕೂಡದು) (೪) ಸಮಾಧ್ಯವಸ್ಥೆಯಲ್ಲಿಲ್ಲದಿದ್ದ ಜ್ಞಾನಿಗೂ ಕಾಮಾದಿಗಳು ಇಲ್ಲವೆಂಬುದು ಹೇಗೆ ಸಿದ್ಧವಾಗುತ್ತದೆಂದರೆ) ಶ್ರೀಹರಿಯ ಆಶ್ರಯದಿಂದುಂಟಾದ ತತ್ವಜ್ಞಾನದಿಂದ ದೋಷಗಳನ್ನು ಕಳಕೊಂಡ ಜ್ಞಾನಿಗಳು ಸಮಾಧ್ಯವಸ್ಥೆಯಲ್ಲಿಲ್ಲದಿದ್ದರೂ ಅವರಿಗೆ ಕಾಮಕ್ರೋಧ ಮೊದಲಾದ ದೋಷಗಳು ಹುಟ್ಟುವುದಿಲ್ಲ, ಎಂದು ಸ್ಮೃತಿ ಪ್ರಮಾಣವು ॥ ೩ ॥

**ಪೀ**—ಕಾಮಗಳು ಮನಸ್ಸಿನಲ್ಲಿರತಕ್ಕವುಗಳಾದುದರಿಂದ ಮನೋಗತಾಃ ಎಂಬ ವಿಶೇಷಣವು ವ್ಯರ್ಥವೆಂದರೆ— ಇದು ವಿಶೇಷಣವಲ್ಲ, ಮತ್ತೆ ಸರ್ವ ಕಾಮಗಳ ತ್ಯಾಗವು ಸರ್ವಥಾ ಅಸಂಭವಿ ಎಂದಾಶಂಕಿಸಿಕೊಂಡು ಅದನ್ನು ಪಪಾದಿಸುವುದಕ್ಕಾಗಿ ಯುಕ್ತಿಯನ್ನು ಹೇಳಿದ್ದಾರೆನ್ನುತ್ತಾರೆ —

**ಭಾ ॥ (೧) ಮನೋಗತಾ ಹಿ ಕಾಮಾಃ । ಅತಸ್ತತ್ರೈವ ತದ್ವಿರುದ್ಧಜ್ಞಾನೋತ್ಪತ್ತೌ ಯುಕ್ತಂ ಹಾನಂ ತೇಷಾಮಿತಿ ದರ್ಶಯತಿ । ಮನೋಗತಾನಿತಿ ॥ (೨) ವಿರೋಧಶ್ಚೋಚ್ಯತೇ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತ ಇತಿ ॥ (೩) ನ ಚೈತದ್ದೃಷ್ಟ್ಯಾಽಪಲಪನೀಯಂ । ಪುರುಷವೈಶೇಷ್ಯಾತ್ ॥ (೪) ಆತ್ಮನಾ ಪರಮಾತ್ಮನಾ ಪರಮಾತ್ಮ-**

**ನ್ಯೇವ ಸ್ಥಿತಃ ಸನ್ ॥ (೫) ಆತ್ಮಾಖ್ಯೇ ತಸ್ಮಿನ್ ಸ್ಥಿತಸ್ಯ ತತ್ಪ್ರಸಾದಾದೇವ ತುಷ್ಟಿರ್ಭವತಿ ॥ (೬) ವಿಷಯಾಂಸ್ತು ಪರಿತ್ಯಜ್ಯ ರಾಮೇ ಸ್ಥಿತಿಮತಸ್ತತಃ । ದೇವಾದ್ಭವತಿ ವೈ ತುಷ್ಟಿರ್ನಾನ್ಯಥಾ ತು ಕಥಂಚನೇತ್ಯುಕ್ತಂ ಹಿ ನಾರಾಯಣರಾಮಕಲ್ಪೇ । ಅತೋ ನಾತ್ಮಾ ಜೀವಃ ॥ ೪ ॥** **॥ ೫೫ ॥**

ಅ ॥ (೧) ಕಾಮಗಳು ಮನಸ್ಸಿನಲ್ಲಿಯೇ ಇರತಕ್ಕವುಗಳು. ಆದಕಾರಣ ಮನಸ್ಸಿನಲ್ಲಿಯೇ ಕಾಮಕ್ಕೆ ವಿರುದ್ಧವಾದ ಜ್ಞಾನವು ಹುಟ್ಟುವಾಗ ಆ ಕಾಮಗಳ ಬಿಡುವಿಕೆಯು ಯುಕ್ತವೆಂದು **ಮನೋಗತಾನ್** ಎಂಬುದರಿಂದ ತೋರಿಸುತ್ತಾರೆ (ಪ್ರಾಯಶಃ ಸಮಸ್ತವಿರುದ್ಧಕಾಮಾದಿಗಳನ್ನು ಬಿಟ್ಟು ಶ್ರೀಹರಿಯಲ್ಲಿಯೇ ಏಕಮನಸ್ಕರಾಗಿ ಸಂತುಷ್ಟರಾದವರು ಅಪರೋಕ್ಷ ಜ್ಞಾನಿಗಳೆಂದು ಉಕ್ತವಾಯ್ತು ) (೨) ಶ್ರೀಹರಿಯನ್ನು ನೋಡಿ ಇರತಕ್ಕ ಜ್ಞಾನಿಗೆ ರಸ ಎನಿಸಿಕೊಂಡ ಕಾಮವು ನಿವೃತ್ತವಾಗುತ್ತದೆಂದು ಹೇಳುವಾಗ ಜ್ಞಾನಕಾಮಗಳಿಗೆ ನಿವರ್ತ್ಯ ನಿವರ್ತಕಭಾವ ರೂಪ ವಿರೋಧವು ಶಾಸ್ತ್ರದಲ್ಲಿ ಹೇಳಲ್ಪಡುತ್ತದೆ. (೩) (ಹಾಗಾದರೆ—ಸಮಸ್ತಕಾಮಗಳ ಪರಿತ್ಯಾಗವು ನಮ್ಮಲ್ಲಿ ಎಲ್ಲಿಯೂ ಕಂಡುಬರಲಿಲ್ಲ, ಅದರಂತೆ ಜ್ಞಾನಿಗಳಲ್ಲಿಯೂ ಸಮಸ್ತ ಕಾಮಗಳ ಪರಿತ್ಯಾಗವು ಕೂಡುವುದಿಲ್ಲವೆಂದರೆ) ಇದು ನಮ್ಮಲ್ಲಿ ಎಲ್ಲಿಯೂ ಕಾಣದಿರುವುದರಿಂದ ಜ್ಞಾನಿಗಳಿಗೆ ಸಮಸ್ತ ಕಾಮಗಳ ಪರಿತ್ಯಾಗವು ಕೂಡುವುದಿಲ್ಲವೆಂದು ಅಪಲಾಪ ಮಾಡಕೂಡದು (ಏಕೆಂದರೆ—**ಕಾಮಾದಯೋ ನ ಜಾಯಂತೇ** ಎಂದು ಸರ್ವ ಕಾಮಗಳ ಪರಿತ್ಯಾಗವನ್ನು ಹೇಳಿರುವುದರಿಂದ ಆ ಪ್ರಮಾಣ ವಿರೋಧವು ಬರುವುದಿಲ್ಲ.) ಪ್ರಮಾಣವಿರುದ್ಧವಾದ ಅರ್ಥವನ್ನು ಊಹಿಸುವುದಾದರೆ—)ಪಂಡಿತ ಮೂರ್ಖ ಪುರುಷರಲ್ಲಿ ವ್ಯತ್ಯಾಸವು ಪ್ರಮಾಣಸಿದ್ಧವಾಗಿರುವುದರಿಂದ (ಆ ಪಂಡಿತಮೂರ್ಖ ವೈಚಿತ್ರ್ಯವನ್ನು ಅಪಲಾಪಮಾಡಬೇಕಾದೀತು ) (೪) ಆತ್ಮನಿ=ಪ್ರತ್ಯಗಾತ್ಮಸ್ವರೂಪದಲ್ಲಿಯೇ, ಆತ್ಮನಾ=ತನ್ನಿಂದಲೇ, ಎಂಬ ಎರಡು ಶಬ್ದಗಳಿಂದ ಜೀವನೇ ಹೇಳಲ್ಪಡುತ್ತಾನೆಂದು ಸಂಕರಾಚಾರ್ಯರು ಹೇಳುತ್ತಾರೆ ಆತ್ಮನಾ=ಮನಸ್ಸಿನಿಂದ ಮನಸ್ಸನ್ನೇ ಮುಖ್ಯವಾಗಿ ಅವಲಂಬಿಸಿಕೊಂಡು, ಎಂದು ರಾಮಾನುಜಾಚಾರ್ಯರು ಹೇಳುತ್ತಾರೆ. ಇವೆರಡೂ ಅಯುಕ್ತವೆನ್ನುತ್ತಾರೆ.) ಆತ್ಮನಾ=ಪರಮಾತ್ಮನಿಂದ ಆತ್ಮನಿ=ಪರಮಾತ್ಮನಲ್ಲಿಯೇ ಇರುವವನಾಗಿ (೫) (ತಾನು ಹೇಳಿದ ಅರ್ಥವು ಕೂಡುತ್ತದೆ, ಪರರು ಹೇಳಿದ ಅರ್ಥವು ಕೂಡುವುದಿಲ್ಲ ಎಂಬಲ್ಲಿಯೂ ಯುಕ್ತಿ ಹೇಳುತ್ತಾರೆ.) ಪರಮಾತ್ಮನೆಂದು ಹೆಸರುಳ್ಳ ಶ್ರೀಹರಿಯಲ್ಲಿಯೇ ಮುಖ್ಯವಾಗಿ ಮನಸ್ಸನ್ನು ಇಟ್ಟ ಜ್ಞಾನಿಗೆ ಶ್ರೀಹರಿಯ ಅನುಗ್ರಹದಿಂದಲೇ ಸಂತೋಷವಾಗುತ್ತದೆ (೬) (ಇಲ್ಲಿ ವಿಷಯಗಳನ್ನು ಬಿಟ್ಟವನಿಗೂ ಸಂತೋಷವು ಹೇಳಲ್ಪಡುತ್ತದೆ ಆ ಸಂತೋಷವು ಆತ್ಮ ಶಬ್ದದಿಂದ ಪರಮಾತ್ಮನನ್ನು ತೆಗೆದುಕೊಂಡರೇನೇ ಕೂಡುತ್ತದೆ ಜೀವಾದಿಗಳನ್ನು ಇಟ್ಟುಕೊಂಡರೆ ಕೂಡಲಾರದು ಏಕೆಂದರೆ) ವಿಷಯಗಳನ್ನು ಬಿಟ್ಟು ಶ್ರೀರಾಮನಲ್ಲಿಯೇ ಮನಸ್ಸನ್ನು ಇಟ್ಟಿರತಕ್ಕ ಜ್ಞಾನಿಗೆ ಶ್ರೀರಾಮದೇವರ ಪ್ರಸಾದದಿಂದಲೇ ಸಂತೋಷವುಂಟಾಗುತ್ತದೆ ಹೇಗೂ ಬೇರೆ ರೀತಿಯಾಗುವುದಿಲ್ಲ, ಎಂದು ನಾರಾಯಣಾಷ್ಟಾಕ್ಷರ ಕಲ್ಪದಲ್ಲಿ ಹೇಳಿದೆ ಆದಕಾರಣ ಗೀತೆಯಲ್ಲಿ ಶ್ರೀಹರಿಯ ಪ್ರಸಾದದಿಂದಲೇ ತುಷ್ಟಿಯನ್ನು ಹೇಳಿದ್ರಿಂದ ಆತ್ಮಶಬ್ದದಿಂದ ಜೀವನನ್ನಾಗಲೀ ಮನಸ್ಸನ್ನಾಗಲೀ ಇಟ್ಟುಕೊಳ್ಳಕೂಡದು ॥ ೪ ॥ ॥ ೫೫ ॥

ಟೀ—**ಪ್ರಜಹಾತಿ** ಎಂಬ ಶ್ಲೋಕದಲ್ಲಿ ಅಪರೋಕ್ಷಜ್ಞಾನಿಗಳ ಲಕ್ಷಣವನ್ನು ಹೇಳುತ್ತಾರೆ. ಅದರಲ್ಲಿ ಜ್ಞಾನಿಗಳು ಸಮಸ್ತಕಾಮಗಳನ್ನು ಬಿಡುತ್ತಾರೆಂದರೆ—ಶಾಸ್ತ್ರನಿಷಿದ್ಧ ಅನಿಷಿದ್ಧ ಸಮಸ್ತಕಾಮಗಳನ್ನು ಬಿಡುವುದೆಂಬ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಸ್ಮೃತಿ **ಪ್ರಮಾಣ** ಹೇಳಿ ಅದರ ಅರ್ಥವನ್ನು ಹೇಳುತ್ತಾರೆ—

**ತಾ ॥ (೧) ಸರ್ವಕಾಮನಿವೃತ್ತಿಸ್ತು ಜ್ಞಾನತೋ ನ ಕಥಂಚನ । ಅನಿಷಿದ್ಧಕಾಮಿತ್ವೈವಾ-ತೋ ಹ್ಯಕಾಮಿತ್ವಮಿತೀರ್ಯತೇ ॥ (೨) ಅಪರೋಕ್ಷದೃಶೋಽಪಿ ಸ್ಯಾದ್ಯದಾ ನಾ-ಸ್ತ್ಯಪರೋಕ್ಷದೃಕ್ । ಕ್ವಚಿದ್ವಿರುದ್ಧಕಾಮೋಽಪಿ ಯಥಾಽಯುಧ್ಯದ್ಧರೋ ಹರಿಂ ॥ (೩) ಅತೋಽನಭಿಭವೋ ಯಾವದ್ದೃಶಸ್ತಾವನ್ನಿಗದ್ಯತೇ । ಸ್ಥಿತಪ್ರಜ್ಞಃ ॥ (೪) ತಥಾ-ಽಪ್ಯಸ್ಯ ಕಾದಾಚಿತ್ಕ್ಯಪಿ ಯಾ ದೃಶಿಃ । ನಿಯಮೇನೈವ ಮೋಕ್ಷಾಯ ಭವೇದ್ಯೋಗ್ಯಾ ಭವೇದ್ಯದಿ ॥ (೫) ಅಯೋಗ್ಯಾ ಭಕ್ತಿಜಾತಾ ಚೇತ್ಕ್ರಮಾನ್ಮುಕ್ತ್ಯೈ ಭವೇತ್ತಥೇತಿ ಚ॥ (೬) ಆತ್ಮನಿ ವಿಷ್ಣೌ ತತ್ಪ್ರಸಾದಾದೇವ ತುಷ್ಟಃ ॥ ೫೫ ॥**

ಅ ॥ (೧) ಜ್ಞಾನಿಯಾದವನಿಗೆ ಹೇಗೂ ಸಮಸ್ತಕಾಮಗಳ ನಿವೃತ್ತಿಯು ಆಗಲಾರದು ಶಾಸ್ತ್ರಗಳಲ್ಲಿ ನಿಷಿದ್ಧಗಳಾದ ವಸ್ತುಗಳನ್ನು ಇಚ್ಛಿಸದೆ ಅನಿಷಿದ್ಧವಸ್ತುಗಳನ್ನು ಇಚ್ಛಿಸುವುದೇ ಅಕಾಮನಾ ಎನಿಸುತ್ತದೆ (೨) (ಜ್ಞಾನಿಗಳು ಎಲ್ಲಾ ವಸ್ತುಗಳ ಕಾಮನೆಯನ್ನೂ ಬಿಡುತ್ತಾರೆಂದು ಏಕೆ ಆಗಲಾರದು ಸರ್ವ ಶಬ್ದವನ್ನು ಸಂಕೋಚಮಾಡಿಕೊಳ್ಳುವುದು ಏತಕ್ಕೆಂದರೆ—) ಅಪರೋಕ್ಷಜ್ಞಾನಿಗೂ ಕೂಡ ಅಪರೋಕ್ಷಜ್ಞಾನವು ಇಲ್ಲದಿರುವಾಗ ಶಾಸ್ತ್ರವಿರುದ್ಧವಾದ ಕಾಮವೂ ಬರುತ್ತದೆ ಹೇಗೆಂದರೆ—ರುದ್ರದೇವರು ಶ್ರೀಹರಿಯೊಡನೆ ಯುದ್ಧಮಾಡಿದರು. ಇತ್ಯಾದಿ (ಅಂದರೆ ಜ್ಞಾನಿಗಳಿಗೆ ಕೆಲವು ವೇಳೆ ನಿಷಿದ್ಧಕಾಮಗಳ ನಿವೃತ್ತಿಯೂ ಇರುವುದಿಲ್ಲ ಸಮಸ್ತಕಾಮಗಳ ನಿವೃತ್ತಿಯು ಹೇಗೆ ಆಗುವುದು?) (೩) ಶಾಸ್ತ್ರನಿಷಿದ್ಧಕಾಮಗಳ ಅಭಾವವು ಜ್ಞಾನವು ಸರಿಯಾಗಿ ಇರುವ ಕಾಲದಲ್ಲಿಯೇ ಇದ್ದ ಪ್ರಯುಕ್ತ ಜ್ಞಾನವು ಯಾವಾಗ ಮರೆಯಾಗುವುದಿಲ್ಲವೋ, ಆಗ ಸ್ಥಿತಪ್ರಜ್ಞನೆನಿಸುತ್ತಾನೆ (ಅಂದರೆ—ಜ್ಞಾನವು ಮರೆಯಾಗುವ ಕಾಲದಲ್ಲಿ ಜ್ಞಾನಿಗಳ ಲಕ್ಷಣವೇ ಇಲ್ಲದಿರುವುದರಿಂದ ಜ್ಞಾನಿಯೆಂದು ಅನ್ನಿಸಿಕೊಳ್ಳುವುದಿಲ್ಲ ) (೪) (ಕೆಲವು ವೇಳೆ ಜ್ಞಾನವು ಮರೆಯಾಗುವುದಾದರೆ—ಅದು ದುರ್ಬಲವಾಗಿರುವುದರಿಂದ ಮೋಕ್ಷಸಾಧನವಾಗದೆ ಹೋಗುವುದು, ಎಂದರೆ—) ಆದರೂ ಅಪರೋಕ್ಷಜ್ಞಾನಿಗಳ ಜ್ಞಾನವು ಕೆಲವು ವೇಳೆ ಇರುವುದಾದರೂ **ನಿತ್ಯೋಪಾಧ್ಯಾ ಸ್ವರೂಪಯಾ । ಚಿದ್ರೂಪಯಾ ಯುತೋ ಜೀವಃ ಕೇಶವಪ್ರತಿಬಿಂಬಕಃ** ಇತ್ಯಾದಿ ಪ್ರಮಾಣಗಳಲ್ಲಿ ಹೇಳಿದ ಪ್ರಕಾರ ತಮ್ಮ ಹೃದಯದಲ್ಲಿರತಕ್ಕ ಬಿಂಬರೂಪ ವಿಷಯಕವಾಗಿದ್ದರೆ—ನಿಯಮದಿಂದ ಮೋಕ್ಷವು ಆಗುವುದು (೫) ನ ಸಾಮಾನ್ಯಾದಪ್ಯುಪಲಬ್ಧೇಃ ಎಂದು ಹೇಳಿದ ಪ್ರಕಾರ ಸಾಮಾನ್ಯ ದರ್ಶನದಿಂದ ಭಕ್ತಿಯು ಹುಟ್ಟಿದರೆ—ಕ್ರಮದಿಂದ ಮುಕ್ತಿಗೆ ಉಪಯುಕ್ತವಾಗುವುದು (೬) (ಆತ್ಮನ್ಯೇವ, ಆತ್ಮನಾ ಎಂಬಲ್ಲಿದ್ದ ಆತ್ಮಶಬ್ದಗಳು ಕ್ರಮವಾಗಿ ಜೀವ ಮನಸ್ಸುಗಳನ್ನು ಹೇಳುತ್ತವೆ ಎಂಬ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುತ್ತಾರೆ-) ಆತ್ಮನಿ=ಶ್ರೀವಿಷ್ಣುವಿನಲ್ಲಿ ಆತ್ಮನಾ=ಶ್ರೀವಿಷ್ಣುವಿನಿಂದ ಶ್ರೀಹರಿಯ ಪ್ರಸಾದದಿಂದಲೇ ಸಂತುಷ್ಟನಾದವನು ॥ ೫೫ ॥

ಪೀ—ಹಿಂದೆ ಹೇಳಿದ ಜ್ಞಾನಿಗಳ ಲಕ್ಷಣವನ್ನೇ ಎಲ್ಲಾ ದೋಷಗಳನ್ನು ಬಿಡಬೇಕೆಂದು ಹೇಳಿ ಸ್ಪಷ್ಟೀಕರಿಸುತ್ತಾರೆ—

**ಗೀ ॥ ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥ ೫೬ ॥**

ಅ ॥ ದುಃಖೇಷು=ದುಃಖಗಳುಂಟಾದರೂ, ಅನುದ್ವಿಗ್ನಮನಾಃ=ಕಳವಳ ಪಡದಿರುವ ಮನಸ್ಸುಳ್ಳ, ಸುಖೇಷು=ಸುಖವಿಷಯದಲ್ಲಿ, ವಿಗತಸ್ಪೃಹಃ=ಅಭಿಲಾಷೆಯಿಲ್ಲದಿರುವ, ಅಥವಾ ಸುಖಸಾಧನದಲ್ಲಿ ಇಚ್ಛೆ

ಯಿಲ್ಲದಿರುವ, ಅಥವಾ ಸುಖಗಳು ಬಂದರೂ ಉತ್ಸಾಹವಿಲ್ಲದಿರುವ, ವೀತರಾಗಭಯಕ್ರೋಧಃ=(ಅಮಂಗಲ ವಿಷಯಗಳಲ್ಲಿ ಮಂಗಲವೆಂಬ ಭ್ರಮೆಯು ರಾಗವು) ರಾಗ ಭಯ ಕ್ರೋಧಗಳಿಲ್ಲದಿರುವ, ಮುನಿಃ= ಸರ್ವದಾ ಶ್ರೀಹರಿಯನ್ನು ಧ್ಯಾನಿಸುತ್ತಿರುವ ಮುನಿಯು, ಸ್ಥಿತಧೀಃ=ಅಪರೋಕ್ಷಜ್ಞಾನಿಯೆಂದು, ಉಚ್ಯತೇ=ಹೇಳಲ್ಪಡುತ್ತಾನೆ ॥ ೫೬ ॥

**ಭಾ ॥ (೧) ತದೇವ ಸ್ಪಷ್ಟಯತ್ಯುತ್ತರೈಃ ಶ್ಲೋಕೈಸ್ತ್ರಿಭಿಃ ॥ (೨) ಏತಾನ್ಯೇವ ಜ್ಞಾನೋಪಾಯಾನಿ ಚ ॥ (೩) ತಚ್ಚೋಕ್ತಂ । ತದ್ವೈ ಜಿಜ್ಞಾಸುಭಿಃ ಸಾಧ್ಯಂ ಜ್ಞಾನಿನಾಂ ಯತ್ತು ಲಕ್ಷಣಮಿತಿ ॥ (೪) ಶೋಭನಾಧ್ಯಾಸೋ ರಾಗಃ । ರಸೋ ರಾಗಸ್ತಥಾ ರಕ್ತಿಃ ಶೋಭನಾಧ್ಯಾಸ ಉಚ್ಯತ ಇತ್ಯಭಿಧಾನಂ ॥ ೫೬ ॥**

ಅ ॥ (೧) ಹಿಂದೆ ಹೇಳಿದ ಲಕ್ಷಣವನ್ನೇ ಮುಂದಿನ ಮೂರು ಶ್ಲೋಕಗಳಿಂದ ಭಯ ದ್ವೇಷ ಮೊದಲಾದ ದೋಷಗಳನ್ನು ಬಿಡಬೇಕೆಂದು ಹೇಳಿ ಸ್ಪಷ್ಟೀಕರಿಸುತ್ತಾರೆ (೨) (ಅಮಾನಿತ್ವಂ ಇತ್ಯಾದಿಗಳಲ್ಲಿ ಕಾಮತ್ಯಾಗ ಮೊದಲಾದವುಗಳು ಜ್ಞಾನಸಾಧನಗಳೆಂದು ಹೇಳಲ್ಪಡುತ್ತವೆ, ಆದಕಾರಣ ಜ್ಞಾನಿಗಳಿಗೆ ಹೇಳಿದ ಲಕ್ಷಣವು ಜ್ಞಾನವನ್ನು ಇಚ್ಛಿಸುವ ಪರೋಕ್ಷಜ್ಞಾನಿಯಲ್ಲಿ ಇದೆ ಎಂದರೆ—) ಕಾಮತ್ಯಾಗಾದಿಗಳೇ ಜ್ಞಾನಸಾಧನಗಳು (ಅಂತೂ ಜ್ಞಾನಸಾಧನಗಳಾದ ಕಾಮತ್ಯಾಗಾದಿಗಳು ಪರೋಕ್ಷಜ್ಞಾನಿಯಲ್ಲಿ ಪ್ರಯತ್ನದಿಂದ ಸಾಧ್ಯಗಳು ಅಪರೋಕ್ಷ ಜ್ಞಾನಿಗಳಲ್ಲಿ ಸ್ವಭಾವಸಿದ್ಧಗಳು) (೩) ಆ ಪ್ರಮೇಯವು ಜ್ಞಾನಿಗಳಿಗೆ ಯಾವುದು ಲಕ್ಷಣವೋ ಅದೇ ಜಿಜ್ಞಾಸುಗಳಿಂದ ಸಾಧಿಸಲ್ಪಡತಕ್ಕದು, ಎಂದು ಹೇಳಲ್ಪಟ್ಟಿದೆ (ಶಾಸ್ತ್ರದಲ್ಲಿ ವಿಹಿತವಾದುದನ್ನು ಮಾಡುವುದು, ನಿಷಿದ್ಧವಾದುದನ್ನು ಬಿಡುವುದು ಇವು ಒಟ್ಟಿಗೆ ಸೇರಿದ ಜ್ಞಾನವೇ ಮೋಕ್ಷಕ್ಕೆ ಕಾರಣವು, ಎಂಬೀ ಸಮುಚ್ಚಯವಾದಿಯು ಸ್ಥಿತಪ್ರಜ್ಞನಿಗೆ ಹೇಳತಕ್ಕ ಲಕ್ಷಣಗಳೇ ಮೋಕ್ಷಕ್ಕೆ ಸಾಧನಗಳು ಎನ್ನುತ್ತಾನೆ ಈ ಮತವನ್ನು ಏತಾನ್ಯೇವ ಎಂಬ ಭಾಷ್ಯದಿಂದ ದೂಷಿಸುತ್ತಾರೆ) (೪) (ವಿಗತಸ್ಪೃಹಃ ಎಂಬ ಪದದಿಂದಲೇ ವೀತರಾಗಃ ಎಂಬುದರ ಅರ್ಥವನ್ನು ಹೇಳಿದಂತೆ ಆಯಿತೆಂದರೆ) ಸುಖಸಾಧನವಲ್ಲದ ವಿಷಯಗಳಲ್ಲಿ ಸುಖಸಾಧನವೆಂಬ ಭ್ರಮೆಯು ರಾಗವು ರಸಃ ರಾಗಃ ರಕ್ತಿಃ ಈ ಶಬ್ದಗಳಿಂದ ಕಾಮವೂ ಆತ್ಯಂತಿಕ ಸುಖಸಾಧನತ್ವ ಭ್ರಮೆಯೂ ಹೇಳಲ್ಪಡುತ್ತದೆ ॥ ೫೬ ॥

ಪೀ—ರಾಗಾದಿಗಳ ನಿವೃತ್ತಿಯು ಯಾವುದರಿಂದ ಆಗುತ್ತದೆ? ಎಂದರೆ—

**ಗೀ ॥ ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಂ ।**
**ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೭ ॥**

ಅ ॥ ಯಃ=ಯಾವಾತನು, ಸರ್ವತ್ರ=ಪುತ್ರ ಪತ್ನೀ ಮೊದಲಾದ ಐಹಿಕ ಎಲ್ಲಾ ಭೋಗ ವಿಷಯಗಳಲ್ಲಿ, ಅನಭಿಸ್ನೇಹಃ=ಅತ್ಯಂತ ಆಸಕ್ತಿಯಿಲ್ಲದವನೋ, (ಆದುದರಿಂದಲೇ,) ತತ್ತತ್=ಆಯಾಯ, ಶುಭಾಶುಭಂ=ಶುಭವನ್ನೂ ಅಶುಭವನ್ನೂ ಪ್ರಾಪ್ಯ=ಹೊಂದಿಯೂ ನಾಭಿನಂದತಿ=ನ ದ್ವೇಷ್ಟಿ=ಶುಭವನ್ನು ಹೊಂದಿ ಸಂತೋಷಹೊಂದುವುದಿಲ್ಲವೋ, ಅಶುಭವನ್ನು ಹೊಂದಿ ದ್ವೇಷಮಾಡುವುದಿಲ್ಲವೋ, (ಸಕಾರಣವಾಗಿ ದ್ವೇಷಾದಿಗಳನ್ನು ಬಿಡುತ್ತಾರೋ) ತಸ್ಯ=ಆತನಿಗೆ, ಪ್ರಜ್ಞಾ=ಅಪರೋಕ್ಷಜ್ಞಾನವು, ಪ್ರತಿಷ್ಠಿತಾ= ಸ್ಥಿರವಾದುದು ॥ ೫೭ ॥

**ಗೀ || ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ |**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ || ೫೮ ||**

**ಅ ||** ಅಯಂ = ಈ ಜ್ಞಾನಿಯು. ಯದಾ = ಯಾವಾಗ ಇಂದ್ರಿಯಾರ್ಥೇಭ್ಯಃ = ಇಂದ್ರಿಯಗಳಿಗೆ ಗೋಚರಗಳಾದ ಶಬ್ದ ಸ್ಪರ್ಶ ರೂಪ ರಸ ಗಂಧಗಳ ದೆಶೆಯಿಂದ, ಸರ್ವಶಃ = ಎಲ್ಲಾ, ಇಂದ್ರಿಯಾಣಿ = ಕಿವಿ ಮೊದಲಾದ ಇಂದ್ರಿಯಗಳನ್ನು, ಸರ್ವಶಃ = ಎಲ್ಲಾ ದೇಶಕಾಲಗಳಲ್ಲಿ, ಕೂರ್ಮಃ = ಆಮೆಯು ಅಂಗಾನೀವ = ತನ್ನ ಕೈಕಾಲು ಮೊದಲಾದ ಅಂಗಗಳನ್ನು ತನ್ನೊಳಗೆ ಸೆಳೆದುಕೊಳ್ಳುವಂತೆಯೋ, ಸಂಹರತೇ = ಸೆಳೆದುಕೊಳ್ಳುತ್ತಾನೋ, (ವಿಷಯಗಳನ್ನು ಭೋಗಿಸಲಿಕ್ಕೆ ಇಚ್ಛೆಯಿಲ್ಲದವನಾಗುತ್ತಾನೋ) ತಸ್ಯ = ಆತನಿಗೆ, ಪ್ರಜ್ಞಾ = ಅಪರೋಕ್ಷಜ್ಞಾನವು, ಪ್ರತಿಷ್ಠಿತಾ = ಸ್ಥಿರವಾದುದು || ೫೮ ||

**ಭಾ || ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಂ ನಾಭಿನಂದತಿ ನ ದ್ವೇಷ್ಟಿ || ೫೮ ||**

**ಅ ||** ಪುತ್ರ ಮಿತ್ರ ಕಳತ್ರ ಮೊದಲಾದ ಐಹಿಕ ಎಲ್ಲಾ ಭೋಗಗಳಲ್ಲಿ ಅತ್ಯಾಸಕ್ತಿಯಿಲ್ಲದಿರುವುದರಿಂದ ಶುಭವಾದ ವಸ್ತುವನ್ನಾಗಲೀ ಅಶುಭವಾದ ವಸ್ತುವನ್ನಾಗಲೀ ಹೊಂದಿದರೂ, ಶುಭವಸ್ತುವಿನ ಗುಣಗಳನ್ನು ಕೊಂಡಾಡಿಕೊಂಡು ಸಂತೋಷಚಿತ್ತನಾಗುವುದಿಲ್ಲ ತನಗೆ ಅಸೂಯೆಯನ್ನು ಹುಟ್ಟಿಸುವ ಇತರರ ವಿದ್ಯೆ ಧನ ಮೊದಲಾದುದನ್ನು ಕಂಡು ಅವನನ್ನು ನಿಂದಿಸಿ ದ್ವೇಷಿಸುವುದಿಲ್ಲ (ಮತ್ತೆ ಅವುಗಳನ್ನು ಕಂಡರೂ ಉದಾಸೀನನಾಗಿ ಸುಮ್ಮನೆ ಇರುವನು.) || ೫೭, ೫೮ ||

**ಗೀ || ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ |**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ || ೫೯ ||**

**ಅ ||** ದೇಹಿನಃ=ಜೀವನಿಗೆ, ನಿರಾಹಾರಸ್ಯ=ಆಹಾರಗಳನ್ನು ಬಿಟ್ಟವನಾಗಿರುವುದರಿಂದ, ವಿಷಯಾಃ= ರೂಪಾದಿಗಳು, ರೂಪಾದಿಗಳನ್ನು ಭೋಗಿಸಲಿಕ್ಕೆ ಸಮರ್ಥಗಳಾದ ಇಂದ್ರಿಯಗಳೂ, ರಸವರ್ಜಂ=ಮನಸ್ಸಿನಲ್ಲಿರತಕ್ಕ ವಿಷಯಗಳನ್ನು ಭೋಗಿಸಬೇಕೆಂಬ ಇಚ್ಛೆಬಿಟ್ಟು, ವಿನಿವರ್ತಂತೇ = ನಿವೃತ್ತಗಳಾಗುತ್ತವೆ. (ಆಹಾರಗಳನ್ನು ಬಿಟ್ಟರೂ ರಸದ ಇಚ್ಛೆಯೂ, ರಸನೇಂದ್ರಿಯಕ್ಕೆ ರಸವನ್ನು ಭೋಗಿಸುವ ಶಕ್ತಿಯೂ ನಿವೃತ್ತವಾಗುವುದಿಲ್ಲ) ಅಸ್ಯ= ಈ ಜೀವನಿಗೆ, ರಸೋಽಪಿ = ವಿಷಯೇಚ್ಛೆಯೂ ಕೂಡ, ಪರಂ=ಶ್ರೀಪರಮಾತ್ಮನನ್ನು, ದೃಷ್ಟ್ವಾ=ನೋಡಿ ನಿವರ್ತತೇ=ನಿವೃತ್ತವಾಗುತ್ತದೆ (ಅಂದರೆ—ಭಗವಂತನ ದರ್ಶನದಿಂದಲೇ ವಿಷಯಾಭಿಲಾಷೆಯು ಇಲ್ಲವೆಂದಾಗುತ್ತದೆ)

ವಿ || ವಿಷಯಗಳು ಸಮೀಪದಲ್ಲಿದ್ದರೂ ಬಾಹ್ಯೇಂದ್ರಿಯಗಳು ಆ ರೂಪಾದಿವಿಷಯಗಳಿಂದ ಯಾವಾಗ ಸೆಳೆಯಲ್ಪಡುವುದಿಲ್ಲವೋ, ಸೆಳೆಯಲ್ಪಟ್ಟರೂ ಇಂದ್ರಿಯಗಳು ಮನಸ್ಸನ್ನು ಅದರ ಇದಿರಿಗೆ ಒಯ್ಯಲ್ಪಡುವುದಿಲ್ಲವೋ, ಮನಸ್ಸು ಅಪಹೃತವಾದರೂ ವಿಷಯಗಳಲ್ಲಿ ರಾಗ (ಸ್ನೇಹ) ಹುಟ್ಟುವುದಿಲ್ಲವೋ, ಆಗ ಜೀವನಿಗೆ ಕಳವಳ ಹುಟ್ಟದಿರುವುದು ಇಂದ್ರಿಯಜಯವೆನಿಸುತ್ತದೆ ಇಂತಹ ಇಂದ್ರಿಯಜಯವು ಜಿಜ್ಞಾಸುವಿಗೆ ಆಹಾರಬಿಡೋಣದರಿಂದಲೂ, ಜ್ಞಾನಿಗೆ ಬ್ರಹ್ಮದರ್ಶನದಿಂದಲೂ ಆಗುತ್ತದೆ ಹೀಗೆ ಇಂದ್ರಿಯಜಯವು ಮಹಾಪ್ರಯತ್ನದಿಂದ ಸಾಧಿಸಲ್ಪಡತಕ್ಕುದು. || ೫೯ ||

ಪೀ—**ವಿಷಯಾ ವಿನಿವರ್ತಂತೇ** ಇದು ಮೊದಲಾದ ಮೂರು ಶ್ಲೋಕಗಳ ಅಂತ್ಯದಲ್ಲಿಯೂ **ತಸ್ಯ ಪ್ರಜ್ಞಾ ಪ್ರತಿಷ್ಠಿತಾ** ಎಂದು ಹೇಳಿದ್ದರಿಂದ ಇದು ಲಕ್ಷಣವನ್ನು ವಿವರಿಸುವುದೆಂಬ ಭ್ರಮೆಯು ಬರುವುದು. ಅದನ್ನು ನಿರಾಕರಿಸುತ್ತಾರೆ—

ಭಾ ॥ (೧) ನ ಚೈತಲ್ಲಕ್ಷಣಂ ಜ್ಞಾನಮಯತ್ನತೋಽಪಿ ಭವತೀತ್ಯಾಹೋತ್ತರೈಃ ಶ್ಲೋಕೈಃ ॥ (೨)ನಿರಾಹಾರಸ್ಯೇನ ವಿಷಯಭೋಗಸಾಮರ್ಥ್ಯಾಭಾವ ಏವ ಭವತಿ ॥ (೩) ಇತರ-ವಿಷಯಾಕಾಂಕ್ಷಾಭಾವೋ ವಾ । ರಸಾಕಾಂಕ್ಷಾದಿರ್ನ ನಿವರ್ತತೇ ॥ (೪) ಸ ತ್ವಪ-ರೋಕ್ಷಜ್ಞಾನಾದೇವ ನಿವರ್ತತ ಇತ್ಯಾಹ । ವಿಷಯಾ ಇತಿ ॥ (೫) ಇಂದ್ರಿಯಾಣಿ ಜಯಂತ್ಯಾಶು ನಿರಾಹಾರಾ ಮನೀಷಿಣಃ । ವರ್ಜಯಿತ್ವಾ ತು ರಸನಾಮಸೌ ರಸ್ಯೇ ತು ವರ್ಧತ ಇತಿ ವಚನಾದ್ಭಾಗವತೇ । ರಸಶಬ್ದಸ್ಯ ರಾಗವಾಚಿತ್ವಾಚ್ಚ ॥ ೫೯ ॥

ಅ ॥ (೧) ಎಲ್ಲಾ ಕಾಮಗಳ ಪರಿತ್ಯಾಗಾದಿರೂಪ ಲಕ್ಷಣವುಳ್ಳ ಜ್ಞಾನವು ಅಲ್ಪ ಪ್ರಯತ್ನದಿಂದ ಆಗುವುದಿಲ್ಲವೆಂದು (ಅಂದರೆ ಇಂತಹ ಲಕ್ಷಣಕ್ಕೆ ಕಾರಣವಾದ ಜ್ಞಾನವನ್ನು ಎಲ್ಲಾ ಜನರೂ ಏಕೆ ಸಾಧಿಸುವುದಿಲ್ಲ ಆದಕಾರಣ ಜ್ಞಾನಿಗಳಲ್ಲಿ ಈ ಲಕ್ಷಣವೇ ಇಲ್ಲ ಎಂಬ ಆಶಂಕೆಯನ್ನು ಮೇಲಿನ ಮೂರು ಶ್ಲೋಕಗಳಿಂದ ಪರಿಹರಿಸುತ್ತಾರೆ) (೨) (ಜ್ಞಾನವು ಅಲ್ಪ ಪ್ರಯತ್ನದಿಂದ ಸಾಧ್ಯವಲ್ಲವೆಂದು ಇಲ್ಲಿ ತೋರುವದಿಲ್ಲ, ಎಂದಾದರೆ ಮಹಾ ಪ್ರಯತ್ನದಿಂದಲೇ ಇಂದ್ರಿಯಗಳನ್ನು ತಮ್ಮ ಅಧೀನದಲ್ಲಿಟ್ಟುಕೊಳ್ಳಬೇಕು ಎಂಬುದನ್ನು ಒಂದನೇ ಶ್ಲೋಕದಿಂದ ಹೇಳುತ್ತಾ ಅದರ ಅರ್ಥ ಹೇಳುತ್ತಾರೆ) ಆಹಾರಗಳನ್ನು ಬಿಡೋಣದರಿಂದ ರೂಪಾದಿವಿಷಯಗಳನ್ನು ಭೋಗಿಸಲಿಕ್ಕೆ ಸಮರ್ಥಗಳಾದ ಇಂದ್ರಿಯಗಳಿಗೆ ಉಪಭೋಗಿಸಲಿಕ್ಕೆ ಸಾಮರ್ಥ್ಯವಿಲ್ಲವೆಂದೇ ಆಗುತ್ತದೆ (ಇಂದ್ರಿಯಗಳಿಗೆ ವಿಷಯಗಳನ್ನು ಭೋಗಿಸುವ ಸಾಮರ್ಥ್ಯಗಳು ನಿವೃತ್ತಗಳಾಗುತ್ತವೆ ಅಂದರೆ ಮನಸ್ಸಿನಲ್ಲಿರತಕ್ಕ ವಿಷಯಾಭಿಲಾಷೆಯು ಆಹಾರಬಿಡೋಣದರಿಂದ ಮಾತ್ರ ನಿವೃತ್ತವಾಗುವುದಿಲ್ಲ) (೩) (ಆಹಾರಗಳನ್ನು ಬಿಡೋಣದಿಂದ ರಸದಿಂದ ಇತರಗಳಾದ ವಿಷಯಗಳು ಇಂದ್ರಿಯಗಳಿಗೆ ವಿಷಯಗಳನ್ನು ಭೋಗಿಸುವ ಶಕ್ತಿಗಳು, ಮನಸ್ಸಿಗೆ ಭೋಗಿಸುವ ಇಚ್ಛೆಗಳೂ, ಇಲ್ಲವೆಂದಾಗುತ್ತವೆ (ಅಂದರೆ ರಸ ವಿನಹ ಬೇರೆ ಭೋಗಶಕ್ತ್ಯಾದಿಗಳು ನಿವೃತ್ತಗಳಾಗುತ್ತವೆ) ಮನಸ್ಸಿಗೆ ರಸವಿಷಯಕ ಆಕಾಂಕ್ಷೆಯು ನಾಲಿಗೆಗೆ ರಸವನ್ನು ಭೋಗಿಸುವ ಶಕ್ತಿಯೂ ನಿವೃತ್ತವಾಗುವುದಿಲ್ಲ (೪) ಎಲ್ಲಾ ವಿಷಯಗಳನ್ನು ವಿಷಯೀಕರಿಸುವ ರಾಗವೂ ಮತ್ತು ಆ ರಸವೂ, ರಸವನ್ನು ಭೋಗಿಸುವ ಶಕ್ತಿಯೂ ಭೋಗಿಸಬೇಕೆಂಬ ಆಕಾಂಕ್ಷೆಯೂ, ಅಪರೋಕ್ಷ ಜ್ಞಾನದಿಂದಲೇ ನಿವೃತ್ತವಾಗುತ್ತದೆ, ಎಂದು **ವಿಷಯಾಃ** ಎಂಬ ಶ್ಲೋಕದಿಂದ ಹೇಳುತ್ತಾರೆ (೫) (ಈ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ) ಆಹಾರವನ್ನು ಬಿಟ್ಟಿರುವ ಜ್ಞಾನಿಗಳು ರಸನೇಂದ್ರಿಯ ಹೊರತು ಇಂದ್ರಿಯಗಳನ್ನು ಶೀಘ್ರದಲ್ಲಿ ಭೋಗಿಸುವ ಶಕ್ತಿಯು ಕ್ಷೀಣವಾಗುವುದರಿಂದಲೂ ರಾಗವು ಕ್ಷೀಣವಾಗುವುದರಿಂದಲೂ ಗೆಲ್ಲುತ್ತಾರೆ ಈ ರಸನೇಂದ್ರಿಯವು ರಸವಿಷಯದಲ್ಲಿ ಅಭಿವೃದ್ಧವಾಗುತ್ತದೆ, ಎಂದು ಭಾಗವತದಲ್ಲಿದೆ ರಸ ಶಬ್ದವು ರಾಗವೆಂಬ ಅರ್ಥವನ್ನು ಹೇಳುತ್ತದೆ ॥ ೫೯ ॥

ತಾ ॥ ರಸೋ ರಾಗಃ ॥ ೫೯ ॥

ಅ ॥ ರಸಃ=ರಾಗವು ಆಸಕ್ತಿಯು ॥ ೫೯ ॥

ಟೀ— ಇಂದ್ರಿಯಗಳನ್ನು ಸ್ವಾಧೀನೀಕರಿಸಿಕೊಳ್ಳುವುದಕ್ಕಾಗಿ ನಿರಾಹಾರರೂಪ ಮಹಾ ಪ್ರಯತ್ನವು ಏಕೆ? ಪರೋಕ್ಷಜ್ಞಾನಾದಿರೂಪ ಸಾಧಾರಣ ಪ್ರಯತ್ನವು ಸಾಕು ಹಾಗೆಯೇ ಪರಬ್ರಹ್ಮನ ಅಪರೋಕ್ಷ ಜ್ಞಾನವು ಏಕೆ? ನಿತ್ಯಾನಿತ್ಯವಸ್ತು ವಿವೇಕಾದಿಗಳ ಜ್ಞಾನದಿಂದಲೂ ಇಂದ್ರಿಯ ಜಯವು ಆಗಬಹುದಷ್ಟೆ ಎಂದರೆ—

ಗೀ || ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ |
ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ || ೬೦ ||

ಅ || ಕೌಂತೇಯ=ಅರ್ಜುನನೇ, ವಿಪಶ್ಚಿತಃ=ಪರೋಕ್ಷಜ್ಞಾನವಿರುವ. (ಅಂದರೆ ಐಹಿಕ ವಿಷಯಾನುಭವವು ಕೆಟ್ಟದೆಂದು ತಿಳಿದುಕೊಂಡಿರುವ) ಯತತೋಽಪಿ=ಸಾಧಾರಣ ಪ್ರಯತ್ನವುಳ್ಳವನಾದಾಗ್ಯೂ, (ಅಂದರೆ ವಿಷಯಗಳ ಕಡೆಗೆ ಇಂದ್ರಿಯಗಳನ್ನು ಓಡದಂತೆ ಪ್ರಯತ್ನಪಡುವವನಾದಾಗ್ಯೂ) ಪುರುಷಸ್ಯ=ಜೀವನ, ಮನಃ=ಮನಸ್ಸನ್ನು, ಪ್ರಮಾಥೀನಿ=ಕಳವಳಪಡಿಸುವ, (ದುಃಖಪಡಿಸುವ) ಇಂದ್ರಿಯಾಣಿ=ವಿಷಯಗಳಿಂದ ಸಂಬದ್ಧಗಳಾದ ಇಂದ್ರಿಯಗಳು, ಪ್ರಸಭಂ=ಬಲಾತ್ಕಾರವಾಗಿ, ಮನಃ=ಮನಸ್ಸನ್ನು, ಹರಂತಿ=ವಿಷಯಗಳಲ್ಲಿ ಅನುರಾಗಯುಕ್ತವನ್ನಾಗಿ ಮಾಡುತ್ತವೆ (ಇಂದ್ರಿಯಗಳ ಕಡೆಗೆ ಎಳೆಯುತ್ತವೆ) (ಆದಕಾರಣ ಇಂದ್ರಿಯಗಳನ್ನು ವಶಪಡಿಸಿಕೊಳ್ಳಲಿಕ್ಕೆ ಮಹಾ ಪ್ರಯತ್ನವನ್ನೇ ಮಾಡಬೇಕು) || ೬೦ ||

ಭಾ || (೧) ಅಪರೋಕ್ಷಜ್ಞಾನರಹಿತಜ್ಞಾನಿನೋಽಪಿ ಸಾಧಾರಣಯತ್ನವತೋಽಪಿ ಮನೋ ಹರಂತೀಂದ್ರಿಯಾಣಿ || (೨) ಪುರುಷಸ್ಯ ಶರೀರಾಭಿಮಾನಿನಃ | ಕೋ ದೋಷಸ್ತತಃ | ಪ್ರಮಾಥೀನಿ ಪ್ರಮಥನಶೀಲಾನಿ ಪುರುಷಸ್ಯ || ೬೦ ||

ಅ || (೧) ಅಪರೋಕ್ಷಜ್ಞಾನವಿಲ್ಲದಿದ್ದು ಪರೋಕ್ಷಜ್ಞಾನವುಳ್ಳವನಾದಾಗ್ಯೂ, ಸಾಧಾರಣ ಪ್ರಯತ್ನವುಳ್ಳವನಾದಾಗ್ಯೂ ಜೀವನ, ಇಂದ್ರಿಯ ಗಳು, ವಿಷಯ ಸಂಬದ್ಧಗಳಾಗಿ ವಿಷಯಗಳ ಕಡೆಗೆ ಮನಸ್ಸನ್ನು ಸೆಳೆದುಕೊಂಡು ಹೋಗುತ್ತವೆ (೨) ಸ್ತ್ರೀಯರಿಗೂ ಮನಸ್ಸಿನ ಆಕರ್ಷಣವುಂಟಾಗುವುದರಿಂದ ಪುರುಷಸ್ಯ ಎಂದದ್ದು ಅಯುಕ್ತವೆಂದರೆ) ಪುರುಷಸ್ಯ=(ಪುರಂ=ಶರೀರವನ್ನು, ಸರತಿ=ಹೊಂದುತ್ತಾನೆಂಬ ವ್ಯುತ್ಪತ್ತಿಯಿಂದ) ಶರೀರದಲ್ಲಿ ತನ್ನದೆಂದು ಅಭಿಮಾನವಿರುವ ಜೀವನು (ಸ್ತ್ರೀಯಾಗಬಹುದು ಪುರುಷನೂ ಆಗಬಹುದು) ಇಂದ್ರಿಯಗಳು ವಿಷಯ ಸನ್ನಿಕೃಷ್ಟವಾದ ಮನಸ್ಸಿನಲ್ಲಿ ಅನುರಾಗವನ್ನು ಹುಟ್ಟಿಸುತ್ತವೆಂದು ಹೇಳಿದ್ದರಿಂದ ಜೀವನಿಗೆ ಇಂದ್ರಿಯಜಯವು ಹೇಗೆ? ಪ್ರಮಾಥೀನಿ=ಮನಸ್ಸನ್ನು ಅಪಹರಿಸತಕ್ಕವು ವ್ಯಾಕುಲೀಭಾವವನ್ನು ಸಂಪಾದಿಸುವ ಸ್ವಭಾವವುಳ್ಳವುಗಳು (ಆದಕಾರಣ ಇಂದ್ರಿಯಗಳು ತನ್ನ ಅಧೀನವಾಗಿ ಮಾಡಲ್ಪಟ್ಟವುಗಳಲ್ಲ) ಪುರುಷಸ್ಯ ಎಂಬುದಕ್ಕೆ, ಮನಃ ಎಂಬಲ್ಲಿಯೂ, ಪ್ರಮಾಥೀನಿ ಎಂಬಲ್ಲಿಯೂ ಅನ್ವಯವು || ೬೦ ||

ಪೀ—ಸಾಧಾರಣ ಪ್ರಯತ್ನ ವಿವೇಕಜ್ಞಾನಗಳಿಂದ ಇಂದ್ರಿಯ ಜಯವು ಅಸಾಧ್ಯವಾದರೆ—ಎಂದಿಗೂ ಸಾಧ್ಯವಿಲ್ಲದಿರಬೇಕು. ಏಕೆಂದರೆ—ಆಹಾರವಿಲ್ಲದಿದ್ದರೆ—ದೇಹವೇ ಉಳಿಯದು ಮತ್ತು ಇಂದ್ರಿಯಜಯವು ಬ್ರಹ್ಮಾಪರೋಕ್ಷಜ್ಞಾನದಿಂದಲೇ ಸಾಧಿಸಲ್ಪಡಬೇಕೆಂದಾದರೆ—ಇಂದ್ರಿಯಜಯದಿಂದ ಬ್ರಹ್ಮಾಪರೋಕ್ಷಜ್ಞಾನವು ಸಾಧ್ಯವೆಂದು ಅನ್ಯೋನ್ಯಾಶ್ರಯ ದೋಷವು ಬಂದೀತು. ಎಂದರೆ—

ಗೀ || ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ |
ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ || ೬೧ ||

ಅ || ಸರ್ವಾಣಿ=ಎಲ್ಲಾ, ತಾನಿ=ಆ ಇಂದ್ರಿಯಗಳನ್ನು, ಸಂಯಮ್ಯ=ಅಂಕೆಯಲ್ಲಿಟ್ಟುಕೊಂಡು (ಅಂದರೆ ನಿಷಿದ್ಧಗಳಾದ ವಿಷಯಗಳಲ್ಲಿ ಹೋಗದಂತೆ ಮಾಡಿ) ಮತ್ಪರಃ=ನಾನೇ (ಶ್ರೀಕೃಷ್ಣನೇ) ಸರ್ವೋತ್ತಮನೆಂದು ತಿಳಿದುಕೊಂಡವನಾಗಿ ಯುಕ್ತಃ=ಶ್ರೀಹರಿಯಲ್ಲಿಯೇ ಮನಸ್ಸನ್ನು ಇಟ್ಟವನಾಗಿ, ಆಸೀತ=

ಇರಬೇಕು ಯಸ್ಯ=ಯಾರ, ವಶೇ=ಅಧೀನದಲ್ಲಿ, ಇಂದ್ರಿಯಾಣಿ=ಇಂದ್ರಿಯಗಳು, (ಇರುತ್ತವೋ) ತಸ್ಯ=ಅತನಿಗೆ, ಪ್ರಜ್ಞಾ=ಅಪರೋಕ್ಷಜ್ಞಾನವು, ಪ್ರತಿಷ್ಠಿತಾ=ಸ್ಥಿರವಾದುದು, ಹಿ=ಪ್ರಮಾಣಪ್ರಸಿದ್ಧವು

ವಿ || ಇಂದ್ರಿಯಗಳನ್ನು ಜಯಿಸಲಿಕ್ಕೆ ಸಾಧಾರಣ ಪ್ರಯತ್ನವು ಸಾಧನವಲ್ಲ ಆಹಾರಾದಿಗಳನ್ನು ಬಿಡುವುದು ಅಶಕ್ಯವೂ ಅಲ್ಲ ಆದರೂ ಮಹಾ ಪ್ರಯತ್ನದಿಂದಲೇ ಗೆಲ್ಲಬೇಕು ಶ್ರೀಹರಿಯೇ ಸರ್ವರಿಗಿಂತಲೂ ಉತ್ಕೃಷ್ಟನು. ಎಂದು ತಿಳಿದುಕೊಂಡು ಅತನಲ್ಲಿಯೇ ನಿರಂತರದಲ್ಲಿಯೂ ಮನಸ್ಸನ್ನು ಇಡುವುದು ಇಂದ್ರಿಯಜಯಕ್ಕೆ ಮುಖ್ಯ ಸಾಧನವು ನಿರಾಹಾರವಾಗಿ ಇರಬೇಕೆಂದು ಹೇಳಿದ್ದು ಮಹಾನುಭಾವರಾದ ಜ್ಞಾನಿಗಳಿಗೂ ಆಹಾರಪರಿತ್ಯಾಗದಿಂದ ಇಂದ್ರಿಯಗಳಿಗೆ ಉಪಭೋಗಿಸುವ ಶಕ್ತಿಯು ಕ್ಷೀಣವಾಗುತ್ತದೆಂಬುದು ಪ್ರಮಾಣಸಿದ್ಧವಾಗಿದೆ ಎಂಬ ಅಭಿಪ್ರಾಯದಿಂದ ಹೇಳಿದ್ದು ಇಂದ್ರಿಯಜಯದಿಂದ ಭಗವತ್ತತ್ವಜ್ಞಾನವು ಸಿದ್ಧಿಸುತ್ತದೆ || ೬೧ ||

ಭಾ || (೧) ತರ್ಹ್ಯಶಕ್ಯಾನ್ಯೇವೇತ್ಯತ ಆಹ | ತಾನೀತಿ || (೨) ಬಹುಯತ್ನವತಃ ಶಕ್ಯಾನಿ | ಅತೋ ಯತ್ನಂ ಕುರ್ಯಾದಿತ್ಯಾಶಯಃ | ಯುಕ್ತೋ ಮಯಿ ಮನೋಯುಕ್ತಃ || (೩) ಅಹಮೇವ ಪರಃ ಸರ್ವಸ್ಮಾದುತ್ಕೃಷ್ಟೋ ಯಸ್ಯ ಸ ಮತ್ಪರಃ | ಫಲಮಾಹ | ವಶೇ ಹೀತಿ || ೬೧ ||

ಅ || (೧) ಸಾಧಾರಣಪ್ರಯತ್ನ ವಿವೇಕಜ್ಞಾನಗಳಿಂದ ಇಂದ್ರಿಯಗಳು ಗೆಲ್ಲಲ್ಪಡದಿದ್ದರೆ ಗೆಲ್ಲಲಿಕ್ಕೆ ಅಶಕ್ಯಗಳೇ ಆಗಿವೆಯೋ ಎಂದರೆ ತಾನಿ ಎಂದು ಹೇಳಿದ್ದಾರೆ (೨) ಬಹು ಪ್ರಯತ್ನ ಮಾಡುವವನಿಗೆ ಇಂದ್ರಿಯಜಯವು ಶಕ್ಯವಾದುದರಿಂದ ಬಹುಯತ್ನವನ್ನು ಮಾಡಬೇಕು (ಮಹಾ ಪ್ರಯತ್ನದಿಂದ ಗೆಲ್ಲಲಿಕ್ಕೆ ಶಕ್ಯಗಳೇ ಆಗಿವೆ) ಯುಕ್ತಃ=ನನ್ನಲ್ಲಿ (ಶ್ರೀಕೃಷ್ಣನಲ್ಲಿ) ಮನಸ್ಸನ್ನು ಇಟ್ಟವನು. (೩) (ಮತ್ಪರಃ ಅಹಂ ವಾಸುದೇವಃ ಸರ್ವಪ್ರತ್ಯಗಾತ್ಮಾ ಪರೋ ಯಸ್ಯ ಸ ಮತ್ಪರಃ ನಾನ್ಯೋಽಹಂ ತಸ್ಮಾದಿತಿ ಬುದ್ಧಿಮಾನಾಸೀತ ಎಂದು ಶಂಕರಾಚಾರ್ಯರು ಮತ್ಪರಃ ಎಂಬುದರಿಂದ ಅಭೇದಜ್ಞಾನವು ಹೇಳಲ್ಪಡುತ್ತದೆಂದು ಅರ್ಥ ಹೇಳಿರುವರು ಈ ಐಕ್ಯಜ್ಞಾನವು ಗೀತೆಯಲ್ಲಿ ಹೇಳಲ್ಪಡಲಿಲ್ಲವೆಂಬ ಅಭಿಪ್ರಾಯದಿಂದ ಹೇಳುತ್ತಾರೆ) ನಾನೇ ಸರ್ವರಿಗಿಂತಲೂ ಉತ್ಕೃಷ್ಟನಾಗಿ ಉಳ್ಳವನು ಎಂದು ಮತ್ಪರ, ಎಂಬುದಕ್ಕೆ ಅರ್ಥವು ವಶೇ ಹಿ ಎಂಬುದರಿಂದ ಇಂದ್ರಿಯಜಯಕ್ಕೆ ಜ್ಞಾನರೂಪ ಫಲ ಹೇಳುತ್ತಾರೆ) || ೬೧ ||

ಗೀ || ಧ್ಯಾಯತೋ ವಿಷಯಾನ್ಪುಂಸಃ ಸಂಗಸ್ತೇಷೂಪಜಾಯತೇ |
ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ ೬೨

ಅ || ವಿಷಯಾನ್=ರೂಪರಸಾದಿ ವಿಷಯಗಳನ್ನು ಧ್ಯಾಯತಃ=ಹಿತಕರಗಳೆಂಬ ಬುದ್ಧಿಯಿಂದ ಧ್ಯಾನಿಸತಕ್ಕ, ಪುಂಸಃ=ಪುರುಷನಿಗೆ ತೇಷು=ಆ ವಿಷಯಗಳಲ್ಲಿಯೂ ಅವುಗಳಿಗೆ ಸದೃಶಗಳಾದ ವಸ್ತುಗಳಲ್ಲಿಯೂ, ಸಂಗಃ=ಆಸಕ್ತಿಯು, ಉಪಜಾಯತೇ=ಉಂಟಾಗುತ್ತದೆ ಸಂಗಾತ್=ಆಸಕ್ತಿಯಿಂದ, ತೇಷು=ಅವುಗಳಲ್ಲಿ, ಕಾಮಃ=ಇಚ್ಛೆಯು, ಸಂಜಾಯತೇ=ಅಧಿಕವಾಗುತ್ತದೆ ಕಾಮಾತ್=ಇಚ್ಛೆಯಿಂದ, ಕ್ರೋಧಃ=ಕೋಪವು, ಅಭಿಜಾಯತೇ=ಹುಟ್ಟುತ್ತದೆ (ಅಂದರೆ—ವಿಷಯವನ್ನು ಹೊಂದಬೇಕೆಂದು ಇಚ್ಛಿಸಿದಾಗ ಅದನ್ನು ತಡೆಯುವವರಲ್ಲಿ ಕ್ರೋಧವುಂಟಾಗುತ್ತದೆ) || ೬೨ ||

**ಗೀ ॥ ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ॥ ೬೩ ॥**

ಅ ॥ ಕ್ರೋಧಾತ್ = ಸಿಟ್ಟಿನಿಂದ, ಸಮ್ಮೋಹಃ=ಈ ಕಾರ್ಯವನ್ನು ಮಾಡಬಹುದು, ಈ ಕಾರ್ಯವನ್ನು ಮಾಡಬಾರದೆಂದು ವಿವೇಕವಿಲ್ಲದಿರುವುದು, ಇತರರ ದ್ರವ್ಯವನ್ನು ಅಪಹರಿಸುವುದು ಇದು ಮೊದಲಾದ ಅಕಾರ್ಯವಾದ ಅಧರ್ಮದಲ್ಲಿ ಇಚ್ಛೆಯು, ಅಧರ್ಮದಲ್ಲಿ ಧರ್ಮವೆಂಬ ಬುದ್ಧಿಯು ಅಥವಾ ಮಿಥ್ಯಾಜ್ಞಾನವು, ಭವತಿ = ಉಂಟಾಗುತ್ತದೆ ಸಮ್ಮೋಹಾತ್=ಸಮ್ಮೋಹದಿಂದ, ಸ್ಮೃತಿವಿಭ್ರಮಃ= ಬೇರೆಯವರ ದ್ರವ್ಯಾಪಹಾರ ಮೊದಲಾದುದು ಅಧರ್ಮವೆಂದು ಹೇಳತಕ್ಕ ವೇದಾದಿಗಳ ಅರ್ಥವು ಮೊದಲು ತಾನು ತಿಳಿದಿದ್ದರೂ ಆಗ ತಿಳಿಯದೆ ಹೋಗುವಿಕೆಯು, ಅಥವಾ ಅಧರ್ಮವನ್ನು ನಿಷೇಧಿಸುವ ಸ್ಮೃತಿಗೆ ವಿಸ್ಮರಣವು, ಉಂಟಾಗುತ್ತದೆ ಸ್ಮೃತಿಭ್ರಂಶಾತ್ = ಸ್ಮರಣೆಯ ನಾಶದಿಂದ, ಬುದ್ಧಿನಾಶಃ= ಈ ಕಾರ್ಯವನ್ನು ಮಾಡಬಾರದು ಇದನ್ನು ಮಾಡಿದರೆ ಪಾಪವುಂಟಾಗುತ್ತದೆ, ಎಂಬ ಬುದ್ಧಿಯು ನಾಶವಾಗುತ್ತದೆ ಬುದ್ಧಿನಾಶಾತ್=ಬುದ್ಧಿಯು ಕೆಟ್ಟುಹೋಗುವುದರಿಂದ, ಪ್ರಣಶ್ಯತಿ=ನರಕಾದ್ಯನರ್ಥಗಳನ್ನು ಹೊಂದುತ್ತಾನೆ. ॥ ೬೩ ॥

ಪೀ—ಧ್ಯಾಯತಃ ಇತ್ಯಾದಿಗಳಿಂದ ಪ್ರಕೃತದಲ್ಲಿ ಉಪಯುಕ್ತವಾಗದಿದ್ದುದನ್ನು ಏಕೆ ಹೇಳುವುದೆಂದರೆ—

**ಭಾ ॥ (೧) ರಾಗಾದಿದೋಷಕಾರಣಮಾಹ ಪರಿಹಾರಾಯ ಶ್ಲೋಕದ್ವಯೇನ ॥ (೨) ಸಮ್ಮೋಹೋಽಕಾರ್ಯೇಚ್ಛಾ । ತಥಾ ಹಿ ಮೋಹಶಬ್ದಾರ್ಥ ಉಕ್ತ ಉಪಗೀತಾಸು । ಮೋಹಸಂಜ್ಞಿತಂ । ಅಧರ್ಮಲಕ್ಷಣಂ ಚೈವ ನಿಯತಂ ಪಾಪಕರ್ಮಸ್ವಿತಿ । ತಥಾ ಚಾನ್ಯತ್ರ ಸಮ್ಮೋಹೋಽಧರ್ಮಕಾಮಿತೇತಿ ॥ (೩) ಸ್ಮೃತಿವಿಭ್ರಮಃ ಪ್ರತಿಷೇಧಾದಿಸ್ಮೃತಿವಿನಾಶಃ । ಬುದ್ಧಿವಿನಾಶಃ ಸರ್ವಾತ್ಮನಾ ದೋಷಬುದ್ಧಿನಾಶಃ । ವಿನಶ್ಯತಿ ನರಕಾದ್ಯನರ್ಥಂ ಪ್ರಾಪ್ನೋತಿ ॥ (೪) ತಥಾ ಹ್ಯುಕ್ತಂ । ಅಧರ್ಮಕಾಮಿನಃ ಶಾಸ್ತ್ರೇ ವಿಸ್ಮೃತಿರ್ಜಾಯತೇ ಯದಾ । ದೋಷಾದೃಷ್ಟೇಸ್ತತ್ಪತೇಶ್ಚ ನರಕಂ ಪ್ರತಿಪದ್ಯತೇ । ಇತಿ ॥ ೬೨, ೬೩ ॥**

ಅ ॥ (೧) ರಾಗಾದಿ ದೋಷಕ್ಕೆ ಕಾರಣವಾದ ವಿಷಯಧ್ಯಾನಾದಿಗಳನ್ನು ರಾಗಾದಿದೋಷಗಳೇ ಕಾರಣಗಳಾಗಿವುಳ್ಳ ಸಮ್ಮೋಹಾದಿಗಳನ್ನು, ರಾಗಾದಿದೋಷಗಳನ್ನು ಪರಿಹರಿಸುವುದಕ್ಕಾಗಿ ಈ ಎರಡು ಶ್ಲೋಕಗಳಿಂದ ಹೇಳುತ್ತಾರೆ (ಅಂದರೆ—ಮತ್ಪರೋ ಯುಕ್ತ ಆಸೀತ ಎಂದು ಇಂದ್ರಿಯಜಯಕ್ಕೆ ಶ್ರೀಹರಿಯೇ ಸರ್ವೋತ್ಕೃಷ್ಟನೆಂದು ತಿಳಿದು ಆತನಲ್ಲಿಯೇ ನಿರಂತರದಲ್ಲಿಯೂ ಮನಸ್ಸನ್ನು ಇಡುವುದು, ಸಾಧನವೆಂದುಕ್ತವಾಗಿದೆ) (ರಾಗಾದಿದೋಷ ಪರಿಹಾರವೂ ಇನ್ನೊಂದು ಸಾಧನವು ಹೀಗೆ ಇರಲು ರಾಗಾದಿದೋಷ ಪರಿಹಾರವೇ ಹೇಗೆ ಆಗುವುದೆಂದು ಆಕ್ಷೇಪವು ಬಂದರೆ-ರಾಗಾದಿದೋಷ ಪರಿಹಾರಕ್ಕೆ ಕಾರಣವಾದ ಫಲಜ್ಞಾನವು ಕಾರಣವಾಗಿರುವುದರಿಂದ ಅದರಿಂದ ಸಾಧ್ಯವಾದುದನ್ನು ಹೇಳುವುದಕ್ಕಾಗಿ ಸಾಧನವನ್ನು ಹೇಳುತ್ತಾರೆ.) (೨) (ಸಮ್ಮೋಹಃ = ಮೂರ್ಛೆಯು. ಈ ಅರ್ಥವು ಪ್ರಕೃತ ಕೂಡದಿರುವುದರಿಂದ ಬೇರೆ ರೀತಿಯಾಗಿ ಅರ್ಥ ಹೇಳುತ್ತಾರೆ) ಸಮ್ಮೋಹಃ = ವೇದಗಳಲ್ಲಿ ವಿಧಿಸಲ್ಪಟ್ಟದ್ದು

ಕಾರ್ಯವು. ಅದಕ್ಕೆ ವಿರುದ್ಧವಾದುದು ಅಕಾರ್ಯವು. ಅದು ಅಧರ್ಮವೇ. ಅದರಲ್ಲಿ ಇಚ್ಛೆಯು. (ಏಕೆಂದರೆ) ಮೋಹಶಬ್ದಾರ್ಥವನ್ನು ಉಪಗೀತೆಯಲ್ಲಿ ಹೇಳಿದ್ದಾರೆ. ಅದೃಷ್ಟರೂಪ ಅಧರ್ಮವಿಷಯಗಳಾದ ಅದೃಷ್ಟಹೇತುಕ ಮತ್ತು ಪಾಪಕರ್ಮಗಳಲ್ಲಿ ನಿಯಮದಿಂದ ಇರುವ ಕಾಮವು ಮೋಹವೆನಿಸುತ್ತದೆ. ಸಮ್ಮೋಹವೆಂದರೆ—ಅಧರ್ಮಗಳಲ್ಲಿ ಇಚ್ಛೆಯು ಎಂದು ಬೇರೆ ಕಡೆಗಳಲ್ಲಿಯೂ ಸ್ಪಷ್ಟವಾಗಿ ಹೇಳಿದ್ದಾರೆ (೩) ಸ್ಮೃತಿವಿಭ್ರಮಃ=ಪ್ರತಿಷೇಧ ಮೊದಲಾದ ಬುದ್ಧಿವಿನಾಶವು ಬುದ್ಧಿವಿನಾಶಃ=ಸರ್ವಪ್ರಕಾರದಿಂದಲೂ ದೋಷಬುದ್ಧಿವಿನಾಶವು ವಿನಶ್ಯತಿ=ನರಕಾದ್ಯನರ್ಥವನ್ನು ಹೊಂದುತ್ತಾನೆ (೪) ಅದನ್ನು ಪ್ರಮಾಣಕೊಟ್ಟು ಉಪಪಾದಿಸುತ್ತಾರೆ ಅಧರ್ಮವನ್ನು ಇಚ್ಛಿಸುವವನಿಗೆ ಶಾಸ್ತ್ರದಲ್ಲಿ ಯಾವಾಗ ವಿಸ್ಮರಣೆಯುಂಟಾಗುತ್ತದೋ, ವಿಸ್ಮರಣೆಯಿರುವಾಗ ದೋಷವು ಕಾಣದಿರುವುದರಿಂದಲೂ, ದೋಷವನ್ನು ಮಾಡುವುದರಿಂದಲೂ, ನರಕವನ್ನು ಹೊಂದುತ್ತಾನೆ || ೬೨, ೬೩ ||

ಪೀ—ಕ್ರೋಧಾದ್ಭವತಿ ಸಮ್ಮೋಹಃ ಎಂಬ ಶ್ಲೋಕದಲ್ಲಿದ್ದ ಸಮ್ಮೋಹ ಸ್ಮೃತಿವಿಭ್ರಮ ಎಂಬ ಪದಗಳಿಂದ ವಿಪರೀತ ಜ್ಞಾನವೇ ಹೇಳಲ್ಪಡುವುದರಿಂದ ಹೇತು-ಹೇತುಮದ್ಭಾವವು ಹೇಗೆ ಕೂಡುತ್ತದೆ? ಎಂದರೆ -

ತಾ || (೧) ಸಮ್ಮೋಹಾನ್ಮಿಥ್ಯಾಜ್ಞಾನಾತ್ | ಜ್ಞಾತಮ(ತೋಽ)ಪ್ಯನ್ಯಥಾ ಸ್ಮರ್ಯತೇ (ವಾಕ್ಯಾರ್ಥಃ) || (೨) ವಾಕ್ಯಾರ್ಥಾನಾಮನ್ಯಥಾ ಸ್ಮರಣಾನ್ನಿರ್ಣೀತಂ ಜ್ಞಾನಮಪಿ ನಶ್ಯತಿ || ೬೩ ||

ಅ || (೧) ಸಮ್ಮೋಹಾತ್=ಮಿಥ್ಯಾಜ್ಞಾನದೆಶೆಯಿಂದ, ಮೊದಲು ತಿಳಿಯಲ್ಪಟ್ಟಿದ್ದು ವ್ಯತ್ಯಾಸವಾಗಿ ಸ್ಮರಿಸಲ್ಪಟ್ಟದ್ದು ಸ್ಮೃತಿವಿಭ್ರಮ ಎನಿಸುತ್ತದೆ (ಅಂದರೆ—ಸಮ್ಮೋಹ ಪದದಿಂದ ಇತರರ ದ್ರವ್ಯಾಪಹಾರ ಮೊದಲಾದ ಅಧರ್ಮಗಳಲ್ಲಿ ಧರ್ಮವೆಂಬ ಬುದ್ಧಿಯು, ಇದು ಮೊದಲಾದ ಮಿಥ್ಯಾಜ್ಞಾನವು ಹೇಳಲ್ಪಡುತ್ತದೆ ಸ್ಮೃತಿವಿಭ್ರಮಪದದಿಂದ ಇತರರ ದ್ರವ್ಯಾಪಹಾರ ಮೊದಲಾದುದು ಅಧರ್ಮವೆಂದು ಹೇಳತಕ್ಕ ವೇದಾದಿಗಳ ಅರ್ಥವನ್ನು ಮೊದಲು ತಿಳಿದಿದ್ದರೂ ವ್ಯತ್ಯಾಸವಾಗಿ ಸ್ಮರಣವು ಹೇಳಲ್ಪಡುತ್ತದೆ ಅವುಗಳಿಗೆ ಹೇತುಹೇತುಮದ್ಭಾವವು ಕೂಡುತ್ತದೆ) (೨) (ಸ್ಮೃತಿಭ್ರಂಶದಿಂದ ಬುದ್ಧಿಯು ನಾಶವಾಗುತ್ತದೆಂಬುವುದು ಅಸಂಗತವು ಏಕೆಂದರೆ ಚೇತನನಿಗೆ ಬುದ್ಧಿಯು ಅವಶ್ಯವಾಗಿ ಇರುವುದರಿಂದ ಬುದ್ಧಿಗೆ ನಾಶವು ಕೂಡಲಾರದು, ಎಂದರೆ—)ವಾಕ್ಯಾರ್ಥಗಳನ್ನ ಇದ್ದದಕ್ಕಿಂತ ವ್ಯತ್ಯಾಸವಾಗಿ ಸ್ಮರಿಸುವುದರಿಂದ ಕೇವಲ ವಾಕ್ಯಾಪೇಕ್ಷೆಯಿಲ್ಲದೇನೇ ನಿಶ್ಚಿತವಾದ ಜ್ಞಾನವು ಇಲ್ಲವೆಂದಾಗುತ್ತದೆಂದರ್ಥವು (ಇಲ್ಲಿ ಪರಂಪರಯಾ ವಾಕ್ಯಗಳ ಅಪೇಕ್ಷೆಯಿದ್ದರೂ ಅದನ್ನಾಲೋಚಿಸದೆ ಗುರುಗಳ ಉಪದೇಶದಿಂದಲಾಗಲೀ, ಮನನದಿಂದಲಾಗಲೀ ಬಂದಿರುವ ಪ್ರತಿಭಾರೂಪವಾದ ಜ್ಞಾನವನ್ನು ಇಟ್ಟುಕೊಳ್ಳಬೇಕು. || ೬೩ ||

ಪೀ—ರಾಗದ್ವೇಷ ಪರಿಹಾರವಾಗಲಿ ಅದರಿಂದ ಏನಾಗುವುದೆಂದರೆ—

ಗೀ || ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ |
ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ || ೬೪ ||

ಅ || (ಹಿಂದೆ ಹೇಳಿದ ಪ್ರಕಾರ ರಾಗದ್ವೇಷಗಳನ್ನು ಬಿಟ್ಟವನು) ರಾಗದ್ವೇಷವಿಯುಕ್ತೈಃ=ರಾಗದ್ವೇಷಗಳಿಂದ ಪ್ರಯೋಗಿಸಲ್ಪಡದಿರುವ(ರಾಗದ್ವೇಷಗಳನ್ನು ತೋರದಿರುವ), ಆತ್ಮವಶ್ಯೈಃ=ತನ್ನ ಅಧೀನದಲ್ಲಿರುವ, ಇಂದ್ರಿಯೈಃ=ಇಂದ್ರಿಯಗಳಿಂದ, ವಿಷಯಾನ್=ಕೇವಲ ಶರೀರಧಾರಣಾರ್ಥವಾಗಿ ಶ್ರೀಹರಿ

ಯಿಂದ ಕೊಡಲ್ಪಟ್ಟ ವಿಷಯಗಳನ್ನು, ಚರಂಸ್ತು=ಅನುಭವಿಸುವವನಾದಾಗ್ಯೂ, ವಿಧೇಯಾತ್ಮಾ=ಸ್ವಾಧೀನವಾದ ಮನಸ್ಸುಳ್ಳವನಾಗಿ, (ಆಗುತ್ತಾನೆ) (ಅದುದರಿಂದಲೇ ಬಾಹ್ಯೇಂದ್ರಿಯಗಳೂ ಅವನಿಗೆ ಅಧೀನಗಳಾಗುತ್ತವೆ) (ಮನಸ್ಸನ್ನು ಸ್ವಾಧೀನೀಕರಿಸಿಕೊಂಡದ್ದರಿಂದ) ಪ್ರಸಾದಂ=ಮನಸ್ಸಮಾಧಾನವನ್ನು, ಅಧಿಗಚ್ಛತಿ=ಹೊಂದುತ್ತಾನೆ ಪ್ರಸಾದವೆಂದರೆ ಪ್ರಯತ್ನವಿಲ್ಲವಾದರೂ ಮನಸ್ಸಿಗೆ ಪ್ರಾಯಶಃ ವಿಷಯಗಳಲ್ಲಿ ಪ್ರವೃತ್ತಿಯಿಲ್ಲದಿರುವುದು ॥ ೬೪ ॥

ಭಾ ॥ (೧) ಇಂದ್ರಿಯಜಯಫಲಮಾಹೋತ್ತರಾಭ್ಯಾಂ ಶ್ಲೋಕಾಭ್ಯಾಂ ॥ (೨) ವಿಷಯಾನನುಭವನ್ನಪಿ । ವಿಧೇಯ ಆತ್ಮಾ ಮನೋ ಯಸ್ಯ ಸಃ । ಜಿತಾತ್ಮೇತ್ಯರ್ಥಃ । ಪ್ರಸಾದಂ ಮನಃಪ್ರಸಾದಂ ॥ ೬೪ ॥

ಅ ॥ (೧) ಇಂದ್ರಿಯಗಳ ಜಯ ಮತ್ತು ಇಂದ್ರಿಯಜಯದ ಫಲ ಇವುಗಳನು ಅಥವಾ ಇಂದ್ರಿಯಜಯದ ಫಲವನ್ನು ಮೇಲಿನ ಎರಡು ಶ್ಲೋಕಗಳಿಂದ ಹೇಳುತಾರೆ (೨) (ರಾಗದ್ವೇಷ ಪರಿಹಾರಕ್ಕೆ ಇಂದ್ರಿಯಜಯವು ಫಲವೆನ್ನುತ್ತಾರೆ—। ಇಂದ್ರಿಯಗಳನ್ನು ತನ್ನ ಅಧೀನೀಕರಿಸಿಕೊಂಡದ್ದರಿಂದ ಏನು ಫಲವುಂಟಾಗುತ್ತದೆ? (ರಾಗದ್ವೇಷಪರಿಹಾರವು ಹೇಗೆ ಇಂದ್ರಿಯಗಳನ್ನು ವಶೀಕರಿಸಿಕೊಳ್ಳಲಿಕ್ಕೆ ಸಾಧನವೋ ಹಾಗೆಯೇ ವಿಷಯಗಳ ಅನುಭವವೂ ಇಂದ್ರಿಯಗಳ ಜಯಕ್ಕೆ ಸಾಧನವೆಂಬ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ। ವಿಷಯಗಳನ್ನು ಅನುಭವಿಸುವವನಾದಾಗ್ಯೂ (ಅಂದರೆ ದೇಹಧಾರಣಮಾತ್ರಕ್ಕೆ ಉಪಯುಕ್ತವಾದ ವಿಷಯಗಳ ಅನುಭವವು ದೋಷಾಧಾಯಕವಲ್ಲ) (ಇಂದ್ರಿಯಜಯವನ್ನು ಹೇಳತಕ್ಕ ಪದವು ಇಲ್ಲಿ ಇಲ್ಲವೆಂದರೆ—) ತನ್ನ ಅಧೀನವಾದ ಮನಸ್ಸುಳ್ಳವನು. ಮನಸ್ಸನ್ನು ವಶೀಕರಿಸಿಕೊಂಡವನು ಪ್ರಸಾದಂ=ಮನಸ್ಸಿನ ಪ್ರಸನ್ನತೆಯನ್ನು ॥ ೬೪ ॥

ಗೀ ॥ ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।
ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ॥ ೬೫ ॥

ಅ ॥ ಪ್ರಸಾದೇ=ಮನಸ್ಸು ಪ್ರಯತ್ನವಿಲ್ಲದೇನೇ ವಿಷಯಗಳಲ್ಲಿ ಪ್ರವೃತ್ತಿಮಾಡದಿರುತ್ತಿರಲು ಪ್ರಸನ್ನಚೇತಸಃ=ಸಂತುಷ್ಟವಾದ ಮನಸ್ಸುಳ್ಳ ಅಸ್ಯ=ಪುರುಷನ, ಬುದ್ಧಿಃ=ಬ್ರಹ್ಮಾಪರೋಕ್ಷಜ್ಞಾನವು, ಆಶು=ಶೀಘ್ರದಲ್ಲಿ ಪರ್ಯವತಿಷ್ಠತಿ=ಚೆನ್ನಾಗಿ ಆಗುತ್ತದೆ ಆಮೇಲೆ, ಅಸ್ಯ=ಅಪರೋಕ್ಷಜ್ಞಾನಿಗೆ, ಸರ್ವದುಃಖಾನಾಂ=ಎಲ್ಲಾ ದುಃಖಗಳ, ಹಾನಿಃ=ವಿನಾಶವು, ಉಪಜಾಯತೇ=ಸವಿಾಪದಲ್ಲಿ ಶೀಘ್ರವಾಗಿ ಉಂಟಾಗುತ್ತದೆ ಹಿ=ತರತಿ ಶೋಕಮಾತ್ಮವಿತ್ ಇತ್ಯಾದಿಗಳಲ್ಲಿ ಪ್ರಸಿದ್ಧವಾಗಿದೆ ॥ ೬೫ ॥

ಭಾ ॥ (೧) ಕಥಂ ಪ್ರಸಾದಮಾತ್ರೇಣ ಸರ್ವದುಃಖಹಾನಿಃ ॥ (೨) ಪ್ರಸನ್ನಚೇತಸೋ ಹಿ ಬುದ್ಧಿಃ ಪರ್ಯವತಿಷ್ಠತಿ । ಬ್ರಹ್ಮಾಪರೋಕ್ಷ್ಯೇಣ ಸಮ್ಯಕ್ ಸ್ಥಿತಿಂ ಕರೋತಿ । ಪ್ರಸಾದೋ ನಾಮ ಸ್ವತೋಽಪಿ ಪ್ರಾಯೋ ವಿಷಯಾಗತಿಃ ॥ ೬೫ ॥

ಅ ॥ (೧) (ತರತಿ ಶೋಕಮಾತ್ಮವಿತ್ ಇದುಮೊದಲಾದ ಪ್ರಮಾಣವಿರೋಧವು ಬರುವುದರಿಂದ) ಮನಸ್ಸಿನ ಸಮಾಧಾನಮಾತ್ರದಿಂದ ಸರ್ವದುಃಖಗಳ ನಾಶವು ಹೇಗೆ ಆಗುವುದು? (೨) (ಇದನ್ನು ಪರಿಹರಿಸುತ್ತಾ ಉತ್ತರಾರ್ಧಕ್ಕೆ ಅರ್ಥ ಹೇಳುತ್ತಾರೆ—) ಸಂತುಷ್ಟವಾದ ಮನಸ್ಸುಳ್ಳವನ ಬುದ್ಧಿಯು ಚೆನ್ನಾಗಿ

ಇರುತ್ತದೆ ಅಂದರೆ ಪರಬ್ರಹ್ಮನ ಅಪರೋಕ್ಷಜ್ಞಾನದಿಂದ ಚೆನ್ನಾಗಿ ಸ್ಥಿತಿಯನ್ನು ಹೊಂದುತ್ತದೆ. ಪ್ರಸಾದವೆಂದರೆ ಪ್ರಯತ್ನವಿಲ್ಲದಿದ್ದರೂ ಪ್ರಾಯಶಃ ವಿಷಯಗಳಲ್ಲಿ ಪ್ರವೃತ್ತಿಸದಿರುವುದು. || ೬೫ ||

ಟೀ—ಶ್ರವಣಮನನಪೂರ್ವಕ ಧ್ಯಾನದಿಂದಲೇ ಬ್ರಹ್ಮಾಪರೋಕ್ಷಜ್ಞಾನವು ಸಿದ್ಧಿಸುವುದರಿಂದ ಪ್ರಸಾದವು ಏತಕ್ಕೆಂದರೆ—

**ಗೀ || ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ |**
**ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಂ || ೬೬ ||**

ಅ || ಮನಸ್ಸಿಗೆ ಸಮಾಧಾನವಿಲ್ಲವಾದರೆ ಯುಕ್ತಿ ಎನಿಸಿದ ಚಿತ್ತನಿರೋಧವು (ಮನಸ್ಸಿಗೆ ಏಕತ್ರ ಆಸಕ್ತಿಯು) (ಆಗುವುದಿಲ್ಲ) ಅಯುಕ್ತಸ್ಯ=ಮನಸ್ಸನ್ನು ನಿಗ್ರಹಿಸಿಕೊಳ್ಳದವನಿಗೆ, ಭಾವನಾ=ಧ್ಯಾನವು, ನಾಸ್ತಿ=ಉಂಟಾಗುವುದಿಲ್ಲ ಅಭಾವಯತಶ್ಚ=ಧ್ಯಾನಮಾಡದಿರುವವನಿಗೆ ಬುದ್ಧಿಃ=ಅಪರೋಕ್ಷಜ್ಞಾನವು, ನಚ=ಆಗುವುದಿಲ್ಲ (ಅಬುದ್ಧೇಃ=ಅಪರೋಕ್ಷಜ್ಞಾನವಿಲ್ಲದವನಿಗೆ.) ಶಾಂತಿಃ=ಮೋಕ್ಷವು, ನಚ=ಸಿಗುವುದಿಲ್ಲ. ಅಶಾಂತಸ್ಯ=ಮೋಕ್ಷವನ್ನು ಹೊಂದದವನಿಗೆ, ಸುಖಂ=ಸುಖವು, ಕುತಃ=ಹೇಗೆ? (ಸುಖವು ಸರ್ವಥಾ ಉಂಟಾಗಲಾರದು.)

ವಿ || **ಅಬುದ್ಧೇಃ ಶಾಂತಿರ್ನ** ಎಂದಿಷ್ಟೇ ಹೇಳಿದರೆ ಸಾಕಾಗುವುದು ಹೀಗೆ ಇರಲು **ಅಶಾಂತಸ್ಯ ಕುತಃ ಸುಖಂ** ಎಂದದ್ದು ಅಪರೋಕ್ಷಜ್ಞಾನಿಗಳಿಗೆ ಮೋಕ್ಷದಲ್ಲಿ ಸರ್ವದುಃಖಗಳ ನಾಶ ಮಾತ್ರವಲ್ಲ, ಮತ್ತೆ ಸಂಸಾರಿಗೆ ಸಿಗದಿರುವ ಪರಮಸುಖವೂ ಸಿಗುತ್ತದೆ ಎಂದು ತಿಳಿಸುವುದಕ್ಕಾಗಿ. || ೬೬ ||

ಟೀ—ರಾಗದ್ವೇಷಗಳನ್ನು ಬಿಡೋಣದರಿಂದ ಇಂದ್ರಿಯಜಯವಾಗುತ್ತದೆ, ಇತ್ಯಾದಿಗಳನ್ನು ಹೇಳಿರುವುದರಿಂದ ನಾಸ್ತಿ ಬುದ್ಧಿಃ ಇತ್ಯಾದಿಗಳು ಏತಕ್ಕೆಂದರೆ —

**ಭಾ || (೧) ಪ್ರಸಾದಾಭಾವೇ ದೋಷಮಾಹೋತ್ತರಾಭ್ಯಾಂ ಶ್ಲೋಕಾಭ್ಯಾಂ || (೨) ನ ಹಿ ಪ್ರಸಾದಾಭಾವೇ ಯುಕ್ತಿಃ ಚಿತ್ತನಿರೋಧಃ | ಅಯುಕ್ತಸ್ಯ ಚ ಬುಧಿಃ ಸಮ್ಯಗ್ ಜ್ಞಾನಂ ನಾಸ್ತಿ | ತದೇವೋಪಪಾದಯತಿ | ನ ಚಾಯುಕ್ತಸ್ಯೇತಿ || (೩) ಶಾಂತಿರ್ಮುಕ್ತಿಃ | ಶಾಂತಿರ್ಮೋಕ್ಷೋಽಥ ನಿರ್ವಾಣಮಿತ್ಯಭಿಧಾನಾತ್ || ೬೬ ||**

ಅ || (೧) (**ಶ್ರುತ್ವಾ ಮತ್ವಾ ತಥಾ ಧ್ಯಾತ್ವಾ ತದಜ್ಞಾನವಿಪರ್ಯಯೌ | ಸಂಶಯಂ ಚ ಪರಾಣುದ್ಯ ಲಭತೇ ಬ್ರಹ್ಮದರ್ಶನಂ** | ಎಂಬ ಪ್ರಮಾಣದಿಂದ ಶ್ರವಣ ಮನನಪೂರ್ವಕ ಧ್ಯಾನದಿಂದಲೇ ಪರಬ್ರಹ್ಮನ ಅಪರೋಕ್ಷಜ್ಞಾನವು ಸಿದ್ಧಿಸುವುದರಿಂದ ಪ್ರಸಾದವು ಏತಕ್ಕೆ? ಇಂದ್ರಿಯಜಯವು ಬೇಕಾಗಿಲ್ಲ, ಎಂದಾಶಂಕಾ ಬಂದರೆ) ಮನಃಪ್ರಸಾದವಿಲ್ಲವಾದರೆ-ಮೇಲಿನ ಎರಡು ಶ್ಲೋಕಗಳಿಂದ ದೋಷ ಹೇಳುತ್ತಾರೆ (೨) ಮನಸ್ಸಿಗೆ ಸಮಾಧಾನವಿಲ್ಲವಾದರೆ — ಯುಕ್ತಿಃ=ಚಿತ್ತನಿರೋಧವು (ವಿಷಯಗಳಲ್ಲಿ ಮನಸ್ಸಿಗೆ ಪ್ರವೃತ್ತಿಯಿಲ್ಲದಿರುವುದು) ಆಗಲಾರದು ಚಿತ್ತನಿರೋಧವಿಲ್ಲದವನಿಗೆ ಯಥಾರ್ಥಜ್ಞಾನವು (ಬ್ರಹ್ಮಾಪರೋಕ್ಷಜ್ಞಾನವು) ಉಂಟಾಗುವುದಿಲ್ಲ (**ನಾಸ್ತಿ ಬುದ್ಧಿರಯುಕ್ತಸ್ಯ** ಎಂಬುದರಿಂದ ಮನಃಪ್ರಸಾದ ವಿಲ್ಲವಾದರೆ ಅಪರೋಕ್ಷಜ್ಞಾನವಿಲ್ಲವೆಂದಾಗುವುದು (ಧ್ಯಾನದಿಂದಲೇ ಜ್ಞಾನವು ಹುಟ್ಟುತ್ತದೆ ಆದ ಕಾರಣ **ನ ಚಾಯುಕ್ತಸ್ಯ** ಎಂಬುದು ಏಕೆ ಎಂದರೆ) ಅದನ್ನೇ ಉಪಪಾದಿಸುತ್ತಾರೆ (**ನಾಸ್ತಿ ಬುದ್ಧಿರ-**

**ಯುಕ್ತಸ್ಯ** ಎಂಬುದು ಏತಕ್ಕೆ, ಎಂದಾಶಂಕಿಸಿಕೊಂಡು) ಮನಸ್ಸನ್ನು ನಿಗ್ರಹಿಸದೆ ಇರುವವನಿಗೆ ಧ್ಯಾನವು ಸಾಧ್ಯವಲ್ಲ (೩) ಶಾಂತಿಃ=ಮೋಕ್ಷವು, ಶಾಂತಿಃ ಮೋಕ್ಷಃ ನಿರ್ವಾಣಂ ಎಂದು ಕೋಶವು ॥ ೬೬ ॥

ಟೀ— ಧ್ಯಾನವು ಶಾಂತಿ ಸಾಧ್ಯವಾಗಿರುವುದರಿಂದ **ನ ಚಾಭಾವಯತಃ ಶಾಂತಿಃ** ಎಂದು ಹೇಳಿದ್ದು ಹೇಗೆ? ಎಂದರೆ ಇಲ್ಲಿ ಶಾಂತಿ ಪದದಿಂದ ಚಿತ್ತನಿರೋಧವು ಹೇಳಲ್ಪಡುವುದಿಲ್ಲ ಮತ್ತೆ ಶ್ರೀಹರಿಯಲ್ಲಿ ಆಸಕ್ತವಾದ ಬುದ್ಧಿಯು ಅದು ಭಾವನೆಯಿಂದ ಸಾಧಿಸಲ್ಪಡಬೇಕೆನ್ನುತ್ತಾರೆ—

**ತಾ ॥ ಶಾಂತಿರ್ಭಗವನ್ನಿಷ್ಠಾ । ಶಮೋ ಮನ್ನಿಷ್ಠತೇ(ತಾ ಬುದ್ಧೇರಿ)ತಿ ಹಿ ಭಾಗವತೇ॥೬೬॥**

ಅ ॥ ಭಾಗವತ ಪ್ರಮಾಣದಿಂದ ಶಮಃ ಶಾಂತಿಃ=ಶ್ರೀಹರಿಯಲ್ಲಿ ಆಸಕ್ತವಾದ ಬುದ್ಧಿಯು ॥ ೬೬ ॥

ಟೀ—ಶ್ರವಣ ಮನನಗಳನ್ನು ಮಾಡಿದವನಿಗೆ ಧ್ಯಾನವು ಸಾಧ್ಯವಾಗುವುದರಿಂದ **ಅಯುಕ್ತಸ್ಯ ಭಾವನಾ ನಾಸ್ತಿ** ಎಂದದ್ದು ಕೂಡುವುದಿಲ್ಲವೆಂದರೆ—

**ಗೀ ॥ ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥ ೬೭ ॥**

ಅ ॥ ಚರತಾಂ= ಇಚ್ಛಾನುಸಾರ ವಿಷಯಗಳಲ್ಲಿ ಪ್ರವೃತ್ತಿಮಾಡುವ, ಇಂದ್ರಿಯಾಣಾಂ= ಇಂದ್ರಿಯಗಳ, ಅನು=ಹಿಂದುಗಡೆ, ಮನಃ= ಮನಸ್ಸು, ವಿಧೀಯತೇ=(ವಿಷಯಗಳನ್ನು ಕುರಿತು ಈಶ್ವರನಿಂದ) ಪ್ರವರ್ತಿಸಲ್ಪಡುತ್ತದೆಂಬುದು, ಯತ್= ಯಾವುದೋ, ತತ್= ಅದು, (ಇಂದ್ರಿಯಗಳನ್ನು ಅನುಸರಿಸಿ ಮನಸ್ಸು ಹೋಗುತ್ತದೆಂಬುದು) ಅಸ್ಯ=ಜೀವನ ಪ್ರಜ್ಞಾಂ=ಪರೋಕ್ಷನಿಶ್ಚಯವನ್ನು, ವಾಯುಃ=ಗಾಳಿಯು, ಅಂಭಸಿ= ನೀರಿನಲ್ಲಿ, ನಾವಮಿವ= ದೋಣಿಯನ್ನೆಂಬಂತೆ, ಹರತಿ= ಮುಂದೆ ಹುಟ್ಟುವ ಅಪರೋಕ್ಷಜ್ಞಾನವನ್ನು, ತಡೆಯುತ್ತದೆ (ಹುಟ್ಟಿದ್ದ ಜ್ಞಾನವು ಚಿತ್ತನಿರೋಧವಿಲ್ಲದವನಿಗೆ ಧ್ಯಾನೋಪಯುಕ್ತವಾಗಿ ಅಪರೋಕ್ಷಜ್ಞಾನವನ್ನು ಹುಟ್ಟಿಸಲಿಕ್ಕೆ, ಸಮರ್ಥವಾಗುವುದಿಲ್ಲ ) ॥ ೬೭ ॥

**ಭಾ ॥ (೧) ಕಥಮಯುಕ್ತಸ್ಯ ಭಾವನಾ ನ ಭವತಿ । ಆಹ । ಇಂದ್ರಿಯಾಣಾಮಿತಿ । ಅನುವಿಧೀಯತೇ ಕ್ರಿಯತೇ ॥ (೨) ನನ್ವೀಶ್ವರೇಣೇಂದ್ರಿಯಾಣಾಮನು । ಬುದ್ಧಿರ್ಜ್ಞಾನಮಿತ್ಯಾದಿ ವಕ್ಷ್ಯಮಾಣತ್ವಾತ್ ॥ (೩) ಪ್ರಜ್ಞಾಂ ಪ್ರಜ್ಞಾನಂ । ಉತ್ಪತ್ಸ್ಯದಪಿ ನಿವಾರಯತೀತ್ಯರ್ಥಃ । ಉತ್ಪನ್ನಸ್ಯಾಪ್ಯಭಿಭವೋ ಭವತಿ ॥ ೬೭ ॥**

ಅ ॥ (೧) (ಶ್ರವಣ ಮನನಗಳನ್ನು ಮಾಡಿದವನಿಗೆ ಧ್ಯಾನವು ಸಾಧ್ಯವಾಗುವುದರಿಂದ) **ಅಯುಕ್ತಸ್ಯ ಭಾವನಾ ನ ಭವತಿ** ಎಂದದ್ದು ಹೇಗೆ ಎಂದಾಶಂಕಿಸಿಕೊಂಡು **ಇಂದ್ರಿಯಾಣಾಂ** ಎಂಬುದರಿಂದ ಸಮಾಧಾನ ಹೇಳುತ್ತಾರೆ ಅನುವಿಧೀಯತೇ= ಇಂದ್ರಿಯಗಳ ಹಿಂದುಗಡೆ ಮನಸ್ಸು ಶ್ರೀಹರಿಯಿಂದ ಮಾಡಲ್ಪಡುತ್ತದೆ (ಅಂದರೆ ವಿಷಯಗಳಲ್ಲಿ ಇಂದ್ರಿಯಗಳು ಪ್ರವೃತ್ತಿ ಮಾಡುವಾಗ ಅದನ್ನು ಅನುಸರಿಸಿ ಮನಸ್ಸು ಹೇಗೆ ಹೋಗುವುದೋ, ಹಾಗೆಯೇ ಶ್ರೀಹರಿಯೂ ಮಾಡುತ್ತಾನೆ) (೨) ಶ್ರೀಹರಿಯಿಂದ ಚಕ್ಷುರಾದೀಂದ್ರಿಯಗಳ ಹಿಂದುಗಡೆ ಮನಸ್ಸು ಪ್ರವರ್ತಿಸಲ್ಪಡುತ್ತದೆಂಬುದು ನಿಶ್ಚಯವಷ್ಟೆ (ಅಂದರೆ ಇಂದ್ರಿಯಗಳು ವಿಷಯಗಳಿಂದ ಸಂಬಂಧಿಸಿದಾಗ ಮನಸ್ಸೂ ಕೂಡ ಇಂದ್ರಿಯಗಳನ್ನು ಅನುಸರಿಸುವಂತೆ ಶ್ರೀಹರಿಯು ಮಾಡುತ್ತಾನೆ) **ಬುದ್ಧಿರ್ಜ್ಞಾನಮಸಮ್ಮೋಹಃ** ಇತ್ಯಾದಿಗಳನ್ನು ಹೇಳಿ **ಭವಂತಿ**

ಭಾವಾ ಭೂತಾನಾಂ ಮತ್ತ ಏವ ಎಂದು ಬುದ್ಧ್ಯಾದಿಗಳೂ ಅವುಗಳ ಧರ್ಮವೂ ತನ್ನಅಧೀನದಲ್ಲಿಯೇ ಇರತಕ್ಕವುಗಳೆಂದು ಶ್ರೀಹರಿಯೇ ಹೇಳುವನು (೩) (ಗ್ರಹಿಸುವ ಶಕ್ತಿಯು ಪ್ರಜ್ಞಾ ಎನಿಸುತ್ತದೆ. ಬಾಹ್ಯೇಂದ್ರಿಯಗಳು ತಂತಮ್ಮ ವಿಷಯಗಳಿಂದ ಯಾವಾಗ ಸಂಬಂಧಿಸಲ್ಪಡುತ್ತವೋ, ಮನಸ್ಸು ಕೂಡ ಇಂದ್ರಿಯಗಳ ದ್ವಾರಾ ವಿಷಯಗಳಲ್ಲಿ ಪ್ರವರ್ತಿಸುತ್ತದೋ, ಆಗ ಮನಸ್ಸಿಗೆ ವಿಷಯಗಳನ್ನು ಗ್ರಹಿಸುವ ಶಕ್ತಿಯು ಅನುಭೂತವಾಗುತ್ತದೆ. ಆದಕಾರಣ ಪ್ರಜ್ಞೆಯನ್ನು ಅಪಹರಿಸುತ್ತದೆ, ಎಂದದ್ದು ಅಯುಕ್ತವು, ಎಂದರೆ—) ಪ್ರಜ್ಞಾಂ=ಪರೋಕ್ಷ ನಿಶ್ಚಯವನ್ನು (ಪರೋಕ್ಷ ನಿಶ್ಚಯವು ಇದ್ದರೆ—ಅದರ ನಿವಾರಣವು ಕೂಡಬಹುದು. ಯಾರಿಗೆ ಹುಟ್ಟಲೇ ಇಲ್ಲವೋ. ಆತನ ವಿಷಯದಲ್ಲಿ ಹೇಗೆ ಎಂದರೆ) ಮುಂದೆ ಹುಟ್ಟುವ ಪರೋಕ್ಷನಿಶ್ಚಯವನ್ನು ನಿವಾರಿಸುತ್ತದೆ (ಮೊದಲು ಹುಟ್ಟಿದ್ದರೆ ಏನು ಎಂದರೆ) ಮೊದಲು ಪರೋಕ್ಷ ಜ್ಞಾನವು ಹುಟ್ಟಿದ್ದರೆ ಅದಕ್ಕೂ ನಾಶವು ಬರುವುದು.

ವಿ ॥ ಇದು ಈ ವಾಕ್ಯದ ಅರ್ಥವೆಂದು ನಿಶ್ಚಯವನ್ನು ಹುಟ್ಟಿಸತಕ್ಕ ಶ್ರವಣವು ಧ್ಯಾನಕ್ಕೆ ಅಂಗವು. ಇದೇ ಈ ವಾಕ್ಯದ ಅರ್ಥವು ಬೇರೆಯಲ್ಲ, ಎಂದು ವೇದಾರ್ಥ ನಿರ್ಣಯ ರೂಪವಾದ ನಿಯಮವನ್ನು ಹುಟ್ಟಿಸುವ ಮನನವೂ ಧ್ಯಾನಕ್ಕೆ ಉಪಕಾರಿಯು ಎಂದು ಯಾವನು ಏಕಾಗ್ರ ಚಿತ್ತನಲ್ಲವೋ, ಅವನು ಶ್ರವಣ ಮನನಗಳನ್ನು ಮಾಡಿದರೂ ಅವು ಧ್ಯಾನಕ್ಕೆ ಅನುಕೂಲಗಳಲ್ಲ ಜ್ಞಾನದೆಶೆಯಿಂದ ಮೊದಲು ಮಾಡಿದ ಶ್ರವಣ ಮನನಗಳು ಜ್ಞಾನವನ್ನೇ ಹುಟ್ಟಿಸುವುದಿಲ್ಲ ಜ್ಞಾನವು ಹುಟ್ಟಿದರೂ ಅದಕ್ಕೆ ಮರವೆಯನ್ನು ಹೊಂದಿಸುತ್ತವೆ ॥ ೬೭ ॥

ಗೀ ॥ ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೮ ॥

ಅ ॥ ತಸ್ಮಾತ್=ಆದುದರಿಂದ (ಅಂದರೆ—ಜಿತೇಂದ್ರಿಯನಿಗೇನೇ ಮನಃ=ಸಮಾಧಾನವೋ, ಸಮಾಧಾನವಿರುವವನಿಗೇನೇ ಚಿತ್ತನಿರೋಧವೋ, ಮನಸ್ಸನ್ನು ನಿಗ್ರಹಿಸಿಕೊಂಡವನಿಗೇನೇ ಶ್ರವಣ ಮನನಗಳಿಂದ ಅಜ್ಞಾನ ಸಂಶಯ ವಿಪರ್ಯಗಳು ನಿವೃತ್ತಿಯಾಗಿ ಪರೋಕ್ಷನಿಶ್ಚಯರೂಪ ತತ್ವನಿಶ್ಚಯವೂ, ತತ್ವನಿಶ್ಚಯವಿದ್ದವನಿಗೇನೇ ಅಪರೋಕ್ಷಜ್ಞಾನ ಸಾಧನವಾದ ಧ್ಯಾನವೋ ಆದುದರಿಂದ.) ಮಹಾಬಾಹೋ=ಅರ್ಜುನನೇ, ಯಸ್ಯ=ಯಾರ, ಸರ್ವಶಃ ಇಂದ್ರಿಯಾಣಿ=ಎಲ್ಲಾ ಇಂದ್ರಿಯಗಳು, ಇಂದ್ರಿಯಾರ್ಥೇಭ್ಯಃ=ರೂಪ ಮೊದಲಾದ ಎಲ್ಲಾ ಇಂದ್ರಿಯ ವಿಷಯಗಳದೆಶೆಯಿಂದ, ನಿಗೃಹೀತಾನಿ=ನಿಗ್ರಹಿಸಲ್ಪಟ್ಟವೆಯೋ, (ಇಂದ್ರಿಯಗಳು ರೂಪಾದಿವಿಷಯಗಳನ್ನು ಕುರಿತು ಹೋಗದಂತೆ ಮಾಡಲ್ಪಟ್ಟವೆಯೋ) ತಸ್ಯ=ಆತನಿಗೆ ಪ್ರಜ್ಞಾ=ಪ್ರಸಾದ ಚಿತ್ತನಿರೋಧ ಶ್ರವಣ ಮನನ ತತ್ವನಿಶ್ಚಯ ಧ್ಯಾನದ್ವಾರಾ ಬ್ರಹ್ಮಾಪರೋಕ್ಷಜ್ಞಾನವು, ಪ್ರತಿಷ್ಠಿತಾ=ಸುಸ್ಥಿರವಾಗುತ್ತದೆ ॥ ೬೮ ॥

ಭಾ ॥ ತಸ್ಮಾತ್ಸರ್ವಾತ್ಮನಾ ನಿಗೃಹೀತೇಂದ್ರಿಯ ಏವ ಜ್ಞಾನೀತಿ ನಿಗಮಯತಿ । ತಸ್ಮಾದಿತಿ ॥ ೬೮ ॥

ಅ ॥ ಆದುದರಿಂದ ಸರ್ವಪ್ರಕಾರದಿಂದಲೂ ಜಿತೇಂದ್ರಿಯನೇ ಜ್ಞಾನಿಯಾಗುತ್ತಾನೆ, ಎಂದು ತಸ್ಮಾದ್ಯಸ್ಯ ಎಂಬುದರಿಂದ ನಿರ್ಧರಿಸುತ್ತಾರೆ. ॥ ೬೮ ॥

ಗೀ ॥ ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥ ೬೯ ॥

ಅ || ಯಾ=ಯಾವ, ನಿಶಾ=ಪರಮಾತ್ಮನ ಸ್ವರೂಪವು, ಸರ್ವಭೂತಾನಾಂ=ಎಲ್ಲಾ ಪ್ರಾಣಿಗಳಿಗೆ, ರಾತ್ರಿಸ್ಥಾನೀಯವೋ (ಅಂದರೆ— ರಾತ್ರಿಯಲ್ಲಿ ಮಲಗಿದವರಂತೆ ಭಗವತ್ಸ್ವರೂಪವನ್ನು ಪ್ರಾಣಿಗಳು ಏನೂ ತಿಳಿಯುವುದಿಲ್ಲ ) ತಸ್ಯಾಂ=ಆ ಭಗವತ್ಸ್ವರೂಪ ವಿಷಯದಲ್ಲಿ. ಸಂಯಮೀ=ಜಿತೇಂದ್ರಿಯನಾದ ಜ್ಞಾನಿಯು, ಜಾಗರ್ತಿ=ಎಚ್ಚರಗೊಂಡಿರುತ್ತಾನೆ. (ಭಗವತ್ಸ್ವರೂಪವನ್ನು ಚೆನ್ನಾಗಿ ಪ್ರತ್ಯಕ್ಷವಾಗಿ ತಿಳಿಯುತ್ತಾನೆ.) ಯಸ್ಯಾಂ=ಯಾವ ಯಾವ ಶಬ್ದ ಸ್ಪರ್ಶ ಮೊದಲಾದ ವಿಷಯಗಳಲ್ಲಿ, ಭೂತಾನಿ=ಪ್ರಾಣಿಗಳು, ಜಾಗ್ರತಿ=ಎಚ್ಚರಗೊಂಡಿರುತ್ತಾರೋ. (ಅಂದರೆ ರೂಪ ಮೊದಲಾದ ವಿಷಯಗಳಲ್ಲಿ ಪ್ರಾಣಿಗಳು ಅತ್ಯಾಸಕ್ತಿಯುಳ್ಳವರಾಗಿರುತ್ತಾರೋ) ಸಾ=ಆ ವಿಷಯಗಳ ಸಮುದಾಯವು ಮುನೇಃ=ಮನನ ಮಾಡತಕ್ಕ (ಪರಬ್ರಹ್ಮವಿಷಯಕ ಶಾಸ್ತ್ರಾರ್ಥಗಳನ್ನು ವಿಚಾರಮಾಡತಕ್ಕ), ಪಶ್ಯತಃ=ಚೆನ್ನಾಗಿ ಪ್ರತ್ಯಕ್ಷವಾಗಿ ಭಗವತ್ಸ್ವರೂಪವನ್ನು ತಿಳಿದ ಮನುಷ್ಯನಿಗೆ, ನಿಶಾ=ರಾತ್ರಿಸ್ಥಾನೀಯವು (ಅಂದರೆ— ಮುನಿಯು ಭಗವತ್ಸ್ವರೂಪ ವಿನಹ ಬೇರೆ ಯಾವುದನ್ನು ಸ್ವಲ್ಪವೂ ತಿಳಿಯುವುದಿಲ್ಲ )

ವಿ || ಶ್ರೀಹರಿಯು ಹೊರತು ಬೇರೆ ಯಾವುದನ್ನು ನೋಡುವುದಿಲ್ಲವೆಂದಾದರೆ ಅಪರೋಕ್ಷ ಜ್ಞಾನಿಗೆ ಭಾಷಣ ಭಿಕ್ಷಾಟನ ಮೊದಲಾದ ಪ್ರವೃತ್ತಿಯು ಕೂಡದೆ ಹೋಗುವುದು. ಎಂದರೆ ಪ್ರಾರಬ್ಧಕರ್ಮದಿಂದ ಸ್ವಲ್ಪ ಮರೆಯಾದ ಬ್ರಹ್ಮಸ್ವರೂಪವುಳ್ಳವನಿಗೆ ಸಂಸ್ಕಾರದಿಂದ ಪ್ರಾಯಶಃ ಅತ್ಯಲ್ಪ ಪ್ರಯೋಜನೋದ್ದೇಶದಿಂದ ಪ್ರವೃತ್ತಿಯು ಕೂಡುತ್ತದೆ || ೬೯ ||

ಪೀ— ಯಸ್ಯಾಂ ಗ್ರಾಹ್ಯಗ್ರಾಹಕಭೇದಲಕ್ಷಣಾಯಾಂ ತಸ್ಮಾನ್ನಾತ್ಮವಿದಃ ಕರ್ಮಣ್ಯಧಿಕಾರಃ ಇತಿ ಸ್ಥಿತಂ ಎಂದು ಅದ್ವೈತ ಭಾಷ್ಯದಲ್ಲಿ ಯಾ ನಿಶಾ ಎಂಬ ಶ್ಲೋಕವು ಜ್ಞಾನಿಗೆ ಸಮಸ್ತ ಕರ್ಮಗಳ ಪರಿತ್ಯಾಗವನ್ನು ಹೇಳುತ್ತದೆ, ಎನ್ನುತ್ತಾರೆ ಇದು ಅಯುಕ್ತವು. ಅದನ್ನು ಹೇಳತಕ್ಕ ಪದವಿಲ್ಲ ಮತ್ತು ಪಶ್ಯನ್ನಪೀಮಮಾತ್ಮಾನಂ ಕುರ್ಯಾತ್ಕರ್ಮವಿಚಾರಯನ್ | ಜ್ಞಾನೀತು ಕರ್ಮಾಣಿ ಸದೋದಿತಾನಿ ಕುರ್ಯಾತ್ ಕುರ್ವನ್ನೇವೇಹ ಕರ್ಮಾಣಿ ಇದು ಮೊದಲಾದ ವೇದಸ್ಮೃತಿ ಪ್ರಮಾಣ ವಿರೋಧವು ಬರುವುದು, ಎಂಬ ಅಭಿಪ್ರಾಯದಿಂದ ಆ ಶ್ಲೋಕದಲ್ಲಿ ಹೇಳಲ್ಪಡತಕ್ಕ ಅರ್ಥವನ್ನು ಹೇಳುತ್ತಾರೆ

ಭಾ || (೧) ಉಕ್ತಂ ಲಕ್ಷಣಂ ಪಿಂಡೀಕೃತ್ಯಾಹ |ಯಾ ನಿಶೇತಿ | ಯಾ ಸರ್ವಭೂತಾನಾಂ ನಿಶಾ ಪರಮೇಶ್ವರಸ್ವರೂಪಲಕ್ಷಣಾ | ಯಸ್ಯಾಂ ಸುಪ್ತಾನೀವ ನ ಕಿಂಚಿಜ್ಜಾನಂತಿ | ತಸ್ಯಾಮಿಂದ್ರಿಯಸಂಯಮಯುಕ್ತೋ ಜ್ಞಾನೀ ಜಾಗರ್ತಿ ಸಮ್ಯಗಾಪರೋಕ್ಷ್ಯೇಣ ಪಶ್ಯತಿ ಪರಮಾತ್ಮಾನಮಿತ್ಯರ್ಥಃ || (೨) ಯಸ್ಯಾಂ ವಿಷಯಲಕ್ಷಣಾಯಾಂ ಭೂತಾನಿ ಜಾಗ್ರತಿ ತಸ್ಯಾಂ ನಿಶಾಯಾಮಿವ ಸುಪ್ತಃ ಪ್ರಾಯೋ ನ ಜಾನಾತಿ | ಮತ್ತಾದಿವದ್ ಗಮನಾದಿಪ್ರವೃತ್ತಿಃ || (೩) ತದುಕ್ತಂ | ದೇಹಂ ತು ತನ್ನ ಚರಮಂ ದೇಹೋಽಪಿ ದೈವವಶಗ ಇತಿ ಶ್ಲೋಕಾಭ್ಯಾಂ | ಮನನಯುಕ್ತೋ ಮುನಿಃ | ಪಶ್ಯತ ಇತ್ಯಸ್ಯ ಸಾಧನಮಾಹ || ೬೯ ||

ಅ || (೧) ಪ್ರಜಹಾತಿ ಮೊದಲಾದ ನಾಲ್ಕು ಶ್ಲೋಕಗಳಲ್ಲಿ ಅಲ್ಲಲ್ಲಿ ಹೇಳಿದ ಲಕ್ಷಣವನ್ನು ಯಾ ನಿಶಾ ಎಂಬ ಶ್ಲೋಕದಿಂದ ಕ್ರೋಡೀಕರಿಸಿ ಹೇಳುತ್ತಾರೆ ಯಾವ ಪರಮಾತ್ಮನ ಸ್ವರೂಪವು ಸಮಸ್ತ ಪ್ರಾಣಿಗಳಿಗೆ ರಾತ್ರಿಸ್ಥಾನೀಯವೋ ಅಂದರೆ ಯಾವ ರಾತ್ರಿಯಲ್ಲಿ ಮಲಗಿದ ಪ್ರಾಣಿಗಳಂತೆ ಏನನ್ನೂ ತಿಳಿಯುವುದಿಲ್ಲವೋ

ಅದರಲ್ಲಿ ಜಿತೇಂದ್ರಿಯನಾದ ಜ್ಞಾನಿಯು ಎಚ್ಚರಗೊಂಡಿರುತ್ತಾನೆ ಅಂದರೆ—ಚೆನ್ನಾಗಿ ಪ್ರತ್ಯಕ್ಷವಾಗಿ ಶ್ರೀಹರಿಯನ್ನು ನೋಡುತ್ತಾನೆ (೨) ಯಾವ ರೂಪ ಮೊದಲಾದ ವಿಷಯಗಳಲ್ಲಿ ಪ್ರಾಣಿಗಳು ಜಾಗರೂಕರಾಗಿರುತ್ತಾರೋ ಆ ರೂಪಾದಿ ವಿಷಯಗಳಲ್ಲಿ ರಾತ್ರಿಯಲ್ಲಿ ಮಲಗಿದವನಂತೆ ಜ್ಞಾನಿಯು ಪ್ರಾಯಶಃ ತಿಳಿಯುವುದಿಲ್ಲ ಮದ್ಯಪಾನದಿಂದ ಮತ್ತರಾದವರು ಇತ್ಯಾದಿಗಳ ಪ್ರವೃತ್ತಿಯಂತೆ ಗಮನಾದಿಗಳಲ್ಲಿ ಪ್ರವೃತ್ತಿಯು ಕೂಡುತ್ತದೆ (೩) (1) (**ದೇಹಂ ತು ತಂ ನ ಚರಮಂ ಸ್ಥಿತಮುತ್ಥಿತಂ ವಾ ಸಿದ್ಧೋಽಭಿಪಶ್ಯತಿ ಯತೋಽಧ್ಯಗಮತ್ಸ್ವರೂಪಂ |** ಯಾವ ದೇಹದಿಂದ ಜ್ಞಾನಿಯು ಸಮಾಧಿಫಲವನ್ನು ಹೊಂದಿದ್ದಾನೋ, ಯಾವುದರಿಂದ ಜೀವನ ಬಿಂಬರೂಪವನ್ನು ಪ್ರತ್ಯಕ್ಷವಾಗಿ ತಿಳಿದಿದ್ದಾನೋ) ಅಂತಹ ಚರಮ ದೇಹವನ್ನು ತನ್ನದೆಂದು ತಿಳಿಯುವುದಿಲ್ಲ, ಮತ್ತೆ ಶ್ರೀಹರಿಯ ಅಧೀನವೆಂದೇ ತಿಳಿಯುತ್ತಾನೆ (೩) **ದೇಹೋಽಪಿ ದೈವವಶಗಃ ಖಲು ಕರ್ಮ ಯಾವತ್ಸ್ವಾರಂಭಕಂ ಪ್ರತಿಸಮೀಕ್ಷತ ಏವ ಸಾಸುಃ |** (ದೇಹಾರಂಭಕ ಕರ್ಮವಿರುವ ಪರ್ಯಂತ ದೇಹವೂ ಇರುತ್ತದೆ) ದೇಹವೂ ದೈವದ ಅಧೀನದಲ್ಲಿರತಕ್ಕದು (ಅಂದರೆ ಕರ್ಮವನ್ನನುಸರಿಸಿ ದೈವವೇ ಸರ್ವವನ್ನು ಮಾಡುತ್ತದೆ) ಎಂಬೀ ಎರಡು ಶ್ಲೋಕಗಳಿಂದ ಆ ಪ್ರಮೇಯವು ಹೇಳಲ್ಪಟ್ಟಿದೆ (೪) (ಶಂಕರಾಚಾರ್ಯರು **ಸ್ಥಿತಪ್ರಜ್ಞಸ್ಯ ಯತೇರೇವ । ನ ತ್ವಸನ್ನ್ಯಾಸಿನೋ ಜ್ಞಾನಮೋಕ್ಷಪ್ರಾಪ್ತಿಃ** ಎಂದು ಸನ್ಯಾಸಾಶ್ರಮಿಗಳಿಗೇನೇ ಜ್ಞಾನವು ಎಂದು ಅರ್ಥ ಹೇಳಿರುವರು ಅದು ಅಯುಕ್ತವೆನ್ನುತ್ತಾರೆ) (ಯತಿಗಳಾಗದಿದ್ದ ಯಾಜ್ಞವಲ್ಕ್ಯಾದಿಗಳಿಗೂ ಜ್ಞಾನವು ಶ್ರುತವಾಗಿರುವುದರಿಂದ) ಮನನದಿಂದ ಕೂಡಿದವನು ಮುನಿಯು. (ಮನನವು ಅಪರೋಕ್ಷ ಜ್ಞಾನವು ಹುಟ್ಟುವುದಕ್ಕಿಂತ ಮೊದಲು ನಿವೃತ್ತವಾಗಿರುವ ಪ್ರಯುಕ್ತ **ಪಶ್ಯತೋ ಮುನೇಃ** ಎಂಬುದು ಹೇಗೆ ಎಂದರೆ) ಪಶ್ಯತಃ ಎಂಬ ಪದದಿಂದ ಹೇಳಲ್ಪಟ್ಟ ದರ್ಶನಕ್ಕೆ ಮನನಯುಕ್ತ ಎಂಬ ಅರ್ಥವುಳ್ಳ ಮುನಿಪದದಿಂದ ಹೇಳಲ್ಪಟ್ಟ ಮನನವನ್ನು ಸಾಧನ ಎಂದು ಗೀತೆಯಲ್ಲಿ ಹೇಳಿರುತ್ತಾರೆ ॥ ೬೯ ॥

ಪೀ—ಸರ್ವಪ್ರೇರಕರಾದ ದೇವತೆಗಳೂ ಜ್ಞಾನಿಗಳಾಗಿರುವುದರಿಂದ ಜ್ಞಾನಿಗಳು ಶ್ರೀ ಹರಿಯನ್ನು ಹೊರತು ಬೇರೆ ಯಾವುದನ್ನು ನೋಡುವದಿಲ್ಲವೆಂದಾದರೆ—ಅವರಿಗೆ ಗಮನ ಭಾಷಣಾದಿ ಪ್ರವೃತ್ತಿಯು ಕೂಡದೆ ಹೋಗುವುದು ಎಂದರೆ— **ಯಾ ನಿಶಾ** ಎಂಬ ಶ್ಲೋಕವು ದೇವತೆಗಳಿಂದ ಇತರರಾದ ಜ್ಞಾನಿಗಳನ್ನು ಹೇಳುತ್ತದೆ, ಎಂದು ಸ್ಮೃತಿಪ್ರಮಾಣ ಹೇಳಿ ವ್ಯಾಖ್ಯಾನಮಾಡುತ್ತಾರೆ—

**ತಾ ॥ ದೇವೇಭ್ಯೋಽನ್ಯೇ ಯದಾ ಬ್ರಹ್ಮ ಪಶ್ಯಂತ್ಯನ್ಯನ್ನ ದೃಶ್ಯತೇ । ನಿಶಾಯಾಮಿವ ಸು-**
**ವ್ಯಕ್ತಂ ಯಥಾಽನ್ಯೈರ್ಬ್ರಹ್ಮ ನೇಯತೇ । ಆಶ್ಚರ್ಯವಸ್ತುದೃಗ್ಯದ್ವದ್ವ್ಯಕ್ತಮನ್ಯನ್ನ**
**ಪಶ್ಯತಿ । ಐಕಾಗ್ರ್ಯಾದ್ವಾ ಸುಖೋದ್ರೇಕಾದ್ದೇವಾಃ ಸೂರ್ಯವದೇವ ಚ (ತು) ।**
**ಪ್ರಾಯಶಃ ಸರ್ವವೇತ್ತಾರಸ್ತತ್ರಾಪಿ ಹ್ಯುತ್ತರೋತ್ತರಮಿತಿ ಬ್ರಹ್ಮತರ್ಕೇ ॥ ೬೯ ॥**

**ಅ** ॥ ದೇವತೆಗಳಿಂದ ಇತರರಾದ ಜ್ಞಾನಿಗಳು ಯಾವಾಗ ಸುಸ್ಪಷ್ಟವಾಗಿ ಬ್ರಹ್ಮನನ್ನು ನೋಡುತ್ತಾರೋ, ಆಗ ರಾತ್ರಿಯಲ್ಲಿ ಮಲಗಿದವರಂತೆ ಅವರಿಗೆ ಬೇರೆ ದೇಹ ಮನೆ ಮೊದಲಾದ ವಿಷಯಗಳು ಸ್ಪಷ್ಟವಾಗಿ ಕಾಣುವುದಿಲ್ಲ. (ಜಗತ್ತಿನ ಜ್ಞಾನವು ಬ್ರಹ್ಮಜ್ಞಾನದಲ್ಲಿ ಅಂತರ್ಭೂತವಾಗುತ್ತದೆ.) ಹೇಗೆ ವೇದ ಮಾರ್ಗಗಳಲ್ಲಿ ಆಸಕ್ತಿಯಿಲ್ಲದ ಮೂಢರಿಂದ ಬ್ರಹ್ಮನು ಕಾಣಲ್ಪಡುವುದಿಲ್ಲವೋ (ಅಂದರೆ ಮೂಢರು ಬ್ರಹ್ಮನನ್ನು ಕಾಣುವುದಿಲ್ಲವೋ) ಆಶ್ಚರ್ಯವಸ್ತುವನ್ನು ಕಾಣುವವನು ಅಲ್ಲಿಯೇ ಮನಸ್ಸನ್ನು ಇಟ್ಟ ಪ್ರಯುಕ್ತವೂ ಅದನ್ನು ನೋಡಿದ್ದರಿಂದುಂಟಾದ ಸುಖಾತಿಶಯದಿಂದಲೂ ಬೇರೆ ವಸ್ತುವನ್ನು ನೋಡುವುದಿಲ್ಲ ಮತ್ತೆ ಅದನ್ನೇ ನೋಡುತ್ತಾನೆ. ಹಾಗೆಯೇ ಜಿತೇಂದ್ರಿಯನಾದ ಜ್ಞಾನಿಯು, ಪರಬ್ರಹ್ಮನಲ್ಲಿಯೇ ಏಕಾ

ಗೃಹೀತ್ವನಾದುದರಿಂದಲೂ ಪರಬ್ರಹ್ಮನನ್ನು ಪ್ರತ್ಯಕ್ಷವಾಗಿ ಕಂಡದ್ದರಿಂದ ಪರಮಾನಂದ ಭರಿತನಾದುದ ರಿಂದಲೂ ಬೇರೆಯಾವುದನ್ನೂ ನೋಡುವುದಿಲ್ಲ ಆಶ್ಚರ್ಯಕರನಾದ ಬ್ರಹ್ಮನನ್ನೇ ನೋಡುತ್ತಾರೆ. ದೇವತೆಗಳು ಸೂರ್ಯನಂತೆಯೇ ತಂತಮ್ಮ ಪ್ರತಿಭೆಯಿಂದ ಪ್ರಾಯಶಃ ಸಮಸ್ತವನ್ನು ತಿಳಿಯುತ್ತಾರೆ. ಅದರಲ್ಲಿಯೂ ಮೇಲು ಮೇಲಿನವರು ಹೆಚ್ಚೆಚ್ಚು ತಿಳಿಯುತ್ತಾರೆ. ಎಂದು ಬ್ರಹ್ಮತರ್ಕದಲ್ಲಿದೆ ॥ ೬೯ ॥

ಪೀ—ಬಾಹ್ಯವಸ್ತುಗಳ ಅನುಸಂಧಾನವಿಲ್ಲದ ಜ್ಞಾನಿಗಳಿಗೆ ಮದಭರಿತನಿಗೆಂಬಂತೆ ಕಥಂಚಿತ್ ಗಮನಾದಿಗಳು ಕೂಡಿದರೂ ವಿಷಯಗಳ ಅನುಸಂಧಾನವಿಲ್ಲದೆ ವಿಷಯಾನುಭವವು ಕೂಡಲಾರದು, ಎಂದರೆ—ಜ್ಞಾನಿಗಳಿಗೆ ಆಗುವ ವಿಷಯಾನುಭವ ಪ್ರಕಾರವನ್ನು ಹೇಳುತ್ತಾರೆ—

ಗೀ ॥ ಆಪೂರ್ಯಮಾಣಮಚಲಪ್ರತಿಷ್ಠಂ
ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।
ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ
ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥ ೭೦ ॥

ಅ ॥ ಆಪೂರ್ಯಮಾಣಮಪಿ=ಭಾಗೀರಥೀ ಮೊದಲಾದ ಅನೇಕ ನದೀಜಲಗಳಿಂದ ತುಂಬುತ್ತಿದ್ದರೂ, ಅಚಲಪ್ರತಿಷ್ಠಂ=ನದೀಜಲಗಳ ಪ್ರವೇಶದಿಂದ ಅಭಿವೃದ್ಧಿ ಮೊದಲಾದ ವಿಶೇಷಗಳಿಲ್ಲದೆ ಒಂದೇ ರೀತಿ ಯಾಗಿರುವ, ಸಮುದ್ರಂ=ಸಮುದ್ರವನ್ನು, ಆಪಃ=ಗಂಗಾ ಯಮುನಾ ಮೊದಲಾದ ನದಿಗಳ ಜಲಗಳು. ಯದ್ವತ್=ಹೇಗೆ, ಪ್ರವಿಶಂತಿ=ಪ್ರವೇಶ ಮಾಡುತ್ತವೋ, ತದ್ವತ್=ಹಾಗೆಯೇ, ಯಂ=ಅನ್ನ ಮೊದ ಲಾದ ವಿಷಯಗಳು ತನಗೆ ಸಿಕ್ಕಿದರೂ, ಸಿಗದಿದ್ದರೂ ಸಂತೋಷ ದುಃಖಗಳನ್ನು ಹೊಂದದ ಯಾವ ಜ್ಞಾನಿಯನ್ನೂ, ಸರ್ವೇ ಕಾಮಾಃ=ಇಚ್ಛಿಸಲ್ಪಡತಕ್ಕ ಅನ್ನ ಮೊದಲಾದ ಎಲ್ಲಾ ವಿಷಯಗಳೂ ಪ್ರವಿಶಂತಿ= ಹೊಂದುತ್ತವೋ, ಸಃ=ಆತನು, (ಅಂದರೆ ವಿಷಯಗಳು ಸಮೃದ್ಧಗಳಾಗಿದ್ದರೂ ಸಂತೋಷವನ್ನು ಹೊಂದುವುದಿಲ್ಲ ವಿಷಯಗಳು ಇಲ್ಲದಿದ್ದರೆ ಅತೃಪ್ತನಾಗುವುದಿಲ್ಲ ಅವುಗಳಿಗಾಗಿ ಪ್ರಯತ್ನವನ್ನೂ ಮಾಡುವುದಿಲ್ಲ. ಇಂತಹವನು) ಶಾಂತಿಂ=ಮೋಕ್ಷವನ್ನು, ಆಪ್ನೋತಿ=ಹೊಂದುತ್ತಾನೆ ಕಾಮ ಕಾಮೀ=ಕುತ್ಸಿತಗಳಾದ ವಿಷಯಗಳನ್ನಿಚ್ಛಿಸುವ ಸ್ವಭಾವವುಳ್ಳವನು (ಅಂದರೆ ಪುತ್ರ ಮಿತ್ರ ಕಳತ್ರಾದಿ ಗಳಲ್ಲಿ ಅತ್ಯಾಸಕ್ತಿಯಿರುವವನು) ನ=ಮೋಕ್ಷವನ್ನು ಹೊಂದುವುದಿಲ್ಲ. ಅಥವಾ ಜ್ಞಾನಿಯು ವಿಷಯ ಗಳನ್ನು ಅನುಭವಿಸುವವನಾದಾಗ್ಯೂ ಕಾಮ್ಯಗಳಾದ ವಸ್ತುಗಳನ್ನು ಬಯಸಲಾರನು ॥ ೭೦ ॥

ಭಾ ॥ (೧) ತೇನ ವಿಷಯಾನುಭವಪ್ರಕಾರಮಾಹ । ಆಪೂರ್ಯಮಾಣಮಿತಿ ॥ (೨) ಯೋ ವಿಷಯೈರಾಪೂರ್ಯಮಾಣೋಽಪ್ಯಚಲಪ್ರತಿಷ್ಠೋ ಭವತಿ ನೋತ್ಸೇಕಂ ಪ್ರಾಪ್ನೋತಿ ನ ಚ ಪ್ರಯತ್ನಂ ಕರೋತಿ ನ ಚಾಭಾವೇ ಶುಷ್ಯತಿ ॥ (೩) ನ ಹಿ ಸಮುದ್ರಃ ಸರಿ- ತ್ಪ್ರವೇಶಾಪ್ರವೇಶನಿಮಿತ್ತವೃದ್ಧಿಶೋಷೌ ಬಹುತರೌ ಪ್ರಾಪ್ನೋತಿ ಪ್ರಯತ್ನಂ ವಾ ಕರೋತಿ । ಸ ಮುಕ್ತಿಂ ಪ್ರಾಪ್ನೋತೀತ್ಯರ್ಥಃ ॥ ೭೦ ॥

ಅ ॥ (೧) (ಬಾಹ್ಯವಸ್ತುಗಳಲ್ಲಿ ಆಸಕ್ತಿಯಿಲ್ಲದಿರುವ ಜ್ಞಾನಿಗಳಿಗೆ ಗಮನಾದಿಗಳು ಕೂಡಿದರೂ ವಿಷಯಾನುಭವವು ಕೂಡಲಾರದು, ಏಕೆಂದರೆ ವಿಷಯಾನುಭವವು ಇಂದ್ರಿಯಾರ್ಥ ಸಂಬಂಧಾದಿಗಳಿಂದ ಸಾಧಿಸಲ್ಪಡಬೇಕಾಗಿರುವುದರಿಂದ ಅವುಗಳ ಅನುಸಂಧಾನವಿಲ್ಲದೆ ಕೂಡಲಾರದು ಎಂಬೀ ಆಶಂಕೆಯನ್ನು

ಪರಿಹಂಸುವುದಕ್ಕಾಗಿ) ಜ್ಞಾನಿಗಳಿಂದ ಮಾಡಲ್ಪಡತಕ್ಕ ವಿಷಯಾನುಭವ ಪ್ರಕಾರವನ್ನು **ಆಪೂರ್ಯ ಮಾಣಂ** ಎಂಬ ಶ್ಲೋಕದಿಂದ ಹೇಳುತ್ತಾರೆ (೨) (**ತದ್ವತ್ಕಾಮಾ ಯಂ ಪ್ರವಿಶಂತಿ** ಎಂದು ಸಂಕ್ಷೇಪ ದಿಂದ ಹೇಳಿದ್ದನ್ನು ವಿವರಿಸುತ್ತಾರೆ) ಯಾವನು ವಿಷಯಗಳಿಂದ ತುಂಬಲ್ಪಟ್ಟರೂ ಸಂತೋಷಾತಿಶಯ ವನ್ನು ಹೊಂದುವುದಿಲ್ಲವೋ ವೃದ್ಧಿಗಾಗಿ ಪ್ರಯತ್ನವನ್ನು ಮಾಡುವುದಿಲ್ಲವೋ ವಿಷಯಗಳು ಸಿಗದಿರುವ ಪ್ರಯುಕ್ತ ಹೀನತೆಯನ್ನು ಹೊಂದುವದಿಲ್ಲವೋ (೩) (ಈ ಅರ್ಥವು ಹೇಗೆ ಸಿಗುತ್ತದೆಂದರೆ ಸಮುದ್ರ ದಲ್ಲಿ ಅನೇಕ ನದೀಜಲಗಳು ಸೇರಿದರೂ ಅವುಗಳಿಂದ ಅಭಿವೃದ್ಧಿಯನ್ನು ಹೊಂದುವುದಿಲ್ಲ ಸೇರದಿದ್ದಲ್ಲಿ ತಗ್ಗಿಹೋಗುವುದಿಲ್ಲ ಸೇರಬೇಕೆಂದು ಪ್ರಯತ್ನವನ್ನು ಮಾಡುವುದಿಲ್ಲ ಅದರಂತೆ ಜ್ಞಾನಿಯು ವಿಷಯ ವನ್ನನುಭವಿಸುವಾಗ ತೃಪ್ತಿಯನ್ನೂ, ಅನುಭವಿಸದಿರುವಾಗ ಅತೃಪ್ತಿಯನ್ನೂ ಹೊಂದುವುದಿಲ್ಲ. ಇಂತಹ ಜ್ಞಾನಿಯು ಮೋಕ್ಷವನ್ನು ಹೊಂದುತ್ತಾನೆಂದರ್ಥವು. ॥ ೭೦ ॥

**ತಾ ॥ (೧) ಭುಂಜಾನೋಽಪಿ ಹಿ ಯಃ ಕಾಮಾನ್ಮರ್ಯಾದಾಂ ನ ತರೇತ್ಕ್ವಚಿತ್ । ಸಮುದ್ರವದ್ಧರ್ಮಮಯೀಂ ನಾಸೌ ಕಾಮೀ ಸ ಮುಚ್ಯತೇ ॥ (೨) ಕೇತಿ ಕುತ್ಸಿತವಾಚೀ ಸ್ಯಾತ್ಕುತ್ಸಿತಂ ಮಾನಮೇವ ತು । ಕಾಮೋ ಮೋಕ್ಷವಿರೋಧೀ ಸ್ಯಾನ್ನ ಸರ್ವೇಚ್ಛಾ ವಿರೋಧಿನೀತಿ ಚ ॥ (೩) ನ ಚ ಸರ್ವೇಚ್ಛಾಭಾವೇ ಜೀವನಂ ಭವತಿ । ಶಾಂತಿರ್ಮೋಕ್ಷೋ ಯತೋ ಹ್ಯತ್ರ ವಿಷ್ಣುನಿಷ್ಠಾ ಭವೇದ್ಧ್ರುವೇತಿ ಚ ॥ ೭೧ ॥**

ಅ ॥ ವಿಷಯಗಳನ್ನು ಅನುಭವಿಸುವವನಾದಾಗ್ಯೂ ಯಾವನು ಎಲ್ಲಿಯೂ ಧರ್ಮ ಎನಿಸಿದ ಮರ್ಯಾದೆಯನ್ನು ಸಮುದ್ರದಂತೆಯೇ ಎಲ್ಲಿಯೂ ಮೀರಲಾರನೋ, ಇಂತಹವನು ಕಾಮೀ ಎನಿಸುವು ದಿಲ್ಲ ಅವನು ಮೋಕ್ಷವನ್ನು ಹೊಂದುತ್ತಾನೆ (೨) (ಕಾಮವಿಲ್ಲವಾದರೆ—ವಿಷಯಭೋಗವು ಕೂಡ ದಿರುವುದರಿಂದ ಜ್ಞಾನಿಗಳಿಗೆ ಕಾಮವಿಲ್ಲವೆಂದದ್ದು ಹೇಗೆ ಎಂದರೆ-ಮೋಕ್ಷಕ್ಕೆ ವಿರೋಧಿಯಾದುದು ನಿಷಿದ್ಧೇ ಚ್ಛೆಯೇ ಎನ್ನುತ್ತಾರೆ) ಕ ಎಂಬುದು ಕುತ್ಸಿತ ಎಂಬ ಅರ್ಥವನ್ನು ಹೇಳುತ್ತದೆ ಕುತ್ಸಿತವಾದ ಇಚ್ಛೆಯೇ ಕಾಮವು ಅದು ಮೋಕ್ಷಕ್ಕೆ ವಿರೋಧಿಯಾದುದು ಶುಭ ಇಚ್ಛೆಗಳೆಲ್ಲವೂ ಮೋಕ್ಷಕ್ಕೆ ವಿರೋ ಧಿಗಳಲ್ಲ (೩) ಯಾವುದೊಂದು ಇಚ್ಛೆಯೇ ಇಲ್ಲವೆಂದಾದರೆ ಜೀವನವೇ ಆಗಲಾರದು ವಿಷ್ಣುವಿನಲ್ಲಿ ಆಸಕ್ತಿಯು ಶಾಶ್ವತವಾದುದು. ಆದಪ್ರಯುಕ್ತವೇ ಶಾಂತಿಯೆಂದರೆ ಮೋಕ್ಷವು ॥ ೭೦ ॥

ಪೀ—ಹಿಂದಿನ ಶ್ಲೋಕದಲ್ಲಿ ಹೇಳಿದ್ದನ್ನು ವಿವರಿಸುತ್ತಾರೆ—

**ಗೀ ॥ ವಿಹಾಯ ಕಾಮಾನ್ಯಃ ಸರ್ವಾನ್ಪುಮಾಂಶ್ಚರತಿ ನಿಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥ ೭೧ ॥**

ಅ ॥ ಯಃ=ಯಾವನು, ನಿಸ್ಪೃಹಃ=ನಿಷಿದ್ಧವಸ್ತುಗಳಲ್ಲಿ ಇಚ್ಛೆಯಿಲ್ಲದವನಾಗಿ, ನಿರ್ಮಮಃ=ತಾನೇ ಈ ವಸ್ತುಗಳಿಗೆ ಸ್ವಾಮಿಯು ನಿಯಾಮಕನು, ಎಂಬ ಅಭಿಮಾನವಿಲ್ಲದವನಾಗಿ, ನಿರಹಂಕಾರಃ=ತಾನೇ ಸರ್ವ ಸ್ವತಂತ್ರನು ತಾನೇ ಕರ್ತನು ಎಂಬ ಅಭಿಮಾನವಿಲ್ಲದವನಾಗಿ, ಸರ್ವಾನ್ ಕಾಮಾನ್=ಎಲ್ಲಾ ಇಚ್ಛೆಗಳನ್ನು, ವಿಹಾಯ=ಬಿಟ್ಟು ಚರತಿ=ಅನುಭವಿಸುತ್ತಾನೋ ಸಃ=ಆ ಅಜ್ಞಾನಿಯೇ ಪುಮಾನ್= ಪುರುಷನು, ಸಃ=ಅವನೇ, ಶಾಂತಿಂ=ಮೋಕ್ಷವನ್ನು, ಅಧಿಗಚ್ಛತಿ=ಹೊಂದುತ್ತಾನೆ. (ಇತರರು ಪಶು ಪ್ರಾಯರು) ॥ ೭೧ ॥

ಭಾ || ಏತದೇವ ಪ್ರಪಂಚಯತಿ । ವಿಹಾಯೇತಿ । ಕಾಮಾನ್ ವಿಷಯಾನ್ ನಿಸ್ಪೃಹತಯಾ ವಿಹಾಯ ಯಶ್ಚರತಿ ಭಕ್ಷಯತಿ । ಭಕ್ಷಯಾಮ್ಯಹಂಕಾರಮಮಕಾರವರ್ಜಿತಶ್ಚ ಸ ಹಿ ಪುಮಾನ್ ಸ ಏವ ಚ ಮುಕ್ತಿಮಧಿಗಚ್ಛತೀತ್ಯರ್ಥಃ || ೭೧ ||

ಅ || ವಿಹಾಯ ಎಂಬ ಶ್ಲೋಕದಿಂದ, ಹಿಂದಿನ ಶ್ಲೋಕದಲ್ಲಿ ಹೇಳಿದ್ದನ್ನೇ ವಿವರಿಸುತ್ತಾರೆ ಕಾಮಾನ್=ವಿಷಯಗಳನ್ನು ಭೋಗಿಸಬೇಕೆಂಬ ಅತ್ಯಂತ ಆಕಾಂಕ್ಷೆಯನ್ನು ತೊರೆದು ಯಾವನು ಚರತಿ=ಅನುಭವಿಸುತ್ತಾನೋ, ನಾನೇ ಕರ್ತನು ಎಂಬ ಅಭಿಮಾನವೇ ಅಹಂಕಾರವು ನಾನೇ ಸ್ವಾಮಿಯು ಎಂಬ ಅಭಿಮಾನವೇ ಮಮತಾ ನಾನು ಭಕ್ಷಿಸುತ್ತೇನೆ, ಎಂಬ ಅಹಂಕಾರ ಮಮತೆಗಳು ಇಲ್ಲದವನೇ ಪುರುಷನು. (ಇತರರು ಪಶುಗಳು) ಅಂತಹವನೇ ಮೋಕ್ಷವನ್ನು ಹೊಂದುತ್ತಾನೆ. || ೭೧ ||

ತಾ || ನಿಷಿದ್ಧಸ್ಪೃಹಾಭಾವಮಾತ್ರೇಣ ಸರ್ವವಿಷಯಾನ್ವಿಹಾಯ । ಅಸ್ವರೂಪೇ ಸ್ವರೂಪತ್ವಮತಿರೇವ ಹ್ಯಹಂಕೃತಿಃ । ತ್ಯಾಜ್ಯಾ ಸರ್ವತ್ರ ಮಮತಾ ಜ್ಞಾತ್ವಾ ಸರ್ವಂ ಹರೇರ್ವಶ ಇತಿ ಚ || ೭೧ ||

ಅ || ನಿಷಿದ್ಧವಾದ ಇಚ್ಛೆಯು ಇಲ್ಲದಿರೋಣ ಮಾತ್ರದಿಂದ ಎಲ್ಲಾ ನಿಷಿದ್ಧವಿಷಯಗಳನ್ನು ಬಿಟ್ಟು ವಸ್ತುತಃ ತನ್ನದಲ್ಲದ ವಸ್ತುವಿನಲ್ಲಿ ತನ್ನದೆಂಬ ಬುದ್ಧಿಯೇ ಅಹಂಕಾರವು. ಎಲ್ಲವೂ ಶ್ರೀಹರಿಯ ಅಧೀನದಲ್ಲಿದೆ, ಎಂದು ತಿಳಿದು ಎಲ್ಲಾ ಕಡೆಗಳಲ್ಲಿಯೂ ತನ್ನದೆಂಬ ಮಮತೆಯನ್ನು ಬಿಡಬೇಕು || ೭೧ ||

ಗೀ || ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।
ಸ್ಥಿತ್ವಾಽಸ್ಯಾಮಂತಕಾಲೇಽಪಿ ಬ್ರಹ್ಮ ನಿರ್ವಾಣಮೃಚ್ಛತಿ || ೭೨ ||

ಅ || ಪಾರ್ಥ=ಅರ್ಜುನನೇ, ಏಷಾ=ಪರಬ್ರಹ್ಮಜ್ಞಾನಿಗಳ ಸಂಬಂಧಿಯಾದ, ಸ್ಥಿತಿಃ=ಸ್ಥಿತಿಯು, ಬ್ರಾಹ್ಮೀ=ಪರಬ್ರಹ್ಮನ ಪ್ರಾಪ್ತಿಗೆ ಕಾರಣವಾದುದು (ಅಂದರೆ ಎಲ್ಲಾ ನಿಷಿದ್ಧ ಇಚ್ಛೆಗಳನ್ನು ಬಿಟ್ಟು, ನಿರಂತರದಲ್ಲಿಯೂ ಶ್ರೀಹರಿಯ ಸ್ಮರಣಾದಿರೂಪವಾದುದು ಬ್ರಹ್ಮಜ್ಞಾನಿಗಳಿಗೆ ಲಕ್ಷಣವು) ಏನಾಂ=ಪರಬ್ರಹ್ಮಜ್ಞಾನಿಗಳ ಸ್ಥಿತಿಯನ್ನು ಪ್ರಾಪ್ಯ=ಹೊಂದಿ, ನ ವಿಮುಹ್ಯತಿ=ಸಂಸಾರದುಃಖವನ್ನನುಭವಿಸುವುದಿಲ್ಲ ಅಂತಕಾಲೇಽಪಿ=ದೇಹಾವಸಾನಸಮಯದಲ್ಲಿಯೂ, (ಶ್ರೀಹರಿಯ ಅನುಗ್ರಹದಿಂದ) ಅಸ್ಯಾಂ=ಶ್ರೀಹರಿಯ ಸ್ಮರಣಾದಿ ರೂಪವಾದ ಸ್ಥಿತಿಯಲ್ಲಿ, ಸ್ಥಿತ್ವಾ=ಇದ್ದು (ಆ ಕಾಲದಲ್ಲಿಯೂ ಅನ್ಯಮನಸ್ಕನಾಗದೆ ಇದ್ದರೆ) ನಿರ್ವಾಣಂ=ಪ್ರಾಕೃತಶರೀರವಿಲ್ಲದಿರುವ ಬ್ರಹ್ಮ=ಪರಬ್ರಹ್ಮನನ್ನು, ಋಚ್ಛತಿ=ಹೊಂದುತ್ತಾನೆ

ವಿ || ಪ್ರಾರಬ್ಧಕರ್ಮವಿಲ್ಲವಾದರೆ—ಯಾವ ದೇಹದಲ್ಲಿ ಜ್ಞಾನವು ಹುಟ್ಟುತ್ತದೋ ಆ ದೇಹಾವಸಾನದಲ್ಲಿಯೇ ಬ್ರಹ್ಮಪ್ರಾಪ್ತಿಯು. ಪ್ರಾರಬ್ಧಕರ್ಮವಿದ್ದರೆ—ದೇಹಾಂತರವನ್ನು ಹೊಂದಿ ಆ ದೇಹದಲ್ಲಿ ಪ್ರಾರಬ್ಧಕರ್ಮವನ್ನು ಭೋಗಿಸಿದ ಮೇಲೆಯೇ ಪರಬ್ರಹ್ಮಪ್ರಾಪ್ತಿಯು || ೭೨ ||

ಗೀ || ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಸಾಂಖ್ಯಯೋಗೋ ನಾಮ
ದ್ವಿತೀಯೋಽಧ್ಯಾಯಃ || ೨ ||

**ಅ** ॥ ಹೀಗೆ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ಸಾಂಖ್ಯಯೋಗವೆಂಬ ಎರಡನೆಯ ಅಧ್ಯಾಯವು ಮುಗಿಯಿತು. ॥ ೨ ॥

**ಟೀ — ಸೈಷಾ ಜ್ಞಾನನಿಷ್ಠಾ ಸ್ತೂಯತೇ** ಎಂದು ಅದ್ವೈತ ಭಾಷ್ಯದಲ್ಲಿ ಈ ಶ್ಲೋಕದಿಂದ ಜ್ಞಾನಿಗಳನ್ನು ಸ್ತೋತ್ರಮಾಡುವುದೆಂದು ಹೇಳಿಯದೆ. ಅದು ಅಯುಕ್ತವು. **ಆಪೂರ್ಯಮಾಣಂ** ಎಂಬ ಪ್ರಥಮ ವಾಕ್ಯದಲ್ಲಿಯೇ ಜ್ಞಾನಿಗಳ ಸ್ತೋತ್ರವು ಕಂಡದೆ, ಎನ್ನುತ್ತಾರೆ—

**ಭಾ ॥ (೧) ಉಪಸಂಹರತಿ । ಏಷೇತಿ । (೨) ಬ್ರಾಹ್ಮೀ ಸ್ಥಿತಿಃ ಬ್ರಹ್ಮವಿಷಯಾ ಸ್ಥಿತಿರ್ಲಕ್ಷಣಂ । (೩) ಅಂತಕಾಲೇಽಸ್ಯಾಂ ಸ್ಥಿತ್ವೈವ ಬ್ರಹ್ಮ ಗಚ್ಛತಿ । ಅನ್ಯಥಾ ಜನ್ಮಾಂತರಂ ಪ್ರಾಪ್ನೋತಿ । ಯಂ ಯಂ ವಾಽಪೀತಿ ವಕ್ಷ್ಯಮಾಣತ್ವಾತ್ ॥ (೪) ಜ್ಞಾನಿನಾಮಪಿ ಸತಿ ಪ್ರಾರಬ್ಧಕರ್ಮಣಿ ಶರೀರಾಂತರಂ ಯುಕ್ತಂ ॥ (೫) ಭೋಗೇನ ತ್ವಿತರ ಇತಿ ಹ್ಯುಕ್ತಂ ॥ (೬) ಸಂತಿ ಹಿ ಬಹುಶರೀರಫಲಾನಿ ಕರ್ಮಾಣಿ ಕಾನಿಚಿತ್ । ಸಪ್ತ ಜನ್ಮನಿ ವಿಪ್ರಃ ಸ್ಯಾದಿತ್ಯಾದೇಃ । ದೃಷ್ಟೇಶ್ಚ ಜ್ಞಾನಿನಾಮಪಿ ಒಹುಶರೀರಪ್ರಾಪ್ತೇಃ ॥ (೭) ತಥಾ ಹ್ಯುಕ್ತಂ । ಸ್ಥಿತಪ್ರಜ್ಞೋಽಪಿ ಯಸ್ತ್ವೂರ್ಧ್ವಃ ಪ್ರಾಪ್ಯ ರೌದ್ರಂ ಪದಂ ತತಃ । ಸಾಂಕರ್ಷಣಂ ತತೋ ಮುಕ್ತಿಮಗಾದ್ವಿಷ್ಣುಪ್ರಸಾದತ ಇತಿ ಗಾರುಡೇ ॥ (೮) ಮಹಾದೇವಪರೇ ಜನ್ಮಂಸ್ತ್ರವ ಮುಕ್ತಿರ್ನಿರೂಪ್ಯತ ಇತಿ ನಾರದೀಯೇ ॥ ೧ ॥**

**ಅ** ॥ (೧) **ಏಷಾ** ಎಂಬ ಶ್ಲೋಕದಿಂದ **ಪ್ರಜಹಾತಿ** ಇತ್ಯಾದಿ ಪ್ರಕರಣವನ್ನು ಸಮಾಪಿಸುತ್ತಾರೆ (೨) ಬ್ರಾಹ್ಮೀ ಸ್ಥಿತಿಃ=ಬ್ರಹ್ಮವಿಷಯಕಸ್ಥಿತಿಯು, ಲಕ್ಷಣವು (ಅಂದರೆ ಬ್ರಹ್ಮಜ್ಞಾನವುಳ್ಳವನಿಗೆ ಲಕ್ಷಣವು ಹೇಳಲ್ಪಟ್ಟಿತು )(೩)(**ಸ್ಥಿತ್ವಾಽಸ್ಯಾಂ ಸ್ಥಿತೌ ಬ್ರಾಹ್ಮ್ಯಾಂ ಯಥೋಕ್ತಾಯಾಮಂತಕಾಲೇಽಂತೇಽಪಿ ವಯಸಿ ಬ್ರಹ್ಮನಿರ್ವಾಣಂ ಬ್ರಹ್ಮನಿರ್ವೃತಿಂ ಮೋಕ್ಷಮೃಚ್ಛತಿ** ಎಂದು ಅದ್ವೈತಭಾಷ್ಯದಲ್ಲಿ ಅಂತ್ಯಕಾಲದಲ್ಲಿ ಸನ್ಯಾಸಾಶ್ರಮವನ್ನು ತೆಗೆದುಕೊಂಡವರೂ ಬ್ರಹ್ಮನನ್ನು ಹೊಂದುತ್ತಾರೆ ಹೀಗಿರಲು ಬ್ರಹ್ಮಚರ್ಯದಿಂದಲೇ ಸನ್ಯಾಸಾಶ್ರಮ ತೆಗೆದುಕೊಂಡವರು ಬ್ರಹ್ಮನನ್ನು ಹೊಂದುತ್ತಾರೆಂಬುದು ಸುತರಾಂ ಸಿದ್ಧವು, ಎಂದು ಹೇಳಿಯದೆ ಇದಯುಕ್ತವು ಏಕೆಂದರೆ ಸನ್ಯಾಸದ ವಿಷಯವು ಮೊದಲು ಹೇಳಲಿಲ್ಲ ಎಂಬ ಅಭಿಪ್ರಾಯದಿಂದ ಯೋಗ್ಯ ಅರ್ಥ ಹೇಳುತ್ತಾರೆ) ದೇಹತ್ಯಾಗಕಾಲದಲ್ಲಿ ಶ್ರೀಹರಿಯ ಸ್ಮರಣಾದಿ ರೂಪವಾದ ಸ್ಥಿತಿಯಲ್ಲಿ ಇದ್ದೇ ಪರಬ್ರಹ್ಮನನ್ನು ಹೊಂದುತ್ತಾನೆ ಅಂತ್ಯಕಾಲದಲ್ಲಿ ಪರಬ್ರಹ್ಮನ ಸ್ಮರಣೆಯು ಬಾರದೆ ಹೋದರೆ **ಯಂ ಯಂ ವಾಽಪಿ ಸ್ಮರನ್ ಭಾವಂ** ಎಂದು ಮುಂದೆ ಹೇಳುವ ಪ್ರಕಾರ ಜನ್ಮಾಂತರವನ್ನು ಹೊಂದುತ್ತಾನೆ (೪) (ಜ್ಞಾನವೇ ಮೋಕ್ಷಕ್ಕೆ ಸಾಧನವು. ಕಾರಣಗಳೆಲ್ಲಾ ಇರುವಾಗ ಕಾರ್ಯವು ಆಗಲೇಬೇಕು ಆದಕಾರಣ ಜ್ಞಾನಿಗಳಿಗೆ ಬೇರೆ ದೇಹವು ಬರುತ್ತದೆಂಬುದು ಹೇಗೆ ಕೂಡುತ್ತದೆ? ಎಂದರೆ) ಜ್ಞಾನಿಗಳಿಗೂ ಪ್ರಾರಬ್ಧಕರ್ಮವು ಇದ್ದರೆ ಶರೀರಾಂತರ ಪ್ರಾಪ್ತಿಯು ಕೂಡುತ್ತದೆ (ಪ್ರಾರಬ್ಧ ಕರ್ಮವು ಸಾಮಗ್ರಿಗೆ ಪ್ರತಿಬಂಧಕವು ಆದೇ ಅಂತ್ಯಕಾಲದಲ್ಲಿ ಶ್ರೀಪರಬ್ರಹ್ಮನ ಸ್ಮರಣೆಗೆ ಪ್ರತಿಬಂಧಕವಾಗುತ್ತದೆ ) (೫) (ಜ್ಞಾನದಿಂದಲೇ ಸಮಸ್ತಕರ್ಮವು ನಾಶವಾಗುತ್ತದೆಂದರೆ) **ಭೋಗೇನ ತ್ವಿತರೇ ಕ್ಷಪಯಿತ್ವಾಽಥ ಸಂಪತ್ಸ್ಯತೇ** ಪ್ರಾರಬ್ಧಪುಣ್ಯಪಾಪಗಳಿಗೆ ಭೋಗದಿಂದಲೇ ನಾಶವು ಆದಾದೊಡನೆಯೇ ಬ್ರಹ್ಮಪ್ರಾಪ್ತಿಯು (೬) (ಪ್ರಾರಬ್ಧಕರ್ಮಗಳಿಗೆ ಉಪಭೋಗದಿಂದಲೇ ನಾಶವಾಗಲಿ, ಆ ನಾಶವು ಯಾವ ಶರೀರದಲ್ಲಿ ಜ್ಞಾನವು ಉಂಟಾಗಿದೆಯೋ ಆ ಶರೀರದಲ್ಲಿಯೇ ಆಗಬೇಕು ಮತ್ತೊಂದು

ಶರೀರಾರಂಭವು ಏತಕ್ಕೆಂದರೆ) ಏಳು ಜನ್ಮಗಳಲ್ಲಿ ಬ್ರಾಹ್ಮಣನಾಗಿ ಹುಟ್ಟುವನು ಇತ್ಯಾದಿ ಪ್ರಮಾಣ ಗಳಿಂದ ಬಹು ಶರೀರಗಳನ್ನು ಹೊಂದಿಸುವ ಕರ್ಮಗಳಿವೆ (ಅವುಗಳನ್ನೆಲ್ಲಾ ಒಂದೇ ಶರೀರದಿಂದ ಭೋಗಿಸುವುದು ಅಸಾಧ್ಯವು. ಜ್ಞಾನಿಗಳಿಗೂ ಬಹುಶರೀರ ಪ್ರಾಪ್ತಿಯು ದೃಷ್ಟವಾಗಿದೆ (೭) (ಹಾಗೆ ಹೇಳಲ್ಪಟ್ಟಿದೆ ಊರ್ಧ್ವ ಎನಿಸಿಕೊಂಡ, ರುದ್ರ ಪದವಿಗೆ ಯೋಗ್ಯನಾದ ಉಗ್ರತಪಾಃ ಎಂಬ ಜೀವನು ಸ್ಥಿತಪ್ರಜ್ಞನಾದಾಗ್ಯೂ ರುದ್ರಪದವಿಯನ್ನು ಹೊಂದಿದ ಮೇಲೆ ಶೇಷಪದವಿಯನ್ನು ಹೊಂದಿ ಆ ಮೇಲೆ ಶ್ರೀವಿಷ್ಣುವಿನ ಅನುಗ್ರಹದಿಂದ ಮೋಕ್ಷವನ್ನು ಹೊಂದಿದನು ಎಂದು ಗಾರುಡಪುರಾಣದಲ್ಲಿದೆ (೮) ಮಹಾದೇವನೇ ನಿನಗೆ ಮುಂದಿನ ಜನ್ಮದಲ್ಲಿ (ಶೇಷ ಪದವಿಯನ್ನು ಹೊಂದಿದ ಮೇಲೆ) ಮೋಕ್ಷವು ಹೇಳಲ್ಪಟ್ಟಿದೆ, ಎಂದು ನಾರದೀಯಪುರಾಣದಲ್ಲಿದೆ ॥ ೧ ॥

ಪೀ—ಜ್ಞಾನಿಗಳಿಗೂ ಬೇರೆ ಶರೀರವು ಪ್ರಾಪ್ತವಾಗುವುದಾದರೆ—ಗರ್ಭವಾಸ ಮೊದಲಾದ ದುಃಖ ಗಳಿಂದ ಜ್ಞಾನದ ಶಕ್ತಿಯು ಹ್ರಾಸವಾಗಿ ಜ್ಞಾನವು ಮೋಕ್ಷವನ್ನು ಹೊಂದಿಸಲಿಕ್ಕೆ ಶಕ್ತವಾಗದೆ ಹೋಗು ವುದು ಎಂದರೆ—

**ಭಾ ॥ (೧) ನಿಶ್ಚಿತಂ ಫಲಂ ಚ ಜ್ಞಾನಂ । ತಸ್ಯ ತಾವದೇವ ಚಿರಂ ಯದು ಚ ನಾರ್ಚಿಷ-ಮೇವಾಭಿಸಂಭವತೀತ್ಯಾದಿಶ್ರುತಿಭ್ಯಃ ॥ (೨) ನ ಚ ಕಾಯವ್ಯೂಹಾಪೇಕ್ಷಾ । (1) ತದ್ಯಥೈಷೀಕಾತೂಲಂ (2)ತದ್ಯಥಾ ಪುಷ್ಕರಪಲಾಶೇ (3) ಜ್ಞಾನಾಗ್ನಿಃ ಸರ್ವಕರ್ಮಾ-ಣೀತ್ಯಾದಿವಚನೇಭ್ಯಃ ॥ (೩) ಪ್ರಾರಬ್ಧೇ ತ್ವವಿರೋಧಃ । ಪ್ರಮಾಣಾಭಾವಾಚ್ಚ ॥ (೪) ನ ಚ ತಚ್ಛಾಸ್ತ್ರಂ ಪ್ರಮಾಣಂ । ಅಕ್ಷಪಾದಕಣಾದಾನಾಂ ಸಾಂಖ್ಯಯೋಗ-ಜಟಾಭೃತಾಂ । ಮತಮಾಲಂಬ್ಯ ಯೋ ವೇದಂ ದೂಷಯಂತ್ಯಲ್ಪಚೇತಸ ಇತಿ ವಚನಾತ್ ॥ (೫) ಯತ್ರ ತು ಸ್ತುತಿಃ ತತ್ರ ಶಿವಭಕ್ತಾನಾಂ ಸ್ತುತಿಪರತ್ವಮೇವ ನ ಸತ್ಯತ್ವಂ ॥ (೬) ನ ಹಿ ತೇಷಾಮುಪೀತರಗ್ರಂಥವಿರುದ್ಧಾರ್ಥೇ ಪ್ರಾಮಾಣ್ಯಂ ॥ ೨ ॥**

ಅ ॥ (೧) (ಜ್ಞಾನಕ್ಕೆ ಬ್ರಹ್ಮಪ್ರಾಪ್ತಿರೂಪ ಮೋಕ್ಷಫಲವು ನಿಶ್ಚಿತವೇ ಪ್ರಾರಬ್ಧಕರ್ಮವು ಪ್ರತಿ ಬಂಧಕವಾಗಿರುವುದರಿಂದ ಎಷ್ಟು ಕಾಲ ಪರ್ಯಂತ ಸಂಸಾರದಿಂದ ಬಿಡಲ್ಪಡುವುದಿಲ್ಲವೋ ಅಷ್ಟೇ ಕಾಲವು ಜ್ಞಾನಿಯಾದವನಿಗೇ ಮೋಕ್ಷವನ್ನು ಹೊಂದಲಿಕ್ಕೆ ತಡೆಯಾಗುವುದು ಪ್ರಾರಬ್ಧ ಕರ್ಮವು ಭೋಗದಿಂದ ಸಮಾಪ್ತವಾಗುತ್ತಿರಲು ಜ್ಞಾನಿಯು ಪರಬ್ರಹ್ಮನನ್ನು ಹೊಂದುತ್ತಾನೆ ಪ್ರಾರಬ್ಧ ಕರ್ಮವನ್ನು ಭೋಗಿಸಿ ಸಮಾಪಿಸಿಕೊಂಡ ಜ್ಞಾನಿಗಳ ವಿಷಯದಲ್ಲಿ ಪುತ್ರಾದಿಗಳು ಶವಕ್ಕೆ ಮಾಡತಕ್ಕ ಸಂಸ್ಕಾರಾದಿಗಳನ್ನು (ಉತ್ತರಕ್ರಿಯೆಯನ್ನು) ಮಾಡಿದರೂ ಮಾಡದಿದ್ದರೂ ಸರ್ವಥಾ ಅರ್ಚಿಲೋಕವನ್ನು ಜ್ಞಾನಿಗಳು ಹೊಂದುತ್ತಾರೆ, ಇದುಮೊದಲಾದ ವೇದಗಳಿಂದ. (೨) (ಈ ಕಾಲದಲ್ಲಿ ಈ ಕರ್ಮಕ್ಕೆ ಫಲವುಂಟಾಗುವು ದೆಂದು ನಿಯಮವಿಲ್ಲದಿದ್ದರೂ ಕರ್ಮಗಳನ್ನು ಜ್ಞಾನಿಯು ಯೋಗಸಾಮರ್ಥ್ಯದಿಂದ ಒಟ್ಟು ಸೇರಿಸಿ ಕರ್ಮಗಳಿಂದ ಅನೇಕ ಶರೀರಗಳು ಬರಬೇಕಾಗಿದ್ದರೂ ಒಬ್ಬನೇ ಏಕದಾ ಶರೀರ ಸಮೂಹಗಳನ್ನು ತೆಗೆದುಕೊಂಡು ಕರ್ಮಗಳನ್ನು ನಾಶಗೊಳಿಸಿ ಮೋಕ್ಷವನ್ನು ಹೊಂದುತ್ತಾನೆ ಆದಕಾರಣ ಜ್ಞಾನವು ಒಂದು ಜನ್ಮದಲ್ಲಿಯೇ ಸರ್ವ ಕರ್ಮಗಳನ್ನು ನಾಶಗೊಳಿಸಲಿಕ್ಕೆ ಸಮರ್ಥನಾದ ಜ್ಞಾನಿಗೆ ಜನ್ಮಾಂತರದಲ್ಲಿ ದೇಹಾಂತರವು ಬರುತ್ತದೆಂದು ಏಕೆ ಒಡಂಬಡಬೇಕು, ಎಂದು ಪಾಶುಪತ, ವೈಶೇಷಿಕ ಮೊದಲಾದವರು ಹೇಳುತ್ತಾರೆ ಎಂದರೆ—) (ಜ್ಞಾನಿಗಳಿಗೆ ಕರ್ಮಗಳ ನಾಶಕ್ಕಾಗಿ) ಶರೀರಗಳ ಸಮೂಹದ ಅಪೇಕ್ಷೆಯು ಇಲ್ಲ (ಅನೇಕ ದೇಹಗಳನ್ನು ತೆಗೆದುಕೊಳ್ಳುತ್ತಾನೆಂದು ಹೇಳಕೂಡದು) (ಏಕೆಂದರೆ ಅಪ್ರಾರಬ್ಧ

ಗಳಾದ ಕರ್ಮಗಳನ್ನು ನಾಶಗೊಳಿಸುವುದಕ್ಕಾಗಿ ಒಂದೇ ಜನ್ಮದಲ್ಲಿ ಅನೇಕ ಶರೀರಗಳನ್ನು ತೆಗೆದುಕೊಳ್ಳುತ್ತಾನೆ, ಎಂದು ಹೇಳಕೂಡದು. ಏಕೆಂದರೆ) (1) ಹೇಗೆ ಹತ್ತಿಯ ರಾಶಿಯು (ಅಗ್ನಿಯಲ್ಲಿ ಹಾಕಲ್ಪಟ್ಟರೆ ಸುಟ್ಟು ಬೂದಿಯಾಗುತ್ತದೋ, ಹಾಗೆಯೇ ಎಲ್ಲಾ ಪಾಪಗಳೂ ನಷ್ಟಗಳಾಗುತ್ತವೆ) (2) ಹೇಗೆ ತಾವರೆ ಎಲೆಯಲ್ಲಿ ಜಲಬಿಂದು ನಿಲ್ಲುವುದಿಲ್ಲವೋ, ಹೀಗೆಯೇ ಜ್ಞಾನಿಯಲ್ಲಿ ಪಾಪಕರ್ಮವು ಉಳಿಯುವುದಿಲ್ಲ (3) ಜ್ಞಾನವೆಂಬ ಅಗ್ನಿಯು ಸಮಸ್ತ ಕರ್ಮಗಳನ್ನು ಸುಟ್ಟುಬಿಡುತ್ತದೆ, ಇದು ಮೊದಲಾದ ಪ್ರಮಾಣಗಳಿಂದ (ಅಪ್ರಾರಬ್ಧಕರ್ಮಗಳಿಗೆ ಜ್ಞಾನದಿಂದಲೇ ನಾಶವು) (೩) (ಪ್ರಾರಬ್ಧಕರ್ಮಗಳ ನಾಶಕ್ಕಾಗಿ ಜ್ಞಾನಿಯು ಏಕದಾ ಅನೇಕಶರೀರಗಳನ್ನು ತೆಗೆದುಕೊಳ್ಳುತ್ತಾನೆಂಬ ಪಕ್ಷದಲ್ಲಿ ಯಾವನಾದರೊಬ್ಬ ಜ್ಞಾನಿಯು ಅನೇಕ ದೇಹಗಳನ್ನು ತೆಗೆದುಕೊಂಡು ಕರ್ಮಗಳನ್ನು ನಾಶಗೊಳಿಸುತ್ತಾನೋ, ಎಲ್ಲರೂ ಹಾಗೋ ಅದರಲ್ಲಿಯೂ ಯಾವನಾದರೂ ಒಬ್ಬ ಜ್ಞಾನಿಯು ಹಾಗೆ ಮಾಡುತ್ತಾನೆಂಬ ಪಕ್ಷದಲ್ಲಿ) ದೇಹ ಸಮೂಹಗಳನ್ನು ನಿರ್ಮಿಸಿಕೊಂಡು ಪ್ರಾರಬ್ಧಕರ್ಮವನ್ನು ಭೋಗಿಸಿದರೂ ವಿರೋಧವಿಲ್ಲ (ಎಲ್ಲಾ ಜ್ಞಾನಿಗಳೂ ಅನೇಕ ದೇಹಗಳನ್ನು ನಿರ್ಮಿಸಿಕೊಂಡು ಪ್ರಾರಬ್ಧಕರ್ಮವನ್ನು ಭೋಗಿಸುತ್ತಾರೆಂದು ಹೇಳಕೂಡದು) ಆ ವಿಷಯದಲ್ಲಿ ಪ್ರಮಾಣವಿಲ್ಲ **ಸ್ಥಿತಪ್ರಜ್ಞೋಽಪಿ** ಇತ್ಯಾದಿ ಹಿಂದೆ ಹೇಳಿದ ಪ್ರಮಾಣವಿರೋಧವೂ ಇದೆ (೪) (ಪಾಶುಪತಾದಿ ಶಾಸ್ತ್ರಗಳಲ್ಲಿ ಹಗೆ ಹೇಳಿದ ಪ್ರಕಾರ ಪ್ರಮಾಣವಿಲ್ಲವೆಂಬುದು ಹೇಗೆ ಎಂದರೆ) ಅವರ ಮತ್ತು ಅವರ ಶಿಷ್ಯರ ಶಾಸ್ತ್ರವು ಪ್ರಮಾಣವಲ್ಲ ಅಕ್ಷಪಾದ ಕಣಾದ ಸಾಂಖ್ಯ ಯೋಗ ಜಟಾಭೃತ್ (ಶೈವ) ಇವರ ಮತವನ್ನು ಆಶ್ರಯಿಸಿ ಯಾರು ಇದನ್ನು ದೂಷಿಸುತ್ತಾರೋ, ಅವರು ಅಲ್ಪಜ್ಞಾನಿಗಳು ಎಂದು ಅವರನ್ನು ನಿಂದಿಸಿರುತ್ತಾರೆ. (೫)(**ಉಮಾಪತಿಃ ಪಶುಪತಿಃ ಶ್ರೀಕಂಠೋ ಬ್ರಹ್ಮಣಃ ಸುತಃ । ಉಕ್ತವಾನಿದಮವ್ಯಗ್ರಂ ಜ್ಞಾನಂ ಪಾಶುಪತಂ ಶಿವಃ ॥** ಇತ್ಯಾದಿಗಳಲ್ಲಿ ಪಾಶುಪತ ಶಾಸ್ತ್ರದ ಸ್ತುತಿಯು ಕಾಣಲ್ಪಡುತ್ತದೆ, ಎಂದರೆ, ಎಲ್ಲಿ ಸ್ತೋತ್ರವು ಮಾಡಲ್ಪಟ್ಟದೋ, ಅಲ್ಲಿ **ಲಕ್ಷ್ಮೀ ವಿರಿಂಚ ವಾಣೀಶ** ಇತ್ಯಾದಿ ವೈಷ್ಣವ ಶಾಸ್ತ್ರಗಳಲ್ಲಿ ಹೇಳಿದ ಪ್ರಕಾರ ಶಿವಭಕ್ತರಿಗೆ ಶಿವನ ಸ್ತುತಿಯಲ್ಲಿ ತಾತ್ಪರ್ಯವು (ಅಂದರೆ ಶಿವನು ಬ್ರಹ್ಮಪುತ್ರನು, ಪಾರ್ವತೀಪತಿಯು, ಮಹಾನುಭಾವನು, ಅವನು ಭಗವದ್ಭಕ್ತನು ಎಂಬ ಬುದ್ಧಿಯಿಂದ ಮಹಾ ಭಕ್ತಿಯುಳ್ಳವರು, ಎಂದು ಶಿವಭಕ್ತರ ಸ್ತುತಿಯು) ಪಾಶುಪತಾದಿ ಶಸ್ತ್ರಗಳಲ್ಲಿ ಹೇಳಿದ್ದು ಸತ್ಯವಲ್ಲ (ಸತ್ಯವೆಂದಾದರೆ **ಅಕ್ಷಪಾದಕಣಾದಾನಾಂ** ಎಂಬ ಪ್ರಮಾಣದಲ್ಲಿ ನಿಂದಿಸಿದ್ದು ವಿರುದ್ಧವಾಗುವುದು) (೬) (ಎಲ್ಲಾ ಜ್ಞಾನಿಗಳೂ ಶರೀರಗಳ ಸಮೂಹದಿಂದಲೇ ಫಲವನ್ನು ಪಭೋಗಿಸುತ್ತಾರೆಂಬ ನಿಯಮದಲ್ಲಿಯೂ ಕರ್ಮಗಳನ್ನು ನಾಶಗೊಳಿಸುತ್ತಾರೆಂಬುವುದರಲ್ಲಿಯೂ ಶೈವಪುರಾಣಗಳು ಪ್ರಮಾಣಗಳೆಂದರೆ—) ಶೈವಪುರಾಣಗಳಿಗೂ ಗಾರುಡ ನಾರದೀಯಪುರಾಣ ಮೊದಲಾದ ಗ್ರಂಥಗಳಿಂದ ವಿರುದ್ಧವಾದ ಅರ್ಥದಲ್ಲಿ ಪ್ರಾಮಾಣ್ಯವಿಲ್ಲ ॥ ೨ ॥

ಟೀ—ಶೈವಪುರಾಣಗಳಿಗೂ ಗಾರುಡ ಮೊದಲಾದ ವೈಷ್ಣವಗ್ರಂಥಗಳಿಗೂ ವ್ಯತ್ಯಾಸವೇನು? ಎಂದರೆ—**ಶೈವಾನ್ಪಾಶುಪತಾಚ್ಛಕ್ರೇ,** ಇತ್ಯಾದಿ ಪ್ರಮಾಣಗಳಿಂದ ಶೈವಪುರಾಣಗಳಿಗೆ ದುರ್ಜನರನ್ನು ಮೋಹಿಸುವುದಕ್ಕಾಗಿ ಮಾಡಿದ ಪಾಶುಪತಾದ್ಯಾಗಮಗಳು ಮೂಲಗಳು ಗಾರುಡ ಮೊದಲಾದ ವೈಷ್ಣವ ಗ್ರಂಥಗಳಿಗೆ **ಜ್ಞಾನೇಷ್ವೇತೇಷು ರಾಜೇಂದ್ರ ಸರ್ವೇಷ್ವೇತದ್ವಿಶಿಷ್ಯತೇ । ಯೇ ಚಾನುಯಾಯಿನಸ್ತ್ವೇಷಾಂ ತೇ ಸರ್ವೇ ಚ ಸದಾಗಮಾಃ** ಇತ್ಯಾದಿ ಪ್ರಮಾಣಗಳಿಂದ ಯಥಾರ್ಥಜ್ಞಾನವು ಹುಟ್ಟುವುದಕ್ಕಾಗಿ ಮಾಡಿದ ಪಂಚರಾತ್ರಾದ್ಯಾಗಮಗಳು ಮೂಲಗಳು, ಎಂಬ ಅಭಿಪ್ರಾಯದಿಂದ ಪಾಶುಪತಾದಿ ಶಾಸ್ತ್ರಗಳು ಮೋಹಕಗಳೆಂಬ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ—

**ಭಾ ॥ (೧) ತಥಾ ಹ್ಯುಕ್ತಂ । ಏಷ ಮೋಹಂ ಸೃಜಾಮ್ಯಾಶು ಯೋ ಜನಾನ್ಮೋಹಯಿಷ್ಯತಿ । ತ್ವಂ ಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ ॥ (೨) ಅತ-**

**ಥ್ಯಾನಿ ವಿತಥ್ಯಾನಿ ದರ್ಶಯಸ್ವ ಮಹಾಭುಜ । ಪ್ರಕಾಶಂ ಕುರು ಚಾತ್ಮಾನಮಪ್ರಕಾಶಂ ಚ ಮಾಂ ಕುರ್ವಿತಿ ವಾರಾಹೇ ॥ (೩) ಕುತ್ಸಿತಾನಿ ಚ ಮಿಶ್ರಾಣಿ ರುದ್ರೋ ವಿಷ್ಣುಪ್ರಚೋದಿತಃ । ಚಕಾರ ಶಾಸ್ತ್ರಾಣಿ (ಚ) ವಿಭುಃ ॥ (೪) ಋಷಯಸ್ತತ್ಪ್ರಚೋದಿತಾಃ । ದಧೀಚ್ಯಾದ್ಯಾಃ ಪುರಾಣಾನಿ ತಚ್ಛಾಸ್ತ್ರಸಮಯೇನ ತು । ಚಕ್ರುರ್ವೇದೈಶ್ಚ ಬ್ರಾಹ್ಮಾಣಿ ॥ (೫) ವೈಷ್ಣವಾನ್ವಿಷ್ಣುವೇದತಃ । ಪಂಚರಾತ್ರಂ ಭಾರತಂ ಚ ಮೂಲರಾಮಾಯಣಂ ತಥಾ । ತಥಾ ಪುರಾಣಂ ಭಾಗವತಂ ವಿಷ್ಣುವೇದ ಇತೀರಿತಃ । ಅತಃ ಶೈವಪುರಾಣಾನಿ ಯೋಜ್ಯಾನ್ಯನ್ಯಾವಿರೋಧತ ಇತಿ ನಾರದೀಯೇ ॥ (೬) ಅತೋ ಜ್ಞಾನಿನಾಂ ಭವತ್ಯೇವ ಮುಕ್ತಿಃ ॥ ೩ ॥**

**ಅ** ॥ (೧) ಹಾಗೆಯೇ ಪ್ರಮಾಣವು ಹೇಳಲ್ಪಟ್ಟದೆ ಯಾವ ಮೋಹಕಶಾಸ್ತ್ರವು ಜನರಿಗೆ ಅಜ್ಞಾನ ಭ್ರಮೆ ಮೊದಲಾದುದನ್ನು ಹೊಂದಿಸಿಕೊಡುತ್ತದೋ, ಅಂತಹ ಶಾಸ್ತ್ರವನ್ನು ಮಾಡುತ್ತೇನೆ ರುದ್ರನೇ ನೀನು ಮೋಹಕಶಾಸ್ತ್ರವನ್ನು ನಿರ್ಮಿಸು (ದಧೀಚ್ಯಾದಿ ಋಷಿಗಳಿಂದ ಮಾಡಿಸು) (೨) ಮಹಾಭಕ್ತಕನಾದ ರುದ್ರನೇ, ಆ ಶಾಸ್ತ್ರಗಳಲ್ಲಿ ಅತಥ್ಯಗಳನ್ನು ವಿತಥ್ಯಗಳನ್ನು ಪ್ರತಿಪಾದಿಸು (ಅಂದರೆ ಸಾತ್ವಿಕ ಪುರಾಣಗಳಲ್ಲಿ ಎಲ್ಲಿಯೂ ಹೇಳದಿರುವ ಲಿಂಗಮೂಲಾದಿಗಳ ಹುಡುಕುವಿಕೆ ಮೊದಲಾದುವುಗಳು **ಅತಥ್ಯ**ಗಳು ಶ್ರೀಹರಿಯಲ್ಲಿರತಕ್ಕ ಸರ್ವೋತ್ತಮತ್ವ, ಸರ್ವಸ್ವಾತಂತ್ರ್ಯಾದಿಗಳನ್ನ ಅಥವಾ ವಾಯು ದೇವರಲ್ಲಿರತಕ್ಕ ವಿಷಭಕ್ಷಣಾದಿಗಳನ್ನು ರುದ್ರಾದಿಗಳಲ್ಲಿ ಉಂಟೆಂದು ಹೇಳುವುದು ವಿತಥ್ಯಗಳು) ತನ್ನನ್ನು (ರುದ್ರನನ್ನು) ಪ್ರಸಿದ್ಧಿಪಡಿಸಿಕೊಳ್ಳು ನನ್ನನ್ನು (ಶ್ರೀವಿಷ್ಣುವನ್ನು) ಅಪ್ರಸಿದ್ಧನನ್ನಾಗಿ ಮಾಡು, ಎಂದು ವಾರಾಹಪುರಾಣದಲ್ಲಿದೆ (೩) (ಈಗ ಶೈವಪುರಾಣಗಳು ಮೋಹಕಶಾಸ್ತ್ರಗಳಾದ ಪಾಶುಪತಾದಿಗಳೇ ಮೂಲವಾಗಿ ಉಳ್ಳವುಗಳು ಗಾರುಡಾದಿ ಗ್ರಂಥಗಳು ಪಂಚರಾತ್ರಾದ್ಯಾಗಮಗಳೇ ಮೂಲವಾಗಿ ಉಳ್ಳವುಗಳು, ಎಂಬಲ್ಲಿ ಪ್ರಮಾಣ ಹೇಳುತ್ತಾರೆ) ಸರ್ವ ಸಮರ್ಥರಾದ ರುದ್ರದೇವರು ಶ್ರೀಹರಿಯಿಂದ ಪ್ರೇರೇಪಿಸಿಕೊಳ್ಳಲ್ಪಟ್ಟವರಾಗಿ ನಿಂದ್ಯಗಳೂ (ಕೆಲವು ಕಡೆ ವಿಷ್ಣುಸರ್ವೋತ್ತಮತ್ವ, ಕೆಲವೆಡೆ ರುದ್ರಸರ್ವೋತ್ತಮತ್ವ, ಹೀಗೆ) ಮಿಶ್ರಗಳೂ ಆದ ಶಾಸ್ತ್ರಗಳನ್ನು ಮಾಡಿದರು (೪) ದಧೀಚಿ ಮೊದಲಾದ ಋಷಿಗಳು ರುದ್ರದೇವರಿಂದ ಪ್ರೇರೇಪಿಸಿಕೊಳ್ಳಲ್ಪಟ್ಟವರಾಗಿ ಪಾಶುಪತಶಾಸ್ತ್ರ ಸಿದ್ಧಾಂತವನ್ನನುಸರಿಸಿ, ವೇದಗಳಿಗೆ ಆಪಾತತಃ ತೋರುವ ಅರ್ಥಗಳ ಅನುಸಾರವಾಗಿ ಶೈವಪುರಾಣಗಳನ್ನು, ಹಾಗೆಯೇ ಚತುರ್ಮುಖನಿಗೆ ಸರ್ವೋತ್ತಮತ್ವವನ್ನು ಹೇಳುವ ಬ್ರಹ್ಮಪುರಾಣಗಳನ್ನು ಮಾಡಿದರು. (೫) ವಿಷ್ಣುವೇದದೆಶೆಯಿಂದ ವಿಷ್ಣುವಿಗೆ ಸರ್ವೋತ್ತಮತ್ವವನ್ನು ಹೇಳುವ ಗಾರುಡಾದಿ ವೈಷ್ಣವಪುರಾಣಗಳನ್ನು ಮಾಡಿದರು ಪಂಚರಾತ್ರಾಗಮ, ಭಾರತ, ಮೂಲರಾಮಾಯಣ, ವಿಷ್ಣುಸರ್ವೋತ್ತಮತ್ವವನ್ನ ಹೇಳುವ ಪುರಾಣ ಇವು **ವಿಷ್ಣುವೇದ**ವೆನಿಸುತ್ತವೆ ಆದಕಾರಣ ವೈಷ್ಣವಪುರಾಣಗಳ ವಿರೋಧವು ಬಾರದಿದ್ದಹಾಗೆ ಶೈವ (ಶಿವನಿಗೆ ಸರ್ವೋತ್ತಮತ್ವವನ್ನು ಹೇಳುವ) ಪುರಾಣಗಳಿಗೆ ಅರ್ಥ ಹೇಳಬೇಕು. ಎಂದು ನಾರದೀಯ ಪುರಾಣದಲ್ಲಿದೆ. (೬) ಆದಕಾರಣ ಜ್ಞಾನಿಗಳಿಗೆ ಮೋಕ್ಷವು ನಿಶ್ಚಯವಾಗಿಯೂ ಆಗುತ್ತದೆ (ದೇಹಪಾತದೊಡನೆಯೇ ಮೋಕ್ಷವೆಂಬ ನಿಯಮವಿಲ್ಲ) ॥ ೩ ॥

**ಪೀ**—ಭೀಷ್ಮಾಚಾರ್ಯರೇ ಮೊದಲಾದ ಜ್ಞಾನಿಗಳು ಅಂತಕಾಲದಲ್ಲಿ ಬ್ರಹ್ಮಜ್ಞಾನಿಗಳ ಲಕ್ಷಣ ರೂಪಸ್ಥಿತಿಯಲ್ಲಿ ಇದ್ದರೂ ಮುಕ್ತರಾಗಲಿಲ್ಲ ಆದಕಾರಣ ಅಂತಕಾಲದಲ್ಲಿ ಬ್ರಹ್ಮಜ್ಞಾನಿಗಳ ಲಕ್ಷಣದಲ್ಲಿದ್ದವನು ಬ್ರಹ್ಮನನ್ನು ಹೊಂದುತ್ತಾನೆಂದು ಹೇಳಿದ್ದು ಹೇಗೆ ಕೂಡುತ್ತದೆಂದರೆ—

ಭಾ ॥ (೧) ಭೀಷ್ಮಾದೀನಾಂ ತು ತತ್ಕ್ಷಣೇ ಯುಕ್ತ್ಯಭಾವಃ । ಸ್ಮರಂಸ್ತ್ಯಜತೀತಿ ವರ್ತಮಾನಾಪದೇಶೋ ಹಿ ಕೃತಃ ॥ (೨) ತಚ್ಚೋಕ್ತಂ । ಜ್ಞಾನಿನಾಂ ಕರ್ಮಯುಕ್ತಾನಾಂ ಕಾಯತ್ಯಾಗಕ್ಷಣೋ ಯದಾ । ವಿಷ್ಣುಮಾಯಾ ತದಾ ತೇಷಾಂ ಮನೋ ಬಾಹ್ಯಂ ಕರೋತಿ ಹೀತಿ ಗಾರುಡೇ ॥ (೩) ನ ಚಾನ್ಯೇಷಾಂ ತದಾ ಸ್ಮೃತಿರ್ಭವತಿ । ಬಹುಜನ್ಮವಿಪಾಕೇನ ಭಕ್ತಿಜ್ಞಾನೇನ ಯೋ ಹರಿಂ । ಭಜಂತಿ ತತ್ಸ್ಮೃತಿಂ ತ್ವಂತೇ ದೇವೋ ಯಾತಿ ನ ಚಾನ್ಯಥೇತ್ಯುಕ್ತೇರ್ಬ್ರಹ್ಮವೈವರ್ತೇ ॥ ೪ ॥

ಅ ॥ (೧) ಭೀಷ್ಮಾಚಾರ್ಯರೇ ಮೊದಲಾದವರಿಗೆ ದೇಹವನ್ನು ಬಿಡುವ ಕ್ಷಣದಲ್ಲಿ, ಶ್ರೀಹರಿಯಲ್ಲಿ ಮನಸ್ಸನ್ನಿಡುವಿಕೆಯು ಇರಲಿಲ್ಲ (ಅಂದರೆ ದೇಹಬಿಡುವಕಾಲದಲ್ಲಿ ಭೀಷ್ಮಾದಿಗಳು ಶ್ರೀಹರಿಯಲ್ಲಿ ಮನಸ್ಸನ್ನು ಇಡಲಿಲ್ಲ) (ಅಂತ್ಯಕಾಲದಲ್ಲಿ ಶ್ರೀಹರಿಯಲ್ಲಿ ಮನಸ್ಸನ್ನು ಇಡಬೇಕೆಂಬುವುದು ಹೇಗೆ ಸಿದ್ಧವಾಗುತ್ತದೆಂದರೆ) **ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತಿ** ಎಂಬುವಲ್ಲಿ ಸ್ಮರಣಕ್ಕೂ ದೇಹತ್ಯಾಗಕ್ಕೂ ಒಂದೇ ಕಾಲವು ಆವಶ್ಯಕವೆಂದು ತೋರಿಸುವುದಕ್ಕಾಗಿ **ಸ್ಮರನ್ ತ್ಯಜತಿ** ಎಂದು ವರ್ತಮಾನಾರ್ಥಕ ಶಬ್ದಗಳನ್ನು ಗೀತೆಯಲ್ಲಿ ಪ್ರಯೋಗಿಸಿರುತ್ತಾರೆ (೨) (ಭೀಷ್ಮಾದಿಗಳು ದೇಹವನ್ನು ಬಿಡುವಕಾಲದಲ್ಲಿ ಶ್ರೀಹರಿಯಲ್ಲಿ ಮನಸ್ಸನ್ನ ಇಟ್ಟಿರಲಿಲ್ಲ ಎಂಬುವಲ್ಲಿ ಪ್ರಮಾಣವೇನೆಂದರೆ) ಆ ಪ್ರಮೇಯವು ಗಾರುಡ ಪುರಾಣದಲ್ಲಿ ಹೇಳಲ್ಪಟ್ಟದೆ ಪ್ರಾರಬ್ಧಕರ್ಮವುಳ್ಳ ಜ್ಞಾನಿಗಳಿಗೆ ಶರೀರವನು ಬಿಡುವ ಕ್ಷಣವು ಯಾವಾಗ ಬರುತ್ತದೋ ಆಗ ವಿಷ್ಣುವಿನ ಮಾಯೆಯು ಅವರ ಮನಸ್ಸನ್ನು ಬಾಹ್ಯಪದಾರ್ಥಗಳಲ್ಲಿ ನೆಡುವಂತೆ ಮಾಡುತ್ತದೆ ಎಂದು (೩) (ಶರೀರವನ್ನು ಬಿಡುವಕಾಲದಲ್ಲಿ ಶ್ರೀಹರಿಯಲ್ಲಿ ಮನಸ್ಸನ್ನು ಇಡುವುದರಿಂದ ಮೋಕ್ಷವಾಗುವುದಾದರೆ ಅಜ್ಞಾನಿಗಳಿಗೂ ಮನಃಪ್ರಣಿಧಾನವು ಕೂಡುವುದರಿಂದ ಮೋಕ್ಷವು ಬರಬೇಕಾಗುವುದೆಂದರೆ) ಅಜ್ಞಾನಿಗಳಿಗೆ ದೇಹವನ್ನು ಬಿಡುವ ಕಾಲದಲ್ಲಿ ವಿಷ್ಣುವಿನ ಸ್ಮರಣೆಯು ಬರಲಾರದು ಯಾರು ಬಹು ಜನ್ಮಗಳಲ್ಲಿ ಪರಿಪಕ್ವಗಳಾದ ಭಕ್ತಿ ಜ್ಞಾನಗಳಿಂದ ಶ್ರೀಹರಿಯನ್ನು ಭಜಿಸುತ್ತಾರೋ, ಅವರ ಸ್ಮರಣೆಯನ್ನು ಅಂತ್ಯದಲ್ಲಿ ಶ್ರೀಹರಿಯು ಹೊಂದುತ್ತಾನೆ (ಅಂದರೆ ಭಜಿಸುವವರ ಸ್ಮರಣೆಗೆ ವಿಷಯನಾಗುತ್ತಾನೆ) ಹಾಗೆ ಭಜಿಸದಿರುವವರ ಸ್ಮರಣೆಗೆ ವಿಷಯನಾಗಲಾರನು ಹೀಗೆ ಬ್ರಹ್ಮವೈವರ್ತದಲ್ಲಿ ಹೇಳಿದೆ ॥ ೪ ॥

ಷೀ—ಬ್ರಹ್ಮನಿರ್ವಾಣಂ ಎನ್ನುವುದಕ್ಕೆ ಬ್ರಹ್ಮನಿರ್ವೃತಿಂ ಬ್ರಹ್ಮನ ಸ್ವರೂಪಭೂತವಾದ ಆನಂದವನ್ನು ಎಂದು ಅದ್ವೈತಭಾಷ್ಯದಲ್ಲಿ ಅರ್ಥ ಬರೆದಿರುವರು ಆ ವ್ಯಾಖ್ಯಾನವು (1) **ನ ತೇ ಮಹಿತ್ವಮನ್ವಶ್ನುವಂತಿ,** (2) **ವಿಷ್ಣುಮಾಹಾತ್ಮ್ಯಲೇಶಸ್ಯ** (3) **ನೈಕಾಂಶಸಮಮಾಹಾತ್ಮ್ಯಾಃ** (4) **ಶ್ರೀಶೇಷಬ್ರಹ್ಮಶಂಕರಾಃ** (5) **ತಸ್ಮಾನ್ನ ಮುಕ್ತೋ ನ ಚ ಸಾ ನ ಕ್ವಚಿದ್ವಿಷ್ಣುವೈಭವಂ ಆಪ್ನುವಂತಿ,** (6) **ಲಕ್ಷಣಂ ಪರಮಾನಂದೋವಿಷ್ಣೋರೇವ** ಇದು ಮೊದಲಾದ ಬಹು ಪ್ರಮಾಣಗಳಿಂದ ವಿರುದ್ಧವಾಗಿದೆ, ಎಂಬ ಅಭಿಪ್ರಾಯದಿಂದ **ನಿರ್ವಾಣಂ** ಎಂಬ ಪದಕ್ಕೆ ಅರ್ಥ ಬರೆಯುತ್ತಾರೆ—

ಭಾ ॥ (೧) ನಿರ್ವಾಣಮಶರೀರಂ । ಕಾಯೋ ಬಾಣಂ ಶರೀರಂ ಚೇತ್ಯಭಿಧಾನಾತ್ । ಏತದ್ಬಾಣಮವಷ್ಟಭ್ಯೇತಿ ಪ್ರಯೋಗಾಚ್ಚ ॥ (೨) ನಿರ್ವಾಣಶಬ್ದಪ್ರತಿಪಾದನಮನಿಂದ್ರಿಯಾ ಇತ್ಯಾದಿವತ್ ॥ (೩) ಕಥಮನ್ಯಥಾ ಸರ್ವಪುರಾಣಾದಿಪ್ರಸಿದ್ಧಾಃ ಶ್ರುತಿರ್ಭಗವತ ಉಪಪದ್ಯತೇ ॥ (೪) ನ ಚಾನ್ಯದ್ಭಗವತ ಉತ್ತಮಂ ಬ್ರಹ್ಮ । ಬ್ರಹ್ಮೇತಿ ಪರ·

**ಮಾತ್ಮೇತಿ ಭಗವಾನಿತಿ ಶಬ್ದ್ಯತೇ । (1) ಭಗವಂತಂ ಪರಂಬ್ರಹ್ಮ । (2) ಪರಂಬ್ರಹ್ಮ ಜನಾರ್ದನಃ । (3)ಪರಮಂ ಯೋ ಮಹದ್ಬ್ರಹ್ಮ । (4)ಯಸ್ಮಾತ್ಕ್ಷರಮತೀತೋಽಹ ಮಕ್ಷರಾದಪಿ ಚೋತ್ತಮಃ । (5) ಯೋಽಸಾವತೀಂದ್ರಿಯಗ್ರಾಹ್ಯಃ । (6) ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ । (7) ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋಲೋಕತ್ರಯ ಇತ್ಯಾದಿಭ್ಯಃ** ॥ ೫ ॥

ಅ ॥ ನಿರ್ವಾಣಂ=ಶರೀರವಿಲ್ಲದಿರುವ. (ಈ ಅರ್ಥವು ಹೇಗೆ ಸಿಗುತ್ತದೆಂದರೆ) ಕಾಯಃ, ಬಾ (ವಾ) ಣಂ, ಶರೀರಂ ಈ ಮೂರು ಪದಗಳಿಗೆ ಒಂದೇ ಅರ್ಥವು. ಎಂದು ಕೋಶವಿದೆ. ನಾನು ಈ ಶರೀರ ವನ್ನು ಆಶ್ರಯಿಸಿಕೊಂಡು(ಎಂದು ಷಟ್ಪ್ರಶ್ನೋಪನಿಷತ್ತಿನಲ್ಲಿ ಮುಖ್ಯಪ್ರಾಣನ ವಾಕ್ಯವು )ಇದು ಮೊದಲಾದ ಪ್ರಮಾಣಗಳಿಂದಲೂ **ವಾಣ** ಶಬ್ದವು ಶರೀರವೆಂಬ ಅರ್ಥವನ್ನು ಹೇಳುತ್ತದೆ (ಬ್ರಹ್ಮಶಬ್ದದಿಂದ ಚತುರ್ಮುಖ ಬ್ರಹ್ಮನನ್ನು ಇಟ್ಟುಕೊಳ್ಳಕೂಡದೆಂದು ತೋರಿಸುವುದಕ್ಕಾಗಿ **ನಿರ್ವಾಣಂ** ಎಂಬ ವಿಶೇಷ **ಣವು.**) (೨)**ಅನಿಂದ್ರಿಯಾ ಅನಾಹಾರಾಃ** ಇತ್ಯಾದಿಗಳಲ್ಲಿ ಪ್ರಾಕೃತ ಇಂದ್ರಿಯಾದಿಗಳಿಲ್ಲದವರು ಎಂದು **ಅರ್ಥ ಹೇಳಿದಂತೆಯೇ ನಿರ್ವಾಣಂ** ಎಂಬುವುದಕ್ಕೆ ಪ್ರಾಕೃತವಾದ (ಪಂಚಭೂತಗಳಿಂದ ಹುಟ್ಟಿದ) **ಶರೀರವಿಲ್ಲದವನು** ಎಂದು ತೋರಿಸುವುದಕ್ಕಾಗಿ **ನಿರ್ವಾಣಂ** ಎಂಬ ಶಬ್ದದ ಅರ್ಥ ಹೇಳಿದ್ದು (ಇದ ರಿಂದ ಪರಬ್ರಹ್ಮನು ನಿರಾಕಾರನಲ್ಲವೆಂದು 'ಸಿದ್ಧವಾಯ್ತು) (೩) (ಹೀಗೆ ಅರ್ಥ ಏಕೆ ಹೇಳಬೇಕು. ಬ್ರಹ್ಮನು ನಿರಾಕಾರನೆಂದೇ ಏಕೆ ಹೇಳಬಾರದೆಂದರೆ) ಪಾಂಚಭೌತಿಕ ಶರೀರವಿಲ್ಲ, ಅಪ್ರಾಕೃತ ದಿವ್ಯ ಶರೀರವಿದೆ ಎಂದು ಒಡಂಬಡದಿದ್ದರೆ—**ಶ್ರೀಹರಿಗೆ ಸಜ್ಞಾನಾನಂದದೇಹಶ್ಚ** ಇದು ಮೊದಲಾದ ಸರ್ವ ಪುರಾಣಾದಿಗಳಲ್ಲಿ ಪ್ರಸಿದ್ಧವಾದ ಆಕಾರವು ಹೇಗೆ ಕೂಡುತ್ತದೆ? (೪) (ಶ್ರೀವಿಷ್ಣುವಿಗೆ ಆಕಾರವಿದ್ದರೂ ಪರಬ್ರಹ್ಮನಿಗೆ ಆಕಾರವಿಲ್ಲ ವಿಷ್ಣುವೇ ಪರಬ್ರಹ್ಮನೆಂದು ಹೇಳಕೂಡದು ಬ್ರಹ್ಮನು ವಿಷ್ಣುವಿಗಿಂತ ಉತ್ತಮನಾದುದರಿಂದ ಭಿನ್ನನೇ ಆಗಿರುತ್ತಾನೆ. ಆದಕಾರಣ ಪುರಾಣಾದಿಗಳಲ್ಲಿ ಐಶ್ವರ್ಯಾದಿ ಗುಣ ಗಳುಳ್ಳ ವಿಷ್ಣುವಿಗೆ ಆಕಾರವಿದೆ, ಎಂದು ಹೇಳಿದಕಾರಣ ಪುರಾಣದಿಗಳಿಂದ ವಿರೋಧವಿಲ್ಲ ಎಂದರೆ) ಐಶ್ವರ್ಯಾದಿಗುಣಗಳುಳ್ಳ ಶ್ರೀವಿಷ್ಣುವಿಗಿಂತ ಮತ್ತೊಬ್ಬನು ಉತ್ತಮ ಬ್ರಹ್ಮನಿಲ್ಲ ಬ್ರಹ್ಮ ಪರಮಾತ್ಮ ಭಗವಾನ್ ಈ ಶಬ್ದಗಳಿಂದ ಪರಬ್ರಹ್ಮನೇ ಹೇಳಲ್ಪಡುತ್ತಾನೆಂದು ಭಾಗವತದಲ್ಲಿದೆ (1) ಷಡ್ಗುಣೈ ಶ್ವರ್ಯ ಸಂಪನ್ನನಾದ ಪರಬ್ರಹ್ಮನನ್ನು (2) ಪರಬ್ರಹ್ಮನು ಜನಾರ್ದನನು. (3) ಯಾವನು ಸರ್ವೋ ತ್ತಮನಾದವನು ಮಹದ್ಬ್ರಹ್ಮನೋ, (ಇಷ್ಟು ವಾಕ್ಯಗಳು ಭಗವಂತನಿಗೆ ಬ್ರಹ್ಮತ್ವವನ್ನು ಹೇಳುತ್ತವೆ) ಯಾವಕಾರಣದಿಂದ ನಾನು ಕ್ಷರರಾದ ಬ್ರಹ್ಮಾದಿಗಳಿಗಿಂತ ಮಿಗಿಲಾಗಿರುವೆನೋ, ಅಕ್ಷರಳೆನಿಸಿಕೊಂಡ ಲಕ್ಷ್ಮೀದೇವಿಯಿಂದಲೂ ಉತ್ತಮನೋ, (**ಯಸ್ಮಾತ್** ಇತ್ಯಾದಿ ವಾಕ್ಯಗಳು, ಭಗವಂತನೇ ಸರ್ವೋತ್ತಮ ನಾದುದರಿಂದ ಅವನಿಗಿಂತ ಉತ್ತಮನು ಇನ್ನೊಬ್ಬನಿಲ್ಲ. ಎಂದು ಹೇಳುತ್ತವೆ) ಶ್ರೀಹರಿಯು ಇಂದ್ರಿಯ ಗ್ರಾಹ್ಯವಸ್ತುವನ್ನೇ ಮೀರಿರುವವನು. (ಅಂದರೆ ಇಂದ್ರಿಯಗ್ರಾಹ್ಯ ವಸ್ತುಗಳಿಗಿಂತಲೂ ಉತ್ತಮನು ಎಲ್ಲಾ ವಸ್ತುಗಳೂ ಯೋಗೀಂದ್ರಿಯಗಳಿಂದ ಗ್ರಾಹ್ಯಗಳೇ ಆಗಿವೆ.) ಶ್ರೀ ನಾರಾಯಣನಿಗೆ ಸಮಾನವಾದ ವಸ್ತುವು ಹಿಂದೆ ಇರಲಿಲ್ಲ. ಈಗ ಇಲ್ಲ, ಮುಂದೆ ಇರಲಾರದು. ನಿನಗೆ ಸಮಾನವಾದ ವಸ್ತುವೇ ಇಲ್ಲ ಉತ್ತಮವಾದ ವಸ್ತುವು ಇನ್ನೊಂದು ಹೇಗೆ ಇದ್ದೀತು ಇದು ಮೊದಲಾದ ಪ್ರಮಾಣವಾಕ್ಯಗಳಿಂದ (ಇನ್ನೊಬ್ಬನು ಉತ್ತಮನು ಇಲ್ಲ) ॥ ೫ ॥

**ಟೀ**— ಪರಬ್ರಹ್ಮ(ನಿರ್ಗುಣ)ನು ಉತ್ತಮನಾಗಿರುವುದರಿಂದಲೂ ಈಶ್ವರ (ಸಗುಣ)ನು ಅಧಮನಾಗಿ ರುವುದರಿಂದಲೂ ಬ್ರಹ್ಮೇಶ್ವರರಿಗೆ ಭೇದವೆಂದು ಯಾವುದು ಶಂಕಿತವಾಗಿದೆಯೋ, ಅದು ಇಲ್ಲದೆ ಹೋಗಲಿ

ಬ್ರಹ್ಮನಿಗೆ ಶರೀರವಿಲ್ಲ, ಈಶ್ವರನಿಗೆ ಶರೀರವಿದೆ, ಈ ಕಾರಣದಿಂದ ಭೇದವಿರಬಹುದಷ್ಟೆ. ಅಂತೂ ಪುರಾಣಾದಿಗಳಿಂದ ವಿರೋಧವಿಲ್ಲ. ವಸ್ತುತಃ ಅಭೇದವಿದ್ದ ಪ್ರಯುಕ್ತ ಬ್ರಹ್ಮಶಬ್ದವು ಕೂಡುತ್ತದೆ ಎಂದರೆ—

**ಭಾ ॥ (೧) ನ ಚ ತದ್ಬ್ರಹ್ಮಣೋಽಶರೀರತ್ವಾದೇತತ್ಕಲ್ಪ್ಯಂ । ತಸ್ಯಾಪಿ ಶರೀರಶ್ರವಣಾತ್ । ಆನಂದರೂಪಮಮೃತಂ । ಸುವರ್ಣಜ್ಯೋತಿಃ । ದಹರೋಽಸ್ಮಿನ್ನಂತರ ಆಕಾಶ ಇತ್ಯಾದಿಷು ॥ (೨) ಯದಿ ರೂಪಂ ನ ಸ್ಯಾತ್ । ಆನಂದಮಿತ್ಯೇವ ಸ್ಯಾತ್ । ನ ತ್ವಾನಂದರೂಪಮಿತಿ । ಕಥಂ ಚ ಸುವರ್ಣರೂಪತ್ವಂ ಸ್ಯಾದರೂಪಸ್ಯ ಕಥಂ ದಹರತ್ವಂ ದಹರಶ್ಚ ಕೇಚಿತ್ ಸ್ವದೇಹೇತ್ಯಾದೌ ರೂಪವಾನುಚ್ಯತೇ ॥ (೩) (1) ಸಹಸ್ರಶೀರ್ಷಾ ಪುರುಷಃ । (2) ರುಗ್ಮವರ್ಣಂ ಕರ್ತಾರಂ । (3) ಆದಿತ್ಯವರ್ಣಂ ತಮಸಃ ಪರಸ್ತಾತ್ । (4) ಸರ್ವತಃಪಾಣಿಪಾದಂ ತತ್ । (5) ವಿಶ್ವತಶ್ಚಕ್ಷುರಿತ್ಯಾದಿವಚನಾತ್ ॥೬॥**

ಅ ॥ (೧) ಪರಮತಪ್ರಕಾರ ಬ್ರಹ್ಮನಿಗೆ ಶರೀರವಿಲ್ಲದಿರುವುದರಿಂದ ಬ್ರಹ್ಮನು ಈಶ್ವರನಿಂದ ಬೇರೆಯೆಂದು ಕಲ್ಪಿಸಕೂಡದು (ಏಕೆಂದರೆ) ಆನಂದಸ್ವರೂಪನು ಸುವರ್ಣದಂತೆ ಭಾಸ್ವರ (ಥಳಥಳಿಸುವ) ವರ್ಣವುಳ್ಳ ದೇಹವುಳ್ಳವನು, **ದಹರೋಽಸ್ಮಿನ್ನಂತರಾಕಾಶಃ ತಸ್ಮಿನ್ಯದಂತಸ್ತದನ್ವೇಷ್ಟವ್ಯಂ** ಇದು ಮೊದಲಾದ ಬ್ರಹ್ಮವಿದ್ಯೆಯೆಂದು ಸಮ್ಮತಗಳಾದ ವೇದಾದಿಗಳಲ್ಲಿ ಬ್ರಹ್ಮನಿಗೂ ಶರೀರವಿದೆ ಎಂದು ಪ್ರಸಿದ್ಧವಾಗಿದೆ (೨) (ಇಲ್ಲಿ ಶರೀರವಿದೆ ಎಂದು ಹೇಗೆ ತಿಳಿಯುತ್ತದೆ ಎಂದರೆ-) ಶರೀರವು ಇಲ್ಲವೆಂದಾಗಿದ್ದರೆ—**ಆನಂದಂ** ಎಂದಿಷ್ಟೇ ಹೇಳಬಹುದಿತ್ತು **ಆನಂದರೂಪಂ** ಎಂದು ಹೇಳುತ್ತಿರಲಿಲ್ಲ ರೂಪವು ಇಲ್ಲವೆಂದಾದರೆ—ಸುವರ್ಣದಂತೆ ಭಾಸ್ವರ ರೂಪವೂ ಹೇಗೆ ಕೂಡ ವುದು? ಮತ್ತು ಶರೀರವಿಲ್ಲದವನಿಗೆ ಅಲ್ಪಸ್ಥಾನದಲ್ಲಿ ಸ್ಥಿತಿಯು ಹೇಗೆ ಕೂಡುತ್ತದೆ? ದಹರ (ಅಲ್ಪಸ್ಥಾನ) ದಲ್ಲಿರುವವನು, **ಕೇಚಿತ್ಸ್ವದೇಹಾಂತರ್ಹೃದಯಾವಕಾಶೇ ಪ್ರಾದೇಶಮಾತ್ರಂ ಪುರುಷಂ ವಸಂತಂ । ಚತುರ್ಮುಖಂ ಕಂಜರಥಾಂಗಶಂಖಗದಾಧರಂ ಧಾರಣಯಾ ಸ್ಮರಂತಿ** ಇತ್ಯಾದಿಗಳಲ್ಲಿ ಭಾಗವತದಲ್ಲಿ ದಹರಾಕಾಶದಲ್ಲಿರುವವನು ಶರೀರವುಳ್ಳವನೆಂದು ಹೇಳಲ್ಪಟ್ಟಿರುತ್ತಾನೆ (೩) (ಹೀಗೆ ಸಯುಕ್ತಿಕಗಳಾದ ವಾಕ್ಯಗಳನ್ನು ಹೇಳಿ ಸ್ಪಷ್ಟವಾಕ್ಯಗಳನ್ನು ಹೇಳುತ್ತಾರೆ) (1) ಪರಬ್ರಹ್ಮನು ಸಹಸ್ರ ತಲೆಗಳುಳ್ಳವನು (2) ಚಿನ್ನದಂತೆ ಹೊಳೆಯುವ ದೇಹವುಳ್ಳವನು ಜಗತ್ಕರ್ತನು, (3) ಸೂರ್ಯನಂತೆ ಹೊಳೆಯುವ ದೇಹವುಳ್ಳವನು ಪ್ರಕೃತಿ ಸಂಬಂಧವಿಲ್ಲದವನು, (4) ಸರ್ವತ್ರ ಕೈಕಾಲು ಮೊದಲಾದ ಅವಯವಗಳುಳ್ಳವನು (5) ಎಲ್ಲಿಡೆಯಲ್ಲಿಯೂ ಕಣ್ಣುವುಳ್ಳವನು, ಇದು ಮೊದಲಾದ ವೇದಪ್ರಮಾಣಗಳಿಂದ (ಶರೀರವಿದೆಯೆಂದು ತಿಳಿಯುತ್ತದೆ ॥ ೬ ॥

**ಭಾ ॥ (೧) ವಿಶ್ವರೂಪಾಧ್ಯಾಯಾದೇಶ್ಚ ರೂಪವಾನವಸೀಯತೇ ॥ (೨) ಅತಿಪರಿಪೂರ್ಣತಮಜ್ಞಾನೈಶ್ವರ್ಯವೀರ್ಯಾನಂದಶ್ರೀಶಕ್ತ್ಯಾದಿಮಾಂಶ್ಚ ಭಗವಾನ್ ॥ (೩) (1) ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ॥ (2) ಯಃ ಸರ್ವಜ್ಞಃ ॥ (3) ಆನಂದಂ ಬ್ರಹ್ಮಣಃ ॥ (4) ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ ॥ (5) ಅನಾದಿಮಧ್ಯಾಂತಮನಂತವೀರ್ಯಂ ॥ (6) ಸಹಸ್ರಲಕ್ಷಾಮಿತಕಾಂತಿಕಾಂತಂ ॥ (7) ಯಯ್ಯನಂತಗುಣೇಽನಂತೇ ಗುಣ-**

**ಕೋಽನಂತವಿಗ್ರಹೇ ।** (8) **ವಿಜ್ಞಾನಶಕ್ತಿರಹಮಾಸಮನಂತಶಕ್ತೇಃ ॥** (9) **ತುರ್ಯಂ ತತ್ಸರ್ವದೃಕ್ಸದಾ ॥** (10) **ಆತ್ಮಾನಮನ್ಯಂ ಚ ಸ ವೇದ ವಿದ್ವಾನ್ ॥** (11) **ಅನ್ಯತಮೋ ಮುಕುಂದಾತ್ಕೋ ನಾಮ ಲೋಕೇ ಭಗವತ್ಪದಾರ್ಥಃ॥**(12)**ಐಶ್ವರ್ಯಸ್ಯ ಸಮಗ್ರಸ್ಯ ।** (13) **ಅತೀವ ಪರಿಪೂರ್ಣಂ ತೇ ಸುಖಂ ಜ್ಞಾನಂ ಚ ಸೌಭಗಂ । ಯಚ್ಚಾತ್ಯಯುಕ್ತಂ ಸ್ಮರ್ತುಂ ವಾ ಶಕ್ತ್ಯಾ ಕರ್ತುಮತಃ ಪರ ಇತ್ಯಾದಿಭ್ಯಃ ॥ ೬ ॥**

**ಅ ॥** (೧) ಇದೇ ಗ್ರಂಥದ ೧೧ನೇ ವಿಶ್ವರೂಪಾಧ್ಯಾಯವೇ ಮೊದಲಾದುವುಗಳಿಂದಲೂ ಶ್ರೀಪರಮಾತ್ಮನು ರೂಪಗಳುಳ್ಳವನೆಂದು ನಿಶ್ಚಯವಾಗುತ್ತದೆ (೨) (**ನ ಚಾನ್ಯದ್ಭಗವತಃ ಉತ್ತಮಂ ಬ್ರಹ್ಮ** ಎಂಬುವಲ್ಲಿ ಶ್ರೀಹರಿಯಿಂದ ಮತ್ತೊಬ್ಬನು ಉತ್ತಮನೆಂಬುವುದು **ಬ್ರಹ್ಮೇತಿ ಪರಮಾತ್ಮೇತಿ** ಇದು ಮೊದಲಾದ ಪ್ರಮಾಣಗಳಿಂದ ವಿರುದ್ಧವೆಂದು ಹೇಳಿದೆ ಈಗ ಇನ್ನೊಬ್ಬನು ಉತ್ತಮನೆಂಬುವುದು ವ್ಯಾಹತವೂ ಆಗಿದೆ ಎನ್ನುತ್ತಾರೆ) ನಿರತಿಶಯ ಪರಿಪೂರ್ಣಗಳಾದ ಜ್ಞಾನ, ಸ್ವಾತಂತ್ರ್ಯರೂಪ ವಶಿತ್ವ ಅಥವಾ ಸರ್ವಸ್ವಾಮಿತ್ವ, ಪರಾಕ್ರಮ, ಆನಂದ, ಕಾಂತಿ, ಶಕ್ತಿ ಮೊದಲಾದವುಗಳುಳ್ಳವನು ಭಗವಂತನೆನಿಸುತ್ತಾನೆ (ಅಂತೂ ನಿರತಿಶಯ ಐಶ್ವರ್ಯಾದಿಗಳುಳ್ಳವನು ಭಗವಾನ್ ಎಂಬ ಶಬ್ದದ ಅರ್ಥವು ಅವನೇ ಸರ್ವೋತ್ತಮನು ಭಗವತ್ ಶಬ್ದದಿಂದ ಹೇಳಲ್ಪಡುತ್ತಾನೆಂದು ಒಡಂಬಟ್ಟು ಸರ್ವೋತ್ತಮನೆಂದಂಗೀಕರಿಸದಿದ್ದರೆ ವ್ಯಾಹತಿಯು ಬರುವುದು) (೩) (ಪರಮೇಶ್ವರನಲ್ಲಿ ಈ ಗುಣಗಳು ಸ್ವಾಭಾವಿಕಗಳಾಗಿವೆಂಬುವಲ್ಲಿ ಪ್ರಮಾಣಗಳನ್ನು ಹೇಳುತ್ತಾರೆ) (1) ಶ್ರೀಹರಿಗೆ ನಾನಾ ವಿಧವಾದ ಉತ್ಕೃಷ್ಟವಾದ ಶಕ್ತಿಯು ಸ್ವಾಭಾವಿಕಗಳಾದ ಜ್ಞಾನ ಬಲ ಕ್ರಿಯೆಗಳೂ ಶ್ರುತಗಳಾಗಿವೆ (2) ಯಾವನು ಸಮಸ್ತವನ್ನರಿತವನೋ, (3) ಬ್ರಹ್ಮನಿಗೆ, ವಾಙ್ಮನಸ್ಸುಗಳಿಗೆ ಅಗೋಚರವಾದ ಆನಂದವದೆ ಎಂದು ತಿಳಿದವನು ಮೋಕ್ಷವನ್ನು ಹೊಂದುತ್ತಾನೆ (4) ಶ್ರೀ ಪರಬ್ರಹ್ಮನ ಆನಂದದ ಲೇಶವನ್ನೇ ಬ್ರಹ್ಮಾದಿಗಳೆಲ್ಲರೂ ಉಪಜೀವಿಸಿಕೊಂಡಿರುತ್ತಾರೆ (ಅಂದರೆ ಅವನಿತ್ತ ಸುಖಲೇಶವನ್ನು ಭೋಗಿಸುತ್ತಾ ಅವನ ಆಶ್ರಯದಿಂದಲೇ ಜೀವಿಸುತ್ತಾರೆ) (5) ಶ್ರೀಹರಿಯ ಗುಣಗಳಿಗೆ ಆದಿಯೂ, ಮಧ್ಯವೂ ಅಂತವೂ ಇಲ್ಲ ಶ್ರೀಹರಿಯು ಪರಿಮಿತಿಯಿಲ್ಲದಿರುವ ಸಾಮರ್ಥ್ಯಗಳುಳ್ಳವನು (6) ಸಹಸ್ರ, ಲಕ್ಷ ಅಮಿತ (ಮಿತಿಯಿಲ್ಲದ) ಚಂದ್ರರ ಕಾಂತಿಯಂತೆ ಮನೋಹರನಾದವನು (7) ಸಂಖ್ಯೆಯಿಲ್ಲದ ಗುಣಗಳುಳ್ಳವನು, ಪ್ರತ್ಯೇಕವಾಗಿ ನಿರವಧಿಕ ಗುಣಗಳುಳ್ಳವನು, ಅನಂತಶರೀರಗಳುಳ್ಳವನು, ಇಂತಹ ನನ್ನ ನಾಭಿಯಲ್ಲಿದ್ದ (ಕಮಲದಿಂದ ಚತುರ್ಮುಖನು ಹುಟ್ಟಿದನು.) (ಐಶ್ವರ್ಯ ಮೊದಲಾದ ಅನಂತ ಗುಣಗಳಿವೆಂಬಲ್ಲಿ ಇದು ಪ್ರಮಾಣವು) (8) ಅಪರಿಮಿತ ಶಕ್ತಿಯುಳ್ಳ ಶ್ರೀಹರಿಯ ನಾಭಿಕಮಲದಿಂದ ವಿಜ್ಞಾನಶಕ್ತಿ ಸ್ವರೂಪನಾದ ನಾನು ಹುಟ್ಟಿದೆನು (ಎಂಬ ಬ್ರಹ್ಮನ ವಾಕ್ಯವು ಶ್ರೀಹರಿಗೆ ಅನಂತಶಕ್ತಿಗಳಿವೆ ಎಂಬಲ್ಲಿ ಪ್ರಮಾಣವು.) (9) ತುರೀಯವೆಂಬ ಭಗವದ್ರೂಪವು ಸದಾ ಎಲ್ಲಾ ವಸ್ತುಗಳನ್ನು ಪ್ರತ್ಯಕ್ಷವಾಗಿ ನೋಡಿಕೊಂಡಿದೆ (ಇದು ಸರ್ವವಸ್ತುಗಳ ಜ್ಞಾನವು ಪ್ರತ್ಯಕ್ಷವೆಂಬಲ್ಲಿ ಪ್ರಮಾಣವು) (10) ಸರ್ವಜ್ಞನಾದ ಶ್ರೀಹರಿಯು ತನ್ನನ್ನೂ ಇತರರನ್ನೂ, ತಿಳಿಯುತ್ತಾನೆ. (11) ಮೋಕ್ಷವನ್ನು ಕೊಡತಕ್ಕ ಶ್ರೀಹರಿಯು ಹೊರತು ಬೇರೆ ಯಾರೂ ಲೋಕದಲ್ಲಿ ಭಗವಾನ್ ಎಂಬ ಪದದಿಂದ ಹೇಳಲ್ಪಡತಕ್ಕವರು ಇದ್ದಾರೆ? (12) (ಭಗವಚ್ಛಬ್ದಕ್ಕೆ ಪರಿಪೂರ್ಣಜ್ಞಾನ ಐಶ್ವರ್ಯಾದಿಗಳು ಅರ್ಥವು ಎಂಬಲ್ಲಿ ಪ್ರಮಾಣ ಹೇಳುತ್ತಾರೆ) **ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ । ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ ॥** ಎಂದು (ಇಲ್ಲಿ **ಷಣ್ಣಾಂ** ಎಂಬುದರಿಂದ ಎಲ್ಲಾ ಗುಣಗಳನ್ನು ಇಟ್ಟುಕೊಳ್ಳಬೇಕು ಅಥವಾ ಎಲ್ಲಾ ಗುಣಗಳು ಅವುಗಳಲ್ಲಿಯೇ ಸೇರುತ್ತವೆ ಅವುಗಳುಳ್ಳವನಾದುದರಿಂದ ಅವನೇ ಸರ್ವೋತ್ತಮನು) (13) (ನಿರವಧಿಕೈಶ್ವರ್ಯಾದಿಗಳು ಇವೆ ಎಂಬಲ್ಲಿ ಪ್ರಮಾಣ ಹೇಳುತ್ತಾರೆ.) ನಿನ್ನ ಆನಂದವೂ ಜ್ಞಾನವೂ ಸೌಭ

ಗವೂ (ಅಂದರೆ ಯಾವುದಿದ್ದರೆ ಜನರು ಅಧೀನರಾಗುತ್ತಾರೋ ಅದು ಸೌಭಗವು ಮೂವತ್ತೆರಡು ಲಕ್ಷಣ ಗಳಲ್ಲಿ ಇದೊಂದು) ನಿರವಧಿಕ ಪರಿಪೂರ್ಣವಾಗಿದೆ ನಾನು ಮಾಡುವೆನೆಂದು ಇನ್ನೊಬ್ಬರಿಗೆ ನೆನಸ ಲಿಕ್ಕೂ ಯಾವುದು ಶಕ್ಯವಲ್ಲವೋ ಅಂತಹುದನ್ನು ನೀನು ಮಾಡಲಿಕ್ಕೆ ಸಮರ್ಥನಾಗಿರುತ್ತಿರುತ್ತಿ. ಆದ ಕಾರಣ ನೀನು ಸರ್ವೋತ್ತಮನು, ಇದು ಮೊದಲಾದ ಪ್ರಮಾಣಗಳಿಂದ (ಶ್ರೀಹರಿಗೆ ರೂಪಗಳಿವೆ, ಎಂದು ತಿಳಿಯುತ್ತದೆ) ॥ ೭ ॥

ಟೀ—**ಭಗವಾನ್** ಇತ್ಯಾದಿಗಳಲ್ಲಿ ಮತುಪ ಪ್ರತ್ಯಯಕ್ಕೆ ಗುಣಗಳುಳ್ಳವನೆಂದು ಅರ್ಥವಾಗಿರುವು ದರಿಂದ ಜ್ಞಾನಾದಿಗಳು ಶ್ರೀಹರಿಯಿಂದ ಭಿನ್ನಗಳೆಂದು ತೋರುತ್ತವೆ **ಷಣ್ಣಾಂ** ಇತ್ಯಾದಿಗಳಿಂದ ಪರಸ್ಪರವಾಗಿಯೂ ಗುಣಗಳಿಗೆ ಭೇದವು ತೋರುತ್ತದೆ ಹಾಗೆಯೇ **ಆಕೃತಿರ್ಭಗವತಃ** ಎಂದು ಹೇಳಿದ್ದರಿಂದ ಆಕಾರಕ್ಕೂ ಶ್ರೀಹರಿಗೂ ಭೇದವು ತೋರುತ್ತದೆ ಅವು ಅಯುಕ್ತಗಳೆನ್ನುತ್ತಾರೆ.

**ಭಾ ॥ (೧) ತಾನಿ ಸರ್ವಾಣ್ಯನ್ಯೋನ್ಯಸ್ವರೂಪಾಣಿ ॥(೨)(1)ವಿಜ್ಞಾನಮಾನಂದಂ ಬ್ರಹ್ಮ । (2)ಯಸ್ಯ ಜ್ಞಾನಮಯಂ ತಪಃ ॥ (೩) ಸ ಮಾ ಭಗ ಪ್ರವಿಶ ಸ್ವಾಹಾ । ನ ತಸ್ಯ ಪ್ರಾಕೃತಾ ಮೂರ್ತಿರ್ಮಾಂಸಮೇದೋಽಸ್ಥಿಸಂಭವಾ । ನ ಯೋಗಿತ್ವಾದೀಶ್ವರತ್ವಾತ್ ಸತ್ಯರೂಪಾಚ್ಯುತೋ ವಿಭುಃ । ಸದ್ದೇಹಃ ಸುಖಗಂಧಶ್ಚ ಜ್ಞಾನಭಾಸ್ಸತ್ಪರಾಕ್ರಮಃ । ಜ್ಞಾನಜ್ಞಾನಃ ಸುಖಸುಖಃ ಸ ವಿಷ್ಣುಃ ಪರಮೋಽಕ್ಷರ ಇತಿ ಪೈಂಗಿಖಿಲೇಷು ॥ (೪) ದೇಹೋಽಯಂ ಮೇ ಸದಾನಂದೋ ನಾಯಂ ಪ್ರಕೃತಿನಿರ್ಮಿತಃ । ಪರಿಪೂರ್ಣಶ್ಚ ಸರ್ವತ್ರ ತೇನ ನಾರಾಯಣೋಽಸ್ಮ್ಯಹಮಿತ್ಯಾದಿ ಬ್ರಹ್ಮವೈವರ್ತೇ ॥ ೮ ॥**

ಅ ॥ (೧) ಶ್ರೀಹರಿಯ ಸುಖಜ್ಞಾನ ಮೊದಲಾದವುಗಳೆಲ್ಲವೂ ಪರಸ್ಪರವಾಗಿ ಪ್ರತ್ಯೇಕ ರೂಪಗಳುಳ್ಳ ವುಗಳಲ್ಲ (ಅಂದರೆ ಭಗವತ್ಸ್ವರೂಪಗಳೇ ಸುಖವು ಜ್ಞಾನಸ್ವರೂಪವು ಜ್ಞಾನವು ಸುಖಸ್ವರೂಪವು ಇತ್ಯಾದಿ) (೨) (ಆ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ) (1) ಬ್ರಹ್ಮನು ವಿಜ್ಞಾನಸ್ವರೂಪನು ಆನಂದ ಸ್ವರೂಪನು (2) ಆನಂದವನ್ನು ಬ್ರಹ್ಮ ಎಂದು ತಿಳಿಯಬೇಕು (3) ಬ್ರಹ್ಮನು ಸತ್ಯನು ಜ್ಞಾನ ಸ್ವರೂಪನು ಅನಂತಃ=ದೇಶ ಕಾಲ ಗುಣಗಳಿಂದ ಪೂರ್ಣನು. (4) ಯಾವ ಶ್ರೀಹರಿಯ ಆಲೋಚನ ಕ್ರಿಯೆಯು ಜ್ಞಾನಸ್ವರೂಪವು (ಎಂದು ಭಗವಂತನ ಕ್ರಿಯಾಜ್ಞಾನ ಮೊದಲಾದ ಧರ್ಮಗಳಿಗೆ ಪರಸ್ಪರ ಅಭೇದವನ್ನು ಹೇಳಿದ್ದಾರೆ) (೩) ಭಗ=ಐಶ್ವರ್ಯಾದಿ ಗುಣಗಳೇ (ಗುಣಗಳುಳ್ಳ ಶ್ರೀಹರಿಯೇ) ಅಂತಹ ನೀನು ನನ್ನಲ್ಲಿ ಪ್ರವೇಶಿಸು (ನನಗೆ ಅನುಗ್ರಹಿಸು) (೩) ಶ್ರೀಹರಿಗೆ ಮಾಂಸ ಮೇದಸ್ಸು ಎಲುಬುಗಳಿಂದ ಚೆನ್ನಾಗಿ ಹುಟ್ಟಿದ ಪ್ರಾಕೃತವಾದ ಶರೀರವು ಇಲ್ಲ ಮತ್ತೆ ಅಪ್ರಾಕೃತ ಶರೀರವಿದೆ ಇಂತಹ ಶರೀರವು ಯೋಗ ಪ್ರಭಾವದಿಂದ ಬಂದುದಲ್ಲ ಮತ್ತೆ ಸ್ವಾಭಾವಿಕವಾದ ಐಶ್ವರ್ಯಬಲದಿಂದಲೇ ಸರ್ವದಾ ಇರತಕ್ಕುದು ಪ್ರಾಕೃತ ಶರೀರವಿಲ್ಲದಿರುವುದರಿದಿಂದಲೇ ಸರ್ವತ್ರ ವ್ಯಾಪ್ತನು ನಿರ್ದೋಷ ಗುಣಸ್ವರೂಪ ಶರೀರವಿದ್ದುದರಿಂದ ನಾಶವಿಲ್ಲದವನು, (3) ಅಪ್ರಾಕೃತ ನಿರ್ದೋಷ ದೇಹವುಳ್ಳವನು ಸುಖವನ್ನುಂಟುಮಾಡುವ ಗಂಧವುಳ್ಳವನು, ಜ್ಞಾನಸ್ವರೂಪ ಕಾಂತಿಯುಳ್ಳವನು ನಿರ್ದುಷ್ಟ ಪರಾ ಕ್ರಮವುಳ್ಳವನು. ಅತಿಶಯಿತ ಜ್ಞಾನವುಳ್ಳವನು, ಅತಿಶಯಿತ ಸುಖವುಳ್ಳವನು ಅಂತಹ ವಿಷ್ಣುವು ಸರ್ವೋತ್ತಮನು, ನಾಶವಿಲ್ಲದವನು ಎಂದು ಪೈಂಗಿ ಖಿಲಗ್ರಂಥಗಳಲ್ಲಿದೆ (೪) ನನ್ನ ಶರೀರವು ಸದಾ ಆನಂದಸ್ವರೂಪವು. ಜಡ ಪ್ರಕೃತಿಯಿಂದ ಹುಟ್ಟಿದ್ದಲ್ಲ (ಆದಕಾರಣ ಪ್ರಕೃತಿಕೃತ ದೋಷಗಳಿಲ್ಲ.

ಎಲ್ಲಾ ಕಡೆಗಳಲ್ಲಿಯೂ ಗುಣಪರಿಪೂರ್ಣನೇ ಆಗಿದೆ ದೋಷ ಲೇಶಾದಿಗಳು ಇಲ್ಲದಿರುವುದರಿಂದ ನಾನು ನಾರಾಯಣನೆನ್ನಿಸಿಕೊಂಡಿದ್ದೇನೆ) ಇತ್ಯಾದಿ ವಿಷಯವು ಬ್ರಹ್ಮವೈವರ್ತದಲ್ಲಿದೆ. ॥ ೮ ॥

ಟೀ—ಭಗವಂತನ ರೂಪಕ್ಕೆ ಹಿಂದೆ ಹೇಳಿದ ಪ್ರಕಾರ ನಿರ್ದೋಷತ್ವವೂ ಸರ್ವತ್ರವ್ಯಾಪಿ ಮೊದಲಾದ ಗುಣಪರಿಪೂರ್ಣತ್ವವೂ ಇರುವುದಾದರೆ ಪರಿಚ್ಛಿನ್ನ (ಅಂದರೆ ಕೆಲವು ದೇಶಗಳಲ್ಲಿರುವುದು ಕೆಲವು ಕಾಲಗಳಲ್ಲಿರುವುದು) ಎಂಬುವುದು ಹೇಗೆ ಕೂಡುತ್ತದೆ ಮತ್ತೆ ಭಗವಂತನಲ್ಲಿ ಕಾಣತಕ್ಕ ಗರ್ಭವಾಸ ಮೊದಲಾದ ಸಂಸಾರಿ ಧರ್ಮಗಳೂ ಹೇಗೆ ಕೂಡುತ್ತವೆ? ಎಂದರೆ—

ಭಾ ॥ (೧) ತದೇವ ಲೀಲಯಾ ಚಾಸೌ ಪರಿಚ್ಛಿನ್ನಾದಿರೂಪೇಣ ದರ್ಶಯತಿ ಮಾಯಯಾ ॥ (೨) ನ ಚ ಗರ್ಭೇಽವಸದ್ದೇವ್ಯಾ ನ ಚಾಪಿ ವಸುದೇವತಃ । ನ ಚಾಪಿ ರಾಘವಾಜ್ಜಾತೋ ನ ಚಾಪಿ ಜಮದಗ್ನಿತಃ । ನಿತ್ಯಾನಂದೋಽದ್ವಯೋಽಪ್ಯೇವಂ ಕ್ರೀಡತೇ ಮೋಹದರ್ಶನ ಇತಿ ಪಾದ್ಮೇ ॥ (೩) ನ ವೈ ಸ ಆತ್ಮಾಽಽತ್ಮವತಾಮಧೀಶ್ವರೋ ಭುಂಕ್ತೇ ಹಿ ದುಃಖಂ ಭಗವಾನ್ವಾಸುದೇವಃ ॥ (೪) ಸರ್ಗಾದೇರೀಶಿತಾಽಜಃ ಪರಮಸುಖನಿಧಿರ್ಬೋಧರೂಪೋಽಪ್ಯಬೋಧಂ ಲೋಕಾನಾಂ ದರ್ಶಯನ್ಯೋ ಮುನಿಸುತವಿಹೃತಾತ್ಮಪ್ರಿಯಾರ್ಥೇ ಜಗಾಮ ॥ (೫) ಸ ಬ್ರಹ್ಮವಂದ್ಯಚರಣೋ ನರವತ್ಸಲಾಪೀ ಸ್ತ್ರೀಸಂಗಿನಾಮಿತಿ ರತಿಂ ಪ್ರಥಯಂಶ್ಚಚಾರ । ಪೂರ್ಣೇರಚಿಂತ್ಯವೀರ್ಯೋ ಯೋ ಯಶ್ಚ ದಾಶರಥಿಃ ಸ್ವಯಂ । ರುದ್ರವಾಕ್ಯಮೃತಂ ಕರ್ತುಮಜಿತೋ ಜಿತವತ್ಸ್ಥಿತಃ । ಯೋಽಜಿತೋ ವಿಜಿತೋ ಭಕ್ತ್ಯಾ ಗಾಂಗೇಯಂ ನ ಜಘಾನ ಹ । ನ ಚಾಂಬಾಂ ಗ್ರಾಹಯಾಮಾಸ ಕರುಣಃ ಕೋಽಪರಸ್ತತ ಇತ್ಯಾದಿಭ್ಯಶ್ಚ ಸ್ಕಾಂದೇ ॥ ೯ ॥

ಅ ॥ (೧) ಶ್ರೀಹರಿಯು ನಿರ್ದೋಷವೂ ಗುಣಪರಿಪೂರ್ಣವೂ ಆದ ತನ್ನ ಶರೀರವನ್ನೇ ಕ್ರೀಡೆಯಿಂದಲೇ ಪರಿಚ್ಛಿನ್ನ ಸ್ವರೂಪವನ್ನು ತನ್ನ ಗರ್ಭವಾಸಾದಿ ಧರ್ಮಗಳನ್ನು ಅಜ್ಞ ಜನರ ವ್ಯಾಮೋಹಕ್ಕಾಗಿ ತೋರಿಸುತ್ತಾನೆ (೨) (ಈ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ) ಶ್ರೀಹರಿಯು ದೇವಕೀದೇವಿಯ ಗರ್ಭದಲ್ಲಿ ಆವಾಸವಮಾಡಲಿಲ್ಲ ಶ್ರೀ ಹರಿಯು ವಸುದೇವನಿಂದಲೂ ದಶರಥನಿಂದಲೂ, ಜಮದಗ್ನಿ ಋಷಿಯಿಂದಲೂ ಹುಟ್ಟಿದವನಲ್ಲ ನಿತ್ಯದಲ್ಲಿಯೂ ಆನಂದಸ್ವರೂಪನು ನಾಲ್ಕು ವಿಧ ನಾಶಗಳಿಲ್ಲದವನು. ಇಂತಹ ಶ್ರೀಹರಿಯು ಗರ್ಭವಾಸಾದಿಗಳನ್ನು ತೋರಿಸಿ ಅಜ್ಞ ಜನರಿಗೆ ಭ್ರಾಂತಿಯನ್ನು ಹುಟ್ಟಿಸುತ್ತಾ ಕ್ರೀಡಿಸುತ್ತಾನೆ, ಎಂದು ಪಾದ್ಮಪುರಾಣದಲ್ಲಿದೆ. (೩) ಏಕಾಂತ ಭಕ್ತರಿಗೆ ನಿರುಪಾಧಿಕ ಪ್ರಿಯನೂ, ಸರ್ವೇಶ್ವರನೂ ಷಡ್ಗುಣಪೂರ್ಣನೂ ಆದ ವಾಸುದೇವನು ದುಃಖವನ್ನು ಅನುಭವಿಸುವುದೇ ಇಲ್ಲ. (೪) ಸೃಷ್ಟಿ ಮೊದಲಾದವುಗಳನ್ನು ಮಾಡುವವನೂ ಸರ್ವಸ್ವಾಮಿಯೂ, ಜನನವಿಲ್ಲದವನೂ, ಪರಿಪೂರ್ಣಸುಖಾಶ್ರಯನೂ, ಆದ ಯಾವ ಶ್ರೀರಾಮನು ಜ್ಞಾನಸ್ವರೂಪನಾದಾಗ್ಯೂ ಜನರಿಗೆ ಅಜ್ಞಾನವನ್ನು ತೋರಿಸುತ್ತಾ ರಾವಣನಿಂದ ಅಪಹೃತಳಾದ ತನ್ನ ಪ್ರಿಯಳಾದ ಸೀತಾದೇವಿಗಾಗಿ ಕಾಡಿಗೆ ಹೊರಟುಹೋದನು ಚತುರ್ಮುಖನಿಂದ ನಮಸ್ಕರಿಸಲ್ಪಟ್ಟ ಪಾದಗಳುಳ್ಳ ಶ್ರೀರಾಮದೇವರು ಜನರನ್ನು ಮೋಹಗೊಳಿಸುವುದಕ್ಕಾಗಿ ಸ್ತ್ರೀಲಂಪಟರಿಗೆ ಆಗುವ ಪರಸ್ಪರ ಪ್ರೀತಿಯನ್ನು ಪ್ರಸಿದ್ಧಿಗೊಳಿಸುವವರಾಗಿ ಸಂಚರಿಸುತ್ತಿದ್ದರು (೫) ಯಾವ ಪರಶುರಾಮನು ಗುಣಪರಿಪೂರ್ಣನಾದುದರಿಂದ ಅಚಿಂತ್ಯ ಪರಾಕ್ರಮವುಳ್ಳವನೋ, ಯಾವನು ದಶರಥನ ಪುತ್ರನಾದ ಶ್ರೀರಾಮನೋ, ಅವನು ಸಾಕ್ಷಾತ್ ಪರಶುರಾಮನೇ

ರುದ್ರನ ಮಾತನ್ನು ಸತ್ಯವನ್ನಾಗಿ ಮಾಡುವುದಕ್ಕಾಗಿ ಪರಶುರಾಮದೇವರು ಪರಾಜಿತನಾಗದಿದ್ದರೂ ಪರಾಜಯವನ್ನು ಹೊಂದಿದವರಂತೆ ತೋರಿಸಿದರು ಅಥವಾ ಗುಣಪೂರ್ಣರಾದುದರಿಂದ ಅಚಿಂತ್ಯಪರಾಕ್ರಮವುಳ್ಳ ಶ್ರೀರಾಮದೇವರು ಭಕ್ತನ ಮಾತನ್ನು ಸತ್ಯವನಾಗಿ ಮಾಡುವುದಕ್ಕಾಗಿ ಪರಾಜಿತರಾಗದಿದ್ದರೂ ಪರಾಜಿತರಂತೆ ತೋರಿಸಿದರು ಯಾವ ಪರಶುರಾಮದೇವರು (ಭೀಷ್ಮಾಚಾರ್ಯರಿಂದ) ಪರಾಜಿತರಾಗದಿದ್ದರೂ ಭಕ್ತಿಗೆ ಸೋತು ಮೆಚ್ಚಿದವರಾಗಿ ಗಂಗಾಪುತ್ರರಾದ ಭೀಷ್ಮಾಚಾರ್ಯರನ್ನು ಕೊಲ್ಲಲಿಲ್ಲವೋ ಅಂಬಾದೇವಿಯನ್ನು ಪಾಣಿಗ್ರಹಣಮಾಡಿಸಲಿಲ್ಲವೋ ಅವರಿಗಿಂತ ದಯೆಯುಳ್ಳವನು ಇನ್ನೊಬ್ಬನು ಯಾವನಿರುವನು? ಇತ್ಯಾದಿ ವಿಷಯವು ಸ್ಕಾಂದಪುರಾಣದಲ್ಲಿದೆ

ಟಿ || ಪುರಾಽತುಲೋ ನಾಮ ಮಹಾಸುರೋಽಭವದ್ವರಾತ್ಸ ತು ಬ್ರಹ್ಮಣ ಅಪ ಲೋಕತಾಂ ಎಂದು ತಾತ್ಪರ್ಯನಿರ್ಣಯದಲ್ಲಿ ಅತುಲನೆಂಬ ಅಸುರನಿಗೆ ಬ್ರಹ್ಮನ ವರವೆಂದು ಹೇಳಿದ್ದಾಗ್ಯೂ ಈ ವಾಕ್ಯಬಲದಿಂದ ಆತನಿಗೆ ಬ್ರಹ್ಮನ ವರವಿದ್ದಂತೆ ರುದ್ರನ ವರವೂ ಇದೆ ಎಂದು, ತಿಳಿಯಬೇಕು ಅಥವಾ ರುದ್ರನ ವರವನ್ನೇ ಬ್ರಹ್ಮನು ಅನುವಾದ ಮಾಡಿದ್ದೆಂದು ತಿಳಿಯಬೇಕು || ೯ ||

ಭಾ || (೧) ನ ತತ್ರ ಸಂಸಾರಸಮಾನಧರ್ಮಾ ನಿರೂಪ್ಯಾಃ || (೨) ಯತ್ರ ಚ ಪರಾವರಭೇದೋಽವಗಮ್ಯತೇ | ತತ್ರಾಜ್ಞಬುದ್ಧಿಮಪೇಕ್ಷ್ಯಾವರತ್ವಂ | ವಿಶ್ವರೂಪಮಪೇಕ್ಷ್ಯಾನ್ಯತ್ರ || (೩) ತಚ್ಚೋಕ್ತಂ | ಪರಿಪೂರ್ಣಾನಿ ರೂಪಾಣಿ ಸಮಾನ್ಯಖಿಲರೂಪತಃ | ತಥಾಽಪ್ಯಪೇಕ್ಷ್ಯ ಮಂದಾನಾಂ ದೃಷ್ಟಿಂ ತ್ವಾವೃಷಯೋಽಪಿ ತು | ಪರಾವರಂ ವದಂತ್ಯೇವಂ ಹ್ಯಭಕ್ತಾನಾಂ ವಿಮೋಹನಮಿತಿ ಗಾರುಡೇ || (೪) ನ ಚಾತ್ರ ಕಿಂಚಿದುಪಚರಿತಾದಿ ವಾಚ್ಯಂ | ಅಚಿಂತ್ಯಶಕ್ತೇಃ ಪದಾರ್ಥವೈಚಿತ್ರ್ಯಚ್ಚೇತ್ಯುಕ್ತಂ || (೫) ಕೃಷ್ಣರಾಮಾದಿರೂಪಾಣಿ ಪರಿಪೂರ್ಣಾನಿ ಸರ್ವದಾ | ನ ಚಾಣುಮಾತ್ರಂ ಭಿನ್ನಾನಿ ತಥಾಽಪ್ಯಸ್ಮಾನ್ವಿಮೋಹಸೀತ್ಯಾದೇಶ್ಚ ನಾರದೀಯೇ || (೬) ತಸ್ಮಾತ್ಸರ್ವದಾ ಸರ್ವರೂಪೇಷ್ವಪರಿಗಣಿತಾನಂತಗುಣಗಣಂ ನಿತ್ಯನಿರಸ್ತಾಶೇಷದೋಷಂ ಚ ನಾರಾಯಣಾಖ್ಯಂ ಪರಂ ಬ್ರಹ್ಮಾಪರೋಕ್ಷಜ್ಞಾನ್ಯಚ್ಛತೀತಿಚಸಿದ್ಧಂ || ೧೦ || || ೬೨ ||

ಅ || (೧) ನಿರ್ದೋಷವೂ ಗುಣಪರಿಪೂರ್ಣವೂ ಆದ ಭಗವದ್ರೂಪದಲ್ಲಿ ಸಂಸಾರಸಮಾನಧರ್ಮಗಳಿವೆ ಎಂದು ಹೇಳಕೂಡದು (೨) (ಹೀಗಾದರೆ - ವಿಶ್ವರೂಪವು ಉತ್ತಮವು ವಿಶ್ವರೂಪಕ್ಕಿಂತ ಕೃಷ್ಣರಾಮಾದಿರೂಪಗಳು ನಿಕೃಷ್ಟಗಳೆಂದು ಕೆಲವು ಗ್ರಂಥಗಳಲ್ಲಿ ಹೇಳಲ್ಪಡುವುದು ಹೇಗೆ ಎಂದರೆ- ) ಯಾವ ಗ್ರಂಥದಿಂದ ಭಗವದ್ರೂಪಗಳಲ್ಲಿ ಉತ್ಕೃಷ್ಟ ನಿಕೃಷ್ಟವೆಂದು ಭೇದವು ತಿಳಿಯಲ್ಪಡುತ್ತದೋ, ಆ ಗ್ರಂಥದಲ್ಲಿ ವಿಶ್ವರೂಪಕ್ಕಿಂತ ಬೇರೆಯಾದ ಕೃಷ್ಣಾದಿರೂಪಗಳು ನಿಕೃಷ್ಟಗಳೆಂದು ಹೇಳಿದ್ದು, ಅಜ್ಞರು ಹೀಗೆ ಹೇಳುತ್ತಾರೆಂಬ ಅಭಿಪ್ರಾಯದಿಂದ ಎಂದು ತಿಳಿಯಬೇಕು (೩) ಈ ಪ್ರಮೇಯವು ಸ್ಪಷ್ಟವಾಗಿ ಹೇಳಲ್ಪಟ್ಟಿದೆ ಗುಣಪರಿಪೂರ್ಣಗಳಾದ ಭಗವದ್ರೂಪಗಳು ಎಲ್ಲಾ ಧರ್ಮಗಳಿಂದ ಸಮಗಳಾಗಿವೆ ಆದರೂ ಅಜ್ಞರು ಹೇಳುತ್ತಾರೆಂಬ ಅಭಿಪ್ರಾಯದಿಂದ ನಿನ್ನನ್ನು ಋಷಿಗಳು ಕೂಡ ಅಭಕ್ತರನ್ನು ಮೋಹಗೊಳಿಸುವುದಕ್ಕಾಗಿ ಸರ್ವೋತ್ಕೃಷ್ಟರೂಪ, ನಿಕೃಷ್ಟರೂಪವುಳ್ಳವವನ್ನಾಗಿ ಹೇಳುತ್ತಾರೆ, ಎಂದು ಗಾರುಡದಲ್ಲಿದೆ (೪) (ಪರಿಪೂರ್ಣಾನಿರೂಪಾಣಿ ಎಂಬ ವಚನವು, ಅಮುಖ್ಯವು ಅಥವಾ ಸ್ತುತಿಯು, ಎಂದೇಕೆ ಆಗಲಾರದೆಂದರೆ) ಇಲ್ಲಿ ಯಾವುದೊಂದೂ ಅಮುಖ್ಯ ಪ್ರಯೋಗದಿಂದ ಎಂದು ಹೇಳಕೂಡದು. ಏಕೆಂದರೆ ಶ್ರೀಹರಿ

ಯಲ್ಲಿ ಅಚಿಂತ್ಯಶಕ್ತಿಯಿದೆ. ಪದಾರ್ಥಗಳಲ್ಲಿ ವೈಚಿತ್ರ್ಯವೂ, (ತಾರತಮ್ಯವೂ) ಇದೆ, ಎಂದುಕ ವಾಗಿದೆ. (ಅಂದರೆ—ಸರ್ವಥಾ ಕೂಡದಿದ್ದರೇನೇ, ಅಮುಖ್ಯ ಪ್ರಯೋಗವೆಂದಾಗಲೀ ಸ್ತುತಿಯೆಂದಾಗಲೀ ಕಲ್ಪಿಸ ಬಹುದು ಪ್ರಕೃತದಲ್ಲಿ ಶ್ರೀಹರಿಗೆ ಅಚಿಂತ್ಯಶಕ್ತಿಯಿದ್ದುದರಿಂದ ಒಬ್ಬನಿಗೇನೇ ಅನೇಕಪರಿಮಾಣ ದಿಗಳೂ ಕೂಡುತ್ತವೆ ) (೫) (ಈ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ ) ಕೃಷ್ಣ ರಾಮ ಮೊದಲಾದ ರೂಪಗಳು ಸರ್ವದಾ ಪರಿಪೂರ್ಣಗಳಾಗಿವೆ ಆ ರೂಪಗಳಿಗೆ ಅತ್ಯಲ್ಪಭೇದವೂ ಇಲ್ಲ ಆದರೂ ನಮ್ಮನ್ನು ಮೋಹಗೊಳಿಸುತ್ತಿ ಇತ್ಯಾದಿ ಪ್ರಮೇಯವು ನಾರದೀಯ ಪುರಾಣದಲ್ಲಿದೆ (೫) ಆದುದ ರಿಂದ ಸರ್ವದಾ ಎಲ್ಲಾ ರೂಪಗಳಲ್ಲಿ ಗಣನೆಯಿಲ್ಲದ ಅನಂತಾನಂತ ಗುಣಗಳ ಸಮೂಹವಿರುವ ನಿತ್ಯದಲ್ಲಿಯೂ ಎಲ್ಲಾ ದೋಷಗಳ ಸಂಪರ್ಕವೇ ಇಲ್ಲದಿರುವ, ನಾರಾಯಣನೆಂಬ ಪರಬ್ರಹ್ಮನನ್ನು ಅಪ ರೋಕ್ಷಜ್ಞಾನಿಯು ಹೊಂದುತ್ತಾನೆಂದು ಸಿದ್ಧವಾಯ್ತು ಅಂದರೆ ಮೂಲರೂಪದಂತೆ ಎಲ್ಲಾ ಅವತಾರ ರೂಪ ಗಳೂ ಗುಣಪರಿಪೂರ್ಣಗಳೆಂದೇ ತಿಳಿದು ಮುಕ್ತನಾಗುತ್ತಾನೆ || ೧೦, ೭೨ ||

**ಭಾ || ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾ ಭಾಷ್ಯೇ ದ್ವಿತೀಯೋಽಧ್ಯಾಯಃ || ೨ ||**

**ಅ ||** ಹೀಗೆ ಶ್ರೀಮದಾನಂದ ತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾ ಭಾಷ್ಯದಲ್ಲಿ ಎರಡನೇ ಅಧ್ಯಾಯವು ಮುಗಿಯಿತು || ೨ ||

**ಪೀ—**ಬ್ರಾಹ್ಮೀ ಎಂಬುವಕ್ಕೆ ಬ್ರಹ್ಮನ ಧರ್ಮಭೂತವಾದುದೆಂದು ಅರ್ಥವಲ್ಲವೆನ್ನುತ್ತಾರೆ—

**ತಾ || (೧) ಬ್ರಾಹ್ಮೀ ಬ್ರಹ್ಮವಿಷಯಾ || (೨) ಜ್ಞಾನಿನಾಮಪ್ಯಂತಕಾಲೇಽನ್ಯಮನಸಾಂ ಪ್ರಾರಬ್ಧಕರ್ಮಭಾವಾಜ್ಜನ್ಮಾಂತರಂ | ಪ್ರಾರಬ್ಧಕರ್ಮನಾಶಕಾಲೇ ನಿಯಮೇನ ಭಗವತ್ಸ್ಮೃತಿರ್ಭವತಿ | ತತೋ ಮೋಕ್ಷಶ್ಚ || (೩) ಯಂ ಯಂ ವಾಽಪಿ ಸ್ಮರನ್ಭಾವ- ಮಿತಿ ಹಿ ವಕ್ಷ್ಯತಿ || (೪) ಬಾಣಂ ಶರೀರಂ | ಅಭಾವಾಜ್ಜಡದೇಹಸ್ಯ ವಿಷ್ಣುರ್ನಿ- ರ್ವಾಣ ಉಚ್ಯತೇ | ಭಿನ್ನದೇಹಾಭಾವತೋ ವಾ ಸ ಸಹಸ್ರಶಿರಾ ಅಪೀತಿ ಚ ||೭೨||**

**ಅ ||** (೧) ಬ್ರಾಹ್ಮೀ=ಪರಬ್ರಹ್ಮವಿಷಯಕವಾದುದು, (೨) (**ಕ್ಷೀಯಂತೇ ಚಾಸ್ಯ ಕರ್ಮಾಣಿ** ಇತ್ಯಾದಿ ಪ್ರಮಾಣಗಳಿಂದ ಜ್ಞಾನಮಾತ್ರದಿಂದಲೇ ಸಮಸ್ತ ಕರ್ಮಗಳಿಗೂ ನಾಶವು ಬರುವುದರಿಂದ ಜ್ಞಾನವು ಬಂದೊಡನೆಯೇ ಮೋಕ್ಷವು ಸಿಗುವುದರಿಂದ ಸ್ಥಿತ್ವಾಽಸ್ಯಾಂ ಎಂದು ಅಂತಕಾಲದಲ್ಲಿ ಬ್ರಹ್ಮ ಪ್ರಾಪ್ತಿಗಾಗಿ ಶ್ರೀಹರಿಯ ಸ್ಮರಣಾದಿಗಳು ಬೇಕೆಂದದ್ದು ಏತಕ್ಕೆಂದರೆ) ಜ್ಞಾನಿಗಳು ಅಂತಕಾಲದಲ್ಲಿ ಅನ್ಯ ಮನಸ್ಕರಾಗಿದ್ದರೆ ಅವರಿಗೆ ಪ್ರಾರಬ್ಧಕರ್ಮವು ಇರುವುದರಿಂದ ಜನ್ಮಾಂತರವು ಬರುವುದು ಪ್ರಾರಬ್ಧ ಕರ್ಮವು ನಾಶವಾಗುವ ಕಾಲದಲ್ಲಿ ನಿಯಮವಾಗಿ ಶ್ರೀಹರಿಯ ಸ್ಮರಣೆಯು ಬರುತ್ತದೆ ಆ ಮೇಲೆ ಮೋಕ್ಷವುಂಟಾಗುತ್ತದೆ (೩) ಈ ವಿಷಯವನ್ನೇ **ಯಂ ಯಂ ವಾಽಪಿ ಸ್ಮರನ್ ಭಾವಂ** ಎಂದು ಮುಂದೆ ಹೇಳುವರು. (೪) ಬಾಣಂ=ಶರೀರವು. ಜಡಶರೀರವು ಇಲ್ಲದಿರುವುದರಿಂದ ಅಥವಾ ತನ್ನ ಸ್ವರೂಪದಿಂದ ಭಿನ್ನವಾದ ದೇಹವು ಇಲ್ಲದಿರುವುದರಿಂದ ವಿಷ್ಣುವು ನಿರ್ವಾಣನೆನಿಸುತ್ತಾನೆ ಶ್ರೀಹರಿಯು ಸಹಸ್ರ ಶಿರಸ್ಸುಳ್ಳವನೂ ಆಗಿರುತ್ತಾನೆ, ಎಂದು

**ವಿ ||** (1) ಜ್ಞಾನಿಗಳಿಗೂ ಅಂತಕಾಲದಲ್ಲಿ ಶ್ರೀಹರಿಯ ಸ್ಮರಣಾದಿಗಳು ಇಲ್ಲವಾದರೆ ಜನ್ಮಾಂತರವೇ ಬರುತ್ತದೆ. ಪರಬ್ರಹ್ಮಪ್ರಾಪ್ತಿಯಾಗುವುದಿಲ್ಲ. ಅದಕ್ಕಾಗಿ ಅಂತಕಾಲದಲ್ಲಿ ಶ್ರೀಹರಿಯ ಸ್ಮರಣಾದಿಗಳು

ಆವಶ್ಯಕಗಳಿನ್ನ ಬೇಕು. ಹಾಗಾದರೆ- ಜ್ಞಾನಿಗಳಿಗೆ ಕರ್ಮಗಳು ನಷ್ಟಗಳಾಗಿರುವುದರಿಂದ ಜನ್ಮಾಂತರವೇ ಕೂಡಲಾರದೆಂದು ಹೇಳಕೂಡದು ಜ್ಞಾನಮಾತ್ರದಿಂದ ಅಪ್ರಾರಬ್ಧಕರ್ಮಗಳು ನಷ್ಟಗಳಾದಾಗ್ಯೂ ಅಂತಕಾಲದಲ್ಲಿಯೂ ಶ್ರೀಹರಿಯ ಸ್ಮರಣೆಯು ಯಾರಿಗೆ ಬರುವುದಿಲ್ಲವೋ, ಅವರಿಗೆ ಪ್ರಾರಬ್ಧಕರ್ಮವಿದೆ. (2) ಮೋಕ್ಷಕ್ಕಾಗಿ ಅಂತಕಾಲದಲ್ಲಿ ಶ್ರೀಹರಿಯ ಸ್ಮರಣಾದಿಗಳು ಆವಶ್ಯಕಗಳೆಂದಾದರೆ—ಅವುಗಳನ್ನು ಯಾರಿಗೂ ಮಾಡಲು ಸಾಧ್ಯವಿಲ್ಲದಿರುವುದರಿಂದ ಯಾರಿಗೂ ಮೋಕ್ಷವೇ ಇಲ್ಲವೆಂದಾಗುವುದು ಆದ ಕಾರಣ ಅಂತಕಾಲದಲ್ಲಿ ಸ್ಮರಣವು ಆವಶ್ಯಕವೇ ಎಂಬುದು ವೇದವ್ಯಾಸರಿಗೆ ಸಮ್ಮತವಲ್ಲ ಎಂದರೆ— ಮೋಕ್ಷಕ್ಕಾಗಿ ಅಂತ್ಯಕಾಲದ ಸ್ಮರಣವು ಆವಶ್ಯಕವೆಂದು ಹೇಳಿದರೆ ಯಾರಿಗೂ ಮೋಕ್ಷವೇ ಇಲ್ಲವೆಂದಾಗಬೇಕಾಗುವುದು ಎಂದಲ್ಲ ಪ್ರಾರಬ್ಧ ಕರ್ಮವೇ ಅಂತಕಾಲದಲ್ಲಿ ಶ್ರೀಹರಿಯ ಸ್ಮರಣೆಗೆ ಪ್ರತಿಬಂಧಕವು ಪ್ರಾರಬ್ಧಕರ್ಮವು ನಾಶವಾದರೆ ಅಂತಕಾಲದಲ್ಲಿ ಸ್ಮರಣವು ಬಂದೇ ಬರುತ್ತದೆ ಸ್ಮರಣವು ಬಂದರೆ ಮೋಕ್ಷವು ನಿಶ್ಚಿತವು ॥ ೭೨ ॥

**ಸಾರಾಂಶ** — **ನ ತ್ವೇವಾಹಂ** ಎಂದಾರಂಭಿಸಿ **ಏಷಾ ತೇಽಭಿಹಿತಾ ಸಾಂಖ್ಯೇ** ಎಂಬ ಪರ್ಯಂತ ಜೀವೇಶ್ವರರ ಸ್ವರೂಪವನ್ನು ಹೇಳಿ, ಜೀವೇಶ್ವರರ ಜ್ಞಾನೋಪಾಯವನ್ನು **ಯೋಗೇ ತ್ವಿಮಾಂ ಶೃಣು** ಎಂದು ಪ್ರತಿಜ್ಞೆಮಾಡಿ **ತ್ರೈಗುಣ್ಯವಿಷಯಾ ವೇದಾಃ** ಇತ್ಯಾದಿಗಳಿಂದ ಹೇಳಿ **ಕರ್ಮಜಂ ಬುದ್ಧಿ ಯುಕ್ತಾ ಹಿ** ಇತ್ಯಾದಿಗಳಿಂದ ಅದನ್ನು ಸ್ವಲ್ಪ ವಿವರಿಸಿದರು

**ತಾ ॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾ ತಾತ್ಪರ್ಯನಿರ್ಣಯೇ ದ್ವಿತೀಯೋಽಧ್ಯಾಯಃ ॥ ೨ ॥**

**ಅ** ॥ ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಮಾಡಿದ ಗೀತಾ ತಾತ್ಪರ್ಯದಲ್ಲಿ ಎರಡನೇ ಅಧ್ಯಾಯವು ಸಮಾಪ್ತವಾಯ್ತು ॥ ೨ ॥

॥ ಶ್ರೀಕೃಷ್ಣಾರ್ಪಣಮಸ್ತು ॥

|| ಶ್ರೀಃ ||

# ಮೂರನೇ ಅಧ್ಯಾಯವು.

ಪೀ— ಈ ಅಧ್ಯಾಯದಲ್ಲಿ, ಹಿಂದಿನ ಅಧ್ಯಾಯದಲ್ಲಿ ಹೇಳಿದ ನಿವೃತ್ತಕರ್ಮರೂಪ ಜ್ಞಾನೋಪಾಯವು ಆವಶ್ಯಕವಾಗಿರುವುದರಿಂದ ಅದನ್ನು ವಿವರಿಸುತ್ತಾರೆ.

ಗೀ || || ಅರ್ಜುನ ಉವಾಚ ||

**ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ |**
**ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ || ೧ ||**

ಅ || ಅರ್ಜುನಃ ಉವಾಚ=(**ದೂರೇಣ ಹ್ಯವರಂ ಕರ್ಮ** ಎಂದು ಹೇಳಿದ್ದನ್ನು ಕೇಳಿ ಪ್ರಶ್ನಿಸಲಿಕ್ಕೆ ಅವಕಾಶವನ್ನು ಹೊಂದಿದ) ಅರ್ಜುನನು ಪ್ರಶ್ನಿಸುತ್ತಾನೆ ಜನಾರ್ದನ=ದುಷ್ಟಸಂಹಾರಕನಾದ, ಕೇಶವ=ಬ್ರಹ್ಮರುದ್ರರಿಗೆ ನಿಯಾಮಕನಾದ ಶ್ರೀಕೃಷ್ಣನೇ, ಬುದ್ಧಿಃ=ಜ್ಞಾನವು, ಕರ್ಮಣಃ=**ದೂರೇಣ ಹ್ಯವರಂ ಕರ್ಮ** ಇತ್ಯಾದಿಗಳಲ್ಲಿ ಹೇಳಿದ ಪ್ರಕಾರ) ಕರ್ಮಕ್ಕಿಂತಲೂ, ಜ್ಯಾಯಸೀ ಚೇತ್ ತೇ ಮತಾ ತತ್=ಶ್ರೇಷ್ಠವಾದುದೆಂದು ನಿನಗೆ ಸಮ್ಮತವಾಗಿದ್ದರೆ, ಕರ್ಮಣಿ=ಕರ್ಮವಾಡುವ ವಿಷಯದಲ್ಲಿ ಕಿಂ=ಯಾವುದಕ್ಕಾಗಿ, ಮಾಂ=ನನ್ನನ್ನು, ನಿಯೋಜಯಸಿ=ಪ್ರೇರಿಸುತ್ತಿ (ಆ ಕರ್ಮಗಳಲ್ಲಿಯೂ) ಘೋರೇ ಕರ್ಮಣಿ=ರಾಗದ್ವೇಷಾದಿಗಳಿಂದ ಕೂಡಿದ ಯುದ್ಧವೆಂಬ ಕರ್ಮದಲ್ಲಿ, ಏಕೆ ಪ್ರೇರಿಸುತ್ತಿ

ವಿ || (1) **ಸರ್ವ ಏತೇ ಪುಣ್ಯಲೋಕಾ ಭವಂತಿ** ಇತ್ಯಾದಿಗಳಲ್ಲಿ ಸರ್ವ ಕರ್ಮಗಳಿಗೆ ಫಲವು ಶ್ರುತವಾಗಿದೆ ಹಾಗೆಯೇ **ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ** ಎಂದು ಫಲವು ಶ್ರುತವಾಗಿರುವುದರಿಂದ ಯುದ್ಧವು ಕಾಮ್ಯವಾಗಿದೆ. ಸರ್ವ ಕರ್ಮಗಳು ಬುದ್ಧಿಯೋಗಕ್ಕಿಂತ ನಿಕೃಷ್ಟಗಳಾಗಿವೆ (2) ಯತ್ಯಾಶ್ರಮಕ್ಕೆ ವಿಹಿತಗಳಾದ ಶಮದಮಾದಿಗಳಿಗೆ ಫಲವು ಶ್ರುತವಾಗಲಿಲ್ಲ ಅವುಗಳು ಅಕಾಮ್ಯಗಳು ಮತ್ತೂ **ಶಾಂತೋ ದಾಂತಃ— ಆತ್ಮಾನಂ ಪಶ್ಯೇತ್** ಎಂದು ಜ್ಞಾನೋಪಯುಕ್ತಗಳೂ ಎಂದು ಹೇಳಿಯದೆ ಆದುದರಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಸನ್ಯಾಸಾಶ್ರಮ ಧರ್ಮದಲ್ಲಿ ಆಸಕ್ತನಾಗು ಎಂದೇ ಪ್ರೇರೇಪಿಸಬೇಕಿತ್ತು **ಯುದ್ಧ್ಯಸ್ವ ಭಾರತ** ಎಂದು ಯುದ್ಧವನ್ನು ಮಾಡು ಎಂದು ಹೇಳಿದ್ದು ಯುಕ್ತವಲ್ಲ || ೧ ||

ಪೀ— **ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ** ಎಂದು ಬುದ್ಧಿಪದದಿಂದ ಹೇಳಲ್ಪಟ್ಟ ಯುದ್ಧಾಖ್ಯಕರ್ಮದಿಂದಲೂ ಜ್ಞಾನವುಂಟಾಗುತ್ತದೆಂದು ಹೇಳಿದೆ ಎಂದರೆ—

ಗೀ || **ವ್ಯಾಮಿಶ್ರೇಣೈವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ |**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಂ || ೨ ||**

ಅ || ವ್ಯಾಮಿಶ್ರೇಣ=(ಕೆಲವು ಕಡೆ ಕರ್ಮವನ್ನು ಹೊಗಳಿದ್ದು, ಕೆಲವು ಕಡೆ ಜ್ಞಾನವನ್ನು ಹೊಗಳಿದ್ದು, ಅಥವಾ ಕೆಲವು ಕಡೆ ಯುದ್ಧದಿಂದ ಸ್ವರ್ಗವು ಲಭಿಸುತ್ತದೆಂದೂ ಕೆಲವು ಕಡೆ ಜ್ಞಾನವು ಲಭಿಸುತ್ತದೆಂದೂ ಹೇಳಿದೆ. ಹೀಗೆ) ಸಂಶಯವನ್ನು ಹುಟ್ಟಿಸುವ, ವಾಕ್ಯೇನೈವ=ವಾಕ್ಯದಿಂದಲೇ ಮೇ=ನನ್ನ,

ಬುದ್ಧಿಂ=ಬುದ್ಧಿಯನ್ನು, ಮೋಹಯಸೀವ=ಸಂಶಯಗ್ರಸ್ತವನ್ನಾಗಿ ಮಾಡುತ್ತಿ. (ಕಾಮಿಗಳಿಗೆ ಯುದ್ಧದಿಂದ ಸ್ವರ್ಗವು, ಅಕಾಮಿಗಳಿಗೆ ಜ್ಞಾನವು ಎಂದರೂ ಯತಿಧರ್ಮಗಳನ್ನು ಮಾಡು ಎಂದೇ ವಿಧಿಸಬೇಕು ಯುದ್ಧಮಾಡು ಎಂದು ವಿಧಿಸುವುದು ಯುಕ್ತವಲ್ಲ ಆದಕಾರಣ) ಯೇನ=ಯಾವುದರಿಂದ, ಅಹಂ=ನಾನು, ಶ್ರೇಯಃ=ಶ್ರೇಯಸ್ಸನ್ನು ಆಪ್ನುಯಾಂ=ಹೊಂದಿಯೇನೋ ತದೇಕಂ=ಅಂತಹುದೊಂದನ್ನು, ನಿಶ್ಚಿತ್ಯ=ನಿಶ್ಚಯಿಸಿ, ವದ=ಹೇಳು ॥ ೨ ॥

ಹೀ ಹಿಂದುಮುಂದಿನ ಅಧ್ಯಾಯಗಳಿಂದ ಈ ಅಧ್ಯಾಯಕ್ಕೆ ಭೇದವನ್ನೂ, ಒಂದೇ ಅರ್ಥವನ್ನು ಹೇಳುವುದರಿಂದ ತನ್ನಲ್ಲಿ ಏಕವಾಕ್ಯತ್ವವನ್ನೂ ತೋರಿಸುತ್ತಾ ಈ ಅಧ್ಯಾಯದಲ್ಲಿ ಹೇಳತಕ್ಕ ಅರ್ಥವನ್ನು ಹೇಳುತ್ತಾರೆ—

ಭಾ ॥ ಓಂ ॥ (೧) ಆತ್ಮಸ್ವರೂಪಂ ಜ್ಞಾನಸಾಧನಂ ಚೋಕ್ತಂ ಪೂರ್ವತ್ರ ॥ (೨) ಜ್ಞಾನಸಾಧನತ್ವೇನಾಕರ್ಮ ವಿನಿಂದ್ಯ ಕರ್ಮ ವಿಧೀಯತ ಉತ್ತರಾಧ್ಯಾಯೇ ॥ (೩) ಕರ್ಮಣೋ ಜ್ಞಾನಮುತ್ಕೃಷ್ಟಮಮಿತ್ಯಭಿಹಿತಂ ಭಗವತಾ ದೂರೇಣ ಹ್ಯವರಂ ಕರ್ಮೇತ್ಯಾದೌ ॥ (೪) ಏವಂ ಚೇತ್ಕಿಮಿತಿ ಕರ್ಮಣಿ ಘೋರೇ ಯುದ್ಧಾಖ್ಯೇ ನಿಯೋಜಯಸಿ ನಿವೃತ್ತಧರ್ಮಾನ್ವಿನೇತ್ಯಾಹ । ಜ್ಯಾಯಸೀತಿ ॥ (೫) ಕರ್ಮಣಸ್ಸಕಾಶಾದ್ಬುದ್ಧಿರ್ಜ್ಯಾಯಸೀ ಚೇತ್ತೇ ಮತಾ ತರ್ಹಿ ॥ ೧, ೨ ॥

ಅ ॥ (೧) ಹಿಂದಿನ ಅಧ್ಯಾಯದಲ್ಲಿ ಸಾಂಖ್ಯ ಎಂಬ ಜೀವೇಶ್ವರರ ಸ್ವರೂಪವೂ, ಯೋಗವೆಂಬ ಪರಮಾತ್ಮ ಜ್ಞಾನಸಾಧನವೂ ಹೇಳಲ್ಪಟ್ಟಿದೆ (೨) (ಈ ಅಧ್ಯಾಯದಲ್ಲಿ ಕರ್ಮಮಾಡದಿರುವುದನ್ನು ನಿಂದಿಸಿ ಜ್ಞಾನಕ್ಕೆ ಸಾಧನವಾಗಿ (ಕೆಲವು ವಾಕ್ಯಗಳಿಂದ) ಕರ್ಮವು ಕರ್ತವ್ಯವೇ, ಎಂದು ತಿಳಿಸಲ್ಪಡುತ್ತದೆ (ಅಂದರೆ—ಕರ್ಮಯೋಗ, ಸಮಾಧಿಯೋಗ ಎಂದು ಯೋಗವು ಎರಡು ವಿಧವು ಅದರಲ್ಲಿ ಜ್ಞಾನಕ್ಕೆ ಸಾಧನವಾಗಿ ಕರ್ಮವು ಕರ್ತವ್ಯವೇ ಎಂದು ತಿಳಿಸುತ್ತಾರೆ ಮತ್ತು ಕರ್ಮವನ್ನು ವಿಧಿಸುವುದಕ್ಕಾಗಿ ಅಕರ್ಮನಿಂದೆಯೂ ಮಾಡಲ್ಪಟ್ಟಿದೆ) (ಮತ್ತು ಜ್ಞಾನವು ಹುಟ್ಟುವುದಕ್ಕಿಂತ ಮೊದಲು ಮಾಡಿದ ನಿವೃತ್ತ ಕರ್ಮಗಳು ಜ್ಞಾನವನ್ನು ಹುಟ್ಟಿಸುತ್ತವೆ ಜ್ಞಾನವು ಬಂದ ಮೇಲೆ ಮಾಡಿದ ಕರ್ಮಗಳು ಜ್ಞಾನ ಕಾರ್ಯವಾದ ಮೋಕ್ಷದಲ್ಲಿ ಆನಂದಾತಿಶಯವನ್ನು ಹುಟ್ಟಿಸುತ್ತವೆ.) (೩) (ಪ್ರಶ್ನೆಗೆ ಕಾರಣವನ್ನು ತೋರಿಸುತ್ತಾ ಪ್ರಶ್ನವಾಕ್ಯದ ತಾತ್ಪರ್ಯವನ್ನು ಹೇಳುತ್ತಾರೆ) **ದೂರೇಣ ಹ್ಯವರಂ ಕರ್ಮ, ಕೃಪಣಾಃ ಫಲಹೇತವಃ** ಇತ್ಯಾದಿಗಳಲ್ಲಿ ಕಾಮ್ಯ ಕರ್ಮಕ್ಕಿಂತ ಜ್ಞಾನವು ಅತ್ಯುತ್ತಮವೆಂದು ಶ್ರೀಕೃಷ್ಣನು ಹೇಳಿದ್ದಾನೆ (೪) ಹೀಗಾದರೆ ಯತ್ಯಾಶ್ರಮಕ್ಕೆ ವಿಹಿತಗಳಾದ ಶಮ ದಮ ಮೊದಲಾದ ನಿಷ್ಕಾಮ ಧರ್ಮಗಳನ್ನು (ಅಂದರೆ ಫಲೇಚ್ಛೆಯನ್ನು ತೊರೆದು ಶ್ರೀಹರಿಗೆ ಪ್ರೀತಿಯಾಗಬೇಕೆಂಬ ಬುದ್ಧಿಯಿಂದ ಮಾಡಿದ ಧರ್ಮಗಳನ್ನು) (ಮಾಡು ಎಂದು ಹೇಳುವುದನ್ನು) ಬಿಟ್ಟು ರಾಗದ್ವೇಷಾದಿಗಳಿಂದ ಕೂಡಿದ ಯುದ್ಧವೆಂಬ ಕಾಮ್ಯಕರ್ಮವನ್ನು ಮಾಡು ಎಂದು ಏತಕ್ಕೆ ನನ್ನನ್ನು ಪ್ರೇರೇಪಿಸುತ್ತಿ, ಎಂದು **ಜ್ಯಾಯಸೀ** ಎಂಬ ಶ್ಲೋಕದಿಂದ ಹೇಳುತ್ತಾರೆ (ಅಂದರೆ (1) ಮೂರು ಆಶ್ರಮಗಳಿಗೆ ವಿಹಿತಗಳಾದ ಯಜ್ಞ ದಾನ ತಪಸ್ಸುಗಳೂ, ಯುದ್ಧ ಮೊದಲಾದುವುಗಳೂ **ಸರ್ವ ಏತೇ ಪುಣ್ಯಲೋಕಾ ಭವಂತಿ** ಎಂದು ಫಲವು ಶ್ರುತವಾಗಿರುವುದರಿಂದ ಕಾಮ್ಯಕರ್ಮಗಳೇ ಹಾಗೆಯೇ ಇಲ್ಲಿಯೂ **ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ** ಇತ್ಯಾದಿ ಫಲವನ್ನು ಹೇಳಿರುವುದರಿಂದ ಕಾಮ್ಯಕರ್ಮವೇ (2) ಫಲವು ಶ್ರುತವಾಗದಿರುವುದರಿಂದಲೂ **ಶಾಂತೋ ದಾಂತಃ** ಎಂದಾರಂಭಿಸಿ **ಆತ್ಮಾನಂ ಪಶ್ಯೇತ್** ಎಂದು ಜ್ಞಾನಾರ್ಥಗಳೆಂದು ಹೇಳಿದ್ದರಿಂದಲೂ ಶಮ ದಮಾದಿಗಳು

**ಅಕಾಮ್ಯಗಳು** (3) ಜ್ಞಾನವು ಕಾಮ್ಯಕರ್ಮಗಳಿಗಿಂತ ಅತ್ಯುತ್ತಮವೆಂದು ಹೇಳಿದೆ ಇದಕಾರಣ ಕಾಮ್ಯಕರ್ಮವಾದ ಯುದ್ಧವನ್ನು ಮಾಡೆಂದು ಹೇಳಿದ್ದು ಯುಕ್ತವಲ್ಲ ಮತ್ತೆ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಸನ್ಯಾಸಿಗಳ ಧರ್ಮಮಾಡು ಎಂದೇ ಹೇಳಬೇಕಿತ್ತು (4) ಹಾಗಾದರೆ **ಕರ್ಮಬಂಧಂ ಪ್ರಹಾಸ್ಯಸಿ** ಎಂದು ಹೇಳಿದ್ರಿಂದ ಯುದ್ಧವು ಜ್ಞಾನಾರ್ಥವೂ ಆಗತ್ತದೆ, ಎಂದರೆ—ಸಂಶಯವನ್ನು ಹುಟ್ಟಿಸುವ ಮಾತಿನಿಂದ ನನ್ನ ಬುದ್ಧಿಗೆ ಮೋಹವನ್ನು ಹುಟ್ಟಿಸುತ್ತಿ (5) ಹಾಗಾದರೆ—ಯುದ್ಧಾದಿ ಕರ್ಮಗಳು ಕಾಮ್ಯಗಳೂ ಅಕಾಮ್ಯಗಳೂ ಆಗುತ್ತವೆ ಸಕಾಮನಿಗೆ **ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ** ಎಂದು ಹೇಳಿದ್ದು ಜ್ಞಾನಾರ್ಥಿಗೆ **ಕರ್ಮಣ್ಯೇವಾಧಿಕಾರಃ** ಎಂದು ಹೇಳಿದ್ದು ಆದಕಾರಣ ನನ್ನ ಮಾತಿನಿಂದ ಸಂಶಯ ಹುಟ್ಟುವುದು ಹೇಗೆ? ಎಂದರೆ—ಶುದ್ಧಗಳಾದ ನಿವೃತ್ತರೂಪ ಯತ್ಯಾಶ್ರಮಧರ್ಮಗಳಿರುವಾಗ ಕಾಮ್ಯ ಅಕಾಮ್ಯರೂಪಗಳಾದ ಯುದ್ಧಾದಿಗಳನ್ನು ಮಾಡು ಎಂದು ಹೇಳುವುದು ಯುಕ್ತವಲ್ಲ ಶಮದಮಾದಿಗಳಲ್ಲಿ ಮನಶ್ಚಾಂಚಲ್ಯವಿಲ್ಲ ಯುದ್ಧಾದಿಗಳಲ್ಲಿ ಮನಶ್ಚಾಂಚಲ್ಯವಿದೆ (6) ಮತ್ತು ಯುದ್ಧದಲ್ಲಿ ಕಾಮಕ್ರೋಧಾದಿಗಳು ತಪ್ಪಿದಲ್ಲ. ಅವುಗಳಿಂದ ನರಕಫಲವೆಂದು ಹೇಳಿದೆ ಆದ್ದರಿಂದ ಯುದ್ಧಮಾಡು ಎಂದು ಹೇಳಿದ್ದು ಯುಕ್ತವಲ್ಲ ಅಂತೂ ರಾಗ ದ್ವೇಷಾದಿಗಳಿಗೆ ಪ್ರಸಕ್ತಿಯೇ ಇಲ್ಲದಿರುವ ಯತಿಧರ್ಮಗಳನ್ನು ಮಾಡಲಿಕ್ಕೆ ಸಾಧ್ಯವಿರುವಾಗ ರಾಗಾದಿ ದೋಷಗಳಿಂದ ತುಂಬಿದ ಯುದ್ಧವನ್ನು ಮಾಡೆಂದು ಹೇಳಿದ್ದು ಸರ್ವಥಾ ಯುಕ್ತವಲ್ಲ (೭) ಕಾಮ್ಯಕರ್ಮಕ್ಕಿಂತ ಜೀವ ಪರಮಾತ್ಮ ಜ್ಞಾನವು ಅತಿ ಪ್ರಶಸ್ತವೆಂದು ನಿನಗೆ ಸಮ್ಮತವೆಂದಾದರೆ ॥ ೧ ೨ ॥

**ಟೀ**—ಎರಡನೇ ಅಧ್ಯಾಯಕ್ಕೆ ಸಂಗತವಾಗಿ ಈ ಮೂರನೇ ಅಧ್ಯಾಯದ ಅರ್ಥವನ್ನು ತೋರಿಸುವುದಕ್ಕಾಗಿ ೨ನೇ ಅಧ್ಯಾಯದಲ್ಲಿ ಹೇಳಿದ್ದ ಅರ್ಥವನ್ನು ಹೇಳುತ್ತಾರೆ

**ತಾ ॥ ಓಂ ॥ ಜ್ಞಾನಂ ಯೋಗಶ್ಚೋಕ್ತೌ । ತತ್ರ ಕರ್ಮಯೋಗಂ ವಿಶೇಷತಃ ಪ್ರಪಂಚಯತ್ಯನೇನಾಧ್ಯಾಯೇನ । ದೂರೇಣ ಹ್ಯವರಂ ಕರ್ಮೇತಿ ಪ್ರಶ್ನಬೀಜಂ ॥ ೧, ೨ ॥**

**ಅ** ॥ (೨ನೇ ಅಧ್ಯಾಯದಲ್ಲಿ **ಏಷಾ ತೇಽಭಿಹಿತಾ** ಎಂಬ ಪರ್ಯಂತ) ಜ್ಞಾನಂ=ಈಶ್ವರಾದಿಗಳ ಸ್ವರೂಪವೂ, (ಆ ಮೇಲೆ ಅಧ್ಯಾಯವು ಮುಗಿಯುವ ಪರ್ಯಂತ) ಯೋಗಃ=ಕರ್ಮ ಸಮಾಧಿರೂಪ ಜ್ಞಾನೋಪಾಯವೂ ಹೇಳಲ್ಪಟ್ಟಿದೆ ಅವುಗಳ ಮಧ್ಯದಲ್ಲಿ (ಕರ್ಮಯೋಗ, ಧ್ಯಾನಯೋಗವೆಂದು, ಯೋಗವು ಎರಡು ವಿಧವು ಅದರಲ್ಲಿ) ಹಿಂದೆ ಹೇಳಿದ ಕರ್ಮಯೋಗವನ್ನು ವಿಶೇಷವಾಗಿ ಈ ಅಧ್ಯಾಯದಲ್ಲಿ ವಿವರಿಸುತ್ತಾರೆ (ಹಾಗಾದರೆ ಕರ್ಮಕ್ಕಿಂತ ಬುದ್ಧಿಯು ಶ್ರೇಷ್ಠವೆಂದು ಎಲ್ಲಿ ಹೇಳಿದೆ **ಜ್ಯಾಯಸೀ ಚೇತ್ಕರ್ಮಣಃ** ಎಂದು ಅರ್ಜುನನ ಪ್ರಶ್ನೆಗೆ ಕಾರಣವು ಯಾವುದು ಎಂದರೆ) **ದೂರೇಣ ಹ್ಯವರಂ ಕರ್ಮ** ಎಂಬುವುದು ಪ್ರಶ್ನೆಗೆ ಕಾರಣವು ॥ ೧, ೨ ॥

**ಟೀ**—ಅರ್ಜುನನು ಜನಕ ಪ್ರಿಯವ್ರತಾದಿಗಳಂತೆ ಯುದ್ಧಮಾಡಲಿಕ್ಕೆ ಅಧಿಕಾರವರ್ಗದಲ್ಲಿ ಸೇರಿರದವನಾದುದರಿಂದ ಭಗವಂತನಲ್ಲಿ ಭಕ್ತಿಯನ್ನಿಟ್ಟು ಧರ್ಮವೆಂದು ತಿಳಿದುಕೊಂಡು ಯುದ್ಧಮಾಡಿದರೆ ಪಾಪವು ಬಾರದಿರುವುದರಿಂದ ಯುದ್ಧಮಾಡೆಂದು ಹೇಳುವುದೇ ಯುಕ್ತವೆನ್ನುತ್ತಾರೆ—

**ಗೀ ॥ ॥ ಶ್ರೀಭಗವಾನುವಾಚ ॥**

**ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾಽನಘ ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ ॥೧॥**

ಅ ॥ ಶ್ರೀಭಗವಾನ್=ಶ್ರೀಕೃಷ್ಣನು, ಉವಾಚ=ಉಪದೇಶಿಸಿದನು. ಅನಘ=ಪಾಪವಿಲ್ಲದ ಅರ್ಜುನನೇ, ಅಸ್ಮಿನ್ ಲೋಕೇ=ಈ ಅಧಿಕಾರಿವರ್ಗದಲ್ಲಿ, ಸಾಂಖ್ಯಾನಾಂ=ಜ್ಞಾನವೇ ಮೋಕ್ಷಕ್ಕೆ ಪ್ರಧಾನಸಾಧನವೆಂದು ತಿಳಿದ ದೇವತೆಗಳಿಗೂ ಸನಕಾದಿಯತಿಗಳಿಗೂ, ಜ್ಞಾನಯೋಗೇನ=ಅಲ್ಪವಾದ ಕರ್ಮದಿಂದ ಕೂಡಿದ, ಅಧಿಕವಾದ ಜ್ಞಾನರೂಪ ಉಪಾಯಗಳಾದ ಜಪಧ್ಯಾನಾದಿಗಳಿಂದ, ನಿಷ್ಠಾ=ಸ್ವಸ್ವರೂಪದಿಂದ ಇರುವಿಕೆಯು (ಮೋಕ್ಷವು) (ಆಗುತ್ತದೆ) ಯೋಗಿನಾಂ=ಮೋಕ್ಷಕ್ಕೆ ಕರ್ಮವೇ ಮುಖ್ಯ ಸಾಧನವೆಂದು ತಿಳಿದ ಜನಕಾದಿಗಳಿಗೆ, ಕರ್ಮಯೋಗೇನ=ಅಲ್ಪವಾದ ಜ್ಞಾನದಿಂದ ಕೂಡಿದ ಅಧಿಕವಾದ ಕರ್ಮರೂಪ ಉಪಾಯದಿಂದ, ನಿಷ್ಠಾ=ಮೋಕ್ಷವು, ಆಗುತ್ತದೆ ಸರ್ವಥಾ (ಮೋಕ್ಷವು) ಸಂಸಾರವನ್ನು ಹೊಂದದಿರುವಿಕೆಯು ದ್ವಿವಿಧಾ=ಎರಡು ವಿಧ ಸಾಧನಗಳಿಂದ ಸಾಧ್ಯವು ಎಂದು, ಪುರಾ=**ಕರ್ಮಣ್ಯೇವಾಧಿಕಾರ** ಇತ್ಯಾದಿಗಳಲ್ಲಿ, ಮಯಾ=ನನ್ನಿಂದ, ಪ್ರೋಕ್ತಾ=ಹೇಳಲ್ಪಟ್ಟಿದೆ.

ವಿ ॥ (1) ಭಗವಜ್ಜ್ಞಾನಿಗಳಿಗೂ ಮೋಕ್ಷದಲ್ಲಿ· ಜ್ಞಾನಮಾತ್ರದಿಂದ ಪೂರ್ಣಾನಂದಾನುಭವವು ಆಗಲಾರದು ಮತ್ತೆ ಕರ್ಮಸಹಕೃತವಾದ ಜ್ಞಾನದಿಂದಲೇ ಪೂರ್ಣಾನಂದಾನುಭವವಾಗುವುದು. ಮೋಕ್ಷಾಧಿಕಾರಿಗಳಲ್ಲಿ ಕೆಲವು ಸನಕಾದಿಯತಿಗಳು ಜ್ಞಾನಕರ್ಮಗಳ ಮಧ್ಯದಲ್ಲಿ ಕರ್ಮ ಕಡಿಮೆ, ಜ್ಞಾನವು ಹೆಚ್ಚು ಇದರಿಂದ ಮೋಕ್ಷವನ್ನು ಹೊಂದುವರು (2) ಜನಕ ಪ್ರಿಯವ್ರತಾದಿಗೃಹಸ್ಥರು ಜ್ಞಾನವು ಕಡಿಮೆ ಅಧಿಕ ಕರ್ಮದಿಂದ ಮೋಕ್ಷವನ್ನು ಹೊಂದುತ್ತಾರೆ ಅರ್ಜುನನೇ ನೀನೂ ಜನಕಾದಿಗಳಂತೆ ಕರ್ಮಯೋಗಿಯಾಗಿರುವುದರಿಂದ ಭಗವಂತನ ಪೂಜೆಗಾಗಿ ಯುದ್ಧ ಮಾಡು ॥ ೩ ॥

ಭಾ ॥ (೧) ಜ್ಯಾಯಸ್ತ್ವೇಽಪಿ ಬುದ್ಧೇರಾಧಿಕಾರಿಕತ್ವಾತ್ತ್ವಂ ಕರ್ಮಣ್ಯಧಿಕೃತ ಇತಿ ತತ್ರ ನಿಯೋಕ್ಷ್ಯಾಮೀತ್ಯಾಶಯವಾನ್ಭಗವಾನಾಹ । ಲೋಕ ಇತಿ ॥ (೨) ದ್ವಿವಿಧಾ ಅಪಿ ಜನಾಃ ಸಂತಿ । ಗೃಹಸ್ಥಾದಿಕರ್ಮತ್ಯಾಗೇನ ಜ್ಞಾನನಿಷ್ಠಾಃ ಸನಕಾದಿವತ್ । ತತ್ಸ್ಥಾ ಏವ ಜ್ಞಾನನಿಷ್ಠಾಶ್ಚ ಜನಕಾದಿವತ್ ।ಮದ್ಧರ್ಮಸ್ಥಾ ಏವೇತ್ಯರ್ಥಃ ॥ (೩) ಸಾಂಖ್ಯಾನಾಂ ಜ್ಞಾನಿನಾಂ ಸನಕಾದೀನಾಂಯೋಗಿನಾಮುಪಾಯಿನಾಂ ಜನಕಾದೀನಾಂ ॥ (೪) ಜ್ಞಾನನಿಷ್ಠಾ ಅಪ್ಯಾಧಿಕಾರಿಕತ್ವಾದೀಶ್ವರೇಚ್ಛಯಾ ಲೋಕಸಂಗ್ರಹಾರ್ಥತ್ವಾಚ್ಚ ಯೇ ಕರ್ಮಯೋಗ್ಯಾ ಭವಂತಿತೇಽಪಿ ಯೋಗಿನಃ । ನಿಷ್ಠಾ ಸ್ಥಿತಿಃ ॥ (೫) ತ್ವಂ ತು ಜನಕಾದಿವತ್ಸಕರ್ಮೈವ ಜ್ಞಾನಯೋಗ್ಯೋ ನ ತು ಸನಕಾದಿವತ್ತ್ಯಾಗೇನೇತ್ಯರ್ಥಃ ॥(೬) ಸಂತಿ ಹೀಶ್ವರೇಚ್ಛಯೈವ ಕರ್ಮಕೃತಃ ಪ್ರಿಯವ್ರತಾದಯೋಽಪಿ ಜ್ಞಾನಿನ ಏವ । ತಥಾ ಹ್ಯುಕ್ತಂ । ಈಶ್ವರೇಚ್ಛಯಾ ವಿನಿವೇಶಿತ ಕರ್ಮಾಧಿಕಾರ ಇತಿ ॥ ೩ ॥

ಅ ॥ (೧) ಬುದ್ಧಿಯು ಕಾಮ್ಯಕರ್ಮಗಳಿಗಿಂತ ಶ್ರೇಷ್ಠವೆಂದು ಹೇಳಿದ್ದು ಯುಕ್ತವೇ ಆದರೂ ಕರ್ಮವು ಮನಸ್ಸಿಗೆ ಚಾಂಚಲ್ಯವನ್ನು ಹುಟ್ಟಿಸುವುದಾದರೂ, ಕಾಮಿ ಅಕಾಮಿ ಎಂಬುವ ಭೇದದಿಂದ ಕಾಮ್ಯ ಅಕಾಮ್ಯರೂಪಗಳಾದ ಯುದ್ಧಮೊದಲಾದ ಕರ್ಮಗಳಲ್ಲಿ ನೀನು ಅಧಿಕಾರಪಟ್ಟವನಾದುದರಿಂದ ನಿನ್ನನ್ನೂ ಅದರಲ್ಲಿಯೇ ಪ್ರೇರೇಪಿಸುತ್ತೇನೆ ಎಂದು **ಲೋಕೇ** ಎಂಬ ಶ್ಲೋಕದಿಂದ ಹೇಳುತ್ತಾರೆ (೨) (ಈ ಅಭಿಪ್ರಾಯವು ಶ್ಲೋಕದಿಂದ ಹೇಗೆ ಸಿಗುತ್ತದೆಂದರೆ) ಕರ್ಮ ಮಾರ್ಗದಲ್ಲಿರತಕ್ಕವರು, ಜ್ಞಾನ ಮಾರ್ಗದಲ್ಲಿರುವವರು ಎಂದು ಎರಡು ತೆರವಾಗಿ ಇರುವರು (ಅದನ್ನು ದೃಷ್ಟಾಂತಕೊಟ್ಟು ತೋರಿಸುತ್ತಾರೆ) ಗೃಹಸ್ಥಾಶ್ರಮಿಗಳೇ ಮೊದಲಾದವರ ಕರ್ಮಗಳನ್ನು ಬಿಟ್ಟು (ಯತ್ಯಾಶ್ರಮದಲ್ಲಿರತಕ್ಕ ಧರ್ಮಗಳನ್ನು ಸ್ವೀಕರಿಸಿ) ಸನಕಸನಂದನಾದಿಗಳಂತೆ ಯತ್ಯಾಶ್ರಮಕ್ಕೆ ವಿಹಿತಗಳಾದ (ಸ್ವೀಯವಿತ್ತೇನ ತು

ವಿತಾ ಸದಾ । ಮೂಲಮಂತ್ರೈಸ್ಸದಾ ಸ್ನಾನಂ ವಿಷ್ಣೋರೇವ ಚ ತರ್ಪಣಂ । ಇತ್ಯಾದಿ ಶಾಸ್ತ್ರಗಳಲ್ಲಿ ವಿಹಿತಗಳಾದ ಕರ್ಮಗಳಿಂದಲೇ ಜ್ಞಾನಸಂಪಾದನದಲ್ಲಿ ಆಸಕ್ತರಾದವರು ಗೃಹಸ್ಥಾದ್ಯಾಶ್ರಮಗಳಲ್ಲಿ ರುವವರೇ ಜನಕ ಮೊದಲಾದವರಂತೆ ಯುದ್ಧ ಮೊದಲಾದ ಧರ್ಮಗಳಿಂದ ಜ್ಞಾನ ಸಂಪಾದನದಲ್ಲಿಯೂ ಆಸಕ್ತರಾದವರು ಸನಕಾದಿಗಳಲ್ಲಿ ಜ್ಞಾನವು ಹೆಚ್ಚು ಜನಕಾದಿಗಳಲ್ಲಿ ಕರ್ಮವು ಹೆಚ್ಚು. ಹೀಗೆ ಎರಡು ವಿಧ ಜೀವರೂ ನನ್ನ ಧರ್ಮದಲ್ಲಿರುವವರೇ ಆಗಿರುತ್ತಾರೆ (೩) (ಸಾಂಖ್ಯಾನಾಂ ಯೋಗಿನಾಂ ಎಂಬ ಎರಡು ಪದಗಳಿಂದ ಕಾಪಿಲ ಪಾತಂಜಲ ಮತಗಳನ್ನು ಇಟ್ಟುಕೊಳ್ಳಬೇಕೆಂಬ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಆ ಶಬ್ದಗಳ ಅರ್ಥ ಹೇಳುತ್ತಾರೆ) ಸಾಂಖ್ಯಾನಾಂ= (ಸಮ್ಯಕ್ ಖ್ಯಾತಿಃ= ಜ್ಞಾನವು,) ಜ್ಞಾನದಲ್ಲಿ ಆಸಕ್ತರಾದ ಸನಕಾದಿಗಳಿಗೆ, ಯೋಗಿನಾಂ=ಮೋಕ್ಷಕ್ಕೆ ಕರ್ಮವೇ ಪ್ರಧಾನ ಸಾಧನವೆಂದು ತಿಳಿದುಕೊಂಡ ಜನಕ ಪ್ರಿಯವ್ರತ ಮೊದಲಾದ ರಾಜರಿಗೆ (೪) (ಜನಕ ಮೊದಲಾದವರೂ ಜ್ಞಾನದಲ್ಲಿ ಆಸಕ್ತರು ಅವರು ಯೋಗಿಗಳು ಹೇಗೆ ಆಗುವರು? ಎಂದರೆ) ಜನಕಾದಿಗಳು ಜ್ಞಾನದಲ್ಲಿ ಆಸಕ್ತರಾದಾಗ್ಯೂ ಅಧಿಕಾರವರ್ಗದಲ್ಲಿ ಶ್ರೀಹರಿಯಿಂದ ನಿಯಮಿಸಲ್ಪಟ್ಟವರಾದುದರಿಂದಲೂ ಶ್ರೀಹರಿಯ ಇಚ್ಛೆಯಿಂದ ಲೋಕದಲ್ಲಿದ್ದ ಜನರು ಕರ್ಮವನ್ನಾಚರಿಸಲಿಕ್ಕಾಗಿ ಕರ್ಮವನ್ನು ಮಾಡಬೇಕಾಗಿರುವುದ ರಿಂದ ಯಾರು ಗೃಹಸ್ಥಾದಿಗಳ ಕರ್ಮಮಾಡಲು ಯೋಗ್ಯರಾಗುತ್ತಾರೋ, ಅವರು ಜ್ಞಾನಿಗಳಾಗಿದ್ದರೂ ಯೋಗಿಗಳೆನಿಸುತ್ತಾರೆ (ಸಾಂಖ್ಯ ಯೋಗ, ಶಬ್ದಗಳಿಂದ ಪ್ರಸಿದ್ಧಗಳಾದ ಅರ್ಥಗಳನ್ನು ಏಕೆ ಇಟ್ಟು ಕೊಳ್ಳಬಾರದೆಂದರೆ) ನಿಷ್ಠಾ=ಅನ್ಯಥಾರೂಪವನ್ನು ಬಿಟ್ಟು ಸ್ವರೂಪದಿಂದ ಇರುವಿಕೆಯು (ಮೋಕ್ಷವು) (ಕಾಪಿಲ ಪಾತಂಜಲ ಶಾಸ್ತ್ರಗಳಲ್ಲಿ ಹೇಳಿದ್ದನ್ನು ಮಾಡುವವರಿಗೆ ಮುಕ್ತಿಯಾಗುವುದಿಲ್ಲ) (೫) (ಹೀಗೆ ಶ್ಲೋಕಾರ್ಥವಾಗಲಿ, ಅಧಿಕಾರಿಕತ್ವಾತ್ ಇತ್ಯಾದಿಗಳು ಇಲ್ಲಿ ಶ್ರುತಗಳಾಗಲಿಲ್ಲ ಎಂದರೆ ಅಧ್ಯಾಹಾರಮಾಡ ಬೇಕೆನ್ನುತ್ತಾರೆ) ಅರ್ಜುನನೇ ನೀನು ಜನಕರಾಜ ಮೊದಲಾದವರಂತೆ ಗೃಹಸ್ಥಾದಿಗಳ ಕರ್ಮವನ್ನು ಮಾಡುತ್ತಲೇ ಜ್ಞಾನಯೋಗ್ಯನಲ್ಲದೆ ಸನಕಾದಿಗಳಂತೆ ಗೃಹಸ್ಥಾದಿಗಳ ಕರ್ಮಗಳನ್ನು ಬಿಡೋಣದರಿಂದ ಅಲ್ಲ. (೬) (ಯಾವ ಜ್ಞಾನಿಗಳಿಗೆ ಗೃಹಸ್ಥಾದಿ ಕರ್ಮಗಳಲ್ಲಿಯೇ ಅಧಿಕಾರವೋ ಯತಿಗಳ ಕರ್ಮಗಳಲ್ಲಿ ಅಧಿಕಾರವಿಲ್ಲವೋ, ಅಂತಹ ಜೀವರು ಪ್ರಸಿದ್ಧರಾಗಿದ್ದರೆ ನೀವು ಹೇಳಿದ ಅರ್ಥವು ಯುಕ್ತವಾಗುತ್ತಿತ್ತು ಜನಕಾದಿಗಳಾದರೂ ಯತಿಗಳ ಆಶ್ರಮವನ್ನು ಸ್ವೀಕರಿಸಲಿಲ್ಲ, ಎಂದೇ ಹೇಳಿಯದೆ ಅಧಿಕಾರವಿಲ್ಲವೆಂದು ಹೇಳಲಿಲ್ಲ ಎಂದರೆ—) ತಮಗೆ ವಿಹಿತಗಳಾದ ಕರ್ಮಗಳನ್ನು ನಿಷ್ಕಾಮವಾಗಿ ಮಾಡಬೇಕೆಂದು ಶ್ರೀಹರಿಯು ನಿಯಮ ಪ್ರಕಾರ ಕರ್ಮಗಳನ್ನು ಮಾಡುವ ಪ್ರಿಯವ್ರತ ಮೊದಲಾದರೂ ಜ್ಞಾನಿಗಳಾಗಿಯೇ ಇರುತ್ತಾರೆ ಹಾಗೆಯೇ ಶ್ರೀಹರಿಯ ಇಚ್ಛೆಯಿಂದ ಕರ್ಮಮಾಡುವ ವಿಷಯದಲ್ಲಿ ಅಧಿಕಾರ ಹೊಂದಿದವನು, ಎಂದು ಭಾಗವತದಲ್ಲಿದೆ. (ಅಂದರೆ ಪ್ರಿಯವ್ರತರಾಜನು ಯತ್ಯಾಶ್ರಮವನ್ನು ಸ್ವೀಕರಿಸಲಿಚ್ಛಿಸಿದವನು ಅಧಿಕಾರ ವರ್ಗದಲ್ಲಿ ಸೇರಿದವನಾದುದರಿಂದ ಚತುರ್ಮುಖನಿಂದ ನಿವಾರಿಸಲ್ಪಟ್ಟವನಾಗಿ ಗೃಹಸ್ಥಕರ್ಮವನ್ನೂ ಪೃಥಿವೀರಕ್ಷಣೆಯನ್ನೂ ಮಾಡಿದನೆಂದು ಉಕ್ತವಾಗಿದೆ)

ವಿ ॥ (1) ಬ್ರಹ್ಮಚರ್ಯ ಮೊದಲಾದ ಮೂರು ಆಶ್ರಮಗಳಿಗೆ ವಿಹಿತಗಳಾದ ಯಜ್ಞಾದಿಗಳೂ ಯುದ್ಧಾದಿಗಳೂ ಕೂಡ ಕೇವಲ ಶುದ್ಧಕಾಮ್ಯಗಳಲ್ಲ. ಮತ್ತೆ ಕರ್ತೃಪುರುಷನ ಇಚ್ಛೆಯಿಂದ ಸ್ವರ್ಗಾದಿ ಗಳನ್ನೂ ಜ್ಞಾನವನ್ನೂ ಹೊಂದಿಸಿಕೊಡುತ್ತವೆ ಅಂದರೆ ಕಾಮ್ಯಗಳೂ ಅಕಾಮ್ಯಗಳೂ ಆಗಿವೆ ಆದ ಕಾರಣ ಬುದ್ಧಿಯು ಕಾಮ್ಯಕರ್ಮಕ್ಕಿಂತ ಶ್ರೇಷ್ಠವಾಗಿದ್ದರೂ ಜ್ಞಾನಾರ್ಥಿಗೆ ಯುದ್ಧದಿಂದ ಜ್ಞಾನವು ಹುಟ್ಟುವುದರಿಂದ ಯುದ್ಧಮಾಡೆಂದು ಹೇಳಿದ್ದು ಯುಕ್ತವೇ. (2) ರಾಗಾದಿಗಳ ಪ್ರಸಕ್ತಿಯಿಲ್ಲದ ಸನ್ಯಾ ಸಾಶ್ರಮವನ್ನು ಸ್ವೀಕಾರಮಾಡು ಎಂದು ಹೇಳದೆ ಯುದ್ಧಮಾಡು ಎಂದು ಹೇಳಲು ಕಾರಣವೇನೆಂದರೆ ಅನಧಿಕಾರಿಗಳಿಗೇನೇ ಯತ್ಯಾಶ್ರಮವನ್ನು ಸ್ವೀಕರಿಸಲಿಕ್ಕೆ ಅಧಿಕಾರವು ಅಧಿಕಾರ ವರ್ಗದಲ್ಲಿ ಸೇರಿ

ದವರಿಗೆ ಯತ್ಯಾಶ್ರಮವನ್ನು ಸ್ವೀಕರಿಸಲಿಕ್ಕೆ ಅಧಿಕಾರವಿಲ್ಲ. ಅಧಿಕಾರಿಗಳು ಗೃಹಸ್ಥಾದ್ಯಾಶ್ರಮವನ್ನು ಬಿಡದೆ ಗೃಹಸ್ಥಾಶ್ರಮಕ್ಕೆ ವಿಹಿತಗಳಾದ ಯುದ್ಧಾದಿಕರ್ಮಗಳನ್ನು ನಿಷ್ಕಾಮರಾಗಿ ಮಾಡಬೇಕೆಂದು ಶ್ರೀಹರಿಯ ನಿಯಮವಿದೆ (3) ಅಧಿಕಾರವರ್ಗದಲ್ಲಿ ಸೇರಿದವರು ಯಾರೆಂದರೆ— **ಪ್ರಜಾಪಾಶ್ಚ ತಥಾ ದೇವಾಃ ಮಹಾಧೀಕಾರಿಣಃ ಸ್ಮೃತಾಃ । ಋಷ್ಯಶೀತಿಸ್ತಥಾ ಸಪ್ತ ಪಿತರೋಽಪ್ಸರಸಾಂ ಶತಂ । ಗಂಧರ್ವಾಣಾಂ ತಥಾ ರಾಜ್ಞಾಂ ವಿಂಶದನ್ಯಾಸು ಜಾತಿಷು । ಅಲ್ಪಾಧಿಕಾರಿಣಃ ಪ್ರೋಕ್ತಾಃ ಅನಧೀಕಾರಿಣಃ ಪರೇ ।** ಎಂಬಬ್ರಹ್ಮಾಂಡ ಪುರಾಣ ವಚನದಿಂದ ದೇವತೆಗಳು ಮಹಾಧೀಕಾರಿಗಳು ಅರ್ಜುನನೇ ನೀನು ದೇವೇಂದ್ರನ ಅವತಾರನಾದುದರಿಂದ ಮಹಾಧಿಕಾರವರ್ಗದಲ್ಲಿ ಸೇರಿದವನು ॥ ೩ ॥

**ಪೀ**—**ಲೋಕೇಽಸ್ಮಿನ್** ಎಂಬ ಪರಿಹಾರವಾಕ್ಯದಲ್ಲಿ ಕೆಲವಧಿಕಾರಿಗಳು ಜ್ಞಾನವನ್ನೇ, ಸಂಪಾದಿಸಬೇಕು ಕೆಲವರು ಕರ್ಮವನ್ನೇ ಮಾಡಬೇಕು, ಎಂಬ ಅನ್ಯಥಾ ಪ್ರತೀತಿಯನ್ನು ಕಳೆಯುತ್ತಾರೆ.

**ತಾ ॥ (೧) ಜ್ಞಾನಪ್ರಚುರೋ ಯೋಗೋ ಜ್ಞಾನಯೋಗಃ । ಕರ್ಮಪ್ರಚುರೋಽನ್ಯಃ ॥ (೨) ಸಾಂಖ್ಯಾ ಜ್ಞಾನಪ್ರಧಾನತ್ವಾದ್ದೇವಾಶ್ಚ ಯತಯಸ್ತಥಾ । ಮುಖ್ಯಂ ಸಾಂಖ್ಯಾಸ್ತತ್ರ ದೇವಾ ಜ್ಞಾನಮೇಷಾಂ ಮಹದ್ಯತಃ ॥ (೩) ಬಹುಕರ್ಮಕೃತೋಽಪ್ಯೇತೇ ತತೋಽಪಿ ಬಹುವೇದನಾತ್ । ಮುಖ್ಯಸಾಂಖ್ಯಾ ಇತಿ ಜ್ಞೇಯಾಸ್ತದನ್ಯೇ ಕರ್ಮಯೋಗಿನಃ ॥ (೪) ಜ್ಞಾನಿನೋಽಪ್ಯತಿಬಾಹುಲ್ಯಾತ್ಕರ್ಮಣಃ ಕರ್ಮಯೋಗಿನಃ । ನೋಭಯಂ ತದ್ವಿನಾ ಕಶ್ಚಿತ್ಪುಮಾನ್ಸ್ಯಾತ್ ಪುರುಷಾರ್ಥಭಾಕ್ ॥ (೫) ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ । ನ ಚ ಜ್ಞಾನಂ ವಿನಾ ಕರ್ಮ ಪುರುಷಾರ್ಥಕರಂ ಭವೇದಿತಿ ಬ್ರಹ್ಮವೈವರ್ತೇ ॥ ೧ ॥**

**ಅ** ॥ (೧) (ಇಲ್ಲಿ ಜ್ಞಾನಯೋಗ ಪದದಿಂದ ಜ್ಞಾನಮಾತ್ರವೂ ಕರ್ಮಯೋಗ ಪದದಿಂದ ಕರ್ಮಮಾತ್ರವೂ ಎಂದು ತಿಳಿಯಕೂಡದು ಮತ್ತೆ ಪ್ರತಿ ಒಂದರಲ್ಲಿ ಎರಡೆರಡೂ ಇವೆ ಎಂದೂ ತಿಳಿಯಬೇಕು ಒಂದರಲ್ಲಿ ಜ್ಞಾನವು ಹೆಚ್ಚು ಇನ್ನೊಂದರಲ್ಲಿ ಕರ್ಮವು ಹೆಚ್ಚು ಹೇಗೆಂದರೆ) ಜ್ಞಾನ, ಕರ್ಮ, ಇವುಗಳ ಮಧ್ಯದಲ್ಲಿ ಹೆಚ್ಚು ಜ್ಞಾನವಿರುವ ಯೋಗವು ಜ್ಞಾನಯೋಗವು ಹೆಚ್ಚು ಕರ್ಮವಿರುವ ಯೋಗವು ಕರ್ಮಯೋಗವು (೨) (ಸಾಂಖ್ಯರಿಗೆ ಜ್ಞಾನವೇ ಯೋಗಿಗಳಿಗೆ ಕರ್ಮವೇ, ಎಂದು ಸಾಮಾನ್ಯತಃ ತೋರುವ ಅರ್ಥವೇ ಏಕೆ ಆಗಲಾರದೆಂದರೆ) ದೇವತೆಗಳೂ ಯತಿಗಳೂ ಜ್ಞಾನವೇ ಪ್ರಧಾನವಾಗಿ ಉಳ್ಳವರಾದುದರಿಂದ **ಸಾಂಖ್ಯ**ರೆನಿಸುತ್ತಾರೆ ಆದರಲ್ಲಿಯೂ ದೇವತೆಗಳಿಗೆ ಹೆಚ್ಚು ಜ್ಞಾನವಿರುವುದರಿಂದ ದೇವತೆಗಳು ಮುಖ್ಯವಾಗಿ ಸಾಂಖ್ಯರೆನಿಸುತ್ತಾರೆ (೩) (ದೇವತೆಗಳಿಗೆ ಬಹು ಕರ್ಮಗಳಿದ್ದುದರಿಂದ ಅವರು ಮುಖ್ಯ ಸಾಂಖ್ಯರು ಹೇಗೆ ಆಗುವರು ಎಂದರೆ) ದೇವತೆಗಳು ಬಹುಕರ್ಮಗಳನ್ನು ಮಾಡುವವರಾದರೂ ಕರ್ಮಗಳಿಗಿಂತಲೂ ಹೆಚ್ಚು ಜ್ಞಾನವುಳ್ಳವರಾದುದರಿಂದ **ಮುಖ್ಯ ಸಾಂಖ್ಯ**ರೆನಿಸುತ್ತಾರೆ ಅವರಿಗಿಂತ ಇತರರಾದವರು ಕರ್ಮಯೋಗಿಗಳೆನಿಸುತ್ತಾರೆ (೪) (ಗೃಹಸ್ಥಾದಿಗಳು) ಜ್ಞಾನಿಗಳಾದಾಗ್ಯೂ ಕರ್ಮಗಳು ಜ್ಞಾನಕ್ಕಿಂತಲೂ, ಹೆಚ್ಚು ಇರುವವರಾದುದರಿಂದ ಕರ್ಮಯೋಗಿಗಳೆನಿಸುತ್ತಾರೆ. (ಸಾಂಖ್ಯರಿಗೆ ಜ್ಞಾನವೇ, ಯೋಗಿಗಳಿಗೆ ಕೇವಲ ಕರ್ಮವೇ ಎಂದು ಏಕೆ ಆಗಲಾರದೆಂದರೆ) ಜ್ಞಾನಕರ್ಮಗಳೆರಡು ಇಲ್ಲದೆ ಯಾವನೊಬ್ಬ ಪುರುಷನೂ ಮೋಕ್ಷವೆಂಬ ಪುರುಷಾರ್ಥವನ್ನು ಹೊಂದಲಾರನು (ಅಂದರೆ ಸಾಂಖ್ಯರಿಗೆ ಜ್ಞಾನದಿಂದ, ಯೋಗಿಗಳಿಗೆ ಕರ್ಮದಿಂದ ಪುರುಷಾರ್ಥವಾಗುತ್ತದೆಂದು ವೇದಾದಿಗಳಲ್ಲಿದೆ ಒಂದೊಂದರಿಂದ ಮೋಕ್ಷವಾಗಲಾರದು ಆದಕಾರಣ ಒಂದೊಂದು ಮೋಕ್ಷಕ್ಕೆ ಕಾರಣವೆಂದು ಹೇಳ

ಕೂಡದು.) (೬) (ಕರ್ಮವಿಲ್ಲವಾದರೆ ಪುರುಷಾರ್ಥವು ಏಕೆ ಆಗುವುದಿಲ್ಲ ಎಂದರೆ ಕರ್ಮಪದದಿಂದ ಕರ್ಮಸಾಮಾನ್ಯವೋ, ಯಜ್ಞಾದಿಕರ್ಮಗಳೋ, ಕರ್ಮಸಾಮಾನ್ಯವೆಂದು ಹೇಳಕೂಡದು. ಏಕೆಂದರೆ) ಯಾರೊಬ್ಬನೂ ಯಾವಾಗಲೂ ಒಂದು ಕ್ಷಣಕಾಲದಲ್ಲಿಯೂ ಕರ್ಮಮಾಡದಿರುವವನು ಇಲ್ಲ (ಯಜ್ಞಾದಿ ಕರ್ಮಗಳನ್ನು ಇಟ್ಟುಕೊಳ್ಳುತ್ತೇವೆಂದೂ ಹೇಳಕೂಡದು) ಜ್ಞಾನವಿಲ್ಲದೆ ಯಜ್ಞಾದಿಕರ್ಮವು ಮೋಕ್ಷವನ್ನು ಹೊಂದಿಸಲಾರದು. (ಕೇವಲ ಜ್ಞಾನವು ಕರ್ಮವಿಲ್ಲದೆ ಮೋಕ್ಷವನ್ನು ಹೊಂದಿಸಿಕೊಡುವುದಾಗ್ಯೂ ಸಂಪೂರ್ಣ (ಆನಂದ ಭರಿತ) ಮೋಕ್ಷವನ್ನು ಹೊಂದಿಸಲಾರದು (ಹಾಗಾದರೆ ಕೇವಲ ಕರ್ಮವೇ ಮೋಕ್ಷವನ್ನು ಹೊಂದಿಸಲಿ ಎಂದರೆ) **ನ ಕರ್ಮಣಾ ನ ಪ್ರಜಯಾ** ಇತ್ಯಾದಿ ಶ್ರುತಿಗಳಿಂದ ಕರ್ಮಮಾತ್ರವು ಮೋಕ್ಷವನ್ನು ಹೊಂದಿಸಲಾರದು, ಎಂದು ಬ್ರಹ್ಮವೈವರ್ತದಲ್ಲಿದೆ ॥ ೧ ॥

**ಟೀ—**ಈ ಶ್ಲೋಕದಲ್ಲಿ ಜ್ಞಾನಯೋಗ ಕರ್ಮಯೋಗಗಳು ಪುರುಷಾರ್ಥ ಸಾಧನಗಳೆಂದು ಇಷ್ಟವಾಗಿದ್ದರೆ ವಿಶಿಷ್ಟ ಮೋಕ್ಷಕ್ಕಾಗಿ ಜ್ಞಾನ ಕರ್ಮಗಳು ಎರಡೂ ಬೇಕೆಂದು ಕಲ್ಪಿಸಬಹುದಿತ್ತು ಜ್ಞಾನ ಕರ್ಮಗಳು ಮೋಕ್ಷಕ್ಕೆ ಕಾರಣಗಳೆಂದೇ ಇಲ್ಲಿ ಹೇಳುವುದಿಲ್ಲ ಎಂದರೆ—

**ತಾ ॥ (೧) ನಿಷ್ಠಾ ಪರ್ಯವಸಿತಿರ್ಮುಕ್ತಿಃ ॥ (೨) ಜ್ಞಾನಿನೋ ಮೋಕ್ಷನಿಯಮಸ್ತಥಾಽಪಿ ಶುಭಕರ್ಮಣಾ । ಆನಂದವೃದ್ಧಿರನ್ಯೇನ ಹ್ರಾಸೋ ಜ್ಞಾನಂ ತು ಕರ್ಮಣಾ । ಇತಿ ಪರಮಶ್ರುತೇಃ ॥ (೩) ನ ಕರ್ಮಣಾ ನ ಪ್ರಜಯಾ ಧನೇನೇತ್ಯಾದಿವಿರೋಧೋ ನ ॥ (೪) ಅನ್ಯಥಾ ನ ಕರ್ಮಣಾಮನಾರಂಭಾದಿತ್ಯಾದ್ಯುಭಯಸಮವಾಕ್ಯಶೇಷವಿರೋ-ಧಶ್ಚ ॥ (೫) ಸಮತ್ವಂ ಚ ನ ಹಿ ಕಶ್ಚಿದಿತ್ಯಾದೇಃ । ನಾನ್ಯಃ ಪಂಥಾ ಇತ್ಯಪಿ ಜ್ಞಾನಮೃತೇ ನ ಮೋಕ್ಷ ಇತ್ಯೇವಾಹ ॥ ೨ ॥ ॥ ೩ ॥**

● ॥ ನಿಷ್ಠಾ—ಗಮನದ ಪರ್ಯವಸಾನವು ಅಂದರೆ ಮೋಕ್ಷವು (ಗಮನದ ಕೊನೆಯನ್ನು ಹೇಳತಕ್ಕ ನಿಷ್ಠಾಪದದಿಂದ ಸಂಸಾರಗತಿಯ ಪರ್ಯವಸಾನವಾದ ಮೋಕ್ಷವನ್ನು ಇಟ್ಟುಕೊಳ್ಳಬೇಕು) (೨) (ಜ್ಞಾನಕರ್ಮಗಳಿಂದ ಮೋಕ್ಷವೆಂದಂಗೀಕರಿಸಿದರೆ—**ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇ-ನೈಕೇ ಅಮೃತತ್ವಮಾನಶುಃ** ಇದುಮೊದಲಾದ ವೇದಗಳಲ್ಲಿ ಕರ್ಮಾದಿಗಳಿಂದ ಮೋಕ್ಷವು ಸಿಗುವುದಿಲ್ಲವೆಂದು ಹೇಳಿದ್ದರಿಂದ ಅವುಗಳಿಂದ ವಿರೋಧವು ಬರುವುದೆಂದರೆ) ಜ್ಞಾನಿಗಳಿಗೆ ಮೋಕ್ಷವಾಗುತ್ತದೆಂದು ನಿಶ್ಚಿತವು ಆದರೂ ಶುಭಕರ್ಮದಿಂದ ಆನಂದಾಭಿವೃದ್ಧಿಯು ಅಶುಭ ಕರ್ಮದಿಂದ ಆನಂದಹ್ರಾಸವು ಕರ್ಮದಿಂದ ಜ್ಞಾನವುಂಟಾಗುತ್ತದೆ, ಎಂದು ಪರಮಶ್ರುತಿಯು (ಅಂದರೆ (1) ಜ್ಞಾನಕರ್ಮಗಳಿಂದ ಮೋಕ್ಷವು ಸಿಗುತ್ತದೆಂದಂಗೀಕರಿಸಿದರೂ **ನ ಕರ್ಮಣಾ** ಎಂಬ ವೇದದಿಂದ ವಿರೋಧವು ಬರುವುದಿಲ್ಲ ಏಕೆಂದರೆ—ಕರ್ಮವಿಲ್ಲದೆ ಜ್ಞಾನಮಾತ್ರದಿಂದಲೇ ಮೋಕ್ಷವು ಸಿಗುತ್ತದೆಂದು ಆ ವೇದದ ಅಭಿಪ್ರಾಯವು ಕರ್ಮವು ಜ್ಞಾನಮಾತ್ರದಿಂದಲೇ ಸಿಗುವ ಮೋಕ್ಷದಲ್ಲಿ ಸುಖಾತಿಶಯವನ್ನು ಹುಟ್ಟಿಸುತ್ತದೆ (2) **ಜ್ಞಾನಿನಃ** ಎಂಬ ವೇದದಿಂದ ಮೋಕ್ಷವು ಜ್ಞಾನದಿಂದಲೇ; ಕರ್ಮದಿಂದ ಆನಂದಾಭಿವೃದ್ಧಿಯು ಎಂದು ಸಿಗುತ್ತದೆ) (೩) ಕರ್ಮದಿಂದಾಗಲೀ, ಮಕ್ಕಳಿಂದಾಗಲೀ, ದ್ರವ್ಯದಿಂದಾಗಲೀ ಮೋಕ್ಷವು ಸಿಗುವುದಿಲ್ಲ ಇತ್ಯಾದಿ ವೇದಗಳಿಂದ ವಿರೋಧವಿಲ್ಲ. (೪) ಜ್ಞಾನಯೋಗೇನ ಎಂಬಲ್ಲಿ ಕರ್ಮವನ್ನು ಇಟ್ಟುಕೊಳ್ಳಬೇಕು ಜ್ಞಾನಮಾತ್ರವಲ್ಲ, ಏಕೆಂದರೆ—ಜ್ಞಾನಮಾತ್ರದಿಂದಲೇ ಮೋಕ್ಷವೆಂದಂಗೀಕರಿಸಿದರೆ—**ನ ಕರ್ಮಣಾಮನಾರಂಭಾತ್** ಇದುಮೊದಲಾದ ವಾಕ್ಯವು ಕರ್ಮಯೋಗಿಗಳನ್ನು ಹೇಳಿದಂತೆ ಜ್ಞಾನ ಯೋಗಿಗಳನ್ನು ಹೇಳುತ್ತದೆ, ಇಂತಹ ವಾಕ್ಯಶೇಷದಿಂದ ವಿರೋಧವು (೫) (ಈ ವಾಕ್ಯವು ಕರ್ಮ

ಯೋಗಿಗಳನ್ನೂ ಜ್ಞಾನಯೋಗಿಗಳನ್ನೂ ಹೇಳುತ್ತದೆಂಬುದು ಹೇಗೆ ತಿಳಿಯುತ್ತದೆ ಎಂದರೆ) (1) **ನಹಿ ಕಶ್ಚಿತ್ ಕ್ಷಣಮಪಿ,** (2) **ಕರ್ಮೇಂದ್ರಿಯಾಣಿ ಸಂಯಮ್ಯ** ಇದುಮೊದಲಾದ ಪ್ರಮಾಣಗಳಿಂದ ಕರ್ಮ ಯೋಗಿಗಳನ್ನು ಹೇಳುವಂತೆ ಜ್ಞಾನಯೋಗಿಗಳನ್ನು ಹೇಳುತ್ತದೆಂದು ತಿಳಿಯತ್ತದೆ (ಕರ್ಮದಿಂದ ಮೋಕ್ಷ ದಲ್ಲಿ ಆನಂದಾಭಿವೃದ್ಧಿಯು ಆಗುತ್ತದೆಂಬುದು ಯುಕ್ತವಲ್ಲ **ನಾನ್ಯಃ ಪಂಥಾಃ** ಎಂಬ ವೇದದಲ್ಲಿ ಕರ್ಮಕ್ಕೆ ಮೋಕ್ಷಸಂಬಂಧವೇ ಇಲ್ಲವೆಂದು ಹೇಳಿದೆ ಎಂದರೆ) **ನಾನ್ಯಃ ಪಂಥಾಃ** ಎಂಬ ವೇದವು ಜ್ಞಾನವಿಲ್ಲದೆ ಮೋಕ್ಷವಿಲ್ಲೆವೆಂದೇ ಹೇಳುತ್ತದೆ, (ಅಂದರೆ ಜ್ಞಾನವು ಆವಶ್ಯಕವೇ ಎಂದೇ ಹೇಳುತ್ತದೆ ಕರ್ಮ ಸಂಬಂಧವು ಬೇಡವೆಂದು ಹೇಳುವುದಿಲ್ಲ) ‖ ೨ ‖ ‖ ೩ ‖

ಪೀ—(1) ಯತಿಧರ್ಮಗಳಾದ ಶಮದಮಾದಿಗಳನ್ನೇ ಮಾಡಬೇಕು ಗೃಹಸ್ಥಾಶ್ರಮಿಗಳ ಧರ್ಮ ಗಳನ್ನು ಮಾಡಕೂಡದು ಅದರಲ್ಲಿಯೂ ಯುದ್ಧವನ್ನು ಸರ್ವಥಾ ಮಾಡಕೂಡದು, ಎಂದು ಹೇಳುವ ಅರ್ಜುನನಿಗೆ ಜನಕಾದಿಗಳಂತೆ ನೀನು ಅಧಿಕಾರವರ್ಗದಲ್ಲಿ ಸೇರಿದವನಾದುದರಿಂದ ವರ್ಣಾಶ್ರಮಗಳಿಗೆ ಯೋಗ್ಯಗಳಾದ ಧರ್ಮಗಳನ್ನು ಮಾಡಲೇಬೇಕು, ಎಂದು ಹೇಳಿದೆ (2) ಈಗ ಕರ್ಮ ಮಾಡಕೂಡ ದೆಂದು ಹೇಳುವ ಅರ್ಜುನನಿಗೆ ಮೋಕ್ಷವು, **ನೈಷ್ಕರ್ಮ್ಯ** ಶಬ್ದದಿಂದ ಹೇಳಲ್ಪಡುವುದರಿಂದ ಕರ್ಮ ಮಾಡಕೂಡದೆಂದಭಿಪ್ರಾಯವೋ, ಅಥವಾ ಕರ್ಮವು ಸಂಸಾರಕ್ಕೆ ಕಾರಣವಾಗಿರುವುದರಿಂದ ಕರ್ಮ ಮಾಡದಿರುವದು ಮೋಕ್ಷಕ್ಕೆ ಕಾರಣವು ಎಂದೋ, (3) ಅಥವಾ **ಕರ್ಮಣಾ ಬಧ್ಯತೇ ಜಂತುಃ** ಎಂಬ ಸ್ಮೃತಿಯಿಂದ ಕರ್ಮವು ಮೋಕ್ಷಕ್ಕೆ ಪ್ರತಿಬಂಧಕವು ಎಂದೋ; ಅದರಲ್ಲಿ ಗನೇದ್ದು ಕೂಡುವುದಿಲ್ಲವೆನ್ನುತ್ತಾರೆ.

## ಗೀ ‖ ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।
## ನ ಚ ಸನ್ನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ‖ ೪‖

ಅ ‖ ಪುರುಷಃ=ಜೀವನು ಕರ್ಮಣಾಂ=ಕರ್ಮಗಳನ್ನು, ಅನಾರಂಭಾತ್=ಆರಂಭಮಾಡದಿರುವುದ ರಿಂದ, ನೈಷರ್ಮ್ಯಂ= ಕರ್ಮಾಕರಣದಿಂದ ಹೊಂದಲ್ಪಡುವುದರಿಂದ ನೈಷ್ಕರ್ಮ್ಯ ಎನಿಸಿದ ಮೋಕ್ಷವನ್ನು, ಅಶ್ನುತೇ= ಹೊಂದುತ್ತಾನೆಂದು ಹೇಳಿದ್ದೂ ಪುರುಷಃ=ಸದಾ ಸೂಕ್ಷ್ಮವಾದ ಅಥವಾ ಸ್ಥೂಲವಾದ ದೇಹ ದಿಂದ ಕೂಡಿದವನಾಗಿರುವುದರಿಂದ, ನ= ಕೂಡುವುದಿಲ್ಲ (ಅಂದರೆ ಕರ್ಮವನ್ನು ಮಾಡದಿರೋಣ ಮಾತ್ರದಿಂದ ಮೋಕ್ಷವೆಂಬ ಪಕ್ಷದಲ್ಲಿ ಕದಾಚಿತ ಕರ್ಮದಲ್ಲಿ ಅಧಿಕಾರವಿಲ್ಲದಿರುವ ಶರೀರವೂ ಬರಬಹು ದಾದುದರಿಂದ ಆ ದೇಹದಲ್ಲಿ ಕರ್ಮಾಕರಣ ಪ್ರಯುಕ್ತ ಮೋಕ್ಷವು ಸಿಗುವುದರಿಂದ ಈಗ ಕಾಣತಕ್ಕ ಪುರುಷತ್ವವು (ದೇಹ ಮುಕ್ತತ್ವವು) ಕೂಡದೆ ಹೋಗುವುದು ) (ತನೇದ್ದು ಕೂಡುವುದಿಲ್ಲ ಏತಕ್ಕೆಂದರೆ) (ಸಂಸಾರಕ್ಕೆ ಕಾರಣವಾದ ಕರ್ಮವು ಇಲ್ಲದಿರುವುದರಿಂದ ಕರ್ಮಗಳನ್ನು ಮಾಡದಿರೋಣದಿಂದ ಮೋಕ್ಷ ವನ್ನು ಹೊಂದುತ್ತಾನೆ, ಎಂದು ನೀನು ಹೇಳಿದ್ದು ಯುಕ್ತವಲ್ಲ ಏತಕ್ಕೆಂದರೆ ಸದಾ ಸೂಕ್ಷ್ಮ ಸ್ಥೂಲ ದೇಹಗಳು ತಪ್ಪಿದ್ದಲ್ಲ (ಅಂದರೆ ಅನಾದಿಯಾದ ಸಂಸಾರದಲ್ಲಿ ಕರ್ಮಪ್ರಯುಕ್ತ ಅನಂತ ಜನ್ಮಗಳು ಕೂಡುವುದರಿಂದ ಸದಾ ದೇಹವಿದೆ ಆ ದೇಹ ಪ್ರಯುಕ್ತ ಅನಂತ ಕರ್ಮಗಳೂ ಇರುವುದರಿಂದ ಈ ದೇಹದಲ್ಲಿ ಸಂಸಾರಕ್ಕೆ ಕಾರಣವಿಲ್ಲವೆಂದು ಹೇಳುವುದು ಕೂಡಲಾರದು ) (ಇನೇ ಪಕ್ಷವನ್ನು **ಯಜ್ಞಾ ರ್ಥಾತ್ಕರ್ಮಣೋಽನ್ಯತ್ರ** ಎಂಬುವಲ್ಲಿ ನಿರಾಕರಿಸುವೆವು ) ಸನ್ನ್ಯಸನಾದೇವ=ಕಾಮ್ಯಕರ್ಮವನ್ನು ಮಾಡ ದಿರೋಣ ಮಾತ್ರದಿಂದಲೇ, (ನಿವೃತ್ತಕರ್ಮವನ್ನ ಮಾಡೋಣಮಾತ್ರದಿಂದ) ಸಿದ್ಧಿಂ=ಮೋಕ್ಷವನ್ನು, ನ ಸಮಧಿಗಚ್ಛತಿ=ಹೊಂದುವುದಿಲ್ಲ (ಮತ್ತೆ ಅಂತಃಕರಣಶುದ್ಧಿ ವಿಷಯವೈರಾಗ್ಯಾದಿ ಶ್ರವಣ ಮನನ ಧ್ಯಾನ ಜ್ಞಾನ ದ್ವಾರಾ ಮೋಕ್ಷವನ್ನು ಹೊಂದುತ್ತಾನೆ ) ‖ ೪ ‖

ಟೀ—ಮೋಕ್ಷವು ಕರ್ಮಸಾಧ್ಯವೆಂದು ನ ಕರ್ಮಣಾಂ ಎಂಬ ಶ್ಲೋಕವು ಹೇಳುತ್ತದೆ ಎಂಬ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುತ್ತಾರೆ.

ಭಾ ॥ (೧) ಇತಶ್ಚ ನಿಯೋಕ್ಷ್ಯಾಮೀತ್ಯಾಹ । ನ ಕರ್ಮಣಾಮಿತಿ ॥ (೨) ನ ಕರ್ಮಣಾಂ ಯುದ್ಧಾದೀನಾಮನಾರಂಭೇಣ ನೈಷ್ಕರ್ಮ್ಯಂ ನಿಷ್ಕರ್ಮತಾಂ ಕಾಮ್ಯಕರ್ಮಪರಿತ್ಯಾಗೇನ ಪ್ರಾಪ್ಯತ ಇತಿ ಮೋಕ್ಷಂ ನಾಶ್ನುತೇ ॥ (೩) ಜ್ಞಾನಮೇವ ತತ್ಸಾಧನಂ ನ ತು ಕರ್ಮಾಕರಣಮಿತ್ಯರ್ಥಃ । ಕುತಃ । ಪುರುಷತ್ವಾತ್ । ಸರ್ವದಾ ಸ್ಥೂಲೇನ ಸೂಕ್ಷ್ಮೇಣ ವಾ ಪುರೇಣ ಯುಕ್ತೋ ನನು ಜೀವಃ ॥ (೪) ಯದಿ ಕರ್ಮಾಕರಣೇನ ಮುಕ್ತಿಃ ಸ್ಯಾತ್ ಸ್ಥಾವರಾಣಾಂ । ನ ಚಾಕರಣೇ ಕರ್ಮಾಭಾವಾನ್ಮುಕ್ತಿರ್ಭವತಿ । ಪ್ರತಿಜನ್ಮಕೃತಾನಾಮನಂತಕರ್ಮಣಾಂ ಭಾವಾತ್ ॥ ನ ಚ ಸರ್ವಾಣಿ ಕರ್ಮಾಣಿ ಭುಕ್ತಾನಿ । ಏಕಸ್ಮಿನ್ ಶರೀರೇ ಬಹೂನಿ ಹಿ ಕರ್ಮಾಣಿ ಕರೋತಿ । ತಾನಿ ಚೈಕೈಕಾನಿ ಬಹುಜನ್ಮಫಲಾನಿ ಕಾನಿಚಿತ್ ॥ (೬) ತತ್ರ ಚೈಕೈಕಾನಿ ಕರ್ಮಾಣಿ ಭುಂಜನ್ ಪ್ರಾಪ್ನೋತ್ಯೇವ ಶೇಷೇಣ ಮಾನುಷ್ಯಂ । ತತಶ್ಚ ಬಹುಶರೀರಫಲಾನಿ ಕರ್ಮಾಣೀತ್ಯಸಮಾಪ್ತಿಃ ॥ ೧ ॥

ಅ ॥ (೧) ಬೇರೆ ಯುಕ್ತಿಯಿಂದಲೂ (ತನ್ನ ವರ್ಣಾಶ್ರಮಗಳಿಗೆ ಉಚಿತಗಳಾದ ಯುದ್ಧಾದಿಗಳಲ್ಲಿ) ಪ್ರೇರೇಪಿಸುವೆನು ಎಂದು ನ ಕರ್ಮಣಾಂ ಎಂಬ ಶ್ಲೋಕದಿಂದ ಹೇಳುತ್ತಾರೆ) (೨) ಮೊದಲು ಅಧಿಕಾರ ವರ್ಗದಲ್ಲಿ ಸೇರಿದವನಾದುದರಿಂದ ಕರ್ಮ ಮಾಡಬೇಕೆಂದು ಹೇಳಿಯದೆ ಈಗ ಬೇರೆ ಯಾವುದು ಹೇತುವೆಂದರೆ) ಯುದ್ಧ ಮೊದಲಾದ ಕರ್ಮಗಳನ್ನು ಪ್ರಾರಂಭಿಸದೆ ಕಾಮ್ಯಕರ್ಮಪರಿತ್ಯಾಗಮಾಡಿದ್ರಿಂದ (ಹೊಂದಲ್ಪಡುವ ಕಾರಣ ನೈಷ್ಕರ್ಮ್ಯಂ=(ನಿಷ್ಕ್ರಾಂತಃ ಕರ್ಮಭ್ಯಃ ನಿಷ್ಕರ್ಮಾ ಕರ್ಮವನ್ನು ಬಿಟ್ಟವನು, ತಸ್ಯ ಭಾವಃ ನಿಷ್ಕರ್ಮತ್ವವನ್ನು (ಅಂದರೆ ಮೋಕ್ಷವನ್ನು) ಹೊಂದುವುದಿಲ್ಲ (ಅಂದರೆ ಕರ್ಮಗಳನ್ನು ಮಾಡಕೂಡದೆಂದು ಹೇಳುವವನ ಹತ್ತಿರ ಹೀಗೆ ಕೇಳಬೇಕು (೧) ಜ್ಞಾನವು ಮೋಕ್ಷಕ್ಕೆ ಸಾಧನವಲ್ಲ, ಮತ್ತೆ ಕರ್ಮಾಕರಣವೇ ಮೋಕ್ಷಕ್ಕೆ ಸಾಧನವು ಎಂಬ ಅಭಿಪ್ರಾಯದಿಂದ ಕರ್ಮಗಳನ್ನು ಬಿಡುವುದೋ, (೨) ಅಥವಾ ಜ್ಞಾನವು ಮೋಕ್ಷಸಾಧನವಾಗುತ್ತದ ಆದರೆ ಕರ್ಮಣಾ ಬಧ್ಯತೇ ಜಂತುಃ ಇದುಮೊದಲಾದ ಪ್ರಮಾಣಗಳಿಂದ ಕರ್ಮಗಳು ಮೋಕ್ಷಕ್ಕೆ ಪ್ರತಿಬಂಧಕಗಳೆಂದು ಕರ್ಮಗಳನ್ನು ಬಿಡುವುದೋ, ಒಂದನೇ ಕಲ್ಪದಲ್ಲಿಯೂ ಮೋಕ್ಷವು ಕರ್ಮಾಕರಣಪ್ರಾಪ್ಯತ್ವ ನಿಮಿತ್ತದಿಂದ ನೈಷ್ಕರ್ಮ್ಯವೆಂಬ ಶಬ್ದದಿಂದ ಹೇಳಲ್ಪಡುತ್ತದೆಂದು ಇಟ್ಟುಕೊಂಡು ಹೇಳುವುದೋ, ಅಥವಾ ಕ್ರಿಯಾ (ಗಮನಾದಿ) ಕಾರಕ (ಇಂದ್ರಿಯ) ಫಲ (ಸುಖಾದಿ)ರೂಪವಾದ ಸಂಸಾರಕ್ಕೆ ಕರ್ಮವೇ ಕಾರಣವು ಕರ್ಮಮಾಡದಿದ್ದರೆ ಕಾರಣವೇ ಇಲ್ಲದಿರುವುದರಿಂದ ಸಂಸಾರವೇ ಬರುವುದಿಲ್ಲವೆಂಬ ಯುಕ್ತಿಯಿಂದಲೋ ಅದರಲ್ಲಿ ೧ನೇದ್ದು ಯುಕ್ತವಲ್ಲ ಏಕೆಂದರೆ ನೈಷ್ಕರ್ಮ್ಯ ಶಬ್ದಕ್ಕೆ ಕಾಮ್ಯಕರ್ಮ ಪರಿತ್ಯಾಗದಿಂದ ಹೊಂದಲ್ಪಡುವುದರಿಂದ ಎಂಬ ಅರ್ಥವು ಕೂಡಬಹುದು (ಹೀಗೆ ಕರ್ಮಾಕರಣವು ಮೋಕ್ಷಸಾಧನವಲ್ಲವೆಂದು ಹೇಳಿದ್ರಿಂದ ಪ್ರಕೃತವೇನಾಯಿತೆಂದರೆ) ಜ್ಞಾನವೇ ಮೋಕ್ಷಕ್ಕೆ ಸಾಧನವು, ಕರ್ಮಾಕರಣವಲ್ಲ ನೈಷ್ಕರ್ಮ್ಯ ಶಬ್ದಕ್ಕೆ ಕಾಮ್ಯಕರ್ಮಾಪ್ರಾಪ್ಯವೆಂಬ ಅರ್ಥವನ್ನೇ ಒಡಂಬಟ್ಟು ಕರ್ಮಾಕರಣವು ಮೋಕ್ಷಸಾಧನವಲ್ಲವೆಂದು ಹೇಳಲಿಕ್ಕೆ ಹೇತುವು ಯಾವುದು? ಎಂದರೆ ಪುರುಷತ್ವಾತ್=ಯಾವಾಗಲೂ ಸ್ಥೂಲವಾದ ಶರೀರದಿಂದ ಅಥವಾ ಸೂಕ್ಷ್ಮವಾದ ಲಿಂಗಶರೀರದಿಂದ ಜೀವನು ಕೂಡಿಕೊಂಡೇ ಇರುವವನಷ್ಟೆ. (೪) ಕರ್ಮವನ್ನು

ಮಾಡದಿರೋಣದರಿಂದ ಮೋಕ್ಷವಾಗುವುದಾದರೆ ಕರ್ಮವನ್ನು ಮಾಡಲಿಕ್ಕೆ ಅಧಿಕಾರವಿಲ್ಲದವುಗಳಿಗೂ ಮೋಕ್ಷವಾಗಬೇಕಾಗುವುದು (ಅಂತೂ ಅನಾದಿಯಾದ ಸಂಸಾರದಲ್ಲಿ ಕದಾಚಿತ್ ಕರ್ಮದಲ್ಲಿ ಅಧಿಕಾರ ವಿಲ್ಲದಿರುವ ಶರೀರವು ಬರಬಹುದಾದುದರಿಂದ ಆ ದೇಹದಲ್ಲಿ ಕರ್ಮಮಾಡದಿರುವ ಪ್ರಯುಕ್ತ ಮೋಕ್ಷವು ಲಭಿಸುವುದರಿಂದ ಈಗ ದೇಹತ್ವದಿಂದ ಕೂಡುವಿಕೆಯು ಕೂಡದೆ ಹೋಗುವುದು. (ಸಂಸಾರಕ್ಕೆ ಕರ್ಮವು ಕಾರಣವು. ಕರ್ಮ ಮಾಡದಿದ್ದರೆ ಕಾರಣವಿಲ್ಲದಿರುವುದರಿಂದ ಸಂಸಾರವಾಗುವುದಿಲ್ಲವೆಂಬ ಯುಕ್ತಿಯನ್ನಿಕ್ಷ ಯಿಸಿ ಎಂಬ ಕಲ್ಪವೂ ಕೂಡುವುದಿಲ್ಲವೆನ್ನುತ್ತಾರೆ )ಕರ್ಮ ಮಾಡದಿದ್ದರೆ-ಸಂಸಾರಕ್ಕೆ ಕಾರಣವಿಲ್ಲದಿರುವುದ ರಿಂದ ಮೋಕ್ಷವಾಗುವುದಿಲ್ಲ (ಏಕೆಂದರೆ) ಪ್ರತಿಜನ್ಮಗಳಲ್ಲಿ ಮಾಡಿದ ಅನಂತಕರ್ಮಗಳು ಇದ್ದಾವೆ, (ಅಂದರೆ ದೇಹವಿದ್ದುದರಿಂದ ಅನಾದಿಯಾದ ಸಂಸಾರದಲ್ಲಿ ಕರ್ಮಾಧಿಕಾರವಿರುವ ಅನಂತಜನ್ಮಗಳು ಇದ್ದುದರಿಂದ ಅವುಗಳಲ್ಲಿ ಮಾಡಿದ ಅನಂತಕರ್ಮಗಳು ಇದ್ದುದರಿಂದ ಈ ಜನ್ಮದಲ್ಲಿ ಕರ್ಮಗಳನ್ನು ಮಾಡದಿರೋಣ ಮಾತ್ರದಿಂದ ಏನಾಗುವುದು? (೫) (ಮೊದಮೊದಲಿನ ಶರೀರಗಳಲ್ಲಿ ಮಾಡಿದ ಕರ್ಮಗಳು ಮೇಲು ಮೇಲಿನ ಶರೀರಗಳಲ್ಲಿ ಅನುಭವಿಸಲ್ಪಟ್ಟವೆ ಆದಕಾರಣ ಅನಂತಕರ್ಮಗಳು ಇರುವುದು ಹೇಗೆ? ಎಂದರೆ)ಎಲ್ಲಾ ಕರ್ಮಗಳು ಅನುಭೂತಗಳಾಗಲಿಲ್ಲ (ಏಕೆಂದರೆ)ಒಂದು ಶರೀರದಲ್ಲಿ ಅನೇಕ ಕರ್ಮಗಳನ್ನು ಮಾಡುತ್ತಾನೆ. (ಅಂದರೆ ಬಹುಕರ್ಮಗಳನ್ನು ಮಾಡುವುದರಿಂದ ಅಷ್ಟು ಅನುಭವಿಸಿ ಆಗುವುದಿಲ್ಲ. (ಬಹುಕರ್ಮಗಳೂ ಭೋಗಿಸಲ್ಪಡಬಹುದಷ್ಟೆ, ದೋಷವೇನು? ಎಂದರೆ) ಆ ಕರ್ಮಗಳ ಮಧ್ಯದಲ್ಲಿ ಕೆಲವು ಕರ್ಮಗಳು ಪ್ರತ್ಯೇಕ ಪ್ರತ್ಯೇಕ ಬಹು ಜನ್ಮಫಲಗಳನ್ನು ಕೊಡತಕ್ಕವುಗಳು (೬) ಆ ಕರ್ಮಗಳಲ್ಲಿ ಒಂದೊಂದು ಕರ್ಮಗಳನ್ನು ಅನುಭವಿಸಿಕೊಂಡು ಕರ್ಮಶೇಷದಿಂದ ಮನುಷ್ಯಜನ್ಮವನ್ನು ಹೊಂದು ತ್ತಾನೆ (ಮನಷ್ಯಜನ್ಮದಲ್ಲಿ ಕರ್ಮ ಮಾಡುವುದಿಲ್ಲವೆಂಬುದು ಸರ್ವಥಾ ಅಸಂಭಾವಿತವೆನ್ನುತ್ತಾರೆ) ಏವಂಚ ಕರ್ಮಗಳು ಬಹು ಶರೀರಗಳನ್ನು ಹೊಂದಿಸಿಕೊಡತಕ್ಕವುಗಳು ಆದಕಾರಣ ಭೋಗಿಸಿ ಕರ್ಮಗಳು ಸಮಾಪ್ತಗಳಾಗುವುದಿಲ್ಲ ॥ ೧ ॥

ಭಾ ॥ (೧) ತಚ್ಚೋಕ್ತಂ । ಜೀವಂಶ್ಚತುರ್ದಶಾದೂರ್ಧ್ವಂ ಪುರುಷೋ ನಿಯಮೇನ ತು । ಸ್ತ್ರೀ ವಾಽಪ್ಯನೂನದಶಕಂ ದೇಹಂ ಮಾನುಷಮಾರ್ಜತೇ । ಚತುರ್ದಶೋರ್ಧ್ವಜೀ- ವೀನಿ ಸಂಸಾರಶ್ಚಾದಿವರ್ಜಿತಃ । ಅತೋಽವಿಜ್ಞಾಯ ಪರಂ ದೇವಂ ಮೋಕ್ಷಾಶಾ ಕಾ ಮಹಾಮುನ ಇತಿ ಬ್ರಾಹ್ಮೇ ॥ (೨) ಯದಿ ಸಾದಿಃ ಸ್ಯಾತ್ಸಂಸಾರಃ ಪೂರ್ವಕರ್ಮಾ- ಭಾವಾದತತ್ಪ್ರಾಪ್ತಿಃ । ಅಬಂಧಕತ್ವಂ ತ್ವಕಾಮೇನೈವ ಭವತಿ । ತಚ್ಚ ವಕ್ಷ್ಯತೇ । ಅನಿಷ್ಟಮಿಷ್ಟಮಿತಿ ॥ (೩) ನನು ನಿಷ್ಕಾಮಕರ್ಮಣಃ ಫಲಾಭಾವಾನ್ಮೋಕ್ಷಃ ಸ್ಮೃತಃ ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತಮಿತಿ ಚೋಚ್ಯತೇ । ನಿವೃತ್ತಂ ಸೇವಮಾ- ನಸ್ತು ಬ್ರಹ್ಮಾಭ್ಯೇತಿ ಸನಾತನಮಿತಿ ಮಾನವೇ ॥ (೪) ಅತಸ್ತತ್ಸಾಮ್ಯಾದಕರಣೇಽಪಿ ಭವತೀತ್ಯತ ಆಹ । ನ ಚೇತಿ । ಸನ್ನ್ಯಾಸಃ ಕಾಮ್ಯಕರ್ಮಪರಿತ್ಯಾಗಃ । ಕಾಮ್ಯಾ- ನಾಂ ಕರ್ಮಣಾಂ ನ್ಯಾಸಂ ಸನ್ನ್ಯಾಸಮಿತಿ ವಕ್ಷ್ಯಮಾಣತ್ವಾತ್ । ಅಕಾಮಕರ್ಮ- ಣಾಮಂತಃಕರಣಶುದ್ಧಿದ್ವಾರಾ ಜ್ಞಾನಾನ್ಮೋಕ್ಷೋ ಭವತಿ । ತಚ್ಚೋಕ್ತಂ । ಕ- ರ್ಮಭಿಃ ಶುದ್ಧಸತ್ತ್ವಸ್ಯ ವೈರಾಗ್ಯಂ ಜಾಯತೇ ಹೃದೀತಿ ಭಾಗವತೇ ॥ ೨ ॥

ಅ ॥ (೧) ಆ ಪ್ರಮೇಯವು ಹೇಳಲ್ಪಟ್ಟಿದೆ. ೧೪ ವರ್ಷಗಳಿಗಿಂತ ಮೇಲೆ ಜೀವಿಸುತ್ತಿರುವ ಅನಾದಿ ಯಾದ ದೇಹಸಂಬಂಧವಿರುವ ಪುರುಷನಾಗಲೀ ೧೪ ವರ್ಷಗಳಿಗಿಂತ ಮೇಲೆ ಜೀವಿಸುತ್ತಿರುವ ಸ್ತ್ರೀ

ಮಾಗಲೀ ನಿಯಮವಾಗಿ ಹತ್ತಕ್ಕೆ ಕಡಿಮೆಯಾಗದ ಮನುಷ್ಯದೇಹವನ್ನು ಹೊಂದಿಸಿಕೊಡುವ ಕರ್ಮವನ್ನು ಕೊಂದುತ್ತಾನೆ ಸಂಸಾರವು ಆದಿಯಿಲ್ಲದಿರುವುದು ಕರ್ಮಗಳು ಅನಂತಗಳಾಗಿದ್ದುದರಿಂದ ಭೋಗಿಸಿ ಶಮಾಪ್ತಗಳಾಗುವುದಿಲ್ಲ ಆದುದರಿಂದ ಸರ್ವೋತ್ತಮನಾದ ಶ್ರೀಹರಿಯನ್ನು ತಿಳಿಯದೆ ಮೋಕ್ಷದಲ್ಲಿ ಅಭಿಲಾಷೆಯು ಹೇಗೆ? ಎಂದು ಬ್ರಾಹ್ಮ ಪುರಾಣದಲ್ಲಿದೆ (೨) ಸಂಸಾರವು ಸಾದಿಯಾದರೆ ಪೂರ್ವಕರ್ಮ ವಿಲ್ಲದಿರುವುದರಿಂದ ದೇಹಸಂಬಂಧವು ಕಾದಾಚಿತ್ಕವಾಗಿರುವುದರಿಂದ ಬಾರದೆ ಹೋಗುವುದು (ಆದ ಕಾರಣ ಅನಾದಿ ದೇಹ ಸಂಬಂಧವನ್ನು ಅಂಗೀಕರಿಸಲೇ ಬೇಕು) (ಜನ್ಮಾಂತರೀಯ ಅನಂತ ಕರ್ಮ ಗಳಿರಲಿ ಆದರೂ ಮುಂದಿನ ಜನ್ಮವನ್ನು ಹೊಂದಿಸಿಕೊಡುವ ಕರ್ಮಗಳನ್ನು ತಿಳಿದವರು ಹೇಗೆ ಮಾಡಿ ಯಾರು? ಎಂದರೆ) ಕರ್ಮಗಳು ಸಂಸಾರಬಂಧಕ್ಕೆ ಕಾರಣಗಳಲ್ಲವೆಂಬುದು ಫಲಕಾಮನಾ ಇಲ್ಲದೇನೇ ತಗುತ್ತದೆ ಕರ್ಮಗಳನ್ನು ಮಾಡದಿರೋಣದರಿಂದ ಅಲ್ಲ) ಆ ಪ್ರಮೇಯವು ಅನಿಷ್ಟಮಿಷ್ಟಂ ಎಂಬು ವಲ್ಲಿ ಹೇಳುವರು ಅದು ಶ್ರೀಹರಿಗೆ ಸಮ್ಮತವಾಗಿದೆ (೩) (ನ ಚ ಸನ್ನ್ಯಸನಾದೇವ ಎಂಬಲ್ಲಿ ಕರ್ಮತ್ಯಾಗವು ಮೋಕ್ಷಸಾಧನವಲ್ಲವೆಂದು ಹೇಳಿದ್ದರಿಂದ ಪೂರ್ವಾರ್ಧದಿಂದ ಪುನರುಕ್ತವಾಯಿತೆಂದರೆ) ಹಾಗಾದರೆ ಫಲೇಚ್ಛೆಯನ್ನು ತೊರೆದು ಜ್ಞಾನಪೂರ್ವಕ ಕರ್ಮವು ನಿವೃತ್ತವೆನಿಸುತ್ತದೆ ನಿವೃತ್ತಕರ್ಮವನು ಸೇವಿಸುವವನು ಶಬ್ದದೇಕಪ್ರಕಾರನಾದ ಪರಬ್ರಹ್ಮನನ್ನು ಹೊಂದುತ್ತಾನೆ, ಎಂದು ಮನುಪ್ರಣೀತವಾಕ್ಯ ವಲ್ಲಿ ನಿಷ್ಕಾಮ ಕರ್ಮದಿಂದ ಮೋಕ್ಷವು ಹೇಳಿದೆ ಬೇರೆ ಉಪಪತ್ತಿಯು ಕಾಣದಿರುವುದರಿಂದ ನಿಷ್ಕಾಮ ಕರ್ಮಕ್ಕೆ ಮೋಕ್ಷಾತಿರಿಕ್ತ ಫಲವಿಲ್ಲದಿರುವುದರಿಂದ ಎಂದೇ ಹೇಳಬೇಕು ಅಲ್ಲಿ ಫಲಾಭಾವವೇ ಪ್ರಧಾನವು ೪) ಹೀಗೆ ಫಲಭಾವವೇ ಪ್ರಧಾನವು ಕರ್ಮವನ್ನು ಮಾಡದಿದ್ದರೂ ಫಲಾಭಾವವು ಸಮಾನವಾಗಿರುವು ದರಿಂದ ಮೋಕ್ಷವು ಆಗಿಯೇ ಆಗುತ್ತದೆ ಹೋದ ಜನ್ಮದ ಕರ್ಮಫಲವನ್ನು ಭೋಗಿಸಬೇಕೆಂದು ಹೇಳಿದ್ದು ನಿಷ್ಕಾಮಕರ್ಮ ಎಂಬ ಪಕ್ಷದಲ್ಲಿಯೂ ಭೋಗಿಸಬೇಕಾದ ಕರ್ಮಫಲವು ಸಮಾನವೇ (ಆದ ಕಾರಣ ಕರ್ಮಗಳನ್ನು ಮಾಡುವುದಿಲ್ಲ) ಎಂದರೆ—ನ ಚ ಸನ್ನ್ಯಸನಾದೇವ ಎಂಬುದರಿಂದ ಪರಿಹರಿ ಸುತ್ತಾರೆ) ಕಾಮ್ಯಾನಾಂ ಕರ್ಮಣಾಂ ಎಂದು ಮುಂದೆ ಹೇಳುವುದರಿಂದ ಸನ್ನ್ಯಾಸಃ = ಕಾಮ್ಯಕರ್ಮ ಪರಿತ್ಯಾಗವು (ಸನ್ನ್ಯಾಸ ಪದದಿಂದ ನಿಷ್ಕಾಮ ಕರ್ಮವನ್ನು ಮಾಡುವುದೆಂದು ಇಟ್ಟುಕೊಳ್ಳಬೇಕು ನಿಷ್ಕಾಮ ಕರ್ಮವನ್ನು ಮಾಡುವುದರಿಂದ ಮಾತ್ರ ಮೋಕ್ಷವಾಗುವುದಿಲ್ಲ ಮತ್ತೆ ನಿಷ್ಕಾಮ ಕರ್ಮ ಮಾಡುವ ಜೀವರಿಗೆ ಅಂತಃಕರಣ ಶುದ್ಧಿಯಾಗಿ ಜ್ಞಾನದಿಂದ ಮೋಕ್ಷವುಂಟಾಗುತ್ತದೆ ಆ ಪ್ರಮೇ ಯವು, ಕರ್ಮಗಳಿಂದ ಶುದ್ಧವಾದ ಅಂತಃಕರಣವುಳ್ಳವನಿಗೆ ಹೃದಯದಲ್ಲಿ ವೈರಾಗ್ಯವು ಹುಟ್ಟುತ್ತದೆ ಎಂದು ಭಾಗವತದಲ್ಲಿದೆ || ೨ ||

ಟೀ—ಇಲ್ಲಿ ವೈರಾಗ್ಯವು ಹುಟ್ಟುತ್ತದೆಂದು ಹೇಳಿದೆ, ಜ್ಞಾನವು ಹುಟ್ಟುತ್ತದೆಂದು ಹೇಳಲಿಲ್ಲ ಎಂದರೆ–

ಭಾ || (೧) ವಿರಕ್ತಾನಾಮೇವ ಚ ಜ್ಞಾನಮಿತ್ಯುಕ್ತಂ । ನ ತಸ್ಯ ತತ್ತ್ವಗ್ರಹಣಾಯ ಸಾಕ್ಷಾದ್ವರೀಯಸೀರಪಿ ವಾಚಃ ಸಮಾಸನ್ । ಸ್ವಪ್ನೇ ನಿರುಕ್ತ್ಯಾ ಗೃಹಮೇಧಿಸೌಖ್ಯಂ ನ ಯಸ್ಯ ಹೇಯಾನುಮಿತಂ ಸ್ವಯಂ ಸ್ಯಾದಿತಿ । ನ ತು ಫಲಾಭಾವಾತ್ । ಕರ್ಮಾಭಾವಾತ್ । ಅತೋ ನ ಕರ್ಮತ್ಯಾಗ ಏವ ಮೋಕ್ಷಸಾಧನಂ || (೨) ಯತ್ಯಾಶ್ರಮಸ್ತು ಪ್ರಾಯತ್ಯಾರ್ಥೋ ಭಗವತ್ತೋಷಣಾರ್ಥಶ್ಚ || (೩) ಅಪ್ರಯತತ್ವಮೇವ ಹಿ ಪ್ರಾಯೋ ಗೃಹಸ್ಥಾದೀನಾಂ । ಇತರಕರ್ಮೋದ್ಯೋಗಾತ್ । ಅಪ್ರಯತಾನಾಂ ಚ ನ ಜ್ಞಾನಂ । ತಥಾ ಹಿ ಶ್ರುತಿಃ । ನಾಶಾಂತೋ ನಾಸಮಾಹಿತ ಇತಿ || (೪) ಮಹಾಂಶ್ಚ ಯತ್ಯಾಶ್ರಮೇ ತೋಷೋ ಭಗವತಃ । ತಥಾ ಹ್ಯಾಹ । ಯತ್ಯಾಶ್ರಮಂ ತುರೀಯಂ

**ತು ದೀಕ್ಷಾಂ ಮಮ ಸುತೋಷಿಣೀಮಿತಿ ನಾರಾಯಣಾಷ್ಟಾಕ್ಷರಕಲ್ಪೇ ॥ (೫) ಅಧಿಕಾರಿಕಾಸ್ತು ತತ್ಸ್ಥಾ ಏವ ಪ್ರಾಯಶ್ಯೋ ಸಮರ್ಥಾಃ । ಸ ಏವ ಚ ಮಹಾನ್ ಭಗವತ್ತೋಷಃ ॥ (೬) ತಚ್ಚೋಕ್ತಂ । ದೇವಾದೀನಾಮಾದಿರಾಜ್ಞಾಂ ಮಹೋದ್ಯೋಗೇಽಪಿ ನೋ ಮನಃ । ವಿಷ್ಣೋಶ್ಚಲತಿ ತದ್ಯೋಗೋಽಪ್ಯತೀವ ಹರಿತೋಷಣಮಿತಿ ಪಾದ್ಮೇ ॥ ೩ ॥ ॥ ೪ ॥**

ಅ ॥ (೧) ವೈರಾಗ್ಯಹೊಂದಿದವರಿಗೇನೇ ಜ್ಞಾನವುಂಟಾಗುತ್ತದೆಂದು ಹೇಳಿದೆ ಸ್ಪಷ್ಟದೃಷ್ಟಾಂತದಿಂದ ಗೃಹಸ್ಥಾಶ್ರಮಿಗಳ ಆನಂದವು ಹೇಯವೆಂದು ಯಾರು ತಿಳಿಯುವುದಿಲ್ಲವೋ, ಅಂತಹವರಿಗೆ ಭಗವತ್ತತ್ವವನ್ನು ತಿಳಿಸಲಿಕ್ಕೆ ಸರ್ವೋತ್ಕೃಷ್ಟಗಳಾದ ವೇದ ವಚನಗಳೂ ಸಮರ್ಥಗಳಾಗುವುದಿಲ್ಲ, (ಅಂದರೆ ತತ್ವಜ್ಞಾನವು ಹುಟ್ಟುವುದಿಲ್ಲ,) (ಈ ಪ್ರಮಾಣದಿಂದ ವೈರಾಗ್ಯದಿಂದ ಜ್ಞಾನವು ಹುಟ್ಟುತ್ತದೆಂದು ತಿಳಿಯುತ್ತದೆ) (ಅಂತಃಕರಣಶುದ್ಧಿ ವೈರಾಗ್ಯಗಳು ಜ್ಞಾನಸಾಧನಗಳಾದಾಗ್ಯೂ ವಿರೋಧ ಪರಿಹಾರವು ಹೇಗೆ? ಗೀತೆಯಲ್ಲಿ ನಿಷ್ಕಾಮ ಕರ್ಮಗಳು ಮೋಕ್ಷಸಾಧನಗಳಲ್ಲ ಎಂದು **ನ ಚ ಸನ್ನ್ಯಸನಾತ್** ಎಂಬಲ್ಲಿ ಹೇಳಿದೆ ಎಂದರೆ—ಗೀತೆಯ ಅಭಿಪ್ರಾಯ ಹೇಳುತ್ತಾರೆ) ಫಲವಿಲ್ಲದಿರುವ ಪ್ರಯುಕ್ತ ನಿವೃತ್ತಕರ್ಮಗಳು ಮೋಕ್ಷಸಾಧನಗಳಲ್ಲವೆಂದು ಹೇಳಿದ್ದು ಸ್ವರೂಪತಃ ಅಲ್ಲ. ಆವಕಾರಣ ಕರ್ಮವನ್ನು ಮಾಡದಿರೋಣದರಿಂದ ಮೋಕ್ಷವಲ್ಲ ಕರ್ಮತ್ಯಾಗವೇ ಮೋಕ್ಷಸಾಧನವಲ್ಲ (೨) (ಹಾಗಾದರೆ ಸನ್ನ್ಯಾಸಾಶ್ರಮವು ಮೋಕ್ಷಸಾಧನವೆಂದು ವೇದಾದಿಗಳಲ್ಲಿ ಪ್ರಸಿದ್ಧವಾಗಿದೆ ಯತ್ಯಾಶ್ರಮ ವಿಹಿತಗಳಾದ ಧರ್ಮಗಳಿಗೆ ಫಲವಿಲ್ಲದಿರುವುದೇ ಉಪಪತ್ತಿಯು. ಫಲಾಭಾವವು ಸಮಾನವಾಗಿರುವುದರಿಂದ ಯುದ್ಧಾದಿ ಕರ್ಮವನ್ನು ಮಾಡದಿದ್ದರೂ ಮೋಕ್ಷವಾಗುತ್ತದೆ, ಎಂದರೆ- **ನ ಚ ಸನ್ನ್ಯಸನಾದೇವ** ಎಂದು ಹೇಳಿದ್ದು ಸನ್ನ್ಯಾಸವು ಮೋಕ್ಷಕ್ಕೆ ಅಂಗವಾಗದಿದ್ದರೆ—ವೇದಾದಿಗಳಿಂದ ವಿರೋಧವು ಬರುತ್ತದೆಂದರೆ—) ಯತ್ಯಾಶ್ರಮವು ಶ್ರೀಹರಿಯಲ್ಲಿ ಮನಸ್ಸನ್ನು ಇಡುವುದಕ್ಕಾಗಿಯೂ, ಧ್ಯಾನಾದಿಗಳಿಂದ ಶ್ರೀಹರಿಯನ್ನು ಸಂತೋಷಗೊಳಿಸುವುದಕ್ಕಾಗಿಯೂ ಇರತಕ್ಕದ್ದು (ಈ ಎರಡರಿಂದ ಯತ್ಯಾಶ್ರಮವು ಮೋಕ್ಷಸಾಧನವೆಂದು ವೇದಾದಿಗಳ ಅಭಿಪ್ರಾಯವು) (೩) (ಬೇರೆ ಆಶ್ರಮಗಳಲ್ಲಿಯೂ ಶ್ರೀಹರಿಯಲ್ಲಿ ಮನಸ್ಸನ್ನು ಇಡಲಿಕ್ಕೆ ಸಾಧ್ಯವಿರುವುದರಿಂದ ಸನ್ನ್ಯಾಸಾಶ್ರಮವು ಏತಕ್ಕೆಂದರೆ) ಗೃಹಸ್ಥಾಶ್ರಮಿ ವಾನಪ್ರಸ್ಥ ಬ್ರಹ್ಮಚಾರಿ ಇವರು ಪ್ರಾಯಶಃ ಶ್ರೀಹರಿಯಲ್ಲಿ ಮನಸ್ಸನ್ನು ಇಡುವುದಿಲ್ಲ ಅವರು ಯಜನ ಮೊದಲಾದ ಬೇರೆ ಕರ್ಮಗಳಲ್ಲಿಯೇ ಆಸಕ್ತರಾಗಿರುತ್ತಾರೆ ಶ್ರೀಹರಿಯಲ್ಲಿಯೇ ಮನಸ್ಸನ್ನು ಇಡದಿದ್ದವರಿಗೆ ಜ್ಞಾನವು ಹುಟ್ಟುವುದಿಲ್ಲ ಹಾಗೆಯೇ ವೇದವಿದೆ (**ನಾವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ । ನಾಶಾಂತಮಾನಸೋ ವಾಽಪಿ ಪ್ರಜ್ಞಾನೇನೈನಮಾಪ್ನುಯಾತ್** । ದುಶ್ಚರಿತ್ರೆಯನ್ನು ಬಿಡದಿದ್ದವನು ಪ್ರಜ್ಞಾನದಿಂದ ಶ್ರೀಹರಿಯನ್ನು ಹೊಂದಲಾರನು ) ಫಲದಲ್ಲಿಯೇ ಬುದ್ಧಿಯನ್ನಿಟ್ಟವನಾದುದರಿಂದ ಶ್ರೀಹರಿಯಲ್ಲಿ ಬುದ್ಧಿಯಿಡದಿದ್ದವನು, ಫಲವನ್ನು ಇಚ್ಛಿಸುತ್ತಾ ಬಾಹ್ಯಕರ್ಮಗಳಲ್ಲಿ ಉದ್ಯೋಗವಿದ್ದುದರಿಂದ ಮನಸ್ಸ್ವಾಸ್ಥ್ಯವಿಲ್ಲದವನು ಶ್ರೀಹರಿಯನ್ನು ಹೊಂದಲಾರನು (ಅಶಾಂತಮಾನಸಃ=ಕರ್ಮೇಂದ್ರಿಯಗಳನ್ನು ನಿಗ್ರಹಿಸಿಕೊಂಡರೂ ವಿಷಯಗಳನ್ನು ಸ್ಮರಿಸಿಕೊಂಡಿರುವವನು ಶ್ರೀಹರಿಯನ್ನು ಹೊಂದಲಾರನು) (೪) (ಆಶ್ರಮಾಂತರದಿಂದಲೂ ಶ್ರೀಹರಿಗೆ ತೃಪ್ತಿಯನ್ನು ಮಾಡಬಹುದಾದುದರಿಂದ ಯತ್ಯಾಶ್ರಮವೇ ಏತಕ್ಕೆಂದರೆ) ಶ್ರೀಹರಿಗೆ ಸನ್ನ್ಯಾಸಾಶ್ರಮದಲ್ಲಿಯೇ ಪರಮ ಸಂತೋಷವು ಅದನ್ನು ಸಪ್ರಮಾಣವಾಗಿ ಹೇಳುತ್ತಾರೆ ಪರಮಹಂಸ ರೂಪವಾದ ಸನ್ನ್ಯಾಸಾಶ್ರಮವನ್ನು ನನಗೆ ತೃಪ್ತಿಕರವನ್ನಾಗಿ (ತಿಳಿ) ಎಂದು ನಾರಾಯಣಾಷ್ಟಾಕ್ಷರಕಲ್ಪದಲ್ಲಿದೆ (೫) (ಸನ್ನ್ಯಾಸಾಶ್ರಮದಲ್ಲಿಯೇ ಶ್ರೀಹರಿಯಲ್ಲಿ ಮನಸ್ಸನ್ನು ಸ್ಥಿರವಾಗಿ ಇಡುವುದು ಶ್ರೀಹರಿಗೆ ಅದರಲ್ಲಿಯೇ ತೃಪ್ತಿಯು ಎಂದಾದರೆ—ಯತ್ಯಾಶ್ರಮವಿಲ್ಲದಿರುವ ಅಧಿಕಾರವರ್ಗದಲ್ಲಿರುವ ಗೃಹ

ಸ್ಥಾದಿಗಳಿಗೆ, ಮನಃಪ್ರಣಿಧಾನ, ಶ್ರೀಹರಿಗೆ ತೃಪ್ತಿ, ಇವೆರಡೂ ಇಲ್ಲವೆಂದಾಗಬೇಕಾಗುವುದು, ಎಂದರೆ ಅಧಿಕಾರ ವರ್ಗದಲ್ಲಿದ್ದ ಪ್ರಿಯವ್ರತಾದಿಗಳು ಅಧಿಕಾರದಲ್ಲಿದ್ದೇ ಶ್ರೀಹರಿಯಲ್ಲಿ ಮನಸ್ಸನ್ನು ಸ್ಥಿರವಾಗಿ ಇಡಲಿಕ್ಕೆ ಸಮರ್ಥರಾಗಿರುತ್ತಾರೆ. ಆ ಅಧಿಕಾರವೇ ಶ್ರೀಹರಿಗೆ ಮಹಾ ಸಂತೋಷಕರವು (೬) ಆ ಪ್ರಮೇಯವು ಹೇಳಲ್ಪಟ್ಟದೆ. ದೇವತೆಗಳೇ ಮೊದಲಾದವರಿಗೂ ಆದಿರಾಜರಿಗೂ ಮಹೋದ್ಯೋಗವಿದ್ದರೂ ಮನಸ್ಸು ಶ್ರೀವಿಷ್ಣುವಿನಿಂದ ಚಲಿಸುವುದಿಲ್ಲ (ಸರ್ವದಾ ಶ್ರೀವಿಷ್ಣುವಿನಲ್ಲಿಯೇ ಮನಸ್ಸನ್ನು ಇಡುತ್ತಾರೆ) ಸ್ವಾಧಿಕಾರ ಪ್ರಯುಕ್ತ ಪದಭೋಗವು ಶ್ರೀಹರಿಗೆ ವಿಶೇಷತಃ ಸಂತೋಷಕರವು ಎಂದು ಪಾದ್ಮ ಪುರಾಣದಲ್ಲಿದೆ. ॥ ೩ ॥ ॥ ೪ ॥

ಪೀ—ಕರ್ಮಣಾ ಬಧ್ಯತೇ ಜಂತುಃ ಇತ್ಯಾದಿ ಸ್ಮೃತಿಬಲದಿಂದ ಕರ್ಮವು ಮೋಕ್ಷಕ್ಕೆ ಪ್ರತಿಬಂಧಕವು ಎಂದಿಟ್ಟುಕೊಂಡು ಯಜ್ಞಾರ್ಥಾತ್ಕರ್ಮಣಃ ಎಂಬುವಲ್ಲಿ ಭಗವದ್ಭಕ್ತರಲ್ಲದವರು ಮಾಡಿದ ಕರ್ಮವೆಂದು ಕರ್ಮಶಬ್ದಕ್ಕೆ ಅರ್ಥಸಂಕೋಚ ಮಾಡಿಕೊಂಡು ಕರ್ಮಗಳನ್ನು ಸರ್ವಾತ್ಮನಾ ಬಿಡಲು ಸಾಧ್ಯವಿಲ್ಲವೆನ್ನುತ್ತಾರೆ—

**ಗೀ ॥ ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥ ೫ ॥**

ಅ ॥ ಜಾತು=ಯಾವಾಗಲೂ ಯಾವ ಅವಸ್ಥೆಯಲ್ಲಿಯೂ ಕ್ಷಣಮಪಿ=ಒಂದು ಕ್ಷಣವಾದರೂ, ಕಶ್ಚಿತ್=ಜ್ಞಾನಿಯಾಗಲೀ, ಅಜ್ಞಾನಿಯಾಗಲೀ, ಯಾವನೊಬ್ಬನೂ, ಅಕರ್ಮಕೃತ್=ಕರ್ಮಗಳನ್ನು ಮಾಡದಿರುವವನಾಗಿ, ನತಿಷ್ಠತಿ=ಇರುವುದಿಲ್ಲ ಹಿ=ಏಕೆಂದರೆ, ಅವಶಃ=ಸರ್ವಸ್ವತಂತ್ರಕರ್ತನಾದ ವಿಷ್ಣುವಿನ ಅಧೀನರಾಗಿಯೇ ಇರುವ, ಸರ್ವಃ=ಎಲ್ಲಾ ಜೀವರಿಂದಲೂ, ಪ್ರಕೃತಿಜೈಃ ಗುಣೈಃ=ಪ್ರಕೃತಿ ಕಾರ್ಯಗಳಾದ ಸತ್ವರಜಸ್ತಮೋಗುಣಗಳಿಂದ, ಕರ್ಮ=ಕರ್ಮವು, ಕಾರ್ಯತೇ=ಮಾಡಲ್ಪಡುತ್ತದೆ ॥ ೫ ॥

ಪೀ—ಜ್ಞಾನವಿಲ್ಲದಿದ್ದು ಕರ್ಮತ್ಯಾಗರೂಪವಾದ ಯತ್ಯಾಶ್ರಮದಿಂದ ಮೋಕ್ಷವನ್ನು ಹೊಂದುವುದಿಲ್ಲವೆಂದು ಮೊದಲು ಹೇಳಿದೆ. ಆ ವಿಷಯದಲ್ಲಿ ನಹಿ ಕಶ್ಚಿತ್ ಎಂಬುದರಿಂದ ಹೇತುವು ಹೇಳಲ್ಪಡುತ್ತದೆ. ಎಂದು ಪರರು ಹೇಳುತ್ತಾರೆ. ಅದು ಅಯುಕ್ತವೆಂಬ ಅಭಿಪ್ರಾಯದಿಂದ ಶ್ಲೋಕದ ತಾತ್ಪರ್ಯ ಹೇಳುತ್ತಾರೆ—

**ಭಾ ॥ ನ ತು ಕರ್ಮಾಣಿ ಸರ್ವಾತ್ಮನಾ ತ್ಯಕ್ತುಂ ಶಕ್ಯಾನೀತ್ಯಾಹ । ನ ಹೀತಿ ॥ ೫ ॥**

ಅ ॥ ಕರ್ಮಗಳನ್ನು ಯಾರಿಗೂ ಸರ್ವಪ್ರಕಾರದಿಂದಲೂ ಬಿಡಲು ಸಾಧ್ಯವಿಲ್ಲವೆಂದು **ನಹಿ ಕಶ್ಚಿತ್** ಎಂಬ ಶ್ಲೋಕದಿಂದ ಹೇಳುತ್ತಾರೆ.

ವಿ ॥ (1) **ನಹಿ ಕಶ್ಚಿತ್** ಎಂಬ ಶ್ಲೋಕದಲ್ಲಿ ಜ್ಞಾನವು ಆವಶ್ಯಕವು ಎಂಬುದಕ್ಕೆ ಬೇಕಾದ ವಿಷಯವನ್ನು ಹೇಳುವುದಿಲ್ಲ. ಯಜ್ಞಾದಿ ಕರ್ಮಗಳನ್ನು ಮಾಡದಿರುವುದು ಕೂಡುವುದಿಲ್ಲವೆಂದೂ ಹೇಳುವುದಿಲ್ಲ ಮತ್ತು ದೇಹಪೋಷಣಾದಿಗಳಿಗೆ ಉಪಯುಕ್ತಗಳಾದ ಕರ್ಮಗಳನ್ನು ಮಾಡಲೇಬೇಕು ಎಂದು ಹೇಳುತ್ತದೆ ಆದಕಾರಣ ಪರರ ವ್ಯಾಖ್ಯಾನವು ಅಯುಕ್ತವು ॥ ೫ ॥

ಪೀ—ಶರೀರ ಪೋಷಣಾದಿರೂಪಗಳಾದ ಕರ್ಮಗಳನ್ನು ಬಿಡಲು ಸಾಧ್ಯವಿಲ್ಲವಾದರೂ ಯಜ್ಞಾದಿ ಕರ್ಮಗಳನ್ನು ಬಿಡಲಿಕ್ಕೆ ಸಾಧ್ಯವಿದ್ದ ಪ್ರಯುಕ್ತ ಅವುಗಳನ್ನು ಬಿಡಬಹುದಷ್ಟೆ. ಆದಕಾರಣ **ಕರ್ಮಣಾ**

ಬಧ್ಯತೇ ಎಂಬುವಲ್ಲಿ ಕರ್ಮಶಬ್ದದಿಂದ ಯಜ್ಞಾದಿ ಕರ್ಮಗಳನ್ನು ಇಟ್ಟುಕೊಳ್ಳಬೇಕೆಂದರೆ ಬಂಧಮೋಕ್ಷಗಳಿಗೆ ಮನಸ್ಸೇ ಪ್ರಯೋಜಕವು ಕರ್ಮಕರಣ ಅಕರಣಗಳಲ್ಲ, ಎಂಬ ಅಭಿಪ್ರಾಯದಿಂದ ಎರಡು ಶ್ಲೋಕಗಳಿಂದ ಮನಸ್ಸಿಗೇನೇ ಪ್ರಾಧಾನ್ಯವನ್ನು ಹೇಳುತ್ತಾರೆ —

**ಗೀ ॥ ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇಂದ್ರಿಯಾರ್ಥಾನ್ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥ ೬ ॥**

**ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥ ೭ ॥**

**ಅ ॥** ಕರ್ಮೇಂದ್ರಿಯಾಣಿ=ವಾಕ್ ಪಾಣಿ ಪಾದ ಪಾಯು ಉಪಸ್ಥಗಳೆಂಬ ಕರ್ಮೇಂದ್ರಿಯಗಳನ್ನು, ಚಕ್ಷುಸ್ಸ ಮೊದಲಾದ ಜ್ಞಾನೇಂದ್ರಿಯಗಳನ್ನು, ಸಂಯಮ್ಯ=ಅವುಗಳ ವಿಷಯಗಳಿಂದ ನಿಗ್ರಹಿಸಿಕೊಂಡು, ಯಃ=ಯಾವಾತನು ಮನಸಾ=ಮನಸ್ಸಿನಿಂದ ಇಂದ್ರಿಯಾರ್ಥಾನ್ –ಚಕ್ಷುರಾದೀಂದ್ರಿಯಗಳಿಗೆ ವಿಷಯಗಳಾದ ರೂಪಮೊದಲಾದ ವುಗಳನ್ನು, ಸ್ಮರನ್=ಸ್ಮರಿಸುವವನಾಗಿ, ಆಸ್ತೇ=ಇರುತ್ತಾನೋ, ಸಃ=ಆತನು, ವಿಮೂಢಾತ್ಮಾ=ವಿಶೇಷವಾಗಿ ಮೂಢವಾದ ಅಂತಃಕರಣವುಳ್ಳವನು, ಭ್ರಾಂತನು ಮಿಥ್ಯಾಚಾರಃ=ಡಾಂಭಿಕನೆಂದು ಉಚ್ಯತೇ=ಹೇಳಲ್ಪಡುತ್ತಾನೆ (ಮನಸ್ಸೇ ಪ್ರಧಾನವಾಗಿರುವುದರಿಂದ ಮನಸ್ಸನ್ನು ನಿಗ್ರಹಿಸಿಕೊಳ್ಳದೆ ಬೇರೆ ಇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಂಡರೂ ಮೋಕ್ಷಕ್ಕೆ ಉಪಯೋಗವಾಗಲರದು) ॥ ೬ ॥ ಯಸ್ತು=ಯಾವನು, ಇಂದ್ರಿಯಾಣಿ=ಚಕ್ಷುಸ್ಸ ಮೊದಲಾದ ಜ್ಞಾನೇಂದ್ರಿಯಗಳನ್ನು, ಮನಸಾ=ಮನಸ್ಸಿನಿಂದ, ನಿಯಮ್ಯ=ನಿಗ್ರಹಿಸಿಕೊಂಡು, (ಚಕ್ಷುರಾದಿ ಇಂದ್ರಿಯಗಳನ್ನು ದುಷ್ಟವಸ್ತುಗಳಲ್ಲಿ ಹೋಗದಂತೆ ಮಾಡಿ) ಅಸಕ್ತಃ=ಕರ್ಮಫಲದಲ್ಲಿ ಇಚ್ಛೆಯನ್ನು ತೊರೆದು, ಕರ್ಮೇಂದ್ರಿಯೈಃ=ವಾಗಾದಿ ಕರ್ಮೇಂದ್ರಿಯಗಳಿಂದ ಕರ್ಮಯೋಗಂ=ತಮ್ಮ ವರ್ಣಾಶ್ರಮಗಳಿಗೆ ವಿಹಿತವಾದ ಯುದ್ಧ ಮೊದಲಾದ ಕರ್ಮರೂಪ ಜ್ಞಾನೋಪಾಯವನ್ನು, ಆರಭತೇ=ಮಾಡುತ್ತಾನೋ, ಸಃ=ಆತನು, ವಿಶಿಷ್ಯತೇ=ಕರ್ಮವನ್ನು ಮಾಡದವನಿಗಿಂತ ಉತ್ಕೃಷ್ಟನಾಗಿರುತ್ತಾನೆ ॥ ೭ ॥

**ಭಾ ॥ (೧) ತಥಾಽಪಿ ಶಕ್ತಿತಸ್ತ್ಯಾಗಃ ಕಾರ್ಯ ಇತ್ಯಾಹ । ಕರ್ಮೇಂದ್ರಿಯಾಣೀತಿ ॥ (೨) ಮನ ಏವ ಪ್ರಯೋಜಕಮಿತಿ ದರ್ಶಯಿತುಮನ್ವಯವ್ಯತಿರೇಕಾವಾಹ । ಮನಸಾ ಸ್ಮರನ್ಮನಸಾ ನಿಯಮ್ಯೇತಿ ॥ (೩) ಕರ್ಮಯೋಗಂ ಸ್ವವರ್ಣಾಶ್ರಮೋಚಿತಂ । ನ ತು ಗೃಹಸ್ಥಕರ್ಮೈವೇತಿ ನಿಯಮಃ । ಸನ್ನ್ಯಾಸಾದಿವಿಧಾನಾತ್ । ಸಾಮಾನ್ಯವಚನಾಚ್ಚ ॥ ೬,೭ ॥**

**ಅ ॥** (೧) (ಯದ್ಯಪಿ ಶರೀರ ಪೋಷಣಾದಿರೂಪಗಳಾದ ಕರ್ಮಗಳು ಬಿಡಲಸಾಧ್ಯಗಳು) ಆದರೂ ಯಜ್ಞಾದಿಕರ್ಮಗಳು ಬಿಡಲು ಶಕ್ಯಗಳಾಗಿರುವುದರಿಂದ ಅವುಗಳನ್ನು ಬಿಡಬೇಕೆಂದು **ಕರ್ಮೇಂದ್ರಿಯಾಣಿ** ಎಂಬುದರಿಂದ ಹೇಳುತ್ತಾರೆ (೨) ಮನಸ್ಸೇ ಬಂಧ ಮೋಕ್ಷಗಳಿಗೆ ಪ್ರಯೋಜಕವು ಕರ್ಮಕರಣ ಅಕರಣಗಳಲ್ಲ. ಆದಕಾರಣ ಮನಸ್ಸನ್ನು ತನ್ನ ಅಧೀನದಲ್ಲಿಟ್ಟುಕೊಳ್ಳಲೇಬೇಕು ಕರ್ಮತ್ಯಾಗವಲ್ಲ. ಎಂದು ತಿಳಿಸುವುದಕ್ಕಾಗಿ **ಮನಸಾ ಸ್ಮರನ್ ಮನಸಾ ನಿಯಮ್ಯ** ಎಂದು ಅನ್ವಯ ವ್ಯತಿರೇಕಗಳನ್ನು ತೋರಿಸುತ್ತಾರೆ (ಅಂದರೆ—ಮನಸ್ಸನ್ನು ವಶಪಡಿಸಿಕೊಳ್ಳದಿದ್ದರೆ ಸಂಸಾರಬಂಧವು ಅಂತಹ ಮನಸ್ಸು

ಇಲ್ಲವಾದರೆ (ವಶಪಡಿಸಿಕೊಂಡರೆ) ಬಂಧವಿಲ್ಲ. ಮನಸ್ಸನ್ನು ವಶಪಡಿಸಿಕೊಂಡರೆ ಮೋಕ್ಷವು ಅಂತಹ ಮನಸ್ಸು ಇಲ್ಲವಾದರೆ ಮೋಕ್ಷವಿಲ್ಲ ಎಂಬೀ ಅನ್ವಯ ವ್ಯತಿರೇಕಗಳು) (೩) (**ಕರ್ಮಯೋಗೇನ ಯೋಗಿನಾಂ** ಎಂಬಲ್ಲಿ ಕರ್ಮಯೋಗ ಶಬ್ದವು ಗೃಹಸ್ಥಾದಿ ಕರ್ಮವಿಷಯಕವಾಗಿರುವುದರಿಂದ ಇಲ್ಲಿಯೂ ಅಂತಹ ಪ್ರತೀತಿಯುಬರಬಾರದೆಂಬುವುದಕ್ಕಾಗಿ ಕರ್ಮಯೋಗ ಶಬ್ದಾರ್ಥ ಹೇಳುತ್ತಾರೆ) ಕರ್ಮಯೋಗಂ= ತಮ್ಮ ವರ್ಣಾಶ್ರಮಗಳಿಗೆ ಯೋಗ್ಯವಾದ ಕರ್ಮವನ್ನು ಗೃಹಸ್ಥರ ಕರ್ಮವೇ, ವಾನಪ್ರಸ್ಥಾಶ್ರಮಿಗಳ ಕರ್ಮವೇ, ಬ್ರಹ್ಮಚಾರಿಗಳ ಕರ್ಮವೇ, ಎಂಬ ನಿಯಮವು ಇಷ್ಟವಲ್ಲ ಗೃಹಸ್ಥನೇ ಮಾಡಬೇಕು, ವಾನಪ್ರಸ್ಥಾಶ್ರಮಿಯೇ ಮಾಡಬೇಕು, ಬ್ರಹ್ಮಚಾರಿಯೇ ಮಾಡಬೇಕೆಂದು ಯಾವುದುಯಾವುದು ನಿಯಮಿಸಲ್ಪಡುತ್ತದೋ, ಅದು ವಿನಹ ಬೇರೆ ಎಲ್ಲಾ ಕರ್ಮಗಳನ್ನು ಇಟ್ಟುಕೊಳ್ಳಬೇಕು ಮತ್ತು ಕರ್ಮಯೋಗ ಶಬ್ದವು ಸಾಮಾನ್ಯವಾಗಿ ಎಲ್ಲಾ ಆಶ್ರಮಗಳ ಕರ್ಮಗಳನ್ನು ಹೇಳುತ್ತದೆ (ಮೊದಲು **ಜ್ಞಾನಯೋಗೇನ ಸಾಂಖ್ಯಾನಾಂ** ಎಂದು ಸನ್ಯಾಸಾಶ್ರಮ ಕರ್ಮವನ್ನು ಪ್ರತ್ಯೇಕ ಹೇಳಿದ್ದರಿಂದ ಕರ್ಮಯೋಗವನ್ನು ಸಾಮಾನ್ಯವಾಗಿ ಹೇಳುವ ಶಬ್ದವು ಗೃಹಸ್ಥಾದಿಗಳ ಕರ್ಮ ಮಾತ್ರದಲ್ಲಿ ವ್ಯವಸ್ಥಿತವಾಗಿದೆ ಇಲ್ಲಿ ಅಂತಹ ನಿಯಾಮಕವಿಲ್ಲ) ॥ ೬, ೭ ॥

## ಗೀ ॥ ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।
## ಶರೀರಯಾತ್ರಾಽಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥ ೮ ॥

**ಅ** ॥ ತ್ವಂ= ನೀನು, ನಿಯತಂ= ನಿನ್ನ ವರ್ಣಾಶ್ರಮಗಳಿಗೆ ವಿಹಿತವಾದ, ಕರ್ಮ= ಯುದ್ಧವೆಂಬ ಕರ್ಮವನ್ನು, ಕುರು= ಮಾಡು, ಹಿ= ಏಕೆಂದರೆ ಅಕರ್ಮಣಃ=ಕರ್ಮವನ್ನು ಮಾಡದಿರುವುದಕ್ಕಿಂತಲೂ, ಕರ್ಮ= ಯುದ್ಧವೆಂಬ ಕರ್ಮವನ್ನು ಮಾಡುವುದು, ಜ್ಯಾಯಃ= ಶ್ರೇಷ್ಠವು, ಚ= ಮತ್ತು ಅಕರ್ಮಣಃ= ಕರ್ಮ ಮಾಡದಿರುವ, ತೇ= ನಿನಗೆ, ಶರೀರ ಯಾತ್ರಾಽಪಿ= ದೇಹರಕ್ಷಣಾದಿಗಳೂ, ನ ಪ್ರಸಿದ್ಧ್ಯೇತ್= ಸಿದ್ಧಿಸದೆ ಹೋಗುವುದು. ॥ ೮ ॥

**ಭಾ ॥ ಅತೋ ನಿಯತಂ ವರ್ಣಾಶ್ರಮೋಚಿತಂ ಕರ್ಮ ಕುರು ॥ ೮ ॥**

**ಅ** ॥ ಆದಕಾರಣ, ನಿಯತಂ= ತನ್ನ ವರ್ಣಾಶ್ರಮಗಳಿಗೆ ಯೋಗ್ಯವಾದ ಕರ್ಮಮಾಡು ॥ ೮ ॥

**ಪೀ— ಕಾರ್ಯತೇ ಹ್ಯವಶಃ** ಎಂಬುವಲ್ಲಿ ಸ್ವತಂತ್ರಕರ್ತನಾದವನು ಇನ್ನೊಬ್ಬನು ತೋರದಿರುವುದರಿಂದ ಪ್ರಕೃತಿ ಗುಣಗಳಿಗೇನೇ ಸ್ವತಂತ್ರಕರ್ತೃತ್ವವು ಹೇಳಲ್ಪಡುತ್ತದೆಂಬ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುತ್ತಾರೆ—

**ತಾ ॥ (೧) ಕರ್ತೃತ್ವಂ ದ್ವಿವಿಧಂ ಪ್ರೋಕ್ತಂ ವಿಕಾರಶ್ಚ ಸ್ವತಂತ್ರತಾ । ವಿಕಾರಃ ಪ್ರಕೃತೇ-ರೇವ ವಿಷ್ಣೋರೇವ ಸ್ವತಂತ್ರತೇತಿ ಪೈಂಗಿಶ್ರುತೇಃ ॥ (೨) ಕಾರ್ಯತೇ ಹ್ಯವಶ ಇತ್ಯ-ತ್ರಾವಶೋ ವಿಷ್ಣುವಶಃ । ಅ ಇತಿ ಬ್ರಹ್ಮೇತ್ಯಾದಿಶ್ರುತೇಃ ॥ ೫—೮ ॥**

**ಅ** ॥ (೧) ವಿಕಾರಕರ್ತೃತ್ವ, ಸ್ವತಂತ್ರಕರ್ತೃತ್ವ ಎಂದು ಕರ್ತೃತ್ವವು ಎರಡು ವಿಧವು ಪ್ರಕೃತಿಗೇನೇ ವಿಕಾರಕರ್ತೃತ್ವವು, ವಿಷ್ಣುವಿಗೇನೇ ಸ್ವತಂತ್ರಕರ್ತೃತ್ವವು, ಎಂದು ಪೈಂಗಿಶ್ರುತಿಯು (೨) **ಕಾರ್ಯತೇ ಹ್ಯವಶಃ** ಎಂಬಲ್ಲಿ ಅ ಅಂದರೆ ಪರಬ್ರಹ್ಮನು ಇತ್ಯಾದಿ ವೇದಪ್ರಮಾಣಗಳಿಂದ ಅವಶಃ= ವಿಷ್ಣುವಿನ ಅಧೀನನಾಗಿರುವನು.

ವಿ || ಅವಶಃ ಎಂದು ಶ್ರೀವಿಷ್ಣುವಿಗೆ ಸ್ವತಂತ್ರಕರ್ತೃತ್ವವನ್ನು ಹೇಳಿದ್ದರಿಂದ ಗುಣಗಳಿಗೆ ವಿಕಾರ ಕರ್ತೃತ್ವವೇ ಹೇಳಲ್ಪಡುತ್ತದೆ, ಸ್ವತಂತ್ರಕರ್ತೃತ್ವವು ಹೇಳಲ್ಪಡುವುದಿಲ್ಲ || ೫, ೮ ||

ಪೀ—ಕರ್ಮಣಾ ಬಧ್ಯತೇ ಜಂತುಃ ಎಂಬ ಸ್ಮೃತಿಯಿಂದ ಕರ್ಮವು ಮೋಕ್ಷಕ್ಕೆ ಪ್ರತಿಬಂಧಕ ವಾದುದರಿಂದ ಕರ್ಮವಮಾಡಕೂಡದೆಂಬ ಮೂರನೇ ಪಕ್ಷವು ಅಯುಕ್ತವೆನ್ನುತ್ತಾರೆ—

**ಗೀ || ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ |**
**ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ || ೯ ||**

ಅ || ಯಜ್ಞಾರ್ಥಾತ್=ಶ್ರೀವಿಷ್ಣುವೇ ಉದ್ದೇಶ್ಯವಾಗಿ ಉಳ್ಳ, ಅಥವಾ ತನ್ನಲ್ಲಿಯೂ ಪರರಲ್ಲಿಯೂ ಇರುವ ಎಲ್ಲಾ ವಿಶೇಷ ವಿಷಯಗಳನ್ನು ತಿಳಿದಿರುವುದರಿಂದ ಜ್ಞ ಎನಿಸಿದ ವಿಷ್ಣುವನ್ನು ಉದ್ದೇಶಿಸಿ ಕೊಂಡಿರುವ, ಕರ್ಮಣಃ ಅನ್ಯತ್ರ=ಆ ಒಂದು ಕರ್ಮವನ್ನು ಹೊರತು (ಅಂದರೆ ವಿಷ್ಣುವಿನಿಂದ ಇತರರ ವಿಷಯದಲ್ಲಿ ಅಥವಾ ವಿಷ್ಣೂದ್ದೇಶಕ್ಕಿಂತ ಇತರೋದ್ದೇಶ ವಿಷಯದಲ್ಲಿ ಶ್ರೀಹರಿಗೆ ಪ್ರೀತಿಯನ್ನುಂಟು ಮಾಡುವ ಕರ್ಮದಿಂದ ಬೇರೆ ಕರ್ಮವನ್ನು ಮಾಡಿದರೆ ಆ ಕರ್ಮದಿಂದ ಅಂದರೆ ಅಯಂ ಲೋಕಃ=ಈ ಜನರು, ಕರ್ಮಬಂಧನಃ=ಕರ್ಮವೇ ಬಂಧಕವಾಗಿ ಉಳ್ಳವರಾಗುತ್ತಾರೆ (ಅವೈಷ್ಣವ ಕರ್ಮವೇ ಪ್ರತಿಬಂಧಕವು ವಿಷ್ಣುಪ್ರೀತಿಕರವಾದ ಕರ್ಮವು ಪ್ರತಿಬಂಧಕವಲ್ಲ. (**ಕರ್ಮಣಾ ಬಧ್ಯತೇ** ಎಂಬ ಸ್ಮೃತಿಯಲ್ಲಿಯೂ ಕರ್ಮಪದದಿಂದ ಅವೈಷ್ಣವ ಕರ್ಮವನ್ನು ಇಟ್ಟುಕೊಳ್ಳಬೇಕ.) ತದರ್ಥಂ=ಭಗವತ್ಪೂಜೆಗೋಸ್ಕರ ಕರ್ಮ=ವಿಷ್ಣುವನ್ನುದ್ದೇಶಿಸಿ ವಿಷ್ಣುಪ್ರೀತಿಕರವಾದ, ಕರ್ಮವನ್ನು, ಮುಕ್ತಸಂಗಃ= ಕರ್ಮಾಹಂಕಾರ, ಫಲಕಾಮನೆಗಳನ್ನು ತೊರೆದು (ಅಂದರೆ ನಿಷ್ಕಾಮನಾಗಿ) ಸಮಾಚರ=ಮಾಡು. || ೯ ||

**ಭಾ || (೧) ಕರ್ಮಣಾ ಬಧ್ಯತೇ ಜಂತುರಿತಿ ಕರ್ಮಬಂಧಕಂ ಸ್ಮೃತಮಿತ್ಯತ ಆಹ | ಯಜ್ಞಾರ್ಥಾದಿತಿ || (೨) ಕರ್ಮ ಬಂಧನಂ ಯಸ್ಯ ಲೋಕಸ್ಯ ಸ ಕರ್ಮಬಂಧನಃ || (೩) ಯಜ್ಞೋ ವಿಷ್ಣುಃ | ಯಜ್ಞಾರ್ಥಂ ಸಂಗರಹಿತಂ ಕರ್ಮ ನ ಬಂಧಕಮಿತ್ಯರ್ಥಃ | ಮುಕ್ತಸಂಗ ಇತಿ ವಿಶೇಷಣಾತ್ | ಕಾಮಾನ್ಯಃ ಕಾಮಯತ ಇತಿ ಶ್ರುತೇಶ್ಚ | ಅನಿಷ್ಟಮಿಷ್ಟಮಿತಿ ವಕ್ಷ್ಯಮಾಣತ್ವಾಚ್ಚ | ಏತಾನ್ಯಪಿ ತು ಕರ್ಮಾಣೀತಿ ಚ | ತಸ್ಮಾನ್ನೇಷ್ಟಿಯಾಜುಕಃ ಸ್ಯಾದಿತಿ ಚ || (೪) ವಿಶೇಷವಚನಶ್ಚೇ ಸಮೇಽಪಿ ವಿಶೇಷಣಂ ಪರಿಶಿಷ್ಯತೇ || ೯ ||**

ಅ || (೧) **ಕರ್ಮಣಾ ಬಧ್ಯತೇ ಜಂತುಃ** ಎಂಬ ಸ್ಮೃತ್ಯನುಸಾರ ಕರ್ಮವು ಮೋಕ್ಷಕ್ಕೆ ಪ್ರತಿಬಂಧಕವು (ಆದುದರಿಂದ ಕರ್ಮ ಮಾಡುವುದಿಲ್ಲ, ಎಂದರೆ— **ಯಜ್ಞಾರ್ಥಾತ್** ಎಂಬುದರಿಂದ ಸಮಾಧಾನ ಹೇಳುತ್ತಾರೆ (೨) ಯಾವ ಜನರಿಗೆ ಕರ್ಮವು ಮೋಕ್ಷಕ್ಕೆ ತಡೆಯಾಗಿದೆಯೋ ಅಂತಹ ಜನರು **ಕರ್ಮಬಂಧನಃ** ಎನ್ನಿಸುತ್ತಾರೆ. (೩) ಯಜ್ಞಃ=ಶ್ರೀವಿಷ್ಣುವು (ಅವೈಷ್ಣವ ಯಾಗವೂ ಬಂಧಕವಾಗಿರುವುದರಿಂದ ಯಾಗವೆಂಬ ಪ್ರಸಿದ್ಧವಾದ ಅರ್ಥವನ್ನು ಬಿಟ್ಟಿದೆ) ವಿಷ್ಣೂದ್ದೇಶ್ಯಕವಾದ ಫಲಸ್ನೇಹವಿಲ್ಲದ ಕರ್ಮವು ಮೋಕ್ಷಕ್ಕೆ ಪ್ರತಿಬಂಧಕವಲ್ಲ ಮುಕ್ತಸಂಗಃ=ಫಲ ಕರ್ಮಾಹಂಕಾರ ಫಲಕಾಮನೆಯಿಲ್ಲದವನು ಎಂದು ಅರ್ಜುನನಿಗೆ ವಿಶೇಷಣ ಕೊಟ್ಟ ಪ್ರಯುಕ್ತ (ಸಂಗರಹಿತಂ ಎಂದು ಹೇಳಿದ್ದು) **ಕಾಮಾನ್ಯಃ ಕಾಮಯತೇ**=ಯಾರು ಕಾಮ್ಯವಸ್ತುಗಳನ್ನು ಇಚ್ಛಿಸುತ್ತಾರೋ, ಎಂಬ ವೇದದಲ್ಲಿ (ಕಾಮ್ಯಕರ್ಮವು

ಬಂಧಕವೆಂದು ಹೇಳಿದೆ ) **ಅನಿಷ್ಟಮಿಷ್ಟಂ** ಎಂಬ ವಾಕ್ಯಶೇಷದಲ್ಲಿ **ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸನ್ಯಾಸಿನಾಂ** ಎಂದು ಫಲಸ್ನೇಹ ಮಾಡಬಾರದೆಂದು ತಿಳಿಯುತ್ತದೆ **ಏತಾನ್ಯಪಿ ತು ಕರ್ಮಾಣಿ** ಎಂಬಲ್ಲಿ ಫಲಸ್ನೇಹವನ್ನು ತೊರೆದು ಕರ್ಮಗಳನ್ನು ಮಾಡಬೇಕೆಂದು ಹೇಳಿದೆ ಆದಕಾರಣ ಫಲೇಚ್ಛೆಯಿಂದ ಯಾಗ ಮಾಡಬಾರದು (೪) (ಹಾಗಾದರೆ—ಅವಿದ್ಯಾ ಮೊದಲಾದವುಗಳು ಅನೇಕ ಬಂಧಕಗಳಿದ್ದುದರಿಂದ ಅವಿದ್ಯಾದಿಗಳೆಂದು ಸಾಮಾನ್ಯವಾಗಿ ಹೇಳದೆ **ಕರ್ಮಣಾ ಬಧ್ಯತೇ ಜಂತುಃ** ಎಂದು ಹೇಳಿದ್ದರಿಂದ ಅದೂ ವಿಶೇಷ ವಚನವು ಕರ್ಮವು ಬಂಧಕವಲ್ಲ ಎಂಬ ಗೀತಾ ವಾಕ್ಯವೂ ವಿಶೇಷ ವಚನವು ಆದಕಾರಣ ಅವನ್ನು ಪರಿಹರಿಸುವುದಕ್ಕಾಗಿ ವ್ಯಾಖ್ಯಾನಮಾಡಿದ್ದು ಹೇಗೆ ಕೂಡುತ್ತದೆಂದರೆ) (ಯದ್ಯಪಿ ಹಿಂದೆ ಹೇಳಿದ ಪ್ರಕಾರ ಎರಡೂ ವಿಶೇಷವಚನಗಳೆಂಬುವುದು ಸಮವೇ ಆದರೂ ಗೀತಾವಾಕ್ಯದಲ್ಲಿ **ಯಜ್ಞಾರ್ಥಾತ್** ಇತ್ಯಾದಿ ವಿಶೇಷಣವು ಅಧಿಕವಾಗಿದೆ (ಅದುಕಾರಣ ಯಜ್ಞಾರ್ಥಾತ್ ಎಂಬ ಗೀತಾವಾಕ್ಯಕ್ಕಿಂತ **ಕರ್ಮಣಾ ಬಧ್ಯತೇ** ಎಂಬ ವಾಕ್ಯವು ಸಾಮಾನ್ಯವಚನವು ಆದಕಾರಣ ಹೀಗೆ ವ್ಯಾಖ್ಯಾನವು ಯುಕ್ತವು

ವಿ || (1) **ಕರ್ಮಣಾ ಬಧ್ಯತೇ** ಎಂಬ ವಾಕ್ಯವನ್ನಾಶ್ರಯಿಸಿ ಯುದ್ಧ ಮೊದಲಾದ ಕರ್ಮಗಳನ್ನು ಬಿಡುವುದು ಯುಕ್ತವಲ್ಲ ಅದು ಅವೈಷ್ಣವ ಕಾಮ್ಯಕರ್ಮವನ್ನು ಹೇಳುತ್ತದೆ ಆದರಿಂದ ಸಂಸಾರ ಬಂಧವು ಕರ್ಮ ಸಾಮಾನ್ಯವನ್ನು ಬಿಡಲು ಸಾಧ್ಯವಿಲ್ಲವೆಂದೂ ಪರರೂ ಹೇಳಲೇ ಬೇಕು (2) ಶಾಸ್ತ್ರಗಳಲ್ಲಿ ವಿಧಿಸಿದ್ದರಿಂದಲೇ ಯುದ್ಧ ಮೊದಲಾದುವುಗಳೂ ಆಯಾವ ವರ್ಣಾಶ್ರಮಗಳಿಗೆ ಉಚಿತವೇ ಆಗಿವೆ ಆದಕಾರಣ ಕರ್ಮ ಸ್ವರೂಪವನ್ನು ಬಿಡಲು ಸಾಧ್ಯವೇ ಇಲ್ಲ || ೯ ||

**ಪೀ—ಕರ್ಮಣಾ ಬಧ್ಯತೇ ಜಂತುಃ** ಇತ್ಯಾದಿ ಪ್ರಮಾಣಗಳಿಂದ ಕರ್ಮವು ಸಂಸಾರವನ್ನು ಹೊಂದಿಸಿ ಕೊಡತಕ್ಕದಾದುದರಿಂದ **ಕುರು ಕರ್ಮ**=ಕರ್ಮ ಮಾಡೆಂದು ವಿಧಿಸುವುದು ಹೇಗೆಂದರೆ—

**ತಾ || ಕರ್ಮಣಾ ಬಧ್ಯತೇ ಜಂತುರಿತ್ಯಾದಿಕಮುಪ್ಯವೈಷ್ಣವಕರ್ಮವಿಷಯಮಿತ್ಯಾಹ | ಯಜ್ಞಾರ್ಥಾದಿತಿ | ಜ್ಞೋ ನಾಮ ಭಗವಾನ್ವಿಷ್ಣುಸ್ತಂ ಯಾತ್ಯುದ್ದೇಶ ಏಷ ಯಃ | ಸ ಯಜ್ಞ ಇತಿ ಸಂಪ್ರೋಕ್ತೋ ವಿಹಿತೇ ಕರ್ಮಣಿ ಸ್ಥಿತ ಇತಿ ಬರ್ಕಶ್ರುತಿಃ || ೯ ||**

**ಅ || ಕರ್ಮಣಾ ಬಧ್ಯತೇ ಜಂತುಃ** ಇತ್ಯಾದಿ ಪ್ರಮಾಣಗಳು ಅವೈಷ್ಣವ ಕಾಮ್ಯಕರ್ಮವನ್ನು ಹೇಳತಕ್ಕವುಗಳು ಎಂದು ಯಜ್ಞಾರ್ಥಾತ್ಕರ್ಮಣಃ ಎಂಬ ಶ್ಲೋಕದಿಂದ ಹೇಳುತ್ತಾರೆ ಸರ್ವೋತ್ತಮನಾದ ಶ್ರೀವಿಷ್ಣುವು ಜ್ಞಃ ಎನಿಸುತ್ತಾನೆ ಯಾವ ಈ ಉದ್ದೇಶವು ವಿಷ್ಣುವನ್ನು ಹೊಂದುತ್ತದೋ, ಆ ಉದ್ದೇಶವು ಯಜ್ಞ ಎನಿಸುತ್ತದೆ ಅದು ಶಾಸ್ತ್ರದಲ್ಲಿ ವಿಹಿತವಾದ ಕರ್ಮದಲ್ಲಿರತಕ್ಕದು, (ಕರ್ಮವಿಷಯಕವು) ಎಂದು ಬರ್ಕಶ್ರುತಿಯು

ವಿ || ಇಲ್ಲಿ ಯಜ್ಞವೆಂದರೆ ಪ್ರಸಿದ್ಧ ಯಜ್ಞವಲ್ಲ ಜ್ಞಾನರೂಪನಾದುದರಿಂದ ಜ್ಞ ಎನಿಸಿಕೊಂಡ ಶ್ರೀಹರಿಯು ಯಾವ ಉದ್ದೇಶದಿಂದ ತಿಳಿಯಲ್ಪಡುತ್ತಾನೋ ಅಂತಹ ಉದ್ದೇಶವು ಯಜ್ಞವೆನಿಸುತ್ತದೆ || ೯ ||

**ಪೀ**—ವರ್ಣಗಳಿಗೂ ಆಶ್ರಮಗಳಿಗೂ ಯೋಗ್ಯವಾದ ಕರ್ಮವನ್ನು ಸರ್ವಥಾ ಮಾಡಬೇಕೆಂಬ ವಿಷಯದಲ್ಲಿ ಸ್ತುತಿ ನಿಂದಾ ಪರಕೃತಿ ಪುರಾಕಲ್ಪ ಎಂಬ ಅರ್ಥವಾದವನ್ನು ಹೇಳುತ್ತಾರೆ

**ಗೀ || ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ |**
**ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ || ೧೦ ||**

**ದೇವಾನ್ಭಾವಯತಾನೇನ ತೇ ದೇವಾ ಭಾವಯಂತು ವಃ |**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥ ೧೧ ॥**
**ಇಷ್ಟಾನ್ಭೋಗಾನ್ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ |**
**ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥ ೧೨ ॥**
**ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ |**
**ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥೧೩॥**

ಅ ॥ ಸಹಯಜ್ಞಾಃ=ಯಜ್ಞಗಳಿಂದ ಕೂಡಿರುವ (ಅಂದರೆ ಅಗ್ನಿಹೋತ್ರ ದರ್ಶಪೂರ್ಣಮಾಸ ಮೊದಲಾದ ವೇದೋಕ್ತ ಸಮಸ್ತ ಕರ್ಮಗಳನ್ನು ಮಾಡುತ್ತಿರುವ) ಪ್ರಜಾಃ=ಬ್ರಾಹ್ಮಣ, ಕ್ಷತ್ರಿಯ, ವೈಶ್ಯರನ್ನು, ಪುರಾ=ಸೃಷ್ಟಿಯ ಆದಿಯಲ್ಲಿ, ಸೃಷ್ಟ್ವಾ=ಸೃಷ್ಟಿಸಿ ಪ್ರಜಾಪತಿಃ=ಬ್ರಹ್ಮನು, ಪ್ರಜಾಃ=ಪ್ರಜೆಗಳಿರಾ, (ನೀವು) ಅನೇನ=ಯಾಗದಿಂದ, ಪ್ರಸವಿಷ್ಯಧ್ವಂ=ನಿಮಗೆ ನಿಮಗೆ ಬೇಕಾದ ಇಷ್ಟವಿಷಯಗಳನ್ನು ಸಂಪಾದಿಸಿಕೊಂಡು ಅಭಿವೃದ್ಧಿಯನ್ನು ಪಡೆದುಕೊಳ್ಳಿರಿ ಏಷಃ=ಯಾಗವು, ವಃ=ನಿಮಗೆ ಇಷ್ಟಕಾಮಧುಕ್ ಅಸ್ತು=ಇಷ್ಟವಿಷಯಕ ಭೋಗಗಳನ್ನು ಕೊಡತಕ್ಕದ್ದಾಗಲಿ ॥ ೧೦ ॥ (ಹೇಗೆಂದರೆ) (ಎಲೋ ಪ್ರಜೆಗಳಿರಾ, ನೀವು) ಅನೇನ=ಯಾಗ ಮೊದಲಾದ ಸತ್ಕರ್ಮಗಳಿಂದ, ದೇವಾನ್=ದೇವತೆಗಳನ್ನು, ಭಾವಯತ=ಹವಿಸ್ಸುಗಳಿಂದ ತೃಪ್ತಿಪಡಿಸಿರಿ ತೇ=ಹವಿರಾದಿಗಳಿಂದ ತೃಪ್ತರಾದ ದೇವಾಃ=ಇಂದ್ರಾದಿ ದೇವತೆಗಳು, ವಃ=ನಿಮಗೆ, ಭಾವಯಂತು=ಇಷ್ಟ ಕಾಮಗಳನ್ನು ಕೊಟ್ಟು ತೃಪ್ತಿಪಡಿಸಿ ಪೋಷಿಸಿಕೊಂಡು ಬರಲಿ ಪರಸ್ಪರಂ ಭಾವಯಂತಃ=ಹೀಗೆ ಪರಸ್ಪರವಾಗಿ ತೃಪ್ತಿಪಡಿಸಿಕೊಂಡು ಉಪಕಾರಿಗಳಾಗಿರುವ ದೇವತೆಗಳೂ ನೀವೂ ಕೂಡ, ಪರಂ ಶ್ರೇಯಃ=ಸರ್ವೋತ್ಕೃಷ್ಟವಾದ ಮೋಕ್ಷರೂಪ ಶ್ರೇಯಸ್ಸನ್ನು, ಅವಾಪ್ಸ್ಯಥ=ಹೊಂದುವಿರಿ ॥ ೧೧ ॥ (ಕರ್ಮ ಮಾಡದಿದ್ದರೆ ದೋಷ ಹೇಳುತ್ತಾರೆ) ಯಜ್ಞಭಾವಿತಾಃ=ಯಾಗಗಳಿಂದ ತೃಪ್ತರಾದ ದೇವತೆಗಳು, ವಃ=ನಿಮಗೆ ಇಷ್ಟಾನ್ ಭೋಗಾನ್=ಇಷ್ಟ ಭೋಗ್ಯ ವಿಷಯಗಳನ್ನು ದಾಸ್ಯಂತೇ=ಕೊಡುತ್ತಾರೆ ತೈಃ=ಆ ದೇವತೆಗಳಿಂದ ದತ್ತಾನ್=ಅವರ ಅನುಗ್ರಹದಿಂದ ಹೊಂದಿದ ಅನ್ನ ಮೊದಲಾದುವುಗಳನ್ನು, ಏಭ್ಯಃ=ಆ ದೇವತೆಗಳಿಗೆ, ಅಪ್ರದಾಯ=ಕೊಡದೆ, (ಪಂಚ ಮಹಾಯಜ್ಞಾದಿಗಳಿಂದ ಅವರನ್ನು ತೃಪ್ತಿಪಡಿಸದೆ) ಯಃ=ಯಾವನು, ಭುಂಕ್ತೇ=ತಾನೇ ಉಣ್ಣುತ್ತಾನೋ, ಸಃ=ಆತನು ಸ್ತೇನ ಏವ=(ಸ್ವಾಮಿಯ ಅನುಜ್ಞೆಯಿಲ್ಲದೆ ತನ್ನದ್ದೇ ಎಂದು ಮಾಡಿಕೊಂಡದ್ದರಿಂದ) ದೇವದ್ರವ್ಯಾಪಹಾರಿಯಾಗುತ್ತಾನೆ ॥ ೧೨ ॥ (ಹೀಗೆ ಯಾಗ ಮಾಡದಿರುವವರನ್ನು ನಿಂದಿಸಿ ಯಾಗ ಮಾಡುವವರನ್ನು ಸ್ತುತಿಸುತ್ತಾರೆ) ಯಜ್ಞಶಿಷ್ಟಾಶಿನಃ=ಶ್ರೀ ವಿಷ್ಣು, ಶ್ರೀವಿಷ್ಣುವಿನಿಂದ ಇತರರಾದ ದೇವತೆಗಳೂ ಇವರನ್ನು ಆರಾಧಿಸಿ ಉಳಿದ ಅಥವಾ ವೈಶ್ವದೇವ ಮೊದಲಾದ ಯಜ್ಞಗಳನ್ನು ಮಾಡಿ ಉಳಿದ ಅನ್ನಾದಿಗಳನ್ನುಣ್ಣುವ, ಸಂತಃ=ಸಜ್ಜನರು ಸರ್ವಕಿಲ್ಬಿಷೈಃ=ಸಂಸಾರಕ್ಕೆ ಕಾರಣಗಳಾದ ಪಾಪಗಳಿಂದ ಅಥವಾ **ಖಂಡನೀ ಪೇಷಣೀ ಚುಲ್ಲೀ ಉದಕುಂಭೀ ಚ ಮಾರ್ಜನೀ | ಪಂಚಸೂನಾ ಗೃಹಸ್ಥಸ್ಯ ತಾಭಿಸ್ಸ್ವರ್ಗಂ ನ ವಿಂದತಿ |** ಎಂದು ಹೇಳಿದ ಪಂಚ ಸೂನಾ ಪ್ರಯುಕ್ತ ದೋಷಗಳಿಂದ ಮುಚ್ಯಂತೇ=ಬಿಡುಗಡೆಹೊಂದುತ್ತಾರೆ ಯೇ=ಯಾರು, ಆತ್ಮಕಾರಣಾತ್=ದೇವಬ್ರಾಹ್ಮಣರ ಉದ್ದೇಶವಿಲ್ಲದೆ ತಮಗಾಗಿಯೇ, ಪಚಂತಿ=ಪಾಕಮಾಡುತ್ತಾರೋ, ತೇ ಪಾಪಾಃ=ಅಂತಹ ಪಾಪಿಷ್ಠರು, ಅಘಂ ತು=ಪಾಪಕಾರಣವಾದ ಅನ್ನವನ್ನೇ, ಭುಂಜತೇ=ಭೋಜನ ಮಾಡುತ್ತಾರೆ (ಅಂದರೆ ಅಂತಹ ಭೋಜನದಿಂದ ಪಾಪವೇ ಬರುತ್ತದೆ) ಇತಿ=ಹೀಗೆ ಪ್ರಜಾಪತಿಃ=ಚತುರ್ಮುಖ ಬ್ರಹ್ಮನು, ಉವಾಚ=ಹೇಳಿದನು

ವಿ || ಚತುರ್ಮುಖನು ಯಾಗಗಳನ್ನು ಸೃಷ್ಟಿಸಿ ಎಲೋ ಬ್ರಾಹ್ಮಣ ಮೊದಲಾದ ಪ್ರಜೆಗಳಿರಾ, ನೀವು ಅಗ್ನಿಹೋತ್ರಾದಿಗಳಿಂದ ದೇವತೆಗಳನ್ನು ತೃಪ್ತಿಪಡಿಸಿರಿ ಆ ಇಂದ್ರಾದಿ ದೇವತೆಗಳು ನೀವು ಮಾಡಿದ ಯಾಗಾದಿಗಳಿಂದ ತೃಪ್ತಿಹೊಂದಿ ನಿಮಗೆ ಬೇಕಾದ ಅನ್ನ ಮೊದಲಾದ ಇಷ್ಟಾರ್ಥಗಳನ್ನು ಕೊಡುವರು ದೇವತೆಗಳು ಕೊಟ್ಟ ಅನ್ನ ಮೊದಲಾದವುಗಳನ್ನು ನೀವು ವೈಶ್ವದೇವ ಅಗ್ನಿಹೋತ್ರ ಮೊದಲಾದವುಗಳನ್ನು ಮಾಡಿ ಅವರನ್ನು ತೃಪ್ತಿಪಡಿಸದಿದ್ದರೆ ನಿಮಗೆ ಮಹಾಪಾಪವು ಬರುವುದು ಅವರಿಗೆ ಕೊಟ್ಟು ಮಿಕ್ಕುಳಿದುದನ್ನುಂಡರೆ ನೀವು ಸಮಸ್ತ ಪಾಪಗಳಿಂದ ಬಿಡುಗಡೆ ಹೊಂದುವಿರಿ, ಎಂದು ಹೇಳಿರುವನು ಆದಕಾರಣ ಯಜ್ಞಾದಿಗಳನ್ನು ಅವಶ್ಯವಾಗಿ ಮಾಡಲೇಬೇಕು || ೧೦ ೧೧,೧೨ ೧೩ ||

ಭಾ || ಅತ್ರಾರ್ಥವಾದಮಾಹ | ಸಹಯಜ್ಞಾ ಇತಿ || ೧೦,೧೧,೧೨,೧೩ ||

ಅ || ವರ್ಣಾಶ್ರಮಗಳಿಗೆ ವಿಹಿತಗಳಾದ ಕರ್ಮಗಳನ್ನು ಸರ್ವಥಾ ಮಾಡಬೇಕೆಂಬುವ ವಿಷಯದಲ್ಲಿ ಸಹಯಜ್ಞಾ ಇದು ಮೊದಲಾದ ಅರ್ಥವಾದವನ್ನು ಹೇಳುತ್ತಾರೆ

ವಿ || ಸ್ತುತಿ ಅಥವಾ ನಿಂದೆಯನ್ನು ಹೇಳುವ ವಾಕ್ಯವು ಅರ್ಥವಾದವೆನಿಸುತ್ತದೆ. ಆ ಅರ್ಥವಾದವು, ಸ್ತುತಿ ನಿಂದಾ ಪರಕೃತಿ ಪುರಾಕಲ್ಪ ಎಂದು ನಾಲ್ಕು ವಿಧವು || ೧೨, ೧೧, ೧೨ ೧೩ ||

## ಗೀ || ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ |
## ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ || ೧೪ ||

ಅ || ಅನ್ನಾತ್=ಅನ್ನದೆಸೆಯಿಂದ, ಭೂತಾನಿ ಉತ್ಪದ್ಯಂತೇ=ರೇತೋದ್ವಾರಾ ಪ್ರಾಣಿಗಳು ಹುಟ್ಟುತ್ತಾರೆ (ಅಂದರೆ—ಅನ್ನವು ಶುಕ್ಲಶೋಣಿತರೂಪವಾಗಿ ಪರಿಣತವಾಗಿ ಆದರಿಂದ ಪ್ರಾಣಿಗಳ ದೇಹಗಳು ಹುಟ್ಟುತ್ತವೆ ) ಪರ್ಜನ್ಯಾತ್= ಸೂರ್ಯನ ದೆಸೆಯಿಂದ, ಅನ್ನಸಂಭವಃ= ಮಳೆ ಬಂದು ಅನ್ನವು ಹುಟುತ್ತದೆ ಪರ್ಜನ್ಯಃ= ಮೇಘಚಕ್ರಕ್ಕೆ ಅಭಿಮಾನಿಯಾದ ಆದಿತ್ಯನು, ಯಜ್ಞಾತ್= ಆಜ್ಯ ಮೊದಲಾದ ಹವಿಸ್ಸುಗಳಿಂದ, ಭವತಿ= ಆಗುತ್ತಾನೆ. (ಅಂದರೆ —ಯಜಮಾನನು ಕೊಟ್ಟ ಆಜ್ಯ ಮೊದಲಾದ ಹವಿಸ್ಸುಗಳನ್ನು ಉಪಭೋಗಿಸುವುದರಿಂದ ಆದಿತ್ಯನಿಗೆ ಬಲಾದಿಗಳು ಉಪಚಿತಗಳಾಗುತ್ತವೆ ) ಅಥವಾ ಪರ್ಜನ್ಯಾತ್= ಆದಿತ್ಯನೇ ನಿಯಾಮಕವಾಗಿ ಉಳ್ಳ ಮೇಘಚಕ್ರದಿಂದ ಅನ್ನವು ಹುಟ್ಟುತ್ತದೆ ಪರ್ಜನ್ಯಃ= ಮೇಘಚಕ್ರವು, ಯಜ್ಞಾತ್= ಹವಿರ್ಭಾಗದಿಂದ ಸಂತೋಷಗೊಂಡ ಆದಿತ್ಯನಿಂದ, ಭವತಿ= ಹುಟ್ಟುತ್ತದೆ. (ಅಂದರೆ ಮಳೆ ಸುರಿಸತಕ್ಕ ಮೇಘಚಕ್ರವು ಹುಟ್ಟುತ್ತದೆ) ಯಜ್ಞಃ= ದೇವತೆಗಳನ್ನುದ್ದೇಶಿಸಿ ದ್ರವ್ಯತ್ಯಾಗರೂಪವಾದ ಜ್ಯೋತಿಷ್ಟೋಮ ಮೊದಲಾದ ಯಾಗವು, ಕರ್ಮಸಮುದ್ಭವಃ= ಯಾಗಗಳಿಗೆ ಅಂಗಭೂತವಾದ ಕ್ರಿಯೆಯಿಂದ ಹುಟ್ಟುತ್ತದೆ || ೧೪ ||

ಭಾ || (೧) ಹೇತ್ವಂತರಮಾಹ | ಅನ್ನಾದಿತಿ || (೨) ಯಜ್ಞಃ ಪರ್ಜನ್ಯಾನ್ನತ್ವಾತ್ತತ್ಕಾರಣಮುಚ್ಯತೇ || (೩) ಪೂರ್ವಯಜ್ಞವಿವಕ್ಷಾಯಾಂ ಚ ತಸ್ಯ ಚಕ್ರಪ್ರವೇಶೋ ನ ಭವತಿ | ತದ್ವ್ಯಾಪಾದ್ಯಂ ಕರ್ಮವಿಧಯೋ | ನ ತು ಸಾಮ್ಯಮಾತ್ರೇಣೇದಾನೀಂ ಕಾರ್ಯಂ || ೧ ||

ಅ || (೧) ವರ್ಣಾಶ್ರಮೋಚಿತ ಕರ್ಮವನ್ನು ಸರ್ವಥಾ ಮಾಡಬೇಕೆಂಬುವ ವಿಷಯದಲ್ಲಿ ಜಗಚ್ಚಕ್ರ ಪ್ರವರ್ತಕತ್ವರೂಪ ಹೇತ್ವಂತರವನ್ನು ಅನ್ನಾತ್ ಎಂಬ ಶ್ಲೋಕದಿಂದ ಹೇಳುತ್ತಾರೆ (೨) (ಇಲ್ಲಿ

ಪರ್ಜನ್ಯ ಶಬ್ದದಿಂದ ಮೇಘವನ್ನೂ ಸೂರ್ಯನನ್ನೂ ಇಟ್ಟುಕೊಳ್ಳಬೇಕು ಅದರಲ್ಲಿ ಆದಿತ್ಯನು ಮೊದಲೇ ಹುಟ್ಟಿದ್ದ ಪ್ರಯುಕ್ತ ಅವನಿಗೆ ಯಾಗವು ಕಾರಣವೆಂದು ಹೇಳವುದು ಹೇಗೆ? ಎಂದರೆ— ಯದ್ಯಪಿ ದೇವತೆಗಳನ್ನುದ್ದೇಶಿಸಿ ದ್ರವ್ಯತ್ಯಾಗ ಮಾಡುವುದು ಯಜ್ಞವೆನಿಸುತ್ತದೆ ಆದರೂ ಗೀತಾ, ಭಾಷ್ಯ ಇವುಗಳಲ್ಲಿ ಯಜ್ಞಪದದಿಂದ ಹೋಮಮಾಡತಕ್ಕ ದ್ರವ್ಯ ಮಾತ್ರ ಇಟ್ಟುಕೊಳ್ಳಬೇಕು ಯಜ್ಞಕ್ಕೆ ಪರ್ಜನ್ಯನು ಉದ್ದೇಶ್ಯ ದೇವತೆಯು, ಅವನಿಗೆ ಕೊಟ್ಟ ಹವಿಸ್ಸನ್ನು ಪರ್ಜನ್ಯನು ಉಪಭೋಗಿಸುವುದರಿಂದ ಪರ್ಜನ್ಯನಿಗೆ ಆ ದ್ರವ್ಯವು ಅನ್ನವು ಅದನ್ನು ಉಪಭೋಗಿಸುವುದರಿಂದ ಪರ್ಜನ್ಯನಿಗೆ ಬಲಾದಿಗಳು ಅಭಿವೃದ್ಧಿಗಳಾಗುತ್ತವೆ ಆದಕಾರಣ ಯಜ್ಞವು ಪರ್ಜನ್ಯನಿಗೆ ಕಾರಣವೆಂದು ಹೇಳಿದ್ದು (೩) (ಹಾಗಾದರೆ—ದೇವಪದವನ್ನು ಹೊಂದಿದ ಪರ್ಜನ್ಯನು ಯಾವ ಯಾಗದಿಂದ ಪರ್ಜನ್ಯಪದವಿಯನ್ನು ಹೊಂದಿರುತ್ತಾನೋ, ಅಂತಹ ಯಾಗವನ್ನೇ ಪರ್ಜನ್ಯಶಬ್ದದಿಂದ ಇಟ್ಟುಕೊಳ್ಳಬಹುದಷ್ಟೆ, ಹಾಗೆ ಇಟ್ಟುಕೊಂಡರೆ ಯಾಗದಿಂದ ಪರ್ಜನ್ಯನು ಹುಟ್ಟುತ್ತಾನೆಂಬುದು ಮುಖ್ಯವಾಗಿಯೇ ಕೂಡುತ್ತದ ಎಂದರೆ –) ಪರ್ಜನ್ಯಪದವಿಯು ಪ್ರಾಪ್ತಿಯಾಗಲಿಕ್ಕೆ ಕಾರಣವಾದ ಯಾಗವನ್ನು ಇಟ್ಟುಕೊಂಡರೆ––ಪರ್ಜನ್ಯಪದಪ್ರಾಪ್ತಿಗೆ ಕಾರಣವಾದ ಯಜ್ಞಕ್ಕೆ ಜಗಚ್ಚಕ್ರಪ್ರವೇಶವು ಕೂಡುವುದಿಲ್ಲ (ಏಕೆಂದರೆ) ಈ ಜಗಚ್ಚಕ್ರವು ಕರ್ಮವಿಧಾನಕ್ಕಾಗಿ ಕರ್ತವ್ಯವೆಂದು ಹೇಳಲ್ಪಡುತ್ತದೆ ಆದುದರಿಂದ ಪರ್ಜನ್ಯಪದಪ್ರಾಪ್ತಿಗೆ ಕಾರಣವಾದ ಯಜ್ಞವು ಈ ಚಕ್ರದಲ್ಲಿ ಸೇರಲಿಲ್ಲ.

ವಿ || (1) ಶಾಸ್ತ್ರಗಳಲ್ಲಿ ವಿಧಿಸಿದ ಕರ್ಮಗಳನು ಮಾಡಿದರೆ ಜಗಚ್ಚಕ್ರ ಪ್ರವೃತ್ತಿಯಾಗುವುದು ನೀನು ಕರ್ಮ ಮಾಡದಿದ್ದರೆ ಜಗಚ್ಚಕ್ರ ಪ್ರವೃತ್ತಿಯನ್ನು ನೀನು ಕೆಡಿಸಿದಂತೆ ಆಗುವುದು. ಆದಕಾರಣ ಅರ್ಜುನನೇ ಮೊದಲಾದ ಅಧಿಕಾರಿಗಳೆಲ್ಲರೂ ಕರ್ಮ ಮಾಡಲೇಬೇಕು ಜಗಚ್ಚಕ್ರ ಪ್ರವೃತ್ತಿಗೆ ಕಾರಣವಾದ ಕರ್ಮವಿಧಿಗೆ ಉಪಯುಕ್ತವಾದ ಯಜ್ಞವು ಪರ್ಜನ್ಯಪದಪ್ರಾಪ್ತಿಗೆ ಕಾರಣವಾದುದು ಅಲ್ಲ ಆದುದರಿಂದ ಅನುಷ್ಠೇಯವಾದ ಜಗಚ್ಚಕ್ರದಲ್ಲಿ ಪರ್ಜನ್ಯಪದಪ್ರವೃತ್ತಿಗೆ ಕಾರಣವಾದ ಯಜ್ಞಕ್ಕೆ ಪ್ರವೇಶವಿಲ್ಲ (2) ಹಾಗಾದರೆ ಮೊದಲು ಪರ್ಜನ್ಯನು ಕರ್ಮ ಮಾಡಿದ್ದಾನೆ. ಆದುದರಿಂದ ಯಜ್ಞಾದಿಗಳ ದ್ವಾರಾ ಜಗಚ್ಚಕ್ರವು ಪ್ರವೃತ್ತವಾಗಿದೆ ಆದಕಾರಣ ನೀನೂ ಕರ್ಮ ಮಾಡಬೇಕೆಂದು, ಪರ್ಜನ್ಯನು ಮಾಡಿದ ಯಜ್ಞವೂ ಕೂಡ ಹೀಗೆ ಕರ್ಮವಿಧ್ಯುಪಯುಕ್ತವಾಗಬಹುದೆಂದರೆ- ಅದು ಸರಿಯಲ್ಲ ಏಕೆಂದರೆ ಕರ್ಮತ್ವಸಾಮ್ಯಮಾತ್ರದಿಂದ ಈಗ ಯಜ್ಞ ಮಾಡಬೇಕೆಂಬುವುದು ಕರ್ಮವಿಧಿಗೆ ಉಪಯುಕ್ತವಾಗಲಾರದು || ೧ ||

ಹೀ—ರೀತ್ಯಂತರದಿಂದಲೂ ಯಜ್ಞಾದ್ಭವತಿ ಪರ್ಜನ್ಯಃ ಎಂಬುದಕ್ಕೆ ಅರ್ಥ ಹೇಳುತ್ತಾರೆ––

ಭಾ || (೧) ಮೇಘಚಕ್ರಾಭಿಮಾನೀ ಚ ಪರ್ಜನ್ಯಃ | ತಚ್ಚ ಯಜ್ಞಾದ್ಭವತಿ | ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತಿ | ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾ ಇತಿ ಸ್ಮೃತೇಃ || (೨) ಉಭಯವಚನಾದಾದಿತ್ಯಾತ್ಸಮುದ್ರಾಚ್ಚಾವಿರೋಧಃ | ಅತಶ್ಚ ಯಜ್ಞಾತ್ಪರ್ಜನ್ಯೋದ್ಭವಃ ಸಂಭವತಿ | ಯಜ್ಞೋ ದೇವತಾಮುದ್ದಿಶ್ಯ ದ್ರವ್ಯತ್ಯಾಗಃ | ಕರ್ಮೇತರಕ್ರಿಯಾ || ೨ || || ೧೪ ||

ಅ || (೧) ಪರ್ಜನ್ಯನು ಮೇಘಗಳ ಸಮೂಹಕ್ಕೆ ಅಭಿಮಾನಿಯು, ಮೇಘಗಳ ಸಮೂಹವು ಯಾಗದಿಂದ ಉಂಟಾಗುತ್ತದೆ ಅಗ್ನಿಯಲ್ಲಿ ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಹೋಮಿಸಲ್ಪಟ್ಟ ಆಹುತಿಯು ಆದಿತ್ಯನನ್ನು ಹೊಂದುತ್ತದೆ ಸೂರ್ಯನಿಂದ ಮಳೆಯುಂಟಾಗುತ್ತದೆ ಮಳೆಯಿಂದ ಅನ್ನವು. ಅದರಿಂದ

ಪ್ರಜೆಗಳು ಹುಟ್ಟುತ್ತಾರೆ ಎಂದು ಸ್ಮೃತಿಯಲ್ಲಿ ಹೇಳಿದೆ (೨) (ಹಾಗಾದರೆ ಸ್ವಕೀಯಮುದಕಂ ನದ್ಯಃ ಎಂದು ಸಮುದ್ರದಿಂದ ವೃಷ್ಟಿಯಾಗುತ್ತದೆಂದು ಹೇಳಿದೆ ಆದುದರಿಂದ ಆದಿತ್ಯನಿಂದ ವೃಷ್ಟಿಯಾಗುತ್ತ ದೆಂದಂಗೀಕರಿಸಿದರೆ—ಸ್ವಕೀಯಮುದಕಂ ಎಂಬ ಪ್ರಮಾಣವಿರೋಧವು ಬರುತ್ತದೆಂದರೆ) ಎರಡು ಪ್ರಮಾಣ ವಚನಗಳನ್ನು ಅನುಸರಿಸಿ ಆದಿತ್ಯನಿಂದಲೂ ಸಮುದ್ರದಿಂದಲೂ ವೃಷ್ಟಿಯಾಗುತ್ತದೆಂದಂಗೀಕರಿಸಿ ದ್ದರಿಂದ ವಿರೋಧವಿಲ್ಲ (ಇಲ್ಲಿ ವೃಷ್ಟಿಶಬ್ದದಿಂದ ವರ್ಷಾಕಾಲದಲ್ಲಿದ್ದ ಮೇಘಗಳನ್ನು ಇಟ್ಟುಕೊಳ್ಳಬೇಕು) ಆದುದರಿಂದ ಯಜ್ಞದಿಂದ ಪರ್ಜನ್ಯನಿಗೆ ಉತ್ಪತ್ತಿಯು ಕೂಡುತ್ತದೆ ಯಜ್ಞವು ಕರ್ಮರೂಪವು ಆದುದ ರಿಂದ ಯಜ್ಞಃಕರ್ಮಸಮುದ್ಭವಃ ಎಂದು ಯಜ್ಞಕ್ಕೆ ಕರ್ಮದಿಂದ ಉತ್ಪತ್ತಿಯೆಂದು ಹೇಳಿದ್ದು ಹೇಗೆಂದರೆ— ಇಲ್ಲಿ ಯಜ್ಞಶಬ್ದದಿಂದ ದೇವತೆಯನ್ನುದ್ದೇಶಿಸಿ ದ್ರವ್ಯತ್ಯಾಗ ಮಾಡುವುದೆಂಬ ಅರ್ಥವು ವಿವಕ್ಷಿತವು ಯಜ್ಞ ಗಳಿಗೆ ಅಂಗಭೂತವಾದ ಇತರ ಕ್ರಿಯೆಯು ಕರ್ಮವೆನಿಸುತ್ತದೆ ಆದಕಾರಣ ಯಜ್ಞಃಕರ್ಮಸಮುದ್ಭವಃ ಎಂದು ಹೇಳಿದ್ದೂ ಕೂಡುತ್ತದೆ

ವಿ ॥ ಯಜ್ಞಃ=ಅಪೂರ್ವವು, ಕರ್ಮಸಮುದ್ಭವಃ=ಋತ್ವಿಕ್ ಯಜಮಾನ ವ್ಯಾಪಾರರೂಪ ಕರ್ಮ ದಿಂದ ಹುಟ್ಟಿದ್ದೆಂಬ ಅದ್ವೈತವ್ಯಾಖ್ಯಾನದಲ್ಲಿ ದೇವತೋದ್ದೇಶ್ಯಕ ದ್ರವ್ಯತ್ಯಾಗರೂಪ ಮುಖ್ಯಾರ್ಥವನ್ನು ಬಿಡಬೇಕಾಗುವುದು ಆದರಿಂದ ಹಟ್ಟಿತಕ್ಕ ಅಪೂರ್ವರೂಪ ಅಮುಖ್ಯಾರ್ಥವನ್ನು ಇಟ್ಟುಕೊಳ್ಳ ಬೇಕಾಗುವುದು ॥ ೧೪ ॥

ಗೀ ॥ ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಂ ।
ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ ॥ ೧೫ ॥

ಅ ॥ ಕರ್ಮ=ಕರ್ಮವನ್ನು, ಬ್ರಹ್ಮೋದ್ಭವಂ=ಪರಬ್ರಹ್ಮನಿಂದ ಹುಟ್ಟಿದುದನ್ನಾಗಿಯೂ, ಬ್ರಹ್ಮ= ಪರಬ್ರಹ್ಮನನ್ನು, ಅಕ್ಷರಸಮುದ್ಭವಂ=ವೇದಾಕ್ಷರದಿಂದ ಅಭಿವ್ಯಕ್ತನಾದವನನ್ನಾಗಿಯೂ, ವಿದ್ಧಿ=ತಿಳಿದು ಕೊಳ್ಳು. (ಅಂದರೆ— ವೇದದಿಂದ ವ್ಯತ್ಯಾಸವಿಲ್ಲದೆ ಚೆನ್ನಾಗಿ ತಿಳಿಯಲ್ಪಟ್ಟ ಬ್ರಹ್ಮನು ಸತ್ಕರ್ಮವನ್ನು ಮಾಡಿಸುತ್ತಾನೆ) (ವೇದಾಕ್ಷರಗಳು ಪ್ರಾಣಿಗಳಿಂದ ಅಭಿವ್ಯಕ್ತಗಳಾಗುತ್ತವೆ) ತಸ್ಮಾತ್=ಹಿಂದೆ ಹೇಳಿದ ಪರಂಪರೆಯಿಂದ ಯಜ್ಞದಿಂದ ಅಭಿವ್ಯಕ್ತನಾಗುವುದರಿಂದ, ಸರ್ವಗತಂ=ಸರ್ವತ್ರ ವ್ಯಾಪ್ತನಾದ, ಬ್ರಹ್ಮ=ಪರಬ್ರಹ್ಮನು, ನಿತ್ಯಂ=ಯಾವಾಗಲೂ, ಯಜ್ಞೇ=ಯಾಗದಲ್ಲಿ, ಪ್ರತಿಷ್ಠಿತಂ=ಸ್ಥಿರವಾಗಿ ಇರು ತ್ತಾನೆನ್ನಿಸುತ್ತಾನೆ. ॥ ೧೫ ॥

ಪೀ—ಕರ್ಮವು ಬ್ರಹ್ಮೋದ್ಭವಂ=ವೇದವೇ ಪ್ರಕಾಶಕವಾಗಿ ಉಳ್ಳದ್ದು ವೇದದಿಂದ ಪ್ರಕಾಶ ಹೊಂದು ತ್ತದೆಂದು ಅದ್ವೈತವ್ಯಾಖ್ಯಾನವು ಅಯುಕ್ತವೆಂಬ ಅಭಿಪ್ರಾಯದಿಂದ ಯೋಗ್ಯಾರ್ಥ ಹೇಳುತ್ತಾರೆ

ಭಾ ॥ (೧) ಕರ್ಮ ಬ್ರಹ್ಮಣೋ ಜಾಯತೇ । ಏಷ ಹ್ಯೇವ ಸಾಧು ಕರ್ಮ ಕಾರಯತಿ । ಬುದ್ಧಿರ್ಜ್ಞಾನಮಿತ್ಯಾದಿಭ್ಯಃ ॥ (೨) ನಚ ಮುಖ್ಯೇ ಸಂಭಾವ್ಯಮಾನೇ ಪಾರಂಪ- ರ್ಯೇಣೌಪಚಾರಿಕಂ ಕಲ್ಪ್ಯಂ ॥ (೩) ನಚ ಜಡಾನಾಂ ಸ್ವತಃ ಪ್ರವೃತ್ತಿಃ ಸಂಭ- ವತಿ । ಏತಸ್ಯ ವಾ ಅಕ್ಷರಸ್ಯೇತ್ಯಾದಿಸರ್ವನಿಯಮನಶ್ರುತೇಶ್ಚ ॥ (೪) ದ್ರವ್ಯಂ ಕರ್ಮ ಚ ಕಾಲಶ್ಚೇತ್ಯಾದೇಶ್ಚ । ಅಚಿಂತ್ಯಶಕ್ತಿರ್ಶ್ಲೋಕ್ತಾ ॥ (೫) ಜೀವಸ್ಯ ಚ ಪ್ರತಿಬಿಂಬಸ್ಯ ಬಿಂಬಪೂರ್ವೈವ ಚೇಷ್ಟಾ ॥ (೬) ನ ಕರ್ತೃತ್ವಮಿತ್ಯಾದಿನಿಷೇಧಾಚ್ಚ ॥ ೧ ॥

ಅ ॥ (೧) ಕರ್ಮವು ಪರಬ್ರಹ್ಮನಿಂದ ಹುಟ್ಟುತ್ತದೆ ಶ್ರೀಹರಿಯೇ ಶುಭಕರ್ಮವನ್ನು ಮಾಡಿಸುತ್ತಾನೆ ಬುದ್ಧಿರ್ಜ್ಞಾನಮಸಮ್ಮೋಹಃ ಇತ್ಯಾದಿ ಪ್ರಮಾಣಗಳಿಂದ ಕರ್ಮವು ಪರಬ್ರಹ್ಮನಿಂದ ಹುಟ್ಟಿದ್ದೆಂದು ತಿಳಿಯುತ್ತದೆ. (೨) (ಇತರರು ಹೇಳಿದ ಅರ್ಥವು ಅಯುಕ್ತವೆನ್ನುತ್ತಾರೆ) ಉದ್ಭವ ಎಂಬ ಶಬ್ದಕ್ಕೆ ಉತ್ಪತ್ತಿಯೆಂಬ ಮುಖ್ಯವಾದ ಅರ್ಥವು ಕೂಡುವಾಗ ಪ್ರಕಾಶವೆಂಬ ಅಮುಖ್ಯವಾದ ಅರ್ಥವನ್ನು ಕಲ್ಪಿಸುವುದು ಯುಕ್ತವಲ್ಲ ಮತ್ತು ಬ್ರಹ್ಮಶಬ್ದಕ್ಕೆ ಪರಬ್ರಹ್ಮನೆಂಬ ಮುಖ್ಯವಾದ ಅರ್ಥವು ಕೂಡುವಾಗ ವೇದವೆಂಬ ಅಮುಖ್ಯವಾದ ಅರ್ಥವನ್ನು ಕಲ್ಪಿಸಕೂಡದು ಮತ್ತು ವೇದವು ಕರ್ಮವನ್ನು ಪ್ರಕಾಶಗೊಳಿಸುತ್ತದೆಂದು ಹೇಳುವವರೂ ಜಡಭೂತವಾದ ವೇದಕ್ಕೆ ಸ್ವತಃ ಕರ್ಮಪ್ರಕಾಶಕತ್ವ ಸಾಮರ್ಥ್ಯವು ಕೂಡದಿರುವುದರಿಂದ ಅಂತರ್ನಿಯಾಮಕನಾದ ಶ್ರೀಹರಿಯ ದ್ವಾರಾ ಎಂದೇ ಒಡಂಬಡಬೇಕು. ಏವಂಚ ಕೊನೆಗೆ ಪರಬ್ರಹ್ಮನನ್ನು ಅಂಗೀಕರಿಸಬೇಕಾಗಿರುವುದರಿಂದ ನಿರುಪಪದಬ್ರಹ್ಮಶಬ್ದದಿಂದಲೇ ಸಿಗುವ ಪರಬ್ರಹ್ಮರೂಪ ಅರ್ಥವನ್ನು ಬಿಡುವುದು ಯುಕ್ತವಲ್ಲ. (೩) (ವೇದವು ತಾನೇ ಕರ್ಮವನ್ನು ಪ್ರಕಾಶಗೊಳಿಸುತ್ತದೆ ಪರಬ್ರಹ್ಮನು ನಿಯಾಮಕನೆಂದಂಗೀಕರಿಸುವುದು ಏತಕ್ಕೆ? ಆದಕಾರಣ ಪರಂಪರೆಯಿಲ್ಲ ಎಂದರೆ) ಜಡವಸ್ತುಗಳಿಗೆ ಸ್ವತಃ ಪ್ರವೃತ್ತಿಯು ಕೂಡುವುದಿಲ್ಲ (ವೇದವು ಜಡವಾಗಿರುವುದರಿಂದ ಇತರರ ಅಧೀನದಲ್ಲಿದೆ ಎಂಬುದು ಕೂಡುವುದಿಲ್ಲವೆಂಬುವುದಿಷ್ಟು, ಮಾತ್ರವಲ್ಲ ಮತ್ತೆ ಆಗಮದಿಂದಲೂ ವಿಷ್ಣುವಿನ ಅಧೀನದಲ್ಲಿದೆ ಎಂಬುದು ಸಿದ್ಧವಾಗುತ್ತದೆನ್ನುತ್ತಾರೆ) ಈ ಅಕ್ಷರನೆಸಿಸಿದ ಶ್ರೀವಿಷ್ಣುವಿನ (ಆಜ್ಞೆಯಾಗುತ್ತಿರಲು ನದ್ಯಾದಿಗಳ ಚಲನೆಯಾಗುತ್ತದೆ ಎಂದು) ಶ್ರೀಹರಿಯು ಸರ್ವರಿಗೂ ಪ್ರೇರಕನು ಎಂದು ಹೇಳುವ ಶ್ರುತಿಯಿದೆ (೪) (ಹಾಗಾದರೆ ಶಬ್ದಗಳಿಗೆ ಅರ್ಥಪ್ರಕಾಶಗೊಳಿಸುವುದು ಸ್ವಭಾವವು. ಕಾರಣಾಂತರದಿಂದ ಬರತಕ್ಕುದಲ್ಲ. ಆದಕಾರಣ ವೇದವು ಜಡವಾದುದಾಗ್ಯೂ ಅದಕ್ಕೆ ಪರಾಪೇಕ್ಷೆಯಿಲ್ಲ ಎಂದರೆ) ಪ್ರಕೃತ್ಯಾದಿಗಳು, ಕರ್ಮ, ಕಾಲ, ಪ್ರಕೃತ್ಯಾದಿಗಳ ಪರಿಣಾಮಾದಿಗಳು ಇತ್ಯಾದಿ ಪ್ರಮಾಣಗಳಿಂದ (ಸ್ವಭಾವವೂ ಭಗವಂತನ ಅಧೀನದಲ್ಲಿದೆ ಎಂದು ಪ್ರಮಾಣದಿಂದ ಸಿದ್ಧವಾಯಿತು) ಸ್ವಭಾವವನ್ನು ನಿಯಮಿಸುವ ಅಚಿಂತ್ಯ ಶಕ್ತಿಯೂ ಶ್ರೀಹರಿಗೆ ಇದೆ, ಎಂದು ಹೇಳಲ್ಪಟ್ಟಿದೆ (೫) (ಜಡವಸ್ತುಗಳಿಗೆ ಸ್ವತಃ ಪ್ರವೃತ್ತಿಯು ಕೂಡುವುದಿಲ್ಲವೆಂದು ಹೇಳುವುದಾದರೆ ಅಭಿಮಾನಿದೇವತಾ ದ್ವಾರಾ ಪ್ರವೃತ್ತಿಯು ಬರಲಿ ಎನ್ನುತ್ತೇವೆ ಪರಬ್ರಹ್ಮನನ್ನು ನಿಯಾಮಕನೆಂದು ಅಂಗೀಕರಿಸುವುದು ಬೇಡ. ಎಂದರೆ) ಪ್ರತಿಬಿಂಬಭೂತನಾದ ಜೀವನಿಗೆ ಬಿಂಬಾಧೀನವಾಗಿಯೇ ಕ್ರಿಯೆಯು ಇರುವುದು (ಅಂದರೆ ಜಡಭೂತವಾದ ವೇದಕ್ಕೆ ಸ್ವತಃ ಪ್ರವೃತ್ತಿಯು ಕೂಡುವುದಿಲ್ಲ, ಎಂಬ ದೋಷ ಪರಿಹಾರಕ್ಕಾಗಿ ಅಭಿಮಾನಿದೇವತೆಯನ್ನು ಅಂಗೀಕರಿಸಿದರೂ ಆ ಅಭಿಮಾನಿ ದೇವತೆಯೂ ಶ್ರೀಹರಿಗ ಪ್ರತಿಬಿಂಬನಾಗಿರುವುದರಿಂದ ಅವನ ಕ್ರಿಯೆಯೂ ಕೂಡ ಬಿಂಬಭೂತ ಶ್ರೀಹರಿಯ ಕ್ರಿಯೆಯನ್ನು ಹೊರತು ಬೇರೆ ಕ್ರಿಯೆಯು ಕೂಡದಿರುವ ಪ್ರಯುಕ್ತ ಬಿಂಬಭೂತ ಪರಬ್ರಹ್ಮನನ್ನೇ ಕೊನೆಗೆ ಸ್ವೀಕರಿಸಲೇಬೇಕಾಗಿರುವುದರಿಂದ ಹಿಂದೆ ಹೇಳಿದ ಪರಂಪರೆಗಿಂತಲೂ ಅಧಿಕ ಪರಂಪರೆಯನ್ನೇ ಅಂಗೀಕರಿಸಿದಂತೆ ಆಯಿತು.) (೬) (ಜೀವನು ಪ್ರತಿಬಿಂಬನಾದ ಪ್ರಯುಕ್ತ ಮಾತ್ರ ಸ್ವತಃ ಪ್ರವೃತ್ತಿಯು ಇಲ್ಲವೆಂದಲ್ಲ ಮತ್ತೆ ಆಗಮ ಪ್ರಮಾಣದಿಂದಲೂ ಜೀವರಿಗೆ ಸ್ವತಃ ಪ್ರವೃತ್ತಿಯು ಇಲ್ಲವೆಂದು ಸಿದ್ಧವಾಗುತ್ತದೆನ್ನುತ್ತಾರೆ) ಜೀವರಿಗೆ ಕ್ರಿಯಾ ಸ್ವಾತಂತ್ರ್ಯವು ಇಲ್ಲವೆಂದು ಹೇಳತಕ್ಕ ಆಗಮದಿಂದಲೂ (ಜೀವರಿಗೆ ಸ್ವತಃ ಪ್ರವೃತ್ತಿಯು ಇಲ್ಲವೆಂದು ತಿಳಿಯುತ್ತದೆ) ॥ ೧ ॥

ಪೀ—ಬ್ರಹ್ಮ=ವೇದವು, ಅಕ್ಷರಸಮುದ್ಭವಂ=ಪರಬ್ರಹ್ಮನಿಂದ ಹುಟ್ಟುತ್ತದೆ, ಎಂದು ಅದ್ವೈತ ಭಾಷ್ಯದಲ್ಲಿ ಅರ್ಥವನ್ನು ಹೇಳಿರುತ್ತಾರೆ ಅದು ಅಯುಕ್ತವೆನ್ನುತ್ತಾರೆ.

**ಭಾ ॥ (೧) ಅಕ್ಷರಾಣಿ ಪ್ರಸಿದ್ಧಾನಿ । ತೇಭ್ಯೋಽಭಿವ್ಯಜ್ಯತೇ ಪರಂಬ್ರಹ್ಮ ॥ (೨) ಅನ್ಯಥಾ ಅನಾದಿನಿಧನಮಚಿಂತ್ಯಂ ಪರಿಪೂರ್ಣಮಪಿ ಬ್ರಹ್ಮ ಕೋ ಜಾನಾತಿ ॥ (೩) ನ ಚ**

**ರೂಢಿಂ ವಿನಾ ಯೋಗಾಂಗೀಕಾರೋ ಯುಕ್ತಃ ॥ (೪) ಪರಾಮರ್ಶಾಚ್ಚ ತಸ್ಮಾತ್ಸರ್ವಗತಂ ಬ್ರಹ್ಮೇತಿ ॥ (೫) ನ ಹ್ಯೇಕಶಬ್ದೇನ ದ್ವಿರುಕ್ತೇನ ಭೇದಶ್ರುತಿಂ ವಿನಾ ವಸ್ತು-ದ್ವಯಂ ಕುತ್ರಚಿದುಚ್ಯತೇ ॥ ೨ ॥**

**ಅ** ॥ (೧) ಅಕ್ಷರಗಳು ಪ್ರಸಿದ್ಧಗಳು (ಅಂದರೆ ಆನುಪೂರ್ವಿಯಲ್ಲಿ ವ್ಯತ್ಯಾಸವಿಲ್ಲದೆ ಒಂದೇ ರೀತಿಯಿರುವ ಅಕಾರ ಮೊದಲಾದವುಗಳು (ವೇದವು) ಅವುಗಳಿಂದ ಪರಬ್ರಹ್ಮನು ಅಭಿವ್ಯಕ್ತನಾಗುತ್ತಾನೆ. (೨) (ಸಮುದ್ಭವ ಶಬ್ದಕ್ಕೆ ಅಭಿವ್ಯಕ್ತನಾಗುತ್ತಾನೆಂದು ಅಮುಖ್ಯ ಅರ್ಥವನ್ನು ಏಕೆ ಸ್ವೀಕರಿಸುವುದು. ಹುಟ್ಟುತ್ತಾನೆಂದು ಮುಖ್ಯಾರ್ಥವನ್ನಂಗೀಕರಿಸಿದರೆ—ಬಾಧಕವೇನು? ಮತ್ತು ಪ್ರಮಾಣಾಂತರದಿಂದಲೂ ಪರಬ್ರಹ್ಮನಿಗೆ ಅಭಿವ್ಯಕ್ತಿಯು ಕೂಡುವುದರಿಂದ ತೇಭ್ಯಃ=ವೇದಗಳಿಂದ ಪರಬ್ರಹ್ಮನು ಅಭಿವ್ಯಕ್ತನಾಗುತ್ತಾನೆಂದು ಎಂದದ್ದು ಏತಕ್ಕೆ? ಎಂದರೆ) ಅಭಿವ್ಯಕ್ತನಾಗುತ್ತಾನೆಂದು ಅರ್ಥವನ್ನಂಗೀಕರಿಸದಿದ್ದರೆ—ಸರ್ವಥಾ ಉತ್ಪತ್ತಿವಿನಾಶಗಳಿಲ್ಲದಿರುವ ಪರಬ್ರಹ್ಮನು ಹೇಗೆ ಹುಟ್ಟುವನು? ಹಾಗೆಯೇ ವೇದವು ಪರಬ್ರಹ್ಮನನ್ನು ಪ್ರಕಟೀಕರಿಸುತ್ತದೆಂದು ಒಡಂಬಡದಿದ್ದರೆ ಸರ್ವಗುಣಪರಿಪೂರ್ಣನಾದುದರಿಂದ ಹೀಗೆಯೇ ಇದ್ದಾನೆಂದು ಆಲೋಚಿಸಲಿಕ್ಕೂ ಅಶಕ್ಯನಾದ ಪರಬ್ರಹ್ಮನನ್ನು ಯಾವನು ತಿಳಿಯುತ್ತಾನೆ? (೩) (ಸಮುದ್ಭವ ಶಬ್ದಕ್ಕೆ ಮುಖ್ಯವಾದ ಅರ್ಥವು ಸಿಗುವುದರಿಂದ ಅದ್ವೈತಭಾಷ್ಯದಲ್ಲಿ ಹೇಳಿದ ಅರ್ಥವು ಏಕೆ ಆಗಲಾರದೆಂದರೆ) ರೂಢಿಯಿಲ್ಲದೆ ಯೋಗವನ್ನಂಗೀಕರಿಸುವುದು ಯುಕ್ತವಲ್ಲ (ಅಂದರೆ—ಬ್ರಹ್ಮಶಬ್ದವು **ತದೇವ ಬ್ರಹ್ಮ ಪರಮಂ ಕವೀನಾಂ, ಬ್ರಹ್ಮೇತಿ ಪರಮಾತ್ಮೇತಿ** ಇತ್ಯಾದಿ ಶ್ರುತಿಸ್ಮೃತಿಗಳಲ್ಲಿ ಪರಬ್ರಹ್ಮನಲ್ಲಿ ಹೆಚ್ಚು ಪ್ರಯೋಗವು ಕಂಡದ್ರಿಂದ ರೂಢವಾಗಿದೆ ವೇದದಲ್ಲಿ ಬೃಹತೀತಿ ಬ್ರಹ್ಮ ದೇಶಕಾಲಗಳಿಂದ ಪೂರ್ಣವು, ಎಂದು ಯೋಗದಿಂದ ಇರುವುದು ಹಾಗೆಯೇ ಅಕ್ಷರಶಬ್ದವು ಅಕಾರಾದಿ ವರ್ಣಗಳಲ್ಲಿ ರೂಢವಾಗಿದೆ ಪರಬ್ರಹ್ಮನಲ್ಲಿ ನಾಶವಿಲ್ಲದಿರುವಿಕೆ ಎಂಬ ಯೋಗದಿಂದ ಇರುವುದು ನಾವು ಹೇಳಿದ ಅರ್ಥಕ್ಕಿಂತ ವ್ಯತ್ಯಾಸವಾಗಿ ಅರ್ಥ ಹೇಳಿದರೆ ರೂಢಿಯನ್ನು ಬಿಟ್ಟು, ಯೋಗವನ್ನು ಅಂಗೀಕರಿಸಿದಂತೆ ಆಗುವುದು ಅದು ಯುಕ್ತಿವಿರುದ್ಧವು) (೪) **ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ** ಎಂಬೀ ಉತ್ತರವಾಕ್ಯದಲ್ಲಿ ಬ್ರಹ್ಮಶಬ್ದದಿಂದ ಸರ್ವಗತತ್ವ ನಿತ್ಯತ್ವ ಮೊದಲಾದ ವಿಶೇಷಣಗಳು ಇದ್ದುದರಿಂದ ಪರಬ್ರಹ್ಮನನ್ನೇ ಇಟ್ಟುಕೊಂಡಿದ್ದಾರೆ (ಆದುದರಿಂದ ಪೂರ್ವವಾಕ್ಯದಲ್ಲಿದ್ದ ಬ್ರಹ್ಮಶಬ್ದಕ್ಕೂ ಪರಬ್ರಹ್ಮವೆಂಬ ಅರ್ಥವೆಂದೇ ತಿಳಿಯುತ್ತದೆ ತಥಾಚ ಪರಬ್ರಹ್ಮನನ್ನು ತಿಳಿಸುವುದು ವೇದ ಹೊರತು ಬೇರೆ ಯಾವುದೂ ಇಲ್ಲದಿರುವುದರಿಂದ ಅಕ್ಷರಶಬ್ದಕ್ಕೆ ಪರಬ್ರಹ್ಮನೆಂಬ ಅರ್ಥವನ್ನೇ ಇಟ್ಟುಕೊಳ್ಳಬೇಕು (೫) (ಮೊದಲು ಅಕ್ಷರಶಬ್ದದಿಂದ ಹೇಳಲ್ಪಟ್ಟ ಪರಬ್ರಹ್ಮನನ್ನು ಈಗ ಬ್ರಹ್ಮಶಬ್ದದಿಂದ ಇಟ್ಟುಕೊಳ್ಳುತ್ತೇವೆ. ಆದಕಾರಣ ಮೊದಲಿನ ಬ್ರಹ್ಮಶಬ್ದಕ್ಕೆ ವೇದವೆಂದೇ ಅರ್ಥವೆಂದರೆ) ಒಂದೇ ಪ್ರಕರಣದಲ್ಲಿ ಒಂದು ಶಬ್ದವನ್ನು ಎರಡು ಸಲ ಹೇಳಿದರೆ—ಅಲ್ಲಿ ಪದಾರ್ಥಗಳಿಗೆ ಭೇದವನ್ನು ತಿಳಿಸುವ ವೇದ ಮೊದಲಾದ ಪ್ರಮಾಣಗಳು ಇಲ್ಲದೆ ಭಿನ್ನ ಭಿನ್ನ ವಸ್ತುಗಳೆಂದು ಎಲ್ಲಿಯೂ ಹೇಳಲ್ಪಡಲಿಕ್ಕೆ ಆಗುವುದಿಲ್ಲವಷ್ಟೆ (**ತಸ್ಮಾತ್ಸರ್ವ-ಗತಂ ಬ್ರಹ್ಮ** ಎಂಬಲ್ಲಿಯೂ **ಸರ್ವಗತಂ** ಎಂದು ಭೇದಜ್ಞಾಪಕವಾದ ವಿಶೇಷಣವಿದೆ, ಎಂದರೆ ಅಕ್ಷರಶಬ್ದದ ಅರ್ಥಗಳಾದ ವರ್ಣಗಳೂ ಸರ್ವಗತಗಳಾಗಿವೆ ಆದಕಾರಣ ಭೇದಜ್ಞಾಪಕವಾದುದಿಲ್ಲ) (ಮೊದಲು ಅಕ್ಷರಶಬ್ದದಿಂದ, ಹೇಳಲ್ಪಟ್ಟ ಪರಬ್ರಹ್ಮನನ್ನು ಈಗ ಬ್ರಹ್ಮ ಶಬ್ದದಿಂದ, ಪ್ರಕೃತಿಪರಿಣಾಮ ಶರೀರವನ್ನು ಅಕ್ಷರಶಬ್ದದಿಂದ ಹೇಳುವ ಭಾಸ್ಕರಾಚಾರ್ಯರಿಗೆ ಈ ದೂಷಣವು ಹೇಳಿದ್ದು) ॥ ೨ ॥

**ಟೀ**—ಅದ್ವೈತಭಾಷ್ಯದಲ್ಲಿ ಮೊದಲು ಬ್ರಹ್ಮಶಬ್ದದಿಂದ ಹೇಳಲ್ಪಟ್ಟ ವೇದಕ್ಕೇನೇ ಈ ಪರಾಮರ್ಶವೆಂದು ಹೇಳಿದೆ ಮತ್ತು ಅದ್ವೈತಭಾಷ್ಯದಲ್ಲಿ ಹೇಳಿದ ಪ್ರಕಾರ ಅರ್ಥ ಹೇಳಿದರೆ ಸಮುದ್ಭವ ಶಬ್ದಕ್ಕೆ ಮುಖ್ಯಾರ್ಥವೇ ಸಿಗುತ್ತದೆ ಎಂಬುವುದೂ ಅಯುಕ್ತವೇ ಎನ್ನುತ್ತಾರೆ—

ಭಾ ॥ (೧) ತಾನಿ ಚಾಕ್ಷರಾಣಿ ನಿತ್ಯಾನಿ । (1) ವಾಚಾ ವಿರೂಪ ನಿತ್ಯಯಾ । (2) ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ । (3) ಅತ ಏವ ಚ ನಿತ್ಯತ್ವಮಿತ್ಯಾದಿ ಶ್ರುತಿಸ್ಮೃತಿಭಗವದ್ವಚನೇಭ್ಯಃ ॥ (೨) ದೋಷಶ್ಚೋಕ್ತಃ ಸಕರ್ತೃಕತ್ವೇ ॥ ನ ಚಾಬುದ್ಧಿಪೂರ್ವಮುತ್ಪನ್ನಾನಿ । ತತ್ಪ್ರಮಾಣಾಭಾವಾತ್ । ನಿಶ್ವಸಿತಶಬ್ದಸ್ತ್ವಕ್ಲೇಶಾಭಿಪ್ರಾಯೋ ನಾಬುದ್ಧಿಪೂರ್ವಾಭಿಪ್ರಾಯಃ ॥ (೪) ಸೋಽಕಾಮಯತೇತ್ಯಾದೇಶ್ಚ ॥ (೫) ಇಷ್ಟಂ ಹುತಮಿತ್ಯಾದಿರೂಪಪ್ರಪಂಚೇನ ಸಹಾಭಿಧಾನಾಚ್ಚ । ಮಹಾತಾತ್ಪರ್ಯವಿರೋಧಾಚ್ಚ । ತಚ್ಚೋಕ್ತಂ ಪುರಸ್ತಾತ್ ॥ ೩ ॥

ಅ ॥ (೧) ನಾವು ಹೇಳಿದ ನಿಯತಾನುಪೂರ್ವಿಯುಳ್ಳ ಅಕಾರಾದಿವರ್ಣಗಳು (ವೇದವು) ಅನಾದಿ ನಿತ್ಯಗಳು (1) **ತಸ್ಮೈ ನೂನಮಭಿದ್ಯವೇ । ವಾಚಾ ವಿರೂಪ ನಿತ್ಯಯಾ । ವೃಷ್ಣೇ ಚೋದಸ್ವ ಸುಷ್ಟುತಿಂ** ವಿರೂಪಋಷಿಯೇ ಎಲ್ಲೆಡೆಯಲ್ಲಿಯೂ ಪ್ರಕಾಶಿಸಿಕೊಂಡಿರುವ ಭಕ್ತರಿಗೆ ಇಷ್ಟಾರ್ಥವನ್ನು ಕೊಡುವ ಶ್ರೀಹರಿಯನ್ನುದ್ದೇಶಿಸಿ ನಿಶ್ಚಯವಾಗಿಯೂ ಅನಾದಿನಿತ್ಯವಾದ ವೇದವಚನದಿಂದ ಒಳ್ಳೇ ಸ್ತುತಿಯನ್ನು ಮಾಡು (೨)ಸರ್ವಸ್ವತಂತ್ರನಾದ ಶ್ರೀವಿಷ್ಣುವಿನಿಂದ ಉಚ್ಚರಿಸಲ್ಪಟ್ಟ ವೇದವಚನವು ಉತ್ಪತ್ತಿವಿನಾಶಗಳಿಲ್ಲದಿರುವುದು ಸ್ವರವರ್ಣಾದಿಗಳಿಂದಲೂ ವ್ಯತ್ಯಾಸವಿಲ್ಲದಿರುವುದು (3)ವೇದವು ಅನಾದಿನಿತ್ಯವಾಗಿರುವುದರಿಂದಲೇ ದೇವತೆಗಳ ಪ್ರವಾಹಕ್ಕೂ ನಿತ್ಯತ್ವವು. ಇದುಮೊದಲಾದ ವೇದ ಸ್ಮೃತಿ ಸೂತ್ರ ಮೊದಲಾದವುಗಳಿಂದ (ವೇದಗಳು ಅನಾದಿನಿತ್ಯಗಳೇ ಎಂದು ಸಿದ್ಧಿಸುತ್ತವೆ) (೨) (ಶ್ರುತ್ಯಾದಿಗಳಿಂದ ಮಾತ್ರ ವೇದವು ಅನಾದಿ ನಿತ್ಯವೆಂದು ಸಿದ್ಧವಾಗುವುದಲ್ಲ ಮತ್ತೆ ಹೀಗೆ ಒಡಂಬಡದಿದ್ದರೆ ಬಾಧಕವಿದ್ದ ಪ್ರಯುಕ್ತವೂ ನಿತ್ಯಗಳೇ ಎನ್ನತಕ್ಕದ್ದು) ಧರ್ಮವನ್ನು ತಿಳಿಸುವ ವೇದವನ್ನು ಯಾರಾದರೂ ಮಾಡಿದ್ದೆಂದಾದರೆ—ಕರ್ತನಿಗೆ ಅಜ್ಞಾನಾದಿ ದೋಷಗಳು ಇರಬಹುದಾದುದರಿಂದ ದೋಷವು ಹೇಳಲ್ಪಟ್ಟಿದೆ (೩) (ವೇದಾಕ್ಷರಗಳೆಲ್ಲವೂ ಅಬುದ್ಧಿಪೂರ್ವಕವಾಗಿ ಬ್ರಹ್ಮನಿಂದ ಹುಟ್ಟಿದವುಗಳು ಆದಕಾರಣ ಭ್ರಾಂತ್ಯಾದಿಮೂಲಕಗಳೆಂಬ ಶಂಕೆಗೆ ಅವಕಾಶವಿಲ್ಲ ಎಂದರೆ ) ವೇದಾಕ್ಷರಗಳು ಅಬುದ್ಧಿಪೂರ್ವಕವಾಗಿ ಹುಟ್ಟಿದವುಗಳಲ್ಲ. ಆ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ (**ಅಸ್ಯ ಮಹತೋ ಭೂತಸ್ಯ ನಿಶ್ವಸಿತಮೇತದ್ಯದೃಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸಃ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ** ಎಂಬ ಪ್ರಮಾಣವು, ವೇದಗಳು ಬ್ರಹ್ಮನಿಂದ ಅಬುದ್ಧಿಪೂರ್ವಕವಾಗಿ ಹುಟ್ಟಿರುತ್ತವೆ ಎಂಬಲ್ಲಿ ಪ್ರಮಾಣಗಳು ಎಂದರೆ) ನಿಶ್ವಸಿತಶಬ್ದವು ಕ್ಲೇಶವಿಲ್ಲದೆ ಸುಖವಾಗಿಯೇ ಹೊರಟಿವೆ ಎಂದರ್ಥವು ಅಬುದ್ಧಿಪೂರ್ವಕವಾಗಿ ಹುಟ್ಟಿದ್ದು ಎಂದಭಿಪ್ರಾಯವಲ್ಲ (೪) ಮತ್ತು ಶ್ರೀಹರಿಯು ಇಚ್ಛಿಸಿದನು, ಶ್ರೀಹರಿಯು ಜಗತ್ತೆಲ್ಲವನ್ನು ಸೃಷ್ಟಿಮಾಡಿದನು, ಇದುಮೊದಲಾದ ವೇದಗಳಿಂದ ಶ್ರೀಹರಿಯು ಎಲ್ಲಾ ಸೃಷ್ಟಿಯನ್ನು ತನ್ನ ಇಚ್ಛೆಯಿಂದಲೇ ಮಾಡಿದ್ದಾನೆಂದು ಸಿದ್ಧವಾಗುತ್ತದೆ (ಆದಕಾರಣ ವೇದಗಳು ಅಬುದ್ಧಿಪೂರ್ವಕವಾಗಿ ಹುಟ್ಟಿದವುಗಳಲ್ಲ) (೫) (ಹಾಗಾದರೆ ನಿಶ್ವಸಿತಂ ಎಂಬ ವೇದವು ಋಗ್ವೇದ ಮೊದಲಾದ ಶಬ್ದಪ್ರಪಂಚಕ್ಕೆ ಅಬುದ್ಧಿಪೂರ್ವಕವಾಗಿ ಉತ್ಪತ್ತಿಯನೂ **ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಇದಂ ಸರ್ವಮಸೃಜತ । ಯದಿದಂ ಕಿಂ ಚ ।** ಎಂಬುವುದು ಅರ್ಥಪ್ರಪಂಚಕ್ಕೆ ಇಚ್ಛಾಪೂರ್ವಕ ಉತ್ಪತ್ತಿಯನ್ನು ಹೇಳುತ್ತದೆ ಹೀಗೆ ವಿಷಯಗಳು ಬೇರೆ ಬೇರೆಯಾಗಿರುವುದರಿಂದ ವಿರೋಧವಿಲ್ಲವೆಂದರೆ—) ಹೀಗಾದರೆ—ನಿಶ್ವಸಿತಂ ಇತ್ಯಾದಿ ವೇದಗಳಲ್ಲಿ ವೇದಾದಿ ಶಬ್ದಪ್ರಪಂಚಕ್ಕೆ **ಇಷ್ಟಂ ಹುತಮಾಶಿತಂ ಪಾಯಿತಮಯಂ ಚ ಲೋಕಃ ಪರಶ್ಚ ಲೋಕಃ** ಯಾಗವು, ಹೋಮವು, ಅನ್ನವನ್ನು ಉಣ್ಣುವುದು, ನೀರು ಕುಡಿಯುವುದು, ಭೂಲೋಕವು, ಸ್ವರ್ಗಲೋಕವು,

ಎಂಬ ವಾಕ್ಯದಲ್ಲಿ ಅರ್ಥಪ್ರಪಂಚದಿಂದ ಕೂಡಿ ಒಂದೇ ಪ್ರಕರಣದಲ್ಲಿ ನಿಶ್ವಸಿತಶಬ್ದವನ್ನು ಹೇಳಿದ್ದರಿಂದ (ಅರ್ಥಪ್ರಪಂಚಕ್ಕೂ ನಿಶ್ವಸಿತ ಶಬ್ದದಿಂದ ಅಬುದ್ಧಿಪೂರ್ವಕವಾಗಿ ಉತ್ಪತ್ತಿಯೆಂದಾಗಬೇಕಾಗುವುದು ಮತ್ತು ಪರಬ್ರಹ್ಮನು ಸರ್ವೋತ್ತಮನೆಂಬುವಲ್ಲಿಯೇ ಸಮಸ್ತ ವೇದಗಳಿಗೆ ಮಹಾತಾತ್ಪರ್ಯವು, ಅದರಿಂದ ವಿರೋಧವೂ ಬರುವುದು ಸಮಸ್ತ ವೇದಗಳಿಗೆ ವಿಷ್ಣುಸರ್ವೋತ್ತಮತ್ವದಲ್ಲಿಯೇ ಮಹಾತಾತ್ಪರ್ಯವೆಂಬುದು ಮೋಕ್ಷೋ ಹಿ ಮಹಾಪುರುಷಾರ್ಥಃ ಇತ್ಯಾದಿಗಳಿಂದ ಹಿಂದೆ ಸವಿಸ್ತರವಾಗಿಸಾಧಿಸಲ್ಪಟ್ಟಿದೆ || ೩ ||

ಪೀ—ಮಹಾತಾತ್ಪರ್ಯವಿರೋಧವು ಹೇಗೆಂದರೆ —

**ಭಾ || (೧) ನ ಹ್ಯಸ್ವಾತಂತ್ರ್ಯೇಣೋತ್ಪತ್ತಿಕರ್ತುಃ ಪ್ರಾಧಾನ್ಯಂ || (೨) ಅಸ್ವಾತಂತ್ರ್ಯಂ ಚ ತದಮತಿಪೂರ್ವಕತ್ವೇನ ಭವತಿ | ಯಥಾ ರೋಗಾದೀನಾಂ ಪುರುಷಸ್ಯ ತಜ್ಜತ್ವೇಽಪಿ|| (೩) ಉತ್ಪತ್ತಿವಚನಾನ್ಯಭಿವ್ಯಕ್ತ್ಯರ್ಥಾನ್ಯಭಿಮಾನಿದೇವತಾವಿಷಯಾಣಿ ಚ | ನಿತ್ಯೇ-ತ್ಯುಕ್ತ್ವೋತ್ಸೃಷ್ಟೇತಿ ವಚನಾತ್ || (೪) ಅಭಿವ್ಯಂಜಕೇ ಕರ್ತೃವಚನಂ ಚಾಸ್ತಿ | ಕೃತ್ಸ್ನಂ ಶತಪಥಂ ಚಕ್ರ ಇತಿ || (೫) ಕಥಮಾದಿತ್ಯಸ್ಥಾ ವೇದಾಸ್ತೇನೈವ ಕ್ರಿಯಂತೇ|| (೬) ವಚನಮಾತ್ರಾಚ್ಚ ನಿರ್ಣಯಾತ್ಮಕಶಾರೀರೋಕ್ತಂ ಬಲವತ್ || ೪ ||**

ಅ || (೧) ಅಸ್ವತಂತ್ರನಾಗಿ ಸೃಷ್ಟಿಮಾಡುವವನಿಗೆ ಸರ್ವೋತ್ತಮತ್ವವು ಇಲ್ಲವಷ್ಟೆ (ಅಂದರೆ ಅಸ್ವತಂತ್ರನಾಗಿ ಸೃಷ್ಟಿಸುವವನು ಸರ್ವೋತ್ತಮನಾಗಲಾರನು ) (೨) (ಅಸ್ವಾತಂತ್ರ್ಯದಿಂದ ಸೃಷ್ಟಿಮಾಡುವಿಕೆಯು, ಸರ್ವೋತ್ತಮತ್ವಕ್ಕೆ ವಿರೋಧಿಯಾದಾಗ್ಯೂ ಅಬುದ್ಧಿಪೂರ್ವಕವಾಗಿ ಸೃಷ್ಟಿಸುವಿಕೆಯು ಸರ್ವೋತ್ತಮತ್ವಕ್ಕೆ ವಿರೋಧಿಯಾಗಲಾರದೆಂದರೆ—) ಕಾರ್ಯವನ್ನು ಪುರುಷರು ಬುದ್ಧಿಪೂರ್ವಕವಾಗಿ ಮಾಡದಿದ್ದರೆ ಆ ಕಾರ್ಯದಲ್ಲಿ ಆ ಪುರುಷರಿಗೆ ಸ್ವಾತಂತ್ರ್ಯವಿಲ್ಲವೆಂದೇ ಆಗುತ್ತದೆ ಹೇಗೆ ರೋಗಾದಿಗಳು ಪುರುಷರಿಂದ ಹುಟ್ಟತಕ್ಕವುಗಳಾದಾಗ್ಯೂ ಬುದ್ಧಿಪೂರ್ವಕಗಳಾಗದಿರುವುದರಿಂದ ಆ ರೋಗಾದಿ ಉತ್ಪತ್ತಿಯಲ್ಲಿ ಪುರುಷರಿಗೆ ಅಸ್ವಾತಂತ್ರ್ಯವು ಹೇಗೆ ಇದೆಯೋ, ಹಾಗೆಯೇ. (ಏವಂಚ ಅಬುದ್ಧಿಪೂರ್ವಕವಾಗಿ ಹುಟ್ಟಿಸತಕ್ಕವನೆಂದಾದರೆ ಅಸ್ವಾತಂತ್ರ್ಯವು, ಅಸ್ವತಂತ್ರನಾದರೆ ಸರ್ವೋತ್ತಮನಲ್ಲವೆಂದಾಗುವುದು ತಥಾಚ ಮಹಾತಾತ್ಪರ್ಯವಿರೋಧವು ಬರುವುದು ) (೩) (ಹಾಗಾದರೆ ವೇದಗಳು ಅನಾದಿನಿತ್ಯಗಳೆಂದು ಹೇಳುವ ವೇದಾದಿ ಪ್ರಮಾಣಗಳು ಇದ್ದಂತೆಯೇ, ವೇದಗಳು ಹುಟ್ಟತಕ್ಕವುಗಳು ಎಂದು ಹೇಳುವ ಋಚಸ್ಸಾಮಾನಿ ಜಜ್ಞಿರೇ ಇದು ಮೊದಲಾದ ಪ್ರಮಾಣಗಳೂ ಇವೆ ಆದಕಾರಣ ನಿರ್ಣಯವು ಹೇಗೆಂದರೆ—) ಋಚಸ್ಸಾಮಾನಿ ಜಜ್ಞಿರೇ ಇದು ಮೊದಲಾದ, ವೇದಗಳು ಹುಟ್ಟಿದವುಗಳೆಂದು ಹೇಳುವ ವಚನಗಳು ಅಭಿವ್ಯಕ್ತಿಯೇ ತಾತ್ಪರ್ಯವಿಷಯವಾಗಿ ಉಳ್ಳವುಗಳು (ಅಂದರೆ ಇದ್ದ ವೇದಗಳೇ ಪ್ರಕಟಗಳಾದವು ಎಂದೇ ಅವುಗಳ ಅರ್ಥವು ) ಮತ್ತು ವೇದಗಳಿಗೆ ಅವಾಂತರಾಭಿಮಾನಿಗಳಾದ ದೇವತೆಗಳ ಶರೀರಗಳು ಹುಟ್ಟಿದವೆಂದೂ ಅರ್ಥವು (ಉತ್ಪತ್ತಿಯನ್ನು ಹೇಳುವ ಶಬ್ದಕ್ಕೆ ಅಭಿವ್ಯಕ್ತಿಯೆಂಬ ಅರ್ಥವು ಎಲ್ಲಿ ಕಂಡದೆ ಎಂದರೆ) ಅನಾದಿನಿಧನಾ ನಿತ್ಯಾ=ಉತ್ಪತ್ತಿ ವಿನಾಶಗಳಿಲ್ಲದಿರುವುದರಿಂದ ವೇದವು ಅನಾದಿನಿತ್ಯವು ಅಮುಖ್ಯವೃತ್ತಿಯಿಂದಲ್ಲ, ಎಂದು ವೇದವಾಕ್ಯದಲ್ಲಿ ಮುಖ್ಯ ನಿತ್ಯತ್ವವನ್ನು ಹೇಳಿ ಪುನಃ ಉತ್ಸೃಷ್ಟಾ ಎಂದು ಹೇಳಿದೆ ಉತ್ಸೃಷ್ಟಾ ಎಂಬುದಕ್ಕೆ ಅಭಿವ್ಯಕ್ತವಾದದೆಂದೇ ಅರ್ಥ ಹೇಳಬೇಕು (೪) (ಯಾಜ್ಞವಲ್ಕ್ಯರು) ಸಂಪೂರ್ಣ ಶತಪಥ ಬ್ರಾಹ್ಮಣ (ಕಾಣ್ವವೇದ) ವನ್ನು ಪ್ರಕಟೀಕರಿಸುತ್ತಾರೆ, ಎಂದು ಅಭಿವ್ಯಂಜಕರೆಂದು ನಿಶ್ಚಿತರಾದ ಯಾಜ್ಞವಲ್ಕ್ಯರಲ್ಲಿ ಕಾಣ್ವವೇದವನ್ನು ಮಾಡಿದ

ರೆಂದು ಕರ್ತೃವಚನವಿದೆ. (೫) (ಯಾಜ್ಞವಲ್ಕ್ಯರು ಕಾಣ್ವವೇದವನ್ನು ರಚಿಸಿದರೆಂದೇ ಏಕೆ ಹೇಳಬಾರದೆಂದರೆ) ಮೊದಲೇ ಆದಿತ್ಯನು ಯಾಜ್ಞವಲ್ಕ್ಯರಿಗೆ ಕಾಣ್ವವೇದವನ್ನು ಉಪದೇಶಕೊಟ್ಟಿರುವುದರಿಂದ ಮರಳಿ ಅದೇ ವೇದವನ್ನು ಯಾಜ್ಞವಲ್ಕ್ಯರು ರಚಿಸಿರುವರು ಎಂದು ಹೇಳುವುದು ಹೇಗೆ ಕೂಡುತ್ತದೆ? (ಆದಕಾರಣ ಯಾಜ್ಞವಲ್ಕ್ಯರು ವಾಜಿರೂಪವನ್ನು ಹೊಂದಿದ ಸೂರ್ಯನಿಂದ ಕಾಣ್ವವೇದವನ್ನು ಅಧ್ಯಯನಮಾಡಿ ತಾನು ಶಿಷ್ಯರಿಗೆ ಉಪದೇಶಿಸಿದರು ಎಂದೇ **ಕೃತ್ಸ್ನಂ ಶತಪಥಂ ಚಕ್ರೇ** ಎಂಬುವುದಕ್ಕೆ ಅರ್ಥವು) (೬) (ವೇದಗಳು ನಿತ್ಯಗಳೇ ಎಂಬ ದನ್ನು ಯುಕ್ತ್ಯಂತರದಿಂದಲೂ ಹೇಳುತ್ತಾರೆ) **ಋಚಸ್ಸಾಮಾನಿ ಜಜ್ಞಿರೇ** ಇದು ಮೊದಲಾದ ಸಾಮಾನ್ಯ ವಚನಮಾತ್ರಕ್ಕಿಂತ **ಅತ ಏವ ಚ ನಿತ್ಯತ್ವಂ** ಎಂದು ವೇದಗಳಿಗೆ ನಿತ್ಯತ್ವಾದಿಗಳನ್ನು ಸಾಧಿಸಿಕೊಡುವ ಸರ್ವಶಾಸ್ತ್ರಾರ್ಥನಿರ್ಣಾಯಕವಾದ ಬ್ರಹ್ಮಸೂತ್ರವು ಪ್ರಬಲವು ॥ ೪ ॥

ಪೀ—ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿಯೇ **ಶಾಸ್ತ್ರಯೋನಿತ್ವಾತ್** ಎಂಬ ಸೂತ್ರದಲ್ಲಿ ಪರಬ್ರಹ್ಮನು ವೇದಗಳಿಗೆ ಕಾರಣನೆಂದು ಹೇಳಿದೆ ಎಂದರೆ—

ಭಾ ॥ (೧) ಶಾಸ್ತ್ರಂ ಯೋನಿರ್ಯಸ್ಯೇತಿ ತು ಶಾಸ್ತ್ರಯೋನಿತ್ವಂ ॥ (೨) ಜನ್ಮಾದ್ಯಸ್ಯೇತ್ಯುಕ್ತೇ ಪ್ರಮಾಣಂ ಹಿ ತತ್ರಾಪೇಕ್ಷಿತಂ । ನ ತು ತಸ್ಯ ಜಾತತ್ವಂ ವೇದಕಾರಣತ್ವಂ ವಾ ॥ (೩) ನ ಹಿ ವೇದಕಾರಣತ್ವಂ ಜಗತ್ಕಾರಣತ್ವೇ ಹೇತುಃ । ನ ಹಿ ವಿಚಿತ್ರಜಗತ್ಸೃಷ್ಟೇರ್ವೇದಸೃಷ್ಟಿರಧಿಕಾ ಸೃಜ್ಯತ್ವೇ ॥ (೪) ನ ಚ ಸರ್ವಜ್ಞತ್ವೇ ॥ (೫) ಯದಿ ವೇದಸ್ರಷ್ಟಾ ಸರ್ವಜ್ಞಃ ಕಿಮಿತಿ ನ ಜಗತ್ಸ್ರಷ್ಟಾ ॥ (೬) ತಸ್ಮಾದ್ವೇದಪ್ರಮಾಣಕತ್ವಮೇವಾತ್ರ ವಿವಕ್ಷಿತಂ ॥ (೭) ಅತೋ ನಿತ್ಯಾನ್ಯಕ್ಷರಾಣಿ । ಯತ ಏವಂ ಪರಂಪರಯಾ ಯಜ್ಞಾಭಿವ್ಯಂಗ್ಯಂ ಬ್ರಹ್ಮ ತಸ್ಮಾತ್ತನ್ನಿತ್ಯಂ ಯಜ್ಞೇ ಪ್ರತಿಷ್ಠಿತಂ । ತಾನಿ ಚಾಕ್ಷರಾಣಿ ಭೂತಾಭಿವ್ಯಂಗ್ಯಾನೀತಿ ಚಕ್ರಂ ॥ ೫ ॥ ॥ ೧೫ ॥

ಅ ॥ (೧) ಋಗಾದಿ ಶಾಸ್ತ್ರವು ಪರಬ್ರಹ್ಮನ ಜ್ಞಾನಕ್ಕೆ ಕಾರಣವು ಹೀಗೆ ಶಾಸ್ತ್ರಯೋನಿತ್ವ (ಶ್ರೀಪರಬ್ರಹ್ಮನು ಕೇವಲ ಶಾಸ್ತ್ರಗಳಿಂದಲೇ ತಿಳಿಯಲ್ಪಡತಕ್ಕವನು) (ಶಾಸ್ತ್ರಸ್ಯ ಯೋನಿಃ=ಶಾಸ್ತ್ರಕ್ಕೆ ಕಾರಣನು ಎಂದು ತತ್ಪುರುಷಸಮಾಸವನ್ನು ಬಿಟ್ಟು ಶಾಸ್ತ್ರಂ ಯೋನಿಃ ಯಸ್ಯ ಎಂದು ಬಹುವ್ರೀಹಿಸಮಾಸವನ್ನು ಅಂಗೀಕರಿಸಿದ್ದು ಏತಕ್ಕೆ? ಬಹುವ್ರೀಹಿಸಮಾಸವೆಂದು ಹೇಳಿದರೆ—ಬ್ರಹ್ಮನು ವೇದಗಳಿಂದ ಹುಟ್ಟಿದವನೆಂದು ಆಗಬೇಕಾಗುವುದು ಎಂದರೆ) ಜನ್ಮಾದ್ಯಸ್ಯ ಯತಃ=ಶ್ರೀಹರಿಯು ಜಗಜ್ಜನ್ಮಾದಿಗಳಿಗೆ ಕಾರಣನು ಎಂದು ಹೇಳಿದ ವಿಷಯದಲ್ಲಿ ಪ್ರಮಾಣವೇನೆಂದು ಪ್ರಮಾಣಾಕಾಂಕ್ಷೆಯು ಬಂದರೆ—ಆ ವಿಷಯದಲ್ಲಿ ಪ್ರಮಾಣವನ್ನೇ ಹೇಳಬೇಕಲ್ಲದೆ ಬ್ರಹ್ಮನಿಗೆ ವೇದಗಳಿಂದ ಉತ್ಪತ್ತಿಯೆಂದಾಗಲೀ ವೇದಗಳಿಗೆ ಪರಬ್ರಹ್ಮನು ಕಾರಣನೆಂದಾಗಲೀ ಹೇಳುವುದು ಸರ್ವಥಾ ಯುಕ್ತವಲ್ಲ (ಅಂದರೆ ಲಕ್ಷಣಪ್ರಮಾಣಗಳಿಂದ ವಸ್ತುವಿನ ನಿರ್ಣಯವು ಆಗಬೇಕು ಅದರಲ್ಲಿ ಜನ್ಮಾದ್ಯಸ್ಯ ಎಂಬ ಸೂತ್ರದಿಂದ ಬ್ರಹ್ಮನಿಗೆ ಲಕ್ಷಣವನ್ನು ಹೇಳಿದಾಗ ಬ್ರಹ್ಮನು ಯಾವ ಪ್ರಮಾಣದಿಂದ ಕಾರಣನೆಂದು ತಿಳಿಯಬೇಕೆಂದು ಜಗಜ್ಜನ್ಮಾದಿಗಳಿಗೆ ಕಾರಣನು ಎಂಬಲ್ಲಿ ಪ್ರಮಾಣಾಕಾಂಕ್ಷೆಯು ಬರುತ್ತದೆ ಬ್ರಹ್ಮನು ವೇದದಿಂದ ಹುಟ್ಟಿದ್ದಾನೆಂಬಲ್ಲಿಯಾಗಲೀ, ವೇದಕ್ಕೆ ಕಾರಣನೆಂಬಲ್ಲಿಯಾಗಲೀ ಆಕಾಂಕ್ಷೆಯೇ ಇಲ್ಲ. ಆಕಾಂಕ್ಷಾದಿಗಳನ್ನು ಅನುಸರಿಸಿಯೇ ವಾಕ್ಯಾರ್ಥವನ್ನು ಹೇಳಬೇಕು. ಆದಕಾರಣ ಯೋನಿಶಬ್ದಕ್ಕೆ ಪ್ರಮಾಣ (ಜ್ಞಾನಕಾರಣ)ವೆಂದು ಅರ್ಥ ಹೇಳಿ ಬಹುವ್ರೀಹಿಸಮಾಸವನ್ನು ಇಟ್ಟುಕೊಂಡು ಕೇವಲ ಶಾಸ್ತ್ರಗಳಿಂದಲೇ ತಿಳಿಯಲ್ಪಡತಕ್ಕವನೆಂದೇ ಅರ್ಥ

ಹೇಳಬೇಕು. (೨) (**ಜನ್ಮಾದ್ಯಸ್ಯ ಯತಃ** ಎಂಬ ಸೂತ್ರದಲ್ಲಿ ಹೇಳಿದ ಜಗಜ್ಜನ್ಮಾದಿ ಕಾರಣತ್ವವನ್ನು ಸಾಧಿಸಲಿಕ್ಕೆ ಶಾಸ್ತ್ರಯೋನಿತ್ವಾತ್ ಎಂಬ ಸೂತ್ರದಲ್ಲಿ ಶಾಸ್ತ್ರಕ್ಕೆ ಕಾರಣನಾಗಿದ್ದಾನೆಂದು ಸಂಗತಿಯನ್ನು ಹೇಳಕೂಡದು. ಏಕೆಂದರೆ) ಶ್ರೀಹರಿಯು ಜಗತ್ತಿಗೆ ಕಾರಣನೆಂಬವುದಕ್ಕೆ ಜಗತ್ತಿನ ಏಕದೇಶವಾದ ವೇದ ಗಳಿಗೆ ಕಾರಣನು ಎಂಬುದು ಉಪಪಾದಕವಾಗಲಾರದು. ವೇದವು ಕೃತಕವೆಂಬ ಪಕ್ಷದಲ್ಲಿ ವಿಚಿತ್ರ ನಾನಾವಿಧ ಸರ್ವಜಗತ್ತನ್ನು ಸೃಷ್ಟಿ ಮಾಡಿದವನಿಗೆ ಜಗದೊಳಗಣ ವೇದಗಳ ನಿರ್ಮಾಣವು ಅಶಕ್ಯವಲ್ಲ ವಷ್ಟೆ (ಆದಕಾರಣ ವೇದಕರ್ತೃತ್ವವು ಸರ್ವಜಗತ್ಕರ್ತೃತ್ವಕ್ಕೆ ಉಪಪಾದಕವು ಸರ್ವಥಾ ಆಗಲಾರದು) (೪) (ಪರಬ್ರಹ್ಮನು ಜಗತ್ತಿಗೆ ಕಾರಣನೆಂದು ಹೇಳಿದರೆ ಆತನಿಗೆ ಸರ್ವಜ್ಞತ್ವವು ಸಿದ್ಧವಾಗುತ್ತದೆ ಅದನ್ನು ಪ್ರಕಟೀಕರಿಸುವುದಕ್ಕಾಗಿ ವೇದಗಳಿಗೆ ಕಾರಣನೆಂದು ಹೇಳಿದ್ದು ಆದಕಾರಣ ಅಸಂಗತಿಯಿಲ್ಲ ಎಂದರೆ) (ವೇದಗಳು ಅಬುದ್ಧಿಪೂರ್ವಕವಾಗಿ ಹುಟ್ಟಿದ್ದೆಂದು ಪರರು ಅಂಗೀಕರಿಸಿರುವುದರಿಂದ) ಶ್ರೀಹರಿಯು ಸರ್ವಜ್ಞನು ಎಂಬುದಕ್ಕೆ ವೇದಗಳಿಗೆ ಕಾರಣನೆಂದು ಹೇಳುವುದು ಹೇತುವಾಗಲಾರದು (೫) ಜಗತ್ತಿನ ಏಕದೇಶವಾದ ವೇದವನ್ನು ಸೃಷ್ಟಿಸಿದ ಶ್ರೀಹರಿಯು ವೇದವನ್ನು ಸೃಷ್ಟಿ ಮಾಡಿದ್ರಿಂದ ಸರ್ವಜ್ಞನೆಂದು ಸಿದ್ಧಿಸುವನೆಂದು ಹೇಳುವುದಾದರೆ --ಸರ್ವಜಗತ್ತನ್ನು ಸೃಷ್ಟಿಸಿದವನು ಸರ್ವಜ್ಞನೆಂದು ಏಕೆ ಆಗಲಾರದು. (ಸರ್ವಜ್ಞನೇ ಎಂದು ಸುತರಾಂ ಸಿದ್ಧಿಸುವನು) (೬) ಆದಕಾರಣ ಪರಬ್ರಹ್ಮನ ಜ್ಞಾನವು ಬರಲಿಕ್ಕೆ ಕಾರಣಗಳು ವೇದಗಳಿಂದೇ ತಿಳಿಯುವದರಿಂದ ಪರಬಹ್ಮನು ಕೇವಲ ವೇದಗಳಿಂದಲೇ ತಿಳಿಯಲ್ಪಡತಕ್ಕವ ನೆಂದು **ಶಾಸ್ತ್ರಯೋನಿತ್ವಾತ್** ಎಂಬ ಸೂತ್ರದಲ್ಲಿ ಹೇಳಿದ್ದಾರೆಂದು ಇಟ್ಟುಕೊಳ್ಳಬೇಕು (ಆದಕಾರಣ ವೇದಕಾರಣತ್ವವನ್ನು ಹೇಳುವುದು ಅಸಂಗತವು) (೭) ಅದುಕಾರಣ ವೇದಾಕ್ಷರಗಳು ನಿತ್ಯಗಳು ಯಾವ ಕಾರಣದಿಂದ ಯಜ್ಞದಿಂದ ಪರ್ಜನ್ಯನು, ಪರ್ಜನ್ಯನಿಂದ ಅನ್ನ, ಭೂತ, ಅಕ್ಷರ, ಅಕ್ಷರಗಳಿಂದ ಪರಬ್ರಹ್ಮನು ತಿಳಿಯಲ್ಪಡುತ್ತಾನೆ ಹೀಗೆ ಪರಬ್ರಹ್ಮನು ಪರಂಪರೆಯಿಂದ ಯಜ್ಞಗಳಿಂದ ಜ್ಞಾಪ್ಯನೋ, ಆದಕಾರಣ ನಿತ್ಯದಲ್ಲಿಯೂ ಯಜ್ಞದಲ್ಲಿ ಸಾರಭೋಕ್ತನಾಗಿರುತ್ತಾನೆ. ॥ ೫ ॥ ॥ ೧೫ ॥

## ಗೀ ॥ ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।
## ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥೧೬॥

**ಅ** ॥ ಪಾರ್ಥ=ಅರ್ಜುನನೇ ಏವಂ=ಹಿಂದೆ ಹೇಳಿದ ಪ್ರಕಾರ, ಪ್ರವರ್ತಿತಂ=ಪೂರ್ವಿಕರಿಂದ ಅಥವಾ ಶ್ರೀಹರಿಯಿಂದಲೇ ಪ್ರಾಣಿಗಳಿಗೆ ಇಷ್ಟಸಿದ್ಧಿಗಾಗಿ ನಡೆಯುತ್ತಿರುವ, ಚಕ್ರಂ=ಜಗಚ್ಚಕ್ರವನ್ನು, ಇಹ=ಈ ಲೋಕದಲ್ಲಿ, ನಾನುವರ್ತಯತಿ=ಅನುಸರಿಸುವುದಿಲ್ಲವೋ, (ಕರ್ಮ ಮಾಡುವುದಿಲ್ಲವೋ) (ಜಗಚ್ಚಕ್ರವನ್ನು ನಿಲ್ಲಿಸುತ್ತಾನೋ,) ಸಃ=ಆತನು, ಅಘಾಯುಃ=(ಕರ್ಮ ಮಾಡದಿದ್ದರೆ ಜಗಚ್ಚಕ್ರ ಪ್ರವೃತ್ತಿ ಯಾಗುವುದಿಲ್ಲ, ಆಗ ಜಗಚ್ಚಕ್ರವನ್ನು ವಿನಾಶಪಡಿಸುವುದರಿಂದ ಜಗತ್ತನ್ನು ವಿನಾಶಪಡಿಸಿದಂತೆ ಆಗುವು ದರಿಂದ) ಪಾಪಕ್ಕೆ ಮುಖ್ಯ ಕಾರಣವಾದ ಆಯುಷ್ಯವುಳ್ಳವನಾಗಿ, ಇಂದ್ರಿಯಾರಾಮಃ=ವಿಷಯಗಳಲ್ಲಿಯೇ ಅತ್ಯಾಸಕ್ತಿಯುಳ್ಳವನಾಗಿ, ಮೋಘಂ=ವ್ಯರ್ಥವಾಗಿಯೇ, ಜೀವತಿ=ಬದುಕುತ್ತಾನೆ (ನರಕದಲ್ಲಿ ಬೀಳುತ್ತಾನೆ)

ವಿ ॥ ಗೃಹಸ್ಥಾಶ್ರಮಿಗಳಿಗೆ ಯಜ್ಞ, ದಾನ, ತಪಸ್ಸು ಎಂಬ ಮೂರು ವಿಧ ಕರ್ಮಗಳು ಇದ್ದಂತೆ ಬ್ರಹ್ಮಚರ್ಯ ವಾನಪ್ರಸ್ಥ ಸನ್ಯಾಸಾಶ್ರಮಿಗಳಿಗೂ ವಿದ್ಯಾದಾನ, ಅಭಯದಾನ, ತಾವು ಉಣ್ಣುವ ಅನ್ನ ದಾನ, ಹಾಗೆಯೇ ಅಧ್ಯಯನ, ಪ್ರವಚನ, ಧ್ಯಾನಾದಿರೂಪ, ವಾಚಿಕ, ಮಾನಸಿಕ, ಯಜ್ಞ, ಕೃಚ್ಛ್ರ ಚಾಂದ್ರಾಯಣಾದಿರೂಪ, ತಪಸ್ಸು ಇವುಗಳು ಇದ್ದ ಪ್ರಯುಕ್ತ ಬ್ರಹ್ಮಚರ್ಯಾದ್ಯಾಶ್ರಮಿಗಳಿಗೂ ಜಗ ಚ್ಚಕ್ರಪ್ರವರ್ತಕತ್ವವು ಕೂಡುತ್ತದೆ ॥ ೧೬ ॥

ಪೀ—ಈ ಶ್ಲೋಕದಲ್ಲಿ ಕಾರ್ಯಕಾರಣಗಳ ಪರಂಪರೆಯನ್ನೇ ಹೇಳಿದೆ ಜಗಚ್ಚಕ್ರವನ್ನು ಹೇಳಲಿಲ್ಲ. ಆದಕಾರಣ ಏವಂ ಪ್ರವರ್ತಿತಂ ಚಕ್ರಂ ಎಂದು ಹೇಳಿದ್ದು ಹೇಗೆ? ಎಂದರೆ—

ಭಾ || ತದೇತಜ್ಜಗಚ್ಚಕ್ರಂ ಯೋ ನಾನುವರ್ತಯತಿ ಸ ತದ್ವಿನಾಶಕತ್ವಾದಘಾಯುಃ | ಪಾಪನಿಮಿತ್ತಮೇವ ಯಸ್ಯಾಯುಃ ಸೋಽಘಾಯುಃ || ೧೬ ||

ಅ || (ಪ್ರಾಣಿಗಳ ಉಚ್ಚಾರಣ ಧ್ವನಿಯಿಂದ ವೇದಾಕ್ಷರಗಳು ಅಭಿವ್ಯಕ್ತಗಳಾಗುವುದರಿಂದ) ಆ ವೇದಗಳೆಂಬ ಅಕ್ಷರಗಳು ಪ್ರಾಣಿಗಳಿಂದ ಅಭಿವ್ಯಕ್ತಗಳಾಗುತ್ತವೆ ಆದಕಾರಣ ಏವಂ ಪ್ರವರ್ತಿತಂ ಚಕ್ರಂ ಎಂದು ಹೇಳಿದ್ದು ಯುಕ್ತವು ಆ ಈ ಜಗಚ್ಚಕ್ರವನ್ನು ಯಾವನು ಅನುಸರಣ ಮಾಡುವುದಿಲ್ಲವೋ, ಅತನು ಜಗಚ್ಚಕ್ರವನ್ನು ವಿನಾಶಗೊಳಿಸುವುದರಿಂದ ಸರ್ವ ಜಗತ್ಸಂಹಾರಕನಾದ ಪ್ರಯುಕ್ತ ಪಾಪವನ್ನೇ ಹೊಂದಿಸಿಕೊಡುವ ಆಯುಷ್ಯವುಳ್ಳವನಾಗುತ್ತಾನೆ (ಆಯುಷ್ಯವು ಪಾಪರೂಪವಾಗದಿರುವುದರಿಂದ **ಅಘಾಯುಃ** ಎಂದದ್ದು ಹೇಗೆ ಕೂಡುತ್ತದೆಂದರೆ) ಯಾರ ಆಯುಷ್ಯವು ಪಾಪಕ್ಕೇನೇ ಕಾರಣವಾಗುತ್ತದೋ (ಅಂದರೆ ಯಾವನು ಪಾಪವನ್ನುಂಟುಮಾಡುವ ಕರ್ಮವನ್ನು ಮಾಡಿಕೊಂಡು ಜೀವಿಸಿಕೊಂಡಿರುತ್ತಾನೋ) ಆತನು ಅಘಾಯುಃ ಎನಿಸುತ್ತಾನೆ || ೧೬ ||

ಪೀ - ಅನ್ನಾದ್ಭವಂತಿ ಎಂಬ ಶ್ಲೋಕದಲ್ಲಿ ಅನ್ನಕ್ಕೆ ಪರ್ಜನ್ಯನೆಂಬ ದೇವತೆಯಿಂದಲೂ ಆ ದೇವತೆಗೆ ಯಜ್ಞದಿಂದಲೂ ಉತ್ಪತ್ತಿಯು ಹೇಗೆ? ಮತ್ತು ಅನ್ನಾತ್ ಎಂಬುವುದರಿಂದ ಪರಂಪರೆಯನ್ನೇ ಹೇಳಿರುವುದರಿಂದ ಚಕ್ರಂ ಎಂದು ಹೇಳಿದ್ದು ಹೇಗೆ? ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿಯೂ, ಬ್ರಹ್ಮಶಬ್ದಕ್ಕೆ ವೇದವೆಂದೂ, ಅಕ್ಷರಶಬ್ದಕ್ಕೆ ಪರಬ್ರಹ್ಮ ಎಂದೂ, ಅರ್ಥವು ಎಂದು ಪರರು ಹೇಳಿದ ಅರ್ಥವು ಅಯುಕ್ತವೆಂದು ತೋರಿಸುವುದಕ್ಕಾಗಿಯೂ ಸ್ಮೃತಿಪ್ರಮಾಣ ಹೇಳಿ ಅದರ ಅರ್ಥ ಹೇಳುತ್ತಾರೆ—

ತಾ || (೧) ಜನನಾತ್ಸರಸಸ್ಯಾದೇಃ ಪರ್ಜನ್ಯೋ ಮೇಘಸಂತತಿಃ | ಸ ಯಜ್ಞಾತ್ಕರ್ಮಣಃ ಸೋಽಪಿ ಸಮಸ್ತಂ ಕರ್ಮ ಕೇಶವಾತ್ || (೨) ಸ ನಿತ್ಯೋಽಪ್ಯಕ್ಷರತತಿರೂಪಾದ್ವಾಕ್ಯಾದ್ಧಿ ಗಮ್ಯತೇ | ವಾಕ್ಯಮುಚ್ಚಾರ್ಯತೇ ಭೂತೈಸ್ತಾನ್ಯನ್ನಾತ್ತಚ್ಚ ಮೇಘತಃ || (೩) ತಸ್ಮಾತ್ಸರ್ವಗತೋ ವಿಷ್ಣುರ್ನಿತ್ಯಂ ಯಜ್ಞೇ ಪ್ರತಿಷ್ಠಿತಃ | ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ | ಸ ಪಾಪೋ ವಿಶ್ವಹಂತೃತ್ವಾನ್ನರಕೇ ಮಜ್ಜತಿ ಧ್ರುವಂ || (೪) ವಾಚಿಕೋ ಮಾನಸೋ ಯಜ್ಞೋ ನ್ಯಾಸಿನಾಂ ತು ವಿಶೇಷತಃ | ವನಸ್ಥಸ್ಯಾಕ್ರತುರ್ಯಜ್ಞಃ ಕ್ರತ್ವಾದಿರ್ಗೃಹಿಣೋಽಖಿಲಃ || (೫) ಶುಶ್ರೂಷಾದಾತ್ಮಕೋ ಯಜ್ಞೋ ವಿಹಿತೋ ಬ್ರಹ್ಮಚಾರಿಣಃ | ವಿದ್ಯಾಭಯಾದಿದಾನಂ ಚ ಸರ್ವೇಷಾಮಪಿ ಸಮ್ಮತಂ || (೬) ಗೃಹಿಣೋ ವಿತ್ತದಾನಂ ತು (೭) ವನಸ್ಥಸ್ಯಾನ್ನಪೂರ್ವಕಂ | ಸರ್ವೈಃ ಕಾರ್ಯಂ ತಪೋ ಘೋರಮಿತಿ ಸರ್ವೇ ತ್ರಿಕರ್ಮಿಣಃ ಇತಿ ನಾರದೀಯೇ || (೮) ಬ್ರಹ್ಮಾಕ್ಷರಶಬ್ದಯೋರ್ವ್ಯತ್ಯಾಸೇ ತಸ್ಮಾತ್ಸರ್ವಗತಂ ಬ್ರಹ್ಮೇತಿ ಪ್ರತ್ಯಭಿಜ್ಞಾವಿರೋಧಶ್ಚ ಚಕ್ರಾಪ್ರವೇಶಶ್ಚ || ೧೪,೧೫,೧೬ ||

ಅ || (೧) ಉತ್ಕೃಷ್ಟವಾದ ಸಸ್ಯಾದಿಗಳನ್ನು ಹುಟ್ಟಿಸುವುದರಿಂದ ಪರ್ಜನ್ಯಃ=ಮೇಘಗಳ ಸಮೂಹವು. ಆ ಪರ್ಜನ್ಯವು ಯಾಗದಿಂದ ಆರಾಧಿತವಾದ ದೇವತೆಯಿಂದುಂಟಾಗುತ್ತದೆ. ಯಜ್ಞವು ಕರ್ಮ

ದಿಂದ. ಸರ್ವ ಕರ್ಮವೂ ಶ್ರೀಹರಿಯಿಂದಲೇ ಆಗುತ್ತದೆ (೨) ಆ ಶ್ರೀಹರಿಯು ಅನಾದಿನಿತ್ಯನಾದಾಗ್ಯೂ ಅಕ್ಷರಸಮುದಾಯರೂಪವಾದ ವಾಕ್ಯದಿಂದಲೇ ತಿಳಿಯಲ್ಪಡುತ್ತಾನೆಂದು (ಗೀತೆಯ.ಲ್ಲಿ ಹೇಳಿದೆ.) ಸಮಸ್ತ ಪ್ರಾಣಿಗಳಿಂದ ವಾಕ್ಯವು ಉಚ್ಚರಿಸಲ್ಪಡುತ್ತದೆ ಪ್ರಾಣಿಗಳು ಅನ್ನದಿಂದ. ಅನ್ನವು ಮೇಘದಿಂದುಂಟಾಗುತ್ತದೆ (೩) ಆದುದರಿಂದ ಸರ್ವತ್ರವ್ಯಾಪ್ತನಾದ ಶ್ರೀವಿಷ್ಣುವು ನಿತ್ಯದಲ್ಲಿಯೂ ಯಜ್ಞದಲ್ಲಿಯೂ ಸಾರಭೋಕ್ತನಾಗಿ ಸನ್ನಿಹಿತನಾಗಿರುತ್ತಾನೆ ಹೀಗೆ ನಡೆಯುತ್ತಿರುವ ಜಗಚ್ಚಕ್ರವನ್ನು ಯಾರು ಅನುಸರಿಸುವುದಿಲ್ಲವೋ ಆತನು ಸಂಪೂರ್ಣ ಜಗತ್ತನ್ನು ನಾಶಗೊಳಿಸುವುದರಿಂದ ಪಾಪಿಷ್ಠನು ಸರ್ವದಾ ನರಕದಲ್ಲಿ ಮುಳುಗುತ್ತಿರುತ್ತಾನೆ (೪) (ಜಗತ್ತು ಚಕ್ರದಲ್ಲಿ ಸೇರಿರುವುದರಿಂದ ಕರ್ಮ ಮಾಡದಿದ್ದರೆ ಚಕ್ರ ಪ್ರವೃತ್ತಿಯಾಗದಿರುವುದರಿಂದ ಜಗತ್ತನ್ನು ಸಂಹಾರ ಮಾಡಿದಂತೆ ಆಗುವುದೆಂದರೆ ಗಾರ್ಹಸ್ಥ್ಯ ಹೊರತು ಬೇರೆ ಆಶ್ರಯುಗಳನ್ನು ಸ್ವೀಕರಿಸದೆ ಹೋಗಬೇಕಾಗುವುದು ಏಕೆಂದರೆ—ಕರ್ಮಗಳು ಯಜ್ಞ ದಾನ, ತಪಸ್ಸು ಎಂದು ಮೂರುವಿಧ ಬೇರೆ ಆಶ್ರಮಿಗಳಿಗೆ ಯಜ್ಞಾದಿಗಳೇ ಇಲ್ಲ ಎಂದರೆ) ಯಜ್ಞವು ವಾಚಿಕ (ಸ್ವಾಧ್ಯಾಯಾದಿಗಳು) ಮಾನಸ (ಧ್ಯಾನಾದಿಗಳು) ಎಂದು ಎರಡು ವಿಧ ಇವುಗಳು ಎಲ್ಲಾ ಆಶ್ರಮದವರಿಗೂ ಇರತಕ್ಕವುಗಳಾದಾಗ್ಯೂ ಇತರಿಗೆ ಬೇರೆ ವಿಧ ಯಜ್ಞಗಳೂ ಇವೆ ಸನ್ಯಾಸಿಗಳಿಗೆ ಇವುಗಳೇ, ಇಷ್ಟು ವಿಶೇಷವು (ಇತರರಿಗೆ ಬೇರೆ ಯಜ್ಞಗಳನ್ನು ಹೇಳುತ್ತಾರೆ) ವಾನಪ್ರಸ್ಥಾಶ್ರಮಿಗೆ ಪಶುಹಿಂಸೆಯಿಲ್ಲದ ಯಜ್ಞವು ಅಂದರೆ ಜ್ಯೋತಿಷ್ಟೋಮಾದಿಗಳಿಂದ ಬೇರೆಯಾದ ಅಗ್ನಿಹೋತ್ರ ಮೊದಲಾದ ಯಜ್ಞವು, ಗೃಹಸ್ಥಾಶ್ರಮಿಗೆ ಕ್ರತು ಮೊದಲಾದ ಎಲ್ಲಾ ಯಜ್ಞವು (೫) ಬ್ರಹ್ಮಚಾರಿಗೆ ಗುರುಸೇವಾದಿರೂಪವಾದ ಯಜ್ಞವು ತನಗೆ ಭೋಗಿಸಲಿಕ್ಕೆ ಬೇಕಾದ ಅನ್ನಕ್ಕಿಂತ ಹೆಚ್ಚು ಅನ್ನದಾನ ಪೂರ್ವಕವಾಗಿ ವಿದ್ಯಾದಾನ ಅಭಯಾದಿದಾನಗಳು ಸರ್ವಾಶ್ರಮಿಗಳಿಗೂ ಇರತಕ್ಕವು (೬) ಗೃಹಸ್ಥಾಶ್ರಮಿಗೆ ದ್ರವ್ಯದಾನವು- ವಾನಪ್ರಸ್ಥಾಶ್ರಮಿಗೆ ಅನ್ನದಾನಪೂರ್ವಕವಾಗಿ ವಿದ್ಯಾಽಭಯಾದಿದಾನವು ಎಲ್ಲರೂ ಘೋರವಾದ ತಪಸ್ಸನ್ನು ಮಾಡಬೇಕು ಎಲ್ಲರೂ ಅವರವರಿಗೆ ಯೋಗ್ಯವಾದ ಯಜ್ಞ, ದಾನ ತಪಃ ಎಂಬ ಮೂರು ಕರ್ಮಗಳನ್ನು ಮಾಡಲೇಬೇಕು, ಎಂದು ನಾರದೀಯ ಪುರಾಣದಲ್ಲಿದೆ (೭) (ಬ್ರಹ್ಮಾಕ್ಷರಸಮುದ್ಭವಂ ಎಂಬಲ್ಲಿ ಬ್ರಹ್ಮಪದದಿಂದ ವೇದವು, ಅಕ್ಷರಪದದಿಂದ ಪರಬ್ರಹ್ಮನು ಹೇಳಲ್ಪಡುತ್ತಾನೆಂದು ಪರರು ಹೇಳುವ ಅರ್ಥವು ಅಯುಕ್ತವೆನ್ನುತ್ತಾರೆ) ಬ್ರಹ್ಮ ಅಕ್ಷರ ಎರಡು ಶಬ್ದಗಳ ಅರ್ಥಗಳನ್ನು ವ್ಯತ್ಯಾಸವಾಗಿ ಹೇಳಿದರೆ (ಅಂದರೆ ಬ್ರಹ್ಮಪದಕ್ಕೆ ವೇದವು ಅಕ್ಷರಪದಕ್ಕೆ ಬ್ರಹ್ಮನು ಎಂದು ಅರ್ಥ ಹೇಳಿದರೆ-)ಮೇಲೆ ತಸ್ಮಾತ್ಸರ್ವಗತಂ ಬ್ರಹ್ಮ ಎಂಬಲ್ಲಿದ್ದ ಬ್ರಹ್ಮಪದದಿಂದ ಪರಬ್ರಹ್ಮನ ಜ್ಞಾನವು (ಹಿಂದೆ ಹೇಳಿದ ಬ್ರಹ್ಮನೇ ಇವನೆಂಬ ಜ್ಞಾನವು) ಬಾರದೆ ಹೋಗುವುದು (ಹಿಂದೆ ಬ್ರಹ್ಮಪದದಿಂದ ಹೇಳಲ್ಪಟ್ಟ ವೇದವನ್ನೇ ಈ ಬ್ರಹ್ಮಪದದಿಂದ ತೆಗೆದುಕೊಳ್ಳುವುದೆಂದೂ ಹೇಳಕೂಡದು ವೇದವೆಂದು ಇಟ್ಟುಕೊಂಡರೆ ವೇದಕ್ಕೆ ಯಜ್ಞದಲ್ಲಿ ಆಶ್ರಿತತ್ವ ಹೇಳಿದ್ದು ಕೂಡದೆ ಹೋಗುವುದು) (ದೋಷಾಂತರವನ್ನು ಹೇಳುತ್ತಾರೆ) ವೇದದಿಂದ ಕರ್ಮಗಳಿಗೆ ಉತ್ಪತ್ತಿಯಿಲ್ಲ ಬ್ರಹ್ಮನಿಂದ ವೇದಕ್ಕೆ ಉತ್ಪತ್ತಿಯಿಲ್ಲ, ಭೂತಗಳಿಂದ ಬ್ರಹ್ಮನಿಗೆ ಉತ್ಪತ್ತಿಯಿಲ್ಲ ಆದುದರಿಂದ ಅರ್ಥಾಂತರವನ್ನು ಕಲ್ಪಿಸಿದರೆ—ವೇದಾದಿಗಳಿಗೆ ಜಗಚ್ಚಕ್ರದಲ್ಲಿ ಪ್ರವೇಶವು ಕೂಡದೆ ಹೋಗುವುದು (ಅಭಿವ್ಯಕ್ತಿಯೆಂದು ಅರ್ಥವನ್ನು ಅಂಗೀಕರಿಸಿದರೆ ಸಮುದ್ಭವ ಮೊದಲಾದ ಬಹುಪದಗಳಿಗೆ ಅಮುಖ್ಯಾರ್ಥತ್ವವು ಬರಬೇಕಾಗುವುದು ॥ ೧೪, ೧೫, ೧೬ ॥

**ಗೀ ॥ ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥ ೧೭ ॥**

ಅ ॥ ಯಸ್ತು = ಯಾವ ಅಸಂಪ್ರಜ್ಞಾತ ಸಮಾಧಿಯಿಂದ ಕೂಡಿದ, ಮಾನವಃ = ಅಪರೋಕ್ಷ ಜ್ಞಾನಿಯು, ಆತ್ಮರತಿರೇವ=ಶ್ರೀಪರಮಾತ್ಮನನ್ನು ನೋಡಿದ್ದರಿಂದಲೇ ಉಂಟಾದ ಸುಖವನ್ನು ಹೊಂದಿ

ದವನಾಗಿ ಸ್ಯಾತ್=ಆಗುತ್ತಾನೆಯೋ, ಆತ್ಮತೃಪ್ತಶ್ಚ=ಶ್ರೀ ಪರಮಾತ್ಮನ ಪ್ರಸಾದದಿಂದಲೇ ಬೇರೆ ವಿಷಯಗಳಲ್ಲಿ ಸರ್ವಾತ್ಮನಾ ಅಲಂಬುದ್ಧಿಯುಳ್ಳವನಾಗಿಯೋ ಇರುತ್ತಾನೋ (ಇತರ ವಸ್ತುಗಳಲ್ಲಿ ಅಲಂಬುದ್ಧಿಯೂ ಭಗವಂತನ ಪ್ರಸಾದಾಧೀನವು) (ಶ್ರೀಹರಿಯೇ ಹೆಚ್ಚು ಸುಖವನ್ನು ಕೊಟ್ಟು ಇತರ ವಿಷಯಗಳಲ್ಲಿ ಸರ್ವಾತ್ಮನಾ ಅಲಂಬುದ್ಧಿಯನ್ನು ಹುಟ್ಟಿಸುತ್ತಾನೆ) ಆತ್ಮನ್ಯೇವ ಚ=ಅಸಂಪ್ರಜ್ಞಾತ ಸಮಾಧಿ ರೂಪವಾದ ಆತ್ಮಸ್ಥಿತಿಯಿಂದಲೇ ಅಂದರೆ ಶ್ರೀಪರಮಾತ್ಮನಲ್ಲಿಯೇ ಸಂಪೂರ್ಣ ಮನಸ್ಸನ್ನು ಇಟ್ಟಿರುವುದರಿಂದ ಸಂತುಷ್ಟಃ=ಹೆಚ್ಚು ಸಂತೋಷ (ಮಹಾ ಸುಖ) ವುಳ್ಳವನಾಗಿರುತ್ತಾನೋ, ಅಂದರೆ ಶ್ರೀಹರಿಯನ್ನು ನೋಡಿದ್ದರಿಂದುಂಟಾದ ಮಹಾ ಸುಖವುಳ್ಳವನಾದುದರಿಂದಬೇರೆ ವಿಷಯಗಳಲ್ಲಿ ಅಲಂಬುದ್ಧಿಯುಳ್ಳವನಾಗಿರುತ್ತಾನೋ) ತಸ್ಯ=ಅಂತಹ ಅಪರೋಕ್ಷಜ್ಞಾನಿಗೆ, ಕಾರ್ಯಂ=ಮಾಡಬೇಕಾದ ಸಂಧ್ಯಾವಂದನ ಮೊದಲಾದ ನಿತ್ಯ ನೈಮಿತ್ತಿಕ ಕರ್ಮವು ಯಾವುದೊಂದೂ,ನ ವಿದ್ಯತೇ=ಇರುವುದಿಲ್ಲ ॥ ೧೭ ॥

ಪೀ—ಅಜ್ಞಾನಿಯು ಕರ್ಮ ಮಾಡಬೇಕೆಂದು ಹೇಳಿದೆ ಈಗ ಜ್ಞಾನಿಗೆ ಕರ್ತವ್ಯಕರ್ಮವು ಯಾವುದೂ ಇಲ್ಲವೆಂದು ಹೇಳುತ್ತಾರೆಂದು ಪರರು ಅರ್ಥ ಹೇಳಿರುವರು ಅದು ಅಯುಕ್ತವೆಂಬ ಅಭಿಪ್ರಾಯದಿಂದ ಸಂಗತಿಯನ್ನು ಹೇಳುತ್ತಾರೆ—

**ಭಾ ॥ (೧) ತರ್ಹ್ಯತೀವ ಮನಸ್ಸಮಾಧಾನಮಪಿ ನ ಕಾರ್ಯಮಿತ್ಯತ ಆಹ । ಯಸ್ತ್ವಿತಿ ॥ (೨) ರಮಣಂ ಪರದರ್ಶನಾದಿನಿಮಿತ್ತಂ ಸುಖಂ । ತೃಪ್ತಿರಸ್ಯತ್ರಾಲಂಬುದ್ಧಿಃ । ಸಂತೋಷಸ್ತಜ್ಜನಕಂ ಸುಖಂ । ಸಂತೋಷಸ್ತೃಪ್ತಿಕಾರಣಮಿತ್ಯಭಿಧಾನಾತ್ ॥ (೩) ಪರಮಾತ್ಮದರ್ಶನಾದಿನಿಮಿತ್ತಂ ಸುಖಂ ಪ್ರಾಪ್ತಃ । ಅನ್ಯತ್ರ ಸರ್ವಾತ್ಮನಾಽಲಂಬುದ್ಧಿಃ। ಮಹಚ್ಚ ತತ್ಸುಖಂ । ತೇನೈವಾನ್ಯತ್ರಾಲಂಬುದ್ಧಿರಿತಿ ದರ್ಶಯತಿ ॥ (೪) ಆತ್ಮನ್ಯೇವ ಚ ಸಂತುಷ್ಟ ಇತಿ । ತತ್ಸ್ಥ ಏವ ಸನ್ ಸಂತುಷ್ಟ ಇತ್ಯರ್ಥಃ । ನಾನ್ಯತ್ಕಿಮಪಿ ಸಂತೋಷಕಾರಣಮಿತ್ಯವಧಾರಣಂ । ಆತ್ಮನಾ ತೃಪ್ತಃ । ನ ಹ್ಯಾತ್ಮನ್ಯಲಂಬುದ್ಧಿರ್ಯುಕ್ತಾ ॥ (೫) ತದ್ವಾಚಿತ್ವಂ ಚ ವಯಂ ತು ನ ವಿತೃಪ್ಯಾಮ ಉತ್ತಮಶ್ಲೋಕವಿಕ್ರಮೈರಿತಿ ಪ್ರಯೋಗಾತ್ಸಿದ್ಧಂ ॥ (೬) ಅಧ್ಯಾಹಾರಸ್ತ್ವಗತಿಕಾ ಗತಿಃ ॥ ೧ ॥**

**ಅ** ॥ (೧) ಕರ್ಮ ಮಾಡದಿದ್ದರೆ ಜಗಚ್ಚಕ್ರವು ನಾಶವಾಗಿ ಪ್ರತ್ಯವಾಯ ರೂಪವಾದಹಾನಿಯು,ಕರ್ಮ ಮಾಡಿದರೆ ಜಗಚ್ಚಕ್ರಪ್ರವೃತ್ತಿರೂಪ ಫಲವಿದೆ ಎಂದಾದರೆ ಅಸಂಪ್ರಜ್ಞಾತ ಸಮಾಧಿಯು ಅಂದರೆ ಬಾಹ್ಯ ವಸ್ತುಗಳ ಜ್ಞಾನವಿಲ್ಲದೆ ಶ್ರೀಹರಿಯಲ್ಲಿ ಸಂಪೂರ್ಣ ಮನಸ್ಸನ್ನಿಡುವುದು ಕರ್ತವ್ಯವಾಗದೆ ಹೋಗುವುದು. (ಏಕೆಂದರೆ ಅಸಂಪ್ರಜ್ಞಾತ ಸಮಾಧಿಯನ್ನು ಮಾಡುವಾಗ ಕರ್ಮಲೋಪವು ನಿಶ್ಚಯವಾಗಿ ಬರುತ್ತದೆ.) ಎಂದರೆ **ಯಸ್ತು** ಎಂಬ ಶ್ಲೋಕದಿಂದ ಸಮಾಧಾನವನ್ನು ಹೇಳುತ್ತಾರೆ. (೨) (ಇಲ್ಲಿದ್ದ ರತಿ ತೃಪ್ತಿ ಸಂತೋಷ ಶಬ್ದಗಳಿಗೆ ಅರ್ಥವನ್ನು ಹೇಳುತ್ತಾರೆ) ರತಿಃ ರಮಣಂ=ಶ್ರೀಹರಿಯ ದರ್ಶನಾದಿಗಳಿಂದುಂಟಾದ ಸುಖವು ತೃಪ್ತಿಃ= ಬೇರೆ ವಿಷಯಗಳಲ್ಲಿ ಅಲಂಬುದ್ಧಿಯು, ಸಂತೋಷಃ=ತೃಪ್ತಿಯನ್ನುಂಟುಮಾಡುವ ಸುಖವು ಸಂತೋಷವು ತೃಪ್ತಿಗೆ ಕಾರಣವು, ಎಂದು ಕೋಶವು. (೩) (ಈಗ ಆತ್ಮಶಬ್ದವು ಜೀವಪರವೆಂಬ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಆತ್ಮ ರತಿಃ ಎಂಬ ಪದಕ್ಕೆ ಅರ್ಥ ಹೇಳುತ್ತಾರೆ) ಶ್ರೀಹರಿಯ ದರ್ಶನಾದಿಗಳಿಂದುಂಟಾದ ಸುಖವನ್ನು ಹೊಂದಿದವನು ಪರಮಾತ್ಮನಿಂದ ಬೇರೆಕಡೆ ಸರ್ವಪ್ರಕಾರದಿಂದಲೂ ಅಲಂಬುದ್ಧಿಯನ್ನು ಹೊಂದಿದವನು (ತೃಪ್ತಶಬ್ದದಿಂದ ಹೇಳಲ್ಪಡುತ್ತಾನೆ) ಸಂತುಷ್ಟಃ=ಅಲಂಬುದ್ಧಿಯನ್ನು ಹುಟ್ಟಿಸುವ ಸುಖವನ್ನು ಹೊಂದಿದವನು. ಆತ್ಮರತಿರೂಪಸುಖವು ಅನ್ಯ ವಿಷಯಗಳಲ್ಲಿ ಅಲಂಬುದ್ಧಿಯನ್ನು ಹುಟ್ಟಿಸುವುದರಿಂದ

ಶ್ರೇಷ್ಠವಾದುದು ಅದರಿಂದಲೇ ಅನ್ಯವಿಷಯಗಳಲ್ಲಿ ಅಲಂಬುದ್ಧಿಯು ಎಂದು ತೋರಿಸುತ್ತಾರೆ. (೪) ಆತ್ಮನ್ಯೇವ ಚ ಸಂತುಷ್ಟಃ ಎಂಬುವುದರಿಂದ ಪರಮಾತ್ಮನಲ್ಲಿ ಇದ್ದವನಾಗಿಯೇ ಸಂತೋಷಗೊಂಡವನು ಎಂದರ್ಥವು. (ಅಂದರೆ ಸಂತೋಷವೆಂಬ ಆತ್ಮರತಿಯು ಅಸಂಪ್ರಜ್ಞಾತ ಸಮಾಧಿರೂಪ ಆತ್ಮಸ್ಥಿತಿಯಿಂದ ಉಂಟಾಗುತ್ತದೆ) ಅಸಂಪ್ರಜ್ಞಾತ ಸಮಾಧಿರೂಪವಾದ ಆತ್ಮಸ್ಥಿತಿಗಿಂತ ಬೇರೆ ಯಾವುದೂ ಸಂತೋಷಕ್ಕೆ ಕಾರಣವಿಲ್ಲ, ಎಂಬ ಅಭಿಪ್ರಾಯದಿಂದ ಏವ ಎಂಬ ಅವಧಾರಣವು, ಆತ್ಮತೃಪ್ತಃ=ಕೇವಲ ಆತ್ಮರತ್ಯಾಖ್ಯಸುಖದಿಂದಲೇ ತೃಪ್ತಿಯನ್ನು ಹೊಂದಿದವನಲ್ಲ, ಮತ್ತೆ ಪ್ರಸನ್ನನಾದ ಪರಮಾತ್ಮನಿಂದಲೂ ತೃಪ್ತಿಯನ್ನು ಹೊಂದಿದವನು ಪರಮಾತ್ಮನಲ್ಲಿ ಅಲಂಬುದ್ಧಿಯು ಸರ್ವಥಾ ಯುಕ್ತವಲ್ಲ (ಏಕೆಂದರೆ– ಆತ್ಮರತಿಃ ಎಂದು ಹೇಳಿದ ವಿಶೇಷಣದಿಂದ ವಿರೋಧವು ಬರುವುದು. ಮತ್ತು ಕೋ ನಾಮ ತೃಪ್ಯೇದ್ರಸವಿತ್ಕಥಾಯಾಂ ಇತ್ಯಾದಿ ಪರಮಾತ್ಮನಲ್ಲಿ ಅಲಂಬುದ್ಧಿಯನ್ನು ಮಾಡಕೂಡದೆಂದು ಹೇಳುವ ಪ್ರಮಾಣದಿಂದಲೂ ವಿರೋಧವು ಬರುವುದು) (೫) (ತೃಪ್ತಿಶಬ್ದಕ್ಕೆ ಅಲಂಬುದ್ಧಿಯೆಂಬ ಅರ್ಥವು ಹೇಗೆ ಸಿಗುವುದೆಂದರೆ) ನಾವು ಮಹಾ ಯಶಸ್ಸುಳ್ಳ ಶ್ರೀಹರಿಯ ಪರಾಕ್ರಮಾದಿಗಳನ್ನು ಕೇಳಿ ಅಲಂಬುದ್ಧಿಯನ್ನು ಹೊಂದುವುದಿಲ್ಲ (ಕೋ ನಾಮ ತೃಪ್ಯೇದ್ರಸವಿತ್ಕಥಾಯಾಂ ಮಹತ್ತಮೈಕಾಂತಪರಾಯಣಸ್ಯ ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಂ.) ಇದು ಮೊದಲಾದ ಬಹು ಪ್ರಮಾಣಗಳಿಂದ (ತೃಪ್ತಿಶಬ್ದಕ್ಕೆ ಅಲಂಬುದ್ಧಿಯೆಂಬ ಅರ್ಥವು ಇದೆ ಎಂದು) ಸಿದ್ಧವಾಗುತ್ತದೆ. (೬) (ಹಾಗಾದರೆ ಇಲ್ಲಿ ತೃಪ್ತಿಶಬ್ದಕ್ಕೆ ಪ್ರೀತಿಯೆಂದು ಅರ್ಥವು. ಅಂತೂ ಮಹಾ ಯಶಸ್ಸುಳ್ಳ ಶ್ರೀಹರಿಯ ಪರಾಕ್ರಮಾದಿಗಳನ್ನು ಕೇಳಿದ್ದರಿಂದ ಬೇರೆಯವರಲ್ಲಿ ಪ್ರೀತಿಯನ್ನು ಹೊಂದಲಾರೆವು. ಹೀಗೆ ಅನ್ಯತ್ರ ಎಂದು ಅಧ್ಯಾಹಾರ ಮಾಡಿಕೊಂಡು ಹೀಗೆ ಅರ್ಥವನ್ನು ಹೇಳುತ್ತೇವೆ ಎಂದರೆ) ಇದ್ದ ಪದದಿಂದಲೇ ಅರ್ಥ ಹೇಳಲಿಕ್ಕೆ ಸರ್ವಥಾ ಸಾಧ್ಯವಿಲ್ಲವಾದರೇನೇ ಇಲ್ಲದಿರುವ ಪದವನ್ನು ಸೇರಿಸಿಕೊಂಡು ಅರ್ಥ ಹೇಳಬೇಕು ಇಲ್ಲಿ ತೃಪ್ತಿ ಎಂಬುದಕ್ಕೆ ಅಲಂಬುದ್ಧಿ ಎಂಬ ಅರ್ಥವನ್ನು ಇಟ್ಟುಕೊಂಡರೆ– ಅನ್ಯತ್ರ ಎಂಬ ಪದವನ್ನು ಅಧ್ಯಾಹಾರ ಮಾಡದೇನೇ ವಾಕ್ಯಾರ್ಥವು ಕೂಡುವುದರಿಂದ ಅನ್ಯತ್ರ ಎಂಬ ಅಧ್ಯಾಹಾರವು ಸರ್ವಥಾ ಯುಕ್ತವಲ್ಲ ॥ ೧ ॥

ಪೀ—ಆತ್ಮಜ್ಞಾನದಲ್ಲಿ ಆಸಕ್ತರಾದವರಿಗೆ ಕರ್ತವ್ಯಕರ್ಮವಿಲ್ಲವೆಂದು ಹೇಳುವುದಕ್ಕಾಗಿ ಈ ಶ್ಲೋಕವು ಎಂದು ಪರರು ಹೇಳುವ ಅರ್ಥವು ಅಯುಕ್ತವೆನ್ನುತ್ತಾರೆ—

**ಭಾ ॥ (೧) ಆತ್ಮರತಿರೇವೇತ್ಯವಧಾರಣಾದಸಂಪ್ರಜ್ಞಾತಸಮಾಧಿಸ್ಥಸ್ಯೈವ ಕಾರ್ಯಂ ನ ವಿದ್ಯತೇ ॥ (೨) ಸ್ಥಿತಪ್ರಜ್ಞಸ್ಯಾಪಿ ಕಾರ್ಯೋ ದೇಹಾದಿರ್ದೃಶ್ಯತೇ ಯದಾ । ಸ್ವಧರ್ಮೋ ಮಮ ತುಷ್ಟ್ಯರ್ಥಃ ಸಾ ಹಿ ಸರ್ವೈರಪೇಕ್ಷಿತೇತಿ ವಚನಾಚ್ಚ ಪಂಚರಾತ್ರೇ ॥ (೩) ಅನ್ಯದಾಽನ್ಯರತಿರಪೀಷತ್ಸರ್ವಸ್ಯ ಭವತಿ ॥ (೪) ನ ಚ ತತ್ರಾಲಂಬುದ್ಧಿಮಾತ್ರಮುಕ್ತಂ । ಆತ್ಮತೃಪ್ತ ಇತಿ ಪೃಥಗಭಿಧಾನಾತ್ ॥ (೫) ಕರ್ತೃಶಬ್ದಃ ಕಾಲಾವಚ್ಛೇದೇಽಪಿ ಚಾಯಂ ಪ್ರಸಿದ್ಧಃ । ಯೋ ಭುಂಕ್ತೇ ಸ ತು ನ ಬ್ರೂಯಾದಿತ್ಯಾದೌ । ಅತೋಽಸಂಪ್ರಜ್ಞಾತಸಮಾಧಾವೇವೈತತ್ ॥ (೬) ಮಾನವ ಇತಿ ಜ್ಞಾನಿನ ಏವಾಸಂಪ್ರಜ್ಞಾತಸಮಾಧಿರ್ಭವತೀತಿ ದರ್ಶಯತಿ । ಮನು ಅವಬೋಧನ ಇತಿ ಧಾತೋಃ ॥ (೭) ಪರಮಾತ್ಮರತಿಶ್ಚಾತ್ರ ವಿವಕ್ಷಿತಾ । ವಿಷ್ಣಾವೇವ ರತಿರ್ಯಸ್ಯ ಕ್ರಿಯಾ ತಸ್ಯೈವ ನಾಸ್ತಿ ಹೀತಿ ವಚನಾತ್ ॥ ೨ ॥ ॥ ೧೭ ॥**

ಅ ॥ (೧) ಆತ್ಮರತಿರೇವ ಎಂದು ಅವಧಾರಣಾರ್ಥಕವಾದ ಏವ ಶಬ್ದವಿದ್ದುದರಿಂದ ಅಸಂಪ್ರಜ್ಞಾತ ಸಮಾಧಿಯಲ್ಲಿದ್ದವನಿಗೇನೇ ಸಂಧ್ಯಾವಂದನ ಮೊದಲಾದ ಯಾವ ಕರ್ಮವೂ ಇರುವುದಿಲ್ಲ, ಎಂದರ್ಥವು.

(ಎಲ್ಲಾ ಜ್ಞಾನಿಗಳಿಗೇನೇ ಕರ್ತವ್ಯ ಕರ್ಮವಿಲ್ಲವೆಂದು ಅರ್ಥವಲ್ಲ.) (೨) (ಜ್ಞಾನಿಮಾತ್ರಕ್ಕೆ ಕರ್ಮವು ಇಲ್ಲ ವೆಂಬುದು ಸರ್ವಥಾ ಕೂಡುವುದಿಲ್ಲ, ಎನ್ನುತ್ತಾರೆ) ಸ್ಥಿತಪ್ರಜ್ಞನಿಗೂ ದೇಹ ಇಂದ್ರಿಯಾದಿಗಳು ಯಾವಾಗ ಇರುತ್ತವೋ, ಆಗ ದೇಹ ಇಂದ್ರಿಯಾದಿಗಳಲ್ಲಿ ತಮ್ಮದೆಂಬ ಅಭಿಮಾನವಿರುತ್ತದೆ.) ಆಗ ನನಗೆ ಸಂತೋಷವಾಗುವುದಕ್ಕಾಗಿ ಸಂಧ್ಯಾವಂದನ ಮೊದಲಾದ ತಮ್ಮ ಧರ್ಮವನ್ನು ಮಾಡಬೇಕು. ನನ್ನ ಸಂತೋಷವು ಎಲ್ಲಾ ಮುಮುಕ್ಷುಗಳಿಗೂ ಅಪೇಕ್ಷಿತವಾಗಿದೆ., ಎಂದು ಪಂಚರಾತ್ರಾಗಮದಲ್ಲಿ ಹೇಳಿದೆ (ಈ ಪ್ರಮಾಣದಲ್ಲಿ ಅಸಂಪ್ರಜ್ಞಾತಸಮಾಧಿಯೋಗಿಗಳಿಗೂ ಅಸಂಪ್ರಜ್ಞಾತ ಸಮಾಧಿಯಿ ಲ್ಲದಿರುವಾಗ ಸಂಧ್ಯಾವಂದನಾದಿ ಕರ್ಮಗಳನ್ನು ಮಾಡಬೇಕೆಂದು ಹೇಳಿದ್ದರಿಂದ ಸಾಮಾನ್ಯವಾಗಿ ಎಲ್ಲಾ ಜ್ಞಾನಿಗಳಿಗೆ ಅಸಂಪ್ರಜ್ಞಾತಸಮಾಧಿಯು ಇಲ್ಲದಿರುವುದರಿಂದ ಸರ್ವರೂ ಕರ್ಮವನ್ನು ಮಾಡಲೇ ಬೇಕೆಂದು ಹೇಳಿದ ಕಾರಣ ಪರರು ಹೇಳಿದ ಅರ್ಥವು ಸರ್ವಥಾ ಯುಕ್ತವಲ್ಲ) (೩) (ಆತ್ಮರತಿರೇವ ಎಂದು ಅವಧಾರಣವಿದ್ದರೂ ಇದು ಜ್ಞಾನಿಗಳೆಲ್ಲರೂ ಕರ್ಮಮಾಡಬಾರದೆಂದು ಹೇಳಲಿಕ್ಕೆ ಹೊರಟಿದ್ದೆಂದು ಏಕೆ ಆಗಲಾರದೆಂದರೆ) ಅಸಂಪ್ರಜ್ಞಾತಸಮಾಧಿಕಾಲಕ್ಕಿಂತ ಬೇರೆ ಕಾಲದಲ್ಲಿ ಎಲ್ಲಾ ಜ್ಞಾನಿಗಳಿಗೂ ಸ್ವಲ್ಪ ಇತರತ್ರ ಆಸಕ್ತಿಯೂ ಇರುತ್ತದೆಂದು ಪ್ರಾರಬ್ಧಕರ್ಮಣಾ ಇತ್ಯಾದಿ ಗ್ರಂಥಗಳಿಂದ ಹಿಂದೆ ಹೇಳಿದೆ (ಆದಕಾರಣ ಅಸಂಪ್ರಜ್ಞಾತಸಮಾಧಿಯೋಗಿಗಳಿಗಿಂತ ಜ್ಞಾನಿಗಳನ್ನೆಲ್ಲಾ ಮಾನವನು ಆತ್ಮರತಿ ರೇವ ಎಂಬಲ್ಲಿದ್ದ ಅವಧಾರಣದಿಂದ ತೆಗೆದುಕೊಳ್ಳಬಾರದೆಂದು ಹೇಳಿದ್ದರಿಂದ ಆತ್ಮರತಿಃ ಎಂಬ ವಚನವು ಜ್ಞಾನಿಗಳೆಲ್ಲರೂ ಕರ್ಮಮಾಡಬಾರದೆಂದು ಹೇಳಲಿಕ್ಕೆ ಹೊರಟಿದ್ದಲ್ಲ) (೪) (ಹಾಗಾದರೆ-ಜ್ಞಾನಿಗಳಿಗೂ ಅನ್ಯತ್ರ ಆಸಕ್ತಿಯಿದ್ದರೂ ಅಲ್ಲಿ ಅಲಂಬುದ್ಧಿಯೂ ಇದೆ ಆದಕಾರಣ ಆತ್ಮರತಿರೇವ ಎಂಬ ಅವಧಾರಣವು ಕೂಡುತ್ತದೆ, ಎಂದರೆ—) ಆ ಶ್ಲೋಕದಲ್ಲಿ ಕರ್ತವ್ಯಕರ್ಮವಿಲ್ಲವೆಂಬುದಕ್ಕೆ ಪ್ರಯೋಜಕವಾಗಿ ಶ್ರೀಹರಿ ಗಿಂತ ಬೇರೆಯ ವಸ್ತುಗಳಲ್ಲಿ ವಿಷಯಗಳಲ್ಲಿ ಆಸಕ್ತಿ ಸಹಿತವಾದ ಅಲಂಬುದ್ಧಿಯನ್ನು (ಅಲ್ಪಾಲಂಬುದ್ಧಿಯನ್ನು) ಹೇಳಿದ್ದಲ್ಲ (ಮತ್ತೆ ಸರ್ವಾತ್ಮನಾ ಅಲಂಬುದ್ಧಿಯನ್ನೇ ಹೇಳಿದೆ) ಏಕೆಂದರೆ-ಆತ್ಮತೃಪ್ತಃ ಎಂದು ಪ್ರತ್ಯೇಕ ಹೇಳಿದೆ (ಅಂದರೆ ಆತ್ಮರತಿರೇವ ಎಂಬ ಅವಧಾರಣದಿಂದ ಇತರ ವಿಷಯಗಳಲ್ಲಿ ಅಲಂಬುದ್ಧಿಯು ಉಂಟಾದಾಗ್ಯೂ ಆತ್ಮತೃಪ್ತಃ ಎಂದು ಪ್ರತ್ಯೇಕ ಹೇಳಿದ್ದರಿಂದ ಸರ್ವಾತ್ಮನಾ ಅಲಂಬುದ್ಧಿಯು (ವಿಷಯ ಗಳಲ್ಲಿ ಆಸಕ್ತಿಯು ಇಲ್ಲದೇನೇ ಅಲಂಬುದ್ಧಿಯು ಅವಧಾರಣದಿಂದ ಅಭಿಪ್ರೇತವಾಗಿದೆ, ಎಂದು ತಿಳಿಯು ತ್ತದೆ ಆದಕಾರಣ ಎಲ್ಲಾ ಜ್ಞಾನಿಗಳಿಗೆ ಕರ್ಮಾಭಾವವನ್ನು ಹೇಳುತ್ತವೆಂಬುವುದು ಕೂಡುವುದಿಲ್ಲ.) (೫) (1) ಆತ್ಮರತಿರೇವ ಎಂಬುವುದು ಅಸಂಪ್ರಜ್ಞಾತ ಸಮಾಧಿಸ್ಥನಲ್ಲಿಯೇ ಕೂಡುತ್ತದೆಂದು ಆಗಲಿ. ಆದರೂ ಯಾವ ಜ್ಞಾನಿಯು ಅಸಂಪ್ರಜ್ಞಾತ ಸಮಾಧ್ಯವಸ್ಥೆಯಲ್ಲಿ ನಿಯಮದಿಂದ ಪರಮಾತ್ಮನಲ್ಲಿಯೇ ಆಸಕ್ತ್ಯಾದಿಗಳುಳ್ಳವನೋ, ಅಂತಹ ಜ್ಞಾನಿಗೆ ಕರ್ತವ್ಯಕರ್ಮವು ಸಂಪ್ರಜ್ಞಾತಸಮಾಧ್ಯವಸ್ಥೆಯಲ್ಲಿಯೂ ಇಲ್ಲವೆಂದು ವ್ಯಾಖ್ಯಾನಮಾಡಿದರೆ-ಜ್ಞಾನಿಗಳಿಗೆಲ್ಲಾ ಕರ್ಮವಿಲ್ಲವೆಂದು ಸಿದ್ಧಿಸುವುದು (೨) ಹಾಗಾದರೆ ಯಾವಾಗ ಆತ್ಮರತಿತ್ವಾದಿಗಳುಳ್ಳವನೋ ಆವಾಗಲೇ ಆ ಜ್ಞಾನಿಗೆ ಕರ್ಮವಿಲ್ಲ ಎಂದು ವ್ಯಾಖ್ಯಾನ ಮಾಡಿದ್ದರಿಂದ ಅಸಂಪ್ರಜ್ಞಾತ ಸಮಾಧ್ಯವಸ್ಥೆಯುಳ್ಳವನಿಗೇನೇ ಕಾರ್ಯಾಭಾವವು ಲಭಿಸುತ್ತದೆ ಎಂದರೆ -- ಹೀಗೆ ವ್ಯಾಖ್ಯಾನಮಾಡಲಿಕ್ಕೆ ಇಲ್ಲಿ ಯದಾ ತದಾ ಎಂದು ಕಾಲಮರ್ಯಾದೆಯನ್ನು ಹೇಳುವ ಶಬ್ದವಿಲ್ಲ (3) ಆತ್ಮನಿ ರತಿರ್ಯಸ್ಯ ಎಂಬುವ ಬಹುವ್ರೀಹಿ ಸಮಾಸವು ಅನ್ಯ ಪದಾರ್ಥಭೂತನಾದ . ರತಿಯುಳ್ಳವ ನನ್ನೇ ಹೇಳುತ್ತದೆ. ಎಂದರೆ) ಯದಾ ತದಾ ಎಂದು ಶಬ್ದ ಇಲ್ಲದಿದ್ದರೂ ಕರ್ತೃಶಬ್ದವು (ಭುಂಕ್ತೇ ಎಂಬಲ್ಲಿ ಭೋಜನಮಾಡುವವನನ್ನು ಹೇಳುವ ಆಖ್ಯಾತ ಶಬ್ದವು ಭೋಜನಕಾಲ ಅವಚ್ಛಿನ್ನನಾದ ಕರ್ತೃ ವಿನಲ್ಲಿಯೂ ಪ್ರಸಿದ್ಧವಾಗಿದೆ. ಯಾವನು ಉಣ್ಣುತ್ತಾನೋ ಆತನು ಮಾತನಾಡಬಾರದು ಅಂದರೆ ಭೋಜನಕಾಲದಲ್ಲಿಯೇ ಮಾತನಾಡಬಾರದು ಎಂಬ ಅರ್ಥವನ್ನು ಹೇಳುತ್ತದೆ ಅಂತೆಯೇ ಇಲ್ಲಿಯೂ ಅಸಂಪ್ರಜ್ಞಾತ ಸಮಾಧ್ಯವಸ್ಥೆಯಲ್ಲಿಯೇ ಕರ್ತವ್ಯಕರ್ಮವಿಲ್ಲವೆಂದು ಹೇಳುತ್ತದೆ ಬೇರೆ ಕಾಲದಲ್ಲಿ ಇಲ್ಲ

ವೆಂದು ಹೇಳುವುದಿಲ್ಲ, ಇತ್ಯಾದಿಗಳಲ್ಲಿ ಪ್ರಸಿದ್ಧವಾಗಿದೆ. ಆದಕಾರಣ ಇದು ಅಸಂಪ್ರಜ್ಞಾತಸಮಾಧ್ಯವಸ್ಥೆಯಲ್ಲಿ ಕಾರ್ಯಾಭಾವವು ಅಸಂಪ್ರಜ್ಞಾತ ಸಮಾಧಿಸ್ಥನಿಗೆ ಕರ್ತವ್ಯಕರ್ಮವು ಯಾವುದೂ ಇಲ್ಲವೆಂದು ಹೇಳಿದಾಗ ಕದಾಚಿತ್ ಅಪರೋಕ್ಷಜ್ಞಾನವಿಲ್ಲದವನಿಗೂ ಅಸಂಪ್ರಜ್ಞಾತ ಸಮಾಧಿಯು ಕೂಡಬಹುದಾದುದರಿಂದ ಅವನಿಗೂ ಕರ್ತವ್ಯಕರ್ಮವು ಇಲ್ಲವೆಂದಾಗಬೇಕಾಗುವುದು ಎಂದರೆ) ಅಪರೋಕ್ಷಜ್ಞಾನಿಗೇನೇ ಅಸಂಪ್ರಜ್ಞಾ ಸಮಾಧಿಯು ಉಂಟಾಗುತ್ತದೆ. ಅಪರೋಕ್ಷಜ್ಞಾನವಿಲ್ಲದವನಿಗೆ ಅಸಂಪ್ರಜ್ಞಾತಸಮಾಧಿಯಾಗುವುದಿಲ್ಲ, ಎಂಬ ಅರ್ಥವನ್ನು ಮಾನವಃ ಎಂಬ ಪದದಿಂದ ಗೀತೆಯಲ್ಲಿ ತೋರಿಸಿರುತ್ತಾರೆ ಮನು ಎಂಬ ಧಾತುವು ಸಂಪೂರ್ಣ ತಿಳಿದುಕೊಳ್ಳುವಿಕೆ, ಎಂಬ ಅರ್ಥದಲ್ಲಿದೆ ಎಂಬ ಧಾತುವ್ಯಾಖ್ಯಾನದಿಂದ, (ಮನೋಽಯಂ ಸಂಪೂರ್ಣ ಜ್ಞಾನಕ್ಕೆ ಆಶ್ರಯನು ಮಾನವಃ ಎನಿಸುತ್ತಾನೆ.) (೭) (ಆತ್ಮ ಶಬ್ದಕ್ಕೂ ಬೇರೆ ಅರ್ಥವು ಕೂಡುವುದಿಲ್ಲವೆನ್ನುತ್ತಾರೆ.) ಇಲ್ಲಿ ಪರಮಾತ್ಮನ ದರ್ಶನ ನಿಮಿತ್ತ ಸುಖವನ್ನೇ ಇಟ್ಟುಕೊಳ್ಳಬೇಕು. ಶ್ರೀವಿಷ್ಣುವಿನಲ್ಲಿಯೇ ಆಸಕ್ತಿಯು ಯಾರಿಗೆ ಇದೆಯೋ, ಅವನಿಗೇನೇ ಸಂಧ್ಯಾವಂದನೆ, ಅಗ್ನಿಹೋತ್ರ ಮೊದಲಾದ ತಮ್ಮ ತಮ್ಮ ವರ್ಣಾಶ್ರಮಗಳಿಗೆ ಯೋಗ್ಯವಾದ ಕ್ರಿಯೆಯು ಇಲ್ಲ. (ಇತರರಿಗೆ ಇದೆ ಎಂದು ಹೇಳಿದ್ದರಿಂದ ಆತ್ಮಶಬ್ದಕ್ಕೆ ವಿಷ್ಣುವೆಂಬ ಅರ್ಥವೇ ಹೇಳಲಿಷ್ಟವು) ॥ ೨ ॥ ॥ ೧೭ ॥

## ಗೀ ॥ ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।
## ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥ ೧೮ ॥

ಅ ॥ ತಸ್ಯ= ಅಸಂಪ್ರಜಾತ ಸಮಾಧಿಯಲ್ಲಿರತಕ್ಕ ಜ್ಞಾನಿಗೆ, ಕೃತೇನ= ಸಮಾಧಿಯಿಲ್ಲದೆ ಮಾಡಿದ ಯಜ್ಞ ಮೊದಲಾದ ಕರ್ಮಗಳಿಂದ, ಅರ್ಥಃ= ಸಮಾಧಿಯಿಂದ ಹುಟ್ಟಿದ ಭಗವಜ್ಜ್ಞಾನದಿಂದ ಸಿಗುವ ಸುಖಕ್ಕಿಂತ ಹೆಚ್ಚಾದ, ಅಥವಾ ಅದಕ್ಕೆ ಸಮಾನವಾದ ಪುರುಷಾರ್ಥವು, ನೈವ= ಇಲ್ಲವೇ ಇಲ್ಲ ಇಹ= ಸಮಾಧ್ಯವಸ್ಥೆಯಲ್ಲಿ, ತಸ್ಯ= ಸಮಾಧಿಸ್ಥನಿಗೆ, ಅಕೃತೇನ= ಸಂಧ್ಯಾವಂದನೆ ಮೊದಲಾದ ಆಯಾಯ ಕಾಲದಲ್ಲಿ ಅವಶ್ಯವಾಗಿ ಮಾಡಬೇಕಾದ ಕರ್ಮಗಳನ್ನು ಮಾಡದೇನೇ ಇರೋಣದರಿಂದ, ಕಶ್ಚನ= ಯಾವ ದೋಷವೂ, ನ= ಇಲ್ಲ, ಅಸ್ಯ= ಅಸಂಪ್ರಜ್ಞಾತ ಸಮಾಧಿಸ್ಥನಿಗೆ, ಸರ್ವಭೂತೇಷು= ಗುರು ಮೊದಲಾದ ಸಮಸ್ತಪ್ರಾಣಿಗಳಲ್ಲಿ, ಕಶ್ಚಿತ್= ಯಾವುದೊಂದು, ಅರ್ಥವ್ಯಪಾಶ್ರಯಃ= ಪ್ರಯೋಜನಪ್ರಾಪ್ತಿಯು, ನಚ= ಇಲ್ಲ, (ಅಂದರೆ ಪುರುಷಾರ್ಥಪ್ರಾಪ್ತಿಗೆ ಕಾರಣವಾದುದು ಗುರು ಮೊದಲಾದವರ ದರ್ಶನ ಸಂಭಾಷಣ ವಂದನ ಮೊದಲಾದ ವ್ಯಾಪಾರವು ಅಸಂಪ್ರಜ್ಞಾತ ಸಮಾಧಿಸ್ಥನಿಗೆ ಇಲ್ಲ ॥ ೧೮ ॥

ಟೀ—(1) ಜ್ಞಾನಿಮಾತ್ರಕ್ಕೆ ಸಂಧ್ಯಾವಂದನ ಮೊದಲಾದ ಕರ್ತವ್ಯಕರ್ಮವಿಲ್ಲವೆಂದು ಹೇಳಿದ್ದಲ್ಲ ಮತ್ತೆ ಅಸಂಪ್ರಜ್ಞಾತಸಮಾಧಿಸ್ಥನಿಗೇನೇ ಸಂಧ್ಯಾವಂದನ ಮೊದಲಾದ ಕರ್ಮವಿಲ್ಲವೆಂದು ಹೇಳಿದ್ದು. ಎಂದು ಅರ್ಥಹೇಳಿದರೆ ನೈವ ತಸ್ಯ ಕೃತೇನಾರ್ಥಃ ಎಂಬ ಉತ್ತರವಾಕ್ಯವು ಸಂಗತವಾಗುವುದಿಲ್ಲ, ಏಕೆಂದರೆ—ಅಸಂಪ್ರಜ್ಞಾತ ಸಮಾಧಿಯುಳ್ಳ ಪುರುಷನಿಗೆ ಕರ್ಮಮಾಡುವ ಪ್ರಸಕ್ತಿಯೇ ಇಲ್ಲದಿರುವುದರಿಂದ ನೈವ ತಸ್ಯ ಕೃತೇನಾರ್ಥಃ ಎಂದು ಪ್ರಯೋಜನವಿಲ್ಲವೆಂದು ಹೇಳಿದ್ದು ಕೂಡಲಾರದು. (2) ಜ್ಞಾನಿಗಳು ಕರ್ಮಮಾಡುತ್ತಾರೆಂಬುದು ಕೂಡುವಕಾರಣ ಕರ್ಮಕ್ಕೆ ಪ್ರಯೋಜನವಿಲ್ಲವೆನ್ನುವುದು ಕೂಡುತ್ತದೆ, ಎಂದರೆ—ಹಾಗೆ ಹೇಳಕೂಡದು ಹೀಗಾದರೆ ಶ್ರೀಹರಿಯಲ್ಲಿ ಸಂಪೂರ್ಣ ಮನಸ್ಸನ್ನು ಇಡುವಿಕೆಯನ್ನು (ಅಸಂಪ್ರಜ್ಞಾತ ಸಮಾಧಿಯನ್ನು) ಮಾಡಬಾರದೆಂಬ ಆಕ್ಷೇಪಕ್ಕೆ ಅಸಂಪ್ರಜ್ಞಾತ ಸಮಾಧಿಯಲ್ಲಿದ್ದವನಿಗೆ ಕರ್ತವ್ಯಕರ್ಮವಿಲ್ಲವೆಂದು ಉತ್ತರವನ್ನು ಏಕೆ ಹೇಳಿದ್ದು ಸಂಧ್ಯಾವಂದನ ಶ್ರವಣ ಮನನಾದಿ ರೂಪ ಕರ್ಮಗಳನ್ನು ಮಾಡಲಿಕ್ಕೆ ಯೋಗ್ಯವಾದ ಕಾಲದಲ್ಲಿ ನನ್ನನ್ನು ನೀನು ಎಚ್ಚರಿಸಬೇಕು

ಎಂದು ಒಬ್ಬನೊಡನೆ ಹೇಳಿ ಸಮಾಧ್ಯವಸ್ಥೆಯನ್ನು ಕೈಕೊಂಡವನು ಹೇಳಿಸಿಕೊಂಡ ಪುರುಷನಿಂದ ಯೋಗ ಶಾಸ್ತ್ರದಲ್ಲಿ ಹೇಳಿದ ಅವಯವ ವಿಶೇಷ ಸ್ಪರ್ಶಾದಿರೂಪ ಉಪಾಯಗಳಿಂದ ಎಚ್ಚರಗೊಂಡವನಾಗಿ ಕರ್ಮ ಮಾಡುತ್ತಾನೆ, ಎಂದೇ ಉತ್ತರವನ್ನು ಏಕೆ ಹೇಳಲಿಲ್ಲ ಎಂಬ ಆಶಂಕಾನಿರಾಸಕ್ಕಾಗಿ ಈ ಶ್ಲೋಕವು ಹೊರ ಟಿದೆ, ಎಂಬ ಅಭಿಪ್ರಾಯದಿಂದ ವ್ಯಾಖ್ಯಾನಮಾಡುತ್ತಾರೆ —

**ಭಾ ॥ (೧) ತಸ್ಯ ಕರ್ಮಕಾಲೇ ವಕ್ತವ್ಯೋಽಹಮಿತಿ ಕಂಚಿತ್ಪ್ರತ್ಯುಕ್ತ್ವಾ ತತ್ಪ್ರತಾವಾತ್ಮರ-ತ್ಯಧಿಕಃ ಸಮೋಽರ್ಥೋ ವಾ ನಾಸ್ತಿ ॥ (೨) ನಚ ಸಂಧ್ಯಾದ್ಯಕೃತೌ ಕಶ್ಚಿದ್ದೋ-ಷೋಽಸ್ತಿ ॥ (೩) ನ ಚೈತದಪಹಾಯ ಸರ್ವಭೂತೇಷು ಕಶ್ಚಿತ್ಪ್ರಯೋಜನಾಶ್ರಯಃ । ಅರ್ಥೋ ಯೇನ ದರ್ಶನಾದಿನಾ ಭವತಿ ಸೋಽರ್ಥವ್ಯಪಾಶ್ರಯಃ ॥ (೪) ಜ್ಞಾನ-ಮಾತ್ರೇಣ ಪ್ರತ್ಯವಾಯೋ ಯದ್ಯಪಿ ನ ಭವತಿ । ತದರ್ಜುನಸ್ಯಾಪಿ ಸಮಮಿತಿ ನ ತಸ್ಯ ಕರ್ಮೋಪದೇಶಯೋಗ್ಯೇತದ್ಭವತಿ । ಈಷತ್ಪ್ರಾರಬ್ಧಾನರ್ಥಸೂಚಕಂ ಚ ತದ್ಭ-ವತಿ । ಮಹಚ್ಛೇದ್ವ್ಯತ್ರಹತ್ಯಾದಿವತ್ ॥ ೧೮ ॥**

ಅ ॥ (೧) ಅಸಂಪ್ರಜ್ಞಾತ ಸಮಾಧಿಯಲ್ಲಿದ್ದ ಜ್ಞಾನಿಗೆ ಸಂಧ್ಯಾವಂದನಾದಿ ಕರ್ಮ ಮಾಡಲಿಕ್ಕೆ ಯೋಗ್ಯವಾದ ಕಾಲದಲ್ಲಿ ನನ್ನನ್ನು ನೀನು ಎಬ್ಬಿಸಿ ಹೇಳಬೇಕೆಂದು ಒಬ್ಬನ ಹತ್ತಿರ ಹೇಳಿ ಅವನಿಂದ ಎಚ್ಚರಗೊಂಡು ಕರ್ಮಮಾಡಿದರೂ ಆ ಕರ್ಮಕ್ಕೆ ಆತ್ಮರತಿಗಿಂತ ಹೆಚ್ಚಾದ ಅಥವಾ ಆತ್ಮರತಿಗೆ ಸಮ ವಾದ ಪುರುಷಾರ್ಥವು ಇಲ್ಲ (೨) (**ನಾಕೃತೇನ** ಎಂಬುದಕ್ಕೆ ಅರ್ಥ ಹೇಳುತ್ತಾರೆ) ಅಸಂಪ್ರಜ್ಞಾತ ಸಮಾಧಿಸ್ಥನಿಗೆ ಸಂಧ್ಯಾವಂದನಾದಿಗಳನ್ನು ಮಾಡದಿದ್ದರೆ ಯಾವ ದೋಷವೂ ಇಲ್ಲ (ಅಂದರೆ ಯಜ್ಞಾದಿ ಗಳನ್ನು ಮಾಡುವುದಕ್ಕಾಗಿ ಉತ್ಥಾನವು (ಸಮಾಧಿಯಿಂದ ಎಚ್ಚರಗೊಳ್ಳುವುದು) ಬೇಡವಾದರೂ ನಿತ್ಯ ನೈಮಿತ್ತಿಕ ಕರ್ಮಮಾಡದಿದ್ದರೆ ಪ್ರತ್ಯವಾಯವು ಬರುವುದರಿಂದ ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡು ವುದಕ್ಕಾಗಿ ಉತ್ಥಾನವು ಅವಶ್ಯಕವೇ ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ **ನಾಕೃತೇನೇಹ ಕಶ್ಚನ** ಎಂಬ ಗೀತಾವಾಕ್ಯವು) (ಅಸಂಪ್ರಜ್ಞಾತ ಸಮಾಧಿಯಲ್ಲಿದ್ದವನಿಗೆ ಅಲ್ಪಫಲವುಳ್ಳ ಯಜ್ಞಾದಿಗಳನ್ನು ಮಾಡಿ ದುದರಿಂದ ಫಲವಿಲ್ಲದಿದರೂ, ಸಂಧ್ಯಾವಂದನೆ ಮೊದಲಾದ ಕರ್ಮಗಳನ್ನು ಮಾಡಿದರೆ ಪಾಪವಿಲ್ಲದಿದ್ದರೂ ಗುರುದೇವತಾದಿಗಳ ಪೂಜೆಮಾಡಿದರೆ ಫಲವು ಲಭಿಸುವುದು ಪೂಜೆ ಮಾಡದಿದ್ದರೆ ಪ್ರತ್ಯವಾಯವು ಬರು ವುದು ಆದಕಾರಣ ಗುರುದೇವತಾದಿಗಳು ಸಮೀಪ ಬಂದಾಗ ಏಳಲೇಬೇಕು ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ **ನ ಚಾಸ್ಯ** ಎಂಬುದಕ್ಕೆ ಅರ್ಥ ಹೇಳುತ್ತಾರೆ) ಅಸಂಪ್ರಜ್ಞಾತ ಸಮಾಧಿಯನ್ನು ಬಿಟ್ಟು ಎದ್ದವನಿಗೆ ಗುರು ಮೊದಲಾದ ಸಮಸ್ತ ಪ್ರಾಣಿಗಳಲ್ಲಿ ಯಾವುದೊಂದೂ ಪ್ರಯೋಜನ ಪ್ರಾಪ್ತಿಯು ಇಲ್ಲ ಯಾವ ಗುರುಮೊದಲಾದವರ ದರ್ಶನ ಸ್ಪರ್ಶನ ಮೊದಲಾದವ್ಯಾಪಾರಗಳಿಂದ ಆಗತಕ್ಕ ಪ್ರಯೋ ಜನವೂ ಇಲ್ಲ (೪)(ಇಷ್ಟೆಲ್ಲಾ ಕ್ಲಿಷ್ಟಕಲ್ಪನೆಯು ಏತಕ್ಕೆ **ಯಸ್ತ್ವಾತ್ಮರತಿರೇವ** ಇತ್ಯಾದಿ ಎರಡು ಶ್ಲೋಕ ಗಳು ಜ್ಞಾನಿಗಳನ್ನು ಮಾತ್ರ ಹೇಳತಕ್ಕುದೆಂದು ಏಕೆ ಆಗಲಾರದು ಅಪರೋಕ್ಷ ಜ್ಞಾನಮಾತ್ರದಿಂದ ಪ್ರತ್ಯ ವಾಯವಿಲ್ಲ ಅಪರೋಕ್ಷಜ್ಞಾನಿಗೂ ಕರ್ತವ್ಯಕರ್ಮಾಭಾವವು ಕೂಡುತ್ತದೆ, ಎಂದರೆ) ಅಪರೋಕ್ಷ ಜ್ಞಾನ ಮಾತ್ರದಿಂದಯದ್ಯಪಿ ಪ್ರತ್ಯವಾಯವು ಬರುವುದಿಲ್ಲ ಅಂತಹ ಪ್ರತ್ಯವಾಯವನ್ನು ಹುಟ್ಟಿಸದಿರುವ ಅರ್ಜುನ ನಿಗೂ ಅಪರೋಕ್ಷ ಜ್ಞಾನವು ಸಮವಾದ ಕಾರಣ ಅರ್ಜುನನಿಗೆ ಕರ್ತವ್ಯಕರ್ಮವಿಲ್ಲವೆಂದು ಹೇಳುವುದು ಯುದ್ಧಮೊದಲಾದ ಕರ್ಮಗಳನ್ನು ಮಾಡಬೇಕೆಂಬುವ ಉಪದೇಶಕ್ಕೆ ಉಪಯೋಗಿಯಾಗುವುದಿಲ್ಲ (ಪ್ರಸ್ತುತ ವಿರೋಧಿಯೇ ಆಗುವುದು) (ಪ್ರತ್ಯವಾಯವು ಇಲ್ಲವೆಂದು ಸಾಮಾನ್ಯತಃ ಹೇಳಿದ್ದು. ವಸ್ತುತಸ್ತು ಜ್ಞಾನಿಗಳಿಗೂ ಪ್ರತಿಷಿದ್ಧವಾದುದನ್ನು ಮಾಡಿದರೆ ಅನಿಷ್ಟಪ್ರಾಪ್ತಿಯು ಇದೆ, ಎನ್ನುತ್ತಾರೆ) ಕರ್ಮಾಕರ

ಇವು ಸ್ವಲ್ಪ ಪ್ರಾರಬ್ಧಕರ್ಮವನ್ನು ಸೂಚಿಸುತ್ತದೆ (ಸೂಚಿತವಾದ ಕರ್ಮದಿಂದ ಆವಾಗಲೇ ಮನಸ್ಸಿನಲ್ಲಿ ಖೇದವು, ಮೋಕ್ಷದಲ್ಲಿ ಆನಂದಕ್ಕೆ ಹ್ರಾಸವು, ಹಾಗೆಯೇ ವಿಹಿತ ಕರ್ಮಗಳನ್ನು ಮಾಡಿದರೆ ಆನಂದ ವೃದ್ಧಿಯು) ನಿಷಿದ್ಧಕರ್ಮವು ಶ್ರೇಷ್ಠವಾಗಿದ್ದರೆ ದೇವೇಂದ್ರನು ಮಾಡಿದ ವೃತ್ರಾಸುರನ ಸಂಹಾರಾದಿಗಳಂತೆ ಅನಿಷ್ಟಕ್ಕೆ ಕಾರಣವೂ ಆಗುತ್ತದೆ ॥ ೧೮ ॥

ಪೀ—ಕರ್ಮ ಮಾಡಬೇಕೆಂಬುವಲ್ಲಿ ಯಸ್ತು ಎಂಬ ಶ್ಲೋಕದಿಂದ ಯುಕ್ತ್ಯಂತರವನ್ನು ಹೇಳುತ್ತಾರೆ ಅದರಲ್ಲಿ ಸಂತೋಷಸ್ತೃಪ್ತಿರಾಪೂರ್ತಿಃ ಇತ್ಯಾದಿಗಳಿಂದ ತೃಪ್ತಿ ಸಂತೋಷ ಶಬ್ದಗಳಿಗೆ ಒಂದೇ ಅರ್ಥವಿರುವುದರಿಂದ ಆತ್ಮತೃಪ್ತಃ ಆತ್ಮನ್ಯೇವ ಚ ಸಂತುಷ್ಟಃ ಎಂದು ಪುನರುಕ್ತವಾಯಿತೆಂದರೆ-

ತಾ ॥ (೧) ತೃಪ್ತಿಸಂತೋಷಶಬ್ದಯೋಃ ಪರ್ಯಾಯತ್ವೇಽಪಿ ಪರಮಾತ್ಮನಾ ತೃಪ್ತಃ ಪರಮಾತ್ಮನಿ ತೃಪ್ತ ಇತಿ ವಿಶೇಷಃ ॥ (೨) ವಿಷ್ಣುಪ್ರಸಾದಾದ್ರತಿಮಾಂಸ್ತೃಪ್ತೋ ವಿಷ್ಣುಪ್ರಸಾದತಃ । ವಿಷ್ಣಾವೇವಾತಿತೃಪ್ತಶ್ಚ ಮುಕ್ತೋಽಸೌ ವಿಧ್ಯಗೋಚರ ಇತ್ಯಾಗ್ನೇಯೇ॥ (೩) ರತಿರಾನಂದ ಉದ್ದಿಷ್ಟಸ್ತೃಪ್ತಿಸ್ತು ಕೃತಕೃತ್ಯತಾ । ಪ್ರೀತಿಸ್ತು ದ್ವಿವಿಧಃ ಸ್ನೇಹಃ ಕರ್ಮಜೋ ನಿಜ ಏವ ಚೇತಿ ಶಬ್ದನಿರ್ಣಯೇ ॥ (೪) ಸಂತೋಷಸ್ತೃಪ್ತಿರಾಪೂರ್ತಿಃ ಪ್ರೀತಿಃ ಪರ್ಯಾಯವಾಚಕಾ ಇತ್ಯಭಿಧಾನಂ ॥ ೧೭,೧೮ ॥

ಅ ॥ (೧) ತೃಪ್ತಿ ಸಂತೋಷ ಶಬ್ದಗಳು ಪರ್ಯಾಯಗಳಾದಾಗ್ಯೂ ಪರಮಾತ್ಮನಾ ತೃಪ್ತಃ, ಪರಮಾತ್ಮನಿ ತೃಪ್ತಃ ಎಂದು ವಿಶೇಷಾರ್ಥವುಳ್ಳದ್ದು (೨) (ಹೀಗೆ ಅರ್ಥಕಲ್ಪನೆಗೆ ಪ್ರಮಾಣವೇನೆಂದರೆ) ಶ್ರೀ ವಿಷ್ಣುವಿನ ಅನುಗ್ರಹದಿಂದ ಆನಂದವುಳ್ಳವನು. ವಿಷ್ಣುವಿನ ಅನುಗ್ರಹದಿಂದ ಅನ್ಯತ್ರಅಲಂಬುದ್ಧಿ ಯನ್ನು ಹೊಂದಿದವನು ಪರಮ ಸುಂದರನೂ ಪರಮಾಶ್ಚರ್ಯಸ್ವರೂಪನೂ ನಿರವಧಿಕ ಆನಂದವನ್ನುಣ್ಣಿಸುವವನೂ ಆದ ಶ್ರೀಪರಮಾತ್ಮನಲ್ಲಿಯೇ ಇದ್ದವನಾಗಿ ಆತನ ದರ್ಶನಾದಿರೂಪಸ್ಥಿತಿಯನ್ನು ಹೊಂದಿರುವುದರಿಂದ ಅತ್ಯಂತ ತೃಪ್ತನಾಗಿರುತ್ತಾನೆ. ಮುಕ್ತನು ವಿಧಿಗೆ ವಿಷಯನಲ್ಲ, ಎಂದು ಆಗ್ನೇಯ ಪುರಾಣದಲ್ಲಿದೆ (೩) (ಈಗ ತೃಪ್ತಿ ಸಂತೋಷ ಶಬ್ದಗಳಿಗೇನೇ ಬೇರೆ ಬೇರೆ ಅರ್ಥವಿರುವುದರಿಂದಲೂ ಪುನರುಕ್ತಿಯಿಲ್ಲವೆನ್ನುತ್ತಾರೆ) ರತಿಃ=ಸ್ವರೂಪಭೂತವಾದ ಆನಂದವು, ತೃಪ್ತಿಃ=ಕೃತಕೃತ್ಯತ್ವವು, (ಕರ್ತವ್ಯ ಕರ್ಮವಿಲ್ಲದಿರುವುದು) ಉಪಕಾರಾದಿಗಳಿಂದುಂಟಾಗತಕ್ಕ ಸ್ನೇಹ. ಸ್ವಾಭಾವಿಕ ಸ್ನೇಹ, ಎಂದು ಪ್ರೀತಿಯು ಎರಡು ವಿಧವು, ಎಂದು ಶಬ್ದನಿರ್ಣಯದಲ್ಲಿದೆ (೪) ಸಂತೋಷಃ ತೃಪ್ತಿ ಆಪೂರ್ತಿಃ ಪ್ರೀತಿಃ ಇಷ್ಟು ಪರ್ಯಾಯ ಪದಗಳು (ಇಷ್ಟು ಶಬ್ದಗಳು ಒಂದೇ ಅರ್ಥವುಳ್ಳವುಗಳು) ಎಂದು ಕೋಶವು. ॥ ೧೭, ೧೮ ॥

ಗೀ ॥ ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ ।
ಅಸಕ್ತೋ ಹ್ಯಾಚರನ್ಕರ್ಮ ಪರಮಾಪ್ನೋತಿ ಪೂರುಷಃ ॥ ೧೯ ॥

ಅ ॥ ತಸ್ಮಾತ್=ಅಸಂಪ್ರಜ್ಞಾತ ಸಮಾಧಿಯಿಲ್ಲದಿರುವ ಜ್ಞಾನಿಯು ಅವಶ್ಯವಾಗಿ ಕರ್ಮಗಳನ್ನು ಮಾಡಬೇಕಾದುದರಿಂದ, (ಎಲೋ ಅರ್ಜುನನೇ ನೀನು) ಅಸಕ್ತಃ=ಫಲದಲ್ಲಿ ಸ್ನೇಹವಿಲ್ಲದವನಾಗಿ, ಕಾರ್ಯಂ=ಕ್ಷತ್ರಿಯರಿಗೆ ಅವಶ್ಯವಾಗಿ ಮಾಡಬೇಕಾದ, ಕರ್ಮ=ಯುದ್ಧ ಮೊದಲಾದ ಕರ್ಮವನ್ನು, ಸತತಂ=ನಿರಂತರದಲ್ಲಿಯೂ, ಸಮಾಚರ=ಭಗವಂತನ ಪೂಜಾರೂಪವೆಂದು ತಿಳಿದು ಮಾಡು (ಮುಕ್ತನಿಗೆ ಕರ್ಮದಿಂದ ಪ್ರಯೋಜನವಿಲ್ಲದಿರುವುದರಿಂದ ಹೇಗೆ ಕರ್ಮ ಮಾಡಬೇಕಾಗಿಲ್ಲವೋ, ಹೀಗೆಯೇ

ಮುಮುಕ್ಷುವಿಗೂ ಕರ್ಮದಿಂದ ಪ್ರಯೋಜನವಿಲ್ಲದಿರುವುದರಿಂದ ಕರ್ಮವಿಲ್ಲವೆಂದು ಏಕೆ ಆಗಲಾರದು ಎಂದರೆ) ಪುರುಷಃ=ಮನುಷ್ಯನು, ಅಸಕ್ತಃ=ಫಲದಲ್ಲಿ ಇಚ್ಛೆಯಿಲ್ಲದವನಾಗಿ, ಕರ್ಮ=ಶಾಸ್ತ್ರದಲ್ಲಿ ಹೇಳಿದ ಕರ್ಮವನ್ನು, ಆಚರನ್ ಹಿ=ಮಾಡುವವನಾಗಿಯೇ, (ಜ್ಞಾನಸಂಪಾದನ ಮಾಡಿ) ಪರಂ=ಶ್ರೀಪರಮಾತ್ಮನನ್ನು, ಆಪ್ನೋತಿ=ಹೊಂದುತ್ತಾನೆ

ವಿ || ಆದಕಾರಣ ಮುಕ್ತರು, ಅಸಂಪ್ರಜ್ಞಾತ ಸಮಾಧಿಸ್ಥರು, ಇವರಿಬ್ಬರಿಂದ ಬೇರೆಯವರಿಗೆ ಕರ್ಮದಿಂದ ಫಲವಿದ್ದ ಪ್ರಯುಕ್ತ ವಿಹಿತ ಕರ್ಮವನ್ನು ಮಾಡಲೇ ಬೇಕು || ೧೯ ||

ಟೀ—ತಸ್ಮಾದಸಕ್ತಃ ಎಂಬಲ್ಲಿ ಪರಾಮರ್ಶವಿಷಯವು ತೋರದಿರುವುದರಿಂದ ಅದನ್ನು ತೋರಿಸುತ್ತಾ ವ್ಯಾಖ್ಯಾನ ಮಾಡುತ್ತಾರೆ—

**ಭಾ || ಯತೋಽಸಂಪ್ರಜ್ಞಾತಸಮಾಧೇರೇವ ಕಾರ್ಯಾಭಾವಃ ತಸ್ಮಾತ್ಕರ್ಮ ಸಮಾಚರ || ೧೯ ||**

ಅ || ಯಾವ ಕಾರಣದಿಂದ ಅಸಂಪ್ರಜ್ಞಾತ ಸಮಾಧಿಯುಳ್ಳವನಿಗೇನೇ ಕರ್ತವ್ಯ ಕರ್ಮವಿಲ್ಲವೋ, ಆದುದರಿಂದ (ನೀನು ಅಸಂಪ್ರಜ್ಞಾತ ಸಮಾಧಿಯುಳ್ಳವನಲ್ಲ, ಆದಕಾರಣ) ನಿನಗೆ ಶಾಸ್ತ್ರದಲ್ಲಿ ವಿಹಿತವಾದ ಯುದ್ಧಾದಿ ಕರ್ಮವನ್ನು ಮಾಡು || ೧೯ ||

ಟೀ—ಮುಕ್ತನಿಗೆ ಕರ್ತವ್ಯ ಕರ್ಮವು ಯಾವುದೂ ಇಲ್ಲವೆಂದು ಹೇಳಿ, ತಸ್ಮಾದಸಕ್ತಃ ಎಂದು ಹೇಳಿದೆ ಅದರಲ್ಲಿ ಕರ್ಮವನ್ನು ಮಾಡಲಿಕ್ಕೆ ಹೇತುವನ್ನು ಹೇಳದಿರುವುದರಿಂದ ತಸ್ಮಾತ್ ಎಂಬುದರಿಂದ ಯಾವುದನ್ನು ಇಟ್ಟುಕೊಳ್ಳಬೇಕೆಂದರೆ—

**ತಾ || (೧) ಯಸ್ಮಾದಮುಕ್ತಸ್ಯ ಕಾರ್ಯಮಸ್ತ್ಯೇವ ತಸ್ಮಾದಸಕ್ತಃ || (೨) ಅಸಕ್ತ ಆಚರನ್ನೇವ ಯಸ್ಮಾತ್ಪರಮಾಪ್ನೋತಿ || (೩) ಮುಕ್ತಸ್ಯೈವ ಕಾರ್ಯಂ ನಾಸ್ತೀತ್ಯೇವಕಾರಾರ್ಥೋಽಪಿ ಯಸ್ತ್ವಿತಿ ತು ಶಬ್ದೇನಾವಗತಃ || (೪) ತಸ್ಮಾತ್ಕರ್ಮ ಸಮಾಚರೇತ್ಯುಪಸಂಹಾರವಿರೋಧಶ್ಚಾನ್ಯಥಾ || (೫) ಬ್ರಹ್ಮನಿಷ್ಠಾ ಬ್ರಹ್ಮರತಾ ಬ್ರಹ್ಮಜ್ಞಾನಸುತರ್ಪಿತಾಃ | ಪಾಂಡವಾನಾಂ ಚ ಮುಕ್ತಾನಾಮಂತರಂ ಕಿಂಚಿದೇವ ಹೀತಿ ಭವಿಷ್ಯತ್ಪರ್ವವಚನಾಚ್ಚ ನಾರ್ಜುನಸ್ಯಾಮುಖ್ಯಾಧಿಕಾರಿತಾ || (೬) ಆತ್ಮರತಿರೇವ ಸ್ಯಾದಿತ್ಯೇವಶಬ್ದೇನ ಮುಕ್ತಾನಾಮೇಭ್ಯೋ ವಿಶೇಷೋ ದರ್ಶಿತಃ | ಏಷಾಂ ಕದಾಚಿದ್ದುಃಖಾಭಾಸಸ್ಯಾಪಿ ಭಾವಾತ್ || ೧೯ ||**

ಅ || (೧) ಯಾವ ಕಾರಣದಿಂದ ಅಮುಕ್ತನಿಗೆ ಕರ್ತವ್ಯ ಕರ್ಮವು ಇದ್ದೇ ಇದೆಯೋ, ಆದುದರಿಂದ ಫಲೇಚ್ಛೆಯನ್ನು ಬಿಟ್ಟವನು. (೨) ಫಲೇಚ್ಛೆಯನ್ನು ತೊರೆದವನಾಗಿ ಕರ್ಮವನ್ನು ಮಾಡುವವನಾಗಿಯೇ ಯಾವ ಕಾರಣದಿಂದ ಪರಮಾತ್ಮನನ್ನು ಹೊಂದುತ್ತಾನೋ (ಆದುದರಿಂದ ಅಮುಕ್ತನಿಗೆ ಕರ್ಮದಿಂದ ಪ್ರಯೋಜನವಿದ್ದುದರಿಂದ ಅಮುಕ್ತನಿಗೆ ಕರ್ತವ್ಯಕರ್ಮವು ಇದ್ದೇ ಇದೆ) (ಅಮುಕ್ತನಿಗೆ ಕರ್ತವ್ಯ ಕರ್ಮವು ಇದೆ ಎಂದು ಹೇಳದಿದ್ದುದರಿಂದ ತಸ್ಮಾತ್ ಎಂಬುದರಿಂದ ಅದನ್ನು ಇಟ್ಟುಕೊಳ್ಳುವುದು ಹೇಗೆ ಎಂದರೆ— ಮುಕ್ತನಿಗೇನೇ ಕರ್ತವ್ಯ ಕರ್ಮವು ಇಲ್ಲ ಎಂದು ಹೇಳಿದ್ದರಿಂದ ಅಮುಕ್ತನಿಗೆ ಕರ್ತವ್ಯಕರ್ಮವು ಇದೆ

ಎಂದು ಸಿಗುತ್ತದೆ ) (೩) (ಮುಕ್ತನಿಗೇನೇ ಕರ್ತವ್ಯ ಕರ್ಮವಿಲ್ಲ ಎಂದು ಏವಕಾರವು ಇಲ್ಲದಿರುವುದರಿಂದ **ಅಮುಕ್ತನಿಗೆ ಕರ್ತವ್ಯ ಕರ್ಮವಿದೆ ಎಂದು ಹೇಗೆ ಸಿಗುತ್ತದೆ ಎಂದರೆ)** ಮುಕ್ತನಿಗೇನೇ ಕರ್ತವ್ಯಕರ್ಮ ವಿಲ್ಲ ಎಂಬ ಏವಕಾರದ ಅರ್ಥವು **ಯಸ್ತು** ಎಂಬಲ್ಲಿದ್ದ **ತು** ಶಬ್ದದಿಂದ ತಿಳಿಯುತ್ತದೆ (ಅಂದರೆ—ಏವಕಾರವಿಲ್ಲವಾದರೂ ಏವಕಾರದ ಅರ್ಥವು ತು ಶಬ್ದದಿಂದ ತಿಳಿದು ಬರುವುದರಿಂದ ಅಮುಕ್ತನಿಗೆ ಕರ್ತವ್ಯ ಕರ್ಮವಿದೆ ಎಂದು ಸಿದ್ಧವಾಗುತ್ತದೆ ) (೪) (ಕೆಲವರು **ಯಸ್ತು** ಎಂಬ ವಾಕ್ಯವು ಜ್ಞಾನಿಗಳನ್ನು ಮಾತ್ರ ಹೇಳತಕ್ಕವೆಂದು ಹೇಳುತ್ತಾರೆ ಅದು ಯುಕ್ತವಲ್ಲ ಮತ್ತು **ಯಸ್ತ್ವೇವಾತ್ಮರತೋ ಮುಕ್ತಃ ವಿಷ್ಣುಪ್ರಸಾದಾದ್ರತಿಮಾನ್** ಇದುಮೊದಲಾದ ಸ್ಮೃತಿಗಳಿಂದ ಮುಕ್ತರನ್ನು ಹೇಳತಕ್ಕುದೆಂದು ತಿಳಿಯುವುದರಿಂದ ಜ್ಞಾನಿಗಳಿಗೂ ಕರ್ತವ್ಯ ಕರ್ಮವುಇದೆ, ಎಂದು ಹೇಳಿದೆ ಎಂಬ ಅಭಿಪ್ರಾಯದಿಂದ ದೋಷಾಂತರವನ್ನು ಹೇಳುತ್ತಾರೆ )ಜ್ಞಾನಿ ಸಾಮಾನ್ಯಕ್ಕೆ ಕರ್ಮವಿಲ್ಲವೆಂದಾದರೆ **ತಸ್ಮಾತ್ಕರ್ಮ ಸಮಾಚರ** ಎಂಬ ಉಪಸಂಹಾರ ವಾಕ್ಯವಿರೋಧವು ಬರುವುದು (ಅಂದರೆ ಜ್ಞಾನಿಗಳಿಗೆಲ್ಲಾ ಕಾರ್ಯವಿಲ್ಲವೆಂದಭಿಪ್ರೇತವಾಗಿದ್ದರೆ **ತಸ್ಮಾದಸಕ್ತಃ** ಎಂದು ಉಪಸಂಹಾರ ವಾಕ್ಯದಲ್ಲಿ ಅರ್ಜುನನಿಗೆ ಕರ್ಮವನ್ನು ವಿಧಿಸಿದ್ದು ವಿರುದ್ಧವಾಗುವುದು ಅವನೂ ಜ್ಞಾನಿಯಾಗಿದ್ದಾನೆ ) (೫) (ಅರ್ಜುನನು ಜ್ಞಾನಿಯೆಂಬುವಲ್ಲಿ ಪ್ರಮಾಣವಿಲ್ಲದಿರುವ ಪ್ರಯುಕ್ತ ಅಜ್ಞನಾಗಿದ್ದುದರಿಂದ ಕರ್ಮಾಧಿಕಾರಿಯೇ. ಆದಕಾರಣ ಅರ್ಜುನನಿಗೆ ಕರ್ಮವಿಧಿಸಿದ್ದು ವಿರುದ್ಧವಲ್ಲ, ಎಂದರೆ—) ಪರಬ್ರಹ್ಮನಲ್ಲಿ ಭಕ್ತಿಯುಕ್ತರು. ಬ್ರಹ್ಮಜ್ಞಾನದಿಂದ ಆನಂದವನ್ನು ಹೊಂದಿದವರು, ಬ್ರಹ್ಮಜ್ಞಾನದಿಂದ ವಿಷಯಗಳಲ್ಲಿ ಅಲಂಬುದ್ಧಿ ಇದ್ದವರು ಅಂತಹ ಮುಕ್ತರಿಗೂ ಪಾಂಡವರಿಗೂ ಸ್ವಲ್ಪವೇ ವ್ಯತ್ಯಾಸವು (ಮುಕ್ತರಿಗೆ ಲಿಂಗಶರೀರವಿಲ್ಲ, ಪಾಂಡವರಿಗೆ ಲಿಂಗಶರೀರವಿದೆ ) ಹೀಗೆ ಭವಿಷ್ಯತ್ಪರ್ವದ ವಚನದಿಂದಲೂ ಅರ್ಜುನನು ಅಮುಖ್ಯಾಧಿಕಾರಿಯು ಅಲ್ಲ (೬) (ಇದು ಮುಕ್ತರನ್ನು ಹೇಳತಕ್ಕುದೆಂದಾದರೂ ಅರ್ಜುನನು ಕರ್ಮಮಾಡಬೇಕೆಂದು ಹೇಳಿದ್ದು ವಿರುದ್ಧವು ಈ ವಚನ ಸಾಮರ್ಥ್ಯದಿಂದಲೇ ಪಾಂಡವರಿಗೆ ಬ್ರಹ್ಮರತತ್ವ ಮೊದಲಾದ ಮುಕ್ತರ ಲಕ್ಷಣವಿದ್ದುದರಿಂದ ಮುಕ್ತರ ಸಾಮ್ಯವಿದೆ ಎಂದರೆ) **ಆತ್ಮರತಿರೇವ ಸ್ಯಾತ್** ಎಂಬಲ್ಲಿದ್ದ ಏವ ಶಬ್ದದಿಂದ ಮುಕ್ತರಿಗೆ ಪಾಂಡವರಿಗಿಂತ **ವಿಶೇಷವು ತೋರಿಸಲ್ಪಟ್ಟದೆ (ಹೇಗೆಂದರೆ)** ಪಾಂಡವರಿಗೆ ಕೆಲವು ವೇಳೆ ದುಃಖಾನುಭವವೂ ಇದೆ ॥೧೯॥

ಪೀ—ಮುಕ್ತಿಯಲ್ಲಿ ಆನಂದಾತಿಶಯವು ಸಿಗುವುದಕ್ಕಾಗಿ ವಿಹಿತಕರ್ಮವನ್ನು ಅವಶ್ಯವಾಗಿ ಮಾಡಬೇಕೆಂಬುವಲ್ಲಿ ಜ್ಞಾನಿಗಳ ಆಚಾರವು ಪ್ರಮಾಣವೆನ್ನುತ್ತಾರೆ—

**ಗೀ ॥ ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।**
**ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥ ೨೦ ॥**

**ಅ ॥** ಜನಕಾದಯಃ=ಜನಕ ಪ್ರಿಯವ್ರತ ಮೊದಲಾದ ಜ್ಞಾನಿಗಳಾದ ರಾಜರು. ಕರ್ಮಣೈವ=ಕರ್ಮದಿಂದ ಕೂಡಿದವರಾಗಿಯೇ, (ಕರ್ಮ ಮಾಡುವವರಾಗಿಯೇ) ಸಂಸಿದ್ಧಿಂ=ಸಂಪೂರ್ಣ ಮೋಕ್ಷವನ್ನು, ಆಸ್ಥಿತಾಃ=ಹೊಂದಿರುತ್ತಾರೆ (ಕೇವಲ ಜ್ಞಾನದಿಂದ ಮೋಕ್ಷವು ಸಿಗುವುದಾದರೂ ಮೋಕ್ಷದಲ್ಲಿ ಆನಂದಾಧಿಕ್ಯವು ಸಿಗುವುದಕ್ಕಾಗಿ ಕರ್ಮ ಮಾಡುತ್ತಾರೆ) (ಜ್ಞಾನಿಗಳು ಕರ್ಮ ಮಾಡುವುದರಿಂದ ಮಾತ್ರ ಕರ್ಮ ಮಾಡಬೇಕೆಂದಲ್ಲ ಮತ್ತೆ ಶ್ರೀಹರಿಯ ಪ್ರೀತಿಯಾಗಿ ಮೋಕ್ಷಕ್ಕೆ ಕಾರಣವಾಗಿ ಲೋಕದಲ್ಲಿದ್ದ ಸಜ್ಜನರೂ ಕರ್ಮ ಮಾಡಬೇಕೆಂದು ತೋರಿಸುವುದಕ್ಕಾಗಿಯೂ ಕರ್ಮವನ್ನು ಮಾಡಬೇಕೆಂದು ಹೇಳುತ್ತಾರೆ.) ಲೋಕಸಂಗ್ರಹ ಮೇವಾಪಿ=ನೀನು ಕರ್ಮ ಮಾಡದಿದ್ದರೆ ಲೋಕದಲ್ಲಿ ಅಜ್ಞಜನರು ಕರ್ಮ ಮಾಡಲಾರರು ಆದಕಾರಣ ಅಜ್ಞಜನರಿಗೆ ಕರ್ಮದಲ್ಲಿ ಪ್ರವೃತ್ತಿ ರೂಪಸಂಗ್ರಹವನ್ನೇ, ಸಂಪಶ್ಯನ್=ನೋಡುವವನಾಗಿ ಕರ್ಮ=ಕರ್ಮವನ್ನು, ಕರ್ತುಂ=ಮಾಡಲಿಕ್ಕೆ, ಅರ್ಹಸಿ=ಯೋಗ್ಯನಾಗಿರುತ್ತಿ

(ಕರ್ಮವನ್ನು ಅವಶ್ಯವಾಗಿ ಮಾಡು.) (ಜನರನ್ನು ಕರ್ಮ ಮಾಡುವುದರಲ್ಲಿ ಪ್ರವರ್ತಿಸಿದ್ದರಿಂದ ಶ್ರೀಹರಿಗೆ ಪ್ರೀತಿಯು. ಮೋಕ್ಷದಲ್ಲಿ ಸುಖಾತಿಶಯವು) ॥ ೨೦ ॥

ಪೀ—ಕರ್ಮವೇ ಮೋಕ್ಷಕ್ಕೆ ಸಾಧನವೆಂದು ಹೇಳುತ್ತದೆಂಬ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುತ್ತಾ ಕರ್ಮಣೈವ ಎಂಬುದರ ತಾತ್ಪರ್ಯ ಹೇಳುತ್ತಾರೆ—

**ಭಾ ॥ (೧) ಆಚಾರೋಽಪ್ಯಸ್ತೀತ್ಯಾಹ । ಕರ್ಮಣೈವೇತಿ । ಕರ್ಮಣಾ ಸಹ ಕರ್ಮ ಕುರ್ವಂತ ಏವೇತ್ಯರ್ಥಃ ॥ (೨) ಕರ್ಮ ಕೃತ್ವೈವ ತತೋ ಜ್ಞಾನಂ ಪ್ರಾಪ್ಯೇತಿ ವಾ । ನ ತು ಜ್ಞಾನಂ ವಿನಾ ॥ (೩) ಪ್ರಸಿದ್ಧಂ ಹಿ ತೇಷಾಂ ಜ್ಞಾನಿತ್ವಂ ಭಾರತಾದಿಷು । ತಮೇವಂ ವಿದ್ವಾನಮೃತ ಇಹ ಭವತೀತ್ಯಾದಿಶ್ರುತಿಭ್ಯಶ್ಚ । ಅತ್ರಾಪಿ ಕರ್ಮಣಾಂ ಜ್ಞಾನಸಾಧನತ್ವೋಕ್ತೇಶ್ಚ ಬುದ್ಧಿಯುಕ್ತಾ ಇತಿ । ಗತ್ಯಂತರಂ ಚ ನಾನ್ಯಃ ಪಂಥಾ ಇತ್ಯಸ್ಯ ನಾಸ್ತಿ । ಇತರೇಷಾಂ ಜ್ಞಾನದ್ವಾರಾಽಪ್ಯವಿರೋಧಃ ॥ ೧ ॥**

ಅ ॥ (೧) ವಿಹಿತಕರ್ಮವನ್ನು ಮಾಡಬೇಕೆಂಬುವ ವಿಷಯದಲ್ಲಿ ಸದಾಚಾರವೂ ಪ್ರಮಾಣವಾಗಿದೆ, ಎಂದು **ಕರ್ಮಣೈವ** ಎಂಬುದರಿಂದ ಹೇಳುತ್ತಾರೆ (ಕರ್ಮದಿಂದಲೇ ಮೋಕ್ಷವು ಎಂಬ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಅರ್ಥ ಹೇಳುತ್ತಾರೆ )ಕರ್ಮದಿಂದ ಕೂಡಿಕೊಂಡು (ಹೀಗೆ ಹೇಳಿದರೆ ಜನಕಾದಿಗಳು ಕರ್ಮದಿಂದೊಡಗೂಡಿಯೇ ಮೋಕ್ಷವನ್ನು ಹೊಂದಿರುತ್ತಾರೆಂದು ವಾಕ್ಯಾರ್ಥವಾಗುವುದು. ಇದು ಯುಕ್ತವಲ್ಲ **ಪುತ್ರೇಣ ಸಹೈವಾಗತಃ ಪಿತಾ** ಮಗನಿಂದ ಕೂಡಿ ತಂದೆಯು ಬಂದನು ಎಂಬುವಲ್ಲಿ ಮಗನೂ ಹೇಗೆ ಬರುತ್ತಾನೋ, ಹಾಗೆಯೇ ಕರ್ಮವೂ ಮೋಕ್ಷವನ್ನು ಹೊಂದಿರುತ್ತದೆಂದು ಅರ್ಥವಾಗಬೇಕಾಗುವುದು, ಎಂದರೆ—) ಕರ್ತವ್ಯಕರ್ಮವನ್ನು ಮಾಡುವವರಾಗಿಯೇ (ಅಂದರೆ **ಸಹೈವ ದಶಭಿಃ ಪುತ್ರೈಃ ಭಾರಂ ವಹತಿ ಗರ್ದಭೀ** ಎಂಬುವಲ್ಲಿ ಹತ್ತು ಮಂದಿ ಮಕ್ಕಳು ಇರುವಾಗ ಕತ್ತೆಯು ತಾನು ಒಂದೇ ಭಾರವನ್ನು ಹೊರುತ್ತದೆಂದು ಹೇಗೆ ಅರ್ಥವೋ, ಹಾಗೆಯೇ ಇಲ್ಲಿಯೂ ಕರ್ಮದಿಂದ ಕೂಡಿಯೇ ಇರುವವರು ಕರ್ಮಮಾಡುವವರೇ ಎಂದರ್ಥವು ಅಂದರೆ ಜ್ಞಾನದಿಂದ ಅಜ್ಞಾನವು ನಾಶವಾದಾಗ ಸಂಪೂರ್ಣ ಅನಿಷ್ಟನಿವೃತ್ತಿಯಾಗುತ್ತದೆ ಸ್ವರೂಪಸುಖವೂ ಅಭಿವ್ಯಕ್ತವಾಗುತ್ತದೆ ಜ್ಞಾನವು ಹುಟ್ಟಿದ ಮೇಲೆ ಮಾಡಿದ ನಿವೃತ್ತಕರ್ಮದಿಂದ ಶ್ರೀಹರಿಯು ಸಂತುಷ್ಟನಾಗಿ ಜ್ಞಾನದಿಂದ ಅಭಿವ್ಯಕ್ತವಾಗದೆಯೂ ಇರುವ ಸ್ವರೂಪ ಸುಖವನ್ನು ವ್ಯಕ್ತಪಡಿಸುತ್ತದೆ, ಆದಕಾರಣ ಕರ್ಮಸಾಹಿತ್ಯವು ಮೋಕ್ಷದಲ್ಲಿ ಆನಂದದ ಅಭಿವೃದ್ಧಿಗೆ ಕಾರಣವು ) (೨) (ಅಥವಾ **ಕರ್ಮಣೈವ** ಎಂಬುದು ಕರಣಾರ್ಥದಲ್ಲಿ ತೃತೀಯಾ ವಿಭಕ್ತಿಯು. **ಲಾಂಗಲೇನ ವಯಂ ಜೀವಾಮಃ** ನೇಗಿಲಿನಿಂದ ನಾವು ಬದುಕುತ್ತೇವೆ ಎಂಬುವಲ್ಲಿ ನೇಗಿಲಿನಿಂದ ಹೂಡಿ ಬತ್ತ ಬೆಳಸಿ ಅದರಿಂದ ಜೀವಿಸುತ್ತೇವೆ ಎಂದು ಲಾಂಗಲವು ಜೀವನಕ್ಕೆ ಪರಂಪರಯಾ ಹೇಗೆ ಕಾರಣವೋ ಹಾಗೆಯೇ) (ಕರ್ಮವನ್ನು ಮಾಡಿಯೇ ಅದರಿಂದ ಜ್ಞಾನವನ್ನು ಸಂಪಾದಿಸಿಯೇ ಮೋಕ್ಷವನ್ನು ಹೊಂದುತ್ತಾರೆ.)ಜ್ಞಾನವಿಲ್ಲದೆ ಕೇವಲ ಕರ್ಮದಿಂದ ಜನಕಾದಿಗಳು ಮೋಕ್ಷವನ್ನು ಹೊಂದಿರುತ್ತಾರೆಂದು ಅರ್ಥವಲ್ಲ. (ಹೀಗೆ ಕರ್ಮವು ಮೋಕ್ಷಕ್ಕೆ ಪರಂಪರಯಾ ಕಾರಣವು ) (ಏಕೆಂದರೆ) ಜನಕ ಪ್ರಿಯವ್ರತ ಮೊದಲಾದ ರಾಜರಿಗೆ ವಿಶೇಷ ಜ್ಞಾನವಿದೆ ಎಂಬುವುದು ಭಾರತ ಮೊದಲಾದವುಗಳಲ್ಲಿ ಪ್ರಸಿದ್ಧವಾಗಿದೆ (ಜನಕಾದಿಗಳು ಜ್ಞಾನಿಗಳಾಗಲಿ. ಮೋಕ್ಷಕ್ಕೆ ಕರ್ಮವೇ ಕಾರಣವೆನ್ನುತ್ತೇವೆ, ಎಂದರೆ) ಶ್ರೀಹರಿಯನ್ನು ಹಿಂದೆ ಹೇಳಿದ ಪ್ರಕಾರ ತಿಳಿದವನು ಮೋಕ್ಷವನ್ನು ಹೊಂದುತ್ತಾನೆ, ಇದುಮೊದಲಾದ ಶ್ರುತಿಗಳಿಂದ (ಜ್ಞಾನವೇ ಕಾರಣವು.) ಗೀತೆಯಲ್ಲಿಯೂ ಕೂಡ **ಕರ್ಮಜಂ ಬುದ್ಧಿಯುಕ್ತಾ ಹಿ** ಇತ್ಯಾದಿಗಳಲ್ಲಿ ಕರ್ಮಗಳು ಜ್ಞಾನಕ್ಕೆ ಸಾಧನ

ಗಳೆಂದು ಹೇಳಿದೆ. (ಹೀಗೆ ಮೋಕ್ಷವನ್ನು ಜ್ಞಾನದಿಂದಲೇ ಹೊಂದಬೇಕೆಂಬುವ ವಿಷಯದಲ್ಲಿ ತಮೇವಂ **ವಿದ್ವಾನ್** ಇದುಮೊದಲಾದ ಆಗಮಗಳು ಇವೆಯೋ, ಹಾಗೆಯೇ ಮೋಕ್ಷವನ್ನು ಕರ್ಮದಿಂದಲೇ ಹೊಂದಬೇಕೆಂಬುವ ವಿಷಯದಲ್ಲಿ **ಅಪಾಮ ಸೋಮಮಮೃತಾ ಅಭೂಮ** ಇದುಮೊದಲಾದ ಆಗಮಗಳೂ ಇವೆ ಆದಕಾರಣ ನಿರ್ಣಯವು ಹೇಗೆ? ಎಂದರೆ-) **ನಾನ್ಯಃ ಪಂಥಾ** ಎಂಬುದಕ್ಕೆ ಬೇರೆ ರೀತಿ ಅರ್ಥಹೇಳಲಿಕ್ಕೆ ಸಾಧ್ಯವಿಲ್ಲ. **ಅಪಾಮ ಸೋಮ** ಇತ್ಯಾದಿಗಳಿಗೆ ಕರ್ಮವು ಜ್ಞಾನವನ್ನು ಹುಟ್ಟಿಸಿ ಮೋಕ್ಷಕ್ಕೆ ಸಾಧನವೆಂದು ಇಟ್ಟುಕೊಂಡರೆ ವಿರೋಧವಿಲ್ಲ.(ಅಂದರೆ **ನಾನ್ಯಃ ಪಂಥಾ** ಎಂಬುದು ನಿರವಕಾಶ ಪ್ರಮಾಣವು. **ಅಪಾಮ ಸೋಮ** ಎಂಬುದು ಸಾವಕಾಶ ಪ್ರಮಾಣವು. ಕರ್ಮದಿಂದ ಜ್ಞಾನವುಂಟಾಗಿ ಅದರಿಂದ ಮೋಕ್ಷವೆಂದಂಗೀಕರಿಸಿದರೂ ವಿರೋಧವಿಲ್ಲ ॥ ೧ ॥

**ಪೀ**—**ಬ್ರಹ್ಮಜ್ಞಾನೇನ ವಾ ಮುಕ್ತಿಃ** ಇದುಮೊದಲಾದ ಕರ್ಮದಿಂದಲೇ ಮೋಕ್ಷವು ಲಭಿಸುತ್ತದೆಂದು ಹೇಳುವ ವಾಕ್ಯಗಳಲ್ಲಿ ಬ್ರಹ್ಮಜ್ಞಾನಕ್ಕೆ ಸಮಫಲವುಳ್ಳದ್ದೆಂದು ತೀರ್ಥಸ್ನಾನಾದಿಗಳನ್ನು ಹೇಳಿದ್ರಿಂದ ಅವುಗಳೂ ನಿರವಕಾಶಗಳಾಗಿವೆ ಅದುಕಾರಣ ಪುನಃ ನಿರ್ಣಯವಾಗುವುದೇ ಇಲ್ಲ ಎಂದರೆ— ಅವುಗಳೂ ಸಾವಕಾಶಗಳೇ ಆಗಿವೆ ಎನ್ನುತ್ತಾರೆ—

**ಭಾ ॥ (೧) ಯತ್ರ ಚ ತೀರ್ಥಾದ್ಯೇವ ಮುಕ್ತಿಸಾಧನಮುಚ್ಯತೇ । ಬ್ರಹ್ಮಜ್ಞಾನೇನ ವಾ ಮುಕ್ತಿಃ ಪ್ರಯಾಗಮರಣೇನ ವಾ । ಅಥ ವಾ ಸ್ನಾನಮಾತ್ರೇಣ ಗೋಮತ್ಯಾಂ ಕೃಷ್ಣಸನ್ನಿಧಾವಿತ್ಯಾದೌ । ತತ್ರ ಪಾಪಾದಿಮುಕ್ತಿಃ । ಸ್ತುತಿಪರತಾ ಚ ॥ (೨) ತತ್ರಾಪಿ ಹಿ ಕುತ್ರಚಿದ್ಬ್ರಹ್ಮಜ್ಞಾನಸಾಧನತ್ವಮೇವೋಚ್ಯತೇ । ಅನ್ಯಥಾ ಮುಕ್ತಿಂ ನಿಷಿಧ್ಯ ಬ್ರಹ್ಮಜ್ಞಾನಂ ವಿನಾ ಮುಕ್ತಿರ್ನ ಕಥಂಚಿದಪೀಷ್ಯತೇ । ಪ್ರಯಾಗಾದೇಸ್ತು ಯಾ ಮುಕ್ತಿರ್ಜ್ಞಾನೋಪಾಯತ್ವಮೇವ ಹೀತ್ಯಾದೌ ॥ (೩) ನ ಚ ತೀರ್ಥಸ್ತುತಿವಾಕ್ಯಾನಿ ತತ್ಪ್ರಸ್ತಾವೇಽಪ್ಯುಕ್ತಂ ಜ್ಞಾನನಿಯಮಂ ಘ್ನಂತಿ । ಯಥಾ ಕಂಚಿದ್ಧಕ್ಷಂ ಭೃತ್ಯಂ ಪ್ರತ್ಯುಕ್ತಾನ್ಯಯಮೇವ ಹಿ ರಾಜಾ ಕಿಂ ರಾಜ್ಞೇತ್ಯಾದೀನಿ ॥ (೪) ಯಥಾಽಽಹ ಭಗವಾನ್ । ಯಾನಿ ತೀರ್ಥಾದಿವಾಕ್ಯಾನಿ ಕರ್ಮಾದಿವಿಷಯಾಣಿ ಚ । ಸಾವಕಾಶಾನ್ಯೇವ ತಾನಿ ಸ್ಯುರಜ್ಞಾನಾಂ ಮೋಹಕಾನಿ ವಾ । ಭವೇನ್ಮೋಕ್ಷಸ್ತು ಮದ್ದೃಷ್ಟೇರ್ನಾನ್ಯಃ ತಸ್ತು ಕಥಂಚನೇತಿ ನಾರದೀಯೇ ॥ (೫) ಅತೋಽಪರೋಕ್ಷಜ್ಞಾನಾದೇವ ಮೋಕ್ಷಃ ಕರ್ಮ ತು ತತ್ಸಾಧನಮೇವ ॥ ೨ ॥ ॥ ೨೦ ॥**

**ಅ** ॥ (೧) ಯಾವ ವಾಕ್ಯಗಳಲ್ಲಿ ತೀರ್ಥಸ್ನಾನಾದಿಗಳೇ ಮೋಕ್ಷಕ್ಕೆ ಸಾಧನಗಳೆಂದು ಹೇಳಲ್ಪಡುತ್ತವೋ, ಅಲ್ಲಿ ಬ್ರಹ್ಮಜ್ಞಾನದಿಂದಲಾಗಲೀ ಮುಕ್ತಿಯು, ಪ್ರಯಾಗ ಮರಣದಿಂದಲಾಗಲೀ ಮುಕ್ತಿಯು, ಅಥವಾ ಶ್ರೀಕೃಷ್ಣನ ಸನ್ನಿಧಿಯಲ್ಲಿ ಗೋಮತೀನದಿಯಲ್ಲಿ ಸ್ನಾನಮಾತ್ರ ಮಾಡಿದ್ರಿಂದಲೇ ಮೋಕ್ಷವು, ಇತ್ಯಾದಿ ಪ್ರಮಾಣಗಳಲ್ಲಿ ಪಾಪಾದಿಗಳಿಂದ ಬಿಡುವಿಕೆಯೇ ಮುಕ್ತಿಶಬ್ದದ ಅರ್ಥವು ಅಥವಾ ಈ ಪ್ರಮಾಣವು ಸ್ತುತಿಪರವೂ ಆಗಿದೆ. (ಅಂದರೆ ಪ್ರಶಸ್ತವಾದ ಮೋಕ್ಷರೂಪ ಫಲಕ್ಕೆ ಸಾಧನವಾಗಿರುವುದರಿಂದ ಶಾಸ್ತ್ರದಲ್ಲಿ ಹೇಳಿದ ತೀರ್ಥಸ್ನಾನಾದಿಗಳೂ ಪ್ರಶಸ್ತವು, ಎಂದು ತೀರ್ಥಸ್ನಾನಾದಿಗಳ ಸ್ತುತಿಯು.) (೨) (ಹೀಗೆ ಕಲ್ಪಿಸಲಿಕ್ಕೆ ಕಾರಣವೇನೆಂದರೆ) ಯಾವ ವಾಕ್ಯಗಳಲ್ಲಿ ತೀರ್ಥಸ್ನಾನ ಮೊದಲಾದವುಗಳು ಮೋಕ್ಷಕ್ಕೆ ಸಾಧನವೆಂದು ಹೇಳಲ್ಪಡುತ್ತವೋ ಆ ಪ್ರಸ್ತಾವದಲ್ಲಿಯೇ ಕೆಲವು ಕಡೆ ಜ್ಞಾನ

ವಿಲ್ಲದೆ ಮೋಕ್ಷವಾಗುವುದಿಲ್ಲವೆಂದು ಹೇಳಿ (ತೀರ್ಥಸ್ನಾನಾದಿಗಳು) ಪರಬ್ರಹ್ಮಜ್ಞಾನಕ್ಕೆ ಸಾಧನಗಳೆಂದೇ ಹೇಳಲ್ಪಟ್ಟಿವೆ. (ಹೇಗೆಂದರೆ) ಬ್ರಹ್ಮಜ್ಞಾನವಿಲ್ಲದೆ ಮೋಕ್ಷವು ಸರ್ವಥಾ ಆಗುವುದಿಲ್ಲ ಪ್ರಯಾಗ ಮರಣ ತೀರ್ಥಸ್ನಾನಾದಿಗಳು ಮೋಕ್ಷಸಾಧನವೆಂದು ಹೇಳಿದ್ದು ಜ್ಞಾನಸಾಧನವೆಂಬ ಅಭಿಪ್ರಾಯದಿಂದಲೇ ಇದುಮೊದಲಾದ ಪ್ರಮಾಣಗಳಲ್ಲಿ (ಕರ್ಮವು ಜ್ಞಾನಕ್ಕೆ ಸಾಧನವೆಂದೇ ಹೇಳಿದೆ) (೩) ಎರಡೂ ವಾಕ್ಯಗಳಾಗಿರುವುದರಿಂದ, ಬ್ರಹ್ಮಜ್ಞಾನೇನ ವಾ ಇತ್ಯಾದಿ ವಾಕ್ಯಗಳಿಂದಲೇ ಬ್ರಹ್ಮಜ್ಞಾನಂ ವಿನಾ ಇತ್ಯಾದಿಗಳಿಗೆ ಬಾಧವೆಂದು ಏಕೆ ಆಗಲಾರದೆಂದರೆ) ತೀರ್ಥಸ್ನಾನಾದಿಗಳನ್ನು ಹೊಗಳುವ ವಾಕ್ಯಗಳು ತೀರ್ಥಸ್ನಾನ ಸ್ತುತಿ ಪ್ರಸ್ತಾವದಲ್ಲಿಯೂ ಹೇಳಲ್ಪಟ್ಟ ಜ್ಞಾನವೇ ಮೋಕ್ಷಕ್ಕೆ ಸಾಧನವೆಂಬ ನಿಯಮವನ್ನು ಬಾಧಿಸುವುದಿಲ್ಲ ಹೇಗೆಂದರೆ—ಸಮರ್ಥನಾದ ಭೃತ್ಯನನ್ನು ಕುರಿತು ಈ ಭೃತ್ಯನೇ ರಾಜನು, ರಾಜನು ಏತಕ್ಕೆ ಇದುಮೊದಲಾದ ಸ್ತುತಿ ಪರ ಸಂದರ್ಭಗಳು. (ಇವನು ರಾಜನಲ್ಲ, ಮತ್ತೆ ಅವನು ಭೃತ್ಯನೇ, ಇದುಮೊದಲಾದ ವಾಕ್ಯಗಳಿಂದ ತಿಳಿಯಲ್ಪಡುವ ಅರಾಜತ್ವ ಭೃತ್ಯತ್ವ ಮೊದಲಾದ ಅರ್ಥಗಳನ್ನು ಹೇಗೆ ಬಾಧಿಸುವುದಿಲ್ಲವೋ, ಹಾಗೆಯೇ ತೀರ್ಥಸ್ತುತಿ ವಾಕ್ಯಗಳೂ ತೀರ್ಥಸ್ತುತಿ ಪ್ರಸ್ತಾವದಲ್ಲಿ ಹೇಳಲ್ಪಟ್ಟ ಜ್ಞಾನವೇ ಮೋಕ್ಷಕ್ಕೆ ಸಾಧನವೆಂಬ ನಿಯಮವನ್ನು ಬಾಧಿಸುವುದಿಲ್ಲ (೪) (ಇದು ಆಗಮಸಿದ್ಧವೂ ಆಗಿದೆ ಎನ್ನುತ್ತಾರೆ) ವೇದವ್ಯಾಸರು ಈ ಪ್ರಮೇಯವನ್ನು ಸ್ಪಷ್ಟವಾಗಿ ಹೇಳಿರುತ್ತಾರೆ. ತೀರ್ಥಸ್ನಾನ, ಕ್ಷೇತ್ರವಾಸ ಪ್ರಯಾಗಮರಣ ಇತ್ಯಾದಿಗಳು ಮೋಕ್ಷಕ್ಕೆ ಸಾಧನಗಳೆಂದು ಹೇಳುವ ವಾಕ್ಯಗಳೂ ಯಜ್ಞ, ದಾನ, ತಪಸ್ಸು, ಧ್ಯಾನ, ಮನನ, ಶ್ರವಣಾದಿಗಳೂ ಮೋಕ್ಷಸಾಧನಗಳೆಂದು ಹೇಳುವ ವಾಕ್ಯಗಳೂ ಯಾವವೋ, ಅವುಗಳು ಸ್ತುತಿಪರಗಳೇ. (ತೀರ್ಥಸ್ನಾನಾದಿಗಳಿಗೆ ಪ್ರಾಶಸ್ತ್ಯವನ್ನು ಬೋಧಿಸುತ್ತವೆ) ಅಥವಾ ಯಥಾರ್ಥಜ್ಞಾನಕ್ಕೆ ಅಯೋಗ್ಯರಾದವರಿಗ ಅಜ್ಞಾನವನ್ನು ಹೊಂದಿಸಿಕೊಡುತ್ತವೆ. ನನ್ನ ದರ್ಶನದಿಂದಲೇ ಮೋಕ್ಷವು, ತೀರ್ಥಸ್ನಾನಾದಿಗಳಿಂದ ಅಥವಾ ಕರ್ಮಾದಿಗಳಿಂದ ಹೇಗೂ ಮೋಕ್ಷವಾಗಲಾರದು, ಎಂದು ನಾರದೀಯ ಪುರಾಣದಲ್ಲಿದೆ (ಹೀಗೆ ಭಗವದ್ವಾಕ್ಯದಿಂದ ಇಂತಹ ವ್ಯವಸ್ಥೆಯು ಸಿದ್ಧವಾಗುತ್ತದೆ) (೫) ಆದಕಾರಣ ಅಪರೋಕ್ಷಜ್ಞಾನದಿಂದಲೇ ಮೋಕ್ಷವು. ಕರ್ಮವು ಜ್ಞಾನಕ್ಕೆ ಸಾಧನವೇ ಆಗಿದೆ || ೨೦ ||

ಗೀ || ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ |
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ || ೨೧ ||

ಅ || ಶ್ರೇಷ್ಠಃ=ಮಹಾನುಭಾವನಾದ ಪುರುಷನು, ಯದ್ಯತ್=ಯಾವುದು ಯಾವುದು ಕರ್ಮವನ್ನು, ಆಚರತಿ=ಮಾಡುತ್ತಾನೋ ಇತರಃ ಜನಃ=ಬೇರೆ ಜನರೂ, ತತ್ತದೇವ=ಆಯಾಯ ಕರ್ಮಗಳನ್ನೇ, ಆಚರತಿ=ಮಾಡುತ್ತಾರೆ, ಸಃ=ಶ್ರೇಷ್ಠನಾದಮನುಷ್ಯನು, ಯತ್ಪ್ರಮಾಣಂ=ಯಾವ ವಾಕ್ಯಾದಿಗಳು ಪ್ರಮಾಣವಾಗಿವುಳ್ಳ ಲೌಕಿಕ ವೈದಿಕಕರ್ಮಗಳನ್ನು, ಕುರುತೇ=ಅಂಗೀಕಾರಮಾಡುತ್ತಾನೋ. ಯಾವ ಪ್ರಮಾಣದಲ್ಲಿ ಹೇಳಿದ ಪ್ರಕಾರ ಜ್ಞಾನಿಯಿರುತ್ತಾನೋ, ತದೇವ=ಪ್ರಮಾಣವುಳ್ಳ ಅಂತಹ ಕರ್ಮವನ್ನೇ, ಲೋಕಃ=ಜನರು, ಅನುವರ್ತತೇ=ಅನುಸರಿಸುತ್ತಾರೆ || ೨೧ ||

ಟೀ—ಜ್ಞಾನದಿಂದಲೇ ಮೋಕ್ಷವು ಸಿದ್ಧಿಸುವುದರಿಂದ ಅಸಕ್ತನಾಗಿ ಕರ್ಮವನ್ನು ಮಾಡುವವನಾಗಿಯೇ ಶ್ರೀಹರಿಯನ್ನು ಹೊಂದುತ್ತಾನೆಂದು ಹೇಳಿದ್ದು ಹೇಗೆ? ಎಂದರೆ ಕರ್ಮಣೈವ ಎಂಬುದರಿಂದ ಸಮಾಧಾನ ಹೇಳುತ್ತಾರೆ—ಅದರಲ್ಲಿ ಕರ್ಮದಿಂದಲೇ ಮೋಕ್ಷವು ಹೇಳಲ್ಪಡುತ್ತದೆ ಎಂಬ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಸ್ಮೃತಿಪ್ರಮಾಣ ಹೇಳಿ ಅದರ ಅರ್ಥ ಹೇಳುತ್ತಾರೆ—

ತಾ॥ ಸತ್ಯೈವ ಕರ್ಮಣಾ ಸಿದ್ಧಿಮಾಸ್ಥಿತಾ ಜನಕಾದಯಃ । ಜ್ಞಾನನಿಷ್ಠಾ ಅಪಿ ತತಃ ಕಾರ್ಯಂ ವರ್ಣಾಶ್ರಮೋಚಿತಮಿತಿ ಚ ॥ ಅಜ್ಞಾನಾಂ ಜ್ಞಾನದಂ ಕರ್ಮ ಜ್ಞಾನಿನಾಂ ಲೋಕಸಂಗ್ರಹಾತ್ । ಅದ್ಧೈವ(ದ್ಧಾ ವಾ) ತುಷ್ಟಿದಂ ಮಹ್ಯಂ ಸಾ ಮುಕ್ತಾನಂದಪೂರ್ತಿದಾ ॥ ೨೦,೨೧ ॥

ಅ ॥ ಜನಕರಾಜನೇ ಮೊದಲಾದವರು, ಜ್ಞಾನದಲ್ಲಿ ಆಸಕ್ತರಾದಾಗ್ಯೂ ಕರ್ಮದಿಂದ ಕೂಡಿಯೇ (ಕರ್ಮ ಮಾಡುವವರಾಗಿಯೇ) ಮೋಕ್ಷವನ್ನು ಹೊಂದಿರುತ್ತಾರೆ. ಆದಕಾರಣ (ಜ್ಞಾನಿಗಳೂ ಕೂಡ) ಆಯಾಯ ವರ್ಣಾಶ್ರಮಗಳಿಗೆ ಯೋಗ್ಯವಾದ ಕರ್ಮವನ್ನು ಮಾಡಬೇಕು ಕರ್ಮವು ಅಜ್ಞಾನಿಗಳಿಗೆ ಜ್ಞಾನವನ್ನು ಕೊಡತಕ್ಕದು ಜ್ಞಾನಿಗಳಿಗೆ ಕರ್ಮವು ಲೋಕದಲ್ಲಿದ್ದ ಜನರು ಕರ್ಮಮಾಡಬೇಕೆಂದು ತೋರಿಸುವುದಕ್ಕಾಗಿ ಕರ್ಮವು ಚೆನ್ನಾಗಿ ನನಗೆ ಸಂತೋಷವನ್ನು ಕೊಡತಕ್ಕದ್ದು. ಆ ತುಷ್ಟಿಯು ಮುಕ್ತರಿಗೆ ಆನಂದ ಸಂಪೂರ್ತಿಯನ್ನು ಕೊಡತಕ್ಕದ್ದು ॥ ೨೦, ೨೧ ॥

ಗೀ ॥ ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।
ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥ ೨೨ ॥

ಅ ॥ ಪಾರ್ಥ=ಅರ್ಜುನನೇ, ಮೇ=ನನಗೆ, ಕಿಂಚನ=ಯಾವುದೊಂದೂ, ಕರ್ತವ್ಯಂ=ಪ್ರಯೋಜನವನ್ನು ಅಪೇಕ್ಷಿಸಿ ಮಾಡಬೇಕಾದ ಕರ್ಮವು, ನಾಸ್ತಿ=ಇಲ್ಲ. (ಏಕೆಂದರೆ) ತ್ರಿಷು ಲೋಕೇಷು=ಮೂರು ಲೋಕಗಳಲ್ಲಿ, ಅನವಾಪ್ತಂ=ಹೊಂದಲ್ಪಡದಿದ್ದುದು, ಅವಾಪ್ತವ್ಯಂ=ಮುಂದೆ ಹೊಂದಲ್ಪಡತಕ್ಕುದು, ನ=ಇಲ್ಲವೇ ಇಲ್ಲ. ಕರ್ಮಣಿ=ಅದೇಪ್ರಮಾಣವೆಂದು ತಿಳಿದುಕೊಂಡು ಅದರಲ್ಲಿ ಹೇಳಿದ ಪ್ರಕಾರ ಕರ್ಮವನ್ನು ಮಾಡಿಕೊಂಡೇ ಇರುತ್ತೇನೆ. ॥ ೨೨ ॥

ಗೀ ॥ ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೨೩ ॥

ಅ ॥ ಅಹಂ=ನಾನು, ಜಾತು=ಯಾವ ಕಾಲದಲ್ಲಿ ಆದರೂ, ಅತಂದ್ರಿತಃ=ಆಲಸ್ಯವಿಲ್ಲದವನಾಗಿ, ಕರ್ಮಣಿ=ಕರ್ಮವಿಷಯದಲ್ಲಿ, ನ ವರ್ತೇಯಂ ಯದಿ=ಪ್ರವೃತ್ತಿ ಮಾಡದಿದ್ದರೆ, ಮಮ=ನನ್ನ, ವರ್ತ್ಮ=ಮಾರ್ಗವನ್ನು, (ಕರ್ಮ ಮಾಡದಿರುವಿಕೆಯನ್ನು) ಸರ್ವಶಃ=ಎಲ್ಲಾ, ಮನುಷ್ಯಾಃ=ಮನುಷ್ಯರು, ಅನುವರ್ತಂತೇ=ಅನುಸರಿಸಿಯಾರು. (ನನ್ನಂತೆ ಕರ್ಮವನ್ನು ಮಾಡದಿರುವರು.) ॥ ೨೩ ॥

ಗೀ ॥ ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಂ ।
ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥ ೨೪ ॥

ಅ ॥ (ಕರ್ಮವನ್ನು ಮಾಡದಿದ್ದರೆ ಕೆಡಕು ಏನಂದರೆ) ಅಹಂ=ನಾನು, ಕರ್ಮ=ಕರ್ಮವನ್ನು, ನ ಕುರ್ಯಾಂ ಚೇತ್=ಮಾಡದೆ ಹೋದರೆ,—ಇಮೇ ಲೋಕಾಃ=ಈ ಜನರು, ಉತ್ಸೀದೇಯುಃ=ಶಾಸ್ತ್ರದಲ್ಲಿ ವಿಹಿತವಾದ ಕರ್ಮಲೋಪದಿಂದ ನರಕಾದ್ಯನರ್ಥವನ್ನು ಹೊಂದಿಯಾರು (ಕರ್ಮಲೋಪವಾದರೆ ಬ್ರಹ್ಮಕ್ಷತ್ರಿಯ ಮೊದಲಾದ ವರ್ಣಗಳಿಗೆ ಭೇದವು ಇಲ್ಲದೆ ಹೋಗುವುದು. ಆದಕಾರಣ) ಸಂಕರಸ್ಯ ಚ=(ಧರ್ಮವು ಕೆಟ್ಟು ಹೋಗಿ ಅಧರ್ಮದಿಂದ ಸ್ತ್ರೀಯರು ದುಷ್ಟರಾಗಿ) ಜಾತಿಸಾಂಕರ್ಯ

ವನ್ನು. ಕರ್ತಾ=ಮಾಡುವವನು, ಸ್ಯಾಂ=ಆಗುವೆನು. ಅಹಂ=ನಾನೇ, ಇಮಾಃ ಪ್ರಜಾಃ=ಈ ಪ್ರಜೆಗಳನ್ನೆಲ್ಲಾ, ಉಪಹನ್ಯಾಂ=ನಾಶಪಡಿಸುವವನಾಗುವೆನು ॥ ೨೪ ॥

ಪೀ—ಅಜ್ಞಾನಿಗಳಂತೆ ಜ್ಞಾನಿಗಳೂ ಕರ್ಮ ಮಾಡಬೇಕೆಂದಾದರೆ ಜ್ಞಾನಿಗಳ ಕರ್ಮಕ್ಕೂ ಅಜ್ಞಾನಿಗಳ ಕರ್ಮಕ್ಕೂ ವಿಶೇಷವಿಲ್ಲದೆ ಹೋಗುವುದು ಎಂದರೆ—

## ಗೀ ॥ ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ । ಕುರ್ಯಾದ್ವಿದ್ವಾಂಸ್ತಥಾಽಸಕ್ತಶ್ಚಿಕೀರ್ಷುರ್ಲೋಕಸಂಗ್ರಹಂ ॥ ೨೫ ॥

ಅ ॥ ಭಾರತ=ಅರ್ಜುನನೇ, ಅವಿದ್ವಾಂಸಃ=ಅಜ್ಞಾನಿಗಳು, ಕರ್ಮಣಿ=ಕರ್ಮದಲ್ಲಿ, ಸಕ್ತಾಃ=ಆಸಕ್ತರಾಗಿ, (ಫಲವನ್ನಿಚ್ಛಿಸುವವರಾಗಿ) ಯಥಾ=ಹೇಗೆ, ಕುರ್ವಂತಿ=ಕರ್ಮ ಮಾಡುತ್ತಾರೋ, ತಥಾ=ಹಾಗೆಯೇ, ವಿದ್ವಾನ್=ಜ್ಞಾನಿಯಾದವನೂ ಕೂಡ, ಅಸಕ್ತಃ=ಫಲೇಚ್ಛೆಯನ್ನು ಬಿಟ್ಟವನಾಗಿ, ಲೋಕಸಂಗ್ರಹಂ=ಲೋಕದಲ್ಲಿದ್ದ ಜನರು ದುರ್ಮಾರ್ಗದಲ್ಲಿ ಹೋಗದಂತೆ ಮಾಡುವಿಕೆಯನ್ನು, ಚಿಕೀರ್ಷುಃ=ಮಾಡಲಿಚ್ಛಿಸಿದವನಾಗಿ, ಕುರ್ಯಾತ್=ಮಾಡತಕ್ಕದು (ಅಂದರೆ - ಜ್ಞಾನಿಗಳು ಫಲದಲ್ಲಿ ಆಸಕ್ತಿಯಿಲ್ಲದೆ ಕರ್ಮ ಮಾಡುತ್ತಾರೆ ಅಜ್ಞಾನಿಗಳು ಫಲದಲ್ಲಿ ಆಸಕ್ತಿಯನ್ನಿಟ್ಟು ಕರ್ಮ ಮಾಡುತ್ತಾರೆ. ಈ ರೀತಿ ವಿಶೇಷವಿದೆ) ॥ ೨೫ ॥

ಪೀ— ಅಜ್ಞರಿಗೆ ಕರ್ಮಮಾಡುವುದರಲ್ಲಿ ಆಸಕ್ತಿಯನ್ನು ಹುಟ್ಟಿಸುವುದಕ್ಕಾಗಿಯೂ ಜ್ಞಾನಿಗಳು ಕರ್ಮ ಮಾಡಬೇಕನ್ನುತ್ತಾರೆ—

## ಗೀ ॥ ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಂ । ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ಯುಕ್ತಸ್ಸಮಾಚರನ್ ॥ ೨೬ ॥

ಅ ॥ ಅಜ್ಞಾನಾಂ=ಭಗವತ್ಸ್ವರೂಪವನ್ನು ತಿಳಿದಿರುವ, ಕರ್ಮಸಂಗಿನಾಂ=ಕರ್ಮಗಳನ್ನು ಮಾಡುವ ವಿಷಯದಲ್ಲಿಯೇ ಅತ್ಯಾಸಕ್ತಿಯುಳ್ಳವರಿಗೆ, ಬುದ್ಧಿಭೇದಂ=ಬುದ್ಧಿವ್ಯತ್ಯಾಸವನ್ನು, ನ ಜನಯೇತ್=ಹುಟ್ಟಿಸಬಾರದು. (ಕರ್ಮವನ್ನು ಮಾಡಬೇಕೆಂಬ ಬುದ್ಧಿಯನ್ನು ತಪ್ಪಿಸಬಾರದು) ವಿದ್ವಾನ್=ಜ್ಞಾನಿಯಾದವನು, ಯುಕ್ತಃ=ಶ್ರೀಪರಮಾತ್ಮನಲ್ಲಿ ಮನಸ್ಸನ್ನು ಇಟ್ಟವನಾಗಿ, (ಶ್ರೀಪರಮಾತ್ಮನಿಗೆ ಪೂಜಾರೂಪವಾಗಿ) ಸಮಾಚರನ್=(ಕರ್ಮಗಳನ್ನು) ಮಾಡುವವರಾಗಿ ಸರ್ವಕರ್ಮಾಣಿ=ಎಲ್ಲಾ ಕರ್ಮಗಳನ್ನು, ಜೋಷಯೇತ್=ಅಜ್ಞಾನಿಗಳನ್ನು ಕರ್ಮ ಮಾಡುವಂತೆ ಮಾಡಬೇಕು. ॥ ೨೬ ॥

ಭಾ ॥ (೧) ಸ ಯದ್ವಾಕ್ಯಾದಿಕಂ ಪ್ರಮಾಣಂ ಕುರುತೇ । (೨) ಯದುಕ್ತಪ್ರಕಾರೇಣ ತಿಷ್ಠತೀತ್ಯರ್ಥಃ ॥ ೨೧—೨೬ ॥

ಅ ॥ (1) (ವಸ್ತುತಃ ಪ್ರಮಾಣಗಳಾಗಿಯೇ ಇರುವ ಯಾವ ವಾಕ್ಯಾದಿಗಳು ಲೋಕದಲ್ಲಿ ಪ್ರಮಾಣಗಳೆಂದು ತಿಳಿಯಲ್ಪಡಲಿಲ್ಲವೋ ಅಂತಹವುಗಳನ್ನು ಪ್ರಮಾಣಗಳೆಂದು ತಿಳಿಸುತ್ತಾರೆ (2) ಯಾವ ಪ್ರಮಾಣಗಳಲ್ಲಿ ಹೇಳಿದ ಪ್ರಕಾರ ಜ್ಞಾನಿಯು ಆಚರಿಸುತ್ತಾನೋ, (ಅದೇ ಪ್ರಮಾಣವೆಂದು ತಿಳಿದು ಅದರಲ್ಲಿ ಹೇಳಿದ ಪ್ರಕಾರ ಜನರು ಕರ್ಮ ಮಾಡುತ್ತಾರೆ) ॥ ೨೧,—೨೬ ॥

ಪೀ – ಜ್ಞಾನಿ ಅಜ್ಞಾನಿಗಳು ಮಾಡುವ ಕರ್ಮಗಳಲ್ಲಿದ್ದ ವೈಲಕ್ಷಣ್ಯವನ್ನು ವಿವರಿಸುತ್ತಾರೆ—

**ಗೀ ॥ ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಽಹಮಿತಿ ಮನ್ಯತೇ ॥ ೨೭ ॥**

ಅ ॥ ಪ್ರಕೃತೇಃ=ಉತ್ಕೃಷ್ಟವಾದ ವ್ಯಾಪಾರವು ಇದ್ದುದರಿಂದ ಪ್ರಕೃತಿ ಎನಿಸಿದ ಶ್ರೀಹರಿಯ, ಗುಣೈಃ=ಇಚ್ಛಾ ಜ್ಞಾನ ಪ್ರಯತ್ನ ಮೊದಲಾದ ಸ್ವತಂತ್ರ ಧರ್ಮಗಳಿಂದ, ಪ್ರಕೃತೇಃ=ಉತ್ತಮ ಮಧ್ಯಮ ಅಧಮ ರೂಪಜೀವರಾಶಿ ಸ್ವಭಾವಕ್ಕೆ, ಗುಣೈಃ=ಅನುಗುಣಗಳಾದ ತತ್ವಜ್ಞಾನ ಮಿಶ್ರಜ್ಞಾನ ಮಿಥ್ಯಾಜ್ಞಾನಾದಿರೂಪಗಳಾದ ಶ್ರೀಹರಿಯ ಅಧೀನಗಳಾದ ಧರ್ಮಗಳಿಂದ, (ಹಾಗೆಯೇ) ಪ್ರಕೃತೇಃ ಗುಣೈಃ= ಜಡಪ್ರಕೃತಿಯ ಕಾರ್ಯಗಳಾದ ಸತ್ವರಜಸ್ತಮೋ ಗುಣಗಳಿಂದ, (ಪ್ರಕೃತಿಯ ವಿಕಾರಭೂತಗಳಾದ ದೇಹ ಇಂದ್ರಿಯ ಅಂತಃಕರಣರೂಪ ಗುಣಗಳಿಂದ) ಕ್ರಿಯಮಾಣಾನಿ=ಮಾಡಲ್ಪಡತಕ್ಕ, ಸರ್ವಶಃ= ಎಲ್ಲಾ, ಕರ್ಮಾಣಿ=ಸಾಧುಕರ್ಮ ಮಿಶ್ರಕರ್ಮ ಕೆಟ್ಟ ಕರ್ಮಗಳನ್ನು ಕುರಿತು, ಅಹಂಕಾರವಿಮೂಢಾತ್ಮಾ=ಅಹಂಕಾರದಿಂದ ಮೋಹಯುಕ್ತವಾದ ಬುದ್ಧಿಯುಳ್ಳವನಾಗಿ, ಕರ್ತಾ=ಸ್ವತಂತ್ರಕರ್ತನು, ಅಹಮಿತಿ=ನಾನೇ ಎಂತೆಂದು, ಮನ್ಯತೇ=ತಿಳಿಯುತ್ತಾನೆ

ವಿ ॥ ಸರ್ವಸ್ವತಂತ್ರಕರ್ತನಾದ ಶ್ರೀಹರಿಯು ತನ್ನ ಜ್ಞಾನ ಇಚ್ಛೆ ಮೊದಲಾದವುಗಳಿಂದ ಮೂರು ವಿಧ ಜೀವರ ಸ್ವಭಾವವನ್ನನುಸರಿಸಿ ಪ್ರಕೃತಿವಿಕಾರಗಳಾದ ಜೀವರ ಇಂದ್ರಿಯಗಳಿಂದ ಪ್ರಕೃತಿಕಾರ್ಯವಾದ ಸತ್ವ ಮೊದಲಾದ ಗುಣರೂಪವಾದ ಉಪಾದಾನ ಕಾರಣದಿಂದ ಮಾಡಲ್ಪಡತಕ್ಕ ಕರ್ಮಗಳನ್ನು ನಾನೇ ಸ್ವತಂತ್ರವಾಗಿ ಮಾಡಿದವನೆಂದು ಅಜ್ಞಜನರು ತಿಳಿದುಕೊಳ್ಳುತ್ತಾರೆ ॥ ೨೭ ॥

ಪಿ—ಪ್ರಕೃತೇಃ ಕ್ರಿಯಮಾಣಾನಿ ಎಂಬ ಎರಡು ಶ್ಲೋಕಗಳಿಗೆ ಸಂಗತಿಯು ಸ್ಫುಟವಾಗಿ ಇಲ್ಲದಿರುವುದರಿಂದ ಅವುಗಳ ತಾತ್ಪರ್ಯ ಹೇಳುತ್ತಾರೆ—

**ಭಾ ॥ (೧) ವಿದ್ವದವಿದುಷೋಃ ಕರ್ಮಭೇದಮಾಹ । ಪ್ರಕೃತೇರಿತಿ ॥ (೨) ಪ್ರಕೃತೇರ್ಗುಣೈರಿಂದ್ರಿಯಾದಿಭಿಃ । (೩) ಪ್ರಕೃತಿಮಪೇಕ್ಷ್ಯ ಗುಣಭೂತಾನಿ ಹಿ ತಾನಿ ॥ (೪) ತತ್ಸಂಬಂಧೀನಿ ಚ ॥ (೫) ನ ಹಿ ಪ್ರತಿಬಿಂಬಸ್ಯ ಕ್ರಿಯಾ ॥ ೨೭ ॥**

ಅ ॥ (೧) ಜ್ಞಾನಿಗಳೂ ಅಜ್ಞಾನಿಗಳೂ ಮಾಡುವ ಕರ್ಮಗಳ ವೈಲಕ್ಷಣ್ಯವನ್ನು ಪ್ರಕೃತೇಃ ಎಂಬ ಶ್ಲೋಕದಿಂದ ವಿವರಿಸುತ್ತಾರೆ (೨) (ಗುಣಶಬ್ದಕ್ಕೆ ಅನೇಕಾರ್ಥಗಳಿದ್ದುದರಿಂದ ಪ್ರಕೃತ ಹೇಳಲಿಷ್ಟವಾದ ಅರ್ಥವನ್ನು ಹೇಳುತ್ತಾರೆ) ಪ್ರಕೃತಿಯ ಗುಣಗಳಾದ ಇಂದ್ರಿಯ ಶರೀರ ಮನಸುಗಳಿಂದ (೩) (ಇಂದ್ರಿಯ ಮೊದಲಾದವುಗಳು ದ್ರವ್ಯಗಳಾಗಿರುವುದರಿಂದ ಅವುಗಳು ಪ್ರಕೃತಿಯ ಗುಣಗಳು ಎಂಬುವುದು ಹೇಗೆ ಕೂಡುತ್ತದೆ? ಎಂದರೆ) ಪ್ರಕೃತಿಗಿಂತ ಆ ಇಂದ್ರಿಯಾದಿಗಳು ಅಪ್ರಧಾನಗಳಾಗಿವೆ (೪) (ಪ್ರಕಾರಾಂತರದಿಂದಲೂ ಅದರ ಅರ್ಥ ಹೇಳುತ್ತಾರೆ) ಇಂದ್ರಿಯಾದಿಗಳು ಪ್ರಕೃತಿಕಾರ್ಯಗಳೂ ಆಗಿವೆ. (೫) (ಜೀವನಿಗೂ ಕರ್ತೃತ್ವವಿದ್ದ ಪ್ರಯುಕ್ತ ಅಹಂಕಾರವಿಮೂಢಾತ್ಮಾ ಕರ್ತಾಽಹಂ ಎಂದದ್ದು ಹೇಗೆ? ಎಂದರೆ) ಪ್ರತಿಬಿಂಬಕ್ಕೆ ಸ್ವತಂತ್ರವಾಗಿ ಕ್ರಿಯೆಯು ಇಲ್ಲವಷ್ಟೆ ॥ ೨೭ ॥

ಪೀ—ಹೀಗೆ ಅಜ್ಞಾನಿಯು ಮಾಡುವುದಾದರೆ ಜ್ಞಾನಿಯು ಹೇಗೆ ಮಾಡುತ್ತಾನೆಂದರೆ—

**ಗೀ ॥ ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।**
**ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥ ೨೮ ॥**

ಅ || ಮಹಾಬಾಹೋ=ಅರ್ಜುನನೇ, ಗುಣಕರ್ಮವಿಭಾಗಯೋಃ=ಇಚ್ಛೆ ಮೊದಲಾದ ಭಗವದ್ಗುಣಗಳೂ, ಸತ್ವ ಮೊದಲಾದ ಪ್ರಕೃತಿಗುಣಗಳೂ, ಪ್ರಕೃತಿಯ ವಿಕಾರಗಳಾಗಿ ಪ್ರಕೃತಿಯ ಉಪಸರ್ಜನಗಳಾದ ಚಕ್ಷುರಾದಿ ಇಂದ್ರಿಯ, ಶರೀರ, ಮನಸ್ಸು ಇವುಗಳ ವಿಭಾಗವೂ, ಶ್ರೀವಿಷ್ಣುವಿಗೇನೇ ಸ್ವತಂತ್ರ ಕರ್ತೃತ್ವವು, ಜೀವರಿಗೆ ಶ್ರೀವಿಷ್ಣುವಿನ ಅಧೀನವಾಗಿ ಕರ್ತೃತ್ವವು, ಪ್ರಕೃತಿಗೆ ವಿಕಾರರೂಪ ಕರ್ತೃತ್ವವು, ಹೀಗೆ ಕರ್ಮ ವಿಭಾಗವೂ, ಇಂತಹ ಗುಣವಿಭಾಗಗಳ ಮತ್ತು ಕರ್ಮವಿಭಾಗಗಳ, ತತ್ವವಿತ್ತು=ಯಾಥಾರ್ಥ್ಯವನ್ನು ತಿಳಿದ ಜ್ಞಾನಿಯಾದರೂ, ಗುಣಾಃ=ಶ್ರೀಹರಿಯ ಇಚ್ಛಾದಿಗುಣಗಳು, ಗುಣೇಷು=ಜೀವಸ್ವಭಾವಭೂತ ಕರ್ಮಾದಿಗಳಲ್ಲಿ, ವರ್ತಂತೇ=ಪ್ರೇರಕಗಳಾಗಿ ಇರುತ್ತವೆ ಶ್ರೀಹರಿಯ ಇಚ್ಛಾದಿಗಳನ್ನನುಸರಿಸಿ, ಗುಣಾಃ=ಭಗವದಧೀನಗಳಾದ ಇಂದ್ರಿಯಗಳು, ಗುಣೇಷು=ಶಬ್ದ ಮೊದಲಾದ ವಿಷಯಗಳಲ್ಲಿ, ವರ್ತಂತೇ=ಇರುತ್ತವೆ ಇತಿ ಮತ್ವಾ=ಆದಕಾರಣ ಜೀವರಿಗೆ ಎಲ್ಲಿಯೂ ಸ್ವಾತಂತ್ರ್ಯವಿಲ್ಲವೆಂದು ತಿಳಿದು, ನ ಸಜ್ಜತೇ=ತಾನೇ ಸ್ವತಂತ್ರಕರ್ತನೆಂಬ ಅಭಿಮಾನದಿಂದ ಸಂಸಾರದಲ್ಲಿ ಮುಳುಗಿದವನು ಆಗುವುದಿಲ್ಲ. (ಅಂದರೆ ಶ್ರೀಹರಿಯೇ ಸರ್ವೋತ್ತಮನೆಂದು ತಿಳಿದು ಮುಕ್ತನಾಗುತ್ತಾನೆ) || ೨೮ ||

ಶಂ—ಇಲ್ಲಿ ಗುಣಗಳ ಮತ್ತು ಕರ್ಮಗಳ ವಿಭಾಗವು —ಎಂದಾದರೆ ವಿಭಾಗಸ್ಯ ಎಂದು ಏಕವಚನವನ್ನು ಹೇಳಬೇಕಿತ್ತು ವಿಭಾಗಯೋಃ ಎಂದು ದ್ವಿವಚನವು ಹೇಗೆ ಕೂಡುತ್ತದೆ ಎಂದರೆ—

**ಭಾ || ಕರ್ಮಭೇದಸ್ಯ ಗುಣಭೇದಸ್ಯ ಚ ತತ್ತ್ವವಿತ್ | ಗುಣಾ ಇಂದ್ರಿಯಾದೀನಿ ಗುಣೇಷು ವಿಷಯೇಷು || ೨೮ ||**

ಅ || ಕರ್ಮಭೇದ ಗುಣಭೇದ ಇವುಗಳ ತತ್ವವನ್ನು ತಿಳಿದವನೆಂದರ್ಥವು. (ಅಂದರೆ ಜೀವ ಈಶ್ವರ, ಪ್ರಕೃತಿ ಎಂಬ ಸಂಬಂಧಿಗಳಿಗೆ ಭೇದವಿದ್ದ ಪ್ರಯುಕ್ತ ಕರ್ಮಗಳಿಗೂ ಇಂದ್ರಿಯಾದಿಗಳಿಗೂ ಭೇದವನ್ನು ಇಲ್ಲಿಟ್ಟುಕೊಳ್ಳಬೇಕೆಂದು ಗ್ರಂಥಾಂತರದಿಂದ ತಿಳಿದುಕೊಳ್ಳಬೇಕು )(ಗುಣಾ ಗುಣೇಷು ಎಂಬ ಎರಡು ಪದಗಳ ಅರ್ಥವನ್ನು ಹೇಳುತ್ತಾರೆ) ಗುಣಾಃ=ಇಂದ್ರಿಯ ಶರೀರ ಮನಸ್ಸುಗಳು, ವಿಷಯೇಷು=ಶಬ್ದ ಮೊದಲಾದ ವಿಷಯಗಳಲ್ಲಿ.

ವಿ || (1) ಶ್ರೀವಿಷ್ಣುವಿಗೆ ಸರ್ವಸ್ವತಂತ್ರ ಕರ್ತೃತ್ವವು ಜೀವರಿಗೆ ಶ್ರೀವಿಷ್ಣುವಿನ ಅಧೀನವಾಗಿ ತಮಗಿಂತ ಅಧಮರಾದವರ ಕರ್ತೃತ್ವವು ಪ್ರಕೃತಿಗೆ ವಿಕಾರರೂಪ ಕರ್ತೃತ್ವವು ಹೀಗೆ ಕರ್ಮಭೇದವು (2) ಬ್ರಹ್ಮ ಮೊದಲಾದ ಜೀವರ ಇಂದ್ರಿಯಗಳೂ ಶರೀರವೂ ಶ್ರೀಹರಿಯಿಂದಲೇ ಪ್ರೇರಿಸಲ್ಪಡತಕ್ಕವುಗಳು ಆದಕಾರಣ ಶ್ರೀಹರಿಗೇನೇ ಗುಣಭೂತಗಳಾಗಿವೆ ಕೆಲವು ಕಡೆ ಶ್ರೀಹರಿಯು ಜೀವರಿಂದ ಪ್ರೇರೇಪಿಸುವುದರಿಂದ ಜೀವರಿಗೂ ಗುಣಭೂತಗಳಾಗಿವೆ ಅವುಗಳೇ ಪ್ರಕೃತಿಯಿಂದ ಉಪಚಿತಗಳಾಗುವುದರಿಂದ ಪ್ರಕೃತಿಗೂ ಗುಣಭೂತಗಳಾಗಿವೆ ಹೀಗೆ ಗುಣಭೇದವು (3) ಶ್ರೀಹರಿಯಿಂದಲೇ ಪ್ರೇರಿಸಿಕೊಳ್ಳಲ್ಪಟ್ಟ ಇಂದ್ರಿಯ ಮೊದಲಾದ ಗುಣಗಳು ಶ್ರೀಹರಿಯ ಅಧೀನಗಳಾದ ಶಬ್ದಾದಿಗುಣಗಳಲ್ಲಿವೆ, ಎಂದು ತಿಳಿದು ಸಂಸಾರದಲ್ಲಿ ಮಗ್ನನಾಗುವುದಿಲ್ಲ (4) ಕರ್ಮಗಳಿಗೂ ಸ್ವತಂತ್ರವಾಗಿ ಶ್ರೀಹರಿಯೇ ಕರ್ತನೆಂದು ಜ್ಞಾನವಿದ್ದರೆ ಜೀವರಿಗೆ ನಾವು ಸ್ವತಂತ್ರರೆಂಬ ಅಭಿಮಾನವು ಬರುವುದಿಲ್ಲ (5) ಹೀಗೆ ಗುಣಕರ್ಮಗಳ ವಿಭಾಗವನ್ನು ತಿಳಿದವನು ಇಂದ್ರಿಯಗಳಲ್ಲಿ ಸ್ನೇಹರೂಪ ಅಭಿಮಾನವುಳ್ಳವನೂ, ಕರ್ಮಾಭಿಮಾನವುಳ್ಳವನೂ ಆಗುವುದಿಲ್ಲ (6) ಜೀವರೇ ಮೊದಲಾದವರು ಭಿನ್ನಭಿನ್ನರಾಗಿರುವುದರಿಂದ ಅವರವರ ಗುಣಗಳೂ ಕರ್ಮಗಳೂ ಬಹಳ ಇವೆ ಆದಕಾರಣ ಗುಣರಾಶಿ ಕರ್ಮರಾಶಿ ಎಂದು ಎರಡು ರಾಶಿಗಳೆಂದು ಇಟ್ಟುಕೊಂಡು ವಿಭಾಗಯೋಃ ಎಂದು ದ್ವಿವಚನವು. || ೨೮ ||

ಪೀ— ತಾವೇ ಸ್ವತಂತ್ರರೆಂದು ತಿಳಿದ ಅಜ್ಞಾನಿಗಳಿಗೆ ಜ್ಞಾನಿಗಳು ಬೋಧಿಸಬೇಕೆಂದರೆ—

**ಗೀ || ಪ್ರಕೃತೇರ್ಗುಣಸಮ್ಮೂಢಾಃ ಸಜ್ಜಂತೇ ಗುಣಕರ್ಮಸು |**
**ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ || ೨೯ ||**

ಅ || ಪ್ರಕೃತೇಃ ಶ್ರೀಹರಿಯ (ಸ್ವತಂತ್ರ ಕರ್ತೃಗಳಾದ) ಇಚ್ಛಾದಿ ಗುಣಗಳಿಂದ, ಜಡಭೂತವಾದ ಪ್ರಕೃತಿಯ ಕಾರ್ಯಭೂತಗಳಾದ ಸತ್ವಾದಿಗುಣಗಳಿಂದ ಗುಣಸಮ್ಮೂಢಾಃ= ಜಡಪ್ರಕೃತಿಯ ವಿಕಾರ ಭೂತಗಳಾದ ಇಂದ್ರಿಯಗಳಲ್ಲಿ ನನ್ನದ್ದೇ ಈ ಇಂದ್ರಿಯಗಳು ಎಂದು ಅವುಗಳಲ್ಲಿ ಸ್ವಾತಂತ್ರ್ಯಾಭಿಮಾನ ವುಳ್ಳವರು, ಗುಣಕರ್ಮಸು= ಶಬ್ದಾದಿವಿಷಯಗಳಲ್ಲಿ ಅತಿಶಯ ಸ್ನೇಹವುಳ್ಳವರಾಗಿರುತ್ತಾರೆ ತಮ್ಮ ಕ್ರಿಯೆಗಳಲ್ಲಿಯೂ ಸ್ವಾತಂತ್ರ್ಯ ಭ್ರಮೆಯುಳ್ಳವರಾಗಿರುತ್ತಾರೆ ತಾನ್= ಅಂತಹ, ಅಕೃತ್ಸ್ನವಿದಃ= ಗುಣಕರ್ಮಗಳ ವಿಭಾಗಗಳನ್ನು ತಿಳಿಯದಿರುವ, ಮಂದಾನ್= ಅಯೋಗ್ಯ ಜನರನ್ನು, ಕೃತ್ಸ್ನವಿತ್= ತಾನು ಸಂಪೂರ್ಣ ತಿಳಿದುಕೊಂಡ ಜ್ಞಾನಿಯು, ನ ವಿಚಾಲಯೇತ್= ಗುಣಕರ್ಮಗಳಲ್ಲಿ ಸಂಬಂಧವನ್ನು ಬಿಡಿಸಿ ಸನ್ಮಾರ್ಗದಲ್ಲಿ ಪ್ರೇರೇಪಿಸಬಾರದು || ೨೯ ||

ಪೀ— ಪ್ರಕೃತೇರ್ಗುಣಸಮ್ಮೂಢಾಃ ಎಂಬುವಲ್ಲಿ ಗುಣಶಬ್ದಕ್ಕೆ ಹೇಳಲಿಷ್ಟವಾದ ಅರ್ಥವನ್ನು ಹೇಳುತ್ತಾ ವಿಗ್ರಹವನ್ನು ತೋರಿಸುತ್ತಾರೆ—

**ಭಾ || (೧) ಪ್ರಕೃತೇರ್ಗುಣೇಷು ಇಂದ್ರಿಯಾದಿಷು ಸಮ್ಮೂಢಾಃ | ಇಂದ್ರಿಯಾದ್ಯಭಿಮಾನಾದ್ವಿಷಯಾದಿಸಂಗಃ || (೨) ಗುಣಕರ್ಮಸು ವಿಷಯೇಷು ಕರ್ಮಸು ಚ || (೩) ಶಬ್ದಾದ್ಯಾ ಇಂದ್ರಿಯಾದ್ಯಾಶ್ಚ ಸತ್ತ್ವಾದ್ಯಾಶ್ಚ ಶುಭಾನಿ ಚ | ಅಪ್ರಧಾನಾನಿ ಚ ಗುಣಾ ನಿಗದ್ಯಂತೇ ನಿರುಕ್ತಿಗೈರಿತ್ಯಭಿಧಾನಾತ್ | ಸತ್ತ್ವಾದ್ಯಂಗೀಕಾರೇ ಗುಣಾ ಗುಣೇಷ್ವಿತ್ಯಯುಕ್ತಂ ಸ್ಯಾತ್ || ೨೯ ||**

ಅ || (೧) ಪ್ರಕೃತಿಯ ಗುಣಗಳಾದ ಇಂದ್ರಿಯಾದಿಗಳಲ್ಲಿ ತಮ್ಮದ್ದೇ ಎಂದು ಸ್ವಾತಂತ್ರ್ಯಾಭಿಮಾನ ವುಳ್ಳವರು. (ಆದಕಾರಣ ಗುಣಗಳಲ್ಲಿಯೂ ಕರ್ಮಗಳಲ್ಲಿಯೂ ಸ್ವಾತಂತ್ರ್ಯ ಭ್ರಮೆಯುಳ್ಳವರಾಗಿರು ತ್ತಾರೆ.) (ಅದನ್ನು ಸಮರ್ಥಿಸುತ್ತಾರೆ) (ಅಭಿಮಾನವೆಂದರೆ ಇವುಗಳು ನನಗೇನೇ ಸ್ವತಂತ್ರವಾಗಿ ಕರಣಗಳಾಗಿರುತ್ತವೆ ಎಂಬ ಭ್ರಮೆಯು) ಇಂದ್ರಿಯಾದಿಗಳಲ್ಲಿ ತಮ್ಮದೆಂಬ ಅಭಿಮಾನವಿದ್ದುದ ರಿಂದ ಶಬ್ದ ಮೊದಲಾದ ಇಂದ್ರಿಯಾರ್ಥಗಳಲ್ಲಿ ಸ್ನೇಹ, ದ್ವೇಷ ಮೊದಲಾದುದು. ಕ್ರಿಯಾರೂಪ ಕರ್ಮ ಗಳಲ್ಲಿ ನಾನೇ ಈ ಕರ್ಮಗಳನ್ನು ಮಾಡುವವನು, ಮತ್ತೊಬ್ಬನು ಕರ್ತನಿಲ್ಲ, ಎಂಬ ಸ್ವಾತಂತ್ರ್ಯಭ್ರಮವು. (೨) (ಗುಣಾನಾಂ ಕರ್ಮಾಣಿ ಎಂದು ಷಷ್ಠೀತತ್ಪುರುಷವೆಂದು ಕೆಲವರು ವ್ಯಾಖ್ಯಾನ ಮಾಡಿದ್ದು ಅಯುಕ್ತ ವೆನ್ನುತ್ತಾರೆ) (ಗುಣಾಶ್ಚ ಕರ್ಮಾಣಿ ಚ ಎಂದು ದ್ವಂದ್ವಸಮಾಸವು) ಗುಣಕರ್ಮಸು= ಇಂದ್ರಿಯ ಗಳಲ್ಲಿಯೂ ವಿಷಯಗಳಲ್ಲಿಯೂ ಎಂದರ್ಥವು. (೩) (ಗುಣಶಬ್ದಕ್ಕೆ ಹೀಗೆ ಅನೇಕಾರ್ಥಗಳು ಹೇಗೆ ಸಿದ್ಧಿಸುತ್ತವೆ ಎಂದರೆ)ಶಬ್ದ ಸ್ಪರ್ಶ ರೂಪ ರಸಗಂಧಗಳೂ, ಇಂದ್ರಿಯ ಶರೀರ ಮನಸ್ಸುಗಳೂ, ಸತ್ವ ರಜಸ್ತ ಮೋಗುಣಗಳೂ, ಸೌಖ್ಯ ಸೌಶೀಲ್ಯ ಸೌಕುಮಾರ್ಯಾದಿಗಳೂ, ಅಪ್ರಧಾನಗಳೂ, ಇವು ಗುಣಶಬ್ದಾರ್ಥ ಗಳೆಂದು ಶಬ್ದಗಳ ನಿರ್ವಚನವನ್ನು ತಿಳಿದ, ಶಬ್ದಾರ್ಥತತ್ವಜ್ಞಾನಿಗಳು ಹೇಳುತ್ತಾರೆ, ಎಂದು ಕೋಶವು. (ಗುಣ ಶಬ್ದಕ್ಕೆ ಅನೇಕಾರ್ಥಗಳಲ್ಲಿ ಶಕ್ತಿಯಿದ್ದರೂ ಒಂದೇ ಅರ್ಥವನ್ನು ಇಟ್ಟುಕೊಳ್ಳುವುದು ಯುಕ್ತ ವಾಗಿದೆ. ಆದಕಾರಣ ಸತ್ವಾದಿಗುಣಗಳನ್ನೇ ಇಟ್ಟುಕೊಳ್ಳಬೇಕು. ಅವುಗಳನ್ನು ಇಟ್ಟುಕೊಂಡರೆ ಸತ್ವಾದಿ

ಗುಣಗಳ ಕಾರ್ಯಗಳಾದ ಶಬ್ದಾದಿಗಳಿಗೂ ಗ್ರಹಣವು ಬರುವುದು ಎಂದರೆ) ಸತ್ವಾದಿಗುಣಗಳನ್ನು ಇಟ್ಟುಕೊಂಡರೆ **ಗುಣಾ ಗುಣೇಷು** ಎಂಬಲ್ಲಿ ಗುಣಾಃ ಎಂದು ಕರ್ತೃತ್ವವೂ ಗುಣೇಷು ಎಂದು ಅಧಾರತ್ವವೂ ವಿರುದ್ಧಗಳಾಗುವವು (ಮುಖ್ಯ ವೃತ್ತಿಯು ಕೂಡುವಾಗ ಅಮುಖ್ಯ ವೃತ್ತಿಯಿಂದ ಇಂದ್ರಿಯಗಳನ್ನು ಇಟ್ಟುಕೊಳ್ಳುವುದು ಸರ್ವಥಾ ಯುಕ್ತವಲ್ಲ. ನಾವು ಹೇಳಿದಂತೆ ಅರ್ಥ ಇಟ್ಟುಕೊಂಡರೆ ಯಾವ ದೋಷಕ್ಕೂ ಅವಕಾಶವಿಲ್ಲ) ॥ ೨೮ ॥

**ಪೀ**—ನನಗೆ ಪ್ರಯೋಜನವಿಲ್ಲದಿದ್ದರೂ ಲೋಕದಲ್ಲಿದ್ದ ಜನರು ಕರ್ಮಮಾಡಿ ಇಷ್ಟಾರ್ಥವನ್ನು ಹೊಂದಬೇಕೆಂದು ಅನುಗ್ರಹಿಸುವುದಕ್ಕಾಗಿ ನಾನು ಕರ್ಮ ಮಾಡುತ್ತೇನೆ ಆದಕಾರಣ ಮುಕ್ತಿಯಲ್ಲಿ ಆನಂದವೃದ್ಧಿಯನ್ನು ಅಪೇಕ್ಷಿಸುವ ಜ್ಞಾನಿಯು ಕರ್ಮಮಾಡಲೇಬೇಕೆಂದು **ನ ಮೇ ಪಾರ್ಥ** (ಶ್ಲೋ ೨೨)ಎಂಬುದರಿಂದ ಹೇಳಿದ್ದಾರೆ ಈ ಅಭಿಪ್ರಾಯವನ್ನು **ಮಮೈವ** ಎಂಬುದರಿಂದ ವಿವರಿಸುತ್ತಾರೆ.

**ತಾ ॥ (೧) ಮಮೈವ ಕೇವಲಂ ನಾಸ್ತಿ ಕೇನಾಪ್ಯರ್ಥಸ್ತಥಾಽಪ್ಯಹಂ । ಕರ್ಮಕೃಲ್ಲೋಕರಕ್ಷಾಯೈ ತಸ್ಮಾತ್ಕುರ್ವೀತ ಮತ್ಪರ ಇತಿ ಕೃಷ್ಣಸಂಹಿತಾಯಾಂ ॥ (೨) ರಕ್ಷಯಾ ವಾಥ ಸೃಷ್ಟ್ಯಾ ವಾ ಸಂಹೃತ್ಯಾದೇರ್ನ ತು ಕ್ವಚಿತ್ । ಅರ್ಥೋ ವಿಷ್ಣೋಸ್ತಥಾಪ್ಯೇಷ ಸ್ವಭಾವಾತ್ಸರ್ವಕರ್ಮಕೃತ್ ॥ (೩) ಮತ್ತೋ ನೃತ್ತಾದಿಕಂ ಯದ್ವತ್ ಕುರ್ಯಾತ್ಸುಖವಿಶೇಷತಃ । ಪರಮಾನಂದರೂಪತ್ವಾತ್ಕುರ್ಯಾದ್ವಿಷ್ಣುಸ್ತಥೈವ ಹ್ಯಿತಿ ಬರ್ಕಶ್ರುತಿಃ ॥ ೨೨—೨೮ ॥**

**ಅ** ॥ ಕೇವಲ ನನಗೇನೇ ಯಾರಿಂದಲೂ ಪ್ರಯೋಜನವಿಲ್ಲ ಆದರೂ ನಾನು ಕೇವಲ ಜಗತ್ತನ್ನು ರಕ್ಷಿಸುವುದಕ್ಕಾಗಿಯೇ ಕರ್ಮವನ್ನು ಮಾಡುತ್ತೇನೆ. ಆದಕಾರಣ ನನ್ನಲ್ಲಿ ಆಸಕ್ತನಾಗಿ ಕರ್ಮಮಾಡಬೇಕು, ಎಂದು ಕೃಷ್ಣಸಂಹಿತೆಯಲ್ಲಿದೆ. (೨) (ಶ್ರೀಹರಿಯು ಪ್ರಯೋಜನವಿಲ್ಲದಿದ್ದರೂ ಜಗದ್ರಕ್ಷಣಾದಿಗಳನ್ನು ಮಾಡುತ್ತಾನೆಂಬುವುದು ಕೂಡುವುದಿಲ್ಲ ಪ್ರಯೋಜನವಿಲ್ಲವಾದರೆ ಪ್ರವೃತ್ತಿಯೇ ಕೂಡಲಾರದು, ಎಂದರೆ-) ಶ್ರೀವಿಷ್ಣುವಿಗೆ ಜಗದ್ರಕ್ಷಣೆಯಿಂದಲಾಗಲೀ, ಜಗತ್ಸೃಷ್ಟಿಯಿಂದಲಾಗಲೀ, ಸಂಹಾರಾದಿಗಳಿಂದಲಾಗಲೀ ಎಲ್ಲಿಯೂ ಹೇಗೂ ಯಾವ ಪ್ರಯೋಜನವೂ ಇಲ್ಲ ಆದರೂ ಶ್ರೀಹರಿಯು ಸ್ವಭಾವದಿಂದಲೇ ಸಮಸ್ತ ಕರ್ಮಗಳನ್ನೂ ಮಾಡುತ್ತಾನೆ (ಶ್ರೀಹರಿಗೆ ಪ್ರಯೋಜನವಿಲ್ಲದಿದ್ದರೂ ಕರ್ತೃತ್ವವು ಸ್ವಭಾವವಾಗಿರುವುದರಿಂದ ಜಗದ್ರಕ್ಷಣ ಮೊದಲಾದ ಸಮಸ್ತ ಕರ್ಮಗಳನ್ನು ಮಾಡುತ್ತಾನೆಂಬುದು ಯುಕ್ತವು.) (೩) (ಹಾಗಾದರೆ ಸ್ವಭಾವತಃ ಪ್ರವೃತ್ತಿಯು ಅಚೇತನಗಳಲ್ಲಿ ಮಾತ್ರ ಕಂಡದೆ ಪ್ರಯೋಜನವಿಲ್ಲದೆ ಚೇತನರಲ್ಲಿ ಪ್ರವೃತ್ತಿಯು ಎಲ್ಲಿಯೂ ಕಾಣದಿರುವುದರಿಂದ ಶ್ರೀಹರಿಗೂ ಪ್ರಯೋಜನೋದ್ದೇಶವಿಲ್ಲದಿರುವುದರಿಂದ ಪ್ರವೃತ್ತಿಯು ಕೂಡಲಾರದೆಂದರೆ) ಮದಭರಿತನು ಸುಖವಿಶೇಷದಿಂದ ಹೇಗೆ ನರ್ತನಾದಿಗಳನ್ನು ಮಾಡುತ್ತಾನೋ, ಹಾಗೆಯೇ ಶ್ರೀವಿಷ್ಣುವು ಪರಮಾನಂದ ಸ್ವರೂಪನಾದುದರಿಂದ ಪ್ರವೃತ್ತಿ ಮಾಡುತ್ತಾನೆ, ಎಂದು ಬರ್ಕಶ್ರುತಿಯು. ॥ ೨೨—೨೮ ॥

**ಪೀ**—ಹೀಗೆ ಅಜ್ಞಾನಿಗಳ ಕರ್ಮಕ್ಕಿಂತ ಜ್ಞಾನಿಗಳ ಕರ್ಮಕ್ಕೆ ವೈಲಕ್ಷಣ್ಯವನ್ನು ಹೇಳಿ ಈಗ ನೀನೂ ಜ್ಞಾನಿಯಾದ ಪ್ರಯುಕ್ತ ಹಾಗೆಯೇ ಕರ್ಮ ಮಾಡಬೇಕೆನ್ನುತ್ತಾರೆ—,

**ಗೀ ॥ ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥ ೩೦ ॥**

ಅ || ಅಧ್ಯಾತ್ಮಚೇತಸಾ=ಸರ್ವೋತ್ತಮನಾದ ಪರಮಾತ್ಮನಾದ ನನ್ನಲ್ಲಿ (ಶ್ರೀಕೃಷ್ಣನಲ್ಲಿ) ಮನಸ್ಸನ್ನಿಟ್ಟು, ನಿರಾಶೀಃ=ಶ್ರೀವಿಷ್ಣುವಿನ ಭಕ್ತಿಜ್ಞಾನಾದಿಗಳಿಗಿಂತ ಇತರ ವಿಷಯಗಳಲ್ಲಿಚ್ಛೆಯಿಲ್ಲದವನೂ, ನಿರ್ಮಮಃ= ನಾನೇ ಎಲ್ಲಾ ಕರ್ಮಗಳನ್ನು ಸ್ವತಂತ್ರವಾಗಿ ಮಾಡುತ್ತೇನೆಂದು ಸ್ವತಂತ್ರ ಕರ್ತೃತ್ವಾಭಿಮಾನವಿಲ್ಲದವನೂ, ಭೂತ್ವಾ=ಆಗಿ, ಸರ್ವಾಣಿ ಕರ್ಮಾಣಿ=ವರ್ಣಾಶ್ರಮೋಚಿತಗಳಾದ ನಿತ್ಯ ನೈಮಿತ್ತಿಕ ಎಲ್ಲಾ ಕರ್ಮಗಳನ್ನು, ಮಯಿ=ನನ್ನಲ್ಲಿ (ಶ್ರೀಕೃಷ್ಣನಲ್ಲಿ) ಸನ್ನ್ಯಸ್ಯ=ಸಮರ್ಪಿಸಿ, (ಅಂದರೆ—ಶ್ರೀಕೃಷ್ಣನೇ ನನ್ನಲ್ಲಿದ್ದು ಎಲ್ಲಾ ಕರ್ಮಗಳನ್ನು ಮಾಡುತ್ತಾನೆ, ಆ ಎಲ್ಲಾ ಕರ್ಮಗಳೂ ಶ್ರೀಕೃಷ್ಣನಿಗೆ ಪೂಜಾರೂಪಗಳೆಂದು ಅನುಸಂಧಾನ ಮಾಡಿಕೊಂಡು ಶ್ರೀಕೃಷ್ಣನಿಗೆ ಸಮರ್ಪಿಸಿ) ವಿಗತಜ್ವರಃ=ದುಃಖವಿಲ್ಲದವನಾಗಿ, ಯುಧ್ಯಸ್ವ=ಯುದ್ಧಮಾಡು || ೩೦ ||

**ಪೀ—ಮಯಿ ಸರ್ವಾಣಿ ಕರ್ಮಾಣಿ** ಎಂಬುದಕ್ಕೆ ಸಂಗತಿಯನ್ನು ತೋರಿಸುತ್ತಾರೆ

**ಭಾ || (೧) ಅತಃ ಸರ್ವಾಣಿ ಕರ್ಮಾಣಿ ಮಯ್ಯೇವ ಸನ್ನ್ಯಸ್ಯ ಭ್ರಾಂತ್ಯಾ ಜೀವೇಽಧ್ಯಾ-**
**ರೋಪಿತಾನಿ ಮಯ್ಯೇವ ವಿಸೃಜ್ಯ ಭಗವಾನೇವ ಸರ್ವಾಣಿ ಕರ್ಮಾಣಿ ಕರೋತೀತಿ।**
**ಮತ್ಪೂಜೇತಿ ಚ || (೨) ಆತ್ಮಾನಮಧಿಕೃತ್ಯ ಯಚ್ಚೇತಸ್ತದಧ್ಯಾತ್ಮಚೇತಃ || (೩)**
**ಸನ್ನ್ಯಾಸಸ್ತು ಭಗವಾನ್ಕರೋತೀತಿ । ನಿರ್ಮಮತ್ವಂ ನಾಹಂ ಕರೋಮೀತಿ || ೩೦ ||**

ಅ || (೧) (ಯಾವ ಕಾರಣದಿಂದ ಜ್ಞಾನಿಗಳ ಕರ್ಮವು ಇಂತಹುದು ಆಗಿದೆಯೋ, ನೀನೂ ಜ್ಞಾನಿಯಾಗಿರುತ್ತೀಯೋ,) ಆದಕಾರಣ ಎಲ್ಲಾ ಕರ್ಮಗಳನ್ನು ನನ್ನಲ್ಲಿಯೇ ಸಮರ್ಪಿಸಿ, ಅಂದರೆ-ಸರ್ವ ಕರ್ಮಗಳನ್ನು ನಾನೇ ಮಾಡಿದವನೆಂಬ ಜೀವರ ಸ್ವಾತಂತ್ರ್ಯ ಭ್ರಮೆಯಿಂದ ತಮ್ಮದ್ದೇ ಎಂದು ಆರೋಪಿತಗಳಾದ ಕರ್ಮಗಳನ್ನು ನನ್ನಲ್ಲಿಯೇ (ಶ್ರೀಕೃಷ್ಣನಲ್ಲಿಯೇ) **ವಿಸೃಜ್ಯ** ಅಂದರೆ—ಶ್ರೀಹರಿಯೇ ನನ್ನಲ್ಲಿದ್ದು ಎಲ್ಲಾ ಕರ್ಮಗಳನ್ನು ಮಾಡುತ್ತಾನೆಂದೂ ಮತ್ತು ಆ ಕರ್ಮಗಳು ಶ್ರೀಕೃಷ್ಣನಿಗೆ ಪೂಜಾರೂಪಗಳೆಂದೂ ತಿಳಿದು ಆ ಕರ್ಮಗಳನ್ನು ನನ್ನಲ್ಲಿ ಸಮರ್ಪಿಸುವುದು ಇದು ಕರ್ಮಗಳ ಸನ್ನ್ಯಾಸವೆನ್ನಿಸುತ್ತದೆ (ಹೀಗೆ **ಮಯಿ ಕರ್ಮಾಣಿ ಸನ್ನ್ಯಸ್ಯ** ಎಂಬುದರ ಅಭಿಪ್ರಾಯವು) (ಕರ್ಮಗಳಿಗೆ ಪರಮೇಶ್ವರನಲ್ಲಿ ಸನ್ನ್ಯಾಸವೆಂದರೆ ಭಗವಂತನ ತಾದಾತ್ಮ್ಯಜ್ಞಾನವು ಅಂದರೆ—ಕರ್ಮಗಳು ಶ್ರೀಹರಿಯ ಸ್ವರೂಪಗಳೆಂಬ ಜ್ಞಾನವು ಎಂದು ಕೆಲವರು ವ್ಯಾಖ್ಯಾನಮಾಡಿದ್ದು ಅಯುಕ್ತವು. ಏಕೆಂದರೆ – ಆ ಅರ್ಥವು ಶಬ್ದದಿಂದ ಸಿಗುವುದಿಲ್ಲ ಆ ವಿಷಯದಲ್ಲಿ ಪ್ರಮಾಣವೂ ಇಲ್ಲ ಮತ್ತು ಕರ್ಮಗಳು ಜಡಗಳಾಗಿರುವುದರಿಂದ ಶ್ರೀಹರಿಯಿಂದ ಐಕ್ಯ ಹೇಳಿದರೆ **ನೇತಿ ನೇತಿ** ಇತ್ಯಾದಿ ಪ್ರಮಾಣಗಳಿಂದ ವಿರೋಧವೂ ಬರುವುದು ಆದಕಾರಣ ನಾವು ಹೇಳಿದಂತೆಯೇ ಅರ್ಥ ಹೇಳಬೇಕು) (೨) (ಕರ್ಮಗಳು ಶ್ರೀಹರಿಯ ಸ್ವರೂಪಗಳೆಂದು ತಿಳಿದು ಶ್ರೀಹರಿಯ ಪ್ರಾಪ್ತಿಗಾಗಿ ಕರ್ಮಗಳು ಸಮರ್ಥಗಳಾಗುತ್ತವೆ ಎಂದು **ಅಧ್ಯಾತ್ಮಚೇತಸಾ** ಎಂಬುದಕ್ಕೆ ಅರ್ಥವೆನ್ನುತ್ತಾರೆ. ಈ ಅರ್ಥವು ಶಬ್ದದಿಂದ ಸಿಗದಿರುವುದರಿಂದ ಅಯುಕ್ತವೆನ್ನುತ್ತಾರೆ) ಪರಮಾತ್ಮನಾದ ನನ್ನನ್ನುದ್ದೇಶಿಸಿಕೊಂಡು ಯಾವುದು ಮನಸ್ಸು ಇದೆಯೋ ಅದು **ಅಧ್ಯಾತ್ಮಚೇತಃ** ಎನ್ನಿಸುತ್ತದೆ (ಇದಕ್ಕೆ **ನಿರಾಶೀಃ** ಎಂಬುದರಿಂದ ಅನ್ವಯವು. ಅಂದರೆ—ಪರಮಾತ್ಮರೂಪ ಮಹಾವಿಷಯವು ಲಭಿಸಿರುವುದರಿಂದ ಅತ್ಯಲ್ಪಗಳಾದ ಇತರ ವಿಷಯಗಳಲ್ಲಿ ಇಚ್ಛೆಯಿಲ್ಲದಿರುವವನು) (೩)(**ಕರ್ಮಾಣಿ ಸನ್ನ್ಯಸ್ಯ** ಎಂಬಲ್ಲಿದ್ದ **ಸನ್ನ್ಯಾಸ** ಶಬ್ದಕ್ಕೂ **ನಿರ್ಮಮಃ** ಎಂಬುದಕ್ಕೂ ಅರ್ಥಭೇದವನ್ನು ಹೇಳುತ್ತಾರೆ) ಶ್ರೀಹರಿಯೇ ಸಮಸ್ತ ಕರ್ಮಗಳನ್ನು ಮಾಡುತ್ತಾನೆಂದು ತಿಳಿದುಕೊಳ್ಳುವುದು **ಸನ್ನ್ಯಾಸವು** ನಾನು ಯಾವುದನ್ನೂ ಮಾಡುವುದಿಲ್ಲ ಎಂಬ ಜ್ಞಾನವು **ನಿರ್ಮಮತ್ವವು** || ೩೦ ||

ಪೀ—ಜ್ಞಾನಿಗಳು ಹೀಗೆ ಕರ್ಮ ಮಾಡುವುದಾದರೂ ನಾನು (ಅರ್ಜುನನು) ಹೀಗೆ ಏಕೆ ಕರ್ಮ ಮಾಡಬೇಕೆಂದರೆ—ನಾನು ಹೇಳಿದಂತೆ ಮಾಡಿದರೆ ಫಲವಿಶೇಷವದೆ, ಮಾಡದಿದ್ದರೆ ಅನರ್ಥವಿದೆ ಎನ್ನು ತ್ತಾರೆ—

ಗೀ || ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ |
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ||೩೧||

ಅ || ಯೇ ಮಾನವಾಃ= ಯಾವ ಮನುಷ್ಯರು, ಇದಂ=ಹಿಂದಿನ ಶ್ಲೋಕದಲ್ಲಿ ಹೇಳಿದ ಪ್ರಕಾರ ಕರ್ಮಾನುಷ್ಠಾನವು ಅತ್ಯಾವಶ್ಯಕವು ಎಂಬ, ಮೇ= ನನ್ನ, ಮತಂ=ಸಿದ್ಧಾಂತವನ್ನು, ಶ್ರದ್ಧಾವಂತಃ= ಇದರಿಂದ ನಮಗೆ ಪ್ರಯೋಜನವಿದೆ ಎಂದು ಬುದ್ಧಿಯುಳ್ಳವರಾಗಿ, ಅನಸೂಯಂತಃ= ಕಷ್ಟವಾದ ಕರ್ಮ ದಲ್ಲಿ ಏಕೆ ನಮ್ಮನ್ನು ಪ್ರವರ್ತಿಸುತ್ತಾನೆ ಎಂದು ಶ್ರೀಕೃಷ್ಣನಲ್ಲಿ ದೋಷದೃಷ್ಟಿಯನ್ನು ಮಾಡದಿರುವವರಾಗಿ, ನಿತ್ಯಂ= ನಿರಂತರದಲ್ಲಿಯೂ, ಅನುತಿಷ್ಠಂತಿ= ಅನುಸರಿಸುತ್ತಾರೋ, ತೇಽಪಿ=ಅಂತಹವರೂ ಕೂಡ, ಕರ್ಮಭಿಃ= ತಾವು ಮಾಡಿರುವ ವರ್ಣಾಶ್ರಮ ಧರ್ಮಗಳಿಂದ, (ನಿವೃತ್ತಕರ್ಮಗಳಿಂದ) ಮುಚ್ಯಂತೇ= ಜ್ಞಾನವುಂಟಾಗಿ ಸಂಸಾರದಿಂದ ಬಿಡುಗಡೆ ಹೊಂದುತ್ತಾರೆ ಅಪಿ= ಹೀಗಿರಲು ಅಪರೋಕ್ಷಜ್ಞಾನಿಗಳು ಮುಕ್ತರಾಗುತ್ತಾರೆಂಬುವುದು ಸುತರಾಂ ಸಿದ್ಧವು || ೩೧ ||

ಗೀ || ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಂ |
ಸರ್ವಜ್ಞಾನವಿಮೂಢಾಂಸ್ತಾನ್ವಿದ್ಧಿ ನಷ್ಟಾನಚೇತಸಃ || ೩೨ ||

ಅ || ಯೇ ತು—ಯಾರು, ಏತತ್ ಮೇ ಮತಂ=ಈ ನನ್ನ ಸಿದ್ಧಾಂತವನ್ನು, ಅಭ್ಯಸೂಯಂತಃ= ಈ ಕರ್ಮವು ಕಷ್ಟಸಾಧ್ಯವೆಂದು ದೋಷದೃಷ್ಟಿಯುಳ್ಳವರಾಗಿ, ನಾನುತಿಷ್ಠಂತಿ=ಅನುಸರಿಸುವುದಿಲ್ಲವೋ. ತಾನ್= ಅಂತಹವರನ್ನು, ಅಚೇತಸಃ= ವಿವೇಕಶೂನ್ಯರನ್ನಾಗಿಯೂ ಸರ್ವಜ್ಞಾನವಿಮೂಢಾನ್= ತಿಳಿ ಯಲು ಯೋಗ್ಯವಾದ ಸಮಸ್ತ ವಸ್ತುಗಳ ಜ್ಞಾನವಿಷಯದಲ್ಲಿ ವಿಶೇಷವಾಗಿ ಮಿಥ್ಯಾಜ್ಞಾನಿಗಳನ್ನಾಗಿಯೂ, ನಷ್ಟಾನ್=ನರಕಾದ್ಯನರ್ಥಗಳನ್ನು ಹೊಂದುವವರನ್ನಾಗಿಯೂ, ವಿದ್ಧಿ=ತಿಳಿ || ೩೨ ||

ಪೀ—ಕರ್ಮಗಳು ಮೋಕ್ಷಕ್ಕೆ ಸಾಧನಗಳೆಂಬ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಈ ಎರಡು ಶ್ಲೋಕಗಳಲ್ಲಿ ಹೇಳತಕ್ಕ ಅರ್ಥವನ್ನು ಹೇಳುತ್ತಾರೆ

ಭಾ || (೧) ಫಲಮಾಹ | ಯೇ ಮ ಇತಿ || (೨) ಯೇ ತ್ವೇವಂ ನಿವೃತ್ತಕರ್ಮಿಣಸ್ತೇಽಪಿ ಮುಚ್ಯಂತೇ ಜ್ಞಾನದ್ವಾರಾ ಕಿಮ್ವಪರೋಕ್ಷಜ್ಞಾನಿನಃ | ನತು ಸಾಧನಾಂತರಮು- ಚ್ಯತೇ || (೩) ನಿವೃತ್ತಾದೀನಿ ಕರ್ಮಾಣಿ ಹ್ಯಪರೋಕ್ಷೇಶದೃಷ್ಟಯೇ | ಅಪರೋ- ಕ್ಷೇಶದೃಷ್ಟಿಸ್ತು ಮುಕ್ತೌ ಕಿಂಚಿನ್ನ ಮಾರ್ಗತೇ | ಸರ್ವಂ ತದಂತರಾಧಾಯ ಮು- ಕ್ತ್ಯೇ ಸಾಧನಂ ಭವೇತ್ | ನ ಕಿಂಚಿದಂತರಾಧಾಯ ನಿರ್ವಾಣಾಯಾಪರೋಕ್ಷ- ದೃಗಿತಿ ಹ್ಯುಕ್ತಂ ನಾರಾಯಣಾಷ್ಟಾಕ್ಷರಕಲ್ಪೇ || (೪) ಅತ ಏವ ಸಮುಚ್ಚಯನಿ- ಯಮೋ ನಿರಾಕೃತಃ || ೩೧,೩೨ ||

ಅ ॥ (೧) (ಜ್ಞಾನಿಗಳು ಕರ್ಮಮಾಡುತ್ತಾರೆಂಬುವುದರಿಂದ ನಾನು (ಅರ್ಜುನನು) ಏಕೆ ಮಾಡಬೇಕೆಂದರೆ-) ಮಾಡಿದರೆ ಫಲವಿದೆ, ಮಾಡದಿದ್ದರೆ ಅನರ್ಥವಿದೆ ಎನ್ನುತ್ತಾರೆ. (೨)(ಮುಚ್ಯಂತೇ ತೇಽಪಿ ಕರ್ಮಭಿಃ ಎಂಬಲ್ಲಿದ್ದ ಅಪಿಶಬ್ದದಿಂದ ಜ್ಞಾನದಂತೆ ನಿವೃತ್ತಕರ್ಮವೂ ಮೋಕ್ಷಸಾಧನವೆಂದು ಹೇಳಲ್ಪಡುತ್ತದೆ ಎಂಬೀ ಅನ್ಯಥಾಪ್ರತೀತಿಯನ್ನು ನಿರಾಕರಿಸುವುದಕ್ಕಾಗಿ ಯೋಗ್ಯವಾದ ಅರ್ಥವನ್ನು ಹೇಳುತ್ತಾರೆ.) ಯಾರು ಹಿಂದೆ ಹೇಳಿದ ಪ್ರಕಾರ ನಿವೃತ್ತಕರ್ಮವುಳ್ಳವರೋ, ಅವರೂ ಜ್ಞಾನವನ್ನು ಹೊಂದಿ ಮುಕ್ತರಾಗುತ್ತಾರೆ ಅಪರೋಕ್ಷಜ್ಞಾನಿಗಳು ಹೊಂದುತ್ತಾರೆಂಬುವುದು ಸುತರಾಂ ಸಿದ್ಧಿಸುತ್ತದೆ ಜ್ಞಾನದಂತೆ ಕರ್ಮವೂ ಪ್ರತ್ಯೇಕ ಸಾಧನವೆಂದು ಹೇಳಲಾಗುವುದಿಲ್ಲ (೩) (ಕರ್ಮವು ಸ್ವತಂತ್ರ ಸಾಧನವಲ್ಲ ಎಂಬುವಲ್ಲಿ ಪ್ರಮಾಣ ಹೇಳುತ್ತಾರೆ.) (ನಿಷ್ಕಾಮತ್ವ=) ಫಲದಲ್ಲಿ ಸ್ನೇಹವಿಲ್ಲದಿರುವಿಕೆ, ಶ್ರೀಹರಿಗೆ ಪ್ರೀತಿಯಾಗಬೇಕೆಂಬ ಉದ್ದೇಶ, ಇತ್ಯಾದಿಗಳಿಂದ ಮಾಡಿದ ಯಜ್ಞ ದಾನ ಮೊದಲಾದವುಗಳು ನಿವೃತ್ತಕರ್ಮಗಳೆನಿಸುತ್ತವೆ. (ಅಂದರೆ ಯಾವುದನ್ನು ಮಾಡದಿದ್ದರೆ ಪ್ರತ್ಯವಾಯುವಿಲ್ಲವೋ, ಯಾವುವು ಪಾಪನಿಮಿತ್ತವಿಲ್ಲದಿದ್ದರೂ ಮಾಡಲರ್ಹಗಳೋ, ಅಂತಹ ಜ್ಯೋತಿಷ್ಟೋಮ ಅಗ್ನಿಷೋಮೀಯ ಮೊದಲಾದುವುಗಳು, ಆಯಾಯ ಫಲವಿಶೇಷಕ್ಕೆ ಸಾಧನಗಳೆಂದು ವಿಹಿತಗಳಾದಾಗ್ಯೂ ಸ್ವರ್ಗಾದಿ ಫಲವನ್ನು ಇಚ್ಛಿಸದೆ ಶ್ರೀಹರಿಗೆ ಪ್ರೀತಿಯಾಗಬೇಕೆಂಬ ಉದ್ದೇಶದಿಂದ ಮಾಡಿದವುಗಳು. ನಿವೃತ್ತ ಶಬ್ದದಿಂದ ಹೇಳಲಿಷ್ಟಗಳಾಗಿವೆ) ಇಂತಹ ನಿವೃತ್ತಕರ್ಮ, ನಿತ್ಯನೈಮಿತ್ತಿಕ ಕರ್ಮ, ದೇವಾದಿಗಳು ಮಾಡತಕ್ಕ ತಪಸ್ಸು ಇವು ಮೊದಲಾದ ಕರ್ಮಗಳು ಶ್ರೀಹರಿಯ ಅಪರೋಕ್ಷಜ್ಞಾನವನ್ನು ಹುಟ್ಟಿಸಲಿಕ್ಕೆ ಸಮರ್ಥಗಳಾಗುತ್ತವೆ ಅಪರೋಕ್ಷಜ್ಞಾನವು ಮುಕ್ತಿಯನ್ನು ಸಂಪಾದಿಸಿಕೊಡಲಿಕ್ಕೆ ಯಾವುದೊಂದು ಸಹಕಾರಿಯನ್ನೂ ಅಪೇಕ್ಷಿಸುವುದಿಲ್ಲ. ಫಲೇಚ್ಛಾದಿಗಳನ್ನು ತೊರೆದು ಮಾಡಿದ ಯಜ್ಞ ಮೊದಲಾದುದು, ನಿತ್ಯನೈಮಿತ್ತಿಕ ಕರ್ಮ, ಇವುಗಳು ಕರ್ಮ ಮುಕ್ತಿಗಳ ಮಧ್ಯದಲ್ಲಿ, ಭಗವತ್ಸಾಕ್ಷಾತ್ಕಾರವನ್ನು ದ್ವಾರವನ್ನಾಗಿ ಮಾಡಿಕೊಂಡು ಮುಕ್ತಿಗೆ ಸಾಧನವಾಗುವುದು. (ಅಂದರೆ–ಜ್ಞಾನದೆಶೆಯಿಂದ ಮೊದಲು ಮಾಡಿದ ನಿವೃತ್ತಕರ್ಮವು ಜ್ಞಾನ ಭಗವತ್ಸಾಕ್ಷಾತ್ಕಾರಗಳನ್ನು ಹುಟ್ಟಿಸಿ ಮೋಕ್ಷವನ್ನು ಹೊಂದಿಸುತ್ತದೆ.) (ಕರ್ಮವು ಸಾಕ್ಷಾತ್ತಾಗಿ ಸಾಧನವೆಂದು ಕೆಲವು ಪ್ರಮಾಣಗಳಲ್ಲಿದ್ದರೂ ಕರ್ಮದಿಂದ ಜ್ಞಾನವುಂಟಾಗಿಯೇ ಮೋಕ್ಷವಾಗುವುದು ಜ್ಞಾನದಿಂದ ಕರ್ಮವುಂಟಾಗಿ ಮೋಕ್ಷವಾಗುವುದೆಂದು ಇಲ್ಲಿ ಕರ್ಮಕ್ಕೆ ಜ್ಞಾನದ ಅಪೇಕ್ಷೆಯು ಇದ್ದಂತೆ ಜ್ಞಾನಕ್ಕೆ ಕರ್ಮದ ಅಪೇಕ್ಷೆಯು ಇಲ್ಲ ಎನ್ನುತ್ತಾರೆ) ಅಪರೋಕ್ಷಜ್ಞಾನವು ನಿವೃತ್ತಕರ್ಮ ಮೊದಲಾದ ಯಾವುದನ್ನಾದರೂ ಮಧ್ಯದಲ್ಲಿ ಅಪೇಕ್ಷಿಸಿಕೊಂಡು ಮುಕ್ತಿಗೆ ಸಾಧನವಾಗುವುದಿಲ್ಲ ಅಂದರೆ ಅಪರೋಕ್ಷಜ್ಞಾನದಿಂದ ಮೋಕ್ಷವಾಗಬೇಕಾದರೆ ಕರ್ಮ ಮಾಡಿಯೇ ಮೋಕ್ಷವೆಂದು ಇಲ್ಲ ಎಂದು ನಾರಾಯಣಾಷ್ಟಾಕ್ಷರಕಲ್ಪದಲ್ಲಿದೆ (೪) ದರ್ಶಪೂರ್ಣಮಾಸಗಳು ಸಮ ಪ್ರಧಾನಗಳಾಗಿ ಹೇಗೆ ಸ್ವರ್ಗಕ್ಕೆ ಸಾಧನಗಳೋ, ಹಾಗೆಯೇ ಜ್ಞಾನವೂ ಕರ್ಮವೂ ಕೂಡ ಸಮಪ್ರಧಾನಗಳಾಗಿ ಮೋಕ್ಷಕ್ಕೆ ಸಾಧನಗಳೆಂಬ ಸಮುಚ್ಚಯನಿಯಮವೂ ಅಪರೋಕ್ಷೇಶದೃಷ್ಟಿಸ್ತು ಎಂಬುದರಿಂದಲೇ ನಿರಾಕರಿಸಲ್ಪಟ್ಟಿದೆ. ॥ ೩೧, ೩೨ ॥

ಪೀ—ಶ್ರೀಕೃಷ್ಣನು ಹೇಳಿದಂತೆ ಕರ್ಮಾದಿಗಳನ್ನು ಮಾಡಿದರೆ ಮೋಕ್ಷವು, ಮಾಡದಿದ್ದರೆ ಮೋಕ್ಷವಿಲ್ಲ, ಎಂದಾದರೆ—ಶ್ರೀಕೃಷ್ಣನ ಮತವನ್ನೇ ಎಲ್ಲಾ ಜನರೂ, ಏಕೆ ಅನುಸರಿಸುವುದಿಲ್ಲ ಎಂದರೆ—

**ಗೀ ॥ ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥ ೩೩ ॥**

ಅ ॥ ಜ್ಞಾನವಾನಪಿ=ಶ್ರೀಕೃಷ್ಣನ ಮತಪ್ರಕಾರ ಮಾಡಿದರೆ ಇಷ್ಟ, ಮಾಡದಿದ್ದರೆ ಅನಿಷ್ಟವೆಂದು ಜ್ಞಾನವುಳ್ಳವನೂ ಕೂಡ ಸ್ವಸ್ಯಾಃ ಪ್ರಕೃತೇಃ=ತನ್ನ ಪೂರ್ವ ಸಂಸ್ಕಾರದಿಂದ ಹುಟ್ಟಿರುವ ರಾಗ ದ್ವೇಷ

ಗಳಿಗೆ, ಸದೃಶಂ=ಅನುಗುಣವೇ ಆದ ಕರ್ಮವನ್ನು, ಚೇಷ್ಟತೇ=ಮಾಡುತ್ತಾನೆ (ಅಜ್ಞನು ಮಾಡುತ್ತಾನೆಂಬುದು ಸುತರಾಂ ಸಿದ್ಧವು) ಭೂತಾನಿ=ಪ್ರಾಣಿಗಳು, ಪ್ರಕೃತಿಂ=ತಂತಮ್ಮ ಸ್ವಭಾವವನ್ನು, ಯಾಂತಿ=ಹೊಂದುತ್ತಾವೆ, ನಿಗ್ರಹಃ=ಮನಸ್ಸು ಮೊದಲಾದ ಇಂದ್ರಿಯನಿಗ್ರಹವು ಕಿಂ ಕರಿಷ್ಯತಿ=ಏನು ಮಾಡುವುದು (ಇಂದ್ರಿಯನಿಗ್ರಹವು ಸ್ವಭಾವಾನುಗುಣ ವ್ಯಾಪಾರವನ್ನು ತಡೆಯಲಿಕ್ಕೆ ಶಕ್ತವಲ್ಲ) ಅಥವಾ ತತ್ತ್ವೋಪದೇಶದಿಂದ ಜ್ಞಾನವು ಹುಟ್ಟಿದರೆ? ಸ್ವಭಾವಕ್ಕೆ ಅನುಗುಣವಾದ ಚೇಷ್ಟೆಯುಳ್ಳವನೇ ಆಗುತ್ತಾನೆ ಉಪದೇಶದಿಂದುಂಟಾದ ಜ್ಞಾನಕ್ಕೆ ಅನುಗುಣವಾದ ವ್ಯಾಪಾರವುಳ್ಳವನಾಗುವುದಿಲ್ಲ ಆದ ಕಾರಣ ಅಂತಹವರಿಗೆ ತತ್ತ್ವೋಪದೇಶವು ವ್ಯರ್ಥವು ॥ ೩೩ ॥

**ಭಾ ॥ ಏವಂ ಚೇತ್ಕಿಮಿತಿ ತೇ ಮತಂ ನಾನುತಿಷ್ಠಂತಿ ಲೋಕಾ ಇತ್ಯತ ಆಹ । ಸದೃಶಮಿತಿ । ಪ್ರಕೃತಿಃ ಪೂರ್ವಸಂಸ್ಕಾರಃ ॥ ೩೩ ॥**

**ಅ** ॥ ನೀನು (ಶ್ರೀಕೃಷ್ಣನು) ಹೇಳಿದಂತೆ ಕರ್ಮ ಮಾಡಿದರೆ ಮೋಕ್ಷವು ಇಲ್ಲವಾದರೆ ನರಕಾದ್ಯನರ್ಥವು, ಎಂದಾದರೆ—ನಿನ್ನ ಮತವನ್ನು ಜನರೆಲ್ಲರೂ ಏಕೆ ಅನುಸರಿಸುವುದಿಲ್ಲ, ಎಂದರೆ—**ಸದೃಶಂ** ಎಂಬ ಶ್ಲೋಕದಿಂದ ಸಮಾಧಾನ ಹೇಳುತ್ತಾರೆ—ಪ್ರಕೃತಿಃ=ಪೂರ್ವ ಸಂಸ್ಕಾರವು (ಪೂರ್ವ ಸಂಸ್ಕಾರದಿಂದ ಹುಟ್ಟುವ ರಾಗದ್ವೇಷಗಳನ್ನು ಇಲ್ಲಿ ಇಟ್ಟುಕೊಳ್ಳಬೇಕು) ॥ ೩೩ ॥

ಪೀ—ಎಲ್ಲಾ ಜೀವರು ಸ್ವಭಾವಾನುಗುಣವಾಗಿಯೇ, ಕರ್ಮ ಮಾಡುತ್ತಾರೆ ಇಂದ್ರಿಯನಿಗ್ರಹದಿಂದ ಪ್ರಯೋಜನವಿಲ್ಲ ಎಂದಾದರೆ—**ಮಯಿ ಸರ್ವಾಣಿ** ಎಂದು ಕರ್ಮವಿಧಾನವೂ **ಯೇ ಮೇ ಮತಂ** ಎಂದು ಫಲ ಹೇಳಿದ್ದೂ ವ್ಯರ್ಥವಾಗುವುದೆಂದರೆ—

**ಗೀ ॥ ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।
ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪಂಥಿನೌ ॥ ೩೪ ॥**

**ಅ** ॥ ಇಂದ್ರಿಯಸ್ಯ=ಚಕ್ಷುರಾದೀಂದ್ರಿಯಗಳಿಗೆ ಅರ್ಥೇ=ರೂಪಾದಿ ವಿಷಯಗಳಲ್ಲಿ, ಇಂದ್ರಿಯಸ್ಯ=ಇಂದ್ರಿಯ ಸಂಬಂಧಿಗಳಾದ, ರಾಗದ್ವೇಷೌ=ಅನುಕೂಲವಾದ ವಸ್ತುವಿನಲ್ಲಿ ಅನುರಾಗವು, ಪ್ರತಿಕೂಲವಾದ ವಸ್ತುವಿನಲ್ಲಿ ದ್ವೇಷವು, ವ್ಯವಸ್ಥಿತೌ=ಅವಶ್ಯವಾಗಿ ಬರುತ್ತವೆ (ಲೋಭ, ಮೋಹ, ಮದ, ಮತ್ಸರಗಳೂ ಬರುತ್ತವೆ.) (ಹೀಗಿದ್ದರೂ) ತಯೋಃ=ರಾಗದ್ವೇಷ ಮೊದಲಾದ ಅರಿಷಡ್ವರ್ಗಗಳ, ವಶಂ=ಅಧೀನವನ್ನು ನಾಗಚ್ಛೇತ್=ಹೊಂದಬಾರದು (ಅವುಗಳನ್ನನುಸರಿಸಿ ಯಾವ ಕರ್ಮಗಳಲ್ಲಿಯೂ ಪ್ರವೃತ್ತಿ ಮಾಡಬಾರದು) ಹಿ=ಏಕೆಂದರೆ—ಅಸ್ಯ=ಶ್ರೇಯಸ್ಸನ್ನಪೇಕ್ಷಿಸುವವನಿಗೆ, ತೌ=ಆ ರಾಗ ದ್ವೇಷಾದಿಗಳು, ಪರಿಪಂಥಿನೌ=ಶ್ರೇಯಸ್ಸನ್ನು ಕೆಡಿಸುವಂತೆ ಮಾಡುವವುಗಳು, ಮತ್ತು ಪಾಪಕ್ಕೆ ಕಾರಣಗಳೂ ಆಗಿವೆ. (ಇಂದ್ರಿಯನಿಗ್ರಹದಿಂದ ತತ್‌ಕ್ಷಣದಲ್ಲಿ ಫಲವಾಗದಿದ್ದರೂ ಮಹಾಪ್ರಯತ್ನ ಮಾಡುವ ಯೋಗ್ಯ ಜನರಿಗೆ ಫಲವಾಗುವುದು) ॥ ೩೪ ॥

**ಭಾ ॥ (೧) ತಥಾಽಪಿ ಶಕ್ತಿತೋ ನಿಗ್ರಹಃ । ನಿಗ್ರಹಾತ್ಸದ್ಯಃ ಪ್ರಯೋಜನಾಭಾವೇಽಪಿ ಭವತ್ಯೇವಾತಿಪ್ರಯತ್ನತ ಇತ್ಯಾಶಯವಾನಾಹ । ಇಂದ್ರಿಯಸ್ಯೇತಿ ॥ (೨) ತಥಾ ಹ್ಯುಕ್ತಂ ಸಂಸ್ಕಾರೋ ಬಲವಾನೇವ ಬ್ರಹ್ಮಾದ್ಯಾ ಅಪಿ ತದ್ವಶಾಃ । ತಥಾಽಪಿ ಸೋಽನ್ಯಥಾಕರ್ತುಂ ಶಕ್ಯತೇಽತಿಪ್ರಯತ್ನತ ಇತಿ ॥ ೩೪ ॥**

ಅ ॥ ಇಂದ್ರಿಯನಿಗ್ರಹದಿಂದ ಪೂರ್ವಸಂಸ್ಕಾರವನ್ನನುಸರಿಸುವ ಚೇಷ್ಟೆಯುಳ್ಳ ಜನರಿಗೆ ತತ್ಕ್ಷಣದಲ್ಲಿ ಪ್ರಯೋಜನವು ಕಾಣದಿದ್ದರೂ ಮಹಾ ಪ್ರಯತ್ನದಿಂದ ಕಾಲಾಂತರದಲ್ಲಿ ಪ್ರಯೋಜನವುಂಟಾಗುವುದು, ಎಂಬ ಅಭಿಪ್ರಾಯವುಳ್ಳವರಾಗಿ ಆಗ ಪ್ರಯೋಜನವು ಸಿಗದಿದ್ದರೂ ಮಹಾ ಪ್ರಯತ್ನ ಮಾಡಿ ಶಕ್ತ್ಯನುಸಾರ ಇಂದ್ರಿಯ ನಿಗ್ರಹವನ್ನು ಮಾಡಬೇಕೆಂದು, (ಅಂದರೆ ತನ್ನ ವಶದಲ್ಲಿ ಇಟ್ಟುಕೊಳ್ಳಬೇಕೆಂದು) **ಇಂದ್ರಿಯಸ್ಯ** ಎಂಬ ಶ್ಲೋಕದಿಂದ ಹೇಳುತ್ತಾರೆ (೨) (ಮಹಾ ಪ್ರಯತ್ನದಿಂದ ಮನಸ್ಸನ್ನು ನಿಗ್ರಹಿಸಿಕೊಂಡರೆ ಅದು ಪ್ರಕೃತಿಯ ಶಕ್ತಿಯನ್ನು ಕಡಿಮೆ ಮಾಡುತ್ತದೆ ಎಂಬುವಲ್ಲಿ ಆಗಮಪ್ರಮಾಣವನ್ನು ಹೇಳುತ್ತಾರೆ.) ಸಂಸ್ಕಾರವು ಪ್ರಬಲವು ಅಂತಹ ಸಂಸ್ಕಾರವನ್ನು ಮಹಾ ಪ್ರಯತ್ನದಿಂದ ವ್ಯತ್ಯಾಸಪಡಿಸಬಹುದು ಎಂಬ ಪ್ರಮೇಯವು ಹೇಳಲ್ಪಟ್ಟಿದೆ. ಸಂಸ್ಕಾರವು ಬಲವುಳ್ಳದ್ದೇ ರುದ್ರಾದಿ ದೇವತೆಗಳೂ ಕೂಡ, ಕಾಮಾದಿಗಳ ಅಧೀನರಾಗಿರುತ್ತಾರೆ (ಅಂದರೆ ಕಾಮ ಕ್ರೋಧಾದಿಗಳಿಗೆ ನಿಯಾಮಕರಾದ ದೈತ್ಯರಿಂದ ಕೆಲವು ವೇಳೆ ದೂಷಿತರಾಗುತ್ತಾರೆ ) ಆದರೂ ಆ ಸಂಸ್ಕಾರವು ಶ್ರೀಹರಿಯ ಪ್ರಸಾದವನ್ನು ಸಂಪಾದಿಸಲಿಕ್ಕೆ ಅನುಕೂಲವಾದ ಮಹಾಪ್ರಯತ್ನದಿಂದ ವ್ಯತ್ಯಾಸಪಡಿಸಲಿಕ್ಕೆ ಶಕ್ಯವಾಗಿದೆ ॥ ೩೪ ॥

ಪೀ—ಯದ್ಯಪಿ ಕರ್ಮ ಮಾಡಬೇಕು ಆದರೂ ನರಕಾದ್ಯನರ್ಥಗಳಿಗೆ ಕಾರಣಭೂತಗಳಾದ ರಾಗದ್ವೇಷಗಳು ಇದ್ದುದರಿಂದ ಘೋರವಾದ ಯುದ್ಧವನ್ನು ಮಾಡಲಾರೆನೆಂಬ ಆಕ್ಷೇಪವನ್ನು ಪರಿಹರಿಸುತ್ತಾರೆ—

**ಗೀ ॥ ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ ೩೫ ॥**

ಅ ॥ ಸ್ವಧರ್ಮಃ=ತಮ್ಮ ವರ್ಣಾಶ್ರಮಗಳಿಗೆ ಯೋಗ್ಯವಾದ ಧರ್ಮವು, ವಿಗುಣಃ=ಸ್ವಲ್ಪ ಅಂಗಗಳಿಂದ ಹೀನವಾದುದಾಗ್ಯೂ, ಸ್ವನುಷ್ಠಿತಾತ್=ಸಮಸ್ತ ಅಂಗಗಳಿಂದೊಡಗೂಡಿ ಮಾಡಿದ, ಪರಧರ್ಮಾತ್=ಇತರ ವರ್ಣಾಶ್ರಮಗಳಿಗೆ ಉಚಿತವಾದ ಧರ್ಮಕ್ಕಿಂತಲೂ, ಶ್ರೇಯಾನ್=ಅತ್ಯಧಿಕವು, ಅತಿಪ್ರಶಸ್ತವು ಸ್ವಧರ್ಮೇ=ಯುದ್ಧ ಮೊದಲಾದ ತನ್ನ ಧರ್ಮದಲ್ಲಿ ಆಸಕ್ತನಾದವನಿಗೆ, ನಿಧನಂ=ಮರಣವೂ ಕೂಡ, ಶ್ರೇಯಃ=ಶ್ರೇಷ್ಠವು, ಶ್ರೇಯಸ್ಕರವು ಪರಧರ್ಮಃ=ಬೇರೆ ವರ್ಣ—ಬೇರೆ ಆಶ್ರಮ ಇವುಗಳ ಧರ್ಮವು, ಭಯಾವಹಃ=ನಿಷಿದ್ಧವಾದ ಪ್ರಯುಕ್ತ ಅನರ್ಥವನ್ನು ಹೊಂದಿಸಿಕೊಡುತ್ತದೆ. ॥ ೩೫ ॥

**ಭಾ ॥ ತಥಾಪ್ಯುಗ್ರಂ ಯುದ್ಧಂ ಕರ್ಮೇತ್ಯತ ಆಹ । ಶ್ರೇಯಾನಿತಿ ॥ ೩೫ ॥**

ಅ ॥ ಯದ್ಯಪಿ ಕರ್ಮ ಮಾಡಬೇಕು ಆದರೂ ರಾಗ-ದ್ವೇಷಗಳು ಇರುವುದರಿಂದ ಕ್ರೂರವಾದ ಯುದ್ಧಕರ್ಮವನ್ನು ಮಾಡಲಾರೆ, ಎಂದಾಶಂಕಿಸಿದರೆ **ಶ್ರೇಯಾನ್** ಎಂಬುದರಿಂದ ಪರಿಹರಿಸುತ್ತಾರೆ ॥ ೩೫ ॥

ಪೀ—ಜ್ಞಾನಿಗಳ ಮತ್ತು ಅಜ್ಞಾನಿಗಳ ಕರ್ಮಗಳಿಗೆ ವಿಶೇಷವನ್ನು ಹೇಳಿ ಈ ಜ್ಞಾನಿಗಳೂ ಕರ್ಮ ಮಾಡಬೇಕೆಂದು ಮಯಿ ಎಂಬ ೩೦ನೇ ಶ್ಲೋಕದಿಂದ ಹೇಳುತ್ತಾರೆ ಆ ಶ್ಲೋಕದಲ್ಲಿ **ಕರ್ಮಾಣಿ ಸನ್ನ್ಯಸ್ಯ ಯುಧ್ಯಸ್ವ** ಎಂದು ವ್ಯಾಹತವಾಗಿದೆ ಎಂದರೆ ಸ್ಮೃತಿಪ್ರಮಾಣ ಹೇಳಿ ಅರ್ಥವನ್ನು ಹೇಳುತ್ತಾರೆ—

**ಭಾ ॥ (೧) ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮ ಚಾಖಿಲಂ । ತಥಾಪಿ ಮತ್ಕೃತಾ ಪೂಜಾ ತತ್ಪ್ರಸಾದೇನ ನಾನ್ಯಥಾ ॥ (೨) ತದ್ಭಕ್ತಿಸ್ತತ್ಫಲಂ ಮಹ್ಯಂ ತತ್ಪ್ರಸಾದಃ ಪುನಃಪುನಃ । ಕರ್ಮನ್ಯಾಸೋ ಹರಾವೇವಂ ವಿಷ್ಣೋಸ್ತೃಪ್ತಿಕರಃ ಸದಾ ॥ (೩)**

**ಯಸ್ಮಾತ್ಸ್ವತಂತ್ರಕರ್ತೃತ್ವಂ ವಿಷ್ಣೋರೇವ ನ ಚಾನ್ಯಗಂ । ತದಧೀನಂ ಸ್ವತಂತ್ರತ್ವಂ ಸ್ವಾವರಾಪೇಕ್ಷಯೈವ ತು । ಜೀವಸ್ಯ ವಿಕೃತಿರ್ನಾಮ ಕರ್ತೃತ್ವಂ ಜಡಸಂಶ್ರಯಂ॥ (೪) ಪುಮಾನ್ದೋಗ್ಧಾ ಚ ಗೌರ್ದೋಗ್ಧ್ರೀ ಸ್ತನೋ ದೋಗ್ಧೇತಿವತ್ ಕ್ರಮಾದಿತಿ ಬ್ರಹ್ಮತರ್ಕವಚನಾದೀಶ್ವರಜೀವಪ್ರಕೃತ್ಯಾದೀನಾಂ ಕರ್ತೃತ್ವಂ ಅಕರ್ತೃತ್ವಂ ಚ ವಿಭಾಗೇನ ಜ್ಞಾತವ್ಯಂ ಸರ್ವತ್ರ ॥ ೧ ॥**

ಅ ॥ (೧) (೩೦ನೇ ಶ್ಲೋಕದಅರ್ಥವು) ನಾನು ಕರ್ತನಲ್ಲ (**ನಿರ್ಮಮಃ ಎಂಬ ಶಬ್ದದ ಅರ್ಥವು**) ಶ್ರೀಹರಿಯೇ ಸರ್ವಕರ್ತನು ಎಲ್ಲಾ ಕರ್ಮಗಳೂ ಶ್ರೀಹರಿಯ ಪೂಜಾರೂಪಗಳು (ಶ್ರೀಹರಿಯಲ್ಲಿ ಕರ್ಮಗಳ ಸಮರ್ಪಣವು) (ಎಲ್ಲದಕ್ಕೂ ಶ್ರೀಹರಿಯೇ ಕರ್ತನೆಂದಾದರೆ— ಅವನ ಪೂಜಾದಿಗಳು ಹೇಗೆ ಕೂಡುತ್ತವೆಂದರೆ) ಆದರೂ ಶ್ರೀಹರಿಯ ಪ್ರಸಾದದಿಂದಲೇ ಆತನ ಪೂಜೆಯು ನನ್ನಿಂದ ಮಾಡಲ್ಪಡುವುದು ಶ್ರೀಹರಿಯ ಅನುಗ್ರಹವಿಲ್ಲದೆ ಸ್ವತಂತ್ರವಾಗಿ ಅಲ್ಲ.(ಅಂದರೆ ಯದ್ಯಪಿ ಶ್ರೀಹರಿಯೇ ಸರ್ವಸ್ವತಂತ್ರಕರ್ತನು. ಆದರೂ ಶ್ರೀಹರಿಯ ಪ್ರೇರಣೆಯಿಂದಲೇ ನಾನು ಪೂಜೆಯನ್ನು ಮಾಡುವುದರಿಂದ ತತ್ಪೂಜಾ ಇತ್ಯಾದಿಗಳು ಹೇಳುವುದು ಕೂಡುತ್ತದೆ ) (೨) ನನಗೆ ಆ ಶ್ರೀಹರಿಯಲ್ಲಿ ಸುದೃಢಸ್ನೇಹವು, ಪೂಜಾಫಲವು, ಮುಕ್ತಿ ಮತ್ತು ಶ್ರೀಹರಿಯ ಅನುಗ್ರಹವು, ಹಿಂದೆ ಹೇಳಿದ ಪ್ರಕಾರ ಅಂಗಗಳಿಂದೊಡಗೂಡಿದ ಕರ್ಮಗಳನ್ನು ಶ್ರೀಹರಿಯಲ್ಲಿ ಸದಾ ಅರ್ಪಿಸುವುದು ಇವು ಶ್ರೀಹರಿಗೆ ತೃಪ್ತಿಯನ್ನು ಮಾಡುತ್ತವೆ (**ವಿಷ್ಣೋಸ್ತೃಪ್ತಿಕರಃ** ಎಂಬುದರಿಂದ **ಯೋ ಮೇ ಮತಂ** ಎಂಬ ೩೧ನೇ ಶ್ಲೋಕದ ತಾತ್ಪರ್ಯವನ್ನು ಹೇಳಿದಂತಾಯಿತು ) (೩) (ನಾನೇ ಕರ್ತನೆಂಬ ಅಭಿಮಾನವನ್ನು ಬಿಟ್ಟು ಸಮಸ್ತ ಕರ್ಮಗಳನ್ನು ಶ್ರೀಹರಿಗೆ ಅರ್ಪಿಸಿದ್ರಿಂದ ಶ್ರೀವಿಷ್ಣುವಿಗೆ ತೃಪ್ತಿಯು ಹೇಗೆ? ಎಂದರೆ)ಯಾವ ಕಾರಣದಿಂದ ಶ್ರೀವಿಷ್ಣುವಿಗೇನೇ ಸ್ವತಂತ್ರಕರ್ತೃತ್ವವು. ಬೇರೆ ಯಾರಲ್ಲಿಯೂ ಸ್ವತಂತ್ರಕರ್ತೃತ್ವವಿಲ್ಲ ಜೀವರಿಗೆ ತಮಗಿಂತ ಕೆಳಮಟ್ಟರಾದವರನ್ನು ಅಪೇಕ್ಷಿಸಿಯೇ ಶ್ರೀಹರಿಯ ಅಧೀನವಾದ ಸ್ವತಂತ್ರ ಕರ್ತೃತ್ವವು ಜಡ ಪದಾರ್ಥಕ್ಕೆ ವಿಕಾರ ಕರ್ತೃತ್ವವು. (ವಸ್ತುಗಳ ವ್ಯವಸ್ಥೆಯು ಹೀಗೆ ಇದ್ದ ಪ್ರಯುಕ್ತ ಹಾಗೆಯೇ ತಿಳಿದರೆ ಶ್ರೀವಿಷ್ಣುವಿಗೆ ತೃಪ್ತಿ ಉಂಟಾಗುತ್ತದೆ ಶ್ರೀಹರಿಯು ಯಥಾರ್ಥಜ್ಞಾನಕ್ಕೆ ಪ್ರಿಯನು ) (೪) (ಕರ್ತೃತ್ವವೆಂದರೆ ಸ್ವತಂತ್ರ ಕರ್ತೃತ್ವವೇ ಆದುದರಿಂದ ಜೀವಾದಿಗಳಿಗೆ ಸ್ವಾತಂತ್ರ್ಯವಿಲ್ಲದಿರುವುದರಿಂದ ಕರ್ತೃತ್ವವನ್ನು ಹೇಳುವುದು ಹೇಗೆ? ಎಂದರೆ ಪರಾಧೀನಕರ್ತನಲ್ಲಿಯೂ ಕರ್ತೃಶಬ್ದಪ್ರಯೋಗವದೆ ಎನ್ನುತ್ತಾರೆ) ಪುರುಷನು ಹಾಲು ಕರೆಯುವವನು. ಗೋವೂ ಹಾಲು ಕರೆಯುವ ವ್ಯಾಪಾರಕ್ಕೆ ಆಶ್ರಯವಾದುದು ಸ್ತನವೂ (ಮೊಲೆಯೂ) ಹಾಲುಸುರಿಸುವುದು. ಇದರಂತೆ ಕ್ರಮವಾಗಿ ಇಟ್ಟುಕೊಳ್ಳಬೇಕು, ಎಂಬ ಬ್ರಹ್ಮತರ್ಕಪ್ರಮಾಣದಿಂದ ಶ್ರೀಹರಿ ಜೀವ ಪ್ರಕೃತ್ಯಾದಿಗಳಿಗೆ ಕರ್ತೃತ್ವವನ್ನು ಅಕರ್ತೃತ್ವವನ್ನು ಸರ್ವತ್ರ ವಿಭಾಗದಿಂದಲೇ ತಿಳಿದುಕೊಳ್ಳಬೇಕು

ವಿ ॥ (1) ಹಾಗಾದರೆ—ಕೆಲವು ಕಡೆ ಶ್ರೀಹರಿಯೇ ಕರ್ತನು ಜೀವಾದಿಗಳು ಕರ್ತರಲ್ಲ, ಎಂದು ಹೇಳುತ್ತದೆ ಕೆಲವು ಕಡೆ ಜೀವನೇ ಕರ್ತನು. ಶ್ರೀಹರಿಯು ಕರ್ತನಲ್ಲ ಎಂದು ಹೇಳುತ್ತದೆ ಕೆಲವು ಕಡೆ ಪ್ರಕೃತಿಯೇ ಕರ್ತೃ. ಈಶ್ವರಾದಿಗಳು ಕರ್ತರಲ್ಲ, ಎಂದು ಇದೆ ಆದುದರಿಂದ ಶ್ರೀಹರಿಯೇ ಕರ್ತನು, ನಾನು ಕರ್ತನಲ್ಲ ನಾನು ಶ್ರೀಹರಿಯ ಅಧೀನನಾಗಿ ಕರ್ತನೆಂದು ಸಮಸ್ತ ಕರ್ಮಗಳಿಗೆ ಶ್ರೀಹರಿಯಲ್ಲಿ ಸಮರ್ಪಣಾದಿಗಳು ಹೇಗೆ ಕೂಡುತ್ತವೆ ಎಂದರೆ —) ಎಲ್ಲಿ ಶ್ರೀಹರಿಗೆ ಕರ್ತೃತ್ವವು ಹೇಳಲ್ಪಡುತ್ತದೋ ಅಲ್ಲಿ ಶ್ರೀಹರಿಗೆ ಸ್ವತಂತ್ರ ಕರ್ತೃತ್ವವು ಎಲ್ಲಿ ಅಕರ್ತೃತ್ವವು ಹೇಳಲ್ಪಡುತ್ತದೋ ಅಲ್ಲಿ ಶ್ರೀಹರಿಗೆ ಜೀವಾದಿಗಳಲ್ಲಿರತಕ್ಕ ಪರತಂತ್ರ ಕರ್ತೃತ್ವವೂ ಇಲ್ಲ. (2) ಕರ್ತೃತ್ವ ಹೇಳುವಲ್ಲಿ ಸರ್ವರಿಗೂ ಸ್ವತಂತ್ರ ಕರ್ತೃತ್ವವೇ. ಅಕರ್ತೃತ್ವ ಹೇಳುವಲ್ಲಿ ಸರ್ವರಿಗೂ ಸರ್ವಥಾ ಕರ್ತೃತ್ವರಾಹಿತ್ಯವೇ ಎಂದು

ಸಾಮಾನ್ಯತಃ ಅರ್ಥವನ್ನು ತಿಳಿಯಕೂಡದು (3) ಜೀವರಿಗೆ ಅಕರ್ತೃತ್ವ ಹೇಳಿದಲ್ಲಿ ಶ್ರೀಹರಿಯಂತೆ ನಿರುಪಚರಿತ ಕ್ರಿಯಾಸ್ವಾತಂತ್ರ್ಯವು ಇಲ್ಲವೆಂದು ತಿಳಿಯಬೇಕು (4) ಪ್ರಕೃತಿಗೆ ಅಕರ್ತೃತ್ವ ಹೇಳುವಲ್ಲಿ ಶ್ರೀಹರಿಯಂತೆ ಕರ್ತೃತ್ವವಿಲ್ಲವೆಂದು ತಿಳಿಯಬೇಕು ಹೀಗೆ ವಿಭಾಗದಿಂದ ಅರ್ಥವನ್ನು ತಿಳಿದುಕೊಳ್ಳಬೇಕು ॥ ೧ ॥

ಹೀ—ಪ್ರಕೃತೇಃ ಕ್ರಿಯಮಾಣಾನಿ ಎಂಬ ೨೭ನೇ ಶ್ಲೋಕವನ್ನು ಆರಂಭಿಸಿ ೩೫ನೇ ಶ್ಲೋಕ ಪರ್ಯಂತ ವ್ಯಾಖ್ಯಾನಮಾಡುವವರಾಗಿ ಪ್ರಕೃತ್ಯಾದಿ ಶಬ್ದಗಳಿಗೆ ಸ್ವಭಾವಾದಿರೂಪ ಅರ್ಥವಿದೆ, ಎಂಬಲ್ಲಿ ಪ್ರಮಾಣ ಹೇಳುತ್ತಾರೆ—

ತಾ ॥ (೧) ಕ್ವಚಿತ್ಸ್ವಭಾವಃ ಪ್ರಕೃತಿಃ ಕ್ವಚಿಚ್ಚ ತ್ರಿಗುಣಾತ್ಮಿಕಾ । ಕ್ವಚಿತ್ಪ್ರಕೃಷ್ಟಕರ್ತೃತ್ವಾದ್ಭಗವಾನ್ಪ್ರಕೃತಿರ್ಹರಿರಿತಿ ಶಬ್ದನಿರ್ಣಯೇ ॥ (೨) ಸ್ವಭಾವತಸ್ತ್ರಿಧಾ ಜೀವಾ ಉತ್ತಮಾಧಮಮಧ್ಯಮಾಃ । ಉತ್ತಮಾಸ್ತತ್ರ ದೇವಾದ್ಯಾ ಮರ್ತ್ಯಮಧ್ಯಾಸ್ತು ಮಧ್ಯಮಾಃ । ಅಧಮಾ ಅಸುರಾದ್ಯಾಶ್ಚ ನೈಷಾಮಸ್ತ್ಯನ್ಯಥಾ ಭವಃ ॥ (೩) ಶರೀರಮಾತ್ರಾನ್ಯಥಾತ್ವೇ ಸ್ವಜಾತಿಂ ಪುನರೇಷ್ಯತಿ ॥ (೪) ಉತ್ತಮಾ ಮುಕ್ತಿಯೋಗ್ಯಾಸ್ತು ಸೃತಿಯೋಗ್ಯಾಸ್ತು ಮಧ್ಯಮಾಃ । ಅಪರೇಽಂಧತಮೋಯೋಗ್ಯಾ ಪ್ರಾಪ್ತಿಸ್ಸಾಧನಪೂರ್ತಿತಃ ॥ (೫) ಪೂರ್ತ್ಯಭಾವೇನ (ತು) ಸರ್ವೇಷಾಮನಾದಿಃ ಸಂಸೃತಿಃ ಸ್ಮೃತಾ । ನೈವ ಪೂರ್ತಿಶ್ಚ ಸರ್ವೇಷಾಂ ನಿತ್ಯಕಾಲಂ ಹರೀಚ್ಛಯಾ । ಅತೋಽನುವರ್ತತೇ ನಿತ್ಯಂ ಸಂಸಾರೋಽಯಮನಾದಿಮಾನ್ ॥ (೬) ಅತೋಽಧಮಾನಾಂ ಜೀವಾನಾಂ ಮಿಥ್ಯಾಜ್ಞಾನಾದಯೋಽಖಿಲಾಃ । ಸ್ವಾಭಾವಿಕಾ ಗುಣಾ ಜ್ಞೇಯಾ ಮಧ್ಯಮರ್ತ್ಯೇಷು ಮಿಶ್ರಿತಾಃ । ತತ್ತ್ವಜ್ಞಾನಂ ವಿಷ್ಣುಭಕ್ತಿರಿತ್ಯಾದ್ಯಾ ದೇವತಾದಿಷು ॥ ೨ ॥

ಅ ॥ (೧) ಪ್ರಕೃತಿ ಎಂದರೆ ಕೆಲವು ಕಡೆ ಜೀವರ ಸ್ವಭಾವವು, ಕೆಲವು ಕಡೆ ಸತ್ವರಜಸ್ತಮೋಗುಣಾತ್ಮಕವಾದ ಪ್ರಕೃತಿಯೇ ಸ್ವಭಾವವೆನಿಸುತ್ತದೆ ಕೆಲವು ಕಡೆ ಚೆನ್ನಾಗಿ ಜಗತ್ಸೃಷ್ಟ್ಯಾದಿಗಳನ್ನು ಮಾಡತಕ್ಕವನಾದುದರಿಂದ ಸರ್ವೋತ್ತಮನಾದ ಶ್ರೀಹರಿಯು ಪ್ರಕೃತಿಃ ಎನಿಸುತ್ತಾನೆ. ಎಂದು ಶಬ್ದನಿರ್ಣಯದಲ್ಲಿದೆ (೨) (ಸತ್ವಾದಿಗುಣಗಳಿಗೇನೇ ಸ್ವತಂತ್ರಕರ್ತೃತ್ವವು ಹೇಳಲ್ಪಡುತ್ತದೆಂಬ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಸ್ಮೃತಿಪ್ರಮಾಣ ಹೇಳಿ ಅದಕ್ಕೆ ವ್ಯಾಖ್ಯಾನ ಮಾಡುತ್ತಾರೆ) ಜೀವರು, ಉತ್ತಮರು ಮಧ್ಯಮರು ಅಧಮರು, ಎಂದು ಸ್ವಾಭಾವಿಕವಾಗಿ ಮೂರು ವಿಧರು ಅದರಲ್ಲಿ ದೇವತೆಗಳೇ ಮೊದಲಾದವರು ಉತ್ತಮರು ಮನುಷ್ಯರಲ್ಲಿ ಮಧ್ಯಮರು ಮಧ್ಯಮಾಧಿಕಾರಿಗಳು ಅಸುರರೇ ಮೊದಲಾದವರು ಅಧಮಾಧಿಕಾರಿಗಳು. (ದೇವಾದಿಗಳಿಗೆ ವ್ಯತ್ಯಾಸವಿದ್ದ ಪ್ರಯುಕ್ತ ದೇವತ್ವಾದಿಗಳು ಸ್ವಭಾವವಾಗುವುದು ಹೇಗೆ? ಎಂದರೆ) ದೇವಾದಿಗಳಿಗೆ ವ್ಯತ್ಯಾಸವು ಸರ್ವಥಾ ಆಗಲಾರದು (ದೇವತ್ವವು ಸರ್ವಥಾ ತಪ್ಪಲಾರದು (೩) (ಜಯಾದಿಗಳಿಗೆ (ಹಿರಣ್ಯಾಕ್ಷ ಹಿರಣ್ಯಕಶಿಪು ಮೊದಲಾದ ರೀತಿಯಿಂದ) ವ್ಯತ್ಯಾಸವು ಕಂಡದ್ದರಿಂದ ವ್ಯತ್ಯಾಸವಿಲ್ಲವೆನ್ನುವುದು ಹೇಗೆ? ಎಂದರೆ) (ಶಾಪಾದಿಗಳಿಂದ) ಶರೀರಮಾತ್ರಕ್ಕೆ ವ್ಯತ್ಯಾಸವಿದ್ದರೂ ಪುನಃ ತನ್ನ ಜಾತಿಯನ್ನೇ (ದೇವತ್ವವನ್ನೇ) ಹೊಂದುವರು (೪) (ದೇವತ್ವಾದಿಗಳು ಸ್ವಾಭಾವಿಕಗಳಾದರೆ ದೇವತೆಗಳೇ ಉತ್ತಮರು ಇತ್ಯಾದಿಗಳ ಕಾರಣವೇನು ಎಂದರೆ) ಮೋಕ್ಷಹೊಂದಲು ಯೋಗ್ಯರಾದವರು ಉತ್ತಮರು ಸಂಸಾರದಲ್ಲಿ ನರಳಿಕೊಂಡಿರುವವರು ಮಧ್ಯಮರು. ಇತರರು ಅಂಧಂತಮಸ್ಸನ್ನು ಹೊಂದಲು ಯೋಗ್ಯರು ಅವರವರಿಗೆ ಕ್ಲೃಪ್ತಗಳಾದ ಸಾಧನಗಳು ಪೂರ್ತಿಯಾದ

ಮೇಲೆ (ಅವರವರಿಗೆ ಯೋಗ್ಯವಾದ ಫಲಪ್ರಾಪ್ತಿಯಾಗುತ್ತದೆ) (೫) ಎಲ್ಲಾ ಜೀವರಿಗೆ ಒಂದೇ ಕಾಲದಲ್ಲಿ ಸಾಧನಗಳು ಪೂರ್ತಿಯಾಗದಿರುವುದರಿಂದ ಅನಾದಿಯಾದ ಸಂಸಾರವು ಇರುತ್ತದೆ (ಸರ್ವರಿಗೂ ಸಾಧನ ಪೂರ್ತಿಯಾದರೆ—ಸರ್ವ ಚೇತನರಿಗೆ ಸಂಸಾರ ಸಮಾಪ್ತಿಯಾಗಬೇಕಾಗುವುದು ಎಂದರೆ—) ಸರ್ವ ಕಾಲದಲ್ಲಿಯೂ ಸಂಸಾರವು ಅನುಸರಿಸಿರಲಿ ಎಂಬ ಶ್ರೀಹರಿಯ ಇಚ್ಛೆಯಿಂದ ಸಂಸಾರಕ್ಕೆ ಆದಿಯಿಲ್ಲ ಪರಿಸಮಾಪ್ತಿಯೂ ಇಲ್ಲ ಆದಕಾರಣ ಸರ್ವ ಚೇತನರಿಗೆ ಏಕಕಾಲದಲ್ಲಿ ಸಾಧನಪೂರ್ತಿಯಾಗುವುದೇ ಇಲ್ಲ ಆದುದರಿಂದ ಈ ಸಂಸಾರವು ನಿತ್ಯದಲ್ಲಿಯೂ ಆದಿಯಿಲ್ಲದಿರುವುದಾಗಿ ಅನುಸರಿಸಿಕೊಂಡು ಬರುತ್ತಿದೆ (೬) ಆದಕಾರಣ ಅಧಮಜೀವರಿಗೆ ಮಿಥ್ಯಾಜ್ಞಾನ ಮೊದಲಾದ ಎಲ್ಲಾ ಧರ್ಮಗಳು ಸ್ವಾಭಾವಿಕಗಳು ಮಧ್ಯಮ ಮನುಷ್ಯರಲ್ಲಿ ತತ್ವಜ್ಞಾನ ಮಿಥ್ಯಾಜ್ಞಾನಗಳ ಸಮಸೇರುವಿಕೆಯು ಸ್ವಾಭಾವಿಕ ಗುಣವು. ದೇವತಾದಿಗಳಲ್ಲಿ ತತ್ವಜ್ಞಾನ ವಿಷ್ಣುಭಕ್ತಿ ಮೊದಲಾದ ಗುಣಗಳು ಸ್ವಾಭಾವಿಕ ಗುಣಗಳು ॥ ೨॥

ತಾ ॥ (೧) ಕಾರ್ಯತೇ ಹ್ಯವಶಃ ಕರ್ಮ ಸರ್ವೈಸ್ತ್ರೈಃ ಪ್ರಾಕೃತೈರ್ಗುಣೈಃ ॥ (೨) ಸ್ವಾಭಾವಿಕಗುಣಾನೇತಾನ್ಪ್ರೇರ್ಯತುಂ ಕೃತ್ವೈವ ವಿಷ್ಣುನಾ । ಕರ್ಮಸು ಕ್ರಿಯಮಾಣೇಷು ಕರ್ತಾಽಹಮಿತಿ ಮೂಢಧೀಃ ॥(೩) ಮನ್ಯತೇ ತತ್ತ್ವವಿದ್ವಿಷ್ಣೋರ್ಗುಣಾ ಇಚ್ಛಾದಯಸ್ತು ಯೇ । ಸ್ವಾಭಾವಿಕೇಷು ಜೀವಸ್ಯ ಕಾಮಾದ್ಯೇಷು ಸದೈವ ತು । ಪ್ರೇರಕತ್ವೇನ ವರ್ತಂತೇ ಸ್ವಾತಂತ್ರ್ಯಂ ಮಮ ನ ಕ್ವಚಿತ್ । ಇತಿ ಮತ್ವಾ ನ ಸಕ್ತಃ ಸ್ಯಾತ್ತ್ರೀತೋಽಸ್ಯ ಭವತಿ ಪ್ರಭುಃ ॥ (೪) ಸ್ವಭಾವಗುಣಸಮ್ಮೂಢಾ ಜ್ಞಾನಾದಿಗುಣಪತ್ತರಂ । ಸ್ವಾತಂತ್ರ್ಯೇಽಸ್ತ್ಯೇವ ಕರ್ತಾರಂ ಚಾತ್ಮಾನಂ ಪ್ರತಿಜಾನತೇ । ತಾನ್ಗುಣಾನ್ಕರ್ಮ ತಚ್ಚೈವ ವಿಷ್ಣ್ವಧೀನಂ ನ ತೇ ವಿದುಃ ॥ (೫) ತೇಷ್ವಯೋಗ್ಯೇಷು ತತ್ತ್ವಜ್ಞಸ್ತತ್ತ್ವಂ ನಾತಿಪ್ರಕಾಶಯೇತ್ । ವದೇದ್ವಿವಾದರೂಪೇಣ ನೋಪದೇಶಾತ್ಮನಾ ಕ್ವಚಿತ್ । ನಷ್ಟ[ಭಾ]ರೂಪೇಣ ವಾ ಬ್ರೂಯಾತ್ಸ್ವಪ್ನೇಽವ್ಯಕ್ತಿಕೃದೇವ ವಾ ॥ (೬) ಬುಧ್ವಾಽಸ್ಯಸೌಯತೋ ನಿತ್ಯಂ ಸ್ವಭಾವಾನುಗಚೇಷ್ಟಿತಃ । ಸ್ವಭಾವಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತೀತ್ಯಾದಿ ಪ್ರಕಾಶಸಂಹಿತಾಯಾಂ ॥ ೩ ॥ ॥ ೩೦—೩೫ ॥

ಅ ॥ (೧) ಎಲ್ಲಾ ಜನರೂ ವಿಷ್ಣುವಿನ ಅಧೀನರಾಗಿಯೇ ಇದ್ದು ಸ್ವಾಭಾವಿಕಗಳಾದ ಸತ್ವಾದಿಗುಣಗಳಿಂದ ಕರ್ಮವನ್ನು ಮಾಡುತ್ತಾರೆ (೫ನೇ ಶ್ಲೋಕದ ಅರ್ಥವು) (೨) (ಪ್ರಕತೇಃ ಕ್ರಿಯಮಾಣಾನಿ ಎಂಬ ೨೭ನೇ ಶ್ಲೋಕದ ಅರ್ಥದಲ್ಲಿ ಪ್ರಮಾಣ ಹೇಳುತ್ತಾರೆ) ಶ್ರೀಹರಿಯ ಇಚ್ಛಾ ಮೊದಲಾದ ಗುಣಗಳ ಅಧೀನಗಳಾದ ಮೂರು ವಿಧ ಜೀವರ ಸ್ವಭಾವಾನುಸಾರಿಗಳಾದ ಆಯಾಯ ಗುಣಗಳನ್ನು ನಿಮಿತ್ತವಾಗಿ ಇಟ್ಟುಕೊಂಡು ಶ್ರೀಹರಿಯಿಂದ ಕರ್ಮಗಳು ಮಾಡಿಸಲ್ಪಡುತ್ತಿರಲು (ಅಂದರೆ ಯಾರ ಉತ್ತಮರೋ ಅವರ ಸ್ವಾಭಾವಿಕಗಳಾದ ಸದ್ಗುಣಗಳನ್ನನುಸರಿಸಿ ಸತ್ಕರ್ಮಗಳನ್ನು ಮಾಡಿಸುತ್ತಾನೆ, ಇದು ಮೊದಲಾದ ರೀತಿಯಿಂದ ಕರ್ಮಗಳನ್ನು ಶ್ರೀಹರಿಯು ಮಾಡಿಸುತ್ತಿರಲು) ನಾನೇ ಸ್ವತಂತ್ರಕರ್ತನೆಂದು ಮೂಢಬುದ್ಧಿಯಾದ ಜೀವನು ತಿಳಿದುಕೊಳ್ಳುತ್ತಾನೆ (೩) (ತತ್ವವಿತ್ತು ಮಹಾಬಾಹೋ ಎಂಬ ೨೮ನೇ ಶ್ಲೋಕದ ಅರ್ಥ ಹೇಳುತ್ತಾರೆ) ಗುಣಕರ್ಮವಿಭಾಗಗಳ ತತ್ವವನ್ನು ತಿಳಿದ ಜೀವನು ಶ್ರೀಹರಿಯ ಇಚ್ಛಾ ಮೊದಲಾದ ಗುಣಗಳು ಜೀವರು ಇಚ್ಛಾಮೊದಲಾದ ಸ್ವಾಭಾವಿಕ ಗುಣಗಳಲ್ಲಿ ಯಾವಾಗಲೂ ಪ್ರೇರಕಗಳಾಗಿಯೇ ಇರುತ್ತವೆ, ನನ್ನ ಜ್ಞಾನ ಇಚ್ಛಾ ಮೊದಲಾದುದು ಶ್ರೀಹರಿಯ ಜ್ಞಾನ ಇಚ್ಛಾದಿಗಳಿಂದಲೇ ಪ್ರೇರೇಪಿಸಲ್ಪಡುವುದರಿಂದ ನನಗೆ ಕ್ರಿಯಾಸ್ವಾತಂತ್ರ್ಯವು ಇಲ್ಲ ಹೀಗೆ ತಿಳಿದುಕೊಂಡದ್ದರಿಂದ ಜೀವನು ಕರ್ಮ

ದಿಂದ ಬದ್ಧನಾಗುವುದಿಲ್ಲ ಇಂತಹವನಿಗೆ ಶ್ರೀಹರಿಯು ಪ್ರೀತನಾಗುತ್ತಾನೆ. (೪) (**ಪ್ರಕೃತೇರ್ಗುಣಸಂಮೂಢಾಃ** ಎಂಬ ೨೯ನೇ ಶ್ಲೋಕದ ಅರ್ಥವನ್ನು ಹೇಳುತ್ತಾರೆ.) ಸ್ವಾಭಾವಿಕಗಳಾದ ಶ್ರೀಹರಿಯ ಇಚ್ಛಾದಿ ಗುಣಗಳಿಂದ, ಜಡದ ಕಾರ್ಯಭೂತಗಳಾದ ಸತ್ವಾದಿಗುಣಗಳಿಂದ ಇಂದ್ರಿಯವಿಷಯಗಳಲ್ಲಿ ಸ್ವಾತಂತ್ರ್ಯಾಭಿಮಾನವುಳ್ಳ ಜೀವರು ತನ್ನನ್ನೇ ಹೆಚ್ಚು ಜ್ಞಾನಾದಿ ಗುಣಗಳುಳ್ಳವನನ್ನಾಗಿಯೂ ಸರ್ವಸ್ವತಂತ್ರ ಕರ್ತನನ್ನಾಗಿಯೂ ತಿಳಿದುಕೊಳ್ಳುತ್ತಾರೆ ಅವರು ಜ್ಞಾನಾದಿ ಗುಣಗಳನ್ನೂ ತಾನು ಮಾಡುವ ಕರ್ಮವನ್ನೂ ಶ್ರೀಹರಿಯ ಅಧೀನಗಳನ್ನಾಗಿ ತಿಳಿಯುವುದಿಲ್ಲ (೫) ತತ್ವಜ್ಞಾನಕ್ಕೆ ಅಯೋಗ್ಯರಾದವರಲ್ಲಿ ತತ್ವಜ್ಞಾನಿಯು ತತ್ವವನ್ನು ಹೆಚ್ಚು ಪ್ರಕಾಶಗೊಳಿಸಬಾರದು (ತತ್ವಜ್ಞಾನವು ಬರುವಂತೆ ಮಾಡಬಾರದು) (ಹೇಳುವ ಸಂದರ್ಭದಲ್ಲಿ) ವಿವಾದ ರೂಪದಿಂದ ಹೇಳಬೇಕು ಎಲ್ಲಿಯೂ ಶಾಸ್ತ್ರದಲ್ಲಿ ಹೇಳಿದ ಕ್ರಮವನ್ನನುಸರಿಸಿ ಉಪದೇಶರೂಪದಿಂದ ಹೇಳಬಾರದು. ಸಭಿಕರಿಗೆ ಉಪದೇಶರೂಪದಿಂದ ಹೇಳಬೇಕು (ಅಂದರೆ ಅಯೋಗ್ಯರನ್ನುದ್ದೇಶಿಸಿ ಹೇಳಬಾರದು ಆದರೆ ಯೋಗ್ಯರೂ ಅಯೋಗ್ಯರೂ ಸಭೆಯಲ್ಲಿರುವುದರಿಂದ ಸಭೆಗೆ ಉಪದೇಶರೂಪದಿಂದ ಹೇಳಬಹುದು ಯೋಗ್ಯರಿಗೆ ಹೇಳುವುದೆಂದು ಅನುಸಂಧಾನ ಮಾಡಿಕೊಳ್ಳಬೇಕು ಕೇಳಿದರೆ ತನ್ನ ಮಾತಿನಿಂದ ತತ್ವವು ಅಯೋಗ್ಯರಿಗೆ ಹೇಗೆ ಸ್ಪಷ್ಟವಾಗಲಾರದೋ ಹಾಗೆ ಹೇಳಬೇಕು. (೬) (**ಸದೃಶಂ ಚೇಷ್ಟತೇ** ಎಂಬ ೩೩ನೇ ಶ್ಲೋಕದ ಅರ್ಥದಲ್ಲಿ ಪ್ರಮಾಣ ಹೇಳುತ್ತಾರೆ) ಮಹಾತ್ಮರ ಉಪದೇಶದಿಂದ ಜ್ಞಾನವನ್ನು ಹೊಂದಿದರೂ ಅಯೋಗ್ಯನು ನಿರಂತರದಲ್ಲಿಯೂ ಸ್ವಭಾವಕ್ಕೆ ಸದೃಶವು ಹೇಗೆ ಆಗುವುದೋ ಹಾಗೆ ಚೇಷ್ಟೆಯುಳ್ಳವನಾಗುತ್ತಾನೆ ಮನಸ್ಸನ್ನು ನಿಗ್ರಹಿಸುವುದಕ್ಕಾಗಿ ಪ್ರಯತ್ನ ಮಾಡಿದರೂ ಅಯೋಗ್ಯರಾದ ಪ್ರಾಣಿಗಳು ಸ್ವಭಾವವನ್ನೇ ಅನುಸರಿಸುತ್ತಾರೆ. ಉಪದೇಶದಿಂದುಂಟಾದ ಮನೋನಿಗ್ರಹ ಪ್ರಯತ್ನವು ಏನು ಮಾಡುವುದು? (ಅಂದರೆ ಪ್ರಯೋಜನಕಾರಿಯಾಗುವುದಿಲ್ಲ) || ೩೦—೩೫ ||

**ಪೀ**—ಪ್ರಯತ್ನ ಮಾಡುವವನಿಗೂ ಪಾಪಕ್ಕೆ ಕಾರಣಗಳಾದ ಕಾಮ ಕ್ರೋಧ ಮೊದಲಾದ ಅರಿಷಡ್ವರ್ಗಗಳನ್ನು ಜಯಿಸುವುದು ಅಶಕ್ಯವೆಂದು ಹೇಳಿದೆ. ಅವುಗಳಲ್ಲಿ ಪ್ರಬಲವಾದುದು ಯಾವುದು? ಅದನ್ನು ಅತಿಪ್ರಯತ್ನದಿಂದ ಗೆಲ್ಲಬಹುದೆಂಬ ಅಭಿಪ್ರಾಯದಿಂದ ಪ್ರಶ್ನೆಮಾಡುತ್ತಾನೆ—

**ಗೀ ||** || ಅರ್ಜುನ ಉವಾಚ ||

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ |**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ || ೩೬ ||**

**ಅ ||** ಅರ್ಜುನನು ಪ್ರಶ್ನೆಮಾಡುತ್ತಾನೆ. ವಾರ್ಷ್ಣೇಯ=ವೃಷ್ಣಿಕುಲದಲ್ಲಿ ಹುಟ್ಟಿದ ಶ್ರೀಕೃಷ್ಣನೇ ಅಯಂ ಪೂರುಷಃ=ಈ ಪುರುಷನು, ಪಾಪಂ=ಪಾಪಾಚಾರವನ್ನು, ಅನಿಚ್ಛನ್ನಪಿ=ಮಾಡಲಿಕ್ಕೆ ಇಚ್ಛೆಯಿಲ್ಲದವನಾದರೂ, ಬಲಾತ್=ಬಲಾತ್ಕಾರದಿಂದ, ನಿಯೋಜಿತ ಇವ=ಕಾರ್ಯ ಮಾಡುವುದರಲ್ಲಿ ಪ್ರೇರೇಪಿಸಿಕೊಳ್ಳಲ್ಪಟ್ಟವನಂತೆ, ಅಥ ಕೇನ=ಶ್ರೀಹರಿಯಿಂದಲೂ ದೇವತೆಗಳಿಂದಲೂ ಮೇಲೆ, (ಅಂದರೆ ಶ್ರೀಹರಿಯೂ ದೇವತೆಗಳೂ ಅಲ್ಲದೆ) ಕೇನ=ಕಾಮ ಕ್ರೋಧಾದಿಗಳ ಮಧ್ಯದಲ್ಲಿ ಪ್ರಬಲವಾದ ಯಾವುದರಿಂದ, ಪ್ರಯುಕ್ತಃ=ಪ್ರೇರಿಸಿಕೊಳ್ಳಲ್ಪಟ್ಟವನಾಗಿ, ಪಾಪಂ=ಪಾಪಕರ್ಮವನ್ನು, ಚರತಿ=ಮಾಡುತ್ತಾನೆ. || ೩೬ ||

**ಭಾ || (೧) ಬಹವಃ ಕರ್ಮಕಾರಣಾಃ ಸಂತಿ | ಕ್ರೋಧಾದಯಃ ಕಾಮಶ್ಚ | ತತ್ರ ಕೋ ಬಲವಾನಿತಿ ಪೃಚ್ಛತಿ | (೨) ಅಥೇತಿ | ಅಥೇತ್ಯರ್ಥಾಂತರಂ | ತಯೋರ್ನ ವಶಮಾಗಚ್ಛೇದಿತಿ ಪ್ರಶ್ನಪ್ರಾಪಕಂ || ೩೬ ||**

ಅ || (೧) ಪಾಪಕ್ಕೆ ಕಾರಣಗಳು ಕ್ರೋಧ ಮೊದಲಾದವುಗಳೂ ಕಾಮವೂ ಕೂಡ ಬಹಳ ಇವೆ. ಆ ಕಾಮ ಕ್ರೋಧಾದಿಗಳಲ್ಲಿ ಪ್ರಬಲವಾದುದು ಯಾವುದೆಂದು **ಅಥ** ಎಂಬುದರಿಂದ ಪ್ರಶ್ನೆ ಮಾಡುತ್ತಾರೆ. (೨) **ಅಥ** ಎಂಬುದರಿಂದ ಅರ್ಥಾಂತರವು ಹೇಳಲ್ಪಡುತ್ತದೆ. ಆ ಕಾಮ ಕ್ರೋಧಗಳ ಅಧೀನತೆಯನ್ನು ಹೊಂದಬಾರದು, ಎಂಬುವುದು ಪ್ರಶ್ನೆ ಮಾಡಲಿಕ್ಕೆ ಕಾರಣವು. || ೩೬ ||

**ಟೀ—ಪ್ರಕೃತೇಃ ಕ್ರಿಯಮಾಣಾನಿ** ಇತ್ಯಾದಿಗಳಲ್ಲಿ ಶ್ರೀಹರಿಯು ಪ್ರೇರಕನೆಂದು ಹೇಳಿದೆ. ತಾನು ದೇವತೆಯಾದುದರಿಂದ ದೇವತೆಗಳು ಪ್ರೇರಕರೆಂಬುವುದೂ ತಿಳಿದಿದೆ **ಇಂದ್ರಿಯಸ್ಯ** ಎಂಬುವುದರಿಂದ ಕಾಮಾದಿನಾಮಕರಾದ ಕಾಲನೇಮಿ ಮೊದಲಾದ ಅಧಮ ಪ್ರೇರಕರನ್ನು ಹೇಳಿದ್ರಿಂದ **ಈ ಪ್ರಶ್ನೆಯೇ** ಅಸಂಗತವೆಂದರೆ—

**ತಾ || ಪರಮೇಶ್ವರಾದ್ದೇವೇಭ್ಯಶ್ಚಾವಾರ್ಕ್ತನಪ್ರೇರಕಂ ಪೃಚ್ಛತಿ । ಅಥ ಕೇನೇತಿ || ೩೬ ||**

ಅ || ಶ್ರೀಹರಿಯಿಂದಲೂ ದೇವತೆಗಳಿಂದಲೂ ಮೇಲೆ ಪ್ರವರ್ತಕರಲ್ಲಿ ಬಲಿಷ್ಠನಾದ ಕೆಳಗಿನ ಪ್ರೇರಕನನ್ನು **ಅಥಕೇನ** ಎಂಬುದರಿಂದ ಪ್ರಶ್ನಿಸುತ್ತಾರೆ. (ಅಂದರೆ—ಉತ್ತಮ ಪ್ರವರ್ತಕನಾದ ಶ್ರೀಹರಿಯಿಂದಲೂ ಮಧ್ಯಮ ಪ್ರವರ್ತಕರಾದ ದೇವತೆಗಳಿಂದಲೂ ಮೇಲೆ (ಅಂದರೆ ಅವರನ್ನು ಬಿಟ್ಟು) ಬೇರೆ ಪ್ರವರ್ತಕರಾದ ಕಾಮ ಕ್ರೋಧಾದಿಗಳ ಮಧ್ಯದಲ್ಲಿ ಹೆಚ್ಚು ಬಲವುಳ್ಳ ಯಾರಿಂದ ಜೀವನು ಪ್ರೇರೇಪಿಸಲ್ಪಟ್ಟವನಾಗಿ ಪಾಪವನ್ನು ಮಾಡುತ್ತಾನೆ, ಎಂದು ಪ್ರಶ್ನೆಯ ಅಭಿಪ್ರಾಯವು) || ೩೬ ||

**ಗೀ ||** || ಶ್ರೀಭಗವಾನುವಾಚ ||

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ |**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಂ || ೩೭ ||**

ಅ || ಎಲ್ಲದಕ್ಕೂ ಕಾಮವೇ ಮೂಲಕಾರಣವಾಗಿರುವುದರಿಂದ ಕಾಮವೇ ಪ್ರಬಲವು ಪ್ರವರ್ತಕವು, ಎಂದು ಶ್ರೀಕೃಷ್ಣನು ಹೇಳಿದನು ಏಷಃ ಕಾಮಃ=ಜೀವರು ಕೆಟ್ಟ ಕಾರ್ಯಗಳನ್ನು ಮಾಡುವಂತೆ ಪ್ರವೃತ್ತಿ ಮಾಡಿಸುವುದು ಕಾಮವು (ವಿಷಯೇಚ್ಛೆಯು) (ಸಿಟ್ಟಿನಿಂದಲೇ ಪಾಪಕಾರ್ಯದಲ್ಲಿ ಪ್ರವೃತ್ತಿಯು ಕಂಡದ್ರಿಂದ ಕಾಮವೇ ಎಂದು ಹೇಳಿದ್ದು ಹೇಗೆ ಎಂದರೆ) ಏಷಃ=ಈ ಕಾಮವೇ, ಕ್ರೋಧಃ=ಸಿಟ್ಟು (ಕ್ರೋಧವು ಕಾಮದಿಂದ ಹುಟ್ಟುವ ಪ್ರಯುಕ್ತ ಕಾಮವೇ ಕ್ರೋಧವೆಂದದ್ದು) (ಹಾಗಾದರೆ ಜ್ಞಾನ ಭಕ್ತ್ಯಾದಿಗಳ ಕಾಮವೂ ಮೋಕ್ಷಕಾಮವೂ ಪಾಪಕ್ಕೆ ಕಾರಣವು ಹೇಗೆ ಆಗುವುದೆಂದರೆ) ಏಷಃ= ಕಾಮವು, ರಜೋಗುಣಸಮುದ್ಭವಃ= ರಜೋಗುಣದಿಂದ ಹುಟ್ಟಿದ್ದು (ಜ್ಞಾನಾದಿಗಳ ಕಾಮವು ರಜೋಗುಣದಿಂದ ಹುಟ್ಟಿದುದು ಅಲ್ಲ) ಕ್ರೋಧವೂ ರಜೋಗುಣದಿಂದ ಹುಟ್ಟಿದುದು. (ಕಾಮವು ನಿಮಿತ್ತಕಾರಣ ರಜೋಗುಣವು ಪರಿಣಾಮ ಕಾರಣವು) (ಕಾಮವು ನಿವೃತ್ತವಾದರೆ ಕಾಮಮೂಲಕಗಳಾದ ಪಾಪಕ್ಕೆ ಕಾರಣಗಳಾದ ಕ್ರೋಧಮೊದಲಾದವುಗಳನ್ನು ನಿವೃತ್ತಿಗೊಳಿಸಲಿಕ್ಕೆ ಶಕ್ಯವಾಗುತ್ತದೆ ಆದಕಾರಣ ಕಾಮವು ಹುಟ್ಟದಂತೆ ಮಾಡುವುದರಲ್ಲಿಯೇ ಮಹಾ ಪ್ರಯತ್ನಮಾಡಬೇಕು) (ಕಾಮಕ್ಕೆ ಅಪೇಕ್ಷಿತವಾದುದೆಲ್ಲವನ್ನು ಕೊಟ್ಟು ಅದನ್ನು ವಶಪಡಿಸಿಕೊಳ್ಳಬಹುದೆಂದರೆ) ಕಾಮವು ಮಹಾಶನಃ=ಅತ್ಯಧಿಕವಾದ (ಪೂರೈಸಲಿಕ್ಕೆ ಸರ್ವಥಾ ಸಾಧ್ಯವಿಲ್ಲದಿರುವ) ಭೋಗ್ಯವಿಷಯವುಳ್ಳದ್ದು ಮಹಾಪಾಪ್ಮಾ=ಬ್ರಹ್ಮಹತ್ಯಾದಿರೂಪವಾದ ಮಹಾಪಾಪಕ್ಕೆ ಕಾರಣವಾದುದು ಇಹ=ಐಹಿಕಾಮುಷ್ಮಿಕ ಸರ್ವ ಪುರುಷಾರ್ಥಗಳನ್ನು ಸಂಪಾದಿಸುವ ವಿಷಯದಲ್ಲಿ, ಏನಂ=ಈ ಕಾಮವನ್ನು, ವೈರಿಣಂ=ನಿರಂತರದಲ್ಲಿಯೂ ಅಶುಭಕರ್ಮಗಳಲ್ಲಿಯೇ ಪ್ರವೃತ್ತಿ

ಮಾಡಿಸುವ ಪ್ರಯುಕ್ತ ಮೋಕ್ಷವನ್ನು ಪಡೆಯಲಿಕ್ಕೆ ಪ್ರತಿಬಂಧಕವಾಡುವುದರಿಂದ ಪರಮಶತ್ರುವನ್ನಾಗಿ ವಿದ್ಧಿ = ತಿಳಿದುಕೊಳ್ಳು (ಕಾಮಕ್ಕೆ ಅಭಿಮಾನಿಯು ಕಾಲನೇಮಿಯು) ॥ ೩೭ ॥

**ಭಾ ॥ (೧) ಯಸ್ತು ಬಲವಾನ್ಪ್ರವರ್ತಕಃ ಸ ಏಷ ಕಾಮಃ ಕ್ರೋಧೋಽಪ್ಯೇಷ ಏವ । ತಜ್ಜನ್ಯತ್ವಾತ್ । ಕಾಮಾತ್ಕ್ರೋಧೋಽಭಿಜಾಯತ ಇತಿ ಹ್ಯುಕ್ತಂ ॥ (೨) ಯತ್ರಾಪಿ ಗುರುನಿಂದಾದಿನಿಮಿತ್ತಃ ಕ್ರೋಧಃ ತತ್ರಾಪಿ ಭಕ್ತಿನಿಮಿತ್ತಾನಿಂದಾಕಾಮನಿಮಿತ್ತ ಏವ ॥ (೩) ಯೇ ತ್ವನ್ಯಥಾ ವದಂತಿ ತೇ ಸಂಕರಾನ್ನ ಸೂಕ್ಷ್ಮಂ ಜಾನಂತಿ । ಉಕ್ತಂ ಚ । ಋತೇ ಕಾಮಂ ನ ಕೋಪಾದ್ಯಾ ಜಾಯಂತೇ ಹಿ ಕಥಂಚನೇತಿ ॥ (೪) ಮಹಾಶನಃ । ಮಹದ್ಧಿ ಕಾಮಭೋಗ್ಯಂ । ಮಹಾಬ್ರಹ್ಮಹತ್ಯಾದಿಕಾರಣತ್ವಾನ್ಮಹಾಪಾಪ್ಮಾ । ಸರ್ವಪುರುಷಾರ್ಥವಿರೋಧಿತ್ವಾದ್ವೈರೀ ॥ ೩೭ ॥**

ಅ ॥ (೧) ಬಲಿಷ್ಠನಾಗಿದ್ದು ಪಾಪಕರ್ಮಗಳನ್ನು ಮಾಡುವಂತೆ ಪ್ರವೃತ್ತಿಮಾಡಿಸುವ ಪುರುಷನು ಯಾವನೋ, ಅವನು ಕಾಮಾಭಿಮಾನಿಯಾದ ಕಾಲನೇಮಿಯು ಕಾಮದಿಂದ ಕ್ರೋಧವು ಹುಟ್ಟುವುದರಿಂದ ಕ್ರೋಧವು ಕಾಮವೇ ಕಾಮದಿಂದ ಕ್ರೋಧವು ಹುಟ್ಟುತ್ತದೆಂದು ಪುರಾಣದಲ್ಲಿ ಹೇಳಿದೆ (೨) ಯೋಗ್ಯನು ಗುರುಗಳ ನಿಂದಾದಿಗಳನ್ನು ಕೇಳಿದರೆ ನಿಂದೆಮಾಡುವವನಲ್ಲಿ ಸಿಟ್ಟುಗೊಳ್ಳುತ್ತಾನೆ ಆಗ ಕಾಮವಿಲ್ಲದಿದ್ದರೂ ಕ್ರೋಧವು ಹುಟ್ಟುವುದರಿಂದ ಕಾಮದಿಂದಲೇ ಕ್ರೋಧವು ಹುಟ್ಟುತ್ತದೆಂಬುವುದು ಯುಕ್ತವಲ್ಲವೆಂದರೆ) ಎಲ್ಲಿ ಗುರುಗಳ ನಿಂದಾದಿಗಳನ್ನು ಮಾಡಿದ್ದರಿಂದ (ಶಿಷ್ಯನಿಗೆ) ಕ್ರೋಧವುಂಟಾಗುತ್ತದೋ ಅಲ್ಲಿಯೂ ಗುರುಗಳಲ್ಲಿ ವಿಶೇಷತಃ ಭಕ್ತಿಯಿದ್ದ ಪ್ರಯುಕ್ತ ಗುರುಗಳನ್ನು ನಿಂದಿಸಬಾರದೆಂಬ ಕಾಮದಿಂದಲೇ ಕ್ರೋಧವು ಹುಟ್ಟಿದ್ದು (೩) (ಅದ್ವೈತ ಭಾಷ್ಯದಲ್ಲಿ ಕಾಮಕ್ಕೆ ಬೇಕಾದ ವಿಷಯವು ಸಿಗದಿದ್ದರೆ ಆ ಕಾಮವೇ ಕ್ರೋಧರೂಪವಾಗಿ ಪರಿಣಮಿಸುತ್ತದೆಂದು ಹೇಳಿದೆ ಅದು ಅಯುಕ್ತವೆನ್ನುತ್ತಾರೆ) ಯಾರು ಕಾಮವೇ ಕ್ರೋಧರೂಪವಾಗಿ ಪರಿಣಾಮವನ್ನು ಹೊಂದುತ್ತದೆಂದು ಹೇಳುತ್ತಾರೋ, ಅವರು ಒಂದೇ ಅಂತಃಕರಣವು ಉಪಾದಾನಕಾರಣವಾಗಿ ಇರೋಣ ಸ್ವರೂಪವಾಗಿಯೂ ಮತ್ತು (ಒಂದೇ ಅಂತಃಕರಣವು ಕಾಮಕ್ಕೂ ಕ್ರೋಧಕ್ಕೂ ಉಪಾದಾನಕಾರಣವು) ಕಾಮಾನಂತರ್ಯರೂಪವಾಗಿಯೂ ಇರುವ (ಕಾಮವು ಹುಟ್ಟಿದೊಡನೆ ಅವ್ಯವಹಿತ ಕ್ಷಣದಲ್ಲಿ ಕ್ರೋಧವುಂಟಾಗುತ್ತದೆ) ಸಂಕರವಶೆಯಿಂದ ಕಾಮಕ್ರೋಧಗಳ ಅತ್ಯಂತ ಭೇದವನ್ನು ತಿಳಿಯುವುದಿಲ್ಲ (ಕಾಮರೂಪಗುಣವು ಕ್ರೋಧರೂಪ ಗುಣಕ್ಕೆ ಉಪಾದಾನಕಾರಣವಲ್ಲ ಮತ್ತೆ ನಿಮಿತ್ತಕಾರಣವೇ) (೪) ಕಾಮವಿಲ್ಲದೆ ಕ್ರೋಧ ಮೊದಲಾದವುಗಳು ಹೇಗೂ ಹುಟ್ಟುವುದಿಲ್ಲ. ಕಾಮ ಕ್ರೋಧಾದಿಗಳಿಗೆ ಕಾರ್ಯಕಾರಣಭಾವವು ಎಂದು ಹೇಳಲ್ಪಟ್ಟಿದೆ (೫) ಯಾವಕಾರಣದಿಂದ ಕಾಮಕ್ಕೆ ಭೋಗ್ಯವಾದ ವಿಷಯವು ಬಹಳವಿದೆಯೋ, ಆದಕಾರಣ ಮಹಾಶನಃ ಎನಿಸುತ್ತದೆ. ಮಹತ್ತಾದ ಬ್ರಹ್ಮಹತ್ಯಾದಿ ಪಾಪಗಳಿಗೆ ಕಾರಣವಾದುದರಿಂದ ಮಹಾಪಾಪ್ಮಾ ಎನಿಸುತ್ತದೆ ಮೋಕ್ಷಕ್ಕೆ ಸಂಪೂರ್ಣ ವಿರೋಧಿಯಾದುದರಿಂದ ವೈರಿಯು ॥ ೩೭ ॥

ಪೀ—ಕ್ರೋಧಾದಿಗಳಿಗೆ ಅಭಿಮಾನಿಗಳಾದ ಅಶುಭ ಪ್ರೇರಕರಾದ ಅಸುರರಲ್ಲಿ ಕಾಮವು ಪ್ರಬಲವು ಹೇಗೆಂದರೆ—

**ಗೀ ॥ ಧೂಮೇನಾಽಽವ್ರಿಯತೇ ವಹ್ನಿರ್ಯಥಾಽಽದರ್ಶೋ ಮಲೇನ ಚ ।**
**ಯಥೋಲ್ಬೇನಾಽಽವೃತೋ ಗರ್ಭಸ್ತಥಾ ತೇನೇದಮಾವೃತಂ ॥ ೩೮ ॥**

ಅ ॥ ಧೂಮೇನ= ಹೊಗೆಯಿಂದ, ವಹ್ನಿಃ= ಬೆಂಕಿಯು, ಯಥಾ= ಹೇಗೆ, ಆವ್ರಿಯತೇ= ಮುಚ್ಚಿಸಿಕೊಳ್ಳಲ್ಪಡುತ್ತದೋ, ತಥಾ=ಹಾಗೆಯೇ ತೇನ=ಕಾಮದಿಂದ. (ವಿಷಯಾಭಿಲಾಷೆಯಿಂದ) ಇದಂ=ಉತ್ತಮ ಜೀವರ ಸಮುದಾಯವು, ಆವೃತಂ=ಸ್ವಲ್ಪ ಮುಚ್ಚಿಸಿಕೊಳ್ಳಲ್ಪಟ್ಟಿದೆ. ಯಥಾ=ಹೇಗೆ, ಆದರ್ಶಃ=ಕನ್ನಡಿಯು, ಮಲೇನ=ಮಾಲಿನ್ಯದಿಂದ, ಮುಚ್ಚಿಸಿಕೊಳ್ಳಲ್ಪಡುತ್ತದೋ, ಹಾಗೆಯೇ ಮಧ್ಯಮ ಜೀವರ ಸಮೂಹವು ಕಾಮದಿಂದ ಸ್ವಲ್ಪ ಹೆಚ್ಚು ಮುಚ್ಚಿಸಿಕೊಳ್ಳಲ್ಪಟ್ಟಿದೆ ಯಥಾ=ಹೇಗೆ ಗರ್ಭಃ=ಗರ್ಭವು, ಉಲ್ಬೇನ=ಗರ್ಭವನ್ನು ಆವರಿಸಿಕೊಂಡಿರುವ ಚರ್ಮದಿಂದ, ಆವ್ರಿಯತೇ=ಸಂಪೂರ್ಣ ಹೇಗೆ ಮುಚ್ಚಿಸಿಕೊಳ್ಳಲ್ಪಡುತ್ತದೋ ಹಾಗೆಯೇ ಅಧಮಜೀವರ ಸಮುದಾಯವು ಕಾಮದಿಂದ ಸಂಪೂರ್ಣ ಮುಚ್ಚಿಸಿಕೊಳ್ಳಲ್ಪಟ್ಟಿದೆ (ಮೂರು ವಿಧ ಜೀವರ ಸಮುದಾಯಕ್ಕೂ ಯಥಾಯೋಗ್ಯವಾಗಿ ಕಾಮವು ಪರಾಪರ ತತ್ವಜ್ಞಾನಕ್ಕೆ ಪ್ರತಿಬಂಧಕವಾಗಿದೆ ) ॥ ೩೮ ॥

ಭಾ ॥ (೧) ಕಥಂ ವಿರೋಧೀ ಸಃ ॥ (೨) ಇದಮನೇನಾವೃತಂ ॥ (1) ಯಥಾ ಧೂಮೇನಾಗ್ನಿರಾವೃತಃ ಪ್ರಕಾಶರೂಪೋಽಪ್ಯನ್ಯೇಷಾಂ ಸಮ್ಯಗದರ್ಶನಾಯ ತಥಾ ಪರಮಾತ್ಮಾ । (2) ಯಥಾಽಽದರ್ಶೋ ಮಲೇನಾವೃತೋಽನ್ಯಾಭಿವ್ಯಕ್ತಿಹೇತುರ್ನ ಭವತಿ ತಥಾಽಂತಃಕರಣಂ ಪರಮಾತ್ಮಾದೇರ್ವ್ಯತಿರಿಕ್ತಹೇತುರ್ನ ಭವತಿ । ಕಾಮೇನಾವೃತಂ । (3) ಯಥೋಲ್ಬೇನಾವೃತ್ಯ ಬದ್ಧೋ ಭವತಿ ಗರ್ಭಃ । ತಥಾ ಕಾಮೇನಾವೃತೋ ಜೀವಃ ॥ ೩೮ ॥

ಅ ॥ (೧) ಆ ಕಾಮವು ಮೋಕ್ಷಕ್ಕೆ ವಿರೋಧಿಯು ಹೇಗೆ ಎಂದರೆ (ಧೂಮೇನ ಎಂಬುದರಿಂದ ಸಮಾಧಾನ ಹೇಳುತ್ತಾರೆ ) (೨) (ಹೇಳಲಿಷ್ಟ ಅರ್ಥವನ್ನು ಸ್ಪಷ್ಟವಾಗಿ ಹೇಳುತ್ತಾರೆ) ಈಶ್ವರ ಅಂತಃಕರಣ ಜೀವರೆಂಬ ಮೂರು ವಸ್ತುಗಳು ಕಾಮದಿಂದ ಮುಚ್ಚಿಸಿಕೊಳ್ಳಲ್ಪಟ್ಟಿವೆ ಹೇಗೆಂದರೆ-(1) ಅಗ್ನಿಯು ಧೂಮದಿಂದ ಹೇಗೆ ಮುಚ್ಚಿಕೊಳ್ಳಲ್ಪಡುತ್ತದೋ. ಹಾಗೆಯೇ ಶ್ರೀಹರಿಯು ಜೀವರಲ್ಲಿರುವ ಕಾಮದಿಂದ ಮುಚ್ಚಿಸಿಕೊಳ್ಳಲ್ಪಟ್ಟಿದ್ದಾನೆ ಅಗ್ನಿಯು ಪ್ರಕಾಶ ಸ್ವರೂಪವಾದಾಗ್ಯೂ ಧೂಮದಿಂದ ಮುಚ್ಚಲ್ಪಟ್ಟಿದ್ದಾಗಿ ಇತರರಿಗೆ ಚೆನ್ನಾಗಿ ನೋಡಲಿಕ್ಕೆ ಹೇಗೆ ಶಕ್ಯವಾಗುವುದಿಲ್ಲವೋ, ಹಾಗೆಯೇ ಶ್ರೀಹರಿಯು ತಾನು ಎಲ್ಲವನ್ನು ತಿಳಿದವನಾದರೂ ಶ್ರೀಹರಿಯನ್ನು ಇತರರು ತಿಳಿಯುವುದಿಲ್ಲ (2) ಕನ್ನಡಿಯು ಮಲದಿಂದವೆಂಬಂತೆ ಅಂತಃಕರಣವು ಕಾಮದಿಂದ ಮುಚ್ಚಿಸಿಕೊಳ್ಳಲ್ಪಟ್ಟಿದೆ ಹೇಗೆ ಕನ್ನಡಿಯು ಮಾಲಿನ್ಯದಿಂದ ಮುಚ್ಚಲ್ಪಟ್ಟದ್ದಾಗಿ ಮುಖಾದಿಗಳನ್ನು ತಿಳಿಸುದಕ್ಕೆ ಕಾರಣವಾಗುವುದಿಲ್ಲವೋ, ಹಾಗೆಯೇ ಜೀವರ ಅಂತಃಕರಣವು ಕಾಮದಿಂದ ಮುಚ್ಚಲ್ಪಟ್ಟದ್ದಾಗಿ ಶ್ರೀಹರಿಯನ್ನಾಗಲೀ ಜೀವನ ನಿಜಸ್ವಭಾವವನ್ನಾಗಲೀ ಪ್ರಕಾಶಗೊಳಿಸುವುದಿಲ್ಲ (3) ಗರ್ಭದ ಮುಸುಕಿನಿಂದ ಗರ್ಭವು ಹೇಗೆ ಮುಚ್ಚಲ್ಪಡುತ್ತದೋ. ಹಾಗೆಯೇ ಜೀವನು ಕಾಮದಿಂದ ಮುಚ್ಚಲ್ಪಟ್ಟಿದ್ದಾನೆ ಅಂದರೆ ಹೇಗೆ ಗರ್ಭದ ಮುಸುಕಿನಿಂದ ಗರ್ಭವು ಮುಚ್ಚಲ್ಪಟ್ಟದ್ದಾಗಿ ತನ್ನ ವ್ಯಾಪಾರವನ್ನು ಮಾಡಲಿಕ್ಕೆ ಅಶಕ್ತವಾಗಿದೆಯೋ. ಹಾಗೆಯೇ ಜೀವನೂ ಕೂಡ ಕಾಮ (ವಿಷಯಾಭಿಲಾಷೆ) ದಿಂದ ಕೂಡಿದವನು ಈಶ್ವರಾದಿಗಳ ಜ್ಞಾನವನ್ನು ಸಂಪಾದಿಸುವ ವಿಷಯದಲ್ಲಿ ಶಕ್ತನಾಗುವುದಿಲ್ಲ. ॥ ೩೮ ॥

ಪೀ—ಹೀಗೆ ತಿಳಿಯಲು ಯೋಗ್ಯರಾದ ಈಶ್ವರಾದಿಗಳೂ, ತಿಳಿಸಿಕೊಡುವ ಮನಸ್ಸೂ ತಿಳಿಯುವ ಜೀವನೂ ಇವರಿಗೆ ಕಾಮವು ಜ್ಞಾನವು ಹುಟ್ಟುವುದರಲ್ಲಿ ಪ್ರತಿಬಂಧಕವೆಂದು ಹೇಳಿದೆ ಈಗ ಕಾಮವು ಶಾಸ್ತ್ರಗಳಿಂದ ಜ್ಞಾನವು ಹುಟ್ಟಿದರೂ ಆ ಅಪರೋಕ್ಷಜ್ಞಾನವನ್ನು ಹುಟ್ಟಿಸುವುದಲ್ಲಿ ಪ್ರತಿಬಂಧಕವಾಗುತ್ತದೆನ್ನುತ್ತಾರೆ—

**ಗೀ || ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ |**
**ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ || ೩೯ ||**

**ಅ ||** ಕೌಂತೇಯ=ಅರ್ಜುನನೇ, ಜ್ಞಾನಿನಃ=ಶಾಸ್ತ್ರಗಳಿಂದುಂಟಾದ ಜ್ಞಾನವುಳ್ಳ ಜನರಲ್ಲಿರುವ, ಜ್ಞಾನಂ=ಶಾಸ್ತ್ರದಿಂದುಂಟಾದ ಜ್ಞಾನವು, ನಿತ್ಯವೈರಿಣಾ=ಸದಾ ಅಪಕಾರಮಾಡುವ, ದುಷ್ಪೂರೇಣ=ದುಃಖದಿಂದ ಪೂರೈಸಲಿಕ್ಕೆ ಶಕ್ಯವಾದ, ಅನಲೇನ=ಸರ್ವಥಾ ತೃಪ್ತಿಯಿಲ್ಲದಿರುವ, (ಅಂದರೆ ಮಹಾಭೋಗ್ಯ ವಿಷಯಗಳು ದೊರೆತರೂ ಇನ್ನಷ್ಟು ವಿಷಯಗಳಲ್ಲಿ ಹೆಚ್ಚು ಇಚ್ಛೆಯಿಂದ ಅಲಂಬುದ್ಧಿಯಿಲ್ಲದಿರುವ,) ಕಾಮರೂಪೇಣ=ಕಾಮ ಎಂದು ಹೆಸರುಳ್ಳ, ಏತೇನ=ವಿಷಯಗಳ ಇಚ್ಛೆಯಿಂದ, ಆವೃತಂ=ಮರೆಮಾಡಲ್ಪಟ್ಟಿದೆ (ಅಂದರೆ ಶಾಸ್ತ್ರದಿಂದುಂಟಾದ ಜ್ಞಾನವು ಕೂಡ ಕಾಮದಿಂದ ಮುಚ್ಚಲ್ಪಟ್ಟದ್ದಾದರೆ ಶ್ರೀಹರಿಯ ಅಪರೋಕ್ಷಜ್ಞಾನವನ್ನುಂಟುಮಾಡಲಿಕ್ಕೆ ಸಮರ್ಥವಾಗುವುದಿಲ್ಲ) || ೩೯ ||

**ಭಾ || (೧) ಶಾಸ್ತ್ರತೋ ಜಾತಮಪಿ ಜ್ಞಾನಂ ಪರಮಾತ್ಮಾಪರೋಕ್ಷ್ಯಾಯ ನ ಪ್ರಕಾಶತೇ ಕಾಮೇನಾವೃತಂ || (೨) ಜ್ಞಾನಿನೋಽಪಿ ಕಿಮಲ್ಪಜ್ಞಾನಿನಃ || (೩) ಕಾಮರೂಪೇಣ ಕಾಮಾಖ್ಯೇನ ನಿತ್ಯವೈರಿಣಾ | ದುಷ್ಪೂರೇಣ ದುಃಖೇನ ಹಿ ಕಾಮಃ ಪೂರ್ಯತೇ | ನ ಹೀಂದ್ರಾದಿಪದಂ ಸುಖೇನ ಲಭ್ಯತೇ || (೪) ಯದ್ಯಪೀಂದ್ರಾದಿಪದಂ ಪ್ರಾಪ್ತಃ ಪುನರ್ಬ್ರಹ್ಮಾದಿಪದಮಿಚ್ಛತೀತ್ಯಲಂಬುದ್ಧಿರ್ನಾಸ್ತೀತ್ಯನಲಃ || (೫) ಉಕ್ತಂ ಚ | ಜ್ಞಾನಸ್ಯ ಬ್ರಹ್ಮಣಶ್ಚಾಗ್ನೇರ್ಧೂಮೋ ಬುದ್ಧೇರ್ಮಲಂ ತಥಾ | ಆದರ್ಶಸ್ಯಾಥ ಜೀವಸ್ಯ ಗರ್ಭಸ್ಯೋಲ್ಬೋ ಹಿ ಕಾಮಕ ಇತಿ || ೩೯ ||**

**ಅ ||** (೧) ಕಥಂಚಿತ್ ಶಾಸ್ತ್ರಶ್ರವಣ ಮನನಗಳಿಂದುಂಟಾದ ಜ್ಞಾನವು ವಿಷಯಾಭಿಲಾಷೆಯಿಂದ ಪ್ರತಿಬದ್ಧವಾದರೆ ಶ್ರೀಹರಿಯ ಅಪರೋಕ್ಷಜ್ಞಾನರೂಪವಾದ ತನ್ನ ಕಾರ್ಯವನ್ನು ಹುಟ್ಟಿಸಲಿಕ್ಕೆ ಸಮರ್ಥವಾಗುವುದಿಲ್ಲ (೨) ಶಾಸ್ತ್ರಗಳಿಂದುಂಟಾದ ಜ್ಞಾನವುಳ್ಳವನ ಜ್ಞಾನವೂ ಕೂಡ ವಿಷಯಾಭಿಲಾಷೆಯಿಂದ ಕೂಡಿದ್ದರೆ ತನ್ನ ಕಾರ್ಯವನ್ನು ಮಾಡಲಿಕ್ಕೆ ಶಕ್ತವಾಗುವುದಿಲ್ಲವೆಂದು ಹೇಳಿದ್ದರಿಂದ ಗುರುಗಳ ಉಪದೇಶದಿಂದ ಮಾತ್ರ ಉಂಟಾದ ಜ್ಞಾನವುಳ್ಳವನ ಜ್ಞಾನವು ಕಾರ್ಯವನ್ನು ತಡೆಯುತ್ತದೆಂಬುವುದು ಸುತರಾಂ ಸಿದ್ಧವು. (೩) ಕಾಮರೂಪೇಣ=ಕಾಮ ಎಂದು ಹೆಸರುಳ್ಳ, ನಿತ್ಯವೈರಿಣಾ=ಸರ್ವದಾ ಶತ್ರುವಾಗಿರುವ, (ಯಾವುದು ಪೂರ್ಣೀಕರಿಸಲಿಕ್ಕೆ ಅಶಕ್ಯವೋ ಅದು ದುಷ್ಪೂರವು ಭೋಗ್ಯವಿಷಯಗಳನ್ನು ಕೊಟ್ಟು ಕಾಮವನ್ನು ಪೂರ್ಣೀಕರಿಸಲಿಕ್ಕೆ ಶಕ್ಯವಾಗಿದೆ ಆದಕಾರಣ ದುಷ್ಪೂರವಾಗುವುದು ಹೇಗೆ ಎಂದರೆ—) ದುಃಖದಿಂದ (ಕಷ್ಟದಿಂದ) ಕಾಮವು ಪೂರೈಸಲ್ಪಡುತ್ತದೆ (ಹೇಗೆಂದರೆ) ಇಂದ್ರಾದಿ ದೇವತೆಗಳ ಪದವು ಸುಖದಿಂದ ಹೊಂದಲ್ಪಡುವುದಿಲ್ಲ. (೪) (ವಿಶೇಷವಾಗಿ ಜ್ವಲಿಸುವ ಸ್ವರೂಪವಾಗಿರುವುದರಿಂದ ಕ್ರೋಧವೇ ಅನಲವೆಂದು ಅನ್ನಿಸಿಕೊಳ್ಳಬೇಕು. ಕಾಮವು ಅನಲವೂ ಹೇಗೆ ಆಗುವುದು? ಎಂದರೆ) ಯದ್ಯಪಿ ದುಃಖದಿಂದ ಇಂದ್ರಾದಿಗಳ ಪದವು ಪ್ರಾಪ್ತವಾಗಿದೆ. ಆದರೂ ಅದಕ್ಕಿಂತಲೂ ಅಧಿಕವಾದ ಬ್ರಹ್ಮಾದಿಗಳ ಪದವನ್ನು ಇಚ್ಛಿಸುತ್ತಾನೆ. ಎಷ್ಟು ಲಭಿಸುವುದೋ, ಅದಕ್ಕಿಂತಲೂ ಹೆಚ್ಚು ಸುಖವನ್ನು ಇಚ್ಛಿಸುತ್ತಾನೆ) ಕಾಮುಕನಿಗೆ ತೃಪ್ತಿಯು ಇಲ್ಲವೇ ಇಲ್ಲ (ಅಂತಹವನಿಗೆ ಮೋಕ್ಷಪ್ರಯತ್ನವು ಕೂಡುವುದೇ ಇಲ್ಲ) ಆದಕಾರಣ ಕಾಮವು ಅನಲಃ ಎನಿಸುತ್ತದೆ (ಅಯೋಗ್ಯರಾದ ಹಿರಣ್ಯಕಾದಿಗಳಿಗೆ ಬಲಾತ್ಕಾರದಿಂದ ಇಂದ್ರಾದಿಗಳ ಪದಲಾಭವು ಆಗಿದೆ ಎಂದು ಪುರಾಣಾದಿಗಳಲ್ಲಿದೆ ಅವರನ್ನು ಈ ವಾಕ್ಯವು ಹೇಳುತ್ತದೆ ಅಗ್ನಿಗೆ ಧೂಮ

ದಂತೆ ಜ್ಞೇಯನಾದ ಬ್ರಹ್ಮನ ಜ್ಞಾನವು ಹುಟ್ಟುವುದರಲ್ಲಿ ಕುತ್ಸಿತ ಕಾಮವು ಪ್ರತಿಬಂಧಕವಾಗಿದೆ. ಮಾಲಿನ್ಯವು ಕನ್ನಡಿಯಿಂದ ಮೋರೆಯ ಜ್ಞಾನವು ಬರುವುದರಲ್ಲಿ ಹೇಗೆ ಪ್ರತಿಬಂಧಕವೋ, ಹಾಗೆಯೇ ಅಂತಃಕರಣದಿಂದ ಬ್ರಹ್ಮಜ್ಞಾನವು ಹುಟ್ಟುವುದರಲ್ಲಿ ಕುತ್ಸಿತ ಕಾಮವು ಪ್ರತಿಬಂಧಕವು ಹೇಗೆ ಗರ್ಭಕ್ಕೆ ಗರ್ಭದ ಮುಸುಕು ತನ್ನ ಕಾರ್ಯಮಾಡಲಿಕ್ಕೆ ಪ್ರತಿಬಂಧಕವೋ, ಹೀಗೆಯೇ ಜೀವನಿಗೆ ಬ್ರಹ್ಮಜ್ಞಾನವು ಬರುವುದರಲ್ಲಿ ಕುತ್ಸಿತಕಾಮವು ಪ್ರತಿಬಂಧಕವು ॥ ೩೯ ॥

ಪೀ—ಪಾಪಕರ್ಮ ಪ್ರವರ್ತಕರಲ್ಲಿ ಬಲಿಷ್ಠನಾದ ಕಾಮಾಖ್ಯ ಶತ್ರುವನ್ನು ನಿವೃತ್ತಿಗೊಳಿಸುವುದಕ್ಕಾಗಿ ಕಾಮದ ಅಧಿಷ್ಠಾನ ಹೇಳುತ್ತಾರೆ.

## ಗೀ ॥ ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ ।
## ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಂ ॥ ೪೦ ॥

ಅ ॥ ಅಸ್ಯ=ಕಾಮನೆಂಬ ಶತ್ರುವಿಗೆ, ಇಂದ್ರಿಯಾಣಿ=ಚಕ್ಷುರಾದೀಂದ್ರಿಯಗಳು, ಮನಃ=ಮನಸ್ಸು, (ಸಂಕಲ್ಪವನ್ನು ಹುಟ್ಟಿಸುವುದು.) ಬುದ್ಧಿಃ=ಬುದ್ಧಿಯು (ನಿಶ್ಚಯವನ್ನುಂಟುಮಾಡುವುದು) ಅಧಿಷ್ಠಾನಂ=ಆಶ್ರಯವು, ಎಂದು, ಉಚ್ಯತೇ=ಹೇಳಲ್ಪಡುತ್ತದೆ ಏಷಃ=ಈ ಕಾಮನೆಂಬ ಶತ್ರುವು, ಏತೈಃ=ವಿಷಯಸಂಬದ್ಧಗಳಾದ ಮನಸ್ಸು ಬುದ್ಧಿ ಇಂದ್ರಿಯಗಳಿಂದ ಜ್ಞಾನಂ ಆವೃತ್ಯ=ಜ್ಞಾನವನ್ನು ಹುಟ್ಟದಂತೆ ಮಾಡಿ, ಅಥವಾ ಜ್ಞಾನವು ಹುಟ್ಟಿದರೂ ಅದರಿಂದ ಅಪರೋಕ್ಷಜ್ಞಾನ ರೂಪಕಾರ್ಯವು ಆಗದಂತೆ ಮಾಡಿ, ದೇಹಿನಂ=ಜೀವನನ್ನು, ವಿಮೋಹಯತಿ=ಮೋಹಗೊಳಿಸುತ್ತದೆ ॥ ೪೦ ॥

ಭಾ ॥ ವಧಾರ್ಥಂ ಶತ್ರೋರಧಿಷ್ಠಾನಮಾಹ । ಇಂದ್ರಿಯಾಣೀತಿ । ಏತೈರ್ಜ್ಞಾನಮಾವೃತ್ಯ
ಬುದ್ಧ್ಯಾದಿಭಿರ್ಹಿ ವಿಷಯಗೈರ್ಜ್ಞಾನಮಾವೃತಂ ಭವತಿ ॥ ೪೦ ॥

ಅ ॥ ಕಾಮ ಮೊದಲಾದ ಶತ್ರುವನ್ನು ಸಂಹರಿಸುವುದಕ್ಕಾಗಿ (ಅಂದರೆ ವಿಷಯಾಭಿಲಾಷೆಯನ್ನು ಬಿಡಿಸುವುದಕ್ಕಾಗಿ) ಇಂದ್ರಿಯಾಣಿ ಎಂಬುವುದರಿಂದ ಕಾಮದ ಅಧಿಷ್ಠಾನವನ್ನು ಹೇಳುತ್ತಾರೆ ಏತೈಃ ಜ್ಞಾನಂ ಆವೃತ್ಯ ಅಂದರೆ ವಿಷಯಸನ್ನಿಕೃಷ್ಟಗಳಾದ ಮನಸ್ಸು ಬುದ್ಧಿ ಇಂದ್ರಿಯಗಳಿಂದ ಜ್ಞಾನವು ಮುಚ್ಚಲ್ಪಡುತ್ತದೆ (ಅಂದರೆ) ಕಾಮವು ಇವುಗಳಿಂದ ಬ್ರಹ್ಮಜ್ಞಾನವು ಬಾರದಂತೆ ಮಾಡುತ್ತದೆ. ॥ ೪೦ ॥

## ಗೀ ॥ ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।
## ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಂ ॥ ೪೧ ॥

ಅ ॥ ಭರತರ್ಷಭ=ಭರತಕುಲದಲ್ಲಿ ಶ್ರೇಷ್ಠನಾದ ಅರ್ಜುನನೇ, ತಸ್ಮಾತ್=ಕಾಮವು ಮೋಹವನ್ನು ಹೊಂದಿಸಿಕೊಡುವುದರಿಂದ, ತ್ವಂ=ನೀನು, ಆದೌ=ಮೊದಲು, ಇಂದ್ರಿಯಾಣಿ=ಚಕ್ಷುರಾದೀಂದ್ರಿಯಗಳನ್ನು, ನಿಯಮ್ಯ=ಕೆಟ್ಟ ವಿಷಯಗಳಲ್ಲಿ ಹೋಗದಂತೆ ಮಾಡಿ, ಅಥವಾ ಇಂದ್ರಿಯಗಳಿಗೆ ವಿಷಯಸಂಬಂಧವಾದರೂ ಮನಸ್ಸು ಬುದ್ಧಿಗಳಿಗೆ ವಿಷಯಸಂಪರ್ಕವಾಗದಂತೆ ಮಾಡಿ, ಅಥವಾ ಅವುಗಳಿಗೆ ವಿಷಯಸಂಪರ್ಕವಾದರೂ ಕ್ಷೋಭವನ್ನು ಹೊಂದದೆ ಇದ್ದು, ಜ್ಞಾನವಿಜ್ಞಾನನಾಶನಂ=ಗುರುಗಳ ಉಪದೇಶದಿಂದ ಮಾತ್ರ ಉಂಟಾದ ಜ್ಞಾನವನ್ನು, ಶಾಸ್ತ್ರಶ್ರವಣಾದಿಗಳಿಂದುಂಟಾದ ವಿಜ್ಞಾನವನ್ನೂ ವಿನಾಶಗೊಳಿಸುವ ಪಾಪ್ಮಾನಂ=ಬ್ರಹ್ಮಹತ್ಯಾ ಮೊದಲಾದ ಪಾಪಕ್ಕೆ ಕಾರಣವಾದ, ಏನಂ=ಈ ಕಾಮ

ವನ್ನು (ವಿಷಯಾಭಿಲಾಷೆಯನ್ನು) ಪ್ರಜಹಿ= ಬಿಟ್ಟುಬಿಡು. ಹಿ= ಶತ್ರುಗಳ ಆಶ್ರಯವನ್ನು ಅಪಹರಿಸಿದರೆ ನಾಶಗೊಳಿಸಲಿಕ್ಕೆ ಶಕ್ಯನಾಗುವುದೆಂದು ಪ್ರಸಿದ್ಧವು (ಇಂದ್ರಿಯ ಜಯವೇ ವಿಷಯಾಭಿಲಾಷೆಯನ್ನು ಬಿಡಿಸುವ ಉಪಾಯವು) ॥ ೪೧ ॥

ಭಾ ॥ ಹೃತಾಧಿಷ್ಠಾನೋ ಹಿ ಶತ್ರುರ್ನಶ್ಯತಿ ॥ ೪೧ ॥

ಅ ॥ಶತ್ರುವಿನ ಆಶ್ರಯವನ್ನು ಅಪಹರಿಸಿದರೆ ಆತನು ನಾಶಗೊಳಿಸಲಿಕ್ಕೆ ಶಕ್ಯನಾಗುತ್ತಾನೆ ॥೪೧॥

ಪೀ—ಕಾಮ ಏಷಃ ಇತ್ಯಾದಿ ಪರಿಹಾರವಾಕ್ಯದ ಅರ್ಥವನ್ನು ಸ್ಮೃತಿಪ್ರಮಾಣಹೇಳಿ ಹೇಳುತ್ತಾರೆ-

ತಾ ॥ (೧) ಅಖಿಲಪ್ರೇರಕೋ ವಿಷ್ಣುರ್ಬ್ರಹ್ಮಾದ್ಯಾಸ್ತದನಾಂತರಾಃ । ಅಸುರಾ ಅಶುಭೇಷ್ವೇವ ಕಾಮಾದೇರಭಿಮಾನಿನಃ ॥ (೨) ತತ್ರ ಕಾಮಃ ಕಾಲನೇಮಿಃ ಸರ್ವಂ ಧೂಮಮಲೋಲ್ಬವತ್ । ಶುಭಮಧ್ಯಾಧಮಜನಂ ಕ್ರಮಾದಾವೃತ್ಯ ತಿಷ್ಠತಿ ॥ (೩) ಮಹಾಶನಸ್ಯ ತಸ್ಯೇದಂ ನಾಲಂ ತೇನಾನಲೋಽಗ್ನಿವತ್ । ಭುಂಜಾನ ಇಂದ್ರಿಯಾವಿಷ್ಟೋ ಜ್ಞಾನಾಸ್ತ್ರೇಣೈವ ದಹ್ಯತ ಇತಿ ಬ್ರಹ್ಮತರ್ಕೇ ॥ (೪) ಜ್ಞಾನಾವರಣರೂಪೇಣೇದಮಾವೃಣೋತೀತ್ಯಾವೃತಂ ಜ್ಞಾನಮಿತಿ ಪುನರಾಹ । ನ ಕೇವಲಂ ದುಷ್ಪೂರೋ ನಾಲಮಿತಿ ಮನ್ಯತೇ ಚೇತ್ಯನಲಃ । ಅಗ್ನೇರಪ್ಯನಲಃ ಕಾಮೋ ಯನ್ನಾಲಮಿತಿ ಮನ್ಯತ ಇತಿ ಚ ॥ ೩೭—೪೧ ॥

ಅ ॥ (೧) ಶ್ರೀಹರಿಯು ಸರ್ವರಿಗೂ ಪ್ರೇರಕನು, ನಿಯಾಮಕನು ಬ್ರಹ್ಮ ರುದ್ರಾದಿಗಳು ಶ್ರೀಹರಿಯ ಆಜ್ಞೆಯಿಂದಲೇ ಪ್ರೇರಕರು ಅಶುಭ ವಸ್ತುಗಳ ವಿಷಯಗಳಲ್ಲಿ ಪ್ರವರ್ತಕರಾದ ಅಸುರರು ಕಾಮಾದಿಗಳಿಗೆ ಅಭಿಮಾನಿಗಳು. (೨) ಪಾಪಪ್ರವರ್ತಕರಲ್ಲಿ ಕಾಮಾಭಿಮಾನಿಯಾದ ಕಾಲನೇಮಿಯು ಸರ್ವರಿಗಿಂತ ಪ್ರಬಲನು. ಬೆಂಕಿ, ಕನ್ನಡಿ, ಗರ್ಭ ಇವುಗಳನ್ನು ಹೊಗೆ, ಮಲ, ಗರ್ಭದ ಮುಸುಕು ಇವುಗಳು ಹೇಗೆ ಮುಚ್ಚುತ್ತವೋ ಹಾಗೆಯೇ ಉತ್ತಮ ಜನರನ್ನು ಹೊಗೆಯು ಬೆಂಕಿಯನ್ನು ಮುಚ್ಚಿದಂತೆ ಕಾಮವು ಸ್ವಲ್ಪ ಮುಚ್ಚುತ್ತದೆ ಮಧ್ಯಮ ಜನರನ್ನು ಧೂಳಿಯು ಕನ್ನಡಿಯನ್ನು ಮುಚ್ಚಿದಂತೆ ಕಾಮವು ಸ್ವಲ್ಪ ಹೆಚ್ಚು ಮುಚ್ಚುತ್ತದೆ. ಅಧಮ ಜನರನ್ನು ಗರ್ಭದ ಮುಸುಕು ಗರ್ಭವನ್ನು ಮುಚ್ಚಿದಂತೆ ಕಾಮವು ಸಂಪೂರ್ಣ ಮುಚ್ಚುತ್ತದೆ. (೩) (ಕಾಮಕ್ಕೆ ಅಪೇಕ್ಷಿತವಾದುದೆಲ್ಲವನ್ನು ಕೊಟ್ಟು ಗೆಲ್ಲಬಹುದೆಂದರೆ) ಅತಿಹೆಚ್ಚು ಭೋಗ್ಯ ವಿಷಯಗಳುಳ ಆ ಕಾಮಕ್ಕೆ ಎಷ್ಟು ವಿಷಯಗಳನ್ನು ಕೊಟ್ಟರೂ ಸಾಕಾಗದು ಆದಕಾರಣ ಅಗ್ನಿಯಂತೆ ಕಾಮವೂ ಅನಲವೆನಿಸುತ್ತದೆ (ಹಾಗಾದರೆ ಗೆಲ್ಲುವ ಉಪಾಯವು ಯಾವುದೆಂದರೆ) ಬಾಹ್ಯಗಳಾದ ಚಕ್ಷುರಾದೀಂದ್ರಿಯಗಳಲ್ಲಿಯೂ ಅಂತರಗಳಾದ ಮನೋಬುದ್ಧಿಗಳಲ್ಲಿಯೂ ಪ್ರವಿಷ್ಟವಾದ, ದುರ್ವಿಷಯಗಳನ್ನು ವಿಷಯಸಂಬಂಧಗಳಾದ ಇಂದ್ರಿಯಗಳಿಂದ ಅನುಭವಿಸುವ ಕಾಮವು ಜ್ಞಾನವೆಂಬ ಅಸ್ತ್ರದಿಂದಲೇ ಸುಡಲ್ಪಡುತ್ತದೆ, ಎಂದು ಬ್ರಹ್ಮತರ್ಕದಲ್ಲಿದೆ (೪) (ಈ ಕಾಮಕ್ಕೆ ಇವುಗಳು ಅಧಿಷ್ಠಾನವಾಗಲಿ. ಈ ಕಾಮನನ್ನು ಕೊಲ್ಲಲಿಕ್ಕೆ ಆಯುಧವು ಯಾವುದೆಂದರೆ) ಧೂಮೇನ ಎಂಬುದರಿಂದ ಕಾಮವು ಎಲ್ಲವನ್ನು ಮುಚ್ಚಿಬಿಡುತ್ತದೆಂದು ಹೇಳಿದೆ ಪುನಃ ಅದನ್ನೇ ಆವೃತಂ ಜ್ಞಾನಮೇತೇನ ಎಂಬುದರಿಂದ ಏಕೆ ಹೇಳಿದ್ದೆಂವರೆ) ಜ್ಞಾನ ಆವರಣರೂಪದಿಂದ ವಿಷಯ ಸಮುದಾಯವನ್ನು ಆವರಿಸಿರುವುದರಿಂದ ಆವೃತವಾದುದು ಜ್ಞಾನವೆಂದು ಪುನಃ ಹೇಳಿದ್ದಾರೆ. ಅಂದರೆ ಪೂರ್ವದಲ್ಲಿ ಕಾಮವು ಜ್ಞಾನವು ಹುಟ್ಟುವುದರಲ್ಲಿ ಪ್ರತಿಬಂಧವೆಂದು ಹೇಳಿದ್ದು. ಈಗ ಎಷ್ಟು ಪ್ರಯತ್ನ

ದಿಂದ ಶಾಸ್ತ್ರದಿಂದ ಜ್ಞಾನವು ಹುಟ್ಟಿದರೂ ಆ ಜ್ಞಾನದಿಂದ ಅಪರೋಕ್ಷಜ್ಞಾನವು ಹುಟ್ಟುವುದರಲ್ಲಿ ಕಾಮವು ಪ್ರತಿಬಂಧಕವಾಗುತ್ತದೆಂದು ಹೇಳುತ್ತಾರೆ ಆದುದರಿಂದ ಹಿಂದೆ ಹೇಳಿದ್ದಕ್ಕೂ ಇದಕ್ಕೂ ಪೌನರುಕ್ತ್ಯವಿಲ್ಲ. (೪) (ದುಷ್ಪೂರೇಣ ಅನಲೇನ ಎಂದು ಪುನರುಕ್ತವಾಯಿತೆಂದರೆ ಕಾಮವು) ಕೇವಲ ದುಃಖದಿಂದ ಪೂರ್ಣೀಕರಿಸುವುದು ಎಂದಿಷ್ಟೇ ಅರ್ಥವಲ್ಲ. ಮತ್ತು ಯಾವ ಕಾಮದಿಂದ ಪುರುಷನು ಅಲಂಬುದ್ಧಿಯಿಲ್ಲದವನಾಗುತ್ತಾನೋ, ಆ ಕಾಮವು ಅನಲವೆಂದು ಅನಿಸಿಕೊಳ್ಳುತ್ತದೆ ಕಾಮವು ಅಗ್ನಿಗಿಂತಲೂ ಹೆಚ್ಚಿನ ಅನಲವೆಂದು ಅನಿಸಿಕೊಳ್ಳುತ್ತದೆ ಏಕೆಂದರೆ ಯಾವಾಗಲೂ ಕಾಮವು ಅಲಂಬುದ್ಧಿಯಿಲ್ಲದಿದ್ದುದೇ ॥೩೭-೪೧॥

**ಗೀ ॥ ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥ ೪೨ ॥**

ಅ ॥ ಇಂದ್ರಿಯಾಣಿ=ಇಂದ್ರಿಯಾಭಿಮಾನಿ ದೇವತೆಗಳನ್ನು, ಪರಾಣಿ=ಶರೀರಾಭಿಮಾನಿ ದೇವತೆಗಳಿಗಿಂತ ಉತ್ತಮರನ್ನಾಗಿ, ಆಹುಃ=ಜ್ಞಾನಿಗಳು ಹೇಳುತ್ತಾರೆ ಇಂದ್ರಿಯೇಭ್ಯಃ=ಇಂದ್ರಿಯಾಭಿಮಾನಿ ದೇವತೆಗಳಿಗಿಂತ, ಮನಃ=ಮನೋಽಭಿಮಾನಿದೇವತೆಗಳನ್ನು, ಪರಂ=ಉತ್ತಮರನ್ನಾಗಿ ಹೇಳುತ್ತಾರೆ ಮನಸಸ್ತು=ಮನೋಽಭಿಮಾನಿ ದೇವತೆಗಳದ್ದೆಶೆಯಿಂದ, ಬುದ್ಧಿಃ=ಬುದ್ಧ್ಯಭಿಮಾನಿ ದೇವತೆಯು, ಪರಾ=ಉತ್ಕೃಷ್ಟವಾದುದು ಯಃ=ಯಾವಾತನು, ಬುದ್ಧೇಃ=ಬುದ್ಧ್ಯಭಿಮಾನಿದೇವತೆಗಿಂತ ಪರತಃ=ಉತ್ತಮನಾಗಿರುತ್ತಾನೋ, ಸಃ=ಆತನು, ಪರಮಾತ್ಮನು (ಅಂದರೆ ಬುದ್ಧ್ಯಭಿಮಾನಿದೇವತೆಗಳಿಗಿಂತ ಮಹತ್ತತ್ತ್ವಾಭಿಮಾನಿಯಾದ ಚತುರ್ಮುಖನೂ, ಅವನಿಗಿಂತ ಲಕ್ಷ್ಮೀದೇವಿಯೂ, ಲಕ್ಷ್ಮೀದೇವಿಗಿಂತ ಪರಮಾತ್ಮನೂ ಉತ್ತಮನು.) ॥ ೪೨ ॥

**ಗೀ ॥ ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾಽತ್ಮಾನಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ ॥ ೪೩ ॥**

ಅ ॥ ಮಹಾಬಾಹೋ=ಅರ್ಜುನನೇ, ಏವಂ=ಹಿಂದೆ ಹೇಳಿದ ಪ್ರಕಾರ, ಬುದ್ಧೇಃ=ಬುದ್ಧ್ಯಭಿಮಾನಿದೇವತೆಗಳಿಗಿಂತಲೂ, ಚತುರ್ಮುಖನಿಗಿಂತಲೂ ಲಕ್ಷ್ಮೀದೇವಿಗಿಂತಲೂ, ಪರಂ=ಸರ್ವೋತ್ತಮನಾದ ಶ್ರೀಪರಮಾತ್ಮನನ್ನು, ಬುದ್ಧ್ವಾ=ತಿಳಿದುಕೊಂಡು, ಆತ್ಮನಾ=ಬುದ್ಧಿಯಿಂದ, ಆತ್ಮಾನಂ=ಮನಸ್ಸನ್ನು, ಸಂಸ್ತಭ್ಯ=ವಿಷಯಗಳಲ್ಲಿ ಹೋಗದಂತೆ ಮಾಡಿ, ದುರಾಸದಂ=ದುಃಖದಿಂದ ಹೋಗಲಾಡಿಸಲಿಕ್ಕೆ ಶಕ್ಯವಾದ, ಕಾಮರೂಪಂ=ಕಾಮ ಎನಿಸಿಕೊಂಡ, ಶತ್ರುಂ=ಶತ್ರುವನ್ನು, ಜಹಿ=ಸಂಹರಿಸು (ವಿಷಯಗಳಲ್ಲಿ ಇಚ್ಛೆಯು ಬಾರದಂತೆ ಮಾಡಿಕೊಳ್ಳು) ॥ ೪೩ ॥

**ಗೀ ॥ ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗ-**
**ಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಭೀಷ್ಮಪರ್ವಣಿ ಕರ್ಮ-**
**ಯೋಗೋ ನಾಮ ತೃತೀಯೋಽಧ್ಯಾಯಃ ॥ ೩ ॥**

ಅ ॥ ಹೀಗೆ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀ ಕೃಷ್ಣಾರ್ಜುನರ ಸಂವಾದದಲ್ಲಿ ಭೀಷ್ಮಪರ್ವದಲ್ಲಿ ಕರ್ಮಯೋಗವೆಂಬ ಮೂರನೆಯ ಅಧ್ಯಾಯವು ಮುಗಿಯಿತು ॥ ೩ ॥

**ಭಾ ॥ (೧) ಶತ್ರುಹನನೇ ಆಯುಧರೂಪಂ ಜ್ಞಾನಂ ವಕ್ತುಂ ಜ್ಞೇಯಮಾಹ । ಇಂದ್ರಿ-ಯಾಣೀತಿ ॥ (೨) ಅಸಂಗಜ್ಞಾನಾಸಿಮಾದಾಯ ತರಾತಿಪಾರಮಿತಿ ಹ್ಯುಕ್ತಂ ॥ (೩)**

ಶರೀರಾದೀಂದ್ರಿಯಾಣಿ ಪರಾಣಿ ಉತ್ಪನ್ನಾನಿ । ನ ಕೇವಲಂ ಬುದ್ಧೇಃ ಪರಃ ಶ್ರುತ್ಯು-ಕ್ತಪ್ರಕಾರೇಣಾವ್ಯಕ್ತಾದಪಿ । ಅವ್ಯಕ್ತಾತ್ಪುರುಷಃ ಪರ ಇತಿ ॥ (೪) ನಚ ತತ್ರತ-ತ್ರೋಕ್ತೈಕದೇಶಜ್ಞಾನಮಾತ್ರೇಣ ಭವತಿ ಮುಕ್ತಿಃ । ಸಾರ್ವತ್ರಿಕಗುಣೋಪಸಂಹಾ-ರೋ ಹಿ ಭಗವತಾ ಗುಣೋಪಸಂಹಾರಪಾದೇಽಭಿಹಿತಃ । ಆನಂದಾದಯಃ ಪ್ರಧಾನ-ಸ್ಯೇತ್ಯಾದಿನಾ ॥ ೧ ॥

ಅ ॥ (೧) ಕಾಮ ಮೊದಲಾದ ಶತ್ರುಗಳನ್ನು ಕೊಲ್ಲಲಿಕ್ಕೆ ಆಯುಧರೂಪವಾದ ಜ್ಞಾನವನ್ನು ಹೇಳುವುದಕ್ಕಾಗಿ ಇಂದ್ರಿಯಾಣಿ ಎಂಬುದರಿಂದ ಜ್ಞೇಯವನ್ನು ಹೇಳುತ್ತಾರೆ. (೨) ಕಾಮರೂಪವಾದ ಶತ್ರುವನ್ನು ಕೊಲ್ಲಲಿಕ್ಕೆ (ಜ್ಞಾನವು ಆಯುಧವೆಂಬಲ್ಲಿ ಪ್ರಮಾಣ ಹೇಳುತ್ತಾರೆ—) ವೈರಾಗ್ಯಸಹಿತವಾದ ಜ್ಞಾನವೆಂಬ ಕತ್ತಿಯನ್ನು ಹಿಡಿದುಕೊಂಡು ಪಾರವನ್ನು ದಾಟು ಎಂದು ಹೇಳಿಯದೆ (೩) (ಇಂದ್ರಿಯ ಗಳು ಯಾವುದರಿಂದ ಶ್ರೇಷ್ಠಗಳೆಂದರೆ—) ಶರೀರಾಭಿಮಾನಿದೇವತೆಗಳಿಗಿಂತ ಇಂದ್ರಿಯಾಭಿಮಾನಿ ದೇವತೆ ಗಳು ಶ್ರೇಷ್ಠರು. ಶ್ರೀಪರಮಾತ್ಮನು ಬುದ್ಧ್ಯಭಿಮಾನಿದೇವತೆಗಿಂತ ಮಾತ್ರ ಉತ್ತಮನೆಂದಲ್ಲ ಮತ್ತೆ ಶ್ರುತಿಗಳಲ್ಲಿ ಹೇಳಿದ ಪ್ರಕಾರ ಲಕ್ಷ್ಮೀದೇವಿಗಿಂತಲೂ ಉತ್ತಮನು. ಅವ್ಯಕ್ತಾತ್=ಲಕ್ಷ್ಮೀದೇವಿಗಿಂತ ಷಡ್ಗುಣಪೂರ್ಣನಾದ ಶ್ರೀಪರಮಾತ್ಮನು ಉತ್ತಮನು. ಎಂದು ಶ್ರುತಿಯು (೪) (ಶ್ರೀಹರಿಯು ಲಕ್ಷ್ಮೀ ದೇವಿಗಿಂತಲೂ ಉತ್ತಮನೆಂದು ಒಪ್ಪಿಕೊಳ್ಳುವ ಆದರೂ ಕಾಮಾದಿಗಳನ್ನು ವಶಪಡಿಸಿಕೊಳ್ಳಲಿಕ್ಕೆ ಬುದ್ಧಿ ಗಿಂತ ಉತ್ತಮನೆಂದು ತಿಳಿದರೆ ಸಾಕು. ಬೇರೆ ಪ್ರಮಾಣಗಳಲ್ಲಿ ಹೇಳಿದ್ದನ್ನು ಇಲ್ಲಿ ಇಟ್ಟುಕೊಳ್ಳುವುದು ಏತಕ್ಕೆ? ಎಂದರೆ–) ಗೀತೆಯಲ್ಲಿ ಹೇಳಿದ ಪ್ರಕಾರ ಏಕದೇಶಜ್ಞಾನಮಾತ್ರದಿಂದ ಮುಕ್ತಿಯಾಗುವುದಿಲ್ಲ (ಅಂದರೆ ಕಾಮ ಕ್ರೋಧ ಮೊದಲಾದವುಗಳನ್ನು ವಶಪಡಿಸಿಕೊಳ್ಳುವುದು ಮೋಕ್ಷಕ್ಕೆ ಕಾರಣವು. ಮೋಕ್ಷವು ಏಕದೇಶಜ್ಞಾನಮಾತ್ರದಿಂದ ಆಗುವುದಿಲ್ಲ ) (ಏಕೆ ಆಗುವುದಿಲ್ಲವೆಂದರೆ—) ಸಮಸ್ತ ವೇದಗಳಲ್ಲಿ ಹೇಳಿದ ಗುಣಗಳನ್ನೇ ಏಕಕಾಲದಲ್ಲಿ ಒಂದೇ ಬುದ್ಧಿಯಲ್ಲಿ ಇಟ್ಟುಕೊಂಡು ಶ್ರೀಹರಿಯನ್ನು ಧ್ಯಾನಿಸಬೇ ಕೆಂದು ಶ್ರೀಸೂತ್ರಕಾರರು ಗುಣೋಪಸಂಹಾರ (ಅ ೩ ಪಾ ೩) ಪಾದದಲ್ಲಿ ಆನಂದಾದಯಃ ಪ್ರಧಾನಸ್ಯ ಇತ್ಯಾದಿಗಳಿಂದ ಹೇಳಿರುತ್ತಾರೆ. ॥ ೧ ॥

ಪೀ—ಈ ವಿಷಯದಲ್ಲಿ ಸ್ಪಷ್ಟ ಪ್ರಮಾಣ ಹೇಳುತ್ತಾರೆ–

ಭಾ ॥ (೧) ತಥಾ ಚಾನ್ಯತ್ರ । ಅಪೌರುಷೇಯವೇದೇಷು ವಿಷ್ಣುವೇದೇಷು ಚೈವ ಹಿ । ಸರ್ವತ್ರ ಯೇ ಗುಣಾಃ ಪ್ರೋಕ್ತಾಃ ಸಂಪ್ರದಾಯಾಗತಾಶ್ಚ ಯೇ ॥ (೨) ಸರ್ವೈ-ಸ್ತೈಸ್ಸಹ ವಿಜ್ಞಾಯ ಯೇ ಪಶ್ಯಂತಿ ಪರಂ ಹರಿಂ । ತೇಷಾಮೇವ ಭವೇನ್ಮುಕ್ತಿ-ರ್ನಾನ್ಯಥಾ ತು ಕಥಂಚನೇತಿ ಗಾರುಡೇ ॥ (೩) ತಸ್ಮಾದವ್ಯಕ್ತಾದಪಿ ಪರತ್ವೇನ ಜ್ಞೇಯಃ ॥ (೪) ನ ಚಾತ್ರ ಜೀವ ಉಚ್ಯತೇ । ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತ ಇತ್ಯುಕ್ತತ್ವಾತ್ ॥ (೫) ಅವಿಜ್ಞಾಯ ಪರಂ ಮತ್ತೋ ಜಯಃ ಕಾಮಸ್ಯ ನೈ ಕುತ ಇತಿ ಚ । ಅತಃ ಪರಮಾತ್ಮಜ್ಞಾನಮೇವಾತ್ರ ವಿವಕ್ಷಿತಂ । ಆತ್ಮಾನಂ ಮನಃ ಆತ್ಮನಾ ಬುದ್ಧ್ವಾ ॥ ೨ ॥ ॥ ೪೨,೪೩ ॥

ಅ ॥ (೧)ಇದೇ ವಿಷಯವನ್ನು ಬೇರೆ ಎಲ್ಲಾ ಕಡೆಗಳಲ್ಲಿಯೂ ಹೇಳಿರುತ್ತಾರೆ ಅಪೌರುಷೇಯ ವೇದ ಗಳಲ್ಲಿಯೂ ವಿಷ್ಣುವೇದ (ಭಾರತ ಪಂಚರಾತ್ರ)ಗಳಲ್ಲಿ ಎಲ್ಲಾ ಕಡೆಗಳಲ್ಲಿ ಯಾವ ಗುಣಗಳು ಹೇಳಲ್ಪಟ್ಟ

ಷ್ಟಾವೋ, ಮತ್ತು ಶ್ರೀಹರಿಯ ಉಪದೇಶದಿಂದ ಬಂದವುಗಳು ಯಾವ ಗುಣಗಳು ಇವೆಯೋ, (೨) ಅವುಗಳಿಂದೆಲ್ಲಾ ಕೂಡಿಕೊಂಡು ಯಾರು ಶ್ರೀಹರಿಯನ್ನು ಸರ್ವೋತ್ತಮನನ್ನಾಗಿ ತಿಳಿದುಕೊಂಡು ಪ್ರತ್ಯಕ್ಷೀಕರಿಸಿಕೊಳ್ಳುತ್ತಾರೋ, ಅವರಿಗೇನೇ ಮೋಕ್ಷವು ಹೇಗೂ ಬೇರೆ ರೀತಿಯಾಗಲಾರದು ಎಂದು ಗಾರುಡದಲ್ಲಿ ಹೇಳಿದೆ. (೩) ಆದುದರಿಂದ ಲಕ್ಷ್ಮೀದೇವಿಗಿಂತಲೂ ಶ್ರೀಹರಿಯನ್ನು ಉತ್ತಮನನ್ನಾಗಿ ತಿಳಿಯಬೇಕು. (೪) (ಅದ್ವೈತ ಭಾಷ್ಯದಲ್ಲಿ ಯೋ ಬುದ್ಧೇಃ ಪರಸ್ತು ಸಃ ಎಂಬುದರಿಂದ ಜೀವನು ಹೇಳಲ್ಪಡುತ್ತಾನೆಂದೂ ಭಾಸ್ಕರಾಚಾರ್ಯರ ಮತದಲ್ಲಿ ಕಾಮವು ಹೇಳಲ್ಪಡುತ್ತದೆಂದೂ ಹೇಳಿದೆ, ಎಂದರೆ ಅದು ಅಯುಕ್ತವೆನ್ನುತ್ತಾರೆ---) ಇಲ್ಲಿ ಜೀವನು ಅಥವಾ ಕಾಮನು ಹೇಳಲ್ಪಡುವುದಿಲ್ಲ. (ಏಕೆಂದರೆ) ಏವಂ ಬುದ್ಧೇಃ ಪರಂ ಎಂಬ ಜ್ಞಾನವು ಕಾಮವನ್ನು ವಿನಾಶಪಡಿಸಲಿಕ್ಕೆ ಸಾಧನವೆಂದು ಹೇಳಿದೆ ಆ ಜ್ಞಾನಕ್ಕೆ ವಿಷಯನು ಶ್ರೀಭಗವಂತನು ಎಂದು ಹೇಳಿದರೆ ಕೂಡುತ್ತದೆ (ಇಲ್ಲವಾದರೆ ಕೂಡುವುದಿಲ್ಲವೆಂಬ ಅಭಿಪ್ರಾಯದಿಂದ ಪ್ರಮಾಣ ಹೇಳುತ್ತಾರೆ—) ಜೀವರ ವಿಷಯಾಭಿಲಾಷೆಯು ಪರಮಾತ್ಮನನ್ನು ನೋಡಿದ್ದರಿಂದ ನಿವೃತ್ತವಾಗುತ್ತದೆಂದು ಹೇಳಿದೆ (೫) ನನ್ನ ದೆಶೆಯಿಂದ ಸರ್ವೋತ್ತಮನಾದ ಶ್ರೀಹರಿಯನ್ನು ತಿಳಿಯದೆ ಕಾಮದ ಜಯವು ಹೇಗೆ ಉಂಟಾಗುವುದು? ಎಂದು (ಇದು ಚತುರ್ಮುಖನ ವಾಕ್ಯ) ಆದಕಾರಣ ಶ್ರೀಪರಮಾತ್ಮನ ಜ್ಞಾನವನ್ನೇ ಇಲ್ಲಿ ಇಟ್ಟುಕೊಳ್ಳಬೇಕು ಆತ್ಮಾನಂ= ಮನಸ್ಸನ್ನು, ಆತ್ಮನಾ= ಬುದ್ಧಿಯಿಂದ. ॥ ೪೨, ೪೩ ॥

ಭಾ ॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾಭಾಷ್ಯೇ ತೃತೀಯೋಽಧ್ಯಾಯಃ ॥ ೩ ॥

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾಭಾಷ್ಯದಲ್ಲಿ ಮೂರನೇ ಅಧ್ಯಾಯವು ಮುಗಿಯಿತು ॥ ೩ ॥

ಪೀ—ಇಂದ್ರಿಯಾಣಿ ಪರಾಣ್ಯಾಹುಃ ಎಂಬುವಲ್ಲಿ ಇಂದ್ರಿಯಾದಿಗಳಿಂದಲೇ ಜೀವನು ಉತ್ತಮನೆಂದು ಅದ್ವೈತಭಾಷ್ಯದಲ್ಲಿ ಹೇಳಿದೆ. ಅಥವಾ ಇಂದ್ರಿಯಾಣಿ ಮನೋಬುದ್ಧಿಃ ಇತ್ಯಾದಿಗಳಿಂದ ಇಂದ್ರಿಯ ಮನೋಬುದ್ಧಿಗಳಿಗೆ ಹೇಳಿದ ಕಾಮಾಧಿಷ್ಠಾನವು ವಿವರಿಸಲ್ಪಡುತ್ತದೆಂದು ಭಾಸ್ಕರಮತದಲ್ಲಿ ಹೇಳಿದೆ, ಎಂಬ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಸ್ಮೃತಿಯಿಂದಲೇ ಆ ಗೀತೆಯ ಅರ್ಥವನ್ನು ಹೇಳುತ್ತಾರೆ —

ತಾ ॥ (೧) ಸರ್ವೇಭ್ಯಃ ಪ್ರವರಾ ದೇವಾ ಇಂದ್ರಾದ್ಯಾ ಇಂದ್ರಿಯಾತ್ಮಕಾಃ । ತೇಭ್ಯೋ ಮನೋಽಭಿಮಾನೀ ತು ರುದ್ರಸ್ತಸ್ಮಾತ್ಸರಸ್ವತೀ । ಬುದ್ಧ್ಯಾತ್ಮಿಕಾ ತತೋ ಬ್ರಹ್ಮಾ ಮಹಾನಾತ್ಮಾ ಪರಃ ಸ್ಮೃತಃ ॥ (೨) ಅವ್ಯಕ್ತರೂಪಾ ಲಕ್ಷ್ಮೀಶ್ಚ ಪರಾತ್ತತೋಽಪಿ ಹರಿಃ ಸ್ವಯಂ । ನ ತತ್ಸಮೋಽಧಿಕೋ ವೇತ್ತಿ ಹ್ಯಾನುಪೂರ್ವೀ ಪ್ರಕೀರ್ತಿತಾ ॥ (೩) ಯಥಾಕ್ರಮಪ್ರಬೋಧೇನ ನಾಶ್ಯಾಃ ಕಾಮಾದಿಶತ್ರವಃ । ಪ್ರಾಪ್ಸ್ಯತೇ ಚ ಪರಂ ಸ್ಥಾನಂ ವಿಷ್ಣೋರತುಲಮಂಜಸೇತಿ ಚ ॥ ೧ ॥

ಅ ॥ (೧) ಅರ್ಥಾದ್ಯಭಿಮಾನಿದೇವತೆಗಳಿಗಿಂತ ಇಂದ್ರಿಯಾಭಿಮಾನಿಗಳಾದ ಇಂದ್ರನೇ ಮೊದಲಾದ ದೇವತೆಗಳು ಶ್ರೇಷ್ಠರು. ಆ ದೇವತೆಗಳಿಗಿಂತ ಮನಸ್ಸಿಗೆ ಅಭಿಮಾನಿಯಾದ ರುದ್ರನು ಶ್ರೇಷ್ಠನು. ರುದ್ರನಿಗಿಂತ ಬುದ್ಧ್ಯಭಿಮಾನಿನಿಯಾದ ಸರಸ್ವತಿಯು ಶ್ರೇಷ್ಠಳು. ಆ ಸರಸ್ವತಿಗಿಂತ ಮಹತ್ತತ್ತ್ವಾಭಿಮಾನಿಯಾದ ಚತುರ್ಮುಖ ಬ್ರಹ್ಮನು ಶ್ರೇಷ್ಠನು (೨) ಚತುರ್ಮುಖನಿಗಿಂತ ಅವ್ಯಕ್ತತತ್ತ್ವಕ್ಕೆ ಅಭಿಮಾನಿನಿಯಾದ ಲಕ್ಷ್ಮೀ

ದೇವಿಯು ಶ್ರೇಷ್ಠಳು ಲಕ್ಷ್ಮೀದೇವಿಗಿಂತ ಶ್ರೀಹರಿಯು ಶ್ರೇಷ್ಠನು ಶ್ರೀಹರಿಗೆ ಸಮನಾಗಲೀ, ಉತ್ತಮ ನಾಗಲೀ ಇಲ್ಲವೇ ಇಲ್ಲ. ಹೀಗೆ ತಾರತಮ್ಯಕ್ರಮವು ಹೇಳಿದೆ (೩) ಶಾಸ್ತ್ರದಲ್ಲಿ ಹೇಳಿದ ಪ್ರಕಾರ ತಾರ ತಮ್ಯದಿಂದ ತತ್ವಾಭಿಮಾನಿದೇವತೆಗಳನ್ನು ತಿಳಿದುಕೊಂಡು ಕಾಮ ಮೊದಲಾದ ಶತ್ರುಗಳನ್ನು ವಿನಾಶ ಪಡಿಸಿಕೊಳ್ಳಬೇಕು ಆ ಮೇಲೆ ಶ್ರೀ ವಿಷ್ಣುವಿನ ಅಸದೃಶವಾದ, ಉತ್ತಮವಾದ, ವೈಕುಂಠಾದಿ ಸ್ಥಾನ ವನ್ನು ಹೊಂದುತ್ತಾರೆ. ॥ ೧ ॥

ಪೀ—(1) ಅರ್ಥಾಭಿಮಾನಿದೇವತೆಗಳಿಗಿಂತ ಇಂದ್ರಿಯಾಭಿಮಾನಿದೇವತೆಗಳು ಉತ್ತಮರೆಂದು ಹೇಳಿದ್ದು ಯುಕ್ತವಲ್ಲ ಏಕೆಂದರೆ— **ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ** ಇಂದ್ರಿಯಾಭಿಮಾನಿದೇವತೆಗಳಿ ಗಿಂತ ಅರ್ಥಾಭಿಮಾನಿದೇವತೆಗಳು ಶ್ರೇಷ್ಠರೆಂದು ಹೇಳುವ ಶ್ರುತಿಯಿಂದ ವಿರೋಧವು ಬರುವುದು. (2) ಮತ್ತು **ರುದ್ರೋಽಹಂಕೃತಿ ರೂಪಕಃ** ರುದ್ರನು ಅಹಂಕಾರತತ್ವಕ್ಕೆ ಅಭಿಮಾನಿಯು ಎಂಬ ಪ್ರಮಾಣ ವಿರೋಧವು ಬರುವುದರಿಂದ ರುದ್ರನು ಮನೋಽಭಿಮಾನಿಯು ಎಂದು ಹೇಳಿದ್ದು ಯುಕ್ತವಲ್ಲ (3) ಸರ ಸ್ವತಿಯು ವಿಜ್ಞಾನತತ್ವಕ್ಕೆ ಅಭಿಮಾನಿನಿಯು ಎಂದು ಪ್ರಮಾಣವಿರುವುದರಿಂದ ಬುದ್ಧಿಗೆ ಅಭಿಮಾನಿನಿಯು ಎಂದು ಹೇಳಿದ್ದು ಯುಕ್ತವಲ್ಲ, ಎಂದರೆ—

**ತಾ ॥ (೧) ನ ಚೇಂದ್ರಿಯೇಭ್ಯಃ ಪರಾ ಹ್ಯರ್ಥಾ, ರುದ್ರೋಽಹಂಕೃತಿರೂಪಕ ಇತ್ಯಾದಿ- ವಿರೋಧಃ । ಸರ್ವಾಭಿಮಾನಿನೋ ದೇವಾಃ ಸರ್ವೇಽಪಿ ಹ್ಯುತ್ತರೋತ್ತರಂ ॥ (೨) ಆಧಿಕ್ಯಂ ವಕ್ತುಮೇವೈಷಾಂ ಪೃಥಕ್ ಸ್ಥಾನಮುದೀರ್ಯತೇ । ಆಧಿಕ್ಯಕ್ರಮ ಏ- ವಾತ್ರ ಶಾಸ್ತ್ರತಾತ್ಪರ್ಯಮಿಷ್ಯತೇ । ಸ್ಥಾನೇಷು ತ್ವವರೇಷಾಂ ಚ ಪರೇ ಸಂತಿ ನ ಚೇತರೇ ॥ (೩) ತಥಾಽಪಿ ಪಿತುರರ್ಥೋ ಯಃ ಪುತ್ರಸ್ಯಾಪ್ಯುಪಚರ್ಯತೇ । ಅವ್ಯ- ಕ್ತಾದಿಪದಾರ್ಥಾನಾಂ ಸರ್ವೇ ತದಭಿಮಾನಿನ ಇತಿ ಚ । ಯತ್ರ ಹ ಕ್ವಚ ಪುತ್ರಸ್ಯ ತತ್ಪಿತುರ್ಯತ್ರ ವಾ ಪಿತುಸ್ತದ್ವಾ ಪುತ್ರಸ್ಯೇತ್ಯೇತತ್ತದುಕ್ತಂ ಭವತೀತ್ಯಾದಿಶ್ರುತೇಶ್ಚ॥೨॥**

ಅ ॥ (೧) ಇಂದ್ರಿಯಾಭಿಮಾನಿ ದೇವತೆಗಳಿಗಿಂತ ಅರ್ಥಾಭಿಮಾನಿ ದೇವತೆಗಳು ಶ್ರೇಷ್ಠರು. ರುದ್ರನು ಅಹಂಕಾರ ತತ್ವಕ್ಕೆ ಅಭಿಮಾನಿಯು, ಇತ್ಯಾದಿ ಪ್ರಮಾಣಗಳಿಂದ ವಿರೋಧವಿಲ್ಲ ಏಕೆಂದರೆ ಎಲ್ಲಾ ದೇವತೆಗಳೂ ಎಲ್ಲಾದಕ್ಕೂ ಅಭಿಮಾನಿಗಳು (ಅವ್ಯಕ್ತಾದಿಗಳು ಕ್ರಮದಿಂದ ಶ್ರೇಷ್ಠಗಳಾಗಿವೆ ಹೀಗಿದ್ದರೂ ಅವ್ಯಕ್ತಾದಿ ತತ್ವಗಳಿಗೆ ಅಭಿಮಾನಿಗಳೆಂದು ಹೇಳಿದ್ರಿಂದ ಅಭಿಮಾನಿಗಳಲ್ಲಿಯೂ) ಮೇಲು ಮೇಲಿನವರು ಶ್ರೇಷ್ಠರೆಂದು ತಿಳಿಸಿಕೊಡುವುದಕ್ಕಾಗಿ ಪ್ರತ್ಯೇಕ ಪ್ರತ್ಯೇಕ ಅಭಿಮನ್ಯಮಾನಗಳಾದ ಸ್ಥಾನ ಗಳನ್ನು ಹೇಳಿದ್ದು (೨) (ಮೇಲು ಮೇಲಿನವರು ಶ್ರೇಷ್ಠರೆಂದು ತಿಳಿಸುವುದು ಏತಕ್ಕೆಂದರೆ—) ನೀಚೋಚ್ಚಭಾವಕ್ರಮವೇ (ತಾರತಮ್ಯವೇ) ಶಾಸ್ತ್ರಗಳಿಗೆ ಮುಖ್ಯ ತಾತ್ಪರ್ಯವೆಂದು ಸರ್ವಸಮ್ಮತವು. (**ಸರ್ವಾಭಿಮಾನಿನಃ** ಎಂದು ಹೇಳಿದ್ದಕ್ಕೆ ಅಪವಾದ ಹೇಳುತ್ತಾರೆ—) ಅಧಮರು ಅಭಿಮಾನಿಗಳಾಗಿರುವ ಸ್ಥಾನಗಳಲ್ಲಿ ಉತ್ತಮರು ನಿಯಾಮಕರಾಗಿರುತ್ತಾರೆ. ಉತ್ತಮರು ನಿಯಾಮಕರಾಗಿರುವ ಸ್ಥಾನಗಳಲ್ಲಿ ಅಧಮರು ನಿಯಾಮಕರಾಗಿ ಇರುವುದಿಲ್ಲ (೩) (ಹೀಗಾದರೆ ಸರಸ್ವತ್ಯಾದಿಗಳು ಅವ್ಯಕ್ತತತ್ವಕ್ಕೆ ಅಭಿ ಮಾನಿಗಳೆಂದು ಪುರಾಣಾದಿಗಳಲ್ಲಿ ಹೇಳಿದ್ದು ಹೇಗೆ? ಎಂದರೆ—) ಆದರೂ ತಂದೆಯ ದ್ರವ್ಯದಲ್ಲಿ ಮಗ ನಿಗೂ ಅಧಿಕಾರವಿದ್ದುದರಿಂದ ಅಮುಖ್ಯವಾಗಿ ಪ್ರಯೋಗವಿದೆ. ಆದಕಾರಣ ಅವ್ಯಕ್ತಾದಿ ಪದಾರ್ಥಗಳಿಗೆ ಲಕ್ಷ್ಮೀದೇವಿಗಿಂತ ಕೆಳಮಟ್ಟದವಳಾದ ಸರಸ್ವತ್ಯಾದಿಗಳೂ ಅಭಿಮಾನಿಗಳೆಂದು ಹೇಳಿದ್ದು ಕೂಡುತ್ತದೆ (೪) ಯಾವ ವಸ್ತುವಿಗೆ ಮಗನು ನಿಯಾಮಕನಾಗುತ್ತಾನೋ, ಆ ಪದಾರ್ಥಕ್ಕೆ ತಂದೆಯೂ ನಿಯಾಮಕ

ನಾಗಿರುತ್ತಾನೆ. ಯಾವ ವಸ್ತುವಿಗೆ ತಂದೆಯು ನಿಯಾಮಕನೋ, ಆ ವಸ್ತುವಿಗೆ ಮಗನೂ ಸ್ವಾಮಿಯು ನಿಯಾಮಕನೂ ಆಗುತ್ತಾನೆ ಹೀಗೆ ಹೇಳಿದಂತೆ ಆಯಿತು ಇದುಮೊದಲಾದ ಶ್ರುತಿಗಳಿಂದ ॥ ೨ ॥

ಪೀ—ಎಲ್ಲರೂ ಎಲ್ಲಾದಕ್ಕೂ ಅಭಿಮಾನಿಗಳಾಗಿದ್ದರೆ ಅವ್ಯಕ್ತ ಮೊದಲಾದ ಶಬ್ದಗಳ ಅರ್ಥ ನಿಶ್ಚಯವು ಕೂಡುವುದಿಲ್ಲ ಎಲ್ಲವೂ ಅರ್ಥಗಳಾಗಿರುವುದರಿಂದ ಒಂದನ್ನು ಬಿಡುವುದು ಯುಕ್ತವಲ್ಲ ಎಂದರೆ ಸ್ಮೃತಿಯಿಂದ ಅದರ ಅರ್ಥ ಹೇಳುತ್ತಾರೆ—

**ತಾ ॥ (೧) ಬಹುವಾಚಿನಾಂ ಶಬ್ದಾನಾಂ ಲಿಂಗಪ್ರಕರಣಾದಿಭಿಃ । ಪ್ರವೃತ್ತಿಹೇತೋಶ್ಚಾಧಿಕ್ಯಾನ್ನಿರ್ಣಯೋಽರ್ಥೇಷು ಗಮ್ಯತ ಇತಿ ಶಬ್ದನಿರ್ಣಯೇ ॥ (೨) ಲಿಂಗಾದಿಸಾಮ್ಯಂ ಯತ್ರ ಸ್ಯಾತ್ಪ್ರಯೋಗಾಧಿಕ್ಯಮೇವ ತು । ನಿರ್ಣಾಯಕಂ ಭವೇತ್ತತ್ರ ತೇನ ಸ್ಯಾತ್ಸ-ಬಹುಶ್ರುತ ಇತಿ ಬ್ರಹ್ಮತರ್ಕೇ ॥ ೩ ॥ ॥ ೪೨,೪೩ ॥**

ಅ ॥ (೧) ಅನೇಕಾರ್ಥಗಳನ್ನು ಹೇಳುವ ಶಬ್ದಗಳಿಗೆ ಲಿಂಗ ಪ್ರಕರಣ ಮೊದಲಾದವುಗಳಿಂದಲೂ, ಪ್ರವೃತ್ತಿನಿಮಿತ್ತವು ಅಧಿಕವಾಗಿ ಇದ್ದುದರಿಂದಲೂ, ಬ್ರಹ್ಮಾರ್ಥ ವಿಷಯಗಳಲ್ಲಿ ನಿಶ್ಚಯವು ಬರುತ್ತದೆಂದು ಶಬ್ದನಿರ್ಣಯದಲ್ಲಿದೆ (೨) ಲಿಂಗಾದಿಗಳಿಗೆ ಸಾಮ್ಯವಿದ್ದರೆ ಅಲ್ಲಿ ಪ್ರಯೋಗಾಧಿಕ್ಯದಿಂದ ನಿಶ್ಚಯವನ್ನು ಮಾಡಿಕೊಳ್ಳತಕ್ಕದ್ದು ಅದರಿಂದ ಬಹುಶ್ರುತನೆನಿಸಿಕೊಳ್ಳುತ್ತಾನೆ, ಎಂದು ಬ್ರಹ್ಮತರ್ಕದಲ್ಲಿದೆ. ॥೪೨,೪೩॥

**ತಾ ॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ ಗೀತಾ ತಾತ್ಪರ್ಯ ನಿರ್ಣಯೇ ತೃತೀಯೋಽಧ್ಯಾಯಃ ॥ ೩ ॥**

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾ ತಾತ್ಪರ್ಯದಲ್ಲಿ ಮೂರನೇ ಅಧ್ಯಾಯವು ಮುಗಿಯಿತು ॥ ೩ ॥

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀಃ ॥

# ನಾಲ್ಕನೇ ಅಧ್ಯಾಯವು.

ಟೀ—ಹಿಂದಿನ ಅಧ್ಯಾಯದಲ್ಲಿ ನಿಯತಂ ಕುರು ಕರ್ಮ ತ್ವಂ ಇತ್ಯಾದಿಗಳಿಂದ ನಿವೃತ್ತಕರ್ಮವನ್ನು ಸ್ವಲ್ಪ ವಿವರಿಸಿರುತ್ತಾರೆ ಹಾಗೆಯೇ ಯೋ ಬುದ್ಧೇಃ ಪರತಸ್ತು ಸಃ ಇತ್ಯಾದಿಗಳಿಂದ ವಿಷ್ಣುವು ಸರ್ವೋ ತ್ತಮನೆಂದೂ ಹೇಳಿದ್ದಾರೆ ಅವುಗಳನ್ನೇ ಈ ಅಧ್ಯಾಯದಲ್ಲಿ ವಿವರಿಸುತ್ತಾರೆ ಅದರಲ್ಲಿ ಯೋಗಾನು ಷ್ಠಾನದಲ್ಲಿ ಅಭಿರುಚಿಯನ್ನುಂಟುಮಾಡುವುದಕ್ಕಾಗಿ ಯೋಗವನ್ನು ಹಿಂದಿನವರೂ ಮಾಡುತ್ತಿದ್ದರೆಂದು ಮೂರು ಶ್ಲೋಕಗಳಿಂದ ಹೇಳುತ್ತಾರೆ—

ಗೀ ॥ ॥ ಶ್ರೀಭಗವಾನುವಾಚ ॥

ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಂ ।
ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥ ೧ ॥

ಅ ॥ ಶ್ರೀಕೃಷ್ಣನು (ಅರ್ಜುನನಿಗೆ) ಹೇಳುತ್ತಾನೆ. ಅಹಂ= ನಾನು, ಅವ್ಯಯಂ= ನಾಶವಿಲ್ಲದ ಮೋಕ್ಷರೂಪ ಫಲವನ್ನು ಕೊಡುವ, ಇಮಂ ಯೋಗಂ= ಮಯಿ ಸರ್ವಾಣಿ ಕರ್ಮಾಣಿ ಇತ್ಯಾದಿಗಳಿಂದ ಹೇಳಿದ ನಿವೃತ್ತಕರ್ಮರೂಪವಾದ ಜ್ಞಾನೋಪಾಯವನ್ನು, ವಿವಸ್ವತೇ= ಸೂರ್ಯನಿಗೋಸ್ಕರ, ಪ್ರೋಕ್ತ ವಾನ್=ಹೇಳಿರುತ್ತೇನೆ ವಿವಸ್ವಾನ್= ಸೂರ್ಯನು, ಮನವೇ= ತನ್ನ ಮಗನಾದ ಶ್ರಾದ್ಧದೇವನಾದ ಮನುವಿಗೋಸ್ಕರ, ಪ್ರಾಹ= ಉಪದೇಶಿಸಿದನು ಮನುಃ= ಆದೇಮನುವು, ಇಕ್ಷ್ವಾಕವೇ= ತನ್ನ ಮಗ ನಾದ ಇಕ್ಷ್ವಾಕುರಾಜನಿಗೋಸ್ಕರ, ಅಬ್ರವೀತ್= ಹೇಳಿದನು. ॥ ೧ ॥

ಗೀ ॥ ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।
ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥ ೨ ॥

ಅ ॥ ರಾಜರ್ಷಯಃ= ನಿಮಿ ಮೊದಲಾದ ರಾಜ ಶ್ರೇಷ್ಠರೂ ಋಷಿಗಳೂ, ಏವಂ= ಹಿಂದೆ ಹೇಳಿದ ಪ್ರಕಾರ, ಪರಂಪರಾಪ್ರಾಪ್ತಂ= ಇಕ್ಷ್ವಾಕುರಾಜನೇ ಮೊದಲಾದವರಿಂದ ಪರಂಪರೆಯಾಗಿ ಬಂದ ಇಮಂ= ಜ್ಞಾನೋಪಾಯವನ್ನು, ವಿದುಃ= ತಿಳಿದು ಮಾಡಿರುತ್ತಾರೆ ಪರಂತಪ= ಶತ್ರುಗಳಿಗೆ ಸಂತಾಪ ವನ್ನು ಹುಟ್ಟಿಸುವ ಅರ್ಜುನನೇ, ಸಃ ಯೋಗಃ=ಆ ಯೋಗವು, ಮಹತಾ ಕಾಲೇನ=ಬಹುಕಾಲದಿಂದ ಇಹ= ಈ ಲೋಕದಲ್ಲಿ, ನಷ್ಟಃ=ಕಾಣದೆ ತಿಳಿಯದೆ ಹೋಗಿದೆ ॥ ೨ ॥

ಗೀ ॥ ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ ।
ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಂ ॥ ೩ ॥

ಅ ॥ ಹಿ=ಯಾವ ಕಾರಣದಿಂದ, ಏತತ್=ಈ ಯೋಗವು, ರಹಸ್ಯಂ=ಅತಿ ಗೋಪ್ಯವೂ, ಉತ್ತಮಂ= ಶ್ರೇಷ್ಠವೂ (ಆಗಿದೆಯೋ,) ಇತಿ= ಆದಕಾರಣ (ನೀನು) ಮೇ= ನನಗೆ, ಭಕ್ತಃ=ಭಕ್ತನೂ, ಸಖಾ ಚ=ಗೆಳೆ ಯನೂ, ಅಸಿ= ಆಗಿರುತ್ತೀ, ಇತಿ ಚ=ಆದುದರಿಂದಲೇ, ಪುರಾತನಃ=ಅತಿ ಪ್ರಾಚೀನವಾದ, ಸ ಏವಾಯಂ

ಯೋಗಃ=ಆ ಈ ಯೋಗವೇ, ಮಯಾ=ನನ್ನಿಂದ, ಅದ್ಯ=ಈಗ, ತೇ=ನಿನಗಾಗಿ, ಪ್ರೋಕ್ತಃ= ಹೇಳಲ್ಪಟ್ಟಿತು. ॥ ೩ ॥

ಟೀ—ಹಿಂದೆ ಹೇಳಿದ ಜ್ಞಾನ ಕರ್ಮಗಳೆರಡನ್ನೂ ವಿಶೇಷವಾಗಿ ವಿಸ್ತರಿಸುವುದಕ್ಕಾಗಿ ಈ ನಾಲ್ಕನೇ ಅಧ್ಯಾಯವು—

ಭಾ ॥ ಓಂ ॥ ಬುದ್ಧೇಃ ಪರಸ್ಯ ಮಾಹಾತ್ಮ್ಯಂ ಕರ್ಮಭೇದೋ ಜ್ಞಾನಮಾಹಾತ್ಮ್ಯಂ ಚೋಚ್ಯತೇಽಸ್ಮಿನ್ನಧ್ಯಾಯೇ । ಪೂರ್ವಾನುಷ್ಠಿತಶ್ಚಾಯಂ ಧರ್ಮ ಇತ್ಯಾಹ । ಇಮ-ಮಿತಿ ॥ ೧,೨,೩ ॥

ಅ ॥ ಬುದ್ಧ್ಯಭಿಮಾನಿದೇವತೆಗಿಂತ ಉತ್ತಮನಾದ ಶ್ರೀಹರಿಯ ಮಹಿಮೆಯೂ ಕರ್ಮಭೇದವೂ ಜ್ಞಾನದ ಮಹಿಮೆಯೂ ಈ ಅಧ್ಯಾಯದಲ್ಲಿ ಹೇಳಲ್ಪಡುತ್ತದೆ (ಇಮಂ ವಿವಸ್ವತೇ ಯೋಗಂ ಎಂಬ ಉಪದೇಶ ಪರಂಪರೆಯನ್ನು ಹೇಳಿದ್ದು ಪ್ರಕೃತೋಪಯುಕ್ತವಲ್ಲ ಎಂದರೆ-)ಮಯಿ ಸರ್ವಾಣಿ ಎಂಬುದರಿಂದ ಹೇಳಿದಧರ್ಮವು ಪೂರ್ವಿಕರಿಂದ ಮಾಡಲ್ಪಟ್ಟದೆ ಎಂದು ಇಮಂ ಎಂಬ ಶ್ಲೋಕದಿಂದ ಹೇಳುತ್ತಾರೆ (ಪೂರ್ವಿಕರ ಉಪದೇಶಪರಂಪರೆಯು ಮಾತ್ರ ಹೇಳಲ್ಪಡುವುದಲ್ಲ, ಮತ್ತೆ ಅವರ ಕರ್ಮಾನುಷ್ಠಾನವನ್ನೂ ಅವಶ್ಯವಾಗಿ ಹೇಳಬೇಕಾದುದು ) ॥ ೧, ೨, ೩ ॥

ಟೀ—ಹಿಂದಿನ ಅಧ್ಯಾಯದಲ್ಲಿ ಹೇಳಿದ ಅರ್ಥಕ್ಕೆ ಸಂಗತವಾಗಿ ಈ ಅಧ್ಯಾಯದ ಅರ್ಥವನ್ನು ತೋರಿಸುತ್ತಾರೆ--

ತಾ ॥ ಓಂ ॥ (೧) ಉಕ್ತಯೋರ್ಜ್ಞಾನಕರ್ಮಣೋರುಭಯೋರ್ವಿಶೇಷವಿಸ್ತ(ಸ್ತಾ)ರಾತ್ಮ-ಕೋಽಯಮಧ್ಯಾಯಃ ॥ (೨) ಬ್ರಹ್ಮರುದ್ರೇಂದ್ರಸೂರ್ಯಾಣಾಂ ಯದ್ದತ್ತಂ ವಿಷ್ಣು-ನಾ ಪುರಾ । ಪಂಚರಾತ್ರಾತ್ಮಕಂ ಜ್ಞಾನಂ ವ್ಯಾಸೋಽದಾತ್ಪಾಂಡವೇಷು ತತ್ ॥ (೩) ತೇಷಾಮೇವಾವತಾರೇಷು (ವ ತು ವಾರ್ಷ್ಣೇಯಃ) ಸೇನಾಮಧ್ಯೇಽರ್ಜುನಾಯ ಚ । ಪ್ರಾದಾದ್ಗೀತೇತಿ ನಿರ್ದಿಷ್ಟಂ ಸಂಕ್ಷೇಪೇಣಾಯುಯುತ್ಸವೇ(ತೇ) ॥ (೪) ಯಥಾ ಕುರ್ವಂತಿ ಕರ್ಮಾಣಿ ಯಥಾ ಜಾನಂತಿ ದೇವತಾಃ । ಸರ್ವೇ ಕಾರ್ತಯುಗಾಶ್ಚೈವ ನೃಪಾಶ್ಚ ಮನುಪೂರ್ವಕಾಃ ॥ (೫) ಜ್ಞಾತವ್ಯಂ ಚೈವ ಕರ್ತವ್ಯಂ ಯಥಾ ಸರ್ವೈರ್ಮುಮುಕ್ಷುಭಿಃ । ತ್ರೇತಾದಿತ್ರಿಷು ಜಾತೈಶ್ಚ ಗೀತಾಯಾಂ ತದುದಾಹೃತಂ ॥ (೬) ಪಾಂಡವಾದ್ಯಾಃ ಕ್ಷೇಮಕಾಂತಾಃ ಕರಿಷ್ಯಂತಿ ಚ ಜಾನತೇ । ತಥೈವ ತೇನ ಗೀತಾ-ಯಾ ನಾಸ್ತಿ ಶಾಸ್ತ್ರಂ ಸಮಂ ಕ್ವಚಿತ್ ॥ (೭) ವೇದಾರ್ಥಪೂರ್ವಕಂ ಜ್ಞೇಯಂ ಪಂಚರಾತ್ರಂ ಯತೋಽಖಿಲಂ । ತತ್ಸಂಕ್ಷೇಪಶ್ಚ ಗೀತೇಯಂ ತಸ್ಮಾನ್ನಾಸ್ಯಾಸ್ಸಮಂ ಕ್ವಚಿದಿತಿ ಬ್ರಹ್ಮವೈವರ್ತೇ ॥ ೧,೨,೩ ॥

ಅ ॥ (೧) ಹಿಂದೆ ಹೇಳಿದ ಜ್ಞಾನಕರ್ಮಗಳೆರಡನ್ನೂ ವಿಶೇಷವಾಗಿ ವಿಸ್ತಾರವಮಾಡುವುದಕ್ಕಾಗಿ ಈ ಅಧ್ಯಾಯವು. (೨) (ಹಿಂದೆ ಹೇಳಿದ ಕರ್ಮಯೋಗದಲ್ಲಿ ಅಭಿರುಚಿಯನ್ನುಂಟುಮಾಡುವುದಕ್ಕಾಗಿ ಮಯಿ ಸರ್ವಾಣಿ ಕರ್ಮಾಣಿ ಎಂಬಲ್ಲಿ ಹೇಳಿದ ಧರ್ಮವನ್ನು ಪೂರ್ವಿಕರು ಮಾಡುತ್ತಿದ್ದಾರೆಂದು ಇಮಂ

ಎಂಬ ಶ್ಲೋಕದಿಂದ ಹೇಳುತ್ತಾರೆ. ಅದರ ಅಭಿಪ್ರಾಯವನ್ನು ಸ್ಮೃತಿಪ್ರಮಾಣದಿಂದ ವಿವರಿಸುತ್ತಾರೆ —) ಮೊದಲು ಬ್ರಹ್ಮ, ವಾಯು, ರುದ್ರ, ಇಂದ್ರ, ಸೂರ್ಯ, ಯಮ, ಅಶ್ವಿನೀದೇವತೆಗಳು ಇವರಿಗೆ ಪಂಚ ರಾತ್ರಾತ್ಮಕವಾದ ಯಾವ ಶಾಸ್ತ್ರವನ್ನು ಶ್ರೀವಿಷ್ಣುವು ಉಪದೇಶಿಸಿದ್ದಾನೋ, ಅದನ್ನು ಶ್ರೀ ವೇದವ್ಯಾಸರು ಪಾಂಡವರಿಗೆ ಉಪದೇಶಿಸಿದರು (೩) ಯಮ, ವಾಯು, ಇಂದ್ರ, ಅಶ್ವಿನೀದೇವತೆಗಳ ಅವತಾರಭೂತ ರಾದ ಪಾಂಡವರ ಮಧ್ಯದಲ್ಲಿ ಯುದ್ಧಮಾಡಲಿಚ್ಛಿಸುವ ಅರ್ಜುನನಿಗೆ ಸೈನ್ಯಗಳ ಮಧ್ಯದಲ್ಲಿ (ಶ್ರೀಕೃಷ್ಣರೂಪ ದಿಂದ) ವೇದವ್ಯಾಸರು ಸಂಕ್ಷೇಪವಾಗಿ ಗೀತಾ ಎಂದು ಹೇಳಲ್ಪಟ್ಟ ಪಂಚರಾತ್ರವೆಂಬ ಆಗಮವನ್ನು ಉಪ ದೇಶಿಸಿದರು (೪) (ಭಗವದ್ಗೀತೆಯು ಪಂಚರಾತ್ರಾಗಮದ ಸಂಕ್ಷೇಪವೆಂದಾದರೆ ಭಗವದ್ಗೀತೆಯು ಸರ್ವೋತ್ತಮ ಶಾಸ್ತ್ರವೆಂದು ಹೇಳಿದ್ದು ಕೂಡದೆ ಹೋಗುವುದು, ಎಂದರೆ ಶಬ್ದಗಳು ಕಡಿಮೆಯಲ್ಲದೆ ಅರ್ಥವು ಕಡಿಮೆಯಲ್ಲವೆನ್ನುತ್ತಾರೆ—) ದೇವತೆಗಳು ಕೃತಯುಗದಲ್ಲಿದ್ದ ಎಲ್ಲಾ ರಾಜರೂ ಮನು ಮೊದ ಲಾದವರೂ ಹೇಗೆ ಕರ್ಮಗಳನ್ನು ಮಾಡುತ್ತಾರೋ ಹೇಗೆ ತಿಳಿಯುತ್ತಾರೋ (೫) ತ್ರೇತಾದಿ ಮೂರು ಯುಗಗಳಲ್ಲಿ ಹುಟ್ಟಿದ ಮೋಕ್ಷವನ್ನು ಇಚ್ಛಿಸುವವರೆಲ್ಲರೂ ಹೇಗೆ ತಿಳಿಯುತ್ತಾರೋ ಮಾಡುತ್ತಾರೋ. ಹಾಗೆ ಆ ಎಲ್ಲಾ ಪ್ರಮೇಯವು ಗೀತೆಯಲ್ಲಿ ಹೇಳಲ್ಪಟ್ಟಿದೆ (೬) ಹಾಗೆಯೇ ಪಾಂಡವರನ್ನಾರಂಭಿಸಿ ಕ್ಷೇಮಕಪರ್ಯಂತ ರಾಜರು ಮಾಡುತ್ತಾರೆ ತಿಳಿಯುತ್ತಾರೆ ಅದರಿಂದ ಗೀತೆಗೆ ಸಮವಾದ ಶಾಸ್ತ್ರವು ಯಾವುದೂ ಎಲ್ಲಿಯೂ ಇಲ್ಲ. (೭) (ಗೀತೆಯಲ್ಲಿ ಪಂಚರಾತ್ರಾಗಮದ ಅರ್ಥವೆಲ್ಲವಿದೆ ಯೆಂದಾದರೂ ಪಂಚ ರಾತ್ರಾಗಮದಿಂದ ಅಧಮವಲ್ಲವೆಂದು ಮಾತ್ರ ಆಗಲಿ ಅಷ್ಟರಿಂದ ವೇದಾದಿ ಸರ್ವಶಾಸ್ತ್ರಗಳಿಂದ ಉತ್ತ ಮವೆಂಬುವುದು ಹೇಗೆ ಎಂದರೆ-)ಯಾವ ಕಾರಣದಿಂದ ಸಂಪೂರ್ಣ ಪಂಚರಾತ್ರಾಗಮವು ವೇದಗಳ ಅರ್ಥ ಗಳನ್ನು ಪೂರ್ಣೀಕರಿಸತಕ್ಕದ್ದೋ ಅಂತಹ ಪಂಚರಾತ್ರಾಗಮದ ಸಂಕ್ಷೇಪವು ಈ ಗೀತೆಯು ಆದುದ ರಿಂದ ಗೀತೆಗೆ ಸಮವಾದ ಶಾಸ್ತ್ರವು ಎಲ್ಲಿಯೂ ಇಲ್ಲ, ಎಂದು ಬ್ರಹ್ಮವೈವರ್ತದಲ್ಲಿದೆ (ಆದಕಾರಣ ಸರ್ವ ಶಾಸ್ತ್ರಗಳದ್ದೆಶೆಯಿಂದ ಹೆಚ್ಚಾಗಿ ವೇದಾರ್ಥಗಳನ್ನು ಹೇಳುವ ಪಂಚರಾತ್ರಾಗಮದ ಪೂರ್ಣ ಅರ್ಥವು ಗೀತೆಯಲ್ಲಿದ್ದ ಪ್ರಯುಕ್ತ ಗೀತೆಯು ಋಗ್ವೇದ ಮೊದಲಾದ ಸರ್ವಶಾಸ್ತ್ರಗಳಿಂದ ಉತ್ತಮವೆಂದು ಹೇಳು ವುದು ಯುಕ್ತವು ) ॥ ೧ ॥ ೨ ॥ ೩ ॥

ಟೀ—**ಮಯಿ ಸರ್ವಾಣಿ** ಎಂಬುವಲ್ಲಿ ಶ್ರೀಹರಿಯು ಪೂಜಿಸಿಕೊಳ್ಳುವವನೆಂದೂ ಅರ್ಜುನನು ಪೂಜೆಮಾಡುವವನೆಂದೂ ಹೇಳಿದೆ. ಹಾಗೆಯೇ ಶ್ರೀಹರಿಯೇ ಸರ್ವ ಸ್ವತಂತ್ರಕರ್ತನೆಂದೂ ಬೇರೆಯವರು ಶ್ರೀಹರಿಯ ಅಧೀನರಾಗಿ ಕರ್ತೃಗಳೆಂದೂ ಹೇಳಿದೆ. ಇಲ್ಲಿ ಅಭಿಪ್ರೇತವಾದ ಜೀವೇಶ್ವರಭೇದವಿಷಯದಲ್ಲಿ ಪ್ರಮಾಣವು ಯಾವುದೆಂದು ಪ್ರಶ್ನಿಸುತ್ತಾನೆ—

ಗೀ ॥ ॥ ಅರ್ಜುನ ಉವಾಚ ॥

**ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।**
**ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥ ೪ ॥**

ಅ ॥ ಅರ್ಜುನನು ಪ್ರಶ್ನೆಮಾಡುತ್ತಾನೆ—ಭವತಃ = ನಿನ್ನ, ಜನ್ಮ = ವಸುದೇವನ ಮನೆಯಲ್ಲಿ ಉತ್ಪ ತ್ತಿಯು, ಅಪರಂ=ಇತ್ತಲಾಗಿನದ್ದು. ಅಂದರೆ ಸೂರ್ಯನ ಉತ್ಪತ್ತಿಗಿಂತ ಮೇಲಿನದ್ದು, ವಿವಸ್ವತಃ=ಸೂರ್ಯನ, ಜನ್ಮ=ಉತ್ಪತ್ತಿಯು, ಪರಂ=ಪ್ರಾಚೀನವು. ಇತಿ=ಹೀಗೆ ಇರುವಾಗ, ತ್ವಂ=ನೀನು, ಆದೌ=ಆದಿಯಲ್ಲಿ, ಪ್ರೋಕ್ತ ವಾನ್ = ಯೋಗವನ್ನು ಹೇಳಿದ್ದಿ ಎಂದು, (ನಾನು)ಕಥಂ=ಹೇಗೆ, ವಿಜಾನೀಯಾಂ=ತಿಳಿಯುವೆನು. ॥ ೪ ॥

ಗೀ || || ಶ್ರೀಭಗವಾನುವಾಚ ||

ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ |
ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ || ೫ ||

ಅ || ಶ್ರೀಭಗವಾನುವಾಚ= ಶ್ರೀಕೃಷ್ಣನು ಉತ್ತರಿಸಿದನು ಅರ್ಜುನ=ಅರ್ಜುನನೇ, ಮೇ=ನನಗೆ, ತವ ಚ = ನಿನಗೂ ಕೂಡ, ಬಹೂನಿ ಜನ್ಮಾನಿ=ಬಹುಜನ್ಮಗಳು, ವ್ಯತೀತಾನಿ=ದಾಟಿರುವವು. ಪರಂತಪ= ಶತ್ರುಸಂಹಾರಕನಾದ ಅರ್ಜುನನೇ, ಅಹಂ= ನಾನು, ತಾನಿ ಸರ್ವಾಣಿ= ಅವುಗಳೆಲ್ಲವನ್ನೂ ವೇದ= ತಿಳಿದಿರುವೆನು ತ್ವಂ= ನೀನು, ನ ವೇತ್ಥ = ತಿಳಿಯಲಿಲ್ಲ || ೫ ||

ಪೀ— ನ ತ್ವೇವಾಹಂ ಇತ್ಯಾದಿಗಳಿಂದ ಶ್ರೀಹರಿಗೆ ಉತ್ಪತ್ತಿ ನಾಶಗಳು ಸರ್ವಥಾ ಇಲ್ಲವೆಂದು ಹೇಳಿಯಾಗಿದೆ ಅದನ್ನು ಅರ್ಜುನನು ಕೇಳಿ ಪುನಃ ಅಪರಂ ಭವತಃ ಇತ್ಯಾದಿಗಳಿಂದ ಪ್ರಶ್ನೆಮಾಡಿದ್ದು ಹೇಗೆ ಕೂಡುತ್ತದೆಂದರೆ—

ಭಾ || ಮಯಿ ಸರ್ವಾಣೀತ್ಯುಕ್ತಂ ತನ್ಮಾಹಾತ್ಮ್ಯಮಾದಿತೋ ಜ್ಞಾತುಂ ಪೃಚ್ಛತಿ | ಅಪರಮಿತಿ || ೪,೫ ||

ಅ || ಮಯಿ ಸರ್ವಾಣಿ ಎಂಬಲ್ಲಿ ಶ್ರೀಹರಿಯು ಪೂಜಿಸಿಕೊಳ್ಳಲ್ಪಡತಕ್ಕವನು ಇತ್ಯಾದಿರೂಪವಾದ ಮಹಿಮೆಯೂ ಜೀವಭೇದವೂ ಹೇಳಲ್ಪಟ್ಟಿದೆ (ಅರ್ಜುನನು ಪೂಜಿಸುವವನು ಎಂದೂ ಹೇಳಿದೆ.) ಹೀಗೆ ಶ್ರೀಹರಿ, ಜೀವ ಇವರಿಗೆ ಪೂಜ್ಯ ಪೂಜಕತ್ವಾದಿಗಳಿಂದ ಒಡಂಬಟ್ಟ ಭೇದದಲ್ಲಿ ಪ್ರಮಾಣವೇನೆಂದು ತಿಳಿಯುವುದಕ್ಕಾಗಿ ಅಪರಂ ಭವತಃ ಎಂಬ ಶ್ಲೋಕದಿಂದ ಪ್ರಶ್ನೆಮಾಡುತ್ತಾನೆ || ೪,೫ ||

ಪೀ—ಶ್ರೀಕೃಷ್ಣನು ಸೂರ್ಯನು ಹುಟ್ಟಿದ ಮೇಲೆ ಹುಟ್ಟಿದವನು ಸೂರ್ಯನು ಬಹು ಹಿಂದೆ ಹುಟ್ಟಿದವನು, ಆದಕಾರಣ ಶ್ರೀಕೃಷ್ಣನು ಸೂರ್ಯನಿಗೆ ಉಪದೇಶಿಸಿದನೆಂಬುವುದು ಹೇಗೆ ಕೂಡುತ್ತದೆ ಎಂಬ ಅಭಿಪ್ರಾಯದಿಂದ ಅಪರಂ ಭವತಃ ಎಂಬ ಶ್ಲೋಕದಿಂದ ಪ್ರಶ್ನಿಸುತ್ತಾನೆ ಅದರಲ್ಲಿ ಅರ್ಜುನನಿಗೆ ಶ್ರೀಹರಿಯ ವಿಷಯದಲ್ಲಿ ಅಜ್ಞಾನವು ತೋರುವುದರಿಂದ ಅರ್ಜುನನು ಅಪರೋಕ್ಷಜ್ಞಾನಿಯೆಂದು ಹೇಳಿದ್ದು ಕೂಡಲಾರದೆಂದರೆ –

ತಾ || ಜಾನಂತೋಽಪಿ ವಿಶೇಷಾರ್ಥಜ್ಞಾನಾಯ ಸ್ಥಾಪನಾಯ ವಾ | ಪೃಚ್ಛಂತಿ ಸಾಧವೋ ಯಸ್ಮಾತ್ತೇನ ಪೃಚ್ಛಸಿ ಪಾರ್ಥಿ(ಂಡ)ವೇತ್ಯಾಗ್ನೇಯವಚನಾನ್ನಾರ್ಜುನೋ ಭಗವಂತಂ ನ ಜಾನಾತಿ || ೪,೫ ||

ಅ || ಸಜ್ಜನರು ತತ್ವವನ್ನರಿತವರಾದರೂ ವಿಶೇಷಾರ್ಥವನ್ನು ತಿಳಿದುಕೊಳ್ಳುವುದಕ್ಕಾಗಿಯೂ, ತಿಳಿದ ವಿಷಯವನ್ನು ದೃಢೀಕರಿಸಿಕೊಳ್ಳುವುದಕ್ಕಾಗಿಯೂ ಯಾವ ಕಾರಣದಿಂದ ಪ್ರಶ್ನೆ ಮಾಡುತ್ತಾರೋ, ಆದುದರಿಂದ ಅರ್ಜುನನೇ ನೀನೂ ಅದಕ್ಕಾಗಿಯೇ ಪ್ರಶ್ನೆಮಾಡುತ್ತಿ, ಎಂಬ ಆಗ್ನೇಯಪುರಾಣವಚನದಿಂದ ಅರ್ಜುನನು ಭಗವಂತನ ತತ್ವವನ್ನು ಅರಿತವನಲ್ಲವೆಂದಲ್ಲ. || ೪, ೫ ||

ಪೀ – ಅನೇಕ ಜನ್ಮಗಳು ಶ್ರೀಕೃಷ್ಣನಿಗೆ ದಾಟಿರುತ್ತಾವೆಂದಾದರೆ ಜನನ ಮರಣಗಳಿಲ್ಲವೆಂಬುವುದೂ ಈಶ್ವರತ್ವವೂ ಕೂಡದೆ ಹೋಗುವುದು ಆದುದರಿಂದ ಅವಿನಾಶಿ ತು ಎಂಬಲ್ಲಿ ನಾಶವಿಲ್ಲದವನೆಂದು ಹೇಳಿದ್ದು ವಿರುದ್ಧವಾಗುವುದು ಎಂದರೆ –

ಗೀ || ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ |
ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ || ೬ ||

ಅ || ಅಜೋಽಪಿ=ಶರೀರಕ್ಕೆ ಉತ್ಪತ್ತಿಯಿಲ್ಲದವನಾದರೂ, ಅವ್ಯಯಾತ್ಮಾ ಸನ್=ಸ್ವರೂಪಕ್ಕೂ ದೇಹಕ್ಕೂ ನಾಶವಿಲ್ಲದವನಾದರೂ, ಭೂತಾನಾಂ=ಬ್ರಹ್ಮರುದ್ರಾದಿಗಳಿಗೆ, ಈಶ್ವರಃ ಸನ್ನಪಿ=ನಿಯಾಮಕನಾದಾಗ್ಯೂ, ಸ್ವಾಂ ಪ್ರಕೃತಿಂ ಅಧಿಷ್ಠಾಯ=ಪ್ರಾಕೃತರಾದ ವಸುದೇವಾದಿಗಳಲ್ಲಿ ಪ್ರವೇಶಮಾಡಿ, ಆತ್ಮಮಾಯಯಾ=ತನ್ನ ಇಚ್ಛೆಯಿಂದ, ಅಥವಾ ತನ್ನ ಜ್ಞಾನದಿಂದ, ಸಂಭವಾಮಿ=ಅವತಾರಮಾಡುತ್ತೇನೆ ಅಥವಾ ತನ್ನ ಸ್ವಭಾವವನ್ನನುಸರಿಸಿ ತನ್ನ ಅಧೀನವಾದ ಪ್ರಕೃತಿಯಿಂದ ವಸುದೇವಾದಿಗಳ ಶರೀರಗಳನ್ನು ನಿರ್ಮಾಣಮಾಡಿಸಿ ಅವರಲ್ಲಿ ಪ್ರವೇಶಮಾಡಿ ಅವತರಿಸುತ್ತೇನೆ ಅಥವಾ ತನ್ನ ಅಧೀನವಾದ ತಮೋರೂಪವಾದ ಪ್ರಕೃತಿಯನ್ನು ಆಶ್ರಯಿಸಿ ಹುಟ್ಟಿದೆನೆಂದು (ಜನರು ಭ್ರಮೆಗೊಳ್ಳುವಂತೆ ಮಾಡುತ್ತೇನೆ) (ಇದರಿಂದ ಶ್ರೀಹರಿಗೆ ಜೀವರ ಜನ್ಮಕ್ಕಿಂತ ವಿಲಕ್ಷಣವಾದ ಪ್ರಾದುರ್ಭಾವರೂಪ ಜನ್ಮವಿದ್ದುದರಿಂದ ಜೀವರಿಗಿಂತ ಭೇದವದೆ, ಎಂದು ಸಿದ್ಧವಾಯ್ತು) || ೬ ||

ಪೀ—ಶ್ರೀಹರಿಗೆ ಪ್ರಯೋಜನವಿಲ್ಲದಿದ್ದರೂ ಲೋಕದಲ್ಲಿ ಧರ್ಮವನ್ನು ಸ್ಥಾಪಿಸುವುದಕ್ಕಾಗಿಯೂ ಅಧರ್ಮವನ್ನು ನಾಶಗೊಳಿಸುವುದಕ್ಕಾಗಿಯೂ ಶ್ರೀಹರಿಯು ಅವತಾರವು ಎನ್ನುತ್ತಾರೆ

ಗೀ || ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ |
ಅಭ್ಯುತ್ಥಾನಮಧರ್ಮಸ್ಯ ತದಾಽಽತ್ಮಾನಂ ಸೃಜಾಮ್ಯಹಂ || ೭ ||

ಅ || ಭಾರತ=ಅರ್ಜುನನೇ, ಯದಾಯದಾ=ಯಾವಯಾವ ಕಾಲದಲ್ಲಿ, ಧರ್ಮಸ್ಯ=ಧರ್ಮಗಳಿಗೆ, ಗ್ಲಾನಿಃ=ಕೆಡಕು, ಭವತಿ=ಉಂಟಾಗುತ್ತದೋ ಅಧರ್ಮಸ್ಯ=ಅಧರ್ಮಗಳಿಗೆ ಅಭ್ಯುತ್ಥಾನಂ=ಅಭಿವೃದ್ಧಿಯು, ಉಂಟಾಗುತ್ತದೋ, ತದಾ=ಆ ಕಾಲದಲ್ಲಿ, ಆತ್ಮಾನಂ=ತನ್ನನ್ನು, ಅಹಂ=ನಾನು, ಸೃಜಾಮಿ=ಸೃಷ್ಟಿಮಾಡಿಕೊಳ್ಳುತ್ತೇನೆ. (ಅಂದರೆ ಅವತಾರಮಾಡುತ್ತೇನೆ) || ೭ ||

ಪೀ—ಅರ್ಜುನನ ಪ್ರಶ್ನೆಗೆ ಉತ್ತರಕೊಟ್ಟದ್ದರಿಂದ ಪುನಃ ಅಜೋಽಪಿ ಸನ್ ಎಂಬುದು ಏಕೆ? ಎಂದರೆ—

ಭಾ || (೧) ನ ತರ್ಹ್ಯನಾದಿರ್ಭವಾನಿತ್ಯತ ಆಹ | ಅಜೋಽಪೀತಿ || (೨) ಅವ್ಯಯ ಆತ್ಮಾ ದೇಹೋಽಪೀತ್ಯವ್ಯಯಾತ್ಮಾ | ಅನಂತಂ ವಿಶ್ವತೋಮುಖಮಿತಿ ರೂಪವಿಶೇಷಣಮುತ್ತರತ್ರ | ಏತನ್ನಾನಾವತಾರಾಣಾಂ ನಿಧಾನಂ ಬೀಜಮವ್ಯಯಮಿತಿ ಚ || (೩) ಜಗೃಹ ಇತಿ ತು ವ್ಯಕ್ತಿಃ | ಯುಕ್ತ್ಯಯುಸ್ತೂಕ್ತಾಃ || (೪) ಆತ್ಮಾನಾದಿತ್ವಂ ತು ಸರ್ವಸಮಂ || (೫) ಕಥಮನಾದಿನಿತ್ಯಸ್ಯ ಜನಿಃ | ಪ್ರಕೃತಿಂ ಸ್ವಾಮಧಿಷ್ಠಾಯ | ಪ್ರಕೃತ್ಯಾ ಜಾತೇಷು ವಸುದೇವಾದಿಷು | ತಯೈವ ತೇಷಾಂ ಜಾತ ಇವ ಪ್ರತೀಯತ ಇತ್ಯರ್ಥಃ | ನ ತು ಸ್ವತಂತ್ರಾಮಧಿಷ್ಠಾಯೇತ್ಯಾಹ | ಸ್ವಾಮಿತಿ | ದ್ರವ್ಯಂ ಕರ್ಮ ಚೇತಿ ಹ್ಯುಕ್ತಂ | ಸಾ ಹಿ ತತ್ರೋಕ್ತಾ | ತತಃ ಸರ್ವಸೃಷ್ಟೇಃ || ೧ ||

**ಅ** ॥ (೧) ನಿನಗೆ ಬಹುಜನ್ಮಗಳು ದಾಟಿವೆ ಎಂದಾದರೆ ನಿನ್ನ ದೇಹಕ್ಕೂ ಉತ್ಪತ್ತಿಯಿಲ್ಲ ನಿನಗೆ ಮರಣವಿಲ್ಲ ನೀನು ಸಮಸ್ತ ಪ್ರಾಣಿಗಳಿಗೆ ನಿಯಾಮಕನು, ಎಂಬುವುದು ಕೂಡದೆ ಹೋಗುವುದು, ಎಂದರೆ **ಅಜೋಽಪಿ** ಎಂದು ಹೇಳಿದ್ದಾರೆ. (೨) (**ಅವ್ಯಯಾತ್ಮಾ** ಎಂಬುದಕ್ಕೆ ದೇಹಕ್ಕೂ ನಾಶವಿಲ್ಲವೆಂದರ್ಥವು ಅದರೊಂದಿಗೆ ಇದ್ದ ಪ್ರಯುಕ್ತ **ಅಜೋಽಪಿ** ಎನ್ನುವುದಕ್ಕೂ ಹಾಗೆಯೇ ದೇಹಕ್ಕೆ ಉತ್ಪತ್ತಿಯಿಲ್ಲವೆಂದೇ ಅರ್ಥವೆನ್ನುತ್ತಾರೆ—)ಶ್ರೀಹರಿಗೆ ನಾಶವಿಲ್ಲದಿರುವ ಶರೀರವು ಇದೆ ಆದಕಾರಣ ಅವ್ಯಯಾತ್ಮಾ. (ಶ್ರೀಹರಿಯ ಶರೀರಕ್ಕೆ ನಾಶವಿಲ್ಲವೆಂದು ಗೀತೋಪದೇಶಕನಾದ ಶ್ರೀಕೃಷ್ಣನಿಗೆ ಸಮ್ಮತವೆಂದು ಹೇಗೆ ತಿಳಿಯುತ್ತದೆ ಎಂದರೆ—) ನಾಶವಿಲ್ಲದಿರುವುದು ಸರ್ವತ್ರ ವ್ಯಾಪ್ತವು, ಎಂಬ ಅಭಿಪ್ರಾಯದಿಂದ ಅನಂತಂ ವಿಶ್ವತೋಮುಖಂಎಂದು ಶರೀರಕ್ಕೆ ವಿಶೇಷಣವನ್ನು ಕೊಟ್ಟಿರುತ್ತಾರೆ ಈ ಶರೀರವು ನಾನಾ ಅವತಾರಗಳಿಗೆ ಆಶ್ರಯವು, ಕಾರಣವು ನಾಶವಿಲ್ಲದಿರುವುದು, ಎಂದೂ ಇದೆ. (೩) (ಹೀಗಾದರೆ **ಜಗೃಹೇ ಪೌರುಷಂ ರೂಪಂ** ಎಂದು ಭಾಗವತದಲ್ಲಿ ಹೇಳಿದ್ದು ಹೇಗೆ ಕೂಡುತ್ತದೆ? ತೆಗೆದುಕೊಂಡ ರೂಪಕ್ಕೆ ಪರಿತ್ಯಾಗವೂ ನಿಶ್ಚಿತವೇ ಎಂದರೆ—) **ಜಗೃಹೇ** ಎಂಬುವಲ್ಲಿ ರೂಪಕ್ಕೆ ಅಭಿವ್ಯಕ್ತಿಯು ಹೇಳಲ್ಪಟಿದೆ (ಏಕೆ ಹೀಗೆ ಕಲ್ಪಿಸುವುದು ಎಂದರೆ-) ಯುಜ್ಯತೇ ಅರ್ಥಃ ಏಭಿಃ ಎಂಬ ವ್ಯುತ್ಪತ್ತಿಯಿಂದ ಯುಕ್ತಯಃ=ಪ್ರಮಾಣಗಳು, ಅಥವಾ ನಾಶವಿಲ್ಲದ ದೇಹವಿದೆ ಎಂಬುದು ಸರ್ವಥಾ ಕೂಡಲಿಕ್ಕಿಲ್ಲ ಎಂಬುದಕ್ಕೆ ಪರಿಹಾರಕವಾದ ಅಚಿಂತ್ಯಶಕ್ತಿತ್ವ ಮೊದಲಾದ ಯುಕ್ತಿಗಳು ಎರಡನೇ ಅಧ್ಯಾಯದಲ್ಲಿ ಹೇಳಿದೆ (೪) (ಶ್ರೀಹರಿಯ ಶರೀರಕ್ಕೂ ನಾಶವಿಲ್ಲವೆಂಬುದು ಒಪ್ಪಿಕೊಳ್ಳುವ. ಆದರೆ ಇಲ್ಲಿ ಮಾತ್ರ ಸ್ವರೂಪಕ್ಕೇನೇ ನಾಶವಿಲ್ಲವೆಂದು ಹೇಳುತ್ತೇವೆ, ಎಂದು ಏಕೆ ಆಗಲಾರದೆಂದರೆ—)ಆತ್ಮಸ್ವರೂಪಕ್ಕೆ ಮಾತ್ರ ಉತ್ಪತ್ತಿ ನಾಶಗಳು ಇಲ್ಲವೆಂದು ಅಭಿಪ್ರಾಯವಾಗಿದ್ದರೆ ಜೀವರ ಸ್ವರೂಪಕ್ಕೂ ಉತ್ಪತ್ತಿ ನಾಶಗಳು ಇಲ್ಲವೆಂಬುದು ಸಮವಾಗಿರುವುದರಿಂದ **ಅವ್ಯಯಾತ್ಮಾ** ಎಂದು ವಿಶಿಷ್ಯ ಹೇಳಿದ್ದು ಕೂಡದೆಹೋಗ ವುದು ಅನಾದಿತ್ವವು ಜೀವರಿಗೂ ಇದೆ (ಆದಕಾರಣ ಆ ವಿಷಯದಲ್ಲಿ ಆಕ್ಷೇಪವಾಗಲೀ ಪರಿಹಾರವಾಗಲೀ ಕೂಡುವುದಿಲ್ಲ )(ಹೀಗೆ ಹೇಳದಿದ್ದರೆ ಶ್ರೀಹರಿಯ ಸ್ವರೂಪಕ್ಕೆ ನಾಶವಿಲ್ಲವೆಂಬುದು **ಅವ್ಯಯಃ** ಎಂಬುವುದರಿಂದಲೇ ಸಿಗುವುದರಿಂದ ಆತ್ಮಶಬ್ದವೂ ವ್ಯರ್ಥವಾಗುವುದು ನಮ್ಮ ಪಕ್ಷದಲ್ಲಿ ಸ್ವರೂಪಕ್ಕೂ ದೇಹಕ್ಕೂ ಎರಡಕ್ಕೂ ನಾಶವಿಲ್ಲವೆಂದು ತೋರಿಸುವುದಕ್ಕಾಗಿ ಆತ್ಮಶಬ್ದವು ಈ ಅಭಿಪ್ರಾಯದಿಂದಲೇ ಆತ್ಮಾ ಎಂಬುದಕ್ಕೆ **ದೇಹೋಽಪಿ** ಎಂದು ಅರ್ಥವನ್ನು ಹೇಳಿದ್ದಾರೆ) (೫) (ಹೀಗಾದರೆ—) ಸ್ವರೂಪದಿಂದಲೂ ದೇಹದಿಂದಲೂ ಅನಾದಿನಿತ್ಯನಾಗಿರುವ ಶ್ರೀಹರಿಗೆ **ಸಂಭವಾಮಿ** ಎಂದು ಉತ್ಪತ್ತಿಯು ಹೇಳುವುದು ಹೇಗೆ? ಎಂದರೆ – **ಪ್ರಕೃತಿಂ ಸ್ವಾಂ ಅಧಿಷ್ಠಾಯ** ಎಂದು ಹೇಳಿದ್ದಾರೆ ಅಂದರೆ ಪ್ರಕೃತಿಯಿಂದ ಹುಟ್ಟಿದ ವಸುದೇವಾದಿಗಳಲ್ಲಿ (ಅವತಾರಮಾಡಿದ ಪ್ರಯುಕ್ತ ಹಾಗೆ ಹೇಳಿದ್ದು ) ಶ್ರೀಕೃಷ್ಣನು ತಮೋರೂಪವಾದ ಪ್ರಕೃತಿಯಿಂದಲೇ ಆವೃತವಾದ ಅಂತಃಕರಣವುಳ್ಳವರಿಗೆ ವಸುದೇವಾದಿಗಳಿಂದ ಹುಟ್ಟಿದವನಂತೆ ತೋರಿಸಿಕೊಳ್ಳುತ್ತಾನೆ ಮಾತಾಪಿತೃಗಳ ಶುಕ್ಲ ಶೋಣಿತ ಸಂಬಂಧದಿಂದಲೇ ಹುಟ್ಟಿದ್ದೆಂದು ಒಡಂಬಟ್ಟರೆ ತನ್ನಿಮಿತ್ತ ದುಃಖಾದಿಗಳೂ ಬರಬೇಕಾಗುವವು, ಎಂಬ ಆಶಂಕೆಯನ್ನು ಹೋಗಲಾಡಿಸುವುದಕ್ಕಾಗಿ **ಸ್ವಾಂ** ತನ್ನ ಅಧೀನದಲ್ಲಿರುವುದು ಎಂದು ಹೇಳಿದ್ದಾರೆ (ಪ್ರಕೃತಿಯು ಸ್ವತಂತ್ರವಲ್ಲ ಆದುದರಿಂದ ಸ್ವತಂತ್ರವಾದ ಪ್ರಕೃತಿಯನ್ನಾಶ್ರಯಿಸಿ ಎಂದರ್ಥವಲ್ಲ ಪ್ರಕೃತಿಯು ಶ್ರೀಹರಿಯ ಅಧೀನದಲ್ಲಿರುವುದೆಂದು ಹೇಗೆ ಸಿದ್ಧಿಸುತ್ತದೆಂದರೆ—)**ದ್ರವ್ಯವೂ (ಪ್ರಕೃತಿಯೂ) ಕರ್ಮವೂ ಇತ್ಯಾದಿಗಳೆಲ್ಲವೂ ಶ್ರೀಹರಿಯ ಅಧೀನದಲ್ಲಿರುವವುಗಳು** (ಎಂದು ಶ್ರುತಿಯಿದೆ ) ಆ ವಾಕ್ಯದಲ್ಲಿ ದ್ರವ್ಯಪದದಿಂದ ಪ್ರಕೃತಿಯು ಹೇಳಲ್ಪಡುತ್ತದೆ (ದ್ರವ್ಯ ಎಂಬ ಪದವು ಪ್ರಕೃತಿ ಎಂಬ ಅರ್ಥವನ್ನು ಹೇಳುತ್ತದೆಂದು ಹೇಗೆ ಎಂದರೆ—) (ಇಲ್ಲಿ ಸಮಸ್ತ ವಸ್ತುಗಳ ಸೃಷ್ಟಿಕಾರಣಗಳನ್ನು ಹೇಳುತ್ತಾರೆ) ಆ ಪ್ರಕೃತಿಯಿಂದಲೇ ಸಮಸ್ತ ವಸ್ತುಗಳ ಸೃಷ್ಟಿಯಾಗುವುದು (ಪೃಥಿವ್ಯಾದಿಗಳಿಂದ ಅಲ್ಲ) ॥ ೧ ॥

ಪೀ—ಆತ್ಮಮಾಯಯಾ ಎಂಬುದಕ್ಕೆ ಆತ್ಮನ ಅವಿದ್ಯೆಯಿಂದ ಎಂಬ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಅರ್ಥ ಹೇಳುತ್ತಾರೆ—

ಭಾ ॥ (೧) ಆತ್ಮಮಾಯಯಾ ಆತ್ಮಜ್ಞಾನೇನ । ಪ್ರಕೃತೇಃ ಪೃಥಗಭಿಧಾನಾತ್ ॥ (೨) ಕೇತುಃ ಕೇತಶ್ಚಿತಿಶ್ಚಿತ್ತಂ ಮತಿಃ ಕ್ರತುರ್ಮನೀಷಾ ಮಾಯೇತ್ಯಭಿಧಾನಂ ॥ (೩) ಸೃಷ್ಟಿಕಾರಣಯಾ ತೇಷಾಂ ಶರೀರಾದಿ ಸೃಷ್ಟ್ವಾ ವಿಮೋಹಿಕಯಾ ಜಾತ ಇವಾಜಾತ ಏವ ಪ್ರತೀಯತೇ ವಾ ॥ (೪) ಉಕ್ತಂ ಚ । ಮಹದಾದೇಸ್ತು ಮಾತಾ ಯಾ ಶ್ರೀರ್ಭೂರ್ಮಿರಿತಿ ಕಲ್ಪಿತಾ । ವಿಮೋಹಿಕಾ ಚ ದುರ್ಗಾಖ್ಯಾ ತಾಭಿರ್ವಿಷ್ಣುರಜೋಽಪಿ ಹಿ । ಜಾತವತ್ಪ್ರಥತೇ ಹ್ಯಾತ್ಮಚಿದ್ಬಲಾನ್ಮೂಢಚೇತಸಾಮಿತಿ ॥ (೫) (1)ಈಶ್ವರ ಈಶೇಭ್ಯೋಽಪಿ ವರಃ । ತಚ್ಚೋಕ್ತಂ । ಈಶೇಭ್ಯೋ ಬ್ರಹ್ಮರುದ್ರಶ್ರೀಶೇಷಾದಿಭ್ಯೋ ಯತೋ ಭವಾನ್ । ವರೋಽತ ಈಶ್ವರಾಖ್ಯಾ ತೇ ಮುಖ್ಯಾ ನಾನ್ಯಸ್ಯ ಕಸ್ಯಚಿದಿತಿ ಬ್ರಹ್ಮವೈವರ್ತೇ । (2)ಸಮರ್ಥ ಈಶ ಇತ್ಯುಕ್ತಸ್ತದ್ವರತ್ವಾತ್ತ್ವಮೀಶ್ವರ ಇತಿ ಚ ॥೨॥೬,೭॥

ಅ ॥ (೧) ಆತ್ಮಮಾಯಯಾ=ತನ್ನ ಜ್ಞಾನದಿಂದ (ಜೀವರಿಗಿಂತ ವಿಲಕ್ಷಣವಾದುದು ಉತ್ಪತ್ತಿಯು ಸರ್ವಜ್ಞನಿಗೆ ಅವಿದ್ಯೆಯು ಕೂಡಲಾರದು.) ಪ್ರಕೃತಿಶಬ್ದದಿಂದ ಮಾಯೆಯನ್ನು ಏಕೆ ತೆಗೆದುಕೊಳ್ಳಕೂಡದೆಂದರೆ—)ಪ್ರಕೃತಿಯನ್ನು ಪ್ರತ್ಯೇಕ ಹೇಳಿದ್ದಾರೆ (೨) (ಮಾಯಾ ಎಂಬ ಶಬ್ದಕ್ಕೆ ಜ್ಞಾನವೆಂಬ ಅರ್ಥವು ಹೇಗೆ ಎಂದರೆ—) ಕೇತುಃ ಕೇತಃ ಚಿತಿಃ ಚಿತ್ತಂ ಮತಿಃ ಕ್ರತುಃ ಮನೀಷಾ ಮಾಯಾ ಇಷ್ಟು ಶಬ್ದಗಳು ಪ್ರಜ್ಞಾ ಎಂಬ ಶಬ್ದದ ಅರ್ಥವನ್ನು ಹೇಳುತ್ತವೆಂದು ಕೋಶವು (೩) (ಪ್ರಕೃತಿಯು ಜಗತ್ತಿಗೆ ಉಪಾದಾನಕಾರಣವೆನ್ನುತ್ತಾರೆ—) ಜಗತ್ಸೃಷ್ಟಿಗೆ ಉಪಾದಾನಕಾರಣವಾದ ಪ್ರಕೃತಿಯಿಂದ ವಸುದೇವಾದಿಗಳ ಶರೀರಾದಿಗಳನ್ನು ಸೃಷ್ಟಿಮಾಡಿ ಅಲ್ಲಿ ಅವತಾರಮಾಡಿದವನಾಗಿ ಜಗತ್ತಿಗೆ ಮೋಹಕವಾದ ಮಾಯೆ ಎಂಬ ಪ್ರಕೃತಿಯಿಂದ ಹುಟ್ಟದಿದ್ದವನೇ ಹುಟ್ಟಿದವನಂತೆ ತೋರಿಸಿಕೊಳ್ಳುತ್ತಾನೆ (೪) (ಈ ವಿಷಯದಲ್ಲಿ ಆಗಮಪ್ರಮಾಣ ಹೇಳುತ್ತಾರೆ) ಮಹತ್ತತ್ತ್ವಾದಿಗಳಿಗೆ ಮಾತೃಸ್ಥಾನೀಯವಾದುದು ಯಾವುದೋ, ಅದು ಶ್ರೀಃ ಭೂಮಿಃ ಎನ್ನಿಸಿಕೊಳ್ಳುತ್ತದೆ ಅಜ್ಞಜನರಿಗೆ ಮೋಹಕವಾದುದು ದುರ್ಗಾ ಎನಿಸುತ್ತದೆ ಹೀಗೆ ಮೂರು ರೂಪಗಳು. ಆ ರೂಪಗಳಿಂದ ಶ್ರೀವಿಷ್ಣುವು ಹುಟ್ಟದಿದ್ದವನೂ ತನ್ನ ಜ್ಞಾನಸಾಮರ್ಥ್ಯದಿಂದ ಮೂಢಬುದ್ಧಿಯುಳ್ಳವರಿಗೆ ಹುಟ್ಟಿದವನಂತೆ ತೋರಿಸಿಕೊಳ್ಳುತ್ತಾನೆ ಎಂದು ಹೇಳಿದೆ (೫) (ನಿಯಮನಮಾಡುವ ಸ್ವಭಾವವುಳ್ಳ ಬ್ರಹ್ಮಾದಿಗಳಿಗೂ ಜನನ ಮರಣಗಳು ತೋರಿಬರುವುದರಿಂದ ವಿರೋಧವು ಇಲ್ಲದಿರುವ ಪ್ರಯುಕ್ತ ಈಶ್ವರೋಽಪಿ ಸಂಭವಾಮಿ ಎಂದದ್ದು ಹೇಗೆ? ಎಂದರೆ—) (1) ಈಶ್ವರಃ= ನಿಯಾಮಕರಾದ ಬ್ರಹ್ಮರುದ್ರಾದಿಗಳಿಂದಲೂ ಶ್ರೇಷ್ಠನು. ಆ ಪ್ರಮೇಯವು ಹೇಳಲ್ಪಟ್ಟಿದೆ ನಿಯಾಮಕರಾದ ಬ್ರಹ್ಮ ರುದ್ರ ಲಕ್ಷ್ಮೀದೇವಿ ಶೇಷಾದಿಗಳಿಂದ ಯಾವ ಕಾರಣದಿಂದ ನೀನು ಶ್ರೇಷ್ಠನೋ, ಆದುದರಿಂದ ನಿನಗೆ ಈಶ್ವರಃ ಎಂಬ ನಾಮಧೇಯವು ಮುಖ್ಯವಾದುದು ಬೇರೆ ಯಾರಿಗೂ ಮುಖ್ಯವಾಗಿ ಈಶ್ವರಃ ಎಂಬ ನಾಮಧೇಯವು ಇಲ್ಲ, ಎಂದು ಬ್ರಹ್ಮವೈವರ್ತದಲ್ಲಿದೆ (2) ಸಮರ್ಥರಾದವರು ಈಶಃ ಎನಿಸುತ್ತಾರೆ ಅವರಿಗಿಂತ ಶ್ರೇಷ್ಠನಾಗಿರುವುದರಿಂದ ನೀನು ಈಶ್ವರಃ ಎಂದೆನ್ನಿಸಿಕೊಳ್ಳುತ್ತಿ ಎಂದೂ ಹೇಳಿದೆ. ॥ ೬ ೭ ॥

ಗೀ ॥ ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ ॥ ೮ ॥

ಅ ॥ ಸಾಧೂನಾಂ=ಸಾತ್ವಿಕ ಜನರನ್ನು, ಪರಿತ್ರಾಣಾಯ=ರಕ್ಷಣೆಮಾಡುವುದಕ್ಕಾಗಿಯೂ, ದುಷ್ಕೃತಾಂ=ತಾಮಸಜನರನ್ನು, ವಿನಾಶಾಯ ಚ=ನಾಶಗೊಳಿಸಿ ಅಂಧಂತಮಸ್ಸನ್ನು ಹೊಂದಿಸುವುದಕ್ಕಾಗಿಯೂ, ಧರ್ಮಸಂಸ್ಥಾಪನಾಯ ಚ=ಧರ್ಮಗಳನ್ನು ಸಂರಕ್ಷಣೆಮಾಡುವುದಕ್ಕಾಗಿಯೂ, ಯುಗೇ ಯುಗೇ=ಪ್ರತಿಯುಗದಲ್ಲಿಯೂ, ಧರ್ಮಹಾನಿ ಅಧರ್ಮವೃದ್ಧಿ ಕಾಲದಲ್ಲಿ ಸಂಭವಾಮಿ=ಅವತಾರ ಮಾಡುತ್ತೇನೆ

ವಿ ॥ (1) ಶ್ರೀಹರಿಯು ಪೂರ್ಣಕಾಮನಾದುದರಿಂದ ತನಗೆ ಯಾವುದೊಂದು ಪ್ರಯೋಜನವಿಲ್ಲದಿದ್ದರೂ ಸಜ್ಜನರನ್ನು ದ್ವಾರ ಮಾಡುವುದಕ್ಕಾಗಿ ಅವತಾರ ಮಾಡುವುದು (2) ಅವತಾರ ಮಾಡದೇನೇ ಸಜ್ಜನರನ್ನು ರಕ್ಷಿಸಲಿಕ್ಕೆ ಶಕ್ತಿಯಿದ್ದರೂ ಲೀಲೆಯಿಂದಲೇ ಅವತಾರಮಾಡಿ ರಕ್ಷಣಾದಿಗಳನ್ನು ಮಾಡುವುದು ಸ್ವಭಾವವೆಂದು ತಿಳಿಯಬೇಕು. ॥ ೮ ॥

ಸೀ— ಪರಿತ್ರಾಣಾಯ ಸಾಧೂನಾಂ ಎಂದು ಸಜ್ಜನರ ರಕ್ಷಣಾದಿಗಳನ್ನು ಮಾಡುವುದು ಶ್ರೀಹರಿಯ ಅವತಾರಗಳಿಗೆ ಪ್ರಯೋಜನವು ಎಂದು ಹೇಳಿದೆ ಅಲ್ಲಿ ಅವತಾರಮಾಡಿಯೇ ರಕ್ಷಣಾದಿಗಳನ್ನು ಮಾಡಬೇಕೆಂದು ನಿಯಮವೋ, ಎಂದರೆ---

ಭಾ ॥ (೧) ನ ಜನ್ಮನೈವ ಪರಿತ್ರಾಣಾದಿಕಂ ಕಾರ್ಯಮಿತಿ ನಿಯಮಃ । ತಥಾಪಿ ಲೀಲಯಾ ಸ್ವಭಾವೇನ ಚ ಯಥೇಷ್ಟಚಾರೀ ॥ (೨) ತಥಾ ಹ್ಯುಕ್ತಂ । (1) ದೇವಸ್ಯೈಷ ಸ್ವಭಾವೋಽಯಂ । (2) ಲೋಕವತ್ತು ಲೀಲಾಕೈವಲ್ಯಂ । (3) ಕ್ರೀಡತೋ ಬಾಲಕಸ್ಯೇವ ಚೇಷ್ಟಾಂ ತಸ್ಯ ನಿಶಾಮಯ ॥ (4) ಅರಿಭಯಾದಿವ ಸ್ವಯಂ ಪುರಾದ್ವ್ಯವಾತ್ಸೀದ್ಯನಂತವೀರ್ಯಃ । ಪೂರ್ಣೋಽಯಮಸ್ಯಾತ್ರ ನ ಕಿಂಚಿದಾಪ್ಯಂ ತಥಾಽಪಿ ಸರ್ವಾಃ ಕುರುತೇ ಪ್ರವೃತ್ತೀಃ । ಅತೋ ವಿರುದ್ಧೇದಮಿಮಂ ವದಂತಿ ಪರಾವರಜ್ಞಾ ಮುನಯಃ ಪ್ರಶಾಂತಾ ಇತ್ಯಾದ್ಯೃಗ್ವೇದಖಿಲೇಷು ॥ ೮ ॥

ಅ ॥ (೧) (ಅವತಾರ ಮಾಡದೇನೇ ಜಗದ್ರಕ್ಷಣಾದಿಗಳನ್ನು ಮಾಡಲಿಕ್ಕೆ ಸಾಮರ್ಥ್ಯವಿಲ್ಲದಿರುವುದರಿಂದ) ಅವತಾರ ಮಾಡಿಯೇ ರಕ್ಷಣಾದಿಗಳನ್ನು ಮಾಡಬೇಕೆಂದು ನಿಯಮವಿಲ್ಲ. (ಹಾಗಾದರೆ ಅವತಾರವು ಏತಕ್ಕೆಂದರೆ ) ಆದರೂ ಕ್ರೀಡೆಯಿಂದಲೂ ಸ್ವಭಾವದಿಂದಲೂ ತನ್ನ ಇಚ್ಛೆಯಿಂದಲೇ ಹಾಗೆ ಮಾಡುತ್ತಾನೆ. (೨) (ಈ ವಿಷಯದಲ್ಲಿಯೇ ಪ್ರಮಾಣ ಹೇಳುತ್ತಾರೆ—) ಹಾಗೆಯೇ ಹೇಳಲ್ಪಟ್ಟಿದೆ (1) ಈ ಜಗತ್ಸೃಷ್ಟ್ಯಾದಿಗಳನ್ನು ಮಾಡಬೇಕೆಂಬ ಇಚ್ಛೆಯು ಶ್ರೀಹರಿಯ ಸ್ವಭಾವವು (2) ಲೋಕದಲ್ಲಿ ಹೇಗೆ ಮತ್ತಾದಿಗಳಿಗೆ ನರ್ತನ ಗಾನ ಮೊದಲಾದ ಕ್ರಿಯೆಗಳಿವೆಯೋ ಹಾಗೆಯೇ ಶ್ರೀಹರಿಯ ಸೃಷ್ಟಿ ಮೊದಲಾದ ಕ್ರಿಯೆಗಳು ಕೇವಲ ಲೀಲೆಯೇ (3) ಆಡುತ್ತಿರುವ ಬಾಲಕನಂತೆ ಶ್ರೀಹರಿಯ ಚೇಷ್ಟೆಯನ್ನು ತಿಳಿದುಕೊಳ್ಳು (4) ಯಾವ ಕಾರಣದಿಂದ ನಾಶವಿಲ್ಲದ ವೀರ್ಯವುಳ್ಳ ಶ್ರೀಹರಿಯು (ವಸ್ತುತಃ ಭಯವಿಲ್ಲದಿದ್ದರೂ ಜನರಿಗೆ ಮೋಹಗೊಳಿಸುವುದಕ್ಕಾಗಿ) ಕಂಸಾದಿ ಶತ್ರುಗಳ ಭಯದಿಂದಲೆಂಬಂತೆ ತಾನು ಮಧುರಾಪಟ್ಟಣದಿಂದ ಗೋಕುಲಕ್ಕೆ ಹೊರಟುಹೋದನು ಇಂತಹ ಶ್ರೀಹರಿಯು ಸರ್ವಗುಣಪೂರ್ಣನು, ಇವನಿಗೆ ಹೊಂದಲ್ಪಡಬೇಕಾದುದು ಯಾವುದೂ ಇಲ್ಲ ಆದರೂ ಎಲ್ಲಾ ಪ್ರವೃತ್ತಿಗಳನ್ನು ಮಾಡುತ್ತಾನೆ ಆದುದರಿಂದ ಪರಾಪರತತ್ವವನ್ನರಿತ ಶಾಂತಚಿತ್ತರಾದ ಮುನಿಗಳೂ (ಲೋಕದಲ್ಲಿ ಫಲವನ್ನುದ್ದೇಶಿಸಿಯೇ ಪ್ರವೃತ್ತಿಯು ಕಂಡದ್ದರಿಂದ) ಶ್ರೀಹರಿಯನ್ನು ಲೋಕವಿಲಕ್ಷಣವಾದ ಇಚ್ಛೆಯುಳ್ಳವನನ್ನಾಗಿ ಹೇಳುತ್ತಾರೆ, ಇತ್ಯಾದಿ ಪ್ರಮೇಯವು ಋಗ್ವೇದ ಖಿಲಗಳಲ್ಲಿ ಹೇಳಿದೆ ॥ ೮ ॥

**ಟೀ**—ಶ್ರೀಕೃಷ್ಣನಿಗೆ ಅನೇಕ ಜನ್ಮಗಳು ದಾಟವೆ, ಎಂದಾದರೆ, ಜನನ ಮರಣಗಳು ಇಲ್ಲವೆಂಬುದು ಕೂಡದೆ ಹೋಗುವುದು. ಆಗ **ಅವಿನಾಶಿ ತು ತದ್ವಿದ್ಧಿ** ಎಂಬಲ್ಲಿ ನಾಶವಿಲ್ಲ ಎಂದು ಹೇಳಿದ್ದು ವಿರುದ್ಧವಾಗುವುದು, ಎಂದರೆ— ಅಜೋಽಪಿ ಎಂದು ಹೇಳಿದ್ದಾರೆ **ಅಜೋಽಪಿ** ಎಂಬ ಶ್ಲೋಕದಲ್ಲಿದ್ದ **ಆತ್ಮಮಾಯಯಾ** ಎಂಬುದಕ್ಕೆ ಅಜ್ಞಾನವಶದ್ದೆಶೆಯಿಂದ ಎಂದು ಪರಭಾಷ್ಯದಲ್ಲಿ ಅರ್ಥ ಹೇಳಿರುವರು. ಇಂತಹ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಯೋಗ್ಯವಾದ ಅರ್ಥವನ್ನು ಹೇಳುತ್ತಾರೆ—

**ತಾ ॥ (೧) ಆತ್ಮಮಾಯಯಾ ಆತ್ಮೇಚ್ಛಯಾ ॥ (೨) ಪ್ರಕೃತಿಂ ಸ್ವಾಮಧಿಷ್ಠಾಯ ಸ್ವಭಾವಂ ॥ (೩) ದೇವಸ್ಯೈಷ ಸ್ವಭಾವೋಽಯಮಿತ್ಯಾದಿಶ್ರುತೇಃ(ಶ್ಚ) ॥ (೪) ಅತ ಏವ ಸ್ವಶಬ್ದೇನ ವಿಶೇಷಣಂ ಪ್ರಕೃತಿಂ ಸ್ವಾಮವಷ್ಟಭ್ಯೇತ್ಯಾದಿಷು ॥ (೫) ಮಯಾಽಧ್ಯಕ್ಷೇಣ ಪ್ರಕೃತಿರಿತ್ಯಾದಿಷು ತು ನ ಸ್ವಶಬ್ದಃ ॥ (೬) ಪ್ರಕೃತಿಂ ವಿದ್ಧಿ ಮೇ ಪರಾಮಿತ್ಯಾದಿಷು ಸಂಬಂಧಿತ್ವೇನ ಪ್ರತೀತೇರನ್ಯಾ ॥ (೭) ಅತ್ರ ತು ಸ್ವರಶಬ್ದಃ ಸ್ವರೂಪವಾಚೀ । ಸ್ವಭಾವ ಇತ್ಯತ್ರಾಪಿ ಸ್ವಾಖ್ಯೋ ಭಾವಃ ಸ್ವಭಾವಃ । ಭಾವಶಬ್ದಸ್ತು ಸಂಬಂಧ್ಯಾಶಂಕಾನಿವೃತ್ತಯೇ (ಕಾಂ ನಿವರ್ತಯತಿ) ॥ (೮) ಸ್ವಸ್ವಭಾವ ಇತಿ ತು ಸ್ವಸ್ವರೂಪಮಿತಿವದುಪಚಾರತ್ವಾಶಂಕಾಂ ನಿವರ್ತಯತಿ ॥ (೯) ಸ್ರಷ್ಟೃತ್ವಾದಿಸ್ವಭಾವತ್ವಾತ್ ಸ್ವೇಚ್ಛಯಾ ವಿಷ್ಣುರವ್ಯಯಃ । ಸೃಷ್ಟ್ಯಾದಿಕಂ ಕರೋತ್ಯದ್ಧಾ ಸ್ವಯಂ ಚ ಬಹುಧಾ ಭವೇದಿತಿ ನಾರಾಯಣಶ್ರುತಿಃ ॥ ೬,೭,೮ ॥**

**ಅ** ॥ (೧) ಆತ್ಮಮಾಯಯಾ= ತನ್ನ ಇಚ್ಛೆಯಿಂದ, (ಇಲ್ಲಿ **ಯತ್ಸರ್ವಜ್ಞಸ್ಸರ್ವವಿತ್** ಇದು ಮೊದಲಾದ ಸಮಸ್ತ ಪ್ರಮಾಣಗಳಿಂದ ವಿರೋಧವು ಬರುವುದರಿಂದ ಅಜ್ಞಾನವಶದ್ದೆಶೆಯಿಂದ ಎಂದರ್ಥ ಹೇಳಕೂಡದು. ಏಕೆಂದರೆ—**ಮಹಾಮಾಯೇತ್ಯವಿದ್ಯೇತಿ** ಇತ್ಯಾದಿ ಪ್ರಮಾಣಗಳಿಂದ **ಮಾಯಾ** ಎನಿಸಿಕೊಂಡ ತನ್ನ (ಶ್ರೀಹರಿಯ) ಇಚ್ಛೆಯಿಂದಲೇ ರಾಮಕೃಷ್ಣಾದ್ಯವತಾರವು ಅಜ್ಞಾನರೂಪವಾದ ಮಾಯೆಯ ಅಧೀನನಾಗಿ ಅವತಾರ ಮಾಡಿದ್ದಲ್ಲ (೨) (**ಪ್ರಕೃತಿಂ ಸ್ವಾಮಧಿಷ್ಠಾಯ** ಎಂಬುದಕ್ಕೆ ಪ್ರಾಕೃತ ಶರೀರವನ್ನು ಹೊಂದಿ ಎಂದು ಅರ್ಥ ಹೇಳಿರುತ್ತಾರೆ ಆ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಪ್ರಕೃತಿಂ ಎಂಬ ಪದದ ಅರ್ಥವನ್ನು ಹೇಳುತ್ತಾರೆ-) ತನ್ನ ಸ್ವಭಾವವನ್ನು ಅನುಸರಿಸಿ (ಅಂದರೆ ಇಲ್ಲಿ ಪ್ರಾಕೃತಶರೀರಲಾಭವೆಂದು ಹೇಳುವುದಿಲ್ಲ ಏಕೆಂದರೆ—**ಸದ್ದೇಹಃ ಸುಖಗಂಧಶ್ಚ** ಇದುಮೊದಲಾದ ಶ್ರೀಹರಿಯು ಅವತಾರಮಾಡುವುದಾದರೆ ಪ್ರಯೋಜವು ಬೇಕು ಪ್ರಯೋಜನವಿದೆ ಎಂದು ಹೇಳಿದರೆ—**ನಾನವಾಪ್ತಮವಾಪ್ತವ್ಯಂ** ಎಂದು ಹೇಳಿದ್ದಕ್ಕೆ ವಿರೋಧವು ಬರುವುದು ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಜ್ಞಾನಾನಂದಾತ್ಮಕ ದೇಹವಿದೆ ಎಂದು ಹೇಳುವ ಶ್ರುತಿಗಳಿಂದ ವಿರೋಧವು ಬರುವುದು. ಆದಕಾರಣ ಶ್ರೀಹರಿಗೆ ಪ್ರಯೋಜನವಿಲ್ಲದಿದ್ದರೂ ಅವತಾರ ಮೊದಲಾದುದು ಶ್ರೀಹರಿಯ ಸ್ವಭಾವವಾದುದರಿಂದ ಕೂಡುತ್ತದೆ-) (ಶ್ರೀಹರಿಯ ಅವತಾರಾದಿಗಳು ಪ್ರಯೋಜನವಿಲ್ಲದೆ ಸ್ವಭಾವದಿಂದಲೇ ಎಂದು ಸಿದ್ಧವಾಗುತ್ತದೆ ಎಂಬುವಲ್ಲಿ ಪ್ರಮಾಣವು ಯಾವುದೆಂದರೆ-) ಶ್ರೀಹರಿಯ ಅವತಾರಾದಿಗಳು ಶ್ರೀಹರಿಯ ಸ್ವಭಾವವು ಸ್ವಭಾವವೂ ಕೂಡ ಶ್ರೀಹರಿಯ ಸ್ವರೂಪವೇ ಶ್ರೀಹರಿಯಿಂದ ಭಿನ್ನವಲ್ಲ, ಇದು ಮೊದಲಾದ ಶ್ರುತಿಗಳಿಂದ. (೪) (ಶ್ರೀವಿಷ್ಣುವಿನ ವ್ಯಾಪಾರವು ಸ್ವಭಾವದಿಂದಲೇ ಎಂದಾಗಲಿ. ಆದರೂ ಇಲ್ಲಿ ಪ್ರಕೃತಿ ಎಂಬ ಪದಕ್ಕೆ ಸ್ವಭಾವವೆಂಬ ಅರ್ಥವು ಹೇಗೆ ಎಂದರೆ-) ಪ್ರಕೃತಿ ಎಂಬ ಪದಕ್ಕೆ ಸ್ವಭಾವವೆಂದು ಅರ್ಥವಿದ್ದಪ್ರಯುಕ್ತವೇ ಪ್ರಕೃತಿ ಎಂಬುದಕ್ಕೆ ಸ್ವಾಂ ಎಂಬ ವಿಶೇಷಣವನ್ನೇ ಕೊಟ್ಟಿರುತ್ತಾರೆ ಹೀಗೆಯೇ **ಪ್ರಕೃತಿಂ ಸ್ವಾಮವಷ್ಟಭ್ಯ** ಇತ್ಯಾದಿಗಳಲ್ಲಿಯೂ **ಸ್ವಾಂ** ಎಂಬ

ಶಬ್ದವು ವಿಶೇಷಣವಿದೆ (೫) (ಪ್ರಕೃತಿ ಪದಕ್ಕೆ ಸ್ವಭಾವವೆಂದು ಅರ್ಥವಾದರೆ **ಮಯಾಽಧ್ಯಕ್ಷೇಣ ಪ್ರಕೃತಿಃ ಪ್ರಕೃತಿಂ ವಿದ್ಧಿ** ಎಂಬಲ್ಲಿದ್ದ ಪ್ರಕೃತಿಪದಕ್ಕೂ ಸ್ವಭಾವವೆಂದು ಅರ್ಥವೋ ಎಂದರೆ-) **ಮಯಾಽಧ್ಯಕ್ಷೇಣ ಪ್ರಕೃತಿಃ** ಇತ್ಯಾದಿಗಳಲ್ಲಿ **ಸ್ವ** ಎಂಬ ಶಬ್ದವು ವಿಶೇಷಣವಾಗಿ ಇಲ್ಲ (ಆದಕಾರಣ ಅಲ್ಲಿದ್ದ ಪ್ರಕೃತಿ ಪದಕ್ಕೆ ಸ್ವಭಾವವೆಂದು ಅರ್ಥವಲ್ಲ) (೬) ಸ್ವಭಾವವೆಂಬ ಅರ್ಥಕ್ಕಿಂತ ಬೇರೆ ಅರ್ಥವೆಂಬ ವಿಷಯದಲ್ಲಿ ಹೇತ್ವಂತರವನ್ನು ಹೇಳುತ್ತಾರೆ—) **ಪ್ರಕೃತಿಂ ವಿದ್ಧಿ ಮೇ ಪರಾಂ** ಇತ್ಯಾದಿಗಳಲ್ಲಿ ಮೇ= ನನ್ನ ಅಧೀನವಾದುದು ಎಂದು ಷಷ್ಠೀವಿಭಕ್ತಿಯಿಂದ ಸಂಬಂಧವು ತೋರುವುದರಿಂದ ಇಲ್ಲಿದ್ದ ಪ್ರಕೃತಿಶಬ್ದಕ್ಕೆ ಸ್ವಭಾವವೆಂದರ್ಥವಲ್ಲ **ಮಯಾಽಧ್ಯಕ್ಷೇಣ ಪ್ರಕೃತಿಃ** ಎಂಬುವಲ್ಲಿ ಷಷ್ಠೀವಿಭಕ್ತಿಯು ಇಲ್ಲದಿದ್ದರೂ ಅಧೀನತ್ವವು ತೋರುವುದರಿಂದ ಇಲ್ಲಿದ್ದ ಪ್ರಕೃತಿಶಬ್ದಕ್ಕೂ ಸ್ವಭಾವವೆಂದು ಅರ್ಥವಲ್ಲ) (೭) (ಸಂಬಂಧಿತ್ವವು ತೋರುವುದರಿಂದ ಇಲ್ಲಿದ್ದ ಪ್ರಕೃತಿಶಬ್ದಕ್ಕೆ ಸ್ವಭಾವ ಎಂಬುದಕ್ಕಿಂತ ಬೇರೆ ಅರ್ಥವೆಂದು ಹೇಳುವುದಾದರೆ ಇಲ್ಲಿಯೂ ಸ್ವಾಂ ಎಂದು ಸಂಬಂಧಿಯಾಗಿ ತೋರುವುದರಿಂದ ಇಲ್ಲಿದ್ದ ಪ್ರಕೃತಿಶಬ್ದಕ್ಕೂ ಬೇರೆ ಅರ್ಥವೇ ಆಗಬೇಕಾಯಿತು, ಎಂದರೆ—) ಇಲ್ಲಿದ್ದ ಸ್ವ ಶಬ್ದವು ಮುಖ್ಯವಾಗಿ ಸ್ವರೂಪವೆಂಬ ಅರ್ಥವನ್ನೇ ಹೇಳುತ್ತದೆ (ಹಾಗೆ ಒಡಂಬಟ್ಟರೆ ಯಾವ ಬಾಧಕವೂ ಇಲ್ಲ) (ಸ್ವ ಶಬ್ದಕ್ಕೆ ಸ್ವರೂಪವೆಂಬ ಅರ್ಥವು ಎಲ್ಲಿ ಕಂಡದೆ ಎಂದರೆ -) ಸ್ವಭಾವಃ ಎಂಬಲ್ಲಿಯೂ ಸ್ವ ಸ್ವರೂಪಭೂತವಾದ ಭಾವವು ಸ್ವಭಾವವು. (ಸ್ವಭಾವ ಎಂಬ ಪದದಲ್ಲಿರತಕ್ಕ ಸ್ವ ಶಬ್ದಕ್ಕೆ ಸ್ವರೂಪವೆಂಬ ಅರ್ಥವಿರುವುದಾದರೆ **ಸ್ವ** ಎಂದೇ ಸಾಕು. ಭಾವ ಎಂಬ ಶಬ್ದವು ವ್ಯರ್ಥವು ಎಂದರೆ—) **ಸ್ವ** ಎಂಬ ಶಬ್ದವನ್ನು ಮಾತ್ರ ಹೇಳಿದರೆ ಸ್ವ ಶಬ್ದಕ್ಕೆ ಸ್ವಕೀಯನೆಂಬ ಅರ್ಥದಲ್ಲಿಯೂ ಪ್ರಯೋಗವಿದ್ದುದರಿಂದ ಸ್ವೀಯನೆಂಬ ಅರ್ಥವು ಎಂದು ಶಂಕಾ ಬರಬಹುದು ಆ ಶಂಕೆಯನ್ನು ಹೋಗಲಾಡಿಸುವುದಕ್ಕಾಗಿ **ಭಾವ** ಎಂಬ ಶಬ್ದವನ್ನು ಪ್ರಯೋಗಿಸಿದ್ದು ಭಾವ ಶಬ್ದದಿಂದ ಕೂಡಿದ **ಸ್ವ** ಶಬ್ದಕ್ಕೆ ಸ್ವರೂಪವೆಂದೇ ಅರ್ಥವು (**ಪ್ರಕೃತಿಂ** ಎಂಬ ಪದಕ್ಕೆ ಸ್ವಭಾವವೆಂದು ಅರ್ಥವಾದರೆ ಸ್ವಾಂ ಪ್ರಕೃತಿಂ ಎಂದು ಹೇಳಿದರೆ ಸ್ವಸ್ವಭಾವಂ=ತನ್ನ ಸ್ವಭಾವವನ್ನು ಎಂದು ಹೇಳಿದಂತೆ ಆಯಿತು **ಸ್ವ** ಎಂಬ ಶಬ್ದಗಳೆರಡೂ ಸ್ವರೂಪವೆಂಬ ಅರ್ಥವನ್ನು ಹೇಳುತ್ತವೆ ಎಂದು ಹೇಳಿದಂತೆ ಆಯಿತು ಅಂತೂ ಪುನರುಕ್ತಿಯು (ಎರಡು ಸಲ ಹೇಳಿದಂತೆ ಆಯಿತು) ಎಂದರೆ—) ಸ್ವಸ್ವಭಾವಃ ಎಂಬುದು **ಸ್ವಸ್ವರೂಪಂ** ತನ್ನ ಸ್ವರೂಪವು ಎಂಬುವುದರಂತೆ ಔಪಚಾರಿಕ (ಅಮುಖ್ಯ)ವೆಂಬ ಶಂಕೆಯನ್ನು ಹೋಗಲಾಡಿಸುತ್ತದೆ (೮) ನಾಶವಿಲ್ಲದ ಶ್ರೀವಿಷ್ಣುವಿಗೆ ಜಗತ್ಸೃಷ್ಟ್ಯಾದಿಗಳನ್ನು ಮಾಡುವುದು ಸ್ವಭಾವವಾದುದರಿಂದ ತನ್ನ ಇಚ್ಛೆಯಿಂದ ಚೆನ್ನಾಗಿ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ತಾನೂ ಬಹುರೂಪಗಳುಳ್ಳವನಾಗುತ್ತಾನೆ. ಎಂದು ನಾರಾಯಣಶ್ರುತಿಯು ॥ ೬, ೭, ೮ ॥

**ಪೀ**—ಹೀಗೆ ತನ್ನ ಸ್ವಭಾವದಿಂದಲೇ ಅವತಾರ ಮೊದಲಾದ ಶ್ರೀಹರಿಯ ವ್ಯಾಪಾರವನ್ನು ಹೇಳಿ ಅದನ್ನು ಹೀಗೆ ತಿಳಿದುಕೊಂಡದಕ್ಕೆ ಫಲ ಹೇಳುತ್ತಾರೆ—

**ಗೀ ॥ ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥ ೯ ॥**

**ಅ ॥** ಅರ್ಜುನ=ಅರ್ಜುನನೇ, ಯಃ=ಯಾವಾತನು, ಏವಂ=ಹಿಂದೆ ಹೇಳಿದ ಪ್ರಕಾರ, **ಮೇ**= ನನ್ನ, ದಿವ್ಯಂ=ಲೋಕವಿಲಕ್ಷಣವಾದ, ಜನ್ಮ=ಪ್ರಾದುರ್ಭಾವವನ್ನು, ಕರ್ಮ ಚ=ಕರ್ಮವನ್ನು ಕೂಡ ತತ್ತ್ವತಃ=ಯಥಾರ್ಥವಾಗಿ ವೇತ್ತಿ=ತಿಳಿದುಕೊಳ್ಳುತ್ತಾನೋ, ಸಃ=ಆ ಜ್ಞಾನಿಯು, ದೇಹಂ=ಶರೀರವನ್ನು, ತ್ಯಕ್ತ್ವಾ=ಬಿಟ್ಟು, ಪುನಃ=ತಿರುಗಿ, ಜನ್ಮ=ಉತ್ಪತ್ತಿಯನ್ನು, ನೈತಿ=ಹೊಂದುವುದಿಲ್ಲ ಮಾಂ= ನನ್ನನ್ನು, ಏತಿ=ಹೊಂದುತ್ತಾನೆ (ಅಂದರೆ ಮೋಕ್ಷವನ್ನು ಹೊಂದುತ್ತಾನೆ) ॥ ೯ ॥

ಪೀ—ಶ್ರೀಹರಿಯ ಜನ್ಮಾದಿಗಳನ್ನು ಮಾತ್ರ ತಿಳಿದುದರಿಂದಲೇ ಮೋಕ್ಷವಾಗುತ್ತದೆಂಬ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಹೇಳುತ್ತಾರೆ —

ಭಾ ॥ (೧) ಪೃಥಙ್ಮುಕ್ತ್ಯುಕ್ತಿಃ ಸರ್ವಜ್ಞಾನನಿಯಮದರ್ಶನಾರ್ಥಂ । ನತು ತಾವನ್ಮಾತ್ರೇಣ ಮುಕ್ತಿರಿತ್ಯುಕ್ತಂ ॥ (೨) ವೇದಾದ್ಯುಕ್ತಂ ತು ಸರ್ವಂ ಯೋ ಜ್ಞಾತ್ವೋಪಾಸ್ತೇ ಸದಾ ಹಿ ಮಾಂ । ತಸ್ಯೈವ ದರ್ಶನಪಥಂ ಯಾಮಿ ನಾನ್ಯಸ್ಯ ಕಸ್ಯಚಿದಿತ್ಯುಕ್ತೇಶ್ಚ ಮಹಾಕೌರ್ಮೇ ॥ (೩) ಅತ್ರೋಕ್ತಸ್ಯೈತಜ್ಜ್ಞಾನೇನೈವ ಜನ್ಮನೈತೀತಿ ಗತಿಃ ॥ (೪) ನಾನ್ಯಸ್ಯ ಕಸ್ಯಚಿದಿತಿ ವಿಶೇಷಣಾತ್ । ತತ್ತ್ವತ ಇತಿ ವಿಶೇಷಣಾಚ್ಚ ಸರ್ವಜ್ಞಾನಮಾಪತತಿ । ಯತ್ರೈವಂ ಭವತಿ ತತ್ರ ತತ್ತ್ವತ ಇತಿ ವಿಶೇಷಣೇನ ವಿರೋಧಃ ॥ (೫) ಉಕ್ತಂ ಚ । ಏಕಂ ಚ ತತ್ತ್ವತೋ ಜ್ಞಾತುಂ ವಿನಾ ಸರ್ವಜ್ಞತಾಂ ನರಃ । ನ ಸಮರ್ಥೋ ಮಹೇಂದ್ರೋಽಪಿ ತಸ್ಮಾತ್ಸರ್ವತ್ರ ಜಿಜ್ಞಾಸೇದಿತಿ ಸ್ಕಾಂದೇ ॥ ೯ ॥

ಅ ॥ (೧)ಅಲ್ಲಿ ಅಲ್ಲಿ ಕೆಲಕೆಲವು ಶ್ರೀಹರಿಯ ಧರ್ಮಗಳ ಜ್ಞಾನಮಾತ್ರದಿಂದ ಮುಕ್ತಿಯಾಗುತ್ತದೆಂದು ಹೇಳಿದ್ದು ಜನ್ಮ ಕರ್ಮ ಮೊದಲಾದ ಎಲ್ಲಾ ಧರ್ಮಗಳನ್ನು ನಿಯಮವಾಗಿ ಸರ್ವಥಾ ತಿಳಿದುಕೊಳ್ಳಲೇಬೇಕು, ಎಂದು ತೋರಿಸುವುದಕ್ಕಾಗಿ ಶ್ರೀಹರಿಯ ಜನ್ಮಕರ್ಮರೂಪವಾದ ಏಕದೇಶಜ್ಞಾನಮಾತ್ರದಿಂದ ಮೋಕ್ಷವಾಗುವುದಿಲ್ಲವೆಂದು ೩ನೇ ಅಧ್ಯಾಯದಲ್ಲಿ ಹೇಳಿದೆ (೨) (ಇದೇ ವಿಷಯದಲ್ಲಿ ಪ್ರಮಾಣಾಂತರವನ್ನು ಹೇಳುತ್ತಾರೆ—) ಯಾರು ವೇದಾದಿಗಳಲ್ಲಿ ಹೇಳಿದ ಎಲ್ಲಾ ಗುಣಗಳನ್ನು ತಿಳಿದು ತಂತಮಗೆ ಯೋಗ್ಯಗಳಾದ ಗುಣಗಳಿಂದ ಯಾವಾಗಲೂ ನನ್ನನ್ನು ಉಪಾಸನೆಮಾಡುತ್ತಾರೋ, ಅಂತಹವರಿಗೇನೇ ಪ್ರತ್ಯಕ್ಷನಾಗುತ್ತೇನೆ. ಆ ರೀತಿ ಉಪಾಸನೆಮಾಡದಿರುವವರಿಗೆ ಯಾರಿಗೂ ಪ್ರತ್ಯಕ್ಷನಾಗಲಾರೆನು ಎಂದು ಮಹಾಕೌರ್ಮದಲ್ಲಿ ಹೇಳಿದೆ. (೩) (ಈ ಪ್ರಮಾಣಕ್ಕೆ ಬೇರೆ ರೀತಿ ಅರ್ಥ ಹೇಳಲಿಕ್ಕೆ ಸಾಧ್ಯವಿಲ್ಲ. ಗೀತೆಗೆ ಬೇರೆ ರೀತಿ ಅರ್ಥ ಹೇಳಲಿಕ್ಕೆ ಆಗುತ್ತದೆ ಆದಕಾರಣ ಹೀಗೆ ಸಾವಕಾಶತ್ವ ನಿರವಕಾಶತ್ವಗಳಿಂದ ಅರ್ಥನಿರ್ಣಯವನ್ನು ಮಾಡಬೇಕೆನ್ನುತ್ತಾರೆ.) ಗೀತೆಯಲ್ಲಿ ಹೇಳಿದ್ದಕ್ಕೆ ಸಾವಕಾಶವಾಗಿ (ಅಂದರೆ ಜನ್ಮಕರ್ಮಗಳನ್ನು ತಿಳಿದುಕೊಂಡೇ ತಿರುಗಿ ಹುಟ್ಟುವುದಿಲ್ಲವೆಂದು ಅರ್ಥ ಹೇಳಬೇಕು) (ಅಂದರೆ ಜನ್ಮಕರ್ಮಗಳನ್ನು ತಿಳಿಯದೆ ಮೋಕ್ಷವಾಗುವುದಿಲ್ಲವೆಂದೇ ಅರ್ಥವು) **ವೇದಾದ್ಯುಕ್ತಂ** ಇದು ಮೊದಲಾದ ವಾಕ್ಯಗಳಿಗೆ ಬೇರೆ ರೀತಿಯಾಗಿ ಅರ್ಥ ಹೇಳಲಿಕ್ಕೆ ಸರ್ವಥಾ ಆಗುವುದೇ ಇಲ್ಲ. ಆದಕಾರಣ ಅದು ನಿರವಕಾಶವು. (೪) (ಹೀಗಾದರೆ ಬ್ರಹ್ಮನು ಮಾತ್ರ ವೇದಾದಿಗಳಲ್ಲಿ ಹೇಳಿದ ಸಂಪೂರ್ಣ ಗುಣಗಳನ್ನು ತಿಳಿದುಕೊಂಡು ಉಪಾಸನೆಮಾಡಬೇಕಾದುದು ಬೇರೆಯವರು ಸ್ವಲ್ಪ ತಿಳಿದುಕೊಂಡರೆ ಸಾಕು ಹೀಗೆ **ವೇದಾದ್ಯುಕ್ತಂ** ಇತ್ಯಾದಿಗಳು ಸಾವಕಾಶಗಳಾಗಿವೆ, ಎಂದು ಏಕೆ ಹೇಳಬಾರದು ಎಂದರೆ—) **ನಾನ್ಯಸ್ಯ ಕಸ್ಯಚಿತ್** ಸಂಪೂರ್ಣ ತಿಳಿದವನಿಗೇನೇ ಪ್ರತ್ಯಕ್ಷನಾಗುವನು ಬೇರೆ ಯಾರಿಗೂ ಪ್ರತ್ಯಕ್ಷನಾಗುವುದಿಲ್ಲವೆಂದೂ, ಹೇಳಿದ್ದರಿಂದ ಬ್ರಹ್ಮನಿಗೆ ಮಾತ್ರ ಸರ್ವ ಜ್ಞಾನವು ಇತರರಿಗೆ ಸ್ವಲ್ಪ ಜ್ಞಾನವು ಎಂದು ಪಕ್ಷಾಂತರವನ್ನು ನಿಷೇಧಮಾಡಿದ್ದರಿಂದಲೂ, **ತತ್ತ್ವತಃ** ಎಂದು ವಿಶೇಷಣವನ್ನು ಕೊಟ್ಟ ಪ್ರಯುಕ್ತವೂ ವೇದಾದಿಗಳಲ್ಲಿ ಹೇಳಿದ ಸರ್ವಜ್ಞಾನವು ಅವಶ್ಯಕವೇ ಎಲ್ಲಿ ಸರ್ವಜ್ಞಾನವು ಪ್ರಮಾಣಸಿದ್ಧವಾದರೂ ಏಕದೇಶಜ್ಞಾನವನ್ನು ಹೇಳುತ್ತದೋ ಅಲ್ಲಿ ತತ್ತ್ವತಃ ಎಂಬ ವಿಶೇಷಣದಿಂದ ವಿರೋಧವು ಬರುವುದು (೫) (ತತ್ತ್ವತಃ ಜ್ಞಾನವೆಂದು ಹೇಳಿದರೆ ಸರ್ವ ಜ್ಞಾನವು ಬೇಕೆಂದು ಹೇಳುವುದು ಹೇಗೆಂದರೆ—) ಮನುಷ್ಯನು ಸರ್ವವನ್ನು ತಿಳಿಯದೆ ಒಂದನ್ನು ಯಥಾರ್ಥವಾಗಿ ತಿಳಿಯಲಿಕ್ಕೆ ಸಮರ್ಥನಲ್ಲ ದೇವೇಂದ್ರನೂ ಸಮರ್ಥನಲ್ಲ ಅದುದರಿಂದ ಎಲ್ಲಾ ವಸ್ತೂ ಎಲ್ಲರೂ ತಿಳಿಯಲಿಚ್ಛಿಸಬೇಕು, ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ

ವಿ ॥ ಏಕೋ ಭಾವಸ್ತತ್ವತೋ ಯೇನ ದೃಷ್ಟಃ ಸರ್ವೇ ಭಾವಾ ಸ್ತತ್ವತಸ್ತೇನ ದೃಷ್ಟಾಃ ಒಂದು ಪದಾರ್ಥವನ್ನು ಯಾವ ಪುರುಷನು ವಸ್ತುವು ಹೇಗೆ ಇದೆಯೋ ಹಾಗೆಯೇ ಕಾಣುತ್ತಾನೋ, ಅವನೇ ಸರ್ವ ಪದಾರ್ಥಗಳನ್ನು ಯಥಾರ್ಥವಾಗಿ ಕಾಣುತ್ತಾನೆ, ಎಂದು ಬೇರೆ ಕಡೆಯಲ್ಲಿ ಹೇಳಿದೆ. ಸರ್ವಜ್ಞತ್ವವೆಂದರೆ ಎಲ್ಲಾ ಕಡೆಗಳಲ್ಲಿಯೂ ಯಥಾಶಕ್ತಿ ಸಮಸ್ತ ವಸ್ತುಗಳನ್ನು ತಿಳಿದುಕೊಳ್ಳುವುದೆಂಬ ಅರ್ಥವನ್ನು ಇಟ್ಟುಕೊಳ್ಳಬೇಕು. ॥ ೯ ॥

ಪೀ—ಹೀಗೆ ಸ್ವಭಾವದಿಂದಲೇ ಅವತಾರಾದಿ ವ್ಯಾಪಾರಗಳನ್ನು ಹೇಳಿ ಅದನ್ನು ತಿಳಿದುಕೊಂಡದ್ದಕ್ಕೆ ಫಲವನ್ನು ಈ ಶ್ಲೋಕದಿಂದ ಹೇಳುತ್ತಾರೆ ಅದರಲ್ಲಿ ಶ್ರೀಹರಿಯ ಜನ್ಮಕರ್ಮಗಳನ್ನು ಮಾತ್ರ ತಿಳಿಯೋಣದರಿಂದ ಮೋಕ್ಷವಾಗುತ್ತದೆಂಬ ಅನ್ಯಥಾಪ್ರತೀತಿಯನ್ನು ನಿರಾಕರಿಸುತ್ತಾರೆ—

ತಾ ॥ ಯೇಷಾಂ ಗುಣಾನಾಂ ಜ್ಞಾನೇನ ಮುಕ್ತಿರುಕ್ತಾ ಪೃಥಕ್ಪೃಥಕ್ । ವೇದೇಷು ಚೇತಿಹಾಸೇಷು ಸಾ ತು ತೇಷಾಂ ಸಮುಚ್ಚಯಾತ್ । ಏವಮೇವ ಶಮಾದೀನಾಂ ನಾನ್ಯಥಾ ತು ಕಥಂಚನೇತಿ ಬ್ರಹ್ಮವೈವರ್ತವಚನಾಜ್ಜನ್ಮ ಕರ್ಮ ಚೇತ್ಯಾದಿಷು ನ ತಾವನ್ಮಾತ್ರೇಣ ಮೋಕ್ಷಃ ॥ ೯ ॥

ಅ ॥ ವೇದಗಳಲ್ಲಿಯೂ ಇತಿಹಾಸಗಳಲ್ಲಿಯೂ ಪ್ರತ್ಯೇಕಪ್ರತ್ಯೇಕವಾಗಿ ಯಾವ ಗುಣಗಳ ಜ್ಞಾನದಿಂದ ಮೋಕ್ಷವಾಗುತ್ತದೆಂದು ಹೇಳಲ್ಪಟ್ಟದೋ, ಆ ಮೋಕ್ಷವು ಗುಣಗಳ ಸಮುಚ್ಚಯ ಜ್ಞಾನದಿಂದಲೇ ಆಗುತ್ತದೆಂದು ತಿಳಿಯಬೇಕು ಅಂದರೆ ಸರ್ವಗುಣಪರಿಪೂರ್ಣನೆಂಬ ಜ್ಞಾನದಿಂದಲೇ ಮೋಕ್ಷವು ಉಕ್ತವಾಗಿದೆ ಎಂದು ತಿಳಿಯಬೇಕು. ಹೀಗೆಯೇ (ಶಮ ದಮ ಮೊದಲಾದವುಗಳು ಪ್ರತ್ಯೇಕಪ್ರತ್ಯೇಕವಾಗಿ ಜ್ಞಾನಸಾಧನಗಳೆಂದು ಕೆಲವೆಡೆ ಹೇಳಿದ್ದರೂ) (**ಶಾಂತೋ ದಾಂತ ಉಪರತಸ್ತಿತಿಕ್ಷುಸ್ಸಮಾಹಿತಆತ್ಮನ್ಯೇವಾತ್ಮಾನಂ ಪಶ್ಯೇತ್** ಎಂಬುವ ಶ್ರುತಿಯಲ್ಲಿ ಅವುಗಳೆಲ್ಲವನ್ನು ಜ್ಞಾನಕ್ಕಾಗಿ ಅವಶ್ಯವಾಗಿ ಸಂಪಾದಿಸಬೇಕೆಂದು ಹೇಳಿದ ಕಾರಣ) ಶಮದಮಾದಿಗಳ ಸಮುಚ್ಚಯದಿಂದಲೇ ಜ್ಞಾನವುಂಟಾಗುತ್ತದೆ ಒಂದೊಂದರಿಂದ ಹೇಗೂ ಜ್ಞಾನವು ಉಂಟಾಗಲಾರದು ಎಂದು ಬ್ರಹ್ಮವೈವರ್ತವಚನದಿಂದ **ಜನ್ಮ ಕರ್ಮ ಚ** ಇತ್ಯಾದಿಗಳಲ್ಲಿ ಕೇವಲ ಜನ್ಮಕರ್ಮಗಳ ಜ್ಞಾನಮಾತ್ರದಿಂದ ಮೋಕ್ಷವಾಗಲಾರದು, ಎಂದು, ಇಟ್ಟುಕೊಳ್ಳಬೇಕು. ॥ ೯ ॥

ಪೀ—ಹೀಗೆ ತಿಳಿದುಕೊಂಡು ಮುಕ್ತರಾದವರು ಇದ್ದಾರೋ ಏನು ಎಂದರೆ—

**ಗೀ ॥ ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥ ೧೦ ॥**

ಅ ॥ ವೀತರಾಗಭಯಕ್ರೋಧಾಃ=ವಿಷಯಾಭಿಲಾಷೆ ಭಯ ಕ್ರೋಧಗಳನ್ನು ಬಿಟ್ಟಿರುವ, ಮನ್ಮಯಾಃ=ನಾನೇ ಪ್ರಧಾನನೆಂದು ತಿಳಿದಿರುವ, ಅಥವಾ ಸಮಸ್ತಪ್ರಾಣಿಗಳಿಗೆ ನಾನೇಸ್ಥಿತಿ ಮೊದಲಾದುವುಗಳನ್ನು ಮಾಡುವವನೆಂದು ತಿಳಿದಿರುವ, ಮಾಂ=ನನ್ನನ್ನೇ, ಉಪಾಶ್ರಿತಾಃ=ಮುಖ್ಯವಾಗಿ ಶರಣುಹೊಂದಿದ, ಬಹವಃ=ಬಹುಮಂದಿ, ಜ್ಞಾನಿಗಳು, ಜ್ಞಾನತಪಸಾ=ಜ್ಞಾನವೆಂಬ ತಪಸ್ಸಿನಿಂದ, ಅಥವಾ ಜ್ಞಾನತಪಸ್ಸುಗಳಿಂದ, ಪೂತಾಃ=ಪಾವಿತ್ರ್ಯವನ್ನು ಹೊಂದಿದವರಾಗಿ, ಅಥವಾ ಪಾರಬ್ಧಕರ್ಮವನ್ನು ಭೋಗದಿಂದ ಕ್ಷೀಣಪಡಿಸಿಕೊಂಡವರಾಗಿ, ಮದ್ಭಾವಂ=ನನ್ನಲ್ಲಿ ಸಾಯುಜ್ಯರೂಪ ಸ್ಥಿತಿಯನ್ನು, (ಮೋಕ್ಷವನ್ನು) ಆಗತಾಃ=ಹೊಂದಿರುತ್ತಾರೆ. ॥ ೧೦ ॥

**ಭಾ || (೧) ಸಂತಿ ಚ ತಥಾ ಮುಕ್ತಾ ಇತ್ಯಾಹ | ವೀತರಾಗೇತಿ || (೨) ಮನ್ಮಯಾ ಮತ್ಪ್ರಚುರಾಃ | ಸರ್ವತ್ರ ಮಾಂ ವಿನಾ ನ ಕಿಂಚಿತ್ಪಶ್ಯಂತೀತ್ಯರ್ಥಃ || ೧೦ ||**

ಅ || (೧) ಅಂತಹ ಜ್ಞಾನದಿಂದ ಮೋಕ್ಷವನ್ನು ಹೊಂದಿದವರು ಇದ್ದಾರೆಂದು **ವೀತರಾಗ** ಎಂಬ ಶ್ಲೋಕದಿಂದ (ಶ್ರದ್ಧೆಯು ಹುಟ್ಟುವುದಕ್ಕಾಗಿ) ಹೇಳುತ್ತಾರೆ (೨) (ಮನ್ಮಯಾಃ ಎಂಬುದಕ್ಕೆ ಮದಾತ್ಮಕಾಃ= ನನ್ನ ಸ್ವರೂಪರಾದವರು ಎಂಬ ಅನ್ಯಥಾಪ್ರತೀತಿಯನ್ನು ನಿರಾಕರಿಸುವುದಕ್ಕಾಗಿ ಯೋಗ್ಯಾರ್ಥವನ್ನೇ ಹೇಳುತ್ತಾರೆ—) ಮನ್ಮಯಾಃ ನಾನೇ ಪ್ರಚುರನೆಂದು ತಿಳಿದವರು ಅಂದರೆ ಎಲ್ಲಾ ಪದಾರ್ಥಗಳಿಗೂ ಸ್ಥಿತಿಮೊದಲಾದವುಗಳನ್ನು ನಾನು ಹೊರತು ಬೇರೆ ಯಾರೂ ಕೊಡುವವರು ಇಲ್ಲವೆಂದು ತಿಳಿಯುತ್ತಾರೆ (ಅಂದರೆ ಎಲ್ಲಾ ವಸ್ತುಗಳೂ ನನ್ನ ಆಧೀನಗಳೆಂದೇ ತಿಳಿಯುತ್ತಾರೆ, ಎಂದಭಿಪ್ರಾಯವು) || ೧೦ ||

ಪೀ—ಮನ್ಮಯಾಃ ಮದ್ಭಾವಮಾಗತಾಃ ಎಂಬುದಕ್ಕೆ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಸ್ಮೃತಿಯಿಂದಲೇ ಅವುಗಳ ಅರ್ಥಹೇಳುತ್ತಾರೆ—

**ತಾ || (೧) ಮಯಂ ಪ್ರಧಾನಮುದ್ದಿಷ್ಟಂ ಪ್ರಾಧಾನ್ಯಂ ಯೈರ್ಹರೇರ್ಮತಂ | ಭಗವನ್ಮಯಾಸ್ತೇ ವಿಜ್ಞೇಯಾಸ್ತೇ ಮುಚ್ಯಂತೇ ನ ಚಾಪರ ಇತಿ ಚ || (೨) ಮಯಿ ಭಾವೋ ಮದ್ಭಾವಃ || ೧೦ ||**

ಅ || (೧) ಮಯವೆಂದರೆ ಪ್ರಧಾನವು (ಸರ್ವರಿಗೂ ಶ್ರೀಹರಿಯು ಶ್ರೇಷ್ಠನಾಗಿರುವುದರಿಂದ ಜ್ಞಾನಿಗಳಿಗೆ ಮಾತ್ರ ವಿಶೇಷವೇನು? ಎಂದರೆ-) ಯಾರು ಶ್ರೀಹರಿಯೇ ಪ್ರಧಾನನು (ಸರ್ವೋತ್ತಮ)ನೆಂದು ತಿಳಿದಿರುತ್ತಾರೋ, ಅವರು ಭಗವನ್ಮಯರು ಶ್ರೀಹರಿಯೇ ಸರ್ವೋತ್ತಮನೆಂದು ತಿಳಿದವರು ಅವರೇ ಮೋಕ್ಷವನ್ನು ಹೊಂದುತ್ತಾರೆ ಇತರರು ಮೋಕ್ಷವನ್ನು ಹೊಂದುವುದಿಲ್ಲ, ಎಂದೂ ಇದೆ (೨) ಮದ್ಭಾವಃ= ನನ್ನಲ್ಲಿ ಇರುವುದು ಸಾಯುಜ್ಯಾದಿರೂಪವಾದುದು, ಎಂದರ್ಥವು || ೧೦ ||

ಪೀ—ಹಾಗಾದರೆ—ಸಾಮಾನ್ಯವಾಗಿ ವಿಷ್ಣುವನ್ನು ಸರ್ವೋತ್ತಮನೆಂದು ತಿಳಿದುಕೊಂಡು ಇತರ ದೇವತಾದಿಗಳನ್ನು ತೃಪ್ತಿಪಡಿಸಿ ಅಂತ್ಯದಲ್ಲಿ ತಾನು ಮಾಡಿದ ಕರ್ಮವನ್ನು ಶ್ರೀವಿಷ್ಣುವಿನಲ್ಲಿ ಸಮರ್ಪಿಸುವವರು ತ್ರೈವಿದ್ಯರು ಅಂತಹವರಿಗೂ ಮೋಕ್ಷವಾಗುವುದಾದರೆ ನಿನ್ನನ್ನೇ ಉಪಾಸನೆಮಾಡಿದವರಿಗೆ ವಿಶೇಷವೇನು? ಎಂದರೆ-ಜ್ಞಾನಿಗಳಿಗೂ ತ್ರೈವಿದ್ಯರಿಗೂ ಫಲವು ಒಂದೇ ರೀತಿಯಲ್ಲ ಆಯಾಯ ಭಕ್ತರ ಸೇವೆಯನ್ನನುಸರಿಸಿಯೇ ಮೋಕ್ಷ ಸ್ವರ್ಗಗಳೆಂಬ ಬೇರೆಬೇರೆ ಫಲಗಳನ್ನು ಕೊಡುತ್ತಾನೆ ಭಕ್ತರು ಮಾಡುವ ಸೇವಾದಿರೂಪವಾದ ಸಾಧನದಲ್ಲಿ ವೈಷಮ್ಯವಿದ್ದುದರಿಂದ ಫಲಗಳನ್ನು ಒಂದೇ ರೀತಿಯಾಗಿ ಕೊಡುವುದಿಲ್ಲ ಆದಕಾರಣ ಶ್ರೀಹರಿಗೆ ವೈಷಮ್ಯಾದಿದೋಷಗಳು ಇರುವುದಿಲ್ಲವೆನ್ನುತ್ತಾರೆ—

**ಗೀ || ಯೇ ಯಥಾ ಮಾಂ ಪ್ರಪದ್ಯಂತೆ ತಾಂಸ್ತಥೈವ ಭಜಾಮ್ಯಹಂ |**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ || ೧೧ ||**

ಅ || ಯೇ= ಯಾವ ಜ್ಞಾನಿಗಳು, ತ್ರೈವಿದ್ಯರಾಗಲೀ, ಯಥಾ= ಯಾವ ಪ್ರಕಾರವಾಗಿ, ಮಾಂ= ನನ್ನನ್ನು, ಪ್ರಪದ್ಯಂತೇ= ಹೊಂದುತ್ತಾರೋ, ಭಜನಮಾಡುತ್ತಾರೋ, ತಾನ್= ಆ ಜನರನ್ನು, ತಥೈವ=ಹಾಗೆಯೇ, ಅವರವರ ಸೇವಾನುಸಾರವಾಗಿಯೇ, ಅಹಂ= ನಾನು, ಭಜಾಮಿ=

ಸ್ವರ್ಗ ಮೋಕ್ಷ ಮೊದಲಾದ ಫಲಗಳನ್ನು ಕೊಡುತ್ತೇನೆ ಪಾರ್ಥ=ಅರ್ಜುನನೇ, ಸರ್ವಶಃ=ಎಲ್ಲಾ, ಮನುಷ್ಯಾಃ=ಜ್ಞಾನಿಗಳೂ ತ್ರೈವಿದ್ಯರೂ ಕೂಡ ಮಮ=ನನ್ನ, ವರ್ತ್ಮ=ಮಾರ್ಗವನ್ನು, ಅನುವರ್ತಂತೇ=ಅನುಸರಿಸುತ್ತಾರೆ ॥ ೧೧ ॥

ಪೀ—ಯೇ ಯಥಾ ಎಂಬ ವಾಕ್ಯವು ಸಾಕ್ಷಾತ್ ಪ್ರಕೃತಕ್ಕೆ ಸಂಬಂಧಪಟ್ಟಿದ್ದಾಗಿ ತಿಳಿಯುವುದಿಲ್ಲ ಆದಕಾರಣ ಸಂಬಂಧವನ್ನು ತೋರಿಸುವುದಕ್ಕಾಗಿ ಮಧ್ಯದಲ್ಲಿ ಶಂಕಾಂತರವನ್ನು ನಿರಾಕರಿಸುತ್ತಾರೆ—

**ಭಾ ॥ (೧) ನ ಚ ಮದ್ಭಜನಮಾತ್ರೇಣ ಮುಕ್ತಿರ್ಭವತ್ಯನ್ಯದೇವತಾದಿರೂಪೇಣ ॥ (೨) ತಥಾಽಪಿ । ಸರ್ವೇಷಾಮನುರೂಪ್ಯೇಣ ಫಲಂ ದದಾಮೀತ್ಯಾಹ । ಯೇ ಯಥೇತಿ ॥ (೩) ಸೇವಯಾಮಿ ಫಲದಾನೇನ ನತು ಗುಣಭಾವೇನ ॥ (೪) ಕಥಮಯಂ ವಿಶೇಷ ಇತ್ಯತ ಆಹ । ಮಮ ವರ್ತ್ಮೇತಿ ॥ (೫) ಅನ್ಯದೇವತಾ ಯಜಂತೋಽಪಿ ಮಮ ವರ್ತ್ಮಾನುವರ್ತಂತೇ । ಸರ್ವಕರ್ಮಕರ್ತೃತ್ವಾದ್ಭೋಕ್ತೃತ್ವಾಚ್ಚ ಮಮ ॥ (೬) ಯೇಽಪ್ಯನ್ಯದೇವತಾಭಕ್ತಾ ಇತಿ ಹಿ ವಕ್ಷ್ಯತಿ । ಯೋ ದೇವಾನಾಂ ನಾಮಧಾ ಏಕ ಏವೇತಿ ಶ್ರುತಿಃ । ಭಗವಾನೇವ ಚ ತತ್ರಾಭಿಧೀಯತೇ । ಅಜಸ್ಯ ನಾಭಾವಧ್ಯೇಕಮರ್ಪಿತಮಿತಿ ಲಿಂಗಾತ್ ॥ ೧೧ ॥**

ಅ ॥ (೧) **ಮಾಮುಪಾಶ್ರಿತಾಃ ಮದ್ಭಾವಮಾಗತಾಃ** ಎಂಬ ಉಕ್ತಿಯಿಂದ ಇತರ ದೇವತಾದಿಗಳ ರೂಪದಿಂದ ನನ್ನನ್ನು ಸೇವಾಮಾತ್ರ ಮಾಡಿದ್ದರಿಂದ ತ್ರೈವಿದ್ಯರಿಗೂ ಮೋಕ್ಷವಾಗುತ್ತದೆಂದು ಶಂಕಿಸ ಕೂಡದು (ಅಂದರೆ ಶ್ರೀವಿಷ್ಣುವನ್ನು ಸರ್ವಸಾಧಾರಣವಾಗಿ ಸರ್ವೋತ್ತಮನೆಂದು ತಿಳಿದು ಇತರ ದೇವತೆಗಳನ್ನೂ ಪಿತೃಗಳನ್ನೂ ಪೂಜಿಸಿ ಕೊನೆಗೆ ಶ್ರೀವಿಷ್ಣುವಿನಲ್ಲಿ ಸಮರ್ಪಿಸುವುದು ಅನ್ಯದೇವತಾದಿರೂಪದಿಂದ ಭಗವದ್ಭಜನವೆನಿಸುತ್ತದೆ (೨) (ಹಾಗಾದರೆ ತ್ರೈವಿದ್ಯರು ನಿನ್ನನ್ನು ಭಜನಮಾಡುವುದು ನಿರರ್ಥಕವೋ ಎಂದರೆ–) (ಯದ್ಯಪಿ ಅಂತಹವರಿಗೆ ಮೋಕ್ಷವನ್ನು ಕೊಡುವುದಿಲ್ಲ)ಆದರೂ(ಅವರವರಿಗೆ ಅಭಿಪ್ರೇತವಾದ ಸ್ವರ್ಗಾದಿಗಳನ್ನು ಕೊಡುತ್ತೇನೆ) (ಹೀಗಾದರೆ ಜ್ಞಾನಿಗಳಿಗೆ ಮೋಕ್ಷವನ್ನೂ ತ್ರೈವಿದ್ಯರಿಗೆ ಸ್ವರ್ಗ ಮೊದಲಾದ ಅಲ್ಪ ಫಲಗಳನ್ನೂ ಕೊಡತಕ್ಕ ಶ್ರೀಹರಿಗೆ ವೈಷಮ್ಯದೋಷವು ಬರುವುದು ಎಂದರೆ–)ಎಲ್ಲಾ ಜ್ಞಾನಿಗಳಿಗೂ ತ್ರೈವಿದ್ಯರಿಗೂ ಅವರವರ ಸೇವೆಯನ್ನನುಸರಿಸಿಯೇ ಫಲವನ್ನು ಕೊಡುತ್ತೇನೆ, ಎಂದು **ಯೇ ಯಥಾ** ಎಂಬ ಶ್ಲೋಕದಿಂದ ಹೇಳುತ್ತಾರೆ (೩)(ತಥೈವ ಭಜಾಮಿ ಹಾಗೆಯೇ ಸೇವಿಸುತ್ತೇನೆ, ಎಂಬ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಅರ್ಥ ಹೇಳುತ್ತಾರೆ—) ಭಜಾಮಿ=ಮೋಕ್ಷ ಸ್ವರ್ಗರೂಪವಾದ ಅವರವರ ಯೋಗ್ಯತಾನುಸಾರ ಫಲವನ್ನು ಕೊಡುತ್ತೇನೆ ಅಪ್ರಧಾನನಾಗಿ ಅವರ ಅಧೀನನಾಗಿ ಕೊಡುವವನಲ್ಲ (೪)(ಜ್ಞಾನಿಗಳ ಸೇವೆಗಿಂತ ಫಲದಲ್ಲಿ ವೈಷಮ್ಯಕ್ಕೆ ಕಾರಣವಾದುದು ತ್ರೈವಿದ್ಯರ ಸೇವೆಯಲ್ಲಿ ಎಂತಹ ವಿಶೇಷವಿದೆಎಂದರೆ)ಮಮ ವರ್ತ್ಮ ಎನ್ನುತ್ತಾರೆ (೫)ಜ್ಞಾನಿಗಳು ಮಾತ್ರವಲ್ಲ ಮತ್ತೆ ಬೇರೆ ದೇವತೆಗಳನ್ನು ಪೂಜಿಸಿದರೂ ತ್ರೈವಿದ್ಯರು ನನ್ನ ಮಾರ್ಗವನ್ನೇ ಅನುಸರಿಸುತ್ತಾರೆ. ನಾನೇ ಸಮಸ್ತ ಕರ್ಮಗಳನ್ನು ಮಾಡುವವನು, ಯಜ್ಞದಲ್ಲಿ ಕೊಡತಕ್ಕ ಹವಿಸ್ಸು ಮೊದಲಾದವುಗಳನ್ನು ಣ್ಣುವವನು. (ಅಂದರೆ— ನಾನೇ ಸಮಸ್ತ ಯಜ್ಞಗಳನ್ನು ಭೋಗಿಸುವವನು ಪ್ರೇರಕನು. ಇದನ್ನು ತಿಳಿದು ಭಗವದ್ಭಕ್ತರಾದ ಜ್ಞಾನಿಗಳು ನಿಷ್ಕಾಮರಾಗಿ ನನ್ನನ್ನೇ ಪೂಜಿಸುತ್ತಾರೆ ತ್ರೈವಿದ್ಯರು ಭಗವತ್ಸ್ವರೂಪವನ್ನು ಯಥಾರ್ಥವಾಗಿ ತಿಳಿಯದವರಾಗಿ ಕರ್ಮಗಳ ಫಲವನ್ನು ಇಚ್ಛಿಸಿಕೊಂಡು ಬೇರೆ ದೇವತೆಗಳನ್ನು ಪೂಜಿಸುತ್ತಾರೆ ಹೀಗೆ ಸೇವೆಯಲ್ಲಿ ವೈಲಕ್ಷಣ್ಯವಿದ್ದುದರಿಂದ ಫಲದಲ್ಲಿಯೂ ತಾರತಮ್ಯವಿದೆ (೬) (ಶ್ರೀಹರಿಗೆ ಹೀಗೆ ಅಭಿಪ್ರಾಯವೆಂದು ಹೇಗೆ

ತಿಳಿಯುತ್ತದೆ ಎಂದರೆ---) (1) ಯಾರು ಬೇರೆ ದೇವತೆಗಳ ಭಕ್ತರೋ ಎಂದು ಮುಂದಕ್ಕೆ ಹೇಳುವರು. (2) ಶ್ರೀಹರಿಗೆ ಸರ್ವನಾಮಗಳೂ ಇದ್ದುದರಿಂದ ಎಲ್ಲಾ ಮಂತ್ರಗಳೂ ಶ್ರೀಹರಿಯನ್ನೇ ಹೇಳುವುದರಿಂದ (ಇಂದ್ರ ಮೊದಲಾದ ನಾಮವುಳ್ಳ ಮಂತ್ರಗಳಿಂದ ಕೊಟ್ಟ ಹವಿಸ್ಸು ಮೊದಲಾದುದನ್ನು ಶ್ರೀಹರಿಯು ಉಣ್ಣುತ್ತಾನೆನ್ನುತ್ತಾರೆ-) (1) ಒಬ್ಬನೇ ಸಮಸ್ತದೇವತೆಗಳ ನಾಮಧಾರಕನೋ ಎಂದು ವಿಶ್ವಕರ್ಮ ಸೂಕ್ತವು (ಅಲ್ಲಿ ವಿಶ್ವಕರ್ಮನೇ ಹೀಗೆ ಹೇಳಿಸಿಕೊಳ್ಳಲ್ಪಡುತ್ತಾನೆ, ಎಂದರೆ—) ಆ ವಿಶ್ವಕರ್ಮಸೂಕ್ತದಲ್ಲಿ ಸೃಷ್ಟ್ಯಾದಿ ಎಲ್ಲಾ ವ್ಯಾಪಾರಗಳನ್ನು ಮಾಡುವ ಶ್ರೀ ಹರಿಯೇ ಹೇಳಲ್ಪಡುತ್ತಾನೆ (ಅದು ಹೇಗೆಂದರೆ) ಶ್ರೀಹರಿಯ ನಾಭಿಯಲ್ಲಿ ಸರ್ವಾಧಾರವಾದ ಒಂದು ವಸ್ತುವು (ಕಮಲವು) ಇದೆ, ಎಂಬ ಪದ್ಮನಾಭತ್ವಲಿಂಗದಿಂದ ವಿಶ್ವಕರ್ಮ ಎನಿಸಿಕೊಂಡವನು ಶ್ರೀ ವಿಷ್ಣುವೇಎಂದು ನಿಶ್ಚಯವಾಗುತ್ತದೆ ॥ ೧೧ ॥

## ಗೀ ॥ ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ ।
## ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥ ೧೨ ॥

ಅ ॥ (ನಾನೇ ಸಮಸ್ತಯಜ್ಞಗಳನ್ನು ಭೋಗಿಸುವವನು, ಪ್ರೇರೇಪಿಸುವವನು ಇದನ್ನು ತಿಳಿದುಕೊಂಡು ಭಗವದ್ಭಕ್ತರು ಫಲೇಚ್ಛೆಯನ್ನು ತೊರೆದವರಾಗಿ ನನ್ನನ್ನೇ ಪೂಜಿಸುತ್ತಾರೆ ತ್ರೈವಿದ್ಯರಾದರೂ ಈ ತತ್ವವನ್ನು ತಿಳಿಯದೆ) ಕರ್ಮಣಾಂ= ಕರ್ಮಗಳ, ಸಿದ್ಧಿಂ = ಸಂಪದಾದಿ ಫಲವನ್ನು, ಕಾಂಕ್ಷಂತಃ= ಅಪೇಕ್ಷಿಸುವವರಾಗಿ, ಇಹ= ಈ ಲೋಕದಲ್ಲಿ, ದೇವತಾಃ=ತನಗಿಂತ ಬೇರೆಯಾದ ರುದ್ರಾದಿದೇವತೆಗಳನ್ನು, ಯಜಂತೇ= ಪೂಜಿಸುತ್ತಾರೆ (ಯಜ್ಞಾದಿಗಳನ್ನು ಭೋಗಿಸುವವನೆಂದು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆಂದರೆ-) ಹಿ= ಯಾವಕಾರಣದಿಂದ, ಮಾನುಷ್ಯೇ ಲೋಕೇ=ಮನುಷ್ಯಲೋಕದಲ್ಲಿ, ಕರ್ಮಜಾ ಸಿದ್ಧಿಃ= ಬೇರೆ ದೇವತೆಗಳನ್ನುದ್ದೇಶಿಸಿ ಮಾಡಿದ ಯಜ್ಞಾದಿಕರ್ಮಗಳಿಂದುಂಟಾಗುವ ಫಲವು, ಕ್ಷಿಪ್ರಂ= ಶೀಘ್ರವಾಗಿ, ಭವತಿ= ಆಗುತ್ತದೋ, (ಆದುದರಿಂದ ನನ್ನ ಮಾರ್ಗವನ್ನನುಸರಿಸುತ್ತಾರೆ. ಶ್ರೀಹರಿಯು ಸರ್ವಯಜ್ಞಗಳನ್ನು ಭೋಗಿಸುವುದರಿಂದಲೇ ಅದರ ಫಲವು ಯಜಮಾನನಿಗೆ ಶೀಘ್ರವಾಗಿ ಉಂಟಾಗುತ್ತದೆ.) ಅಥವಾ (ತ್ರೈವಿದ್ಯರು ರುದ್ರಾದಿದೇವತೆಗಳನ್ನು ಪೂಜಿಸುವವರಾದುದರಿಂದ ನನ್ನನ್ನು ಹೊಂದುತ್ತಾರೆಂದು ಹೇಳಿದ್ದು ಹೇಗೆ? ಎಂದರೆ—) ಈ ಲೋಕದಲ್ಲಿ ರುದ್ರಾದಿದೇವತೆಗಳನ್ನು ಪೂಜಿಸುವ ಯಜ್ಞಕರ್ಮಗಳ ಫಲವನ್ನು ಅಪೇಕ್ಷಿಸುವ ತ್ರೈವಿದ್ಯರು ಕೊನೆಗೆ ನನ್ನಲ್ಲಿ ಆ ಕರ್ಮವನ್ನು ಸಮರ್ಪಿಸಿ ವೈಷ್ಣವಮಾರ್ಗವನ್ನೇ ಅನುಸರಿಸುತ್ತಾರೆ ಏಕೆಂದರೆ ಕರ್ಮದಿಂದ ಫಲವು ಈ ಲೋಕದಲ್ಲಿ ಶೀಘ್ರವಾಗಿ ಆಗುತ್ತದೆ ॥ ೧೨ ॥

**ಭಾ ॥ (೧) ಕುತೋ ಮಮ ವರ್ತ್ಮಾನುವರ್ತಂತೇ । ಕ್ಷಿಪ್ರಂ ಹಿ ॥ (೨) ಅತ ಏವ ಹಿ ಫಲಪ್ರಾಪ್ತಿಃ । ತಸ್ಮಾತ್ತೇ ಧನಸನಯ ಇತಿ ಶ್ರುತಿಃ ॥ ೧೨ ॥**

ಅ ॥ (೧) (ಮಮ ವರ್ತ್ಮಾನುವರ್ತಂತೇ ಎಂಬುವುದರಿಂದ ಶ್ರೀಹರಿಯು ಸಮಸ್ತಕರ್ಮಗಳನ್ನು ಮಾಡುವವನು, ಸಮಸ್ತಯಜ್ಞಾದಿಕರ್ಮಗಳನ್ನು ಭೋಗಿಸುವವನೆಂದೂ ಹೇಳಿದೆ ಅದರಲ್ಲಿ ಜೀವರು ಅಸ್ವತಂತ್ರರೆಂದು ಕಂಡದ್ರಿಂದ ಶ್ರೀಹರಿಯು ಸಮಸ್ತಕರ್ಮಗಳನ್ನು ಮಾಡುವವನೆಂದು ಸಿದ್ಧವಾಗಿದೆ) ಮಮ ವರ್ತ್ಮಾನುವರ್ತಂತೇ ಎಂದು ಯಜ್ಞಾದಿಗಳನ್ನು ಶ್ರೀಹರಿಯು ಭೋಗಿಸುವವನೆಂದು ಯಾವುದು ಹೇಳಿಯದೋ, ಅದು ಯಾವ ಪ್ರಮಾಣದಿಂದ ತಿಳಿಯುತ್ತದೆ, ಎಂದರೆ - ಕ್ಷಿಪ್ರಂ ಹಿ ಎಂದು ಹೇಳಿದ್ದಾರೆ. (೨) ಕರ್ಮದಿಂದ ಶೀಘ್ರದಲ್ಲಿ ಫಲಪ್ರಾಪ್ತಿಯು ಪ್ರತ್ಯಕ್ಷಸಿದ್ಧವಾಗಿದೆ ಆ ಫಲಪ್ರಾಪ್ತಿಯು ಕರ್ಮಗಳನ್ನು ಪರಮಾತ್ಮನು ಭೋಗಿಸುವುದರಿಂದ ಶ್ರೀಹರಿಯಿಂದಲೇ ಆಗುತ್ತದೆ. (ಇಲ್ಲವಾದರೆ ಕೂಡಲಾರದು.)

(ಇಲ್ಲಿ ಹಿ ಎಂಬುದರಿಂದ ಸೂಚಿತವಾದ ಪ್ರಮಾಣವನ್ನು ಹೇಳುತ್ತಾರೆ—) **ತದ್ಯ ಇಮೇ ವೀಣಾಯಾಂ ಗಾಯಂತಿ ಏತಂ ತೇ ಗ್ಗಾಯಂತಿ ತಸ್ಮಾತ್ತೇ ಧನಸನಯಃ** ಯಾವ ಈ ಗಾಯಕರು ವೀಣೆಯಲ್ಲಿ ರಾಜಾದಿಗಳನ್ನುದ್ದೇಶಿಸಿ ಗಾಯನಮಾಡುತ್ತಾರೋ, ಅವರು ರಾಜಾದಿಗಳಲ್ಲಿ ಅಂತರ್ಗತನಾದ ಶ್ರೀಹರಿಯನ್ನುದ್ದೇಶಿಸಿಯೇ ಗಾನಮಾಡುತ್ತಾರೆ ಆದುದರಿಂದ ಅವರು ಶ್ರೀಹರಿಯಿಂದ ಧನಾದಿಗಳನ್ನು ಹೊಂದುತ್ತಾರೆ. (**ಫಲಪ್ರದೋ ವಾಸುದೇವೋಽಖಿಲಸ್ಯ** ಎಂದು ಪ್ರಮಾಣವು ಶ್ರೀಹರಿಯು ಯಜ್ಞಭೋಕ್ತನಾಗದಿದ್ದರೆ ಅವನಿಂದ ಫಲಪ್ರಾಪ್ತಿಯು ಕೂಡದೆಹೋಗುವುದು,)ಎಂದು ಛಾಂದೋಗ್ಯೋಪನಿಷತ್ತು.॥ ೧೨ ॥

ಪೀ—ತ್ರೈವಿದ್ಯರಿಗೂ ಮೋಕ್ಷವು ಲಭಿಸುವ ಪ್ರಯುಕ್ತ ನಿನ್ನನ್ನುಪಾಸನಮಾಡತಕ್ಕ ಜ್ಞಾನಿಗಳಿಗೆ ವಿಶೇಷವೇನಿದೆ? ಎಂದರೆ—**ಯೇ ಯಥಾ** ಎಂದು ಅದರಲ್ಲಿ ನಮಸ್ಕಾರಮಾಡಿದವರಿಗೆ ನಮಸ್ಕಾರ ಮಾಡುತ್ತೇನೆ. ಎಂಬ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಯೋಗ್ಯವಾದ ಅರ್ಥವನ್ನು ಹೇಳುತ್ತಾರೆ—

**ತಾ ॥ (೧) ತಥೈವ ಭಜಾಮಿ । ತದನುಸಾರಿಫಲಪ್ರದಾನರೂಪೇಣ ॥ (೨) ಅನ್ಯದೇವತಾಯಾಜಿನಾಮಪಿ ಮತ್ಸಮರ್ಪಣೇನ ವೈಷ್ಣವಮಾರ್ಗಾನುವರ್ತನೇನೈವ ಸಮ್ಯಕ್ ಫಲಂ ಭವತಿ (೩) ಅನ್ಯದೈವತಪೂಜಾಽಪಿ ಯಸ್ಮಿನ್ನಂತೇ ಸಮರ್ಪಿತಾ। ಸ್ವರ್ಗಾದಿಫಲಹೇತುಃ ಸ್ಯಾನ್ನಾನ್ಯಥಾ ತಂ ಭಜೇದ್ಧ(ಹ)ರಿಮಿತ್ಯಾಗ್ನೇಯೇ ॥ ೧೧,೧೨॥**

ಅ ॥ (೧) ಅವರವರ ಯೋಗ್ಯತಾನುಸಾರ ಸೇವೆಯನ್ನು ಮಾಡಿಸುತ್ತೇನೆ ಆ ಸೇವೆಗೆ ಸರಿಯಾದ ಫಲವನ್ನು ಕೊಡುತ್ತೇನೆ. (ಜ್ಞಾನಿಗಳಿಗೂ ತ್ರೈವಿದ್ಯರಿಗೂ ಫಲವು ಒಂದೇ ರೀತಿಯಲ್ಲ. ಏಕೆಂದರೆ ಸೇವಾನುಸಾರವಾಗಿಯೇ ಫಲವನ್ನು ಕೊಡುವುದು. ಸೇವೆಯಲ್ಲಿಯೇ ವೈಷಮ್ಯವಿದೆ. (೨) (ತ್ರೈವಿದ್ಯರೂ ಶ್ರೀಹರಿಯ ಮಾರ್ಗವನ್ನು ಅನುಸರಿಸುವವರು ಎಂದಾದರೆ ಜ್ಞಾನಿಗಳಿಗೂ ತ್ರೈವಿದ್ಯರಿಗೂ ವ್ಯತ್ಯಾಸವು ಇಲ್ಲದೆ ಹೋಗುವುದು, ಎಂದರೆ—) ಇತರರಾದ ರುದ್ರಾದಿದೇವತೆಗಳನ್ನುದ್ದೇಶಿಸಿ ಯಜ್ಞ ಮಾಡುವವರೂ ಕೊನೆಗೆ ನನ್ನಲ್ಲಿ ಸಮರ್ಪಿಸಿ ವೈಷ್ಣವಮಾರ್ಗವನ್ನನುಸರಿಸಿದ್ದರಿಂದಲೇ ಅವರಿಗೆ ಸಮ್ಯಕ್-ಫಲವು ಉಂಟಾಗುತ್ತದೆ (೩) (ಈ ವಿಷಯದಲ್ಲಿ ಸ್ಮೃತಿಪ್ರಮಾಣವನ್ನು ಹೇಳುತ್ತಾರೆ—) ರುದ್ರಾದಿಗಳನ್ನು ಪೂಜಿಸಿಯೂ ಕೊನೆಗೆ ಶ್ರೀಹರಿಯಲ್ಲಿ ಸಮರ್ಪಿಸಿದರೆ—ಅದು ಸ್ವರ್ಗ ಮೊದಲಾದ ಫಲಕ್ಕೆ ಕಾರಣವಾಗುತ್ತದೆ. ಇಲ್ಲವಾದರೆ ಶ್ರೀಹರಿಯನ್ನು ಭಜಿಸಲಾರೆನು, ಎಂದು ಆಗ್ನೇಯಪುರಾಣದಲ್ಲಿದೆ ॥ ೧೧, ೧೨ ॥

ಪೀ—ಶ್ರೀಪರಮಾತ್ಮನನ್ನು ಸೇವಿಸದಿದ್ದರೆ ಫಲವು ಏಕೆ ಇಲ್ಲ ಎಂದರೆ—ಅಥವಾ ಜ್ಞಾನಿಗಳಂತೆ ತ್ರೈವಿದ್ಯರಿಗೂ ಏಕೆ ಮಹಾಫಲವಿಲ್ಲ, ಎಂದರೆ ಶ್ರೀಹರಿಯು ಸರ್ವರಿಗೂ ಪಿತನಾದುದರಿಂದ ಆತನನ್ನು ಬಿಟ್ಟು ಬೇರೆ ದೇವತೆಗಳನ್ನುದ್ದೇಶಿಸಿ ಯಜ್ಞ ಮಾಡುವುದರಿಂದ ಫಲಪ್ರಾಪ್ತಿಯೇ ಇಲ್ಲವೆಂದಾದ ಮೇಲೆ, ಮಹಾಫಲವು ಹೇಗೆ ಸಿಗುವುದು, ಎಂಬ ಅಭಿಪ್ರಾಯದಿಂದ ಹೇಳುತ್ತಾರೆ—

**ಗೀ ॥ ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಂ ॥ ೧೩ ॥**

ಅ ॥ ಚಾತುರ್ವರ್ಣ್ಯಂ= ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ವರ್ಣಗಳ ಸಮೂಹವು, ಗುಣಕರ್ಮವಿಭಾಗಶಃ= ಸತ್ವ ಮೊದಲಾದ ಗುಣಗಳ ವಿಭಾಗದಿಂದಲೂ, ಕರ್ಮವಿಭಾಗದಿಂದಲೂ,

(ಅಂದರೆ ಅರವರಿಗೆ ಯೋಗ್ಯಗಳಾದ ಗುಣಗಳಿಂದಲೂ ಕರ್ಮಗಳಿಂದಲೂ ಕೂಡಿದ್ದಾಗಿಯೇ) ಮಯಾ= ನನ್ನಿಂದ, ಸೃಷ್ಟಂ=ಸೃಷ್ಟಿಮಾಡಲ್ಪಟ್ಟಿದೆ ಅವ್ಯಯಂ=ನಾಶವಿಲ್ಲದಿರುವ, ಮಾಂ=ನನ್ನನ್ನು, ತಸ್ಯ= ಆ ಬ್ರಾಹ್ಮಣಾದಿ ನಾಲ್ಕು ವರ್ಣಗಳಿಗೆ, ಕರ್ತಾರಂ=ಸೃಷ್ಟಿ ಮಾಡಿದವನನ್ನಾಗಿಯೂ ವಿದ್ಧಿ=ತಿಳಿದುಕೊ, ಅಕರ್ತಾರಮಪಿ=ನನ್ನನ್ನು (ಶ್ರೀಕೃಷ್ಣನನ್ನು) ಸೃಷ್ಟಿ ಮಾಡಿದವನು ಇನ್ನೊಬ್ಬನು ಇಲ್ಲವೆಂದೂ, ಅಥವಾ ಜೀವರಂತೆ ಕ್ಲೇಶದಿಂದ ಸೃಷ್ಟಿ ಮಾಡತಕ್ಕವನಲ್ಲ, ಆದುದರಿಂದ ಕರ್ತೃತ್ವವಿಲ್ಲದವನನ್ನಾಗಿಯೂ, ವಿದ್ಧಿ= ತಿಳಿದುಕೊಳ್ಳು ॥ ೧೩ ॥

ಪೀ—ಚಾತುರ್ವರ್ಣ್ಯಂ ಎಂಬುದಕ್ಕೆ ಸಂಗತಿಯನ್ನು ಸೂಚಿಸುತ್ತಾ ತಾತ್ಪರ್ಯ ಹೇಳುತ್ತಾರೆ—

ಭಾ ॥ (೧) ಅಹಮೇವ ಕರ್ತೇತ್ಯಾಹ । ಚಾತುರ್ವರ್ಣ್ಯಮಿತಿ ॥ (೨) ಚತುರ್ವರ್ಣಸಮುದಾಯಃ । ಸಾತ್ತ್ವಿಕೋ ಬ್ರಾಹ್ಮಣಃ । ಸಾತ್ತ್ವಿಕರಾಜಸಃ ಕ್ಷತ್ರಿಯಃ । ರಾಜಸತಾಮಸೋ ವೈಶ್ಯಃ । ತಾಮಸಃ ಶೂದ್ರ ಇತಿ ಗುಣವಿಭಾಗಃ ॥ (೩) ಕರ್ಮವಿಭಾಗಸ್ತು ಶಮೋ ದಮ ಇತ್ಯಾದಿನಾ ವಕ್ಷ್ಯತೇ ॥ (೪) ಕ್ರಿಯಾಯಾಂ ವೈಲಕ್ಷಣ್ಯಾತ್ ಕರ್ತಾಽಪ್ಯಕರ್ತಾ । ತಥಾ ಹಿ ಶ್ರುತಿಃ । ವಿಶ್ವಕರ್ಮಾ ವಿಮನಾ ಇತ್ಯಾದಿ । ತನುರ್ವಿದ್ಯಾ ಕ್ರಿಯಾ ಕೃತಿರಿತಿ ಚ । ಸಾಧಿತಂ ಚೈತತ್ಪುರಸ್ತಾತ್ ॥ ೧೩ ॥

ಅ ॥ (೧) ನಾನೇ ಬ್ರಾಹ್ಮಣಾದಿಗಳನ್ನು ಸೃಷ್ಟಿಮಾಡಿದವನು (ತ್ರೈವಿದ್ಯರೆಲ್ಲರೂ ಬ್ರಾಹ್ಮಣಾದಿಗಳಲ್ಲಿಯೇ ಸೇರಿದವರಾದುದರಿಂದ ಸರ್ವರಿಗೂ ಪಿತನಾದ ನನ್ನನ್ನು ಬಿಟ್ಟು ಬೇರೆ ದೇವತೆಗಳನ್ನುದ್ದೇಶಿಸಿ ಯಜ್ಞಮಾಡಿದರೆ ಮಹಾಫಲವು ಸರ್ವಥಾ ಲಭಿಸಲಾರದು, ಎಂದು) ಚಾತುರ್ವರ್ಣ್ಯಂ ಎಂಬುದರಿಂದ ಹೇಳುತ್ತಾರೆ (೨) (ವರ್ಣಗಳು ನಾಲ್ಕುವಿಧ ಗುಣಗಳು ಮೂರು ವಿಧ ಆದಕಾರಣ ಆ ನಾಲ್ಕು ವರ್ಣಗಳಲ್ಲಿ ಮೂರು ಗುಣವಿಭಾಗವು ಹೇಗೆ ಕೂಡುತ್ತದೆ ಎಂದರೆ-) ನಾಲ್ಕು ವರ್ಣಗಳ ಸಮುದಾಯವು (ಸಾತ್ವಿಕಸಾತ್ವಿಕರು, ರಾಜಸಸಾತ್ವಿಕರು, ತಾಮಸಸಾತ್ವಿಕರು, ಎಂದು ಜನರು ಮೂರು ವಿಧರು) (ರಾಜಸಸಾತ್ವಿಕರಲ್ಲಿಯೇ ಈ ವಿಭಾಗವು) ಸಾತ್ವಿಕನು ಬ್ರಾಹ್ಮಣನು (ಸತ್ವಗುಣವು ಹೆಚ್ಚು ಇದ್ದು ರಜೋಗುಣವಿರುವವರು ಬ್ರಾಹ್ಮಣರು) ಸಾತ್ವಿಕರಾಜಸನು ಕ್ಷತ್ರಿಯನು (ಸ್ವಲ್ಪ ಸತ್ವಗುಣ ಹೆಚ್ಚು ಇದ್ದು ರಜೋಗುಣವಿರುವವರು ಕ್ಷತ್ರಿಯರು) ರಾಜಸತಾಮಸನು ವೈಶ್ಯನು (ತಮೋಗುಣಕ್ಕಿಂತ ಹೆಚ್ಚಿಗೆಯಾಗಿ ಸತ್ವಗುಣಕ್ಕೆ ಸಮವಾಗಿ ರಜೋಗುಣದಿಂದ ಕೂಡಿದವರು ವೈಶ್ಯರು) ತಾಮಸನು ಶೂದ್ರನು. (ರಜೋಗುಣಕ್ಕಿಂತ ಹೆಚ್ಚು ತಮೋಗುಣವಿರುವವನು, ಶೂದ್ರನು) ಹೀಗೆ ಗುಣವಿಭಾಗಪ್ರಯುಕ್ತವಾದುದು ಬ್ರಾಹ್ಮಣಾದಿ ವರ್ಣವು, (೩) ಕರ್ಮವಿಭಾಗವನ್ನು ಶಮೋ ದಮಃ ಇತ್ಯಾದಿಗಳಿಂದ ೧೮ನೇ ಅಧ್ಯಾಯದಲ್ಲಿ ಹೇಳುವರು. (ಬ್ರಾಹ್ಮಣಾದಿ ನಾಲ್ಕು ವರ್ಣಗಳನ್ನು ನೀನು ಸೃಷ್ಟಿಮಾಡಿದ್ದೆಂದಾದರೆ— ಜೀವರಂತೆ ನೀನೂ ಕರ್ತನಾದುದರಿಂದ ಜೀವರಂತೆ ನಿನಗೂ ಕರ್ಮಲೇಪವು ಬರಬೇಕಾಗುವುದು ಎಂದರೆ—ಶ್ರೀಹರಿಗೆ ಕರ್ಮಲೇಪವಿಲ್ಲವೆಂದು ಹೇಳುವುದಕ್ಕಾಗಿ ಹೇತುವನ್ನು ಹೇಳುತ್ತಾರೆ ತಸ್ಯ ಕರ್ತಾರಂ ಎಂಬುದರಿಂದ) ಶ್ರೀಹರಿಗೆ ಕ್ರಿಯೆಯಲ್ಲಿ ಜೀವರ ಕ್ರಿಯೆಗಿಂತ ವೈಲಕ್ಷಣವಿದ್ದುದರಿಂದ ಕರ್ತನಾದಾಗ್ಯೂ ಅಕರ್ತಾ ಎನಿಸುತ್ತಾನೆ. ಆದಕಾರಣ ಕರ್ಮಲೇಪವಿಲ್ಲ. (೪) (ವೈಲಕ್ಷಣ್ಯವು ಹೇಗೆಂದರೆ—) ಅದನ್ನು ಹೇಳತಕ್ಕ ವೇದವಿದೆ ಶ್ರೀಹರಿಯು ಸರ್ವಜಗತ್ತನ್ನು ಸೃಷ್ಟಿಮಾಡುವವನಾದಾಗ್ಯೂ ಅಲ್ಲಿ ಅಭಿನಿವೇಶ (ಯಾವುದರಿಂದ ವಸ್ತುವು ಸಿಗುವ ಪರ್ಯಂತ ಮನಸ್ಸು ಕಳವಳಹೊಂದಿಕೊಂಡು ಇರುತ್ತದೋ ಅದು ಅಭಿನಿವೇಶವು) ಇಲ್ಲದವನು ಇತ್ಯಾದಿ. (ರೀತ್ಯಂತರದಿಂದಲೂ ವೈಲಕ್ಷಣ್ಯ

ವನ್ನು ಪುರಾಣವಾಕ್ಯದಿಂದ ತೋರಿಸುತ್ತಾರೆ—) ವಿದ್ಯಾರೂಪವಾದುದು ಯಾವುದು ಕ್ರಿಯೆಯೋ, ಅದರಿಂದ ಕೂಡಿದ ಆಕಾರವು ಶ್ರೀಹರಿಯ ಶರೀರವು (ಈ ಪ್ರಮಾಣದಲ್ಲಿ ಶ್ರೀಹರಿಯ ಶರೀರಕ್ಕೆ ಜ್ಞಾನಾತ್ಮಕಕರ್ತೃತ್ವವಿರುವ ಆಕಾರವು ಇದೆ ಎಂದು ಹೇಳುತ್ತದೆ ಜೀವರಿಗೆ ಇರುವ ಕರ್ತೃತ್ವವು ಅಹಂಕಾರ ರೂಪವಾದುದು ಏವಂಚ ಶ್ರೀಹರಿಯು ಜ್ಞಾನಾತ್ಮಕಕರ್ತೃತ್ವವುಳ್ಳವನಾದುದರಿಂದ ಕರ್ತನೆಂದೂ, ಜೀವರಂತೆ ಅಹಂಕಾರಿಕಕರ್ತೃತ್ವವಿಲ್ಲದವನಾದುದರಿಂದ ಅಕರ್ತಾ ಎಂದೂ ಅನಿಸುತ್ತಾನೆ. ಹೀಗೆ ವೈಲಕ್ಷಣ್ಯವನ್ನು ತಿಳಿಯಬೇಕು (ಕ್ರಿಯೆಯು ಮಿಥ್ಯೆಯಾಗಿರುವುದರಿಂದ ಶ್ರೀಹರಿಯು ಕರ್ತನಾದಾಗ್ಯೂ ಅಕರ್ತಾ ಎನಿಸುತ್ತಾನೆ, ಎಂಬ ಪರವ್ಯಾಖ್ಯಾನವನ್ನು ನಿರಾಕರಿಸುತ್ತಾರೆ -) ಶ್ರೀಹರಿಯ ಕ್ರಿಯೆಯು ಸತ್ಯವೆಂಬುದು ಎರಡನೇ ಅಧ್ಯಾಯದಲ್ಲಿ ಸಾಧಿಸಲ್ಪಟ್ಟಿದೆ ॥ ೧೩ ॥

ಪೀ—ಶ್ರೀಹರಿಯನ್ನು ಭಜಿಸದೆ ಫಲವು ಏಕೆ ಆಗುವುದಿಲ್ಲ, ಎಂದರೆ—ಭಗವಂತನು ಪಿತನಾದ ಪ್ರಯುಕ್ತವೇ ಆವನ ಸೇವಾದಿಗಳನ್ನೇ ಮಾಡತಕ್ಕದಾವಶ್ಯಕವೆಂದು ಚಾತುರ್ವರ್ಣ್ಯಂ ಎಂಬ ಶ್ಲೋಕದಿಂದ ಹೇಳುತ್ತಾರೆ. ಇಲ್ಲಿ ಗುಣಗಳು ಮೂರೆಂದು ಹೇಳುವುದರಿಂದ ನಾಲ್ಕು ಜಾತಿಗೆ ಈ ಮೂರು ಗುಣವಿಭಾಗವು ಹೇಗೆ ಕೂಡುತ್ತದೆಂದರೆ—

ತಾ ॥ (೧) ಸತ್ವಸತ್ವಾಧಿಕರಜೋ ರಜೋಭಿಸ್ತಮಸಾ ತಥಾ । ವರ್ಣಾ ವಿಭಕ್ತಾಶ್ಚತ್ವಾರಃ ಸಾತ್ವಿಕಾ ಏವ ವೈಷ್ಣವಾ ಇತಿ ಚ ॥ (೨) ಕರ್ಮವಿಭಾಗಂ ಶಮೋ ದಮ ಇತ್ಯಾದಿನಾ ವಕ್ಷ್ಯತಿ ॥ (೩) ವೈಷ್ಣವಾಃ ಸಾತ್ವಿಕಾ ಏವ ತಾಮಸಾ ಏವ ಚಾಪರೇ । ದೌರ್ಲಭ್ಯಸುಲಭತ್ವೇನ ತೇಷಾಂ ವರ್ಣಾದಿಭಿನ್ನತೇತಿ ಚ ॥ ೧ ॥

ಅ ॥ (೧) (ಸಾತ್ವಿಕರು, ರಾಜಸರು, ತಾಮಸರೆಂದು ಜೀವರು ಮೂರು ವಿಧರು ಅದರಲ್ಲಿ ದೇವತೆಗಳು ಸಾತ್ವಿಕರೇ ಅಸುರರು ತಾಮಸರೇ ರಾಜಸರಲ್ಲಿ ಮಾತ್ರ ಚಾತುರ್ವರ್ಣ್ಯವು ಕೂಡುವುದರಿಂದ ರಾಜಸರ ವಿಚಾರವು. ಆ ರಾಜಸರು (1) ರಾಜಸ ಸಾತ್ವಿಕರು (ಮುಕ್ತಿಯೋಗ್ಯರು) (2) ರಾಜಸ ರಾಜಸರು, (3) ರಾಜಸ ತಾಮಸರೂ (ನಿತ್ಯ ಸಂಸಾರಿಗಳು) ಎಂದು ಮೂರು ವಿಧರು ರಾಜಸ ಸಾತ್ವಿಕರಲ್ಲಿ ಈ ವಿಭಾಗವು ಆ ರಾಜಸಸಾತ್ವಿಕರಲ್ಲಿ (1) ಶುದ್ಧ ಸಾತ್ವಿಕರು, (2) ಸ್ವಲ್ಪ ರಜೋಗುಣದಿಂದ ಯುಕ್ತರಾದ ಸಾತ್ವಿಕರು, (3) ಸಮವಾದ ಸತ್ವಗುಣ ರಜೊಗುಣ ಯುಕ್ತರಾದ ಸಾತ್ವಿಕರು, (4) ಸತ್ವಗುಣದಿಂದ ಸ್ವಲ್ಪ ಕಡಿಮೆಯಾದ ತಮೋಗುಣದಿಂದ ಕೂಡಿದ ಸಾತ್ವಿಕರು, ಎಂದು ನಾಲ್ಕು ವಿಧರು ಇದನ್ನೇ ಹೇಳುತ್ತಾರೆ) ಸತ್ವ, ಸತ್ವಾಧಿಕರಜಸ್ಸು, ರಜಸ್ಸು, ತಮಸ್ಸು, ಇವುಗಳಿಂದ ವಿಭಕ್ತಗಳಾದವುಗಳು ನಾಲ್ಕು ವರ್ಣಗಳು (ಅಂದರೆ ರಾಜಸ ಸಾತ್ವಿಕರಲ್ಲಿ ಸಾತ್ವಿಕನು ಬ್ರಾಹ್ಮಣನು. ಸತ್ವಗುಣವು ಹೆಚ್ಚು, ರಜೋಗುಣ ಕಡಿಮೆಯುಳ್ಳವನು ಕ್ಷತ್ರಿಯನು ಸಮವಾದ ಸತ್ವಗುಣರಜೋಗುಣಗಳುಳ್ಳವನು ವೈಶ್ಯನು ರಜೋಗುಣದಿಂದ ಹೆಚ್ಚು ತಮೋಗುಣಗಳುಳ್ಳವನು ಶೂದ್ರನು) ವೈಷ್ಣವರೇ ಸಾತ್ವಿಕರು. (ಸತ್ವಗುಣವೇ ಪ್ರಧಾನವಾಗಿ ಉಳ್ಳವರು) (ಸಾತ್ವಿಕತ್ವಾದಿಗಳು ಬ್ರಾಹ್ಮಣತ್ವಾದಿ ಪ್ರಯುಕ್ತಗಳಲ್ಲ) (೨) ಶಮೋ ದಮಃ ಇತ್ಯಾದಿಗಳಿಂದ ಕರ್ಮವಿಭಾಗವನ್ನು ಹೇಳುವರು. (೩) (ವೈಷ್ಣವರೇ ಸಾತ್ವಿಕರು ಎಂದಾದರೆ—ಬ್ರಾಹ್ಮಣರು ಸಾತ್ವಿಕರು ಇದುಮೊದಲಾದ ಉಕ್ತಿಗೆ ಕಾರಣವು ಯಾವುದು? ಎಂದರೆ) ವೈಷ್ಣವರು ಸಾತ್ವಿಕರೇ ದ್ವೇಷಿಗಳು ತಾಮಸರೇ. ಶೂದ್ರಾದಿಗಳಲ್ಲಿ ವಿಷ್ಣುಭಕ್ತಿಯುಳ್ಳವರು ಬಹು ದುರ್ಲಭರಾಗಿರುತ್ತಾರೆ ಬ್ರಾಹ್ಮಣಾದಿಗಳಲ್ಲಿ ವಿಷ್ಣುಭಕ್ತಿಯುಳ್ಳವರು ಬಹು ಮಂದಿ ಇರುತ್ತಾರೆ, ಆದಕಾರಣ ಬ್ರಾಹ್ಮಣರೇ ಸಾತ್ವಿಕರು ಇತ್ಯಾದಿ ರೂಪದಿಂದ ಸಾತ್ವಿಕತ್ವಾದಿಗಳನ್ನು ವರ್ಣ ಆಶ್ರಮಗಳ ಭೇದದಿಂದ ಭೇದವನ್ನು ಹೇಳಿದ್ದು ॥ ೧ ॥

ಪೀ— ಸಾತ್ವಿಕತ್ವಾದಿಗಳು ಹೇಗೆ ಕೇವಲ ಬ್ರಾಹ್ಮಣತ್ವಾದಿ ಜಾತಿಯ ಲಕ್ಷಣವಲ್ಲವೋ, ಹಾಗೆಯೇ ಶಮಾದಿಗಳೂ ಕೇವಲ ಬ್ರಾಹ್ಮಣತ್ವಾದಿ ಜಾತಿಯ ಲಕ್ಷಣವಲ್ಲ. ಮತ್ತೆ ಸ್ವಾಭಾವಿಕ ಬ್ರಾಹ್ಮಣನಿಗೇನೇ ಶಮದಮಾದಿಗಳು ಎಂಬುವಲ್ಲಿ ಸ್ಮೃತಿಯನ್ನು ಹೇಳುತ್ತಾರೆ—

ತಾ ॥ (೧) ಸ್ವಾಭಾವಿಕೋ ಬ್ರಾಹ್ಮಣಾದಿಃ ಶಮಾದ್ಯೈರೇವ ಭಿದ್ಯತೇ । ಯೋನಿಭೇದಕೃತೋ ಭೇದೋ ಜ್ಞೇಯ ಔಪಾಧಿಕಸ್ತ್ವಯಂ ॥ (೨) ವಿಷ್ಣುಭಕ್ತಿಶ್ಶಾ(ಸ್ತ್ವ)ನುಗತಾ ಸರ್ವವರ್ಣೇಷು ವಿಶ್ರುತಿಂ । ಆರಭ್ಯ ಹೀಯತೇಽಥಾಪಿ ಭೇದಃ ಸ್ವಾಭಾವಿಕಸ್ತತಃ । ಇತಿ ನಾರದೀಯೇ ॥ (೩) ಕರ್ತಾಽಪಿ ಭಗವಾನ್ವಿಷ್ಣುರಕರ್ತೇತಿ ಚ ಕಥ್ಯತೇ । ತಸ್ಯ ಕರ್ತಾ ಯತೋ ನಾನ್ಯಃ ಸ್ವತಂತ್ರತ್ವಾತ್ಪರಾತ್ಮನ ಇತಿ ಚ ॥ (೪) ಅಪಿಶಬ್ದೋ ಗುಣಸಮುಚ್ಚಯಾರ್ಥಃ । ಕರ್ತಾ ಮೇ ನಾಸ್ತೀತ್ಯಪಿ ವಿದ್ಧೀತಿ ॥ ೨ ॥ ॥ ೧೩ ॥

ಅ ॥ (೧) ಸ್ವಾಭಾವಿಕವಾಗಿ ಬ್ರಾಹ್ಮಣಾದಿಗಳು ಶಮದಮಾದಿಗಳಿಂದಲೇ ಯುಕ್ತರಾಗಿರುತ್ತಾರೆ (ಅಂದರೆ ಸ್ವಾಭಾವಿಕ ಬ್ರಾಹ್ಮಣನಿಗೇನೇ ಶಮದಮಾದಿಗುಣಗಳು ಸ್ವಾಭಾವಿಕ ಕ್ಷತ್ರಿಯರಿಗೇನೇ ಶೌರ್ಯಾದಿಗುಣಗಳು. ಯೋನಿಭೇದ ಪ್ರಯುಕ್ತ ಭೇದವು ಔಪಾಧಿಕವು (ಅಂದರೆ-ಬ್ರಾಹ್ಮಣ ಸ್ತ್ರೀಯರಲ್ಲಿ ಹುಟ್ಟುವುದು ಇತ್ಯಾದಿ ಪ್ರಕಾರ ಹುಟ್ಟುವುದು ಔಪಾಧಿಕವು )(೨) ಶಮ ಎನಿಸಿದ ವಿಷ್ಣುಭಕ್ತಿಯು ಬ್ರಾಹ್ಮಣನಿಗೆ ಮಾತ್ರವಲ್ಲ. ಮತ್ತೆ ಎಲ್ಲಾ ವರ್ಣಗಳಿಗೂ ಆವಶ್ಯಕವೇ (ಹೀಗೆಯೇ ದಮಾದಿಗುಣಗಳೂ ಎಲ್ಲರಿಗೂ ಆವಶ್ಯಕವೇ ) (ಕ್ಷತ್ರಿಯನು ಶಾಂತಚಿತ್ತನಾದರೆ ರಾಜ್ಯವೇ ಹಾಳಾಗುವುದು ಎಂದರೆ–ಈ ಶಮವು ಪ್ರಸಿದ್ಧವಾದುದಲ್ಲ ಮತ್ತೆ ವಿಷ್ಣುಭಕ್ತಿರೂಪವಾದ ಶಮವು ) (ಶಮದಮಾದಿಗಳು ಕ್ಷತ್ರಿಯಾದಿಗಳಲ್ಲಿಯೂ ಇದ್ದರೆ ಇವನು ಬ್ರಾಹ್ಮಣನು, ಇವನು ಬ್ರಾಹ್ಮಣನಲ್ಲ, ಎಂದು ಸ್ವಾಭಾವಿಕ ಬ್ರಾಹ್ಮಣಾದಿ ವರ್ಣಗಳ ಭೇದಜ್ಞಾನವು ಹೇಗೆ ಉಂಟಾಗುವುದು? ಎಂದರೆ—) ಬ್ರಾಹ್ಮಣನಲ್ಲಿ ಶಮದಮಾದಿಗಳು ಹೆಚ್ಚು ಇವೆ ಕ್ಷತ್ರಿಯಾದಿಗಳಲ್ಲಿ ಕ್ರಮದಿಂದ ಕಡಿಮೆಯಾಗುತ್ತಾ ಬರುತ್ತದೆ ಹೀಗೆ ಶಮಾದಿಗಳು ಹೆಚ್ಚು ಇದ್ದರೆ ಇವನು ಬ್ರಾಹ್ಮಣನೆಂದೂ, ಕಡಿಮೆ ಇದ್ದರೆ ಇವನು ಬ್ರಾಹ್ಮಣನಲ್ಲ ಎಂದೂ ಸ್ವಾಭಾವಿಕವಾದ ವರ್ಣಭೇದವನ್ನು ತಿಳಿದುಕೊಳ್ಳಬೇಕು (೩) (ನೀನು ಹೇಗೆ ಸರ್ವಕರ್ತನೋ ಹೀಗೆಯೇ ನಿನಗೂ(ಶ್ರೀಕೃಷ್ಣನಿಗೂ)ಇನ್ನೊಬ್ಬ ಕರ್ತನು ಇದ್ದಾನೋ ಏನು?ಎಂದರೆ ತಸ್ಯ ಕರ್ತಾರಂಎಂದು ಹೇಳಿದ್ದಾರೆ )ಅಲ್ಲಿ ಕರ್ತೃನಾದಾಗ್ಯೂ ಅಕರ್ತನೆಂದು ತಿಳಿದುಕೊಳ್ಳು. ಕರ್ತತ್ವವು ಮಾಯಿಕವಾಗಿದೆ, ಎಂಬ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಸ್ಮೃತಿಯಿಂದಲೇ ಅದರ ಅರ್ಥ ಹೇಳುತ್ತಾರೆ-) ಶ್ರೀಹರಿಯು ಸರ್ವಸ್ವತಂತ್ರನಾದುದರಿಂದ ಅವನಿಗೆ ಇನ್ನೊಬ್ಬ ಕರ್ತನು ಯಾವಕಾರಣದಿಂದ ಇಲ್ಲವೋ, ಅದುದರಿಂದ ಶ್ರೀವಿಷ್ಣುವು ಸರ್ವಸ್ವತಂತ್ರಕರ್ತನಾದಾಗ್ಯೂ ಅಕರ್ತಾ ಎಂದೂ ಅನಿಸುತ್ತಾನೆ (೪)(ಇಂತಹ ಕರ್ತೃತ್ವ ಅಕರ್ತೃತ್ವಗಳಿಗೆ ವಿರೋಧವು ಇಲ್ಲದಿರುವುದರಿಂದ ಕರ್ತಾರಮಪ್ಯಕರ್ತಾರಂ ವಿದ್ಧಿ ಎಂಬಲ್ಲಿ ಅಪಿ ಶಬ್ದವು ವ್ಯರ್ಥವೆಂದರೆ—) ಅಪಿಶಬ್ದವು ಗುಣಸಮುಚ್ಚಯಕ್ಕಾಗಿ ಅಂದರೆ ನನ್ನನ್ನು ಸೃಷ್ಟಿ ಮಾಡಿದವನು ಇಲ್ಲ ಎಂದು ತಿಳಿ ಎಂಬ ಗುಣಸಮುಚ್ಚಯಕ್ಕಾಗಿ ॥೧೩॥

ಗೀ ॥ ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।
ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬದ್ಧ್ಯತೇ ॥ ೧೪ ॥

ಅ ॥ ಮಾಂ=(ಜೀವರಿಗಿಂತ ವಿಲಕ್ಷಣಕ್ರಿಯಗಳು ಇದ್ದುದರಿಂದ ಅಕರ್ತನಾದುದರಿಂದ) ನನ್ನನ್ನು, ಕರ್ಮಾಣಿ= ಕರ್ಮಗಳು, ನ ಲಿಂಪಂತಿ= ಲೇಪಿಸುವುದಿಲ್ಲ. (ಅಂದರೆ ಜಗದ್ರಕ್ಷಣಾದಿಗಳಿಂದ ಪುಣ್ಯವೂ

ಸಂಹಾರಾದಿಗಳಿಂದ ಪಾಪವೂ ನನಗೆ ಬರುವುದಿಲ್ಲ) ಮೇ=ನನಗೆ. ಕರ್ಮಫಲೇ=ಕರ್ಮದಿಂದುಂಟಾಗುವ ಫಲದಲ್ಲಿ, ಸ್ಪೃಹಾ=ಇಚ್ಛೆಯು, ನ=ಇರುವುದಿಲ್ಲ. (ಅಂದರೆ ಜೀವರಿಗೆ ಫಲವು ಸಿಗುವ ತನಕ ಮನಸ್ಸು ಕಳವಳ ಹೊಂದುತ್ತಿರುತ್ತದೆ. ಅದಕಾರಣ ಕರ್ಮಲೇಪವಿದೆ. ಶ್ರೀಹರಿಗೆ ಇಂತಹುದು ಇಲ್ಲವೇ ಇಲ್ಲ.) ಇತಿ=ಹೀಗೆ, ಯಃ=ಯಾವಾತನು ಮಾಂ=ನನ್ನನ್ನು, ಅಭಿಜಾನಾತಿ=ಚೆನ್ನಾಗಿ ತಿಳಿದುಕೊಳ್ಳುತ್ತಾನೋ. ಸಃ=ಆತನೂ. (ಅಂದರೆ ಶ್ರೀಕೃಷ್ಣನಿಗೆ ಕರ್ಮಲೇಪವಿಲ್ಲ, ಕರ್ಮಫಲದಲ್ಲಿ ಇಚ್ಛೆಯೂ ಇರುವುದಿಲ್ಲ, ಎಂದು ತಿಳಿದವನೂ ಕೂಡ) ಕರ್ಮಭಿಃ=ಕರ್ಮಗಳಿಂದ, ನ ಬಧ್ಯತೇ=ಬದ್ಧನಾಗುವುದಿಲ್ಲ. (ಹೀಗೆ ಇರಲು ಶ್ರೀಹರಿಗೆ-ಕರ್ಮಬಂಧವಿಲ್ಲವೆಂಬುದು ಸುತರಾಂ ಸಿದ್ಧವಾಗುವುದು.) ॥ ೧೪ ॥

ಭಾ ॥ (೧) ಅತ ಏವ ಚ ನ ಮಾಂ ಕರ್ಮಾಣಿ ಲಿಂಪಂತಿ । ಇತಶ್ಚ ನ ಲಿಂಪಂತೀತ್ಯಾಹ । ನ ಮೇ ಕರ್ಮಫಲೇ ಸ್ಪೃಹೇತಿ ॥ (೨) ಇಚ್ಛಾಮಾತ್ರಂ ತ್ವಸ್ತಿ ನ ತು ತತ್ರಾಭಿನಿವೇಶಃ ॥ (೩) ತಚ್ಚೋಕ್ತಂ । ಆಕಾಂಕ್ಷನ್ನಪಿ ದೇವೋಽಸೌ ನೇಚ್ಛತೇ ಲೋಕವತ್ ಪರಃ । ನ ಹ್ಯಾಗ್ರಹಸ್ತಸ್ಯ ವಿಷ್ಣೋರ್ಜ್ಞಾನಂ ಕಾಮೋ ಹಿ ತಸ್ಯ ತ್ವಿತಿ ॥ (೪) ನ ಚ ಕೇಚಿನ್ಮುಕ್ತಾ ಭವಂತೀತಿ ಕ್ರಮೇಣ ಸರ್ವಮುಕ್ತಿಃ ॥ (೫) ತಥಾ ಹಿ ಶ್ರುತಿಃ । (1) ಜ್ಞಾತ್ವಾ ತಮೇನಂ ಮನಸಾ ಹೃದಾ ಚ ಭೂಯೋ ನ ಮೃತ್ಯುಮುಪಯಾತಿ ವಿದ್ವಾನಿತಿ । (2) ಕಥಂ ವಾ ಇತ್ಯನಂತಾ ಇತ್ಯನಂತವತ್ । (3) ಇತಿ ಹೋವಾಚೇತಿ ॥ ೧೪ ॥

ಅ॥ (೧)ಶ್ರೀಹರಿಗೆ ಜೀವರಿಗಿಂತ ವಿಲಕ್ಷಣಕ್ರಿಯೆಗಳು ಇದ್ದುದರಿಂದ ಜೀವರಂತೆ ಕರ್ತನಾಗದಿರುವುದರಿಂದಲೇ ಕರ್ಮಗಳು ಲೇಪಿಸುವುದಿಲ್ಲ ಜೀವರಿಗೆ ಕರ್ಮಲೇಪವಾಗಲಿಕ್ಕೆ ಫಲವು ಸಿಗುವ ಪರ್ಯಂತ ಮನಸ್ಸಿನ ಚಾಂಚಲ್ಯವು ಕಾರಣವು. ಅಂತಹ ಮನೋವಿಕ್ಷೇಪವು ಶ್ರೀಹರಿಗೆ ಇಲ್ಲದಿರುವುದರಿಂದಲೇ ಕರ್ಮಗಳು ಸಂಬಂಧಿಸುವುದಿಲ್ಲವೆಂದು **ನ ಮೇ ಕರ್ಮಫಲೇ ಸ್ಪೃಹಾ** ಎನ್ನುವುದರಿಂದ ಹೇಳುತ್ತಾರೆ (೨) (ಹಾಗಾದರೆ ಶ್ರೀಹರಿಗೆ ತನಗಾಗಿ ಫಲದಲ್ಲಿ ಇಚ್ಛೆಯಿಲ್ಲದಿದ್ದರೂ ಇತರರಿಗಾಗಿ ಇಚ್ಛೆಯು ಇದ್ದೇ ಇದೆ ಇಚ್ಛೆಯಿಲ್ಲವೆಂದದ್ದು ಹೇಗೆ? ಎಂದರೆ—) ಇಚ್ಛೆಯು ಮಾತ್ರ ಇದೆ. ಕರ್ಮಫಲದಲ್ಲಿ ಅಭಿನಿವೇಶ (ಫಲವು ಸಿಗುವಪರ್ಯಂತ ಮನಶ್ಚಾಂಚಲ್ಯ)ವಿಲ್ಲ (೩) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ.) ಆ ಪ್ರಮೇಯವು ಹೇಳಲ್ಪಟ್ಟಿದೆ ಸರ್ವೋತ್ತಮನಾದ ಶ್ರೀಹರಿಗೆ ಇಚ್ಛಾಮಾತ್ರ ಇದ್ದರೂ ಲೋಕದಲ್ಲಿದ್ದ ಜನರಂತೆ ಶ್ರೀಹರಿಯು ಇಚ್ಛಿಸುವುದಿಲ್ಲ ಶ್ರೀವಿಷ್ಣುವಿಗೆ ಅಭಿನಿವೇಶವಿರುವುದಿಲ್ಲ. (ಅಗ್ರಹವಿಲ್ಲ) ಶ್ರೀವಿಷ್ಣುವಿನ ಜ್ಞಾನವು ಹೇಗೆ ಮಿಥ್ಯಾಜ್ಞಾನರೂಪವಾಗುವುದಿಲ್ಲವೋ, ಹಾಗೆಯೇ ಶ್ರೀಹರಿಯ ಕಾಮವೂ ಅಭಿನಿವೇಶರೂಪವಾಗುವುದಿಲ್ಲ (೪) (**ಇತಿ ಮಾಂ** ಎನ್ನುವುದರಿಂದ ಹೀಗೆ **ತಿಳಿದವನಿಗೆ ನ ಸ ಬಧ್ಯತೇ** ಎಂದು ವರ್ತಮಾನಾರ್ಥಕಪ್ರತ್ಯಯದಿಂದಲೂ ಮದ್ಭಾವಮಾಗತಾಃ ಎಂದು ಭೂತಕಾಲಿಕ ಪ್ರತ್ಯಯದಿಂದಲೂ ಮುಕ್ತಿಯ ಫಲವೆಂದು ಹೇಳಿಯದೆ ಅದರಲ್ಲಿ ಏಕಜೀವವಾದಿಗಳು ಹೇಳುವ ಆಕ್ಷೇಪವನ್ನು ನಿಷೇಧಿಸುತ್ತಾರೆ—) ಕೆಲವರು ಈಗ ಮುಕ್ತರಾಗುತ್ತಾರೆ ಕೆಲವರು ಹಿಂದೆ ಮುಕ್ತರಾಗಿರುತ್ತಾರೆ, ಎಂಬ ಪಕ್ಷದಲ್ಲಿ ಅತೀತಕಾಲದಲ್ಲಿಯೇ ಕ್ರಮದಿಂದ ಎಲ್ಲರಿಗೂ ಮುಕ್ತಿಯಾಗಬೇಕಾಗುತ್ತಿತ್ತು. ಅಂತೂ ಈಗ ಸಂಸಾರವೇ ಇಲ್ಲವೆಂದಾಗಬೇಕಾಗುವುದು, ಎಂದು ಶಂಕಿಸಕೂಡದು (೫) (ಏಕೆಂದರೆ—ಶ್ರುತಿಯು ಹೀಗೆ ಆಶಂಕಿಸಿಕೊಂಡು ನಿಷೇಧಿಸಿಯದೆ ಎನ್ನುತ್ತಾರೆ—) (1) ಜ್ಞಾನಿಯು ಆ ಶ್ರೀಹರಿಯನ್ನು ಹಿಂದೆ ಹೇಳಿದ ಪ್ರಕಾರ ಮನಸ್ಸಿನಿಂದಲೂ, ಬುದ್ಧಿಯಿಂದಲೂ ತಿಳಿದು ತಿರುಗಿ ಮರಣವನ್ನು ಹೊಂದುವುದಿಲ್ಲ ಎಂದು. (ಮುಕ್ತನಾಗುತ್ತಾನೆ) (2) ಭೂತಕಾಲದಲ್ಲಿಯೇ ಸರ್ವರಿಗೂ ಮುಕ್ತಿಯಾಗಬೇಕಾಗುವುದೆಂದು ಏಕಜೀವವಾದಿಗಳ ಆಕ್ಷೇಪವಿದ್ದುದರಿಂದ ಇದು ಹೇಗೆ ಕೂಡುತ್ತದೆ, ಎಂದರೆ – ಜೀವರು ಅನಂತರಾಗಿರು

ತ್ತಾರೆ (ಎಂದು ಉತ್ತರವು.) (ಹಾಗಾದರೆ ಜೀವಾನಂತ್ಯಕ್ಕಿಂತಲೂ ಕಾಲವೂ ಕೂಡ ಅತಿಶಯವಾಗಿ ಅನಂತವಾಗಿದೆ. ತಥಾಚ ಜೀವರ ಅನಂತ್ಯಕ್ಕಿಂತಲೂ ಕಾಲಾನಂತ್ಯವು ಅಧಿಕವಾಗಿರುವುದರಿಂದ ಅತೀತ ಕಾಲದಲ್ಲಿಯೇ ಸರ್ವರಿಗೂ ಮುಕ್ತಿಯು ಆಗಿಯೇ ಆಗಬೇಕಾಗುವುದು, ಎಂಬುವ ಆಕ್ಷೇಪಕ್ಕೆ—) **ಅನಂತವತ್** ಭಗವಂತನ ಅನಂತ್ಯದಂತೆ ಎಂದುತ್ತರವು ಅಂದರೆ—ಹೇಗೆ ಶ್ರೀಹರಿಯು ಕಾಲಕ್ಷಣಗಳಿಂದಲೂ ಅತಿಶಯವಾಗಿ ಅನಂತನೋ, ಹಾಗೆ ಜೀವರು ಅನಂತರಾಗಿರುತ್ತಾರೆ (3) ತಾನು ಹೇಳಿದ ಅರ್ಥದಲ್ಲಿ ಸಮ್ಮತಿಯಾಗಿ ವತ್ಸಶ್ರುತಿಯು **ಇತಿ ಹೋವಾಚ** ಎಂಬ ಶ್ರುತ್ಯಂತರವನ್ನು ಹೇಳಿದೆ ಕಾಲಕ್ಷಣಾನಂತ್ಯಕ್ಕಿಂತಲೂ ಜೀವಾನಂತ್ಯವು ಹೆಚ್ಚು ಎಂಬ ಅರ್ಥವನ್ನು **ಅನಾಗತಾ ಅತೀತಾಶ್ಚ ಯಾವಂತಃ ಸಹಿತಾಃ ಕ್ಷಣಾಃ । ಅತೀತಾನಾಗತಾಶ್ಚೈವ ಯಾವಂತಃ ಪರಮಾಣವಃ । ತತೋಽಪ್ಯನಂತಗುಣಿತಾಃ ಜೀವಾನಾಂ ರಾಶಯಃ ಪೃಥಕ್** ಎಂಬ ಶ್ರುತ್ಯಂತರವನ್ನು ವತ್ಸಶ್ರುತಿಯು ಹೇಳುತ್ತದೆ

ವಿ ॥ (1) ಕ್ಷಣಾನಂತ್ಯಕ್ಕಿಂತಲೂ ಜೀವಾನಂತ್ಯವು ಹೆಚ್ಚಾದಕಾರಣ ಒಂದೊಂದು ಕ್ಷಣದಲ್ಲಿ ಒಬ್ಬೊಬ್ಬರಿಗೆ ಮುಕ್ತಿಯಾದರೂ ಜೀವರಿಗೆ ಸಮಾಪ್ತಿಯಾಗುವುದಿಲ್ಲ ಹೀಗೆ ಇರಲು ಕಲ್ಪಾಂತರದಲ್ಲಿ ಕೆಲವರಿಗೆ ಮಾತ್ರ ಮುಕ್ತಿಯಾದಾಗ ಸರ್ವರಿಗೆ ಸಮಾಪ್ತಿಯಾಗುವುದು ಹೇಗೆ? (2) ಕಲ್ಪ ವರ್ಷ ಮಾಸ ದಿನ ಗಳಿಗೆ ಕ್ಷಣಗಳ ಅನಂತ್ಯಗಳಲ್ಲಿ ತಾರತಮ್ಯವು ಅನುಭವಸಿದ್ಧವಾಗಿದೆ ॥ ೧೪ ॥

ಪೀ—ಜ್ಞಾನಿಗಳಿಗೆ ಕರ್ಮಲೇಪವಿಲ್ಲವೆಂದಾದರೆ—ನಾನೂ (ಅರ್ಜುನನೂ) ಜ್ಞಾನಿಯಾಗಿರುವುದರಿಂದ ನನಗೂ ಕರ್ಮಬಂಧಾಭಾವರೂಪವಾದ ಮೋಕ್ಷವು ಸಿಗುವುದರಿಂದ ಕರ್ಮವನ್ನು ಮಾಡಲೇಬೇಕೆಂದು ವಿಧಿಸಿದ್ದು ಏತಕ್ಕೆಂದರೆ—

**ಗೀ ॥ ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।**
**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಂ ॥ ೧೫ ॥**

ಅ ॥ ಮುಮುಕ್ಷುಭಿಃ=ಮೋಕ್ಷದಲ್ಲಿ ಆನಂದಾಧಿಕ್ಯವನ್ನು ಇಚ್ಛಿಸುತ್ತಿರುವ ಪೂರ್ವೈರಪಿ=ಪೂರ್ವಿಕರಾದ ಜನಕ ಪ್ರಿಯವ್ರತ ಮೊದಲಾದ ರಾಜರಿಂದಲೂ ಕೂಡ, ಏವಂ=ಹಿಂದಿನ ಶ್ಲೋಕದಲ್ಲಿ ಹೇಳಿದ ಪ್ರಕಾರ, ಜ್ಞಾತ್ವಾಽಪಿ=ತಿಳಿದೂ ಕೂಡ, ಕರ್ಮ=ಕರ್ಮವು, ಕೃತಂ=ಮಾಡಲ್ಪಟ್ಟಿದೆ ತಸ್ಮಾತ್=ಆದುದರಿಂದ, ತ್ವಂ=ನೀನು ಪೂರ್ವೈಃ ಪೂರ್ವತರಂ ಕೃತಂ=ಬಹು ಪ್ರಾಚೀನರು ಬಹು ಹಿಂದಿನ ಕಾಲವನ್ನಾರಂಭಿಸಿ ಮಾಡಿಕೊಂಡು ಬಂದ, ಕರ್ಮ=ಕರ್ಮವನ್ನು, ಕುರು ಏವ=ಅವಶ್ಯವಾಗಿ ಮಾಡಲೇಬೇಕು. (ಏವಂಚ ಜ್ಞಾನಿಗಳೂ ಕೂಡ ಮೋಕ್ಷದಲ್ಲಿ ಆನಂದಾತಿಶಯವನ್ನು ಹೊಂದಲಿಚ್ಛೆಯಿಂದ ಮಾಡಿದ್ರಿಂದ ನೀನೂ ಮಾಡಲೇ ಬೇಕು ) ॥ ೧೫ ॥

**ಭಾ ॥ (೧) ಏವಂ ಜ್ಞಾತ್ವಾಽಪಿ ಕರ್ಮಕರಣೇ ಆಚಾರೋಽಪ್ಯಸ್ತೀತ್ಯಾಹ । ಏವಮಿತಿ ॥**
**(೨) ಪೂರ್ವತರಂ ಕರ್ಮ ಪೂರ್ವಭಾವೀತ್ಯರ್ಥಃ ॥ ೧೫ ॥**

ಅ ॥ (೧) (ಜ್ಞಾನಿಗಳಿಗೆ ಕರ್ಮಗಳ ಲೇಪವು ಇಲ್ಲವೆಂದಾದರೆ ಅರ್ಜುನನೂ ಜ್ಞಾನಿಯಾಗಿರುವುದರಿಂದ ಕರ್ಮಬಂಧವು ಇಲ್ಲದಿರುವಪ್ರಯುಕ್ತ ಕರ್ಮವನ್ನು ವಿಧಿಸಿದ್ದು ಕೂಡುವುದಿಲ್ಲವೆಂದರೆ–ಜ್ಞಾನಿಗಳು) ಹಿಂದಿನ ಶ್ಲೋಕದಲ್ಲಿ ಹೇಳಿದಪ್ರಕಾರ ತಿಳಿದರೂ (ಮೋಕ್ಷದಲ್ಲಿ ಆನಂದಾತಿಶಯವನ್ನು ಹೊಂದುವುದಕ್ಕಾಗಿ)ಕರ್ಮಗಳನ್ನು ಮಾಡುವ ವಿಷಯದಲ್ಲಿ ಶಿಷ್ಟಾಚಾರವೂ ಕೂಡ ಇದೆ, ಎಂದು ಏವಂ ಎಂಬ ಶ್ಲೋಕ

ದಿಂದ ಹೇಳುತ್ತಾರೆ. (೨) (ಪೂರ್ವೈಃ ಕೃತಂ ಎಂಬುದರಿಂದಲೇ ಕರ್ಮವು ಅತಿ ಹಿಂದಿನದ್ದೆಂದು ಹೇಳಿದ ಕಾರಣ ಪುನರುಕ್ತಿಯು ಎಂದರೆ-) ಅವರೂ ಕೂಡ ಅದಕ್ಕಿಂತಲೂ ಪೂರ್ವಭಾವಿಯಾದ (ಪೂರ್ವಪರಂಪರೆಯಿಂದ ಬಂದ) ಕರ್ಮವನ್ನು ಮಾಡಿರುತ್ತಾರೆ, ಎಂದರ್ಥವು. ॥ ೧೫ ॥

ಪೀ—ಅವಶ್ಯವಾಗಿ ಮಾಡಬೇಕೆಂದು ಹೇಳಿದ ಕರ್ಮಸ್ವರೂಪವನ್ನು ಹೇಳಲಿಕ್ಕೆ ಅದರಲ್ಲಿ ವಿಶೇಷವಾಗಿ ಜಿಜ್ಞಾಸಾ ಹುಟ್ಟುವುದಕ್ಕಾಗಿ ಕರ್ಮವು ದುರ್ಜ್ಞೇಯವೆನ್ನುತ್ತಾರೆ—

ಗೀ ॥ ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।
ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥
॥ ೧೬ ॥

ಅ ॥ ಕರ್ಮ=ಸತ್ಕರ್ಮವು, ಕಿಂ=ಯಾವುದು? ಅಕರ್ಮ=ಕರ್ಮವನ್ನು ಮಾಡದಿರೋಣವೂ ವಿರುದ್ಧಕರ್ಮವೂ ಕೂಡ, ಕಿಂ=ಯಾವುದು? ಇತಿ=ಹೀಗೆ, ಅತ್ರ=ಈ ಕರ್ಮವಿಷಯದಲ್ಲಿ, ಕವಯೋಽಪಿ=ಜ್ಞಾನಿಗಳೂ ಕೂಡ, ಮೋಹಿತಾಃ=ಸಂಶಯ ಭ್ರಮೆಗಳಿಂದ ಕೂಡಿರುತ್ತಾರೆ. ತತ್=ಆದುದರಿಂದ, ಜ್ಞಾನಿಗಳಿಗೂ ಭ್ರಾಂತಿಯನ್ನು ಹುಟ್ಟಿಸುವಕಾರಣ, ಯತ್=ಯಾವ ಕರ್ಮವನ್ನು, ಜ್ಞಾತ್ವಾ=ತಿಳಿದು ಅಶುಭಾತ್=ಅಶುಭವಾದ ಸಂಸಾರಬಂಧದ್ದೆಶೆಯಿಂದ, ಮೋಕ್ಷ್ಯಸೇ=ಬಿಡುಗಡೆ ಹೊಂದುತ್ತೀಯೋ, ತತ್ ಕರ್ಮ=ಅಂತಹ ಕರ್ಮವನ್ನು, ತೇ=ತಿಳಿಯಲಿಚ್ಛಿಸುವ ನಿನಗೆ, ಪ್ರವಕ್ಷ್ಯಾಮಿ=ಹೇಳುವೆನು. ॥ ೧೬ ॥

ಭಾ ॥ ಕರ್ಮ ಕುರ್ವಿತ್ಯುಕ್ತಂ । ತಸ್ಯ ಕರ್ಮಣೋ ದುರ್ವಿಜ್ಞೇಯತ್ವಮಾಹ ಸಮ್ಯಗ್ಜ್ಞಪ್ತ್ಯೈ । ಕಿಂ ಕರ್ಮೇತಿ ॥ ೧೬ ॥

ಅ ॥ ಕುರು ಕರ್ಮೈವ ಇತ್ಯಾದಿಗಳಲ್ಲಿ ಕರ್ಮವನ್ನು ಮಾಡು ಎಂದು ಹೇಳಿದ್ದಾರೆ ಅವಶ್ಯವಾಗಿ ಮಾಡಬೇಕಾದುದು ಎಂದು ಹೇಳಿದ ಕರ್ಮವನ್ನು ತಿಳಿಯಲಿಚ್ಛಿಸುವ ಅರ್ಜುನನಿಗೆ ಹೇಳುವುದಕ್ಕಾಗಿ ಅತಿದುಃಖದಿಂದ ತಿಳಿಯಲು ಶಕ್ಯವೆಂದು ಕಿಂ ಕರ್ಮ ಎಂಬ ಶ್ಲೋಕದಿಂದ ಹೇಳುತ್ತಾರೆ. ॥ ೧೬ ॥

ಪೀ—ಶ್ರೀಹರಿಯು ಸರ್ವಕರ್ತನೆಂದಾದರೆ ಆತನಿಗೂ ಕರ್ಮಲೇಪವು ಬರಬೇಕಾಗುವುದೆಂದರೆ—ನ ಮಾಂ ಎಂದು ೧೪ನೇ ಶ್ಲೋಕವು. ಅದರಲ್ಲಿ ಮಾಂ ಎಂಬುವುದು ಸಿದ್ಧವಾಗಿರುವುದರಿಂದ ತಿರುಗಿ ಮಾಂ ಎಂಬ ಶಬ್ದವು ಏಕೆಂದರೆ—

ತಾ ॥ ಜೀವಾಭೇದನಿವೃತ್ತ್ಯರ್ಥಂ ಮಾಮಿತಿ ವಿಶೇಷಣಂ ॥ ೧೪, ೧೫, ೧೬ ॥

ಅ ॥ ಶ್ರೀಕೃಷ್ಣನಿಗೆ ಜೀವರಿಂದ ಅಭೇದವಿಲ್ಲವೆಂದು ತೋರಿಸುವುದಕ್ಕಾಗಿ ಮಾಂ ಎಂಬ ವಿಶೇಷಣವು.

ವಿ ॥ ಜೀವರಿಗೆ ಶ್ರೀಹರಿಯಿಂದ ಐಕ್ಯವನ್ನು ಹೇಳಲಿಕ್ಕೆ ಜೀವನನ್ನುದ್ದೇಶಿಸಿ ನ ಮಾಂ ಕರ್ಮಾಣಿ ಲಿಂಪಂತಿ ಎಂದು ಹೇಳಿದ್ದು ಹೀಗೆ ಯಾವನು ತಿಳಿಯುತ್ತಾನೋ, ಎಂದು ಅನ್ಯಥಾ ಪ್ರತೀತಿಯು ಬರುವುದು ಅದನ್ನು ಹೋಗಲಾಡಿಸುವುದಕ್ಕಾಗಿ ಮಾಂ ಎಂದು ಹೇಳಿದ್ದು. ಮಾಂ=ಶ್ರೀಕೃಷ್ಣನನ್ನು

ಹೀಗೆ ತಿಳಿಯಬೇಕು. ಜೀವನನ್ನು ಅಲ್ಲ. ಜೀವನಿಗೆ ಕರ್ಮಲೇಪವಿಲ್ಲವೆಂದು ತಿಳಿಯಬಾರದು, ಈ ಅಭಿಪ್ರಾಯದಿಂದಲೇ ಮಾಂ ಎಂಬ ವಿಶೇಷಣವನ್ನು ಕೊಟ್ಟಿರುತ್ತಾರೆ ॥ ೧೪, ೧೫, ೧೬ ॥

ಪೀ—ಕರ್ಮಾದಿಗಳ ಸ್ವರೂಪಜ್ಞಾನವು ಆವಶ್ಯಕವೆಂಬ ಅಭಿಪ್ರಾಯದಿಂದ ಹೇಳುತ್ತಾರೆ—

**ಗೀ ॥ ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥ ೧೭ ॥**

ಅ ॥ ಕರ್ಮಣಃ=ಕರ್ಮದೆಶೆಯಿಂದ, ಅಕರ್ಮ=ಕರ್ಮಾಕರಣವನ್ನೂ, ವಿರುದ್ಧ ಕರ್ಮವನ್ನೂ, ಬೋದ್ಧವ್ಯಂ=ಬೇರೆ ಎಂದು ತಿಳಿದುಕೊಳ್ಳಬೇಕು. ವಿಕರ್ಮಣಶ್ಯ=ನಿಷಿದ್ಧ ಕರ್ಮದ್ದೆಶೆಯಿಂದ ಬೋದ್ಧವ್ಯಂ=(ಕರ್ಮಾಕರ್ಮವನ್ನು ಬೇರೆ ಎಂದು) ತಿಳಿದುಕೊಳ್ಳಬೇಕು ಅಕರ್ಮಣಶ್ಚ=ಅಕರ್ಮದ್ದೆಶೆಯಿಂದ, ಬೋದ್ಧವ್ಯಂ=ಕರ್ಮವನ್ನೂ, ವಿಕರ್ಮವನ್ನೂ ಬೇರೆ ಎಂದು ತಿಳಿದುಕೊಳ್ಳಬೇಕು ಕರ್ಮಣಃ=ಕರ್ಮದ, ಗತಿಃ=ಜ್ಞಾನವು, ಗಹನಾ=ಅತಿಕಷ್ಟಸಾಧ್ಯವಾದುದು (ಅಂದರೆ ಕರ್ಮ, ವಿರುದ್ಧಕರ್ಮ, ಕರ್ಮಾಕರಣ ಇವುಗಳ ತತ್ವವನ್ನು ತಿಳಿದುಕೊಳ್ಳುವುದಕ್ಕೆ ಬಹಳ ಪ್ರಯಾಸವಿದೆ.) ಅಥವಾ ಕರ್ಮವೂ, ನಿಷಿದ್ಧ ಕರ್ಮವೂ ಅಕರ್ಮವೂ ಎಲ್ಲವೂ ನನ್ನಿಂದಲೇ (ಶ್ರೀಹರಿಯಿಂದಲೇ) ಆಗುತ್ತದೆಂದು ತಿಳಿಯಬೇಕು ಅಂದರೆ ಕರ್ಮಾದಿಗಳು ನಮ್ಮ ಅಧೀನಗಳಲ್ಲ ಮತ್ತೆ ಶ್ರೀಹರಿಯ ಅಧೀನವೆಂದೇ ತಿಳಿಯಬೇಕು ॥೧೭॥

ಪೀ—ಹಾಗಾದರೆ—**ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್** ಎಂಬುವುದರಿಂದಲೇ ಕರ್ಮಾದಿಗಳ ಸ್ವರೂಪವನ್ನು ಮೋಕ್ಷವನ್ನಿಚ್ಛಿಸುವವನು ಅವಶ್ಯವಾಗಿ ತಿಳಿಯಬೇಕೆಂದು ಸಿಕ್ಕಿರುತ್ತದೆ ಆದಕಾರಣ ಕರ್ಮಣೋ ಹಿ ಎಂದು ಏಕೆ? ಎಂದರೆ—

**ಭಾ ॥ (೧) ನ ಕೇವಲಂ ತಜ್ಜ್ಞಾತ್ವಾ ಮೋಕ್ಷ್ಯಸೇ ಜ್ಞಾತ್ವೈವೇತ್ಯಾಶಯವಾನಾಹ । ಕರ್ಮಣ ಇತಿ ॥ (೨) ತಚ್ಚೋಕ್ತಂ । ಅಜ್ಞಾತ್ವಾ ಭಗವಾನ್ಕಸ್ಯ ಕರ್ಮಾಕರ್ಮ-ವಿಕರ್ಮಕಂ । ದರ್ಶನಂ ಯಾತಿ ಹಿ ಮುನೇ ಕುತೋ ಮುಕ್ತಿಶ್ಚ ತದ್ವಿನೇತಿ ॥ (೩) ಅಕರ್ಮ ಕರ್ಮಾಕರಣಂ । ಕರ್ಮಾಕರ್ಮಾನ್ಯದ್ವಿಕರ್ಮ ನಿಷಿದ್ಧಂ ಕರ್ಮ ಬಂಧ-ಕತ್ವಾತ್ । ತತೋ ವಿವಿಚ್ಯ ಕರ್ಮಾದಿ ಬೋದ್ಧವ್ಯಮಿತ್ಯಾದಿ ॥ (೪) ನ ಚ ಶಾಪಾ-ದಿನಾ ಕವಯೋಽಪ್ಯತ್ರ ಮೋಹಿತಾಃ । ಅಶಕ್ಯಂ ಚೈತಜ್ಜ್ಞಾತುಮಿತ್ಯಾಹ । ಗಹ-ನೇತಿ ॥ ೧೭ ॥**

ಅ ॥ (೧) ಕರ್ಮಾದಿಗಳನ್ನು ಸಾಮಾನ್ಯವಾಗಿ ತಿಳಿಯೋಣಮಾತ್ರದಿಂದ ಮುಕ್ತನಾಗುತ್ತಾನೆಂದು ಅರ್ಥವಲ್ಲ ಮತ್ತೆ ಚೆನ್ನಾಗಿ ತಿಳಿದುಕೊಂಡೇ ಮುಕ್ತನಾಗುವಿ, ಎಂಬ ಅಭಿಪ್ರಾಯದಿಂದ ಕರ್ಮಣಃ ಎಂದು ಹೇಳಿರುತ್ತಾರೆ. (೨) (ಈ ವಿಷಯದಲ್ಲಿಯೇ ಪ್ರಮಾಣವನ್ನು ಹೇಳುತ್ತಾರೆ) ಆ ಪ್ರಮೇಯವು ಹೇಳಲ್ಪಟ್ಟಿದೆ. ಕರ್ಮ ಅಕರ್ಮ ವಿಕರ್ಮಗಳನ್ನು ತಿಳಿಯದೆ ಇರುವ ಯಾವ ಜನರಿಗೆ ಶ್ರೀಹರಿಯು ದೃಗ್ಗೋಚರನಾಗುತ್ತಾನೆ? (ಯಾರಿಗೂ ದೃಗ್ಗೋಚರನು ಆಗಲಾರನು) ಅವುಗಳನ್ನು ತಿಳಿದುಕೊಳ್ಳದೆ ಮುಕ್ತಿಯು ಹೇಗೆ ಆಗುವುದು. (೩) ಅಕರ್ಮ=ಕರ್ಮ ಮಾಡದಿರುವುದು ಕರ್ಮ ಅಕರ್ಮಗಳಿಂದ ಬೇರೆಯಾದುದು ವಿಕರ್ಮ ಅಂದರೆ ನಿಷಿದ್ಧಕರ್ಮವು (ವಿಕರ್ಮಕ್ಕೆ ನಿಷಿದ್ಧತ್ವವು ಹೇಗೆಂದರೆ—) ವಿಕರ್ಮವು ಸಂಸಾರ ಬಂಧಕ್ಕೆ ಕಾರಣವಾಗಿರುತ್ತದೆ ಆದಕಾರಣ ವಿಕರ್ಮದ್ದೆಶೆಯಿಂದ ಕರ್ಮಾಕರ್ಮಗಳನ್ನು ಬೇರೆ ಎಂದು ತಿಳಿದುಕೊಳ್ಳಬೇಕು ಕರ್ಮದ್ದೆಶೆಯಿಂದ ವಿಕರ್ಮಾದಿಗಳನ್ನು ಭಿನ್ನವೆಂದು ತಿಳಿಯಬೇಕು.

ಅಕರ್ಮದ್ದೆಶೆಯಿಂದ ಕರ್ಮಾದಿಗಳನ್ನೇ ಭಿನ್ನವೆಂದು ತಿಳಿಯಬೇಕು. (೪) (ಹಾಗಾದರೆ ಕವಯೋಽಪ್ಯತ್ರ ಮೋಹಿತಾಃ ಎಂಬುದರಿಂದ ಕರ್ಮಾದಿಗಳು ದುರ್ಜ್ಞೇಯಗಳೆಂದು ಹೇಳಿದೆ ತಿರುಗಿ ಗಹನಾ ಕರ್ಮಣಃ ಎಂದು ಹೇಳಿದ್ದು ಏತಕ್ಕೆಂದರೆ— ಶಾಪ ಮೊದಲಾದ ಕಾರಣಗಳಿಂದ ಕವಿಗಳು ಕರ್ಮವಿಷಯದಲ್ಲಿ ಮೋಹವನ್ನು ಹೊಂದುವುದಿಲ್ಲ, (ಅಂದರೆ ಶಾಪಾದಿಗಳ ನಿಮಿತ್ತದಿಂದ ಕರ್ಮಗಳು ದುರ್ಜ್ಞೇಯಗಳು ಆಗಲಾರವು) ಸ್ವಾಭಾವಿಕವಾಗಿಯೇ ಈ ಕರ್ಮಸ್ವರೂಪವನ್ನು ತಿಳಿಯುವುದು ಅಶಕ್ಯವೇ ಆಗಿದೆ ಎಂದು ಗಹನಾ ಎಂಬುವುದರಿಂದ ಹೇಳುತ್ತಾರೆ—

ತಾ || ಕರ್ಮಾಪಿ ನೋ ಮತ್ತ ಇತಿ ಬೋದ್ಧವ್ಯಮಿತ್ಯಾದಿ || ೧೭ ||

ಅ || ಕರ್ಮವೂ ಕೂಡ ನಃ= ನನ್ನಿಂದಲೇ ಆಗುತ್ತದೆಂದು ತಿಳಿಯಬೇಕು ವಿಕರ್ಮವೂ ಕೂಡ, ನಃ= ನನ್ನಿಂದಲೇ ಅಕರ್ಮವೂ, ನಃ= ನನ್ನಿಂದಲೇ ಆಗುತ್ತದೆಂದು ತಿಳಿಯಬೇಕು.

ವಿ || ಬ್ರಹ್ಮಾ ಣ ಇಂದ್ರಉಪಯಾಹಿ ಇಂದ್ರನೇ, ನಃ= ನಮಗೆ ಪರಬ್ರಹ್ಮನನ್ನು ಹೊಂದಿಸಿಕೊಡು ಇತ್ಯಾದಿಗಳಲ್ಲಿ ಪದಾಂತರದ ರೇಫದ ಮೇಲೆ ಇರತಕ್ಕ ನಕಾರಕ್ಕೆ ಣಕಾರವು ವೇದದಲ್ಲಿ ಬಂದದೆ. ಅದರಂತೆಯೇ ಇಲ್ಲಿಯೂ ಕರ್ಮ ಎಂಬುವ ಪದಾಂತರದ ರೇಫದ ಮೇಲೆ ಇರತಕ್ಕ ನಃ ಎಂಬುದಕ್ಕೆ ಣಕಾರವು ಬಂದದೆ, ಎಂತ ತಿಳಿಯಬೇಕು ಕರ್ಮ ನಃ, ವಿಕರ್ಮ ನಃ, ಅಕರ್ಮ ನಃ, ಎಂದು ವೇದ ಬೋಧವು. || ೧೭ ||

ಪೀ —ಕರ್ಮಾದಿಗಳ ಸ್ವರೂಪವನ್ನು ವಿವರಿಸುತ್ತಾ ಕರ್ಮಜ್ಞಾನವನ್ನು ಸ್ತುತಿಸುತ್ತಾರೆ—

ಗೀ || ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ |
ಸ ಬುದ್ಧಿಮಾನ್ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ || ೧೮ ||

ಅ || ಕರ್ಮಣಿ= ವರ್ಣಾಶ್ರಮಗಳಿಗೆ ಯೋಗ್ಯವಾದ ಕರ್ಮವನ್ನು ತಾನು ಮಾಡುತ್ತಿದ್ದರೂ, ಅಕರ್ಮ= ಕರ್ಮಾಭಾವವನ್ನು ತನಗೆ, ಯಃ= ಯಾವನು, ಪಶ್ಯೇತ್= ನೋಡುತ್ತಾನೋ (ಅಂದರೆ ಶ್ರೀಹರಿಯೇ ಸರ್ವಸ್ವತಂತ್ರಕರ್ತನು, ನಾನು ಸ್ವತಂತ್ರಕರ್ತನಲ್ಲ ಶ್ರೀಹರಿಯು ಕೊಟ್ಟ ಶಕ್ತಿಯಿಂದಲೇ ಯತ್ಕಿಂಚಿತ್ಕಾರ್ಯವನ್ನು ಮಾಡುತ್ತೇನೆ, ಎಂದು ಯಾವನು ತಿಳಿಯುತ್ತಾನೋ), ಚ= ಮತ್ತೂ, ಅಕರ್ಮಣಿ= ತಾನು (ಜೀವನು) ಕರ್ಮವನ್ನು ಮಾಡದಿರುವ ಸುಷುಪ್ತ್ಯಾದ್ಯವಸ್ಥೆಯಲ್ಲಿ, ಕರ್ಮ=ಭಗವಂತನ ವ್ಯಾಪಾರವನ್ನೇ, ಪಶ್ಯೇತ್= ತಿಳಿಯುತ್ತಾನೋ,(ಅಂದರೆ ಜೀವರ ವ್ಯಾಪಾರವು ಇರುವಾಗಲೂ ಇಲ್ಲದಿರುವಾಗಲೂ ಸದಾ ಶ್ರೀಹರಿಯೇ ಸಮಸ್ತ ವಸ್ತುಗಳನ್ನು, ಸೃಷ್ಟಿಸುವವನು, ಸ್ವಪ್ನಾದಿಗಳಲ್ಲಿ ಆನೆ ಮೊದಲಾದವುಗಳನ್ನು ಸೃಷ್ಟಿಮಾಡಿಯೇ ತೋರಿಸುತ್ತಾನೆಂದು ಯಾವನು ತಿಳಿದುಕೊಳ್ಳುತ್ತಾನೋ) ಸಃ= ಅತನು ಮನುಷ್ಯೇಷು=ಮನುಷ್ಯರಲ್ಲಿ, ಬುದ್ಧಿಮಾನ್= ಜ್ಞಾನಿಯು, ಸಃ= ಅವನೇ, ಯುಕ್ತಃ= ಜ್ಞಾನೋಪಾಯವುಳ್ಳವನು ಕೃತ್ಸ್ನಕರ್ಮಕೃತ್= ತನಗೆ ಯೋಗ್ಯಗಳಾದ ಎಲ್ಲಾ ಕರ್ಮಗಳನ್ನು ಮಾಡುವವನು. (ಅಂದರೆ ಕರ್ಮಫಲವಾದ ಜ್ಞಾನವನ್ನೂ ಜ್ಞಾನದ ಫಲವಾದ ಮೋಕ್ಷವನ್ನೂ ಹೊಂದುವನು.) ಅಥವಾ ಕರ್ಮಣಿ= ವಿಧಿಬದ್ಧನಾದ ಜೀವನಲ್ಲಿ, ಅಕರ್ಮ= ಸ್ವಾತಂತ್ರ್ಯವಿಲ್ಲದಿರುವುದರಿಂದ ಕರ್ಮಾಭಾವವನ್ನು, ಅಕರ್ಮಣಿ= ವಿಷ್ಣುವಿನಲ್ಲಿಯೇ ಕರ್ಮ= ಸರ್ವವ್ಯಾಪಾರವನ್ನೂ ತಿಳಿಯುತ್ತಾನೋ ಸಮಸ್ತ ಕರ್ಮಗಳನ್ನು ಶ್ರೀಹರಿಯೇ ಮಾಡುವವನಾದುದರಿಂದ ಎಲ್ಲಾ ಕರ್ಮಗಳೂಶ್ರೀಹರಿಯು ಅಧೀನಗಳೇ ಎಂದು ತಿಳಿಯುತ್ತಾನೋ, ಅವನು ಜ್ಞಾನಿಯು || ೧೮ ||

ಟೀ—ಕರ್ಮ ಪ್ರವಕ್ಷ್ಯಾಮಿ ಎಂದು ಹೇಳಿರುತ್ತಾರೆ. ಆದರೆ ಕರ್ಮಾದಿಗಳನ್ನು ಹೇಳಿದ್ದು ಎಲ್ಲಿಯೂ ಕಾಣುವುದಿಲ್ಲ. ಕರ್ಮಣಿ ಎಂಬ ಶ್ಲೋಕವು ಯತ್ಕಿಂಚಿತ್ ವಿಕರ್ಮಾದಿಗಳನ್ನು ಯಾರು ತಿಳಿದವರೋ, ಅವರನ್ನು ಸ್ತುತಿಸುತ್ತದೆ ಅಲ್ಲದೆ ಕರ್ಮಾದಿಗಳ ಸ್ವರೂಪವನ್ನು ತಿಳಿಸಲಿಕ್ಕೆ ಹೊರಟದ್ದಲ್ಲ, ಎಂದರೆ—

ಭಾ ॥ (೧) ಕರ್ಮಾದಿಸ್ವರೂಪಮಾಹ । ಕರ್ಮಣೀತಿ ॥ (೨) ಕರ್ಮಣಿ ಕ್ರಿಯಮಾಣೇ ಸತ್ಯಕರ್ಮ ಯಃ ಪಶ್ಯೇದ್ವಿಷ್ಣೋರೇವ ಕರ್ಮ ನಾಹಂ ಚಿತ್ಪ್ರತಿಬಿಂಬಃ ಕಿಂಚಿತ್ಕರೋಮೀತಿ ॥ (೩) ಅಕರ್ಮಣಿ ಸುಪ್ತ್ಯಾದಾವಕರಣಾವಸ್ಥಾಯಾಂ ಪರಮೇಶ್ವರಸ್ಯ ಯಃ ಕರ್ಮ ಪಶ್ಯತಿ ಅಯಮೇವ ಪರಮೇಶ್ವರಃ ಸರ್ವದಾ ಸರ್ವಸೃಷ್ಟ್ಯಾದಿ ಕರೋತೀತಿ । ಸ ಬುದ್ಧಿಮಾನ್ ಜ್ಞಾನೀ ಸ ಏವ ಚ ಯುಕ್ತೋ ಯೋಗಯುಕ್ತಃ । ಸರ್ವಾಕರಣಾತ್ಸ ಏವ ಚ ಕೃತ್ಸ್ನಕರ್ಮಕೃತ್ । ಕೃತ್ಸ್ನಫಲವತ್ತ್ವಾತ್ ॥ ೧೮ ॥

ಅ ॥ (೧) (ಕರ್ಮಾದಿಗಳನ್ನು ಹೇಳದೆ ಕರ್ಮಾದಿಗಳ ಸ್ತುತಿಯು ಕೂಡಲಾರದು ಆದಕಾರಣ) ಕರ್ಮಣಿ ಎಂಬ ಶ್ಲೋಕದಿಂದ ಕರ್ಮಾದಿಗಳ ಸ್ವರೂಪವನ್ನು ಹೇಳಿ (ಕರ್ಮಾದಿಗಳನ್ನು ಸ್ತೋತ್ರ ಮಾಡುತ್ತಾರೆ) (೨) (ಇದರಿಂದ ಕರ್ಮಾದಿಗಳ ಸ್ವರೂಪವನ್ನು ಹೇಳುವುದು ಹೇಗೆ? ಎಂದರೆ-)ವರ್ಣಾಶ್ರಮಗಳಿಗೆ ಯೋಗ್ಯವಾದ ಕರ್ಮವನ್ನು ಮಾಡುತ್ತಿರಲು ಯಾವನು ಕರ್ಮಾಭಾವವನ್ನು ತಿಳಿಯುತ್ತಾನೋ, ಅಂದರೆ ಎಲ್ಲಾ ಕರ್ಮವೂ ಶ್ರೀವಿಷ್ಣುವಿನ ಅಧೀನವೇ. ಜ್ಞಾನರೂಪನಾದ ಶ್ರೀವಿಷ್ಣುವಿನ ಪ್ರತಿಬಿಂಬನಾದ ನಾನು ಯಾವುದನ್ನೂ ಸ್ವತಂತ್ರವಾಗಿ ಮಾಡುವುದಿಲ್ಲ (ಶ್ರೀಹರಿಯ ಅಧೀನನಾಗಿ ಅವನ ಪ್ರೇರಣಾನುಸಾರವಾಗಿ ಮಾಡುತ್ತೇನೆ,) ಎಂದು ಯಾವನು ತಿಳಿಯುತ್ತಾನೋ (೩) ಅಕರ್ಮಣಿ=ಜೀವರ ವ್ಯಾಪಾರವಿಲ್ಲದಿರುವ ಸುಷುಪ್ತ್ಯಾದ್ಯವಸ್ಥೆಯಲ್ಲಿ, ಸರ್ವೋತ್ತಮನಾದ ಶ್ರೀಹರಿಯ ವ್ಯಾಪಾರವನ್ನು ಯಾವನು ತಿಳಿಯುತ್ತಾನೋ, (ಅಂದರೆ—ಸರ್ವೋತ್ತಮನಾದ ಶ್ರೀಹರಿಯು ಜೀವರ ವ್ಯಾಪಾರವಿರುವಾಗ ಮಹತ್ತತ್ತ್ವ ಮೊದಲಾದವುಗಳನ್ನೂ ಜೀವರ ವ್ಯಾಪಾರವಿಲ್ಲದಿರುವಾಗ ಸ್ವಾಪ್ನಗಜಾದಿಗಳನ್ನೂ ಸೃಷ್ಟಿಮಾಡುತ್ತಾನೆ) ಹೀಗೆ ಶ್ರೀಹರಿಯು ಸ್ವತಂತ್ರಕರ್ತನೆಂದೂ ಜೀವರು ಶ್ರೀಹರಿಯ ಪ್ರೇರಣಾನುಸಾರವಾಗಿಯೇ ಮಾಡುವವರೆಂದೂ ತಿಳಿಯುತ್ತಾನೋ, ಅವನೇ ಜ್ಞಾನಿಯು ಅವನೇ ಯುಕ್ತಃ=ಜ್ಞಾನೋಪಾಯವುಳ್ಳವನು ಅವನೇ ಅಶ್ವಮೇಧ ಮೊದಲಾದ ಎಲ್ಲಾ ಕರ್ಮಗಳನ್ನು ಮಾಡದಿದ್ದರೂ ತನಗೆ ಮಾಡಲಿಕ್ಕೆ ಯೋಗ್ಯಗಳಾದ ನಿಖಿಲಕರ್ಮಗಳ ಫಲವಾದ ಜ್ಞಾನಮೋಕ್ಷವನ್ನು ಹೊಂದುವುದರಿಂದ ಕೃತ್ಸ್ನಕರ್ಮಕೃತ್ ಎನಿಸುತ್ತಾನೆ ॥ ೧೮ ॥

ತಾ ॥ (೧) ಕರ್ಮಣಿ ಜೀವೇ ಅಸ್ವಾತಂತ್ರ್ಯಾದಕರ್ಮ । ಕರ್ಮವಿಧಿಫಲಯೋರಭಾವಾತ್। ಅಕರ್ಮಣಿ ವಿಷ್ಣೌ । ಸ್ವಾತಂತ್ರ್ಯಾತ್ಸರ್ವಕರ್ತೃತ್ವಂ ॥ (೨) ಕರೋಽಸ್ಮಿನ್ನಿಯತ ಇತಿ ಕರ್ಮ ಜೀವ ಉದಾಹೃತಃ । ವಿಧಿಶಬ್ದೇನಾಮಿತತ್ವಾದಕರ್ಮ ಭಗವಾನ್ಹರಿರಿತಿ ನಾರದೀಯೇ ॥ (೩) ಕರ ಇತಿ ಸಕಾರಾಂತೋಽದೃಷ್ಟವಾಚೀ । ಕ್ರಿಯಾವಾಚೀ ವಾ । ತದಧೀನತ್ವಾತ್ ॥ (೪) ಪ್ರಸಿದ್ಧಶ್ಚ ಜೀವೇ ಕರ್ಮಶಬ್ದಃ ಪಂಚರಾತ್ರೇ । ಕೃತ್ಸ್ನಫಲವತ್ತ್ವಾತ್ಕೃತ್ಸ್ನಕರ್ಮಕೃತ್ ॥ ೧೮ ॥

ಅ ॥ (೧) ವಿಧಿಬದ್ಧನಾದ ಜೀವನಲ್ಲಿ ಸ್ವಾತಂತ್ರ್ಯವಿಲ್ಲದಿರುವುದರಿಂದ ಕರ್ಮಾಭಾವವನ್ನು, ಶ್ರೀವಿಷ್ಣುವಿಗೆ ಕರ್ಮವಿಧಿಯೂ ಕರ್ಮದ ಫಲವೂ ಇಲ್ಲದಿರುವುದರಿಂದ ಶ್ರೀವಿಷ್ಣುವಿನಲ್ಲಿ ಸರ್ವ ಸ್ವಾತಂತ್ರ್ಯವಿದ್ದುದರಿಂದ ಸರ್ವಕರ್ತೃತ್ವವನ್ನು (೨) ಅದೃಷ್ಟವು ಜೀವನಲ್ಲಿ ಇದ್ದ ಪ್ರಯುಕ್ತವೂ, ಜೀವನು ಕರ್ಮವಿಧಿಗೆ ವಿಷಯನಾಗಿರುವುದರಿಂದಲೂ ಕರ್ಮ ಎಂದರೆ ಜೀವನು. ಶ್ರೀಹರಿಯು ಕರ್ಮವಿಧಿಗೆ ವಿಷಯನಾಗದಿರುವುದರಿಂದ ಅಕರ್ಮ ಎನಿಸುತ್ತಾನೆ ಎಂದು ನಾರದೀಯ ಪುರಾಣದಲ್ಲಿದೆ. (೩) (ಕರ ಶಬ್ದಕ್ಕೆ ಹಸ್ತ ಮೊದಲಾದ ಅರ್ಥವು ಇರುವುದು ಅದೃಷ್ಟಾದಿ ರೂಪವಾದ ಅರ್ಥವು ಕಂಡುಬರಲಿಲ್ಲ ಎಂದರೆ—) (ಹಸ್ತ ಮೊದಲಾದ ಅರ್ಥಗಳನ್ನು ಹೇಳುವ ಕರ ಎಂಬ ಶಬ್ದದ್ದೆಶೆಯಿಂದ ಬೇರೆಯಾದ) ಕರಃ ಎಂದು ಸಕಾರಾಂತವಾದುದು ಅದೃಷ್ಟ ಕರ್ಮವಿಧಿ ಎಂಬ ಅರ್ಥಗಳನ್ನು ಹೇಳುತ್ತದೆ. ಜೀವರಿಗೆ ಸ್ವತಂತ್ರ ಕರ್ತೃತ್ವವಿಲ್ಲದಿದ್ದರೂ ಶ್ರೀಹರಿಯ ಅಧೀನ ಕರ್ತೃತ್ವವಿದ್ದಪ್ರಯುಕ್ತ (ಕ್ರಿಯೆಗಳು ಕೂಡುತ್ತವೆ.) (೪) ಪಂಚರಾತ್ರಾಗಮದಲ್ಲಿ ಕರ್ಮಶಬ್ದವು ಜೀವರಲ್ಲಿ ಪ್ರಸಿದ್ಧವೂ ಆಗಿದೆ. ಆದಕಾರಣ ವಿದ್ವದ್ರೂಢಿಯೂ ಇದೆ. (ಜ್ಞಾನಿಗಳೂ ಸ್ವತಂತ್ರವಾಗಿ ಆಗಲೀ ಪರತಂತ್ರವಾಗಿ ಆಗಲೀ ಸಂಪೂರ್ಣ ಕರ್ಮಗಳನ್ನು ಮಾಡದಿರೋಣದರಿಂದ **ಕೃತ್ಸ್ನಕರ್ಮಕೃತ್** ಎಂಬುದು ಹೇಗೆ ಕೂಡುತ್ತದೆ ಎಂದರೆ—) ತನಗೆ ಯೋಗ್ಯಗಳಾದ ಎಲ್ಲಾ ಕರ್ಮಗಳ ಫಲವಾದ ಮೋಕ್ಷವು ನಿಶ್ಚಿತವಾಗಿರುವುದರಿಂದ ಎಲ್ಲಾ ಕರ್ಮಗಳನ್ನು ಮಾಡುವವನು ಎನಿಸುತ್ತಾನೆ ॥ ೧೮ ॥

ಟೀ—ತಾನು ಕರ್ತನೆಂಬ ಅಭಿಮಾನವನ್ನು ತೊರೆದು ವರ್ಣಾಶ್ರಮಗಳಿಗೆ ಯೋಗ್ಯಗಳಾದ ಎಲ್ಲಾ ಕರ್ಮಗಳನ್ನು ಮಾಡಬೇಕೆಂಬುದು ಮಾತ್ರವಲ್ಲ ಮತ್ತೆ ಕಾಮಾದಿಗಳನ್ನು ಬಿಡಬೇಕೆಂಬುವ ಅಭಿಪ್ರಾಯದಿಂದ ಕರ್ಮಸ್ವರೂಪವನ್ನೇ ಐದು ಶ್ಲೋಕಗಳಿಂದ ವಿವರಿಸುತ್ತಾರೆ—

**ಗೀ ॥ ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ ।**
**ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥ ೧೯ ॥**

ಅ ॥ ಯಸ್ಯ=ಯಾವ ಮನುಷ್ಯರ, ಸರ್ವೇ ಸಮಾರಂಭಾಃ=ಎಲ್ಲಾ ಕರ್ಮಗಳ ಪ್ರಾರಂಭಗಳು, ಕಾಮಸಂಕಲ್ಪವರ್ಜಿತಾಃ=ಫಲೇಚ್ಛೆಯಿಂದಲೂ, ಸ್ವರ್ಗಾದಿಗಳಿಗಾಗಿ ಈ ಕರ್ಮವನ್ನು ಮಾಡುತ್ತೇನೆ, ಎಂಬುವ ಸಂಕಲ್ಪದಿಂದಲೂ, ವಿರಹಿತಗಳಾಗಿವೆಯೋ, ಜ್ಞಾನಾಗ್ನಿದಗ್ಧಕರ್ಮಾಣಂ=ಜ್ಞಾನವೆಂಬುವ ಅಗ್ನಿಯಿಂದ ಸುಡಲ್ಪಟ್ಟ ಕರ್ಮಗಳುಳ್ಳ, (ಅಂದರೆ-ಶ್ರೀಹರಿಯೇ ಸರ್ವಸ್ವತಂತ್ರಕರ್ತನು ತನಗೆ ಸ್ವತಂತ್ರವಾಗಿ ಕರ್ತೃತ್ವವಿಲ್ಲವೆಂದು ತಿಳಿದಿರುವ) ತಂ=ಆ ಮನುಷ್ಯನನ್ನು, ಬುಧಾಃ=ಜ್ಞಾನಿಗಳು, ಪಂಡಿತಂ=ತತ್ವಜ್ಞಾನಿಯನ್ನಾಗಿ, ಆಹುಃ=ಹೇಳುತ್ತಾರೆ ॥ ೧೯ ॥

**ಭಾ ॥ ಏತದೇವ ಪ್ರಪಂಚಯತಿ । ಯಸ್ಯೇತ್ಯಾದಿಶ್ಲೋಕಪಂಚಕೇನ । ಉಕ್ತಪ್ರಕಾರೇಣ ಜ್ಞಾನಾಗ್ನಿದಗ್ಧಕರ್ಮಾಣಂ ॥ ೧೯ ॥**

ಅ ॥ ಕರ್ಮಸ್ವರೂಪವನ್ನೇ ಯಸ್ಯ ಇತ್ಯಾದಿ ಐದು ಶ್ಲೋಕಗಳಿಂದ ವಿವರಿಸುತ್ತಾರೆ (ಕರ್ಮವು ಎಲ್ಲವೂ ಮಿಥ್ಯೆ ಎಂಬುವ ಜ್ಞಾನದಿಂದ ಕರ್ಮಗಳನ್ನು ಬಿಡುವುದು ಜ್ಞಾನಾಗ್ನಿದಗ್ಧಕರ್ಮತ್ವವು ಎಂಬುವ ಪರರ ವ್ಯಾಖ್ಯಾನವು ಅಯುಕ್ತವೆನ್ನುತ್ತಾರೆ—) ಶ್ರೀಹರಿಯೇ ಸರ್ವಕರ್ತನೆಂದು ತಿಳಿದು ತನಗೆ ಸ್ವತಂತ್ರವಾಗಿ ಕರ್ಮಕರ್ತೃತ್ವವಿಲ್ಲವೆಂದು ತಿಳಿದುಕೊಳ್ಳುವವನೇ ಜ್ಞಾನಾಗ್ನಿದಗ್ಧಕರ್ಮಾ ಎನಿಸುತ್ತಾನೆ ॥ ೧೯ ॥

ಟೀ—ಕರ್ಮಫಲದಲ್ಲಿ ಸ್ನೇಹವನ್ನು ಬಿಡಬೇಕೆನ್ನುತ್ತಾರೆ—

ಗೀ || ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ |
ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ || ೨೦ ||

ಅ || ಕರ್ಮಫಲಾಸಂಗಂ=ಕರ್ಮಗಳಲ್ಲಿಯೂ ಕರ್ಮಗಳಿಂದುಂಟಾಗುವ ಫಲಗಳಲ್ಲಿಯೂ ಸ್ನೇಹವನ್ನು, ತ್ಯಕ್ತ್ವಾ=ಬಿಟ್ಟು, ನಿತ್ಯತೃಪ್ತಃ=ನಿರಂತರದಲ್ಲಿಯೂ ಅಲಂಬುದ್ಧಿಯುಳ್ಳವನಾಗಿ, ನಿರಾಶ್ರಯಃ=ದ್ರವ್ಯಾದಿಗಳ ಅಭಿಲಾಷೆಯಿಂದ ಇನ್ನೊಬ್ಬರನ್ನು ಆಶ್ರಯಿಸದೆ ಇದ್ದವನಾಗಿ, ಅಥವಾ ಅನಿರಾಶ್ರಯಃ=ಶ್ರೀಹರಿಯ ಹೊರತು ಮುಖ್ಯವಾಗಿ ಬೇರೆ ಯಾರೂ ಆಶ್ರಯರು ಇಲ್ಲದವನಾಗಿ, ಕರ್ಮಣಿ=ಕರ್ಮಮಾಡುವುದರಲ್ಲಿ, ಅಭಿಪ್ರವೃತ್ತೋಽಪಿ=ಪ್ರವೃತ್ತಿಯನ್ನು ಮಾಡಿದರೂ, ಸಃ=ಆ ಜ್ಞಾನಿಯು, ನೈವ ಕಿಂಚಿತ್ಕರೋತಿ=ಕರ್ಮಮಾಡಿದರೂ ಕರ್ಮಫಲದಲ್ಲಿ ಅಪೇಕ್ಷೆಯಿಲ್ಲದೆ ಶ್ರೀಹರಿಯೇ ಸರ್ವಸ್ವತಂತ್ರನೆಂದು ತಿಳಿದು ಸಂಸಾರ ಬಂಧದಿಂದ ಬಿಡುಗಡೆಹೊಂದುತ್ತಾನೆ || ೨೦ ||

ಭಾ || (೧) ನ ಚ ಕಾಮಸಂಕಲ್ಪಾಭಾವೇನಾಲಂ | ಅಸಂಗಂ ಸ್ನೇಹಂ ಚ ತ್ಯಕ್ತ್ವಾ ||
(೨) ಜ್ಞಾನಸ್ವರೂಪಮಾಹ ಪುನಃ | ನಿತ್ಯತೃಪ್ತ ಇತಿ | ನಿತ್ಯತೃಪ್ತನಿರಾಶ್ರಯೇಶ್ವರ-ಸರೂಪೋಽಹಮಸ್ಮೀತಿ ತಥಾವಿಧಃ || ೨೦ ||

ಅ || (೧) ಕಾಮ ಸಂಕಲ್ಪಗಳನ್ನು ಮಾತ್ರ ಬಿಟ್ಟರೆ ಸಾಕಾಗದು. (ಇಷ್ಟರಿಂದ ಮಾತ್ರ ಕರ್ಮಸ್ವರೂಪವು ಸಂಪೂರ್ಣವಾಗುವುದಿಲ್ಲ) ಮತ್ತೆ ಕರ್ಮಫಲದಲ್ಲಿ ಸ್ನೇಹವನ್ನು ಬಿಟ್ಟು (ಅಂದರೆ ಸ್ನೇಹವನ್ನು ಬಿಡಬೇಕು) (೨) ಕರ್ಮಣ್ಯಕರ್ಮ ಎಂಬುವುದಕ್ಕಿಂತ ತಿರುಗಿ ನಿತ್ಯತೃಪ್ತಃ ಎಂಬುದರಿಂದ ಜ್ಞಾನಸ್ವರೂಪವನ್ನು ಹೇಳುತ್ತಾರೆ ನಿತ್ಯತೃಪ್ತನೂ ನಿರಾಶ್ರಯನೂ ಆದ ಶ್ರೀಹರಿಗೆ ಸದೃಶನಾಗಿರುತ್ತೇನೆಂದು ತಿಳಿದವನು || ೨೦ ||

ಪೀ—ಕಾಮ ಸಂಕಲ್ಪಾದಿಗಳನ್ನು ಬಿಡಲಿಕ್ಕೆ ಬೇಕಾದ ಉಪಾಯವನ್ನು ಹೇಳುತ್ತಾರೆ—

ಗೀ || ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ |
ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ || ೨೧ ||

ಅ || ಯತಚಿತ್ತಾತ್ಮಾ=ಚಿತ್ತವನ್ನೂ ಮನಸ್ಸನ್ನೂ ನಿಗ್ರಹಿಸಿಕೊಂಡವನಾಗಿ (ತನ್ನ ಅಧೀನದಲ್ಲಿಟ್ಟುಕೊಂಡವನಾಗಿ) ನಿರಾಶೀಃ=ವಿಷಯಗಳಲ್ಲಿ ಇಚ್ಛೆಯನ್ನು ಬಿಟ್ಟವನೂ, ತ್ಯಕ್ತಸರ್ವಪರಿಗ್ರಹಃ=ದೇಹ ಇಂದ್ರಿಯಾದಿಗಳಲ್ಲಿ ಅಭಿಮಾನವನ್ನು ಬಿಟ್ಟವನೂ, ಭೋಗಸಾಧನಗಳೆಲ್ಲವನ್ನು ಬಿಟ್ಟವನೂ, (ಆಗುತ್ತಾನೆ) (ಮನಸ್ಸನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡರೇನೇ ಕಾಮಾದಿಗಳನ್ನು ಬಿಡಲಿಕ್ಕೆ ಶಕ್ಯವಾಗುತ್ತದೆ) ಕೇವಲಂ ಶಾರೀರಂ=ಕೇವಲ ಶರೀರ ಪೋಷಣಾದಿಗಳಿಗೆ ಉಪಯುಕ್ತವಾದ, ಅಥವಾ ಕಾಮಾದಿಗಳನ್ನು ತೊರೆದು ಶರೀರ ಇಂದ್ರಿಯಾದಿಗಳೇ ಕರಣಗಳಾಗಿ ಉಳ್ಳ, ಕರ್ಮ=ಕರ್ಮವನ್ನು, ಕುರ್ವನ್=ಮಾಡುವವನು, ಕಿಲ್ಬಿಷಂ=ಕರ್ಮಬಂಧವನ್ನು ಅಥವಾ ಪಾಪವನ್ನು, ನಾಪ್ನೋತಿ=ಹೊಂದುವುದಿಲ್ಲ. || ೨೧ ||

ಭಾ || (೧) ಕಾಮಾದಿತ್ಯಾಗೋಪಾಯಮಾಹ | ನಿರಾಶೀರಿತಿ | ಯತಚಿತ್ತಾತ್ಮಾ ಭೂತ್ವಾ ನಿರಾಶೀರಿತ್ಯರ್ಥಃ || (೨) ಆತ್ಮಾ ಮನಃ | ಪರಿಗ್ರಹತ್ಯಾಗೋಽನಭಿಮಾನಂ || (೩) ನೈವ ಕಿಂಚಿತ್ಕರೋತೀತ್ಯಸ್ಯಾಭಿಪ್ರಾಯಮಾಹ | ನಾಪ್ನೋತಿ ಕಿಲ್ಬಿಷಮಿತಿ || ೨೧ ||

ಅ || (೧) **ನಿರಾಶೀಃ** ಎಂಬುದರಿಂದ ಕಾಮ ಸಂಕಲ್ಪಾದಿಗಳನ್ನು ಬಿಡಲಿಕ್ಕೆ ಬೇಕಾದ ಉಪಾಯವನ್ನು ಹೇಳುತ್ತಾರೆ. (ಹೇಗೆಂದರೆ-)ಚಿತ್ತವನ್ನೂ ಮನಸ್ಸನ್ನೂ ನಿಗ್ರಹಿಸಿ ಕೊಂಡವನಾಗಿ ನಿಷ್ಕಾಮನಾಗಿಯೂ, ದೇಹೇಂದ್ರಿಯಾದಿಗಳಲ್ಲಿ ಅಭಿಮಾನವನ್ನು ಬಿಟ್ಟವನಾಗಿಯೂ ಆಗುತ್ತಾನೆ, ಎಂಬುವ ಪರರ ವ್ಯಾಖ್ಯಾನವು ಅಯುಕ್ತವು. ಮನಸ್ಸು ಅದರ ಪರಿಣಾಮಗಳ ನಿಗ್ರಹದಿಂದಲೇ ಇಂದ್ರಿಯ ಸಹಿತವಾದ ಶರೀರದ ನಿಗ್ರಹವು ಸಿದ್ಧವಾಗುತ್ತದೆ, ಎಂಬ ಅಭಿಪ್ರಾಯದಿಂದ ಹೇಳುತ್ತಾರೆ (೨) ಇಂದ್ರಿಯಗಳಿಂದ ಕೂಡಿದ ಶರೀರವು ಆತ್ಮಾ ಎನಿಸುತ್ತದೆ. ಆತ್ಮಾ=ಮನಸ್ಸು, (ಹಾಗಾದರೆ ಪರಿಗ್ರಹವೆಂದರೆ ದೇಹಾದಿಗಳು. ಸಾಧಕನು ಅವುಗಳನ್ನು ಬಿಡುವುದು ಹೇಗೆ ಎಂದರೆ—) ಪರಿಗ್ರಹತ್ಯಾಗಃ ಎಂದರೆ—ಅಭಿಮಾನವನ್ನು ಬಿಟ್ಟು ಇರುವುದು (ತನ್ನದ್ದೆಂದು ಅಭಿಮಾನವಿಲ್ಲದಿರುವುದು) (೩) (ಹಿಂದಿನ ಶ್ಲೋಕದಲ್ಲಿ **ಕರ್ಮಣ್ಯಭಿಪ್ರವೃತ್ತೋಽಪಿ** ಇತ್ಯಾದಿಗಳಿಂದ, ಕರ್ಮಗಳು ಮಿಥ್ಯೆಯೆಂಬ ಜ್ಞಾನದೆಶೆಯಿಂದ, ಎಂದು ಪರಕೀಯರು ವ್ಯಾಖ್ಯಾನ ಮಾಡಿರುತ್ತಾರೆ ಅದು ಅಯುಕ್ತವು. ಏಕೆಂದರೆ ಈ ಶ್ಲೋಕದಲ್ಲಿ ಅಭಿಮಾನವನ್ನು ಬಿಡುವುದೆಂದು ಅದರ ಅಭಿಪ್ರಾಯವನ್ನು ಹೇಳಿದ್ದಾರೆ, ಎನ್ನುತ್ತಾರೆ—) **ನೈವ ಕಿಂಚಿತ್ಕರೋತಿ** ಎನ್ನುವುದರ ಅಭಿಪ್ರಾಯವನ್ನು **ನಾಪ್ನೋತಿ ಕಿಲ್ಬಿಷಂ** ಎಂಬುದರಿಂದ ಹೇಳುತ್ತಾರೆ || ೨೧ ||

ಪೀ—ಯತಚಿತ್ತಾತ್ಮನ ಲಕ್ಷಣವನ್ನು ಹೇಳುತ್ತಾರೆ—

**ಗೀ || ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ |**
**ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಽಪಿ ನ ನಿಬಧ್ಯತೇ || ೨೨ ||**

ಅ || ಯದೃಚ್ಛಾಲಾಭಸಂತುಷ್ಟಃ=ಪ್ರಯತ್ನವಿಲ್ಲದೆ ಲಭಿಸಿರುವ ವಸ್ತುಗಳಿಂದ ತೃಪ್ತಿಹೊಂದಿರುವ, ದ್ವಂದ್ವಾತೀತಃ=ಸುಖದುಃಖ ಲಾಭಅಲಾಭ ಮೊದಲಾದ ದ್ವಂದ್ವಗಳಿಂದ ವಿರಹಿತನಾದ ಸಿದ್ಧೌ ಅಸಿದ್ಧೌ ಚ=ಫಲವು ಲಭಿಸಿದರೂ ಲಭಿಸದಿದ್ದರೂ ಸಮನಾಗಿರುವ, ಉತ್ಕರ್ಷಾಪಕರ್ಷವಿಲ್ಲದಿರುವ, ವಿಮತ್ಸರಃ=ವಿಷಯಗಳು ತನಗೆ ಸಿಗದಿರುವ ಪ್ರಯುಕ್ತ ಮನಸ್ಸಿನಲ್ಲಿ ಖೇದವಿಲ್ಲದಿರುವ ಅಥವಾ ಮಾತ್ಸರ್ಯರಹಿತನಾದ ಪುರುಷನು, ಕರ್ಮ=ಕರ್ಮಗಳನ್ನು, ಕೃತ್ವಾಽಪಿ=ಮಾಡಿಯೂ ಕೂಡ, ನ ನಿಬಧ್ಯತೇ=ಕರ್ಮದಿಂದ ಬದ್ಧನಾಗುವುದಿಲ್ಲ || ೨೨ ||

**ಭಾ || (೧) ಯತಚಿತ್ತಾತ್ಮನೋ ಲಕ್ಷಣಮಾಹ | ಯದೃಚ್ಛಾಲಾಭೇತಿ || (೨) ಕಥಂ ದ್ವಂದ್ವಾತೀತತ್ವಮಿತ್ಯತ ಆಹ | ಸಮಃ ಸಿದ್ಧಾವಿತಿ || ೨೨ ||**

ಅ || (೧) ಯದೃಚ್ಛಾಲಾಭ ಎಂಬುದರಿಂದ ಯತಚಿತ್ತಾತ್ಮನಿಗೆ ಲಕ್ಷಣ ಹೇಳುತ್ತಾರೆ. (೨) ದ್ವಂದ್ವಾತೀತತ್ವವು ಹೇಗೆಂದರೆ **ಸಮಸ್ಸಿದ್ಧೌ** ಎನ್ನುವುದರಿಂದ ವಿವರಿಸುತ್ತಾರೆ || ೨೨ ||

**ಗೀ || ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ |**
**ಯಜ್ಞಾಯಾಽಽಚರತಃ ಕರ್ಮ ಸಮಗ್ರಂ ಪ್ರವಿಲೀಯತೇ || ೨೩ ||**

ಅ || ಗತಸಂಗಸ್ಯ=ಫಲದಲ್ಲಿ ಸ್ನೇಹವಿಲ್ಲದಿರುವ, ಮುಕ್ತಸ್ಯ=ದೇಹಾದಿಗಳಲ್ಲಿ ಅಭಿಮಾನವನ್ನು ಬಿಟ್ಟಿರುವ ಅಥವಾ ಸ್ವಾತಂತ್ರ್ಯಾಭಿಮಾನವಿಲ್ಲದಿರುವ, ಜ್ಞಾನಾವಸ್ಥಿತಚೇತಸಃ=ಶ್ರೀವಿಷ್ಣುವಿನ ಜ್ಞಾನದಲ್ಲಿ ಆಸಕ್ತವಾದ ಮನಸ್ಸುಳ್ಳ, (ಅಂದರೆ ಶ್ರೀವಿಷ್ಣುವಿನ ಜ್ಞಾನವನ್ನೇ ಹೊಂದುವುದಕ್ಕಾಗಿ ಚೆನ್ನಾಗಿ ಮನ

ಸ್ಸನ್ನು ಇಟ್ಟಿರುವ) ಯಜ್ಞಾಯ=ಶ್ರೀವಿಷ್ಣುವಿನ ಪ್ರೀತಿಗಾಗಿ, ಕರ್ಮ=ಯಜ್ಞ ಮೊದಲಾದ ಕರ್ಮಗಳನ್ನು, ಆಚರತಃ=ಮಾಡುತ್ತಿರುವ ಮನುಷ್ಯನ, ಸಮಗ್ರಂ ಕರ್ಮ=ಎಲ್ಲಾ ಕರ್ಮವೂ, ಪ್ರವಿಲೀಯತೇ=ನಾಶವಾಗುತ್ತದೆ. (ಆ ಕರ್ಮವು ಸಂಸಾರಬಂಧವನ್ನುಂಟುಮಾಡುವುದಿಲ್ಲ.) ॥ ೨೩ ॥

ಪೀ—ಹಿಂದಿನ ಶ್ಲೋಕಗಳಲ್ಲಿ ಹೇಳಿದ ಅರ್ಥವನ್ನೇ ಇಲ್ಲಿ ಪುನಃ ಹೇಳುವುದರಿಂದ ಪುನರುಕ್ತಿ ದೋಷವು ಎಂದರೆ—

ಭಾ ॥ ಉಪಸಂಹರತಿ । ಗತಸಂಗಸ್ಯೇತಿ । ಗತಸಂಗಸ್ಯ ಫಲಸ್ನೇಹರಹಿತಸ್ಯ । ಮುಕ್ತಸ್ಯ ಶರೀರಾದ್ಯನಭಿಮಾನಿನಃ । ಜ್ಞಾನಾವಸ್ಥಿತಚೇತಸಃ ಪರಮೇಶ್ವರಜ್ಞಾನಿನಃ ॥೨೩॥

ಅ ॥ ಈ ಶ್ಲೋಕದಿಂದ ಅಲ್ಲಲ್ಲಿ ಹೇಳಿದ್ದನ್ನು ಕ್ರೋಡೀಕರಿಸಿಕೊಂಡು ಹೇಳುತ್ತಾರೆ ಗತಸಂಗಸ್ಯ=ಫಲದಲ್ಲಿ ಸ್ನೇಹವಿಲ್ಲದಿರುವ, ಮುಕ್ತಸ್ಯ=ಶರೀರಾದಿಗಳಲ್ಲಿ ಅಭಿಮಾನವನ್ನು ಬಿಟ್ಟಿರುವ. ಜ್ಞಾನಾವಸ್ಥಿತಚೇತಸಃ=ಸರ್ವೋತ್ತಮನಾದ ಶ್ರೀಹರಿಯ ಜ್ಞಾನವುಳ್ಳ ॥ ೨೩ ॥

ಪೀ—ನಾನೇ ಕರ್ತನು ಎಂಬ ಅಭಿಮಾನವನ್ನು ಬಿಟ್ಟರೆ ಮಾತ್ರ ಕೃತ್ಸ್ನಕರ್ಮಕೃತ್ ಎನಿಸಿಕೊಳ್ಳುವುದಲ್ಲ ಮತ್ತೆ ಕಾಮಾದಿಗಳ ಪರಿತ್ಯಾಗವೂ ಬೇಕೆಂದು ಯಸ್ಯ ಸರ್ವೇ ಎಂಬುವ ೧೯ನೇ ಶ್ಲೋಕವನ್ನಾರಂಭಿಸಿಕೊಂಡು ೫ ಶ್ಲೋಕಗಳಿಂದ ಹೇಳುತ್ತಾರೆ ಅಲ್ಲಿ ನಿರಾಶ್ರಯಃ ಎಂದು ಪದಚ್ಛೇದ ಮಾಡಬೇಕೆಂದು ಪ್ರತೀತಿಯು ಬರುತ್ತದೆ ಅದನ್ನು ನಿರಾಕರಿಸುವುದಕ್ಕಾಗಿ ಹೇಳುತ್ತಾರೆ—

ತಾ ॥ ಅನಿರಾಶ್ರಯೋ ಭಗವದಾಶ್ರಯತ್ವಾತ್(ಶ್ರಯಃ) । ಮುಕ್ತಸ್ಯ ಸ್ವಾತಂತ್ರ್ಯಾಭಿಮಾನಾತ್ ॥ ೧೯—೨೩ ॥

ಅ ॥ (ಜ್ಞಾನಿಗಳೂ ಕೂಡ ಭಗವಂತನನ್ನು ಆಶ್ರಯಿಸಿಕೊಂಡಿದ್ದುದರಿಂದ ನಿರಾಶ್ರಯತ್ವವು ಕೂಡದಿರುವುದರಿಂದ) ನಿತ್ಯತೃಪ್ತೋಽನಿರಾಶ್ರಯಃ ಎಂಬುವ ೨೦ನೇ ಶ್ಲೋಕದಲ್ಲಿ ಅನಿರಾಶ್ರಯಃ ಎಂದು ಪದಚ್ಛೇದವು. ಶ್ರೀಭಗವಂತನನ್ನು ವಿಶೇಷವಾಗಿ ಆಶ್ರಯಿಸಿಕೊಂಡು ಇದ್ದುದರಿಂದ ಅನಿರಾಶ್ರಯನು (ಜ್ಞಾನಿಗಳಿಗೂ ಶರೀರಸಂಬಂಧವು ಇದ್ದುದರಿಂದ ಮುಕ್ತಸ್ಯ ಎಂಬುದು ಹೇಗೆ ಕೂಡುತ್ತದೆಂದರೆ—) ನಾನು ಸ್ವತಂತ್ರನು ಇದುಮೊದಲಾದ ಅಭಿಮಾನದಿಂದ ಬಡಲ್ಪಟ್ಟವನು ಅಂದರೆ ಅಂತಹ ಅಭಿಮಾನವನ್ನು ಬಿಟ್ಟವನು ಎಂದರ್ಥವು ॥ ೧೯ – ೨೩ ॥

ಪೀ—ತತ್ತೇ ಕರ್ಮ ಪ್ರವಕ್ಷ್ಯಾಮಿ ಎಂದು ಹೇಳಿದ ಕರ್ಮಸ್ವರೂಪವನ್ನು ಸಂಕ್ಷೇಪವಾಗಿಯೂ ವಿಸ್ತಾರವಾಗಿಯೂ ಹೇಳಿ ಈಗ ಜ್ಞಾನಾವಸ್ಥಿತಚೇತಸಃ ಎಂದು ಹೇಳಿದುದನ್ನು ಸ್ಪಷ್ಟೀಕರಿಸುತ್ತಾರೆ–

ಗೀ ॥ ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಂ ।
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥ ೨೪ ॥

ಅ ॥ ಅರ್ಪಣಂ=(ಅರ್ಪ್ಯತೇ ಸಮರ್ಪ್ಯತೇ ಎಂಬುವ ವ್ಯುತ್ಪತ್ತಿಯಿಂದ) ಯಾಗಗಳಿಗೆ ಸಾಧನಗಳಾದ ದರ್ವೀ ಪಿಠರ ಮೊದಲಾದ ಪಾತ್ರವಿಶೇಷಗಳು, ಬ್ರಹ್ಮ=ಪರಬ್ರಹ್ಮನ ಅಧೀನಗಳು ಹವಿಃ=ಹವಿಸ್ಸು, ಬ್ರಹ್ಮ=ಪರಬ್ರಹ್ಮನ ಅಧೀನವು, ಅಗ್ನೌ=ಅಗ್ನಿಯಲ್ಲಿ ಬ್ರಹ್ಮ=ಪರಬ್ರಹ್ಮನು (ನಿಯಾಮಕ

ನಾಗಿರುತ್ತಾನೆ) ಹುತಂ=ಹೋಮವು, ಬ್ರಹ್ಮಣಾ=ಪರಮಾತ್ಮನ ಅಧೀನವು. ಸಮಾಧಿನಾ=ಸಮಾಧಿಯಿಂದ ಕೂಡಿದ, ಕರ್ಮ=ಅಗ್ನಿಹೋತ್ರ ಮೊದಲಾದುದು, ಬ್ರಹ್ಮ=ಪರಬ್ರಹ್ಮನ ಅಧೀನವು. ತೇನೈವ=ಹೀಗೆ ತಿಳಿದುಕೊಂಡವನಿಂದಲೇ, ಬ್ರಹ್ಮ=ಪರಬ್ರಹ್ಮನು, ಗಂತವ್ಯಂ=ಹೊಂದಲ್ಪಡುತ್ತಾನೆ. ಅಥವಾ ಬ್ರಹ್ಮನಲ್ಲಿ ಕರ್ಮಾದಿಗಳ ಸಮರ್ಪಣವು, ಬ್ರಹ್ಮನನ್ನುದ್ದೇಶಿಸಿಕೊಂಡಿರುವ ಹವಿಸ್ಸು ಬ್ರಹ್ಮನ ಅಧಿಷ್ಠಾನವಾದ ಅಗ್ನಿಯಲ್ಲಿ ಬ್ರಹ್ಮನಿಗೆ ಪ್ರೀತಿಕರವಾದ ಕರ್ಮ, ಕರ್ಮಮಾತ್ರ ಬ್ರಹ್ಮನನ್ನು ಉದ್ದೇಶಿಸಿಕೊಂಡಿದ್ದುದು ಅಲ್ಲ. ಸಮಾಧಿಸಹಿತವಾದ ಕರ್ಮವು ಬ್ರಹ್ಮೋದ್ದೇಶ್ಯಕವು. ಇವೆಲ್ಲದಕ್ಕೂ ಪರಬ್ರಹ್ಮನೇ ಸ್ವಾಮಿಯೂ ನಿಯಾಮಕನು, ಎಂದು ತಿಳಿದವನು ಪರಬ್ರಹ್ಮನನ್ನು ಹೊಂದುತ್ತಾನೆ

ವಿ || ರಾಜ್ಯವು ರಾಜನ ಅಧೀನವಾಗಿರುವುದರಿಂದ ರಾಜಾ ರಾಷ್ಟ್ರಂ ರಾಜನು ರಾಷ್ಟ್ರವು ಎಂದು ಪ್ರಯೋಗವು ಇದ್ದಂತೆ ದರ್ವೀ ಪಿಠರ ಹವಿಸ್ಸು ಮೊದಲಾದುದು ಶ್ರೀಹರಿಯ ಅಧೀನವಾಗಿರುವುದರಿಂದ ಅರ್ಪಣಂ ಬ್ರಹ್ಮ ಎಂದು ಅಭೇದವ್ಯಪದೇಶವನ್ನು ಮಾಡಿರುವರು || ೨೪ ||

**ಭಾ || (೧) ಜ್ಞಾನಾವಸ್ಥಿತಚೇತಸ್ತ್ವಂ ಸ್ಪಷ್ಟಯತಿ । ಬ್ರಹ್ಮಾರ್ಪಣಮಿತಿ । ಸರ್ವಮೇತದ್ಬ್ರಹ್ಮೇತ್ಯುಚ್ಯತೇ । ತದಧೀನಸತ್ತಾಪ್ರತೀತತ್ವಾತ್ । ನ ತು ತತ್ಸ್ವರೂಪತ್ವಾತ್ || (೨) ಉಕ್ತಂ ಹಿ । ತ್ವದಧೀನಂ ಯತಃ ಸರ್ವಮತಸ್ಸರ್ವೋ ಭವಾನಿತಿ । ವದಂತಿ ಮುನಯಸ್ಸರ್ವೇ ನ ತು ಸರ್ವಸ್ವರೂಪತ ಇತಿ ಪಾದ್ಮೇ || (೩) ಸರ್ವಂ ತತ್ಪ್ರಜ್ಞಾನೇತ್ರಮಿತಿ ಚ । ಏತಂ ಹ್ಯೇವ ಬಹ್ವೃಚಾ ಇತ್ಯಾದಿ ಚ || (೪) ಸಮಾಧಿನಾ ಸಹ ಬ್ರಹ್ಮೈವ ಕರ್ಮ || ೨೪ ||**

ಅ || (೧) ಬ್ರಹ್ಮಾರ್ಪಣಂ ಎಂಬುವುದರಿಂದ ಜ್ಞಾನಾವಸ್ಥಿತಚೇತಸ್ತ್ವವನ್ನು ಸ್ಪಷ್ಟಪಡಿಸುತ್ತಾರೆ. (ಇಲ್ಲಿ ಅರ್ಪಣಾದಿಗಳೆಲ್ಲವೂ ಬ್ರಹ್ಮನ ಸ್ವರೂಪಗಳೆಂದು ಹೇಳಲ್ಪಡುತ್ತವೆ, ಎಂಬ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—) ಅರ್ಪಣ ಮೊದಲಾದ ಎಲ್ಲಾ ವಸ್ತುಗಳೂ ಶ್ರೀಹರಿಯ ಅಧೀನವಾದ ಸತ್ತಾ ಪ್ರತೀತಿ (ಜ್ಞಾನ) ಉಳ್ಳವುಗಳಾದುದರಿಂದ ಪರಬ್ರಹ್ಮ ಎಂದು ಅಮುಖ್ಯವಾಗಿ ಹೇಳಲ್ಪಡುತ್ತವೆ. ಪರಬ್ರಹ್ಮನ ಸ್ವರೂಪವಾಗಿರುವುದರಿಂದ ಹಾಗೆ ಹೇಳಲ್ಪಡುವುದಲ್ಲ (೨) ಎಲ್ಲಾ ವಸ್ತುಗಳೂ ನಿನ್ನ ಅಧೀನಗಳಾಗಿರುವುದರಿಂದ ನೀನು ಸರ್ವಃ ಎಂದು ಎನಿಸಿಕೊಳ್ಳುತ್ತಿ ಸರ್ವ ವಸ್ತುಗಳ ಸ್ವರೂಪನಾಗಿರುವುದರಿಂದ ಅಲ್ಲ, ಹೀಗೆ ಎಲ್ಲಾ ಮುನಿಗಳು ಹೇಳುತ್ತಾರೆ, ಎಂದು ಪಾದ್ಮಪುರಾಣದಲ್ಲಿದೆ ಎಲ್ಲಾ ವಸ್ತುವು ಬ್ರಹ್ಮನೇ ನಿಯಾಮಕವಾಗಿವುಳ್ಳದ್ದು (೩) ಋಕ್‌ಶಾಖಿಗಳು ಈ ಶ್ರೀಹರಿಯನ್ನೇ ಸರ್ವ ವಸ್ತುಗಳಲ್ಲಿ ಅಂತರ್ಗತನಾಗಿಯೂ ನಿಯಾಮಕನಾಗಿಯೂ ಇರುತ್ತಾನೆಂದು ಹೇಳುತ್ತಾರೆ (೪) (ಬ್ರಹ್ಮಕರ್ಮ ಸಮಾಧಿನಾ ಎಂಬುದಕ್ಕೆ ಬ್ರಹ್ಮವಿಷಯಕವಾದ ಸಮಾಧಿಯುಳ್ಳವನು, ಎಂದು ಪರರು ವ್ಯಾಖ್ಯಾನಮಾಡಿದ್ದು ಪ್ರಕ್ರಮ ವಿರುದ್ಧವು, ಎಂಬುವ ಅಭಿಪ್ರಾಯದಿಂದ ಬೇರೆ ರೀತಿ ವ್ಯಾಖ್ಯಾನಮಾಡುತ್ತಾರೆ–) ಸಮಾಧಿಯಿಂದ ಕೂಡಿದ ಕರ್ಮವು ಬ್ರಹ್ಮಾಧೀನವೇ. (ಸಮಾಧಿಯೂ ಕರ್ಮವೂ ಎಲ್ಲವೂ ಪರಬ್ರಹ್ಮನ ಅಧೀನವೇ) || ೨೪ ||

**ತಾ || ಕಥಮಭಿಮಾನತ್ಯಾಗಃ । ಬ್ರಹ್ಮಾರ್ಪಣಮಿತ್ಯಾದಿ । ಬ್ರಹ್ಮಣ್ಯರ್ಪಣಂ ಬ್ರಹ್ಮಾರ್ಪಣಂ । ಬ್ರಹ್ಮಣೋ ಹವಿಃ । ಬ್ರಹ್ಮಣೋಽಗ್ನೌ । ಬ್ರಹ್ಮಣಃ ಕರ್ಮ ಸಮಾಧಿನಾ ಸಹ । ಸಮಾಧಿರಪಿ ತದಧೀನ ಇತ್ಯರ್ಥಃ । ಏಕಃ ಸ್ವತಂತ್ರೋ ಭಗವಾಂಸ್ತ್ವದೀಯಂ ತ್ವನ್ಯದುಚ್ಯತ ಇತಿ ಭಾರತೇ || ೨೪ ||**

ಅ || ಅಭಿಮಾನವನ್ನು ಬಿಡುವುದು ಹೇಗೆ? ಎಂದರೆ—ಬ್ರಹ್ಮಾರ್ಪಣಂ ಇತ್ಯಾದಿಗಳಿಂದ ವಿವರಿಸುತ್ತಾರೆ. ಪರಬ್ರಹ್ಮನಲ್ಲಿ ಕರ್ಮಾದಿಗಳನ್ನು ಅರ್ಪಿಸುವುದು ಬ್ರಹ್ಮೋದ್ದೇಶ್ಯಕವಾದ ಹವಿಸ್ಸು. ಬ್ರಹ್ಮನಿಗೆ ಅಧಿಷ್ಠಾನವಾದ ಅಗ್ನಿಯಲ್ಲಿ ಸಮಾಧಿಯಿಂದ ಸಹಿತವಾದ ಕರ್ಮವು ಬ್ರಹ್ಮೋದ್ದೇಶ್ಯಕವು. ಸಮಾಧಿಯು ಕೂಡ ಬ್ರಹ್ಮೋದ್ದೇಶ್ಯಕವು ಮತ್ತು ಬ್ರಹ್ಮನ ಅಧೀನವು ಸರ್ವಸ್ವತಂತ್ರನಾದವನು ಶ್ರೀಹರಿಯು ಒಬ್ಬನೇ ಬೇರೆ ಎಲ್ಲವೂ ಅವನ ಅಧೀನವೆಂದು ಹೇಳಲ್ಪಡುತ್ತದೆ, ಎಂದು ಭಾರತದಲ್ಲಿದೆ || ೨೪ ||

ಪೀ—ಪೂರ್ವದಲ್ಲಿ ತನಗೆ ಶ್ರೀಹರಿಯ ಅಧೀನವಾದ ಕರ್ತೃತ್ವವೇ ಇರುವುದೆಂದು ತಿಳಿದುಕೊಂಡು ಶ್ರೀಹರಿಯ ಪ್ರೀತಿಗಾಗಿ ವರ್ಣಾಶ್ರಮಗಳಿಗೆ ವಿಹಿತವಾದುದನ್ನು ಮಾಡುವುದೇ ಕರ್ಮವೆಂದು ಸಾಮಾನ್ಯವಾಗಿ ಕರ್ಮಸ್ವರೂಪವನ್ನು ಹೇಳಿಯದೆ. ಆ ಕರ್ಮದಲ್ಲಿ ಯಜ್ಞ ಮೊದಲಾದುದು ಅನೇಕ ಭೇದವಿದೆಎನ್ನುತ್ತಾರೆ–

**ಗೀ || ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ |**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ || ೨೫ ||**

ಅ || ಅಪರೇ ಯೋಗಿನಃ=ಕೆಲವು ಯತಿಗಳು, ದೈವಮೇವ=ಶ್ರೀವಿಷ್ಣುವನ್ನೇ, ಯಜ್ಞಂ=ಯಜ್ಞರೂಪವು ಹೇಗೆ ಆಗುವುದೋ ಹಾಗೆ, ಪರ್ಯುಪಾಸತೇ=ಭಕ್ತಿಪೂರ್ವಕವಾಗಿ ಉಪಾಸನೆಮಾಡುತ್ತಾರೆ (ಅಂದರೆ ಶ್ರೀಹರಿಯ ಉಪಾಸನೆಯನ್ನೇ ಯಜ್ಞವೆಂದು ಬಹುಶ್ರದ್ಧೆಯಿಂದ ತಿಳಿದುಕೊಳ್ಳುತ್ತಾರೆ) ಅಥವಾ ಯಜ್ಞನೆನಿಸಿದ ಶ್ರೀಹರಿಯನ್ನು ಯೋಗಿಗಳು ಬಹುಶ್ರದ್ಧೆಯಿಂದ (ಶ್ರೀಹರಿಯು ಸ್ವಾನಂದರೂಪವಾದ ಹವಿಸ್ಸನ್ನು ಭೋಗಿಸುವವನು, ಶ್ರೀಹರಿಯೇ ಅಗ್ನಿಶಬ್ದವಾಚ್ಯನೂ, ಆಗಿರುತ್ತಾನೆ ಆದಕಾರಣ) ಯಜ್ಞನೆಂದು ಶ್ರೀಹರಿಯನ್ನೇ ಉಪಾಸನೆ ಮಾಡುತ್ತಾರೆ. ಅಪರೇ=ಕೆಲವರು, ಬ್ರಹ್ಮಾಗ್ನೌ=ಬ್ರಹ್ಮನೆಂಬ ಅಗ್ನಿಯಲ್ಲಿ, ಅಥವಾ ಬ್ರಹ್ಮಾಧೀನವಾದ ಅಗ್ನಿಯಲ್ಲಿ, ಯಜ್ಞೇನ=ಅಗ್ನಿಹೋತ್ರ ಮೊದಲಾದ ಯಜ್ಞದಿಂದ, ಯಜ್ಞಂ=ಯಜ್ಞನೆನಿಸಿದ ಶ್ರೀಹರಿಯನ್ನುದ್ದೇಶಿಸಿ, ಉಪಜುಹ್ವತಿ=ಹೋಮಿಸುತ್ತಾರೆ ಅಥವಾ ಅಗ್ನಿಹೋತ್ರ ಮೊದಲಾದುದನ್ನು ಯಜ್ಞನೆನಿಸಿದ ಶ್ರೀಹರಿಯ ಪ್ರೇರಣೆಯಿಂದ ಸಮರ್ಪಿಸುತ್ತಾರೆ (ಅಂದರೆ ಸರ್ವವೂ ಯಜ್ಞನೆನಿಸಿದ ಶ್ರೀವಿಷ್ಣುವಿನ ಅಧೀನವೆಂದು ತಿಳಿದು ತಾನು ಸ್ವತಂತ್ರನೆಂಬ ಅಭಿಮಾನವನ್ನು ಬಿಟ್ಟು ಮಾಡಿದ ಕರ್ಮವನ್ನು ಶ್ರೀವಿಷ್ಣುವಿಗೆ ಸಮರ್ಪಿಸುತ್ತಾರೆ) || ೨೫ ||

**ತಾ || (೧) ದೈವಂ ವಿಷ್ಣುಮೇವ ಯಜ್ಞ ಇತ್ಯುಪಾಸತೇ | ಸ್ವಭೋಗ್ಯತ್ವಾತ್ಸ್ವಯಮೇವ ಯಜ್ಞಃ || (೨) ಬ್ರಹ್ಮಾಖ್ಯಾಗ್ನೌ ಕ್ರಿಯಾಯಜ್ಞಂ ತೇನೈವ ಯಜ್ಞಾಖ್ಯೇನ ವಿಷ್ಣುನಾ ಸಮರ್ಪಯಂತಿ || ೨೫ ||**

ಅ || (೧) ದೈವಂ=ವಿಷ್ಣುವನ್ನೇ, ಯಜ್ಞನೆಂದು ಉಪಾಸನೆಮಾಡುತ್ತಾರೆ. ಸ್ವರೂಪಭೂತವೇ ಆದ ಆನಂದ ಮೊದಲಾದ ಹವಿಸ್ಸನ್ನು ಅಗ್ನಿ ಶಬ್ದವಾಚ್ಯನಾದ ಭಗವಂತನು ತಾನೇ ಉಣ್ಣುವಪ್ರಯುಕ್ತ ಯಜ್ಞನೆನಿಸುತ್ತಾನೆ (೨) ಬ್ರಹ್ಮಾಖ್ಯ ಅಗ್ನಿಯಲ್ಲಿ ಕ್ರಿಯಾರೂಪವಾದ ಯಜ್ಞವನ್ನು ಎಲ್ಲವೂ ಯಜ್ಞನೆನಿಸಿದ ಶ್ರೀವಿಷ್ಣುವಿನ ಅಧೀನವೆಂದು ತಿಳಿದುಕೊಂಡು ಸಮರ್ಪಿಸುತ್ತಾರೆ— || ೨೫ ||

**ಗೀ || ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ |**
**ಶಬ್ದಾದೀನ್ವಿಷಯಾನನ್ಯ ಇಂದ್ರಿಯಾಗ್ನಿಷು ಜುಹ್ವತಿ || ೨೬ ||**

ಅ ॥ ಅನ್ಯೇ=ಕೆಲವು ಯೋಗಿಗಳೂ, ಶ್ರೋತ್ರಾದೀನಿ=ಕಿವಿ ಮೊದಲಾದ, ಇಂದ್ರಿಯಾಣಿ=ಜ್ಞಾನೇಂದ್ರಿಯಗಳನ್ನು, ಸಂಯಮಾಗ್ನಿಷು=ಆಯಾಯ ಇಂದ್ರಿಯನಿಗ್ರಹಗಳೆಂಬ ಅಗ್ನಿಗಳಲ್ಲಿ, ಜುಹ್ವತಿ=ಹೋಮಿಸುತ್ತಾರೆ. (ಅಂದರೆ ಶ್ರೀಹರಿಯ ಪೂಜಾರೂಪವೆಂದು ತಿಳಿದು ಇಂದ್ರಿಯಗಳನ್ನು ನಿಗ್ರಹಿಸಿಕೊಳ್ಳುತ್ತಾರೆ) ಅನ್ಯೇ=ಬೇರೆ ಯೋಗಿಗಳು, ಶಬ್ದಾದೀನ್ ವಿಷಯಾನ್=ಶಬ್ದ ಸ್ಪರ್ಶರೂಪ ರಸ ಗಂಧಗಳೆಂಬ ವಿಷಯಗಳನ್ನು, ಇಂದ್ರಿಯಾಗ್ನಿಷು=ಕಿವಿ ಮೊದಲಾದ ಇಂದ್ರಿಯಗಳೆಂಬ ಅಗ್ನಿಗಳಲ್ಲಿ, ಜುಹ್ವತಿ=ಹೋಮಿಸುತ್ತಾರೆ

ವಿ ॥ ಎಲ್ಲವೂ ಶ್ರೀಹರಿಯ ಅಧೀನವೆಂದು ತಿಳಿದು ತನಗೆ ಸ್ವಾತಂತ್ರ್ಯಾಭಿಮಾನವನ್ನು ತೊರೆದು ಶ್ರೀಹರಿಯ ಪೂಜಾರೂಪವೆಂದು ತಿಳಿದು ಅನಿಷಿದ್ಧ ವಿಷಯಗಳನ್ನು ಭೋಗಿಸುತ್ತಾರೆ. ॥ ೨೬ ॥

ಭಾ ॥ (೧) ಯಜ್ಞಭೇದಾನಾಹ । ದೈವಮಿತ್ಯಾದಿನಾ ॥ (೨) ದೈವಂ ಭಗವಂತಂ । ಸ ಏವ ತೇಷಾಂ ಯಜ್ಞಃ । ಭಗವದುಪಾಸನಂ । ಯಜ್ಞಮಿತಿ ಕ್ರಿಯಾವಿಶೇಷಣಂ ॥ (೩) ನಾನ್ಯತ್ತೇಷಾಮಸ್ತಿ ಯತೀನಾಂ ಕೇಷಾಂಚಿತ್ ॥ (೪) ಯಜ್ಞಂ ಭಗವಂತಂ । ಯಜ್ಞೇನ ಯಜ್ಞಂ । ಯಜ್ಞೋ ವಿಷ್ಣುರ್ದೇವತೇತ್ಯಾದಿಶ್ರುತಿಭ್ಯಃ । ಯಜ್ಞೇನ ಪ್ರಸಿದ್ಧೇನೈವ । ಯಜ್ಞಂ ಪ್ರತಿ ಜುಹ್ವತೀತಿ ಸರ್ವತ್ರ ಸಮಂ ತಂ ಯಜ್ಞಮಿತ್ಯಾದೌ ॥ (೫) ಉಕ್ತಂ ಚ । ವಿಷ್ಣುಂ ರುದ್ರೇಣ ಪಶುನಾ ಬ್ರಹ್ಮಾ ಜ್ಯೇಷ್ಠೇನ ಸೂನುನಾ । ಅಯಜನ್ಮಾನಸೇ ಯಜ್ಞೇ ಪಿತರಂ ಪ್ರಪಿತಾಮಹ ಇತ್ಯಾದಿ ॥ ೨೫,೨೬ ॥

ಅ ॥ ದೈವಂ ಎಂಬುವ ಶ್ಲೋಕದಿಂದ ಯಜ್ಞದ ಪ್ರಭೇದಗಳನ್ನು ಹೇಳುತ್ತಾರೆ. (೨) (ದೇವತಾವಿಷಯಕವಾದ ಹವಿಸ್ಸ್ಯಾದಿರೂಪವಾದ ಯಜ್ಞವನ್ನು ಮಾಡುತ್ತಾರೆಂದು ಕೆಲವರು ದೈವಪದಕ್ಕೆ ವ್ಯಾಖ್ಯಾನಮಾಡುತ್ತಾರೆ ಇದು ಅಯುಕ್ತವು ಏಕೆಂದರೆ ದ್ರವ್ಯಯಜ್ಞಾಃ ಎಂದು ಹೇಳಿದ ದ್ರವ್ಯಯಜ್ಞವೂ ದೇವತಾವಿಷಯಕ ದ್ರವ್ಯತ್ಯಾಗರೂಪವಾಗಿರುವುದರಿಂದ ಅದಕ್ಕೆ ಪುನರುಕ್ತಿದೋಷವು ಬರಬೇಕಾಗುವುದು, ಎಂಬುವ ಅಭಿಪ್ರಾಯದಿಂದ ಹೇಳುತ್ತಾರೆ—) ದೈವಂ=ಶ್ರೀಭಗವಂತನನ್ನು ಅಂತಹ ಯತಿಗಳಿಗೆ ಆ ಭಗವದುಪಾಸನವೇ ಯಜ್ಞವು. ಯಜ್ಞ ಎಂಬುವುದು ಕ್ರಿಯಾವಿಶೇಷಣವು ಅಂದರೆ ಅವರಿಗೆ ಭಗವದುಪಾಸನೆಯೇ ಯಜ್ಞವು (೩) ಕುಟೀಜ ಬಹೂದ ಹಂಸ ಪರಮಹಂಸ ಎಂದು ನಾಲ್ಕು ವಿಧವಾದ ಯತಿಗಳ ಮಧ್ಯದಲ್ಲಿ ಪರಮಹಂಸರಿಗೆ ಭವಗವದುಪಾಸನೆಯಿಂದ ವ್ಯತಿರಿಕ್ತವಾದುದು ದ್ರವ್ಯತ್ಯಾಗಾದಿರೂಪವಾದ ಯಜ್ಞವಿಲ್ಲವೇ ಇಲ್ಲ (ಇತರರಾದ ಕುಟೀಜ ಬಹೂದ ಹಂಸರಿಗೆ ಬಾಹ್ಯಕರ್ಮವೂ ಇದೆ.) (೪) (ಬ್ರಹ್ಮಾಗ್ನೌ ಎಂಬುದಕ್ಕೆ ತನ್ನನ್ನು ತನ್ನಿಂದಲೇ ಮನಸ್ಸಿನಿಂದಲಾಗಲೀ ಬ್ರಹ್ಮನಿಂದ ಐಕ್ಯವನ್ನು ಹೊಂದಿಸುತ್ತಾರೆ, ಎಂದು ಪರರು ವ್ಯಾಖ್ಯಾನಮಾಡಿರುವರು ಇದು ಅಯುಕ್ತವೆಂಬುವ ಅಭಿಪ್ರಾಯದಿಂದ ಯಜ್ಞಶಬ್ದಕ್ಕೆ ಅರ್ಥ ಹೇಳುತ್ತಾರೆ -) ಯಜ್ಞಂ=ಶ್ರೀಹರಿಯನ್ನು (ಯಜ್ಞ ಎಂಬುವುದಕ್ಕೆ ಶ್ರೀಪರಮಾತ್ಮನೆಂಬ ಅರ್ಥವು ಹೇಗೆ ಆಗುತ್ತದೆಂದರೆ) ಪ್ರಸಿದ್ಧ ಯಜ್ಞದಿಂದ, ಯಜ್ಞಂ=ಶ್ರೀಭಗವಂತನನ್ನು (ದೇವತೆಗಳು ಪೂಜಿಸಿದರು) ಯಜ್ಞನೆಂದರೆ ವಿಷ್ಣುವೆಂಬ ದೇವತೆಯು. ಇದು ಮೊದಲಾದ ಶ್ರುತಿಗಳಿಂದ (ಯಜ್ಞನೆಂದರೆ ವಿಷ್ಣುವು) ಯಜ್ಞೇನ=ಪ್ರಸಿದ್ಧವಾದ ಯಜ್ಞದಿಂದಲೇ, ಶ್ರೀಹರಿಯನ್ನುದ್ದೇಶಿಸಿ ಹೋಮಿಸುತ್ತಾರೆ ಈ ರೀತಿಯಾದ ವ್ಯಾಖ್ಯಾನವು ತಂ ಯಜ್ಞಂ ಬರ್ಹಿಷಿ ಪ್ರೋಕ್ಷನ್ ಇತ್ಯಾದಿಗಳಲ್ಲಿಯೂ ತಿಳಿದುಕೊಳ್ಳತಕ್ಕದು (೫) ಬ್ರಹ್ಮನು ಜ್ಯೇಷ್ಠಪುತ್ರನಾದ ರುದ್ರನನ್ನು ಪಶುವನ್ನಾಗಿ ಮಾಡಿ ಮಾನಸಯಜ್ಞದಲ್ಲಿ ಪಿತನಾದ ವಿಷ್ಣುವನ್ನು ಪ್ರಪಿತಾಮಹನಾದ ಚತುರ್ಮುಖ ಬ್ರಹ್ಮನು ಹೋಮಿಸಿದನು, ಎಂದು ಹೇಳಿದೆ ॥ ೨೫, ೨೬ ॥

ಾ || ತತ್ಪೂಜಾತ್ವೇನ ಶ್ರೋತ್ರಾದಿಸಂಯಮಂ ಕುರ್ವಂತಿ । ತತ್ಪೂಜಾತ್ವೇನ ವಿಷಯಾನ್ ಭುಂಜತೇ || ೨೬ ||

ಅ || ಶ್ರೀಹರಿಯ ಪೂಜಾರೂಪವೆಂದು ತಿಳಿದು ಶ್ರೋತ್ರ ಮೊದಲಾದ ಇಂದ್ರಿಯಗಳ ನಿಗ್ರಹವನ್ನು ಾಡುತ್ತಾರೆ (ಇಂದ್ರಿಯಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಳ್ಳುತ್ತಾರೆ.) ಕೆಲವರು ಶ್ರೀಹರಿಯ ೂಜಾರೂಪವೆಂದು ತಿಳಿದು ಅನಿಷಿದ್ಧ ವಿಷಯಗಳನ್ನು ಣ್ಣುತ್ತಾರೆ || ೨೬ ||

೧೪ || ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।
ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ || ೨೭ ||

ಅ || ಅಪರೇ=ಬೇರೆ ಯೋಗಿಗಳು, ಸರ್ವಾಣಿ ಇಂದ್ರಿಯಕರ್ಮಾಣಿ=ಎಲ್ಲಾ ವಾಕ್ ಪಾಣಿ ಾದ ಪಾಯು ಉಪಸ್ಥಗಳೆಂಬ ಕರ್ಮೇಂದ್ರಿಯ ವ್ಯಾಪಾರಗಳನ್ನು, ಪ್ರಾಣಕರ್ಮಾಣಿಚ=ಪ್ರಾಣ ಪಾನ ಮೊದಲಾದ ವಾಯುಗಳ ವ್ಯಾಪಾರಗಳನ್ನೂ, ಜ್ಞಾನದೀಪಿತೇ=ಜ್ಞಾನದಿಂದ ವಿಶೇಷವಾಗಿ ಪ್ರಜ್ವ ಸಿಕೊಂಡಿರುವ, ಆತ್ಮಸಂಯಮಯೋಗಾಗ್ನೌ=ಮನಸ್ಸನ್ನು ತನ್ನ ಅಧೀನದಲ್ಲಿ ಇಟ್ಟುಕೊಳ್ಳುವುದೇ ಜ್ಞಾನೋಪಾಯವು, ಅಂತಹ ಜ್ಞಾನೋಪಾಯವೆಂಬ ಅಗ್ನಿಯಲ್ಲಿ, ಜುಹ್ವತಿ=ಹೋಮಿಸುತ್ತಾರೆ

ವಿ || ಎಲ್ಲವೂ ಶ್ರೀಹರಿಯ ಅಧೀನವೆಂದು ತಿಳಿದುಕೊಂಡು ಸ್ವಾತಂತ್ರ್ಯಾಭಿಮಾನವನ್ನು ತೊರೆದು ುನಸ್ಸನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡು ಕರ್ಮೇಂದ್ರಿಯಾದಿಗಳ ವ್ಯಾಪಾರಗಳನ್ನು ಯೋಗ್ಯ ಷಯಗಳಲ್ಲಿ ಪ್ರವರ್ತಿಸುವಂತೆ ಮಾಡುವುದೇ ಶ್ರೀಹರಿಯ ಪೂಜೆಯೆಂದು ತಿಳಿದುಕೊಳ್ಳುತ್ತಾರೆ || ೨೭ ||

ಾ || ಆತ್ಮಸಂಯಮಾಖ್ಯೋಪಾಯಾಗ್ನೌ || ೨೭ ||

ಅ || ಮನಸ್ಸನ್ನು ನಿಗ್ರಹಿಸಿಕೊಳ್ಳುವುದೆಂಬುವ ಜ್ಞಾನೋಪಾಯವೆಂಬ ಅಗ್ನಿಯಲ್ಲಿ || ೨೭ ||

೧೪ || ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಽಪರೇ ।
ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಶಂಸಿತವ್ರತಾಃ || ೨೮ ||

ಅ || ಅಪರೇ=ಇನ್ನು ಕೆಲವರು, ದ್ರವ್ಯಯಜ್ಞಾಃ=ಸತ್ಪಾತ್ರದಲ್ಲಿ ದ್ರವ್ಯದಾನವೇ ಯಜ್ಞವಾಗಿ ುಳ್ಳವರು. ಅಥವಾ ದೇವತೆಗಳನ್ನುದ್ದೇಶಿಸಿ ದ್ರವ್ಯತ್ಯಾಗರೂಪವಾದ ಯಜ್ಞವುಳ್ಳವರು ಇನ್ನಿತರರು ಪೋಯಜ್ಞಾಃ=ತಪಸ್ಸೇ ಯಜ್ಞವಾಗಿ ಉಳ್ಳವರು ಅಂದರೆ ಕೃಚ್ಛ್ರಚಾಂದ್ರಾಯಣ ಮೊದಲಾದ ತಪ ನ್ನು ಶ್ರೀಹರಿಗೆ ತೃಪ್ತಿಯಾಗಲಿ, ಎಂಬುವ ಬುದ್ಧಿಯಿಂದ ಶ್ರೀಹರಿಯಲ್ಲಿ ಹೋಮಿಸುವವರು ಕೆಲವರು ೋಗಯಜ್ಞಾಃ=ಧ್ಯಾನವೆಂಬ ಯಜ್ಞವುಳ್ಳವರು (ಅಂದರೆ ಶ್ರೀಹರಿಗೆ ಪೂಜಾರೂಪವಾದ ಧ್ಯಾನವನ್ನು ಾಡುವವರು.) ಕೆಲವರು ಸ್ವಾಧ್ಯಾಯ ಜ್ಞಾನಯಜ್ಞಾಶ್ಚ=ವೇದಾಧ್ಯಯನವೆಂಬ ಯಜ್ಞವುಳ್ಳವರು ೇದಾಧ್ಯಯನದಿಂದ ಜ್ಞಾನವನ್ನು ಸಂಪಾದಿಸಿಕೊಳ್ಳುವುದು ಉಪದೇಶಿಸುವುದು ಎಂಬುವ ಯಜ್ಞವುಳ್ಳ ರು ಅಥವಾ ಶ್ರೀವಿಷ್ಣುವಿನ ಪೂಜಾರೂಪವಾಗಿ ವೇದಾಧ್ಯಯನವನ್ನು ಮಾಡುವವರು ಶ್ರೀಹರಿಯ ೂಜಾರೂಪವಾಗಿ ಶ್ರವಣ ಮನನಾದಿಗಳನ್ನು ಮಾಡುವವರು ಈ ಪ್ರಕಾರ ಯತಯಃ=ಮಹಾ ್ರಯತ್ನ ಮಾಡುವವರು, ಶಂಸಿತವ್ರತಾಃ=ಸ್ತೋತ್ರಮಾಡಿಕೊಳ್ಳಲಿಕ್ಕೆ ಯೋಗ್ಯವಾದ ಕಠಿಣವ್ರತವುಳ್ಳವರು || ೨೮ ||

ಭಾ || (೧) ದ್ರವ್ಯಂ ಜುಹ್ವತೀತಿ ದ್ರವ್ಯಯಜ್ಞಾಃ । ತಪಃ ಪರಮೇಶ್ವರಾರ್ಪಣಬುದ್ಧ್ಯಾ ತತ್ರ ಜುಹ್ವತೀತಿ ತಪೋಯಜ್ಞಾ ಇತ್ಯಾದಿ || (೨) ಇದಂ ತಪೋ ಹವಿಃ ಏತದ್ಬ್ರಹ್ಮಾಗ್ನೌ ಜುಹೋಮಿ ತತ್ಪೂಜಾರ್ಥಮಿತಿ ಹೋಮಃ । ತದರ್ಪಣ ಏವ ಚ ಹೋಮಬುದ್ಧಿಃ || ೨೮ ||

ಅ || (೧) ದ್ರವ್ಯವನ್ನು ಹೋಮ ಮಾಡುವವರು ಕೃಚ್ಛ್ರಚಾಂದ್ರಾಯಣ ಮೊದಲಾದ ತಪಸ್ಸನ್ನು ಸರ್ವೋತ್ತಮನಾದ ಶ್ರೀಹರಿಯಲ್ಲಿ ಸಮರ್ಪಿಸಬೇಕೆಂಬುವ ಬುದ್ಧಿಯಿಂದ ಶ್ರೀಹರಿಯನ್ನು ಹೋಮಿಸುವವರು ತಪೋಯಜ್ಞಾಃ ಎನಿಸುತ್ತಾರೆ. ಇತ್ಯಾದಿ (೨) ಈ ತಪಸ್ಸನ್ನು ಹವಿಸ್ಸನ್ನು ಬ್ರಹ್ಮನೆಂಬ ಅಗ್ನಿಯಲ್ಲಿ ಹೋಮಿಸುತ್ತೇನೆ ಶ್ರೀಹರಿಯ ಪೂಜೆಗೋಸ್ಕರ ಮಾಡುತ್ತೇನೆಂಬುವುದೇ ಹೋಮವು. ಶ್ರೀಹರಿಗೆ ಅರ್ಪಿಸುವುದೇ ಹೋಮವೆಂಬುವ ಬುದ್ಧಿಯು (ಅಂದರೆ ತಪಸ್ಸು ಮೊದಲಾದುದನ್ನು ಶ್ರೀಹರಿಗೆ ಅರ್ಪಿಸಿದರೇನೇ ಯಜ್ಞವಾಗುವುದು ) || ೨೮ ||

೨೯ || ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಽಪರೇ ।
ಪ್ರಾಣಾಪಾನಗತೀ ರುಧ್ವಾ ಪ್ರಾಣಾಯಾಮಪರಾಯಣಾಃ || ೨೯ ||

ಅ || ತಥಾ = ಹಾಗೆಯೇ ಪ್ರಾಣಾಯಾಮಪರಾಯಣಾಃ = ಪ್ರಾಣಾಯಾಮವನ್ನು ಮಾಡುವುದರಲ್ಲಿ ಆಸಕ್ತರಾದ, ಅಪರೇ = ಕೆಲವರು, ಪ್ರಾಣಾಪಾನಗತೀ = ಪ್ರಾಣಾಖ್ಯ ವಾಯುವಿನ ವ್ಯಾಪಾರವನ್ನೂ ಅಪಾನಾಖ್ಯ ವಾಯುವಿನ ವ್ಯಾಪಾರವನ್ನೂ, ರುಧ್ವಾ = ತಡೆದು, ಅಪಾನೇ ಅಪಾನಾಖ್ಯ ವಾಯುವಿನಲ್ಲಿ, ಪ್ರಾಣಂ = ಪ್ರಾಣಾಖ್ಯ ವಾಯುವನ್ನು, ಜುಹ್ವತಿ = ಪ್ರವೇಶಮಾಡಿಸುತ್ತಾರೆ ಪ್ರಾಣೇ = ಪ್ರಾಣಾಖ್ಯ ವಾಯುವಿನಲ್ಲಿ, ಅಪಾನಂ = ಅಪಾನಾಖ್ಯ ವಾಯು ವ್ಯಾಪಾರವನ್ನು, ಜುಹ್ವತಿ = ಹೋಮಿಸುತ್ತಾರೆ ||೨೯||

ಭಾ || ಅಪರೇ ಪ್ರಾಣಾಯಾಮಪರಾಯಣಾಃ ಪ್ರಾಣಮಪಾನೇ ಜುಹ್ವತಿ ಅಪಾನಂ ಚ ಪ್ರಾಣೇ । ಕುಂಭಕಸ್ಥಾ ಏವ ಭವಂತೀತ್ಯರ್ಥಃ || ೨೯ ||

ಅ || ಪ್ರಾಣಾಯಾಮದಲ್ಲಿ ಆಸಕ್ತರಾದ ಕೆಲವರು ಪ್ರಾಣಾಖ್ಯವಾಯುವನ್ನು ಅಪಾನನಲ್ಲಿಯೂ ಅಪಾನನನ್ನು ಪ್ರಾಣಾಖ್ಯವಾಯುವಿನಲ್ಲಿಯೂ ಹೋಮಿಸುತ್ತಾರೆ ಕುಂಭಕರೂಪ ಪ್ರಾಣಾಯಾಮವನ್ನೇ ಮಾಡುತ್ತಾರೆ || ೨೯ ||

೩೦ || ಅಪರೇ ನಿಯತಾಹಾರಾಃ ಪ್ರಾಣಾನ್ಪ್ರಾಣೇಷು ಜುಹ್ವತಿ ।
ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ || ೩೦ ||

ಅ || ಅಪರೇ = ಇನ್ನು ಕೆಲವರು, ನಿಯತಾಹಾರಾಃ = ಆಹಾರಗಳನ್ನು ಕಡಿಮೆ ಮಾಡಿಕೊಂಡವರಾಗಿ, (ಅಂದರೆ ಶರೀರಧಾರಣೆಗೆ ಉಪಯೋಗವಾಗುವಷ್ಟು ಮಾತ್ರ ಆಹಾರಾದಿಗಳನ್ನು ತೆಗೆದುಕೊಳ್ಳುವವರಾಗಿ) ಪ್ರಾಣಾನ್ = ಕಿವಿ ಮೊದಲಾದ ಜ್ಞಾನೇಂದ್ರಿಯ ವ್ಯಾಪಾರಗಳನ್ನು, ಪ್ರಾಣೇಷು = ಜ್ಞಾನೇಂದ್ರಿಯಗಳಲ್ಲಿ, ಜುಹ್ವತಿ = ಹೋಮಿಸುತ್ತಾರೆ. (ಅಂದರೆ—ಆಹಾರಗಳನ್ನು ಕಡಿಮೆಮಾಡಿಕೊಂಡದ್ದರಿಂದ ಇಂದ್ರಿಯಗಳ ಶಕ್ತಿಯು ಹ್ರಾಸವಾಗುವ ಕಾರಣ ಇಂದ್ರಿಯಗಳನ್ನು ಕೆಟ್ಟ ವಿಷಯಗಳಲ್ಲಿ ಹೋಗದಂತೆ ಮಾಡಿ

ತಮ್ಮ ಅಧೀನದಲ್ಲಿ ಇಟ್ಟುಕೊಳ್ಳುತ್ತಾರೆ.) (ಇದೂ ಒಂದು ವಿಧವಾದ ಯಜ್ಞವು) ಅಥವಾ ವಾಗಾದಿ ಇಂದ್ರಿಯಾಭಿಮಾನಿ ದೇವತೆಗಳನ್ನು ಮನಸ್ಸು ಮೊದಲಾದವುಗಳಿಗೆ ಅಭಿಮಾನಿಗಳಾದ ಉತ್ತಮ ದೇವತೆಗಳ ಅಧೀನರೆಂದು ಧ್ಯಾನಮಾಡುತ್ತಾರೆ. (ಈ ಪಕ್ಷದಲ್ಲಿ ಶ್ರೀಹರಿಯ ಪೂಜೆಗಾಗಿ ಆಹಾರಗಳನ್ನು ಕಡಿಮೆ ಮಾಡಿಕೊಳ್ಳುವುದು ಪ್ರತ್ಯೇಕ ಯಜ್ಞವು.) ಏತೇ ಸರ್ವೇಽಪಿ= ಇವರೆಲ್ಲರೂ, ಯಜ್ಞವಿದಃ= ನಾನಾವಿಧಗಳಾದ ಯಜ್ಞಗಳ ತತ್ವಗಳನ್ನು ತಿಳಿದವರು ಯಜ್ಞಕ್ಷಪಿತಕಲ್ಮಷಾಃ= ಯಜ್ಞಗಳನ್ನು ಮಾಡಿ ಪಾಪಗಳನ್ನು ಕಳೆದುಕೊಂಡವರು. ॥ ೩೦ ॥

ಪೀ—ಹೀಗೆ ಯಜ್ಞಗಳ ಭೇದಗಳನ್ನು ತಿಳಿದುಕೊಂಡು ಆ ಯಜ್ಞಗಳನ್ನು ಮಾಡುವವರಿಗೂ ಮಾಡದಿರುವವರಿಗೂ ಫಲಭೇದಗಳನ್ನು ಹೇಳುತ್ತಾರೆ—

**ಗೀ ॥ ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಂ ।**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥೩೧॥**

ಅ ॥ ಯಜ್ಞಶಿಷ್ಟಾಮೃತಭುಜಃ= ಯಜ್ಞಗಳನ್ನು ಮಾಡುತ್ತಾ ಯಜ್ಞಗಳಲ್ಲಿ ದೇವತೆಗಳಿಗಾಗಿ ಕೊಟ್ಟು ಮಿಕ್ಕುಳಿದ ಅಮೃತತುಲ್ಯವಾದ ಹವಿಶ್ಶೇಷವನ್ನು ಉಣ್ಣುವವರು, ಸನಾತನಂ= ಅನಾದಿ ನಿತ್ಯನಾದ, ಬ್ರಹ್ಮ= ಪರಬ್ರಹ್ಮನನ್ನು, ಯಾಂತಿ= ಹೊಂದುತ್ತಾರೆ ಅಯಜ್ಞಸ್ಯ= ಯಾಗಾದಿಗಳನ್ನು ಮಾಡದಿರುವ ಮನುಷ್ಯರಿಗೆ, ಕುರುಸತ್ತಮ= ಕುರುಗಳಲ್ಲಿ ಶ್ರೇಷ್ಠನಾದ ಅರ್ಜುನನೇ, ಅಯಂ ಲೋಕಃ= ಅತ್ಯಲ್ಪ ಸುಖವುಳ್ಳ ಈ ಮನುಷ್ಯಲೋಕವೇ, ನಾಸ್ತಿ= ದೊರೆಯಲಾರದು ಅನ್ಯಃ= ಹೆಚ್ಚು ಸುಖವುಳ್ಳ ಸ್ವರ್ಗ ಮೊದಲಾದ ಪರಲೋಕವು, ಕುತಃ= ಹೇಗೆ ದೊರೆಯಬಹುದು (ವಿಶೇಷ ಸುಖಸಾಧನವಾದ ಸ್ವರ್ಗಾದಿ ಪರಲೋಕವೂ ಸರ್ವಥಾ ದೊರೆಯಲಾರದು) ಆದುದರಿಂದ ಯಜ್ಞವನ್ನು ಅವಶ್ಯವಾಗಿ ಮಾಡಬೇಕು ॥ ೩೧ ॥

**ಭಾ ॥ (೧) ನಿಯತಾಹಾರತ್ವೇನೈವ ಪ್ರಾಣಶೋಷಾತ್ಪ್ರಾಣಾನ್ಪ್ರಾಣೇಷು ಜುಹ್ವತಿ ॥ (೨) ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇಜ್ಜ್ಞಾನ ಆತ್ಮನೀತ್ಯಾದಿಶ್ರುತ್ಯುಕ್ತಪ್ರಕಾರೇಣ ವಾ ॥ (೩) ಅನ್ಯದಪಿ ಗ್ರಂಥಾಂತರೇ ಸಿದ್ಧಂ । ಯದಸ್ಯಾಲ್ಪಾಶನಂ ತೇನ ಪ್ರಾಣಾನ್ ಪ್ರಾಣೇಷು ವೈ ಹುತಾ ಇತಿ ॥ ೩೦, ೩೧ ॥**

ಅ ॥ ಇಂದ್ರಿಯಗಳಿಗೆ ದೊರೆಯುವ ಬಹಳ ವಿಷಯಗಳನ್ನು ಬಿಟ್ಟು ದೇಹಧಾರಣೆಗೆ ಉಪಯೋಗವಾಗುವಷ್ಟು ಮಾತ್ರ ಆಹಾರಗಳನ್ನು ತೆಗೆದುಕೊಳ್ಳುವುದರಿಂದಲೇ (ಆಹಾರಗಳನ್ನು ಕಡಿಮೆಮಾಡಿಕೊಳ್ಳುವುದರಿಂದಲೇ) ಇಂದ್ರಿಯಗಳ ಶಕ್ತಿಯನ್ನು ಹ್ರಾಸಮಾಡಿಕೊಂಡು ಜ್ಞಾನೇಂದ್ರಿಯ ವ್ಯಾಪಾರಗಳನ್ನು, ಜ್ಞಾನೇಂದ್ರಿಯಗಳಲ್ಲಿ ಹೋಮಿಸುತ್ತಾರೆ. (ಅಂದರೆ ಇಂದ್ರಿಯ ವ್ಯಾಪಾರಗಳನ್ನು ಕಡಿಮೆ ಮಾಡಿಕೊಳ್ಳುತ್ತಾರೆ) (೨) (ಪ್ರಾಣಾನ್ ಇತ್ಯಾದಿಗಳಿಗೆ ರೀತ್ಯಂತರದಿಂದ ಅರ್ಥ ಹೇಳುತ್ತಾರೆ—) ಜ್ಞಾನಿಯು ವಾಗಾದಿ ಇಂದ್ರಿಯಾಭಿಮಾನಿ ದೇವತೆಗಳನ್ನು ಮನಸ್ಸು ಮೊದಲಾದ ಇಂದ್ರಿಯಾಭಿಮಾನಿಗಳಾದ ಉತ್ತಮ ದೇವತೆಗಳ ಅಧೀನರೆಂದು ಧ್ಯಾನಿಸುತ್ತಾರೆ ಇದು ಮೊದಲಾದ ಶ್ರುತಿಗಳಲ್ಲಿ ಹೇಳಿದ ಪ್ರಕಾರವೂ (ಅರ್ಥವನ್ನು ಇಟ್ಟುಕೊಳ್ಳಬೇಕು) (೩) (ಹಾಗಾದರೆ ಶ್ರುತಿಸಿದ್ಧವಾದ ಪ್ರಯುಕ್ತ ೨ನೇ ಅರ್ಥವೇ ಇರಬಹುದು. ಹಿಂದಿನ ಅರ್ಥವು ಏತಕ್ಕೆಂದರೆ) ಆ ಅರ್ಥವೂ ಕೂಡ ಬೇರೆ ಗ್ರಂಥಗಳಲ್ಲಿ ಸಿದ್ಧವಾಗಿದೆ ಸಾಧಕನಿಗೆ ಯಾವುದು ಅಲ್ಪವಾದ ಭೋಜನವಿದೆಯೋ, ಅದರಿಂದ ಜ್ಞಾನೇಂದ್ರಿಯ ವ್ಯಾಪಾರ

ಳು ಜ್ಞಾನೇಂದ್ರಿಯಗಳಲ್ಲಿ ಹೋಮಿಸಲ್ಪಡುತ್ತಾವೆಂದು ಹೇಳಲ್ಪಡುತ್ತದೆ. ಅಂದರೆ ಅಲ್ಪಾಶನದಿಂದ ಂದ್ರಿಯಗಳನ್ನು ನಿಗ್ರಹಿಸಿಕೊಳ್ಳುತ್ತಾರೆ) ॥ ೩೦, ೩೧ ॥

ಾ ॥ (೧) ತತ್ಪೂಜಾತ್ವೇನೇಂ(ನೈವೇಂ)ದ್ರಿಯಾದಿ(ಸರ್ವ)ಸಂಯಮಂ ಕುರ್ವಂತಿ । ಯ-ಜ್ಞೇನೈವೇತಿ ಸರ್ವತ್ರಾಪ್ಯನ್ವೀಯತೇ ॥ (೨) ತೇನೈವ ತಂ ಪೂಜಯೇದ್ವಾ ವಿಹಿತೈ-ರ್ವಾಽನ್ಯಸಾಧನೈಃ । ಸ ಏವ ವಿಷ್ಣೋರ್ಯಜ್ಞಃ ಸ್ಯಾನ್ಮಾನಸೋ ವಾ ಸ ಬಾಹ್ಯಕ ಇತಿ ಬ್ರಹ್ಮವೈವರ್ತೇ ॥ ೨೭—೩೧ ॥

ಅ ॥ (೧) ಶ್ರೀಹರಿಗೆ ಪೂಜಾರೂಪವಾಗಿ ಇಂದ್ರಿಯಾದಿಗಳನ್ನು ನಿಗ್ರಹಿಸಿಕೊಳ್ಳುತ್ತಾರೆ. (ತಮ್ಮ ಧೀನದಲ್ಲಿ ಇಟ್ಟುಕೊಳ್ಳುತ್ತಾರೆ,) (೨) (ಇಲ್ಲಿ ಯಜ್ಞೇನೈವ ಎಂಬುವುದರಿಂದ ಕ್ರಿಯಾಯಜ್ಞದಲ್ಲಿಯೂ ಭಿಮಾನವನ್ನು ಬಿಡಬೇಕೆಂದು ಹೇಳಿದ ಕಾರಣ ದೈವಮೇವ ಎಂದು ಹೇಳಿದ್ದು ಹೇಗೆ ಕೂಡುತ್ತದೆ ಂದರೆ—) ಯಜ್ಞೇನೈವ ಎಂಬುದಕ್ಕೆ ಎಲ್ಲಾ ಕಡೆಗಳಲ್ಲಿಯೂ ಅನ್ವಯವನ್ನು ಇಟ್ಟುಕೊಳ್ಳಬೇಕು. ಶ್ರೀ ರಿಯ ಸ್ವರೂಪಭೂತವಾದ ಆನಂದ ಮೊದಲಾದ ಹವಿಸ್ಸಿನಿಂದ ಆ ಅಗ್ನಿಯಲ್ಲಿಯೇ. ಶ್ರೀಹರಿಯನ್ನು ೂಜಿಸಬೇಕೆಂದು ಹೇಳಿದ್ದು ಯಾವುದೋ ಶಾಸ್ತ್ರವಿಹಿತಗಳಾದ ದ್ರವ್ಯಾದಿಗಳೇ ಸಾಧನಗಳಾಗಿವುಳ್ಳ ಪ್ರಸಿದ್ಧ ುಜ್ಞಾದಿಗಳಿಂದ ಆ ಅಗ್ನಿಯಲ್ಲಿಯೇ ಪೂಜಿಸಬೇಕೆಂದು ಹೇಳಿದ್ದು ಯಾವುದೋ, ಅಂದರೆ ಮಾನಸ ುಜ್ಞವಾದ ಜ್ಞಾನ ಮೊದಲಾದುದು, ಮತ್ತು ಯಾವುದು ಬಾಹ್ಯವಾದ ದ್ರವ್ಯಯಜ್ಞವೋ ಅದೇ ಶ್ರೀವಿಷ್ಣು ನ ಯಜ್ಞವೆನಿಸುತ್ತದೆ ॥ ೨೭, ೩೧ ॥

೨ ॥ ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।
ಕರ್ಮಜಾನ್ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥ ೩೨ ॥

ಅ ॥ ಏವಂ=ದೈವಮೇವ ಇದು ಮೊದಲಾದ ೬ ಶ್ಲೋಕಗಳಿಂದ ಹೇಳಿದ ಪ್ರಕಾರ, ಬಹುವಿಧಾಃ= ಾನಸಿಕ, ವಾಚಿಕ ಕಾಯಿಕಗಳೆಂದು ಬಹುಪ್ರಕಾರಗಳಾದ, ಯಜ್ಞಾಃ=ಯಾಗಗಳೂ. (ಶ್ರೀಹರಿಯೇ ರ್ವ ಯಜ್ಞಗಳನ್ನು ಭೋಗಿಸುವವನಾದುದರಿಂದ) ಬ್ರಹ್ಮಣಃ=ಶ್ರೀಹರಿಯ, ಮುಖೇ=ಮುಖದಲ್ಲಿ, ತತಾಃ=ವಿಸ್ತೃತಗಳಾಗಿವೆ (ಯಜ್ಞಗಳು ಬಹುವಿಧಗಳಾಗಿದ್ದರೆ ಜ್ಞಾನಯಜ್ಞಾದಿಗಳೇ ಸಾಕು, ರ್ಮರೂಪವಾದ ಯುದ್ಧವು ಏತಕ್ಕೆ ಎಂದರೆ—) ತಾನ್ ಸರ್ವಾನ್=ಹಿಂದೆ ಹೇಳಿದ ಎಲ್ಲಾ ಯಜ್ಞ ಳನ್ನು, ಕರ್ಮಜಾನ್=ಕರ್ಮರೂಪಗಳನ್ನಾಗಿ ವಿದ್ಧಿ=ತಿಳಿ ಅಥವಾ ಮಾನಸ ವಾಚಿಕ ಕಾಯಿಕ ರ್ಮಗಳಿಂದ ಹುಟ್ಟುವವುಗಳನ್ನಾಗಿ ತಿಳಿದುಕೋ. ಏವಂ ಜ್ಞಾತ್ವಾ=ಎಲ್ಲಾ ಯಜ್ಞಗಳೂ ಕರ್ಮಾತ್ಮಕ ಳೆಂದು ತಿಳಿದುಕೊಂಡು, ವಿಮೋಕ್ಷ್ಯಸೇ=ಯುದ್ಧ ಮೊದಲಾದ ಅವರವರಿಗೆ ವಿಹಿತಗಳಾದ ಕರ್ಮಗ ನ್ನು ಮಾಡಿಯೇ ಬಿಡುಗಡೆಹೊಂದುವಿ ॥ ೩೨ ॥

ಪೀ—ಬ್ರಹ್ಮಣಃ ಮುಖೇ ವಿತತಾಃ ಎಂಬುದಕ್ಕೆ ವೇದದಲ್ಲಿ ಹೇಳಲ್ಪಟ್ಟವೆ, ಎಂಬುವ ಪರರ ್ಯಾಖ್ಯಾನವು ಮುಖೇ ಎಂಬ ಶಬ್ದವು ವ್ಯರ್ಥವಾಗುವುದರಿಂದ ಅಯುಕ್ತವೆಂಬುವ ಅಭಿಪ್ರಾಯದಿಂದ ೀಳುತ್ತಾರೆ—

ಾ ॥ (೧) ಬ್ರಹ್ಮಣಃ ಪರಮಾತ್ಮನೋ ಮುಖೇ । ಅಹಂ ಹಿ ಸರ್ವಯಜ್ಞಾನಾಂ ಭೋ-ಕ್ತಾ ಚ ಪ್ರಭುರೇವ ಚೇತಿ ಹಿ ವಕ್ಷ್ಯತಿ ॥ (೨) ಮಾನಸವಾಚಿಕಕಾಯಿಕಕರ್ಮಜಾ

ಏವ ಹಿ ತೇ ಸರ್ವೇ ॥ (೩) ಏವಂ ಜ್ಞಾತ್ವಾ ತಾನಿ ಕರ್ಮಾಣಿ ಕೃತ್ವಾ ವಿಮೋಕ್ಷ್ಯ-
ಸೇ ॥ (೪) ಯುದ್ಧಂ ಪರಿತ್ಯಜ್ಯ ಯನ್ಮೋಕ್ಷಾರ್ಥಂ ಕರಿಷ್ಯಸಿ ತದಪಿ ಕರ್ಮ । ಅತೋ
ವಿಹಿತಂ ನ ತ್ಯಾಜ್ಯಮಿತಿ ಭಾವಃ ॥ ೩೨ ॥

ಅ ॥ (೧) ಬ್ರಹ್ಮಣಃ=ಪರಮಾತ್ಮನ, ಮುಖದಲ್ಲಿ ತಾನೇ ಎಲ್ಲಾ ಯಜ್ಞಗಳನ್ನು ಭೋಗಿಸುವವನು ಸರ್ವರಿಗೆ ಪ್ರಭುವಾಗಿರುತ್ತೇನೆ, ಎಂದು ಮುಂದಕ್ಕೆ ಶ್ರೀಕೃಷ್ಣ ಪರಮಾತ್ಮನೇ ಹೇಳುವನು. (೨) (ಉಪಾಸನಾದಿಗಳೆಲ್ಲವೂ ಕರ್ಮದಿಂದ ಹುಟ್ಟಿದವುಗಳಾಗದಿರುವುದರಿಂದ **ಕರ್ಮಜಾನ್ ವಿದ್ಧಿ ತಾನ್ ಸರ್ವಾನ್** ಎಂದು ಹೇಳಿದ್ದು ಹೇಗೆಂದರೆ—) ಆ ಉಪಾಸನಾದಿಗಳೆಲ್ಲವೂ ಮಾನಸ ವಾಚಿಕ ಕಾಯಿಕ ಕರ್ಮಗಳಿಂದ ಹುಟ್ಟಿದವುಗಳೇ ಆಗಿವೆ (೩) ಎಲ್ಲಾ ಯಜ್ಞಗಳು ಕರ್ಮದಿಂದ ಹುಟ್ಟಿದವುಗಳೆಂದು ತಿಳಿದರೆ ಅಂತಹ ಯುದ್ಧ ಮೊದಲಾದ ತನಗೆ ವಿಹಿತಗಳಾದ ಕರ್ಮಗಳನ್ನು ಮಾಡಿಯೇ ಸಂಸಾರದಿಂದ ತನ್ನನ್ನು ಬಿಡಿಸಿಕೊಳ್ಳಲಿಕ್ಕೆ ಇಚ್ಛಿಸುತ್ತಿ ಅಂದರೆ ಎಲ್ಲವೂ ಕರ್ಮದಿಂದ ಹುಟ್ಟಿದವುಗಳೆಂದು ಜ್ಞಾನವು ಬಂದರೆ ನಿನಗೇನೇ ಮೋಕ್ಷಕ್ಕಾಗಿ ಯುದ್ಧಾದಿಗಳನ್ನು ಮಾಡಬೇಕೆಂಬುವ ಇಚ್ಛೆಯು ಉಂಟಾಗುವುದು (೪) ಯುದ್ಧವನ್ನು ಬಿಟ್ಟು ಮೋಕ್ಷಕ್ಕಾಗಿ ಉಪಾಸನಾದಿಗಳನ್ನು ಯಾವುದನ್ನು ಮಾಡುತ್ತೀಯೋ ಅದು ಕರ್ಮವೇ (ಅಂತೂ ನೀನು ವಿಧಿವಿಹಿತವಾದ ಕರ್ಮವನ್ನು ಬಿಟ್ಟಂತೆ ಮಾತ್ರ ಆಗುವುದು, ಕರ್ಮವನ್ನು ಬಿಟ್ಟಂತೆ ಆಗುವುದಿಲ್ಲ ಆದಕಾರಣ ಹೀಗೆ ತಿಳಿದ ನಿನಗೆ ಶಾಸ್ತ್ರವಿಹಿತಗಳಾದ ಯುದ್ಧಾದಿಗಳನ್ನು ಬಿಡಬಾರದೆಂಬ ಬುದ್ಧಿಯು ಹುಟ್ಟುವುದು ॥ ೩೨ ॥

ತಾ ॥ (೧) ಶ್ರೋತ್ರಾದೀನಿತ್ಯಾದಿಷ್ವಿಜ್ಯಾನುಕ್ತೇರಿಜ್ಯೋಽನ್ಯ ಇತಿ ಶಂಕಾಂ ನಿವಾರಯತಿ ।
ವಿತತಾ ಬ್ರಹ್ಮಣೋ ಮುಖ ಇತಿ ॥ (೨) ಸರ್ವಯಜ್ಞೈಃ ಪರಂಬ್ರಹ್ಮ ಯಾಜ್ಯಂ
ವಿಷ್ಣ್ವಾಖ್ಯಮವ್ಯಯಮಿತಿ ಚ ॥ ೩೨ ॥

ಅ ॥ (೧) ಶ್ರೋತ್ರಾದೀನಿ ಇತ್ಯಾದಿಗಳಲ್ಲಿ ಇಜ್ಯವನ್ನು (ಯಾಗೋದ್ದೇಶ್ಯವನ್ನು) ಹೇಳದಿದ್ದುದರಿಂದ ಇಜ್ಯನು ಇನ್ನೊಬ್ಬನೆಂಬ ಶಂಕೆಯು ಬರುವುದು. ಅಂತಹ ಶಂಕೆಯನ್ನು **ವಿತತಾ ಬ್ರಹ್ಮಣೋ ಮುಖೇ** ಎಂಬುವುದರಿಂದ ನಿವಾರಿಸುತ್ತಾರೆ (೨) (ಸಾಮಾನ್ಯವಾಗಿ ತೋರಿದ ಅರ್ಥವೇ ಏಕೆ ಆಗಲಾರದೆಂದರೆ-)ಎಲ್ಲಾ ಯಜ್ಞಗಳಿಂದಲೂ ನಾಶವಿಲ್ಲದಿರುವ ವಿಷ್ಣುವೆನಿಸಿದ ಪರಬ್ರಹ್ಮನೇ ಪೂಜಿಸಲ್ಪಡತಕ್ಕವನು ॥ ೩೨ ॥

ಪೀ—ಹಿಂದೆ ಹೇಳಿದ ಯಜ್ಞಗಳಲ್ಲಿ ಯಾವ ಯಜ್ಞವು ಶ್ರೇಷ್ಠವೆಂದರೆ—

ಗೀ ॥ ಶ್ರೇಯಾನ್ ದ್ರವ್ಯಮಯಾದ್ಯಜ್ಞಾಜ್ಜ್ಞಾನಯಜ್ಞಃ ಪರಂತಪ ।
ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥ ೩೩ ॥

ಅ ॥ ಪರಂತಪ=ಅರ್ಜುನನೇ, ದ್ರವ್ಯಮಯಾತ್ ಯಜ್ಞಾತ್=ದ್ರವ್ಯತ್ಯಾಗಾದಿರೂಪವಾದ ಯಜ್ಞಕ್ಕಿಂತ, (ಹಿಂದೆ ಹೇಳಿದ ಬಹುವಿಧ ಯಜ್ಞಗಳಿಗಿಂತಲೂ,)ಜ್ಞಾನಯಜ್ಞಃ=ಭಗವಜ್ಜ್ಞಾನಸಂಪಾದನರೂಪವಾದ ಯಜ್ಞವು, ಶ್ರೇಯಾನ್=ಶ್ರೇಷ್ಠವು, (ಏಕೆಂದರೆ-) ಪಾರ್ಥ=ಅರ್ಜುನನೇ, ಅಖಿಲಂ=ಉಪಾಸನ ಮೊದಲಾದ ಅಂಗಗಳಿಂದೊಡಗೂಡಿದ, ಅಥವಾ ಅಖಿಲಂ=ಅತ್ಯಲ್ಪವಾದುದಾಗ್ಯೂ, ಸರ್ವಂ ಕರ್ಮ= ಎಲ್ಲಾ ಕರ್ಮವು, ಜ್ಞಾನೇ=ಜ್ಞಾನವು ಹುಟ್ಟಿದೊಡನೆಯೇ, ಪರಿಸಮಾಪ್ಯತೇ=ಸಂಪೂರ್ಣವಾಗುತ್ತದೆ. (ತತ್ವಜ್ಞಾನರೂಪ ಫಲದಿಂದಲೇ ಸಫಲವಾಗುತ್ತದೆ) ॥ ೩೩ ॥

**ಭಾ ॥ ಅಖಿಲಮುಪಾಸನಾದ್ಯಂಗಯುಕ್ತಂ । ಜ್ಞಾನಫಲಮೇವೇತ್ಯರ್ಥಃ ॥ ೩೩ ॥**

ಅ ॥ ಅಖಿಲಂ=ಉಪಾಸನ ಮೊದಲಾದ ಅಂಗಗಳಿಂದೊಡಗೂಡಿದ್ದು, (**ಜ್ಞಾನೇ ಪರಿಸಮಾಪ್ಯತೇ** ಎಂಬುದಕ್ಕೆ ಜ್ಞಾನವು ಹುಟ್ಟಿದ ಮೇಲೆ ಕರ್ಮ ಮಾಡಕೂಡದೆಂದು ಅನ್ಯಥಾ ಪ್ರತೀತಿಯು ಬರುವುದು. ಅದನ್ನು ನಿರಾಕರಿಸುವುದಕ್ಕಾಗಿ ಅದರ ತಾತ್ಪರ್ಯ ಹೇಳುತ್ತಾರೆ-) ಜ್ಞಾನವೇ ಫಲವಾಗಿ ಉಳ್ಳದ್ದು ಎಂದು ಅರ್ಥವು ॥ ೩೩ ॥

• ಪೀ—ದ್ರವ್ಯಮಯವಾದ ಯಜ್ಞದ್ದೆಶೆಯಿಂದ ಜ್ಞಾನಯಜ್ಞವು ಶ್ರೇಷ್ಠವೆಂಬುವಲ್ಲಿ **ಸರ್ವಂ ಕರ್ಮ** ಎಂಬುವುದರಿಂದ ಹೇತುವನ್ನು ಹೇಳುತ್ತಾರೆ ಅದರಲ್ಲಿ ಸರ್ವ ಶಬ್ದಕ್ಕೂ ಅಖಿಲ ಶಬ್ದಕ್ಕೂ ಒಂದೇ ಅರ್ಥವೆಂದು ತೋರುವುದರಿಂದ ಜ್ಞಾನವು ಹುಟ್ಟಿದ ಮೇಲೆ ಕರ್ಮವು ಇಲ್ಲ ಎಂಬುವ ಅನ್ಯಥಾಪ್ರತೀತಿಯನ್ನು ನಿರಾಕರಿಸುವುದಕ್ಕಾಗಿ ಹೇಳುತ್ತಾರೆ—

**ತಾ ॥ (೧) ಸರ್ವಂ ಕರ್ಮಾಖಿಲಮಾ ಸಮಂತಾದಲ್ಪಂ ಜ್ಞಾನೇ ಪರಿಸಮಾಪ್ಯತೇ ಜ್ಞಾನೇ ಜಾತೇ ಪೂರ್ಯತೇ ॥ (೨) ಸಮಾಪ್ತವಿದ್ಯಾನ್ಧನುಷಿ ಶ್ರೇಷ್ಠಾನ್ಸ್ಯಾಂತ್ಸಪ್ತ ಮನ್ಯಸ ಇತಿವತ್ಸಮಾಪ್ತಿಶಬ್ದೋಽತ್ರ ಪೂರ್ತಿವಾಚೀ ॥ (೩) ಜ್ಞಾನಾಸಿನಾಽತ್ಮನಶ್ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠೇತಿ (ಷ್ಠೇತ್ಯಾದಿ)ಪುನರ್ಯೋಗಕಥನಾತ್॥೩೩॥**

ಅ ॥ (೧) ಸರ್ವಕರ್ಮ=ಎಲ್ಲಾ ಕರ್ಮವು, ಅಖಿಲಂ=ಅತ್ಯಲ್ಪವಾದುದು ಕೂಡ, ಜ್ಞಾನೇ ಪರಿಸಮಾಪ್ಯತೇ=ಜ್ಞಾನವು ಹುಟ್ಟಿದರೆ ಸಂಪೂರ್ಣವಾಗುತ್ತದೆ (೨) (ಈ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ—) ಧನುರ್ವಿದ್ಯಾ ವಿಷಯದಲ್ಲಿ ಸಂಪೂರ್ಣ ವಿದ್ಯೆಯುಳ್ಳ ಕೃಷ್ಣ ಸಾತ್ಯಕಿಯರಿಂದ ಕೂಡಿದ ಐದು ಮಂದಿ ಪಾಂಡವರನ್ನು ಹೀಗೆ ಏಳು ಮಂದಿ ಶ್ರೇಷ್ಠರನ್ನು ತಿಳಿಯುತ್ತಿ, (ಎಂದು ಉದ್ಯೋಗ ಪರ್ವದಲ್ಲಿ ಧೃತರಾಷ್ಟ್ರನ ಹತ್ತಿರ ಸಂಜಯನ ಮಾತು) ಎಂಬುವುದರಂತೆ ಸಮಾಪ್ತಿ ಶಬ್ದವು ಇಲ್ಲಿ ಸಂಪೂರ್ಣ ಎಂಬುವ ಅರ್ಥವನ್ನು ಹೇಳುತ್ತದೆ (೩) (ಪೂರ್ತಿಯೆಂಬುವ ಅರ್ಥದಲ್ಲಿಯೂ ಸಮಾಪ್ತಿಶಬ್ದವು ಇರಲಿ. ಆದರೂ ಇಲ್ಲಿ ಸಂಪೂರ್ಣವೆಂಬುವ ಅರ್ಥವನ್ನು ಏಕೆ ಇಟ್ಟುಕೊಳ್ಳುವುದು ಸಾಮಾನ್ಯವಾಗಿ ತೋರಿದ ಅರ್ಥವೇ ಏಕೆ ಆಗಲಾರದು ಎಂದರೆ—) ಜ್ಞಾನವೆಂಬುವ ಖಡ್ಗದಿಂದ ಈ ಸಂಶಯವನ್ನು ಛೇದಿಸಿ ಯೋಗವನ್ನು ಮಾಡು ಎಂದು ಜ್ಞಾನಾನಂತರದಲ್ಲಿಯೂ ಕರ್ಮವನ್ನು ಮಾಡಬೇಕೆಂದು ಹೇಳಿದ ಕಾರಣ (ಸಂಪೂರ್ಣವೆಂಬುವ ಅರ್ಥವನ್ನೇ ಇಟ್ಟುಕೊಳ್ಳಬೇಕು) ॥ ೩೩ ॥

ಪೀ—ಕರ್ಮದ್ದೆಶೆಯಿಂದ ಜ್ಞಾನವು ಅಧಿಕವೆಂದು ಹೇಳಿ ಈಗ ಜ್ಞಾನವನ್ನು ಸಂಪಾದಿಸು ಎನ್ನುತ್ತಾರೆ—

**ಗೀ ॥ ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥ ೩೪ ॥**

ಅ ॥ ತತ್=ಕರ್ಮಕ್ಕಿಂತ ಜ್ಞಾನವು ಶ್ರೇಷ್ಠವಾಗಿರುವುದರಿಂದ ಅಥವಾ ಕರ್ಮಗಳು ಜ್ಞಾನದಿಂದಲೇ ಸಫಲಗಳಾಗಿರುವುದರಿಂದ, ತತ್ತ್ವದರ್ಶಿನಃ=ಯಥಾರ್ಥವನ್ನು ಅರಿತ, ಜ್ಞಾನಿನಃ=ಜ್ಞಾನಿಗಳು, ಪ್ರಣಿಪಾತೇನ=ನೀನು ಮಾಡುವ ನಮಸ್ಕಾರದಿಂದಲೂ, ಪರಿಪ್ರಶ್ನೇನ=ನೀನು ಮಾಡುವ ಪ್ರಶ್ನೆಯಿಂದಲೂ,

ಸೇವಯಾ=ನೀನು ಮಾಡುವ ಸೇವೆಯಿಂದಲೂ, ತೇ=ನಿನಗೋಸ್ಕರ, ಜ್ಞಾನಂ=ಜ್ಞಾನವನ್ನು ಹುಟ್ಟಿಸುವ ಶಾಸ್ತ್ರವನ್ನು, ಉಪದೇಕ್ಷ್ಯಂತಿ=ಉಪದೇಶಮಾಡುವರು (ಅವರಿಂದ) ತತ್=ತಿಳಿಯಬೇಕಾದ ತತ್ವವನ್ನು, ವಿದ್ಧಿ=ತಿಳಿದುಕೊಳ್ಳು ॥ ೩೪ ॥

ಪೀ—ತದ್ವಿದ್ಧಿ ಎಂದು ಹೇಳಿದ ಕಾರಣ ಈಗಅರ್ಜುನನಿಗೆ ಜ್ಞಾನವಿಲ್ಲವೆಂದು ತೋರುತ್ತದೆ ಅಂತಹ ಪ್ರತೀತಿಯನ್ನು ನಿವಾರಿಸುತ್ತಾರೆ—

**ಭಾ ॥ ಇದಾನೀಮಪಿ ಜ್ಞಾನ್ಯೇವ ॥ ೩೪ ॥**

ಅ ॥ ಈಗಲೂ ಕೂಡ ಅರ್ಜುನನು ಜ್ಞಾನಿಯೇ ಆಗಿರುತ್ತಾನೆ (ಹೆಚ್ಚು ಜ್ಞಾನವನ್ನು ಸಂಪಾದಿಸಬೇಕೆಂಬುವ ಅಭಿಪ್ರಾಯದಿಂದ **ತದ್ವಿದ್ಧಿ** ಎಂದು ಹೇಳಿದ್ದು) (ಅರ್ಜುನನು ಜ್ಞಾನಿಯಾಗಿದ್ದಾನೆಂದಾದರೆ **ಯಜ್ಜ್ಞಾತ್ವಾ ನ ಪುನಃ** ಎಂದು ಅರ್ಜುನನಿಗೆ ಮೋಹ ಹೇಳಿದ್ದ ಹೇಗೆ ಕೂಡುತ್ತದೆಂದರೆ—) ಆದರೂ ಜ್ಞಾನವು ತಿರೋಹಿತವಾಗಿರುವುದರಿಂದ ಮೋಹವು ಇದೆ ಎಂದು ಹೇಳಿದ್ದು ಕೂಡುತ್ತದೆ. ಅರ್ಜುನನು ಜ್ಞಾನಿಯು ಎಂಬುವಲ್ಲಿ ಪ್ರಮಾಣವು ಮೊದಲೇ ಹೇಳಲ್ಪಟ್ಟಿದೆ. ॥ ೩೪ ॥

**ತಾ ॥ ಜ್ಞಾನಂ ತೇಽಹಂ ಸವಿಜ್ಞಾನಮಿತಿ ವಕ್ಷ್ಯಮಾಣತ್ವಾತ್ಸ್ವಯಮೇವೋಪದೇಕ್ಷ್ಯತಿ ॥ ೩೪ ॥**

ಅ ॥ **ನ ತ್ವೇವಾಹಂ** ಇತ್ಯಾದಿಗಳಿಂದ ಜ್ಞಾನವನ್ನು ಸಂಕ್ಷೇಪದಿಂದ ಉಪದೇಶ ಮಾಡಿದಾಗ್ಯೂ **ಜ್ಞಾನಂ ತೇಽಹಂ ಸವಿಜ್ಞಾನಂ** ಎಂದು ಮುಂದೆ ಹೇಳುವುದರಿಂದ ಶ್ರೀಕೃಷ್ಣನೇ ಮುಂದಕ್ಕೆ ಉಪದೇಶ ಮಾಡುವನು ॥ ೩೪ ॥

ಪೀ—ತಾನು ಉಪದೇಶಿಸುವ ಜ್ಞಾನವನ್ನು ಸ್ತುತಿಸುತ್ತಾರೆ—

**ಗೀ ॥ ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ ।**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥ ೩೫ ॥**

ಅ ॥ ಪಾಂಡವ=ಅರ್ಜುನನೇ, ಯತ್=ನಾನು ಹೇಳುವ ಯಾವ ತತ್ವವನ್ನು, ಜ್ಞಾತ್ವಾ=ತಿಳಿದುಕೊಂಡು, ಏವಂ=ಹಿಂದೆ ಹೇಳಿದಪ್ರಕಾರ, ಪುನಃ=ತಿರುಗಿ ಮೋಹಂ=ಬಂಧು ವಿಷಯಕ ಮೋಹವನ್ನು, ನ ಯಾಸ್ಯಸಿ=ಹೊಂದುವುದದಿಲ್ಲವೋ ಅಥೋ=ಮೋಹವು ನಾಶವಾಗುವುದರಿಂದ, ಯೇನ=ಯಾವ ಜ್ಞಾನದಿಂದ, ಆತ್ಮನಿ=ಸರ್ವಾಂತರ್ಯಾಮಿಯಾದ, ಮಯಿ=ನನ್ನಲ್ಲಿ, ಭೂತಾನಿ=ಪ್ರಾಣಿಗಳನ್ನು, ಅಶೇಷೇಣ=ಸಂಪೂರ್ಣವಾಗಿ (ಅಂದರೆ ಯಾವುದನ್ನು ಬಿಡದೆ) ದ್ರಕ್ಷ್ಯಸಿ=ನೋಡುವಿ (ಅಂದರೆ ನನ್ನನ್ನು ಆಶ್ರಯಿಸಿ ಸಮಸ್ತ ಪ್ರಾಣಿಗಳೂ ಇರುತ್ತಾರೆಂದು ನೋಡುವಿ) ॥ ೩೫ ॥

ಪೀ—**ಯೇನ ಭೂತಾನಿ** ಎಂಬುದಕ್ಕೆ ಯಾವ ಮೋಹದಿಂದ ಸಮಸ್ತ ಪ್ರಾಣಿಗಳನ್ನು ಆತ್ಮನಿ=ತನ್ನಲ್ಲಿಯೂ, (ಜೀವನಲ್ಲಿ)ಅಥೋ ಮಯಿ=ನನ್ನಲ್ಲಿಯೂ(ಶ್ರೀಕೃಷ್ಣನಲ್ಲಿಯೂ)ಕೂಡ ನೋಡುವಿ, ಎಂಬುವ ಅನ್ಯಥಾಪ್ರತೀತಿಯನ್ನು ನಿರಾಕರಿಸುವುದಕ್ಕಾಗಿ ಹೇಳುತ್ತಾರೆ---

**ಭಾ ॥ ತಥಾಽಪ್ಯಭಿಭವಾನ್ಮೋಹಃ । ಮಾ ತೂಕ್ತಾ । ಯೇನ ಜ್ಞಾನೇನ ಮಯ್ಯಾತ್ಮಭೂತೇ ಸರ್ವಭೂತಾನ್ಯಥೋ ತಸ್ಮಾದೇವ ಮೋಹನಾಶಾತ್ಪಶ್ಯಸಿ ॥ ೩೫ ॥**

ಅ || ತತ್ವಜ್ಞಾನದಿಂದ ಮೋಹವು ನಾಶಹೊಂದುವುದರಿಂದ ಸರ್ವಾಂತರ್ಯಾಮಿಯಾದ ನನ್ನಲ್ಲಿ ಸಮಸ್ತ ಪ್ರಾಣಿಗಳನ್ನು ನೋಡುತ್ತಿ. || ೩೫ ||

ಗೀ || ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ |
ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ || ೩೬ ||

ಅ || ಸರ್ವೇಭ್ಯಃ=ಎಲ್ಲಾ, ಪಾಪೇಭ್ಯಃ=ಪಾಪ ಮಾಡುವವರಿಗಿಂತಲೂ, ಪಾಪಕೃತ್ತಮಃ ಅಪಿ ಚೇದಸಿ=ಹೆಚ್ಚು ಪಾಪವನ್ನು ಮಾಡಿದವನಾದಾಗ್ಯೂ, ಸರ್ವಂ ವೃಜಿನಂ=ಎಲ್ಲಾ ಪಾಪವನ್ನು, ಜ್ಞಾನ ಪ್ಲವೇನೈವ=ಜ್ಞಾನವೆಂಬುವ ದೋಣಿಯಿಂದಲೇ, ಸಂತರಿಷ್ಯಸಿ ಏವ=ನಿಶ್ಚಯವಾಗಿಯೂ ದಾಟುವಿ. (ಅಂದರೆ ಪಾಪದಿಂದ ಬಿಡುಗಡೆ ಹೊಂದುವಿ) || ೩೬ ||

ಗೀ || ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ |
ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ || ೩೭ ||

ಅ || ಅರ್ಜುನ=ಅರ್ಜುನನೇ, ಏಧಾಂಸಿ=ಕಟ್ಟಿಗೆಗಳನ್ನು, ಸಮಿದ್ಧಃ=ಚೆನ್ನಾಗಿ ಉರಿಯುತ್ತಿರುವ, ಅಗ್ನಿಃ=ಬೆಂಕಿಯು, ಯಥಾ=ಹೇಗೆ, ಭಸ್ಮಸಾತ್ಕುರುತೇ,=ಸುಟ್ಟುಬಿಡುತ್ತದೋ, ತಥಾ=ಹಾಗೆಯೇ, ಜ್ಞಾನಾಗ್ನಿಃ=ಜ್ಞಾನವೆಂಬಅಗ್ನಿಯು, ಸರ್ವಕರ್ಮಾಣಿ=ಅಪ್ರಾರಬ್ಧಗಳಾದ ಎಲ್ಲಾ ಕರ್ಮಗಳನ್ನು, ಭಸ್ಮಸಾತ್ಕುರುತೇ=ನಾಶಪಡಿಸುತ್ತದೆ. || ೩೭ ||

ಗೀ || ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ |
ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ || ೩೮ ||

ಅ || ಇಹ=ಈ ಲೋಕದಲ್ಲಿ, ತಪಸ್ಸು ಯಜ್ಞ ಮೊದಲಾದುವುಗಳ ಮಧ್ಯದಲ್ಲಿ, ಜ್ಞಾನೇನ ಸದೃಶಂ ತತ್ವಜ್ಞಾನಕ್ಕೆ ಸದೃಶವಾದುದು, ಪವಿತ್ರಂ=ಪಾವನವಾದ ವಸ್ತುವು, ನಹಿ ವಿದ್ಯತೇ=ಇಲ್ಲವೇ ಇಲ್ಲ ತತ್= ಅಂತಹ ಜ್ಞಾನವನ್ನು ಸ್ವಯಂ=ತಾನಾಗಿಯೇ, ಯೋಗಸಂಸಿದ್ಧಃ=ಯೋಗವಿಷಯದಲ್ಲಿ ಚೆನ್ನಾಗಿ ಸಿದ್ಧಿಯುಳ್ಳವನಾಗಿ, (ಅಂದರೆ ಜ್ಞಾನೋಪಾಯದಿಂದ ಕೂಡಿದವನಾಗಿ) ತತ್=ಆ ಜ್ಞಾನವನ್ನು, ಕಾಲೇನ=ಬಹು ಕಾಲದಿಂದ, ವಿಂದತಿ=ಹೊಂದುತ್ತಾನೆ. || ೩೮ ||

ಭಾ || ಕರಣಭೂತಂ ಜ್ಞಾನಂ ಸ್ತೌತಿ ಪುನಃ ಶ್ಲೋಕತ್ರಯೇಣ || ೩೬,೩೭,೩೮ ||

ಅ || ಪುನಃ ಮೂರು ಶ್ಲೋಕಗಳಿಂದ ಮೋಕ್ಷಕ್ಕೆ ಸಾಧನಭೂತವಾದ ತತ್ವಜ್ಞಾನವನ್ನು ಸ್ತುತಿಸುತ್ತಾರೆ. || ೩೬, ೩೭, ೩೮ ||

ಪೀ—ಹೀಗೆ ಜ್ಞಾನವನ್ನು ಸ್ತುತಿಸಿ ಜ್ಞಾನಕ್ಕೆ ಮುಖ್ಯ ಸಾಧನವನ್ನೂ ಫಲವನ್ನೂ ಹೇಳುತ್ತಾರೆ—

ಗೀ || ಶ್ರದ್ಧಾವಾಂಲ್ಲಭತೇ ಜ್ಞಾನಂ ಮತ್ಪರಃ ಸಂಯತೇಂದ್ರಿಯಃ |
ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ || ೩೯ ||

ಅ || ಶ್ರದ್ಧಾವಾನ್=ಆಸ್ತಿಕ್ಯಬುದ್ಧಿಯುಳ್ಳ, ಸಂಯತೇಂದ್ರಿಯಃ=ಇಂದ್ರಿಯಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುವ, ಮತ್ಪರಃ=ನಾನೇ ಸರ್ವೋತ್ತಮನೆಂದು ತಿಳಿದುಕೊಂಡಿರುವ ಮನುಷ್ಯನು, ಜ್ಞಾನಂ=ಅಪರೋಕ್ಷಜ್ಞಾನವನ್ನು, ಲಭತೇ=ಹೊಂದುತ್ತಾನೆ. ಜ್ಞಾನಂ=ತತ್ವಜ್ಞಾನವನ್ನು, ಲಬ್ಧ್ವಾ=ಹೊಂದಿ, ಪರಾಂ=ಉತ್ತಮವಾದ, ಶಾಂತಿಂ=ಮೋಕ್ಷವನ್ನು, ಅಚಿರೇಣ=ಶೀಘ್ರದಲ್ಲಿ, (ಪ್ರಾರಬ್ಧ ಕರ್ಮವು ಇಲ್ಲದಿದ್ದರೆ ಬೇಗನೇ, ಪ್ರಾರಬ್ಧಕರ್ಮವು ಇದ್ದರೆ ಅದು ಭೋಗಿಸಿ ಮುಗಿದೊಡನೆಯೇ) ಅಧಿಗಚ್ಛತಿ=ಹೊಂದುತ್ತಾನೆ || ೩೯ ||

ಪೀ—ಜ್ಞಾನಸಾಧನಾದಿಗಳು ಇಲ್ಲದೆ, ಅವುಗಳಿಗೆ ವಿರೋಧಿಯಾದ ವಿಪರೀತ ಜ್ಞಾನಾದಿಗಳು ಇದ್ದರೆ ಅನಿಷ್ಟವನ್ನು ಹೇಳುತ್ತಾರೆ—

**ಗೀ || ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ |**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ || ೪೦ ||**

ಅ || ಅಜ್ಞಶ್ಚ=ತತ್ವಜ್ಞಾನವಿಲ್ಲದವನೂ, ವಿಪರೀತಜ್ಞಾನಿಯೂ, ಅಶ್ರದ್ದಧಾನಶ್ಚ=ಆಸ್ತಿಕ್ಯಬುದ್ಧಿಯಿಲ್ಲದವನೂ, ಸಂಶಯಾತ್ಮಾ=ತತ್ವವಿಷಯದಲ್ಲಿ ಸಂಶಯವಿರುವ ಮನುಷ್ಯನೂ, ವಿನಶ್ಯತಿ=ನರಕಾದ್ಯನರ್ಥಗಳನ್ನು ಹೊಂದುತ್ತಾನೆ ಸಂಶಯಾತ್ಮನಃ=ತತ್ವದಲ್ಲಿ ಸಂದೇಹಯುಕ್ತವಾದ ಮನಸ್ಸುಳ್ಳವನಿಗೆ, ಅಯಂ ಲೋಕಃ=ಈ ಮನುಷ್ಯಲೋಕವೂ, ನ=ಇಲ್ಲ ಪರಃ=ಸ್ವರ್ಗಾದಿ ಲೋಕವೂ, ನ=ಇಲ್ಲ, ನ ಸುಖಂ=ಸುಖವೂ ಇಲ್ಲ || ೪೦ ||

ಪೀ—ಯಜ್ಜ್ಞಾತ್ವಾ ನ ಪುನಃ ಎಂಬುವ ೩೫ನೇ ಶ್ಲೋಕದಲ್ಲಿ ಆತ್ಮನ್ಯಥೋ ಮಯಿ ಜೀವನಲ್ಲಿಯೂ ನನ್ನಲ್ಲಿಯೂ ಎಂಬುವ ಅನ್ಯಥಾಪ್ರತೀತಿಯನ್ನು ನಿರಾಕರಿಸುತ್ತಾರೆ—

**ತಾ || ಆತ್ಮನಿ ವ್ಯಾಪ್ತೇ ಮಯಿ | ಅಥೋ ತಸ್ಮಾದ್ವ್ಯಾಪ್ತತ್ವಾದೇವ || ೩೫—೪೦ ||**

ಅ || ಆತ್ಮನಿ=ವ್ಯಾಪ್ತನಾದ ನನ್ನಲ್ಲಿ (ಶ್ರೀಹರಿಯು ಹೊರತು ಬೇರೆ ಯಾರೂ ಸಮಸ್ತ ಪ್ರಾಣಿಗಳಿಗೆ ಆಶ್ರಯರಾದವರು ಇಲ್ಲದಿರುವುದರಿಂದ ಸಾಮಾನ್ಯತಃ ತೋರಿದ ಅರ್ಥವು ಕೂಡಲಾರದು) ಅಥವಾ ವ್ಯಾಪ್ತನಾದ ಪ್ರಯುಕ್ತವೇ ನಾನು ಸಮಸ್ತ ಪ್ರಾಣಿಗಳಿಗೆ ಆಧಾರನಾಗಿದ್ದೇನೆಂಬುದು ಕೂಡುತ್ತದೆ. || ೩೫-೪೦ ||

**ಗೀ || ಯೋಗಸನ್ನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಂ |**
**ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ || ೪೧ ||**

ಅ || ಧನಂಜಯ=ಅರ್ಜುನನೇ, ಕರ್ಮಾಣಿ=ಕರ್ಮಗಳು, ಯೋಗಸನ್ನ್ಯಸ್ತಕರ್ಮಾಣಂ=ಶ್ರೀಹರಿಯಲ್ಲಿ ಮನೋಯೋಗದಿಂದ ಎಲ್ಲಾ ಕರ್ಮಗಳನ್ನು ಸಮರ್ಪಿಸಿರುವ, ಜ್ಞಾನಸಂಛಿನ್ನಸಂಶಯಂ=ಭಗವಂತನ ಜ್ಞಾನದಿಂದ ಸಂಶಯವನ್ನು ಕಳೆದುಕೊಂಡ, ಆತ್ಮವಂತಂ=ಭಗವದ್ಭಕ್ತನಾದ ಜ್ಞಾನಿಯನ್ನು, ನ ನಿಬಧ್ನಂತಿ=ಸಂಸಾರಬಂಧದಲ್ಲಿ ಸಿಲುಕಿ ಹಾಕುವುದಿಲ್ಲ (ಅಂದರೆ ಮುಕ್ತನಾಗುತ್ತಾನೆ.) || ೪೧ ||

**ಗೀ || ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾಽಽತ್ಮನಃ |**
**ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ || ೪೨ ||**

ಅ || ತಸ್ಮಾತ್ ಜ್ಞಾನೋಪಾಯವನ್ನು ಸಂಪಾದಿಸಿದರೆ ಪುರುಷಾರ್ಥಪ್ರಾಪ್ತಿಯೂ, ಮಾಡದಿದ್ದರೆ ಅನರ್ಥಪ್ರಾಪ್ತಿಯೂ ಲಭಿಸುವುದರಿಂದ, ಅಜ್ಞಾನಸಂಭೂತಂ=ಅಜ್ಞಾನದಿಂದ ಹುಟ್ಟಿರುವ, ಆತ್ಮನಃ=ತನ್ನ, ಹೃತ್ಸ್ಥಂ=ಮನಸ್ಸಿನಲ್ಲಿರುವ, ಏವಂ ಸಂಶಯಂ=ಕರ್ಮಾನುಷ್ಠಾನ ವಿಷಯದಲ್ಲಿರುವ ಸಂಶಯವನ್ನು, ಜ್ಞಾನಾಸಿನಾ=ಭಗವದ್ವಿಷಯಕವಾದ ಜ್ಞಾನವೆಂಬ ಖಡ್ಗದಿಂದ, ಛಿತ್ವಾ=ಛೇದಿಸಿ(ಕಳೆದುಕೊಂಡು)ಯೋಗಂ= ಭಗವಜ್ಜ್ಞಾನಕ್ಕೆ ಸಾಧನವಾದ ಕರ್ಮಯೋಗವನ್ನು, ಭಾರತ=ಅರ್ಜುನನೇ, ಆತಿಷ್ಠ=ಮಾಡು. ಉತ್ತಿಷ್ಠ=ಆ ಕರ್ಮಯೋಗದಲ್ಲಿ ಕ್ಷತ್ರಿಯರಿಗೆ ಯೋಗ್ಯವಾದ ಯುದ್ಧಕ್ಕೋಸ್ಕರ ಸನ್ನದ್ಧನಾಗು. (ಏಳು.) || ೪೨ ||

## ಗೀ || ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಭೀಷ್ಮಪರ್ವಣಿ ಜ್ಞಾನ-ಯೋಗೋ ನಾಮ ಚತುರ್ಥೋಽಧ್ಯಾಯಃ || ೪ ||

ಅ || ಹೀಗೆ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ಜ್ಞಾನಯೋಗವೆಂಬ ನಾಲ್ಕನೇ ಅಧ್ಯಾಯವು ಮುಗಿಯಿತು || ೪ ||

**ಭಾ || ತತ್ಸಾಧನಂ ವಿರೋಧಿಫಲಂ ಚ ತದುತ್ತರೈರುಕ್ತ್ವೋಪಸಂಹರತಿ || ೩೯–೪೨ ||**

ಅ || ಜ್ಞಾನಕ್ಕೆ ಸಾಧನವಾದ, (ಜ್ಞಾನವು ಹುಟ್ಟಲಿಕ್ಕೆ ಅತ್ಯಾವಶ್ಯಕವಾದ,) ಶ್ರದ್ಧಾ ಮೊದಲಾದುದನ್ನು (ಜ್ಞಾನವಿರೋಧಿಗಳಾದ ಅಜ್ಞಾನಾದಿಗಳನ್ನು ಜ್ಞಾನದ ಫಲವಾದ ಮೋಕ್ಷಾದಿಗಳನ್ನು ಅಥವಾ ಜ್ಞಾನವಿರೋಧಿಗಳಾದ ಅಜ್ಞಾನ ಸಂಶಯಗಳಿಗೆ ಫಲಭೂತವಾದ ವಿನಾಶಾದಿಗಳನ್ನು ಕೂಡ ಮೇಲಿನ ಶ್ಲೋಕಗಳಿಂದ ಹೇಳಿ ವಿರಮಿಸುತ್ತಾರೆ || ೩೯–೪೨ ||

## ಭಾ || ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾಭಾಷ್ಯೇ ಚತುರ್ಥೋಽಧ್ಯಾಯಃ || ೪ ||

ಅ || ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾಭಾಷ್ಯದಲ್ಲಿ ನಾಲ್ಕನೇ ಅಧ್ಯಾಯವು ಮುಗಿಯಿತು || ೪ ||

**ತಾ || ಆತ್ಮವಂತಂ ಪರಮಾತ್ಮಭಕ್ತಂ || ೪೧,೪೨ ||**

ಅ || ಆತ್ಮವಂತಂ=ಪರಮಾತ್ಮನ ಭಕ್ತನಾದವನನ್ನು

## ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ ಶ್ರೀಭಗವದ್ಗೀತಾತಾತ್ಪರ್ಯನಿರ್ಣಯೇ ಚತುರ್ಥೋಽಧ್ಯಾಯಃ || ೪ ||

ಅ || ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾತಾತ್ಪರ್ಯದಲ್ಲಿ ನಾಲ್ಕನೇ ಅಧ್ಯಾಯವು ಮುಗಿಯಿತು || ೪ ||

|| ಶ್ರೀಕೃಷ್ಣಾರ್ಪಣಮಸ್ತು ||

॥ ಶ್ರೀಃ ॥

# ಐದನೇ ಅಧ್ಯಾಯವು.

ಪೀ—ಯೋಗಸ್ಥಃ ಕುರು ಕರ್ಮಾಣಿ ಇತ್ಯಾದಿಗಳಿಂದ ಎರಡನೇ ಅಧ್ಯಾಯದಲ್ಲಿ ಸಂಕ್ಷೇಪದಿಂದ ಹೇಳಲ್ಪಟ್ಟು ತಿರುಗಿ ಮೂರು ನಾಲ್ಕು ಅಧ್ಯಾಯಗಳಲ್ಲಿ ವಿಶೇಷವಾಗಿ ಸ್ಪಷ್ಟಪಡಿಸಿ ಇರತಕ್ಕ ಕರ್ಮ ಯೋಗಕ್ಕೆ (1) ಕಾಮಾದಿಗಳನ್ನು ಬಿಡುವುದು, (2) ಕರ್ಮಗಳನ್ನು ಮಾಡುವುದು ಎಂಬ ಎರಡು ಅಂಶ ಗಳವೆ. ಅವುಗಳನ್ನು ಈ ಅಧ್ಯಾಯದಲ್ಲಿ ವಿವರಿಸುತ್ತಾರೆ—

ಗೀ ॥ ॥ ಅರ್ಜುನ ಉವಾಚ ॥

**ಓಂ ॥ ಸನ್ನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।**
**ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಂ ॥ ೧ ॥**

ಅ ॥ ಅರ್ಜುನನು ಪ್ರಶ್ನೆ ಮಾಡುತ್ತಾನೆ ಕೃಷ್ಣ=ಶ್ರೀಕೃಷ್ಣನೇ, ಸನ್ನ್ಯಾಸಂ=ಯದೃಚ್ಛಾಲಾಭ-ಸಂತುಷ್ಟಃ ಇತ್ಯಾದಿಗಳಿಂದ ಕಾಮಕ್ರೋಧಾದಿಗಳನ್ನು ಬಿಡಬೇಕೆಂಬುವ ಸನ್ನ್ಯಾಸವನ್ನು, ಶಂಸಸಿ= ಹೇಳುತ್ತಿ, ಪುನಃ=ತಿರುಗಿ, ಕರ್ಮಣಾಂ ಯೋಗಂ ಚ=(ಕುರು ಕರ್ಮೈವ ತಸ್ಮಾತ್ತ್ವಂ ಇತ್ಯಾದಿಗಳಿಂದ ಶ್ರೀಹರಿಗೆ ಪ್ರೀತಿಯಾಗಲಿ, ಎಂಬುವ ಬುದ್ಧಿಯಿಂದ ವರ್ಣಾಶ್ರಮಗಳಿಗೆ ವಿಹಿತಗಳಾದ) ಕರ್ಮಗಳ ಅನುಷ್ಠಾನರೂಪವಾದ ಕರ್ಮಯೋಗವನ್ನೂ ಕೂಡ, ಶಂಸಸಿ=ಹೇಳುತ್ತಿ ಏತಯೋಃ=ಕಾಮಾದಿತ್ಯಾಗ, ಕರ್ಮಯೋಗ ಇವುಗಳ ಮಧ್ಯದಲ್ಲಿ ಯತ್ ಶ್ರೇಯಃ=ಯಾವುದು ಶ್ರೇಷ್ಠವಾದುದೋ, ತದೇಕಂ=ಆ ಒಂದನ್ನು, ಮೇ—ನನಗೆ, ಸುನಿಶ್ಚಿತಂ=ನಿಶ್ಚಯವಾಗುವ ಹಾಗೆ, ಬ್ರೂಹಿ=ಹೇಳು (ಸನ್ನ್ಯಾಸವು ಶ್ರೇಷ್ಠ ವೆಂದಾದರೆ ಅದನ್ನೇ ತೆಗೆದುಕೊಳ್ಳುವೆನು ಅದಕ್ಕೆ ವಿರೋಧಿಗಳಾದ ಕಾಮ ದ್ವೇಷಾದಿಗಳಿಂದ ಕೂಡಿದ ಯುದ್ಧಾಖ್ಯ ಕರ್ಮಯೋಗವನ್ನು ಬಿಟ್ಟುಬಿಡುವೆನು) ಅಥವಾ ಯೋಗಸನ್ನ್ಯಸ್ತಕರ್ಮಾಣಂ ಇತ್ಯಾದಿಗಳಲ್ಲಿ ಹೇಳಿದ ಸನ್ನ್ಯಾಸಶಬ್ದವು ಯತ್ಯಾಶ್ರಮ ವಿಷಯಕವು. ಯೋಗಮಾತಿಷ್ಠ ಇತ್ಯಾದಿ ಗಳಲ್ಲಿ ಹೇಳಿದ ಯೋಗಶಬ್ದವು ಗೃಹಸ್ಥಾಶ್ರಮ ವಿಷಯಕವು, ಎಂದು ಕಲ್ಪಿಸಿಕೊಂಡು ಯತಿಗಳು ಸಮಸ್ತ ಕರ್ಮಗಳನ್ನು ಬಿಟ್ಟು ಜ್ಞಾನಮಾತ್ರದಲ್ಲಿ ಅಧಿಕಾರಿಗಳು, ಗೃಹಸ್ಥಾಶ್ರಮಿಗಳು ಜ್ಞಾನವನ್ನು ಬಿಟ್ಟು ಕರ್ಮಮಾತ್ರದಲ್ಲಿ ಅಧಿಕಾರಿಗಳು ಇವುಗಳು ಒಬ್ಬನಲ್ಲಿ ಸರ್ವಥಾ ಕೂಡಲಾರವು, ಎಂಬುವ ಅಭಿ ಪ್ರಾಯದಿಂದ ಯೋಗಸನ್ನ್ಯಾಸಗಳ ಮಧ್ಯದಲ್ಲಿ (ಯತ್ಯಾಶ್ರಮ, ಗೃಹಸ್ಥಾಶ್ರಮಗಳ ಮಧ್ಯದಲ್ಲಿ) ಶ್ರೇಷ್ಠ ವಾದುದು ಯಾವುದೋ, ಅದು ಒಂದನ್ನು ತೆಗೆದುಕೊಳ್ಳುವೆನೆಂಬ ಅಭಿಪ್ರಾಯದಿಂದ ಪ್ರಶ್ನೆ ಮಾಡುತ್ತಾನೆ ॥ ೧ ॥

**ಭಾ ॥ ಓಂ ॥ (೧) ತೃತೀಯಾಧ್ಯಾಯೋಕ್ತಮೇವ ಕರ್ಮಯೋಗಂ ಪ್ರಪಂಚಯತ್ಯನೇ-ನಾಧ್ಯಾಯೇನ ॥ (೨) ಯದೃಚ್ಛಾಲಾಭಸಂತುಷ್ಟ ಇತ್ಯಾದಿನಾ ಸನ್ನ್ಯಾಸಂ । ಕುರು ಕರ್ಮೈವೇತ್ಯಾದಿನಾ ಕರ್ಮಯೋಗಂ ಚ ॥ (೩) ನಿಯಮನಾದಿನಾ ಸಕಲಲೋಕ-ಕರ್ಷಣಾತ್ಕೃಷ್ಣಃ ॥ (೪) ತಚ್ಚೋಕ್ತಂ । ಯತಃ ಕರ್ಷಸಿ ದೇವೇಶ ನಿಯಮ್ಯ ಸಕಲಂ**

**ಜಗತ್ । ಅತೋ ವದಂತಿ ಮುನಯಃ ಕೃಷ್ಣಂ ತ್ವಾಂ ಬ್ರಹ್ಮವಾದಿನ ಇತಿ ಮಹಾ-ಕೌರ್ಮೇ ॥ (೫) ಸನ್ನ್ಯಾಸಶಬ್ದಾರ್ಥಂ ಭಗವಾನೇವ ವಕ್ಷ್ಯತಿ ॥ (೬) ಅಯಂ ಪ್ರಶ್ನಾಭಿಪ್ರಾಯಃ । ಯದಿ ಸನ್ನ್ಯಾಸಃ ಶ್ರೇಯೋಽಧಿಕಃ ಸ್ಯಾತ್ತರ್ಹಿ ಸನ್ನ್ಯಾಸಸ್ಯೇ-ಷದ್ವಿರೋಧಿ ಯುದ್ಧಮಿತಿ ॥ ೧ ॥**

ಅ ॥ (೧) ೩ನೇ ಅಧ್ಯಾಯದಲ್ಲಿ ಹೇಳಿದ ಕರ್ಮಯೋಗವನ್ನೇ ಈ ಅಧ್ಯಾಯದಿಂದ ವಿವರಿಸುತ್ತಾರೆ (1) ಫಲೇಚ್ಛೆ ಮೊದಲಾದುದನ್ನು ಬಿಟ್ಟು ಶ್ರೀಹರಿಗೆ ಸಂಪ್ರೀತಿಯಾಗಲಿ, ಎಂಬುವ ಬುದ್ಧಿಯಿಂದ ವರ್ಣಾಶ್ರಮಗಳಿಗೆ ವಿಹಿತಗಳಾದ ಕರ್ಮಗಳನ್ನು ಮಾಡುವುದೇ ಕರ್ಮಯೋಗವು ಈ ಅಧ್ಯಾಯದಲ್ಲಿ ಅದನ್ನೇ ವಿವರಿಸುವರು (2) ಈ ಕರ್ಮಯೋಗದಲ್ಲಿ ಕಾಮಾದಿಗಳನ್ನು ಬಿಡುವುದು, (3) ಶ್ರೀಹರಿಗೆ ಪ್ರೀತಿಯಾಗಬೇಕೆಂಬುವ ಬುದ್ಧಿಯಿಂದ ಕರ್ಮಗಳನ್ನು ಮಾಡುವುದು ಹೀಗೆ ಎರಡು ಅಂಶಗಳು ೧ನೇ ಅಂಶಕ್ಕೆ ಸನ್ನ್ಯಾಸವೆಂದು ಹೆಸರು ೨ನೇ ಅಂಶಕ್ಕೆ ಕರ್ಮಯೋಗವೆಂದು ಹೆಸರು (೨) ಅದರಲ್ಲಿ **ಯದೃಚ್ಛಾಲಾಭಃ** ಇತ್ಯಾದಿಗಳಿಂದ ಸನ್ನ್ಯಾಸವನ್ನೂ, **ಕುರು ಕರ್ಮೈವ** ಇತ್ಯಾದಿಗಳಿಂದ ಕರ್ಮಯೋಗವನ್ನೂ ಕೂಡ ಹೇಳುತ್ತಿ (೩) (ಕೃಷ್ಣಶಬ್ದಕ್ಕೆ ಶ್ಯಾಮವರ್ಣವೆಂದು ಮಾತ್ರ ಅರ್ಥವು ಎಂಬುವ ಪ್ರತೀತಿಯನ್ನು ಹೋಗಲಾಡಿಸುತ್ತಾರೆ–) ನಿಯಮಿಸುವುದು (ಪ್ರೇರೇಪಿಸುವುದು) ವಶಪಡಿಸಿಕೊಳುವುದು ಇತ್ಯಾದಿಗಳಿಂದ ಎಲ್ಲಾ ಲೋಕಗಳನ್ನು ಸೆಳೆಯುವುದರಿಂದ ಕೃಷ್ಣಃ ಎನಿಸುತ್ತಾನೆ (೪)ಎಲೋ ಬ್ರಹ್ಮಾದಿ ದೇವತೆಗಳಿಗೆ ಅಧಿಪತಿಯಾದ ಶ್ರೀಕೃಷ್ಣನೇ ನೀನು ಎಲ್ಲಾ ಜಗತ್ತನ್ನು ನಿಯಮಿಸಿಕೊಂಡು ಯಾವ ಕಾರಣದಿಂದ ಸೆಳೆಯುತ್ತೀಯೋ(ಸ್ವಾಧೀನೀಕರಿಸಿಕೊಳ್ಳುತ್ತೀಯೋ)ಆದಕಾರಣ ಪರಬ್ರಹ್ಮನ ತತ್ವವನ್ನರಿತ ಮುನಿಗಳು ನಿನ್ನನ್ನು ಶ್ರೀಕೃಷ್ಣ ಶಬ್ದವಾಚ್ಯನನ್ನಾಗಿ ಹೇಳುತ್ತಾರೆ, ಎಂದು ಮಹಾಕೌರ್ಮದಲ್ಲಿ ಹೇಳಿದೆ. (ಆದಕಾರಣ ಕೇವಲ ಶ್ಯಾಮವರ್ಣ ಮಾತ್ರದಿಂದ ಕೃಷ್ಣನೆಂದು ಅನ್ನಿಸಿಕೊಳ್ಳುವುದಲ್ಲ ) (೫) (ನಿತ್ಯ ನೈಮಿತ್ತಿಕ ಕಾಮ್ಯ ನಿಷಿದ್ಧರೂಪಗಳಾದ ಎಲ್ಲಾ ಕರ್ಮಗಳನ್ನು ಬಿಡುವುದು ಸನ್ನ್ಯಾಸಶಬ್ದದ ಅರ್ಥವು, ಎಂಬುವ ವ್ಯಾಖ್ಯಾನವನ್ನು ದೂಷಿಸುತ್ತಾರೆ—) **ಜ್ಞೇಯಃ ಸ ನಿತ್ಯಸನ್ನ್ಯಾಸೀ** ಎಂದು ಶ್ರೀಕೃಷ್ಣ ಪರಮಾತ್ಮನೇ ಸನ್ನ್ಯಾಸಶಬ್ದಕ್ಕೆ ಬೇರೆ ಅರ್ಥವನ್ನು ಹೇಳುವನು (ಆದಕಾರಣ ಪರರು ಅರ್ಥ ಹೇಳಿದ್ದು ಅಯುಕ್ತವು) (೬) (ಸಮಸ್ತಕರ್ಮಗಳನ್ನು ಬಿಡುವುದು ಸನ್ನ್ಯಾಸಶಬ್ದದ ಅರ್ಥವಲ್ಲ ಮತ್ತೆ ದ್ವೇಷಾದಿಗಳನ್ನು ಬಿಡುವುದೇ ಸನ್ನ್ಯಾಸವು ಎಂದಾದರೆ ಯೋಗಶಬ್ದಾರ್ಥವೂ ಅಂತಹುದೇ ಆಗಿರುವುದರಿಂದ ಸನ್ನ್ಯಾಸ ಯೋಗಗಳಿಗೆ ವಿರೋಧವು ಇಲ್ಲದಿರುವ ಪ್ರಯುಕ್ತ ಅವುಗಳಲ್ಲಿ ಶ್ರೇಷ್ಠವು ಯಾವುದು, ಎಂಬುವ ಪ್ರಶ್ನೆಯೇ ಕೂಡಲಾರದು ಎಂದರೆ—) ಪ್ರಶ್ನೆಯ ಅಭಿಪ್ರಾಯವು ಇದು ಸನ್ನ್ಯಾಸವು ಶ್ರೇಯಸ್ಕರವು ಶ್ರೇಷ್ಠವು ಎಂದಾದರೆ ಸನ್ನ್ಯಾಸಕ್ಕೆ ಯುದ್ಧವು ಸ್ವಲ್ಪ ವಿರೋಧಿಯಾದುದು (ಆದಕಾರಣ ಅದನ್ನು ಬಿಟ್ಟು ಸನ್ನ್ಯಾಸವೇ ಅವಶ್ಯವಾಗಿ ಕರ್ತವ್ಯವಾಗಿರುವಾಗ ವಿಗುಣವಾದ ಯುದ್ಧವನ್ನು ಮಾಡಬೇಕೆಂದು ವಿಧಿಸುವುದು ಏತಕ್ಕೆ ಎಂದು ಪ್ರಶ್ನೆಯ ಅಭಿಪ್ರಾಯವು.) ॥ ೧ ॥

ತಾ ॥ **ಓಂ ॥ (೧) ಯೋಗಸನ್ನ್ಯಾಸಯೋರ್ಲಕ್ಷಣಂ ಸ್ಪಷ್ಟಯತ್ಯನೇನಾಧ್ಯಾಯೇನ ॥ (೨) ಯೋಗಸನ್ನ್ಯಸ್ತಕರ್ಮಾಣಮಿತ್ಯಾದೌ ನ್ಯಾಸಶಬ್ದಃ ಸರ್ವಕರ್ಮತ್ಯಾಗವಿಷಯ ಇತ್ಯಾಶಂಕ್ಯ ಯೋಗಸನ್ನ್ಯಾಸಯೋರ್ಭಿನ್ನಪುನ್ನಿಷ್ಠತ್ವಾಭಿಪ್ರಾಯೇಣ ಪೃಚ್ಛತಿ । ಸನ್ನ್ಯಾಸಮಿತಿ ॥ ೧ ॥**

ಅ ॥ (೧) (ಪೂರ್ವದಲ್ಲಿ ಕಾಮಾದಿಗಳನ್ನು ಬಿಟ್ಟು, ಶ್ರೀಹರಿಯು ಪ್ರೀತನಾಗಲಿ, ಎಂಬುವ ಬುದ್ಧಿಯಿಂದ ಕರ್ಮಗಳನ್ನು ಮಾಡಬೇಕೆಂಬುವ ಕರ್ಮಯೋಗವನ್ನು ಹೇಳಿರುವರು ಆ ಕರ್ಮ

ಯೋಗವು ಯೋಗ, ಸನ್ನ್ಯಾಸಗಳೆಂದು ಎರಡು ವಿಧವು ಆ ಯೋಗ ಸನ್ನ್ಯಾಸಗಳೆರಡರ ಸ್ವರೂಪವನ್ನು ಸಂಕ್ಷೇಪವಾಗಿ **ಕುರು ಕರ್ಮಾಣಿ, ಸಂಗಂ ತ್ಯಕ್ತ್ವಾ** ಇತ್ಯಾದಿಗಳಲ್ಲಿ ಹೇಳಿಯದೆ) ಅಂತಹ ಯೋಗ, ಸನ್ನ್ಯಾಸ ಇವುಗಳ ಲಕ್ಷಣವನ್ನೇ ಈ ಅಧ್ಯಾಯದಿಂದ ಸ್ಪಷ್ಟೀಕರಿಸುತ್ತಾರೆ (೨) **ಯೋಗಸನ್ನ್ಯಸ್ತಕರ್ಮಾಣಂ** ಇತ್ಯಾದಿಗಳಲ್ಲಿ ಹೇಳಿದ ನ್ಯಾಸಶಬ್ದವು ಯತ್ಯಾಶ್ರಮಿಗಳ ವಿಷಯಕವು, **ಯೋಗಮಾತಿಷ್ಠ** ಇತ್ಯಾದಿಗಳಲ್ಲಿದ್ದ ಯೋಗಶಬ್ದವು ಗೃಹಸ್ಥಾಶ್ರಮಿಗಳ ವಿಷಯಕವು, ಎಂದು ಕಲ್ಪಿಸಿಕೊಂಡು ಯತಿಗಳಿಗೆ ಸಮಸ್ತಕರ್ಮಗಳ ಪರಿತ್ಯಾಗದಿಂದ ಜ್ಞಾನಮಾತ್ರದಲ್ಲಿ ಅಧಿಕಾರವು ಗೃಹಸ್ಥಾಶ್ರಮಿಗಳಿಗೆ ಕರ್ಮಮಾತ್ರದಲ್ಲಿ ಅಧಿಕಾರವು, ಅವುಗಳೆರಡು ಒಬ್ಬ ಪುರುಷನಲ್ಲಿ ಕೂಡಲಾರವು, ಎಂಬುವ ಅಭಿಪ್ರಾಯದಿಂದ ಯೋಗ ಸನ್ನ್ಯಾಸಗಳ ಮಧ್ಯದಲ್ಲಿ ಶ್ರೇಷ್ಠವು ಯಾವುದು ಎಂದು **ಸನ್ನ್ಯಾಸಂ** ಎಂಬುವ ಶ್ಲೋಕದಿಂದ ಪ್ರಶ್ನೆಮಾಡುತ್ತಾನೆ (ಎರಡನ್ನೂ ಮಾಡಬೇಕೆಂದು ಹೇಳಿದೆ ಒಬ್ಬನಿಗೇನೇ ಎರಡನ್ನೂ ಮಾಡಲಿಕ್ಕೆ ಸಾಧ್ಯವಿಲ್ಲ ಒಂದನ್ನು ಬಿಟ್ಟು ಇನ್ನೊಂದನ್ನು ತೆಗೆದುಕೊಳ್ಳಬೇಕಾದರೆ ಶ್ರೇಷ್ಠವಾದುದನ್ನೇ ತೆಗೆದುಕೊಳ್ಳಬೇಕೆಂದು ಅಭಿಪ್ರಾಯವು) || ೧ ||

ಗೀ || || ಶ್ರೀಭಗವಾನುವಾಚ ||

ಸನ್ನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ |
ತಯೋಸ್ತು ಕರ್ಮಸನ್ನ್ಯಾಸಾತ್ಕರ್ಮಯೋಗೋ ವಿಶಿಷ್ಯತೇ || ೨ ||

ಅ || (ಸನ್ನ್ಯಾಸಯೋಗಶಬ್ದಗಳು ಸನ್ನ್ಯಾಸಾಶ್ರಮಿ ಗೃಹಸ್ಥಾಶ್ರಮಿಗಳನ್ನು ಹೇಳುವವುಗಳಲ್ಲ ಆದಕಾರಣ ಅವುಗಳಲ್ಲಿ ಶ್ರೇಷ್ಠವಾದುದು ಯಾವುದೆಂದು ಪ್ರಶ್ನೆಯೇ ಕೂಡಲಾರದು ಮತ್ತೆ ಕಾಮಾದಿಗಳನ್ನು ಬಿಡುವುದು, ಕರ್ಮಗಳನ್ನು ಮಾಡುವುದು, ಎಂದು ಸನ್ನ್ಯಾಸಯೋಗಶಬ್ದಗಳ ಅರ್ಥಗಳು ಅವುಗಳು ಒಬ್ಬ ಪುರುಷನಲ್ಲಿ ಇರುತ್ತವೆ ಶ್ರೇಯಸ್ಕಂಗಳೂ ಆಗಿವೆ ಮೋಕ್ಷವನ್ನು ಹೊಂದಿಸಿಕೊಡುತ್ತವೆ ಆದಕಾರಣ ಎರಡೂ ಮಾಡಲರ್ಹಗಳಾಗಿರುವುದರಿಂದ ಆ ಎರಡರಲ್ಲಿ ಶ್ರೇಷ್ಠವು ಯಾವುದೆಂಬ ಪ್ರಶ್ನೆಯು ವ್ಯರ್ಥವೇ ಆಗಿದೆ ಕೇವಲ ಅವುಗಳ ಸ್ವರೂಪಜ್ಞಾನಕ್ಕಾಗಿಯೇ ಪ್ರಶ್ನೆಯೆಂದಾದರೆ ಯೋಗವೇ ಶ್ರೇಷ್ಠವೆಂಬುವ ಅಭಿಪ್ರಾಯದಿಂದ) ಶ್ರೀಕೃಷ್ಣನು ಉತ್ತರವನ್ನು ಕೊಡುತ್ತಾನೆ ಸನ್ನ್ಯಾಸಃ= ಕಾಮ ಕ್ರೋಧ ಮೊದಲಾದುವುಗಳನ್ನು ಬಿಡುವುದು, ಕರ್ಮಯೋಗಶ್ಚ=ಶ್ರೀಹರಿಗೆ ಪ್ರೀತಿಯಾಗಲಿ, ಎಂಬುವ ಬುದ್ಧಿಯಿಂದ ಕರ್ಮಗಳನ್ನು ಮಾಡುವುದು, ಉಭೌ= ಇವುಗಳೆರಡು ಒಟ್ಟುಸೇರಿ, ನಿಃಶ್ರೇಯಸಕರೌ=ಮೋಕ್ಷ ಮೊದಲಾದ ಪುರುಷಾರ್ಥಗಳನ್ನು ಹೊಂದಿಸಿಕೊಡುವವುಗಳು ತಯೋಸ್ತು= ಆ ಎರಡರ ಮಧ್ಯದಲ್ಲಿ ಆದರೂ, ಕರ್ಮಸನ್ನ್ಯಾಸಾತ್=ಕರ್ಮಗಳನ್ನು ಮಾಡುವ ವಿಷಯದಲ್ಲಿ ಕಾಮ ಕ್ರೋಧ ದ್ವೇಷ ಮೊದಲಾದವುಗಳನ್ನು ಬಿಡುವುದಕ್ಕಿಂತಲೂ, ಕರ್ಮಯೋಗಃ= ಶ್ರೀಪರಮಾತ್ಮನಿಗೆ ಅರ್ಪಿಸಬೇಕೆಂಬುವ ಬುದ್ಧಿಯಿಂದ ಕರ್ಮಗಳನ್ನು ಮಾಡುವುದು, ವಿಶಿಷ್ಯತೇ= ಶ್ರೇಷ್ಠವಾದುದು || ೨ ||

**ಟೀ**—**ಸನ್ನ್ಯಾಸಂ** ಎಂಬುವ ಪ್ರಶ್ನವಾಕ್ಯದಲ್ಲಿಯೂ **ಸನ್ನ್ಯಾಸಃ** ಎಂಬುವ ಉತ್ತರವಾಕ್ಯದಲ್ಲಿಯೂ ಸನ್ನ್ಯಾಸಶಬ್ದವು ಯತಿಗಳನ್ನೂ ಯೋಗಶಬ್ದವು ಗೃಹಸ್ಥಾಶ್ರಮಿಗಳನ್ನೂ ಹೇಳುತ್ತದೆ. ಏಕೆಂದರೆ ಯತಿಗಳು ಸಮಸ್ತಕರ್ಮಗಳನ್ನು ಬಿಡುವವರು, ಗೃಹಸ್ಥಾಶ್ರಮಿಗಳು ಸಮಸ್ತಕರ್ಮಗಳನ್ನು ಮಾಡುವವರು **ಜ್ಞೇಯಃ ಸ ನಿತ್ಯಸನ್ನ್ಯಾಸೀ** ಎಂಬುವುದು ಸನ್ನ್ಯಾಸ ಶಬ್ದದ ಅರ್ಥವನ್ನು ಹೇಳಲಿಕ್ಕೆ ಹೊರಟದ್ದಲ್ಲ. ಮತ್ತೆ ದ್ವೇಷಾದಿಗಳನ್ನು ಬಿಟ್ಟಿರುವ ಗೃಹಸ್ಥಾಶ್ರಮಿಯನ್ನು ಸನ್ನ್ಯಾಸಿಯೆಂದು ತಿಳಿಯಬೇಕೆಂದು ಸ್ತೋತ್ರ ಮಾಡಲಿಕ್ಕೆ ಹೊರಟದ್ದು ಎಂದರೆ -

ಭಾ ॥ (೧) ನಾಯಂ ಸನ್ನ್ಯಾಸೋ ಯತ್ಯಾಶ್ರಮಃ ॥ (೨) ದ್ವಂದ್ವತ್ಯಾಗಾತ್ತು ಸನ್ನ್ಯಾಸಾನ್ಮತ್ಪ್ರೀತ್ಯೈವ ಗರೀಯಸೀತಿ ವಚನಾತ್ ॥ (೩) ತಾನಿ ವಾ ಏತಾನ್ಯವರಾಣಿ ತಪಾಂಸಿ ನ್ಯಾಸ ಏವಾತ್ಯರೇಚಯದಿತಿ ಚ ॥ (೪) ಸನ್ನ್ಯಾಸಸ್ತು ತುರೀಯೋ ಯೋ ನಿಷ್ಕ್ರಿಯಾಖ್ಯಃ ಸಧರ್ಮಕಃ । ನ ತಸ್ಮಾದುತ್ತಮೋ ಧರ್ಮೋ ಲೋಕೇ ಕಶ್ಚನ ವಿದ್ಯತೇ (೫) ತದ್ಭಕ್ತೋಽಪಿ ಹಿ ಯದ್ಗಚ್ಛೇತ್ತದ್ಗೃಹಸ್ಥೋ ನ ಧಾರ್ಮಿಕಃ । ಮದ್ಭಕ್ತಿರ್ವಿರಕ್ತಿಸ್ತದಧಿಕಾರೋ ನಿಗದ್ಯತೇ । ಯದಾಽಧಿಕಾರೋ ಭವತಿ ಬ್ರಹ್ಮಚಾರ್ಯಪಿ ಪ್ರವ್ರಜೇದಿತಿ ನಾರದೀಯೇ ॥ (೬) ಬ್ರಹ್ಮಚರ್ಯಾದೇವ ಪ್ರವ್ರಜೇತ್ । ಯದಹರೇವ ವಿರಜೇದಿತಿ ಚ । ಸನ್ನ್ಯಾಸೇ ತು ತುರೀಯೇ ವೈ ಪ್ರೀತಿರ್ಮಮ ಗರೀಯಸೀ ಯೇಷಾಮತ್ರಾಧಿಕಾರೋ ನ ತೇಷಾಂ ಕರ್ಮೇತಿ ನಿಶ್ಚಯ ಇತ್ಯಾದೇಶ್ಚ ಬ್ರಾಹ್ಮೇ ಅತೋ ನಾತ್ರಾಶ್ರಮಃ ಸನ್ನ್ಯಾಸ ಉಕ್ತಃ ॥ ೨ ।

ಅ ॥ (೧) ಪರಿಹಾರವಾಕ್ಯದಲ್ಲಿದ್ದ ಸನ್ನ್ಯಾಸವೆಂದರೆ ಯತ್ಯಾಶ್ರಮವಲ್ಲ (ಪ್ರಶ್ನವಾಕ್ಯದಲ್ಲಿದ್ದ ಸನ್ನ್ಯಾಸಪದದಿಂದ ಯತ್ಯಾಶ್ರಮವನ್ನು ಇಟ್ಟುಕೊಳ್ಳಬೇಕು) (ಹಾಗೆಯೇ ಯೋಗವೆಂದರೆ ಗೃಹಸ್ಥಾಶ್ರಮವಲ್ಲ) (ಏಕೆ ಆಗುವುದಿಲ್ಲವೆಂದರೆ ತಯೋಸ್ತು ಕರ್ಮಸನ್ನ್ಯಾಸಾತ್ ಎಂಬುವಲ್ಲಿ ಸನ್ನ್ಯಾಸಕ್ಕಿಂತ ಕರ್ಮಯೋಗವು ಶ್ರೇಷ್ಠವೆಂದು ಹೇಳಿದೆ ಅದು ಸನ್ನ್ಯಾಸಶಬ್ದವು ಯತ್ಯಾಶ್ರಮಪರವು ಯೋಗಶಬ್ದವು ಗೃಹಸ್ಥಾಶ್ರಮಪರವೆಂದು ಇಟ್ಟುಕೊಂಡರೆ ಕೂಡ ವುದಿಲ್ಲ ಅದು ಹಿಂದ ಹೇಳಿದ ಪ್ರಕಾರ ನಮ್ಮ ಪಕ್ಷದಲ್ಲಿಯೇ ಕೂಡುತ್ತದೆ) (೨) (ನಿಮ್ಮ ಪಕ್ಷದಲ್ಲಿ ಕೂಡುವುದು ಹೇಗೆಂದರೆ—) ದ್ವಂದ್ವತ್ಯಾಗ (ಕಾಮಕ್ರೋಧಾದಿವರ್ಜನ) ರೂಪವಾದ ಸನ್ನ್ಯಾಸಕ್ಕಿಂತ ನನಗೆ ಶ್ರೀಕೃಷ್ಣನಿಗೆ) ಪ್ರೀತಿಯಾಗಲಿ, ಎಂಬುವ ಬುದ್ಧಿಯಿಂದ ಕರ್ಮಗಳನ್ನು ಮಾಡುವುದು, ಎಂಬ ನನ್ನ ಪೂಜೆಯೇ ಶ್ರೇಷ್ಠವೆಂದು ಪ್ರಮಾಣವು ಇದೆ (೩ (ಆಶ್ರಮಾದಿರೂಪವಾದ ಅರ್ಥ ಇಟ್ಟುಕೊಂಡರೆ ಏಕೆ ಕೂಡುವದಿಲ್ಲವೆಂದರೆ—) ಗೃಹಸ್ಥಾಶ್ರಮಿಗಳಿಗೆ ವಿಹಿತಗಳಾದ ಅಗ್ನ್ಯಾಧಾನ ಮೊದಲಾದ ಕರ್ಮಗಳೂ, ಕೃಚ್ಛ್ರ ಚಾಂದ್ರಾಯಣ ಮೊದಲಾದ ತಪಸ್ಸುಗಳೂ ಎಲ್ಲವೂ ಸನ್ನ್ಯಾಸಕ್ಕಿಂತ ನಿಕೃಷ್ಟಗಳು ಸನ್ನ್ಯಾಸವೇ ಅಧಿಕವಾದುದು ಎಂದೂ ಇದೆ (೪) (1) ನ್ಯಸ್ಯತೇ ಅಸ್ಮಿನ್ ಸರ್ವಂ ಎಂಬುವ ವ್ಯುತ್ಪತ್ತಿಯಿಂದ ನ್ಯಾಸನೆಂದರೆ ಬ್ರಹ್ಮನೇ ಎಂದು ಕೆಲವರು ಹೇಳುತ್ತಾರೆ ಇದು ಅಯುಕ್ತವು ತಾನಿ ಹ ವಾ ಏತಾನಿ ಎಂಬುವಲ್ಲಿ ತಪಸ್ಸು ಪ್ರಕೃತವಾಗಿರುವುದರಿಂದ ತಪಸ್ಸಿಗಿಂತ ಬ್ರಹ್ಮನು ಉತ್ತಮನು ಎಂದು ಹೇಳಿದ್ದಕ್ಕೆ ಸಂಗತಿಯಿಲ್ಲ (2) ಗೃಹಸ್ಥಾಶ್ರಮಕ್ಕಿಂತ ಯತ್ಯಾಶ್ರಮವು ಉತ್ತಮವೆಂದು ಹೇಳಿದ್ದು ಯುಕ್ತವಲ್ಲ ಏಕೆಂದರೆ--ಗೃಹಸ್ಥಾಶ್ರಮದಲ್ಲಿ ಸಮಸ್ತಧರ್ಮಗಳೂ ಇವೆ ಅದು ತಾರುಣ್ಯಾವಸ್ಥೆಯಲ್ಲಿ ಅನುಷ್ಠೇಯವೂ ಮಹಾಫಲವುಳ್ಳದ್ದೂ ಆಗಿದೆ ಸನ್ನ್ಯಾಸಾಶ್ರಮದಲ್ಲಿ ಕ್ರಿಯಾದಿಗಳಿಲ್ಲ ಚರಮ ವಯಸ್ಸಿನಲ್ಲಿ ಅನುಷ್ಠೇಯವಾದುದು ಅಂಧಪಂಗ್ವಾದಿಗಳಿಗೂ ಮಾಡಲು ಸಾಧ್ಯವಾದುದು ಅದಕ್ಕೆ ಅಲ್ಪಫಲವು ಎಂದು ಕೆಲವರು ಹೇಳುತ್ತಾರೆ ಅದು ಯುಕ್ತವಲ್ಲವೆಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ನಾಲ್ಕನೇದಾದ ಸನ್ನ್ಯಾಸಾಶ್ರಮವಾದರೂ ಕಾಮ್ಯಕರ್ಮಗಳು ಇಲ್ಲದಿರುವುದರಿಂದ ನಿಷ್ಕ್ರಿಯವೆಂದು ಅನ್ನಿಸಿಕೊಳ್ಳುವುದಾದರೂ ಅನೇಕ ಶಾಸ್ತ್ರವಿಹಿತ ಧರ್ಮಗಳಿಂದ ಒಡಗೂಡಿಕೊಂಡು ಇರುತ್ತದೆ ಮತ್ತು ಧರ್ಮಗಳು ಮಾತ್ರ ಇರುತ್ತವೆಂದು ಅಲ್ಲ ಮತ್ತೆ ಯತ್ಯಾಶ್ರಮದಲ್ಲಿ ಅನುಷ್ಠೇಯವಾದ ಧರ್ಮಕ್ಕಿಂತ ಉತ್ತಮವಾದ ಧರ್ಮವು ಲೋಕದಲ್ಲಿ ಯಾವುದೂ ಇಲ್ಲ. (೫) ಸನ್ನ್ಯಾಸಾಶ್ರಮಿಗಳಲ್ಲಿ ಭಕ್ತಿಯಿದ್ದವನು ಯಾವ ಫಲವನ್ನು ಹೊಂದುತ್ತಾನೋ, ಅಂತಹ ಫಲವನ್ನು ಗೃಹಸ್ಥಾಶ್ರಮಿಗಳ ಎಲ್ಲಾ ಧರ್ಮಗಳಿಂದಲೂ ಹೊಂದಲಾರನು ನನ್ನಲ್ಲಿ ವಿಶೇಷ ಭಕ್ತಿಯೂ ವಿಷಯಗಳಲ್ಲಿ

ವೈರಾಗ್ಯವೂ ಕೂಡ ಸನ್ನ್ಯಾಸಾಧಿಕಾರವೆಂದು ಹೇಳಲ್ಪಡುತ್ತದೆ ಯಾವಾಗ ಹಿಂದೆ ಹೇಳಿದ ಅಧಿಕಾರವು ಬರುತ್ತದೋ ಆಗ ಬ್ರಹ್ಮಚಾರಿಯೂ ಕೂಡ ಸನ್ನ್ಯಾಸಾಶ್ರಮವನ್ನು ಹೊಂದಬಹುದೆಂದು ನಾರದೀಯ ಪುರಾಣದಲ್ಲಿದೆ (೬) (ಚರಮ ವಯಸ್ಸಿನಲ್ಲಿಯೇ ಸನ್ನ್ಯಾಸವನ್ನು ತಳೆದುಕೊಳ್ಳಬೇಕೆಂದು ನಿಯಮವಿಲ್ಲ.) ಯಾವಾಗ ವಿರಕ್ತನಾಗುತ್ತಾನೋ, ಆಗ ಬ್ರಹ್ಮಚರ್ಯಾಶ್ರಮವನ್ನು ಬಿಟ್ಟೇಸನ್ನ್ಯಾಸಾಶ್ರಮವನ್ನು ತೆಗೆದುಕೊಳ್ಳಬಹುದು (೭) ನಾಲ್ಕನೇದ್ದಾದ ಸನ್ನ್ಯಾಸಾಶ್ರಮದಲ್ಲಿ ಆದರೂ ನನಗೆ ಅತ್ಯಂತ ಪ್ರೀತಿಯು ಯಾರಿಗೆ ಸನ್ನ್ಯಾಸಾಶ್ರಮದಲ್ಲಿ ಅಧಿಕಾರವಿಲ್ಲವೋ, ಅವರಿಗೆ ಆಶ್ರಮಾಂತರದಲ್ಲಿ ಅಧಿಕಾರವು, ಎಂದು ನಿಶ್ಚಯವು. ಇತ್ಯಾದಿ ವಿಷಯಗಳು ಬ್ರಾಹ್ಮಪುರಾಣದಲ್ಲಿವೆ ಆದಕಾರಣ ಪರಿಹಾರವಾಕ್ಯದಲ್ಲಿ ನ್ಯಾಸ ಶಬ್ದದಿಂದ ಸನ್ನ್ಯಾಸಾಶ್ರಮವು ಹೇಳಲ್ಪಡಲಿಲ್ಲ ॥ ೨ ॥

ಪೀ— ಪರಿಹಾರವಾಕ್ಯದ ಅಭಿಪ್ರಾಯವನ್ನು ಹೇಳುತ್ತಾರೆ—

**ತಾ ॥ (೧) ಏಕಪುಂಯೋಗ್ಯಾವೇತೌ ತಯೋರ್ಮಧ್ಯೇ (ಚ) ಯೋಗ ಏವ ವಿಶಿಷ್ಟ ಇತಿ ಪರಿಹಾರಾಭಿಪ್ರಾಯಃ । ಉಭೌ ಸಮುಚ್ಚಿತೌ ॥ (೨) ಸನ್ನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತ ಇತಿ ವಕ್ಷ್ಯಮಾಣತ್ವಾತ್ ॥ ೨ ॥**

ಅ ॥ (೧) ಯೋಗ ಸನ್ನ್ಯಾಸಗಳೆರಡು ಒಬ್ಬ ಪುರುಷನಲ್ಲಿರಲಿಕ್ಕೆ ಯೋಗ್ಯಗಳು ಅವುಗಳ ಮಧ್ಯದಲ್ಲಿ ಯೋಗವೇ ಶ್ರೇಷ್ಠವು, ಎಂದು ಪರಿಹಾರವಾಕ್ಯದ ಅಭಿಪ್ರಾಯವು ಇವೆರಡು ಒಟ್ಟು ಸೇರಿಯೇ ಶ್ರೇಯಸ್ಕರಗಳಾಗುವವು (೨) (ಇವೆರಡು ಪ್ರತ್ಯೇಕವಾಗಿ ಶ್ರೇಯಸ್ಸನ್ನು ಮಾಡುವವುಗಳೆಂದು ಏಕೆ ಆಗಲಾರದು ಎಂದರೆ—) ಎಲೋ ಅರ್ಜುನನೇ ಯೋಗವಿಲ್ಲದ ಸನ್ನ್ಯಾಸವಾದರೂ ದುಃಖವನ್ನು ಹೊಂದಲಿಕ್ಕೆ ಕಾರಣವಾಗುವುದು ಎಂದು ಮುಂದೆ ಹೇಳುವರು

ವಿ ॥ ಯೋಗವಿಲ್ಲದ ಸನ್ನ್ಯಾಸದಿಂದ ಅನರ್ಥವುಂಟಾಗುವುದು ಸನ್ನ್ಯಾಸವಿಲ್ಲದ ಯೋಗವೇ ಕೂಡಲಾರದು ಎರಡು ಒಟ್ಟು ಸೇರಿದರೇನೇ ಮೋಕ್ಷವುಂಟಾಗುವುದು ಒಂದೊಂದರಿಂದ ಮೋಕ್ಷವು ಲಭಿಸಲಾರದು ॥ ೨ ॥

ಪೀ—ಸನ್ನ್ಯಾಸಶಬ್ದವು ಯತ್ಯಾಶ್ರಮವನ್ನು ಹೇಳುವುದಲ್ಲ ಮತ್ತೆ ಫಲದಲ್ಲಿ ಇಚ್ಛಾದಿಗಳನ್ನು ಬಿಡುವುದೆಂಬ ಅರ್ಥವನ್ನು ಹೇಳುತ್ತದೆ ಎಂಬುವಲ್ಲಿ ಗೀತೆಯನ್ನು ಉದಾಹರಿಸುತ್ತಾರೆ—

**ಗೀ ॥ ಜ್ಞೇಯಃ ಸ ನಿತ್ಯಸನ್ನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ಪ್ರಮುಚ್ಯತೇ ॥೩॥**

ಅ ॥ ಮಹಾಬಾಹೋ= ಅರ್ಜುನನೇ, ಯಃ= ಯಾವಾತನು, ನ ದ್ವೇಷ್ಟಿ= ಯಾರಲ್ಲಿಯೂ ದ್ವೇಷ ಮಾಡುವುದಿಲ್ಲವೋ, ನ ಕಾಂಕ್ಷತಿ= ಫಲವನ್ನು ಇಚ್ಛಿಸುವುದಿಲ್ಲವೋ, ನಿರ್ದ್ವಂದ್ವಃ= ಸುಖ ದುಃಖಾದಿಗಳು ಬಂದರೂ ತನ್ನಿಮಿತ್ತವಾಗಿ ನೀಚೋಚ್ಚಭಾವರೂಪ ವಿಕಾರವಿಲ್ಲದವನೋ, (ಕಾಮ್ಯಕರ್ಮಗಳನ್ನು ಪರಿತ್ಯಾಗಮಾಡಿದವನೋ,) ಸಃ=ಆತನು, ನಿತ್ಯಸನ್ನ್ಯಾಸೀ= ನಿತ್ಯಸನ್ನ್ಯಾಸಿಯೆಂದು, ಜ್ಞೇಯಃ= ತಿಳಿಯತಕ್ಕದು, ಸಃ=ಆತನೇ, ಸುಖಂ= ಸುಖವು ಆಗುವಹಾಗೆ, ಅನಾಯಾಸದಿಂದ, ಬಂಧಾತ್= ಸಂಸಾರ ಬಂಧದಿಂದ, ಪ್ರಮುಚ್ಯತೇ= ಬಿಡುಗಡೆಯನ್ನು ಹೊಂದುತ್ತಾನೆ ಹಿ= ಪ್ರಸಿದ್ಧವೇ ಆಗಿದೆ ಆದಕಾರಣ ನೀನು ಭಗವತ್ಪೂಜಾರೂಪವಾದ ಯುದ್ಧಕರ್ಮವನ್ನು ಬಿಡಕೂಡದು ॥ ೩ ॥

ಪೀ—ಜ್ಞೇಯಃ ಎಂಬುವ ಶ್ಲೋಕದಲ್ಲಿದ್ದ ಸನ್ಯಾಸಶಬ್ದವು ಯತ್ಯಾಶ್ರಮಪರವೆಂಬುವ ಅಪವ್ಯಾಖ್ಯಾನವನ್ನು ದೂಷಿಸುತ್ತಾ ಅದರ ತಾತ್ಪರ್ಯವನ್ನು ಹೇಳುತ್ತಾರೆ—

**ಭಾ ॥ ಸನ್ಯಾಸಶಬ್ದಾರ್ಥಮಾಹ । ಜ್ಞೇಯ ಇತಿ । ಸನ್ಯಾಸಸ್ಯ ನಿಃಶ್ರೇಯಸಕರತ್ವಂ ಜ್ಞಾಪಯಿತುಂ ತಚ್ಛಬ್ದಾರ್ಥಂ ಸ್ಮಾರಯತಿ । ಜ್ಞೇಯ ಇತಿ ॥ ೩ ॥**

ಅ ॥ ಜ್ಞೇಯ ಎಂಬುವ ಶ್ಲೋಕದಿಂದ ಸನ್ಯಾಸ ಶಬ್ದದ ಅರ್ಥವನ್ನು ಹೇಳುತ್ತಾರೆ **ಸನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ** ಎಂಬುವ ಶ್ಲೋಕದಲ್ಲಿ ಸನ್ಯಾಸದಿಂದ ಮೋಕ್ಷವಾಗುತ್ತದೆಂದು ಹೇಳಿದೆ ಅದನ್ನುಪಪಾದಿಸುವುದಕ್ಕಾಗಿ ಸನ್ಯಾಸಶಬ್ದದ ಅರ್ಥವು ಮೊದಲೇ ತಿಳಿದಿದ್ದರೂ ತಿರುಗಿ ಜ್ಞೇಯಃ ಎಂಬುದರಿಂದ ಹೇಳುತ್ತಾರೆ. ದ್ವೇಷಾದಿಗಳನ್ನು ಬಿಡುವುದೇ ಸನ್ಯಾಸವು ಸನ್ಯಾಸದಿಂದ ಮೋಕ್ಷವಾಗುತ್ತದೆಂದು ಶ್ರುತ್ಯಾದಿ ಪ್ರಸಿದ್ಧವು ॥ ೩ ॥

**ತಾ ॥ (೧) ದ್ವೇಷಾದಿವರ್ಜನಮೇವ ಸನ್ಯಾಸಶಬ್ದಾರ್ಥೋ ನ ಯತ್ಯಾಶ್ರಮೋಽತ್ರಾಭಿಪ್ರೇತ ಇತ್ಯಾಹ । ಜ್ಞೇಯ ಇತಿ ॥ (೨) ನ ಚ ಕಾಮ್ಯಾನಾಂ ಕರ್ಮಣಾಂ ನ್ಯಾಸಮಿತ್ಯನೇನ ವಿರೋಧಃ । ತೇನಾಪಿ ಸಹಿತಸ್ಯ ನ್ಯಾಸತ್ವಾತ್ ॥ (೩) ನ ಚ ತ್ಯಾಗಸ್ಯ ಪೃಥಗ್ವಚನಾದ್ವಿರೋಧಃ । ಕುರು(ಷು)ಪಾಂಡವವನ್ಯಾಸಾವಾಂತರಭೇದತ್ವಾತ್ತ್ಯಾಗಸ್ಯ ॥ ೩ ॥**

ಅ ॥ (೧) ದ್ವೇಷಾದಿಗಳನ್ನು ಬಿಡುವುದೇ ಸನ್ಯಾಸಶಬ್ದದ ಅರ್ಥವು **ಸನ್ಯಸ್ಯಕರ್ಮಾಣಾಂ** ಇತ್ಯಾದಿಗಳಲ್ಲಿ ಯತ್ಯಾಶ್ರಮವು ಅಭಿಪ್ರೇತವಲ್ಲ ಎಂದು, ಜ್ಞೇಯಃ ಎಂಬುವುದರಿಂದ ಹೇಳುತ್ತಾರೆ (ಹೀಗೆಯೇ **ಯೋಗಮಾತಿಷ್ಠ** ಇತ್ಯಾದಿಗಳಲ್ಲಿ ಭಗವಂತನಲ್ಲಿ ಅರ್ಪಿಸುವುದು ಇದುಮೊದಲಾದ ಯೋಗವೇ ಅಭಿಪ್ರೇತವಾಗಿದೆ ಗೃಹಸ್ಥಾಶ್ರಮವಲ್ಲ.) (೨) (**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸನ್ಯಾಸಂ** ಎಂದು ಕಾಮ್ಯಕರ್ಮಪರಿತ್ಯಾಗವೇ ಸನ್ಯಾಸವು ಎಂದು ಹೇಳತಕ್ಕ ವಾಕ್ಯದಿಂದ ವಿರೋಧವು ಬರುವುದರಿಂದ ದ್ವೇಷಾದಿಗಳನ್ನು ಬಿಡುವುದು ಸನ್ಯಾಸವೆಂದು ಹೇಳುವುದು ಹೇಗೆ? ಎಂದರೆ—) **ಕಾಮ್ಯಾನಾಂ ಕರ್ಮಣಾಂ ನ್ಯಾಸಂ** ಎನ್ನುವುದರಿಂದ ವಿರೋಧವೆಂದು ಹೇಳಕೂಡದು ದ್ವೇಷಾದಿಗಳನ್ನು ಬಿಡುವುದು ಮಾತ್ರ ಸನ್ಯಾಸವೆಂದು ಇಷ್ಟವಾಗಿದ್ದರೆ ವಿರೋಧವು ಬರುತ್ತಿತ್ತು ಅಷ್ಟು ಮಾತ್ರ ವಿವಕ್ಷಿತವಲ್ಲ ಮತ್ತೆ ಕಾಮ್ಯಕರ್ಮಪರಿತ್ಯಾಗವೂ ದ್ವೇಷಾದಿಗಳನ್ನು ಬಿಡುವುದೂ ಇವು ಎರಡೂ ಸನ್ಯಾಸವೆಂದು ಇಷ್ಟವಾಗಿದೆ (೩) (**ಕಾಮ್ಯಾನಾಂ** ಎಂಬುವ ಶ್ಲೋಕದಲ್ಲಿ ನ್ಯಾಸಕ್ಕಿಂತ **ತ್ಯಾಗವನ್ನು** ಪ್ರತ್ಯೇಕ ಹೇಳಿದ್ರಿಂದ ವಿರೋಧವು ಬರುತ್ತದೆ ಎಂದರೆ—) ನ್ಯಾಸಕ್ಕಿಂತ ತ್ಯಾಗವನ್ನು ಪ್ರತ್ಯೇಕವಾಗಿ ಹೇಳಿದ್ರಿಂದ ವಿರೋಧವಿಲ್ಲ (ಹೇಗಂದರೆ ಆಕಾಂಕ್ಷಾದಿಗಳನ್ನು ಬಿಡುವುದೇ ನ್ಯಾಸವು ನ್ಯಾಸ ತ್ಯಾಗಗಳು ಒಂದೇ ಹಾಗಾದರೆ ನ್ಯಾಸಕ್ಕಿಂತ ತ್ಯಾಗವು ಪ್ರತ್ಯೇಕವೆಂದದ್ದು ಹೇಗೆಂದರೆ—) ಪಾಂಡವರು ಕುರುಗಳಾದಾಗ್ಯೂ ಕುರುಗಳ ಏಕದೇಶರಾದುದರಿಂದ ಕುರುಪಾಂಡವರಿಗೆ ಸಂಪೂರ್ಣ ಐಕ್ಯವು ಕೂಡದಿರುವ ಪ್ರಯುಕ್ತ **ಸಂತಾನಬೀಜಂ ಕುರುಪಾಂಡವಾನಾಂ** ಎಂದು ಕುರುಗಳು ಪ್ರತ್ಯೇಕ, ಪಾಂಡವರು ಪ್ರತ್ಯೇಕವೆಂದು ಹೇಳಿದ್ದು ಹೇಗೋ, ಹೀಗೆಯೇ ತ್ಯಾಗವು ನ್ಯಾಸವಾದುದಾಗ್ಯು ನ್ಯಾಸದ ಪ್ರಭೇದವು ತ್ಯಾಗವಾದ ಕಾರಣ ತ್ಯಾಗನ್ಯಾಸಗಳಿಗೆ ಸಾಕ್ಷಾತ್ತಾಗಿ ಐಕ್ಯವು ಕೂಡದಿರುವುದರಿಂದ ನ್ಯಾಸಕ್ಕಿಂತ ತ್ಯಾಗವು ಪ್ರತ್ಯೇಕವೆಂದು ಹೇಳಿದ್ದು ಕೂಡುತ್ತದೆ ॥ ೩ ॥

ಪೀ—ಜ್ಞಾನವು ಹುಟ್ಟಲಿಕ್ಕೆ ಸನ್ನ್ಯಾಸದಂತೆ ಕರ್ಮಯೋಗವೂ ಕೂಡ ಆವಶ್ಯಕವೇ ಎಂದು ಶ್ರೀಕೃಷ್ಣನು ಹೇಳುತ್ತಾನೆ—

**ಗೀ ॥ ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಂ ॥ ೪ ॥**

ಅ ॥ ಸಾಂಖ್ಯಯೋಗೌ=ತತ್ವಜ್ಞಾನವೂ ಶ್ರೀಹರಿಗೆ ಪ್ರೀತಿಯಾಗಲಿ, ಎಂಬುವ ಬುದ್ಧಿಯಿಂದ ಕರ್ಮಗಳನ್ನು ಮಾಡುವುದೂ, ಇವೆರಡನ್ನು ಬಾಲಾಃ=ಅವಿವೇಕಿಗಳು, ಪೃಥಕ್=ಸಾಧ್ಯಸಾಧನಭಾವ ಗಳಿಲ್ಲದವುಗಳನ್ನಾಗಿ, (ಅಂದರೆ ಜ್ಞಾನಕ್ಕೆ ಕರ್ಮಯೋಗವು ಕಾರಣವಲ್ಲವೆಂದು) ಪ್ರವದಂತಿ=ಹೇಳು ತ್ತಾರೆ. (ಪಂಡಿತರು ಹಾಗೆ ಹೇಳುವುದಿಲ್ಲ) ಏಕಮಪಿ=ಜ್ಞಾನಮಾರ್ಗ ಕರ್ಮಮಾರ್ಗಗಳ ಮಧ್ಯ ದಲ್ಲಿ ಒಂದನ್ನು, ಸಮ್ಯಕ್=ಚೆನ್ನಾಗಿ, ಆಸ್ಥಿತಃ=ಮಾಡುವವನು, ಉಭಯೋಃ=ಜ್ಞಾನಕರ್ಮಗಳೆರಡ ರದ್ದು ಕೂಡ, ಫಲಂ=ಫಲವನ್ನು, ವಿಂದತೇ=ಹೊಂದುತ್ತಾನೆ ॥ ೪ ॥

ಪೀ—ಸನ್ನ್ಯಾಸವನ್ನು ತೆಗೆದುಕೊಂಡು ಯೋಗವನ್ನು ಬಿಡುವೆನೆಂಬುವ ಅಭಿಪ್ರಾಯದಿಂದ ಎರಡ ರಲ್ಲಿ ಶ್ರೇಷ್ಠವು ಯಾವುದೆಂದು ಅರ್ಜುನನು ಪ್ರಶ್ನೆಯನ್ನು ಮಾಡಿದಾಗ ಎರಡರಿಂದಲೂ ಮೋಕ್ಷವಾಗು ವುದು ಅದರಲ್ಲಿಯೂ ಸನ್ನ್ಯಾಸಕ್ಕಿಂತ ಯೋಗವು ಉತ್ತಮವು ಆದಕಾರಣ ಯುದ್ಧವನ್ನು ನೀನು ಬಿಡಕೂಡದೆಂದು ಹೇಳಿದೆ ಹೀಗೆ ಇರಲು ಸಾಂಖ್ಯಯೋಗಗಳು (ಜ್ಞಾನಕರ್ಮಗಳು) ಸಾಧ್ಯಸಾಧನ ಭಾವಗಳಿಲ್ಲದವುಗಳೆಂದು ಏಕೆ ಹೇಳುವುದು? ಹಾಗೆ ಹೇಳಲು ಕಾರಣವೇನು? ಎಂದರೆ—

**ಭಾ ॥ (೧) ಸನ್ನ್ಯಾಸೋ ಹಿ ಜ್ಞಾನಾಂತರಂಗತ್ವೇನೋಕ್ತೋ ನ ತಸ್ಯ ತತ್ತ್ವಗ್ರಹಣಾಯೋ-ತ್ಸಾದೌ । ಅತಃ ಕಥಂ ಸೋಽವಮ ಇತ್ಯತ ಆಹ । ಸಾಂಖ್ಯಯೋಗಾವಿತಿ ॥ (೨) ಉಭಯೋರಪ್ಯಂತರಂಗತ್ವೇನಾವಿರೋಧಃ ॥ (೩) (1) ಅಗ್ನಿಮುಗ್ಧೋ ಹ ವೈ ಧೂ-ಮತಾಂತಃ ಸ್ವಂ ಲೋಕಂ ನ ಪ್ರತಿಜಾನಾತಿ । (2) ಮಾ ವಃ ಪದವ್ಯಃ ಪಿತರಸ್ಮದಾಶ್ರಿ-ತಾಯಾ ಯಜ್ಞಶಾಲಾಸನಧೂಮವರ್ತ್ಮನಾಮಿತ್ಯಾದಿಕಾಮ್ಯಕರ್ಮವಿಷಯಮಿತಿ ಭಾವಃ । (೪) ಯೇ ತ್ವನ್ಯಥಾ ವದಂತಿ ತೇ ಬಾಲಾಃ ॥ ೪ ॥**

ಅ ॥ (೧) **ನ ತಸ್ಯ ತತ್ವಗ್ರಹಣಾಯ ಸಾಕ್ಷಾತ್** ಎಂದು ಭಾಗವತ ಐದನೇ ಸ್ಕಂಧದಲ್ಲಿ (ವಿಷಯ ಗಳಲ್ಲಿ ವೈರಾಗ್ಯವು ಹುಟ್ಟದಿದ್ದರೆ ಜ್ಞಾನವು ಹುಟ್ಟುವುದಿಲ್ಲವೆಂದು ಹೇಳಿದ್ದರಿಂದ ವಿಷಯಗಳಲ್ಲಿ ವೈರಾಗ್ಯ ದಿಂದಲೇ ಜ್ಞಾನವು ಹುಟ್ಟುವುದೆಂದು ಸಿಗುವುದರಿಂದ ವೈರಾಗ್ಯವೆನಿಸಿದ ಕಾಮ ಕ್ರೋಧ ಮೊದಲಾದುವು ಗಳ ಪರಿತ್ಯಾಗರೂಪವಾದ ಸನ್ನ್ಯಾಸವು) ಜ್ಞಾನವು ಹುಟ್ಟುವುದರಲ್ಲಿ ಆವಶ್ಯಕವೆಂದು ತೋರುತ್ತದೆ. (ಕರ್ಮಯೋಗವು **ಅಗ್ನಿಮುಗ್ಧಃ ಹ ವೈ ಧೂಮತಾಂತಃ** ಎಂಬುವಲ್ಲಿ ಜ್ಞಾನಕ್ಕೆ ವಿರೋಧಿಯೆಂದು ಹೇಳಿದೆ.) ಅದಕಾರಣ ಕರ್ಮಯೋಗಕ್ಕಿಂತ ಸನ್ನ್ಯಾಸವು ಅಧಮವೆಂದು ಹೇಳುವುದು ಹೇಗೆಂದರೆ— **ಸಾಂಖ್ಯಯೋಗೌ** ಎಂಬುವುದರಿಂದ (ಸನ್ನ್ಯಾಸದಂತೆ ಕರ್ಮಯೋಗವೂ ಜ್ಞಾನವು ಹುಟ್ಟುವುದರಲ್ಲಿ ಆವಶ್ಯಕವೇ) ಎನ್ನುತ್ತಾರೆ (೨) ಸನ್ನ್ಯಾಸ ಯೋಗ ಎರಡೂ ಜ್ಞಾನವು ಹುಟ್ಟುವುದರಲ್ಲಿ ಆವಶ್ಯಕಗಳಾ ಗಿರುವುದರಿಂದ ವಿರೋಧವಿಲ್ಲ (೩) (ಹಾಗಾದರೆ ಶ್ರುತಿ ಪುರಾಣಗಳಲ್ಲಿಯೇ ಕರ್ಮವು ಜ್ಞಾನಕ್ಕೆ ವಿರೋಧಿ ಯೆಂದು ಹೇಳುವದರಿಂದ ಹೀಗೆ ಹೇಳುವುದು ಹೇಗೆಂದರೆ—) (1) ಅಗ್ನಿಹೋತ್ರ ಮೊದಲಾದ ಎಲ್ಲಾ

ಕರ್ಮಗಳಲ್ಲಿ ಇದೇ ಶ್ರೇಯಸ್ಕರವೆಂದು ಭ್ರಮೆಗೊಂಡಿರುವ, ಹೋಮಧೂಮದಿಂದ ಬಾಡಿದ ಮುಖವುಳ್ಳವನು, ತನಗೂ ಸರ್ವರಿಗೂ ಆಶ್ರಯನಾದ ಪರಮಾತ್ಮನನ್ನು ತಿಳಿಯುವುದಿಲ್ಲ. (2) ಯಜ್ಞಶಾಲೆಯಲ್ಲಿ ಕುಳಿತಿರುವುದರಿಂದ ಧೂಮಾದಿಮಾರ್ಗವುಳ್ಳ ನಿಮ್ಮ ಮಾರ್ಗಗಳು ನಮ್ಮಿಂದ ಆಶ್ರಿತಗಳಾಗುವುದೇ ಇಲ್ಲ. ಎಂದು ಎಲೋ ತಂದೆಯಾದ ದಕ್ಷಪ್ರಜಾಪತಿಯೇ (ಎಂದು ಸತೀದೇವಿಯ ಮಾತು) ಆದಕಾರಣ ಕರ್ಮವು ಜ್ಞಾನಕ್ಕೆ ವಿರೋಧಿಯೆಂದು ಹೇಳಿದ ಮಾತು ಕಾಮ್ಯಕರ್ಮ ವಿಷಯಕವು (ಅಕಾಮ್ಯಕರ್ಮವು ನ್ಯಾಸದಂತೆ, ಜ್ಞಾನಕ್ಕೆ ಸಾಧನವೇ ಆಗಿದೆ) (೪) (ಹಾಗಾದರೆ ಅಕಾಮ್ಯಗಳಾದಾಗ್ಯೂ ನಿತ್ಯ ನೈಮಿತ್ತಿಕ ಕರ್ಮಗಳು ಪಾಪ ಪರಿಹಾರಕ್ಕೇನೇ ಉಪಯುಕ್ತಗಳು ತತ್ವಜ್ಞಾನವು ಹುಟ್ಟಲಿಕ್ಕೆ ಅವಶ್ಯಕಗಳಲ್ಲ, ಎಂದು ಜ್ಞಾನಿಗಳು ತಿಳಿಯುತ್ತಾರೆ ಎಂದರೆ—) ಯಾರು ಹಿಂದೆ ಹೇಳಿದ್ದಕ್ಕೆ ವ್ಯತ್ಯಾಸವಾಗಿ ಹೇಳುತ್ತಾರೋ, ಅವರು ಅವಿವೇಕಿಗಳು ಮೂಢರು ॥ ೪ ॥

ಟೀ— ಯತಿಗಳಿಗೆ ಜ್ಞಾನಮಾತ್ರದಲ್ಲಿ ಅಧಿಕಾರವು ಗೃಹಸ್ಥಾಶ್ರಮಿಗಳಿಗೆ ಕರ್ಮಮಾತ್ರದಲ್ಲಿ ಅಧಿಕಾರವು, ಎಂದು ಹಿಂದೆ ಹೇಳಿದ ಅಧಿಕಾರಿಭೇದವೂ ಕೂಡುವುದಿಲ್ಲವೆಂದು **ಸಾಂಖ್ಯಯೋಗೌ** ಎಂಬುವ ಶ್ಲೋಕದಿಂದ ಹೇಳುತ್ತಾರೆ ಈ ಶ್ಲೋಕದ ಅರ್ಥವು ಕಠಿಣವಾಗಿರುವುದರಿಂದ ಈ ಶ್ಲೋಕಕ್ಕೆ ಅರ್ಥವನ್ನು ಹೇಳುತ್ತಾರೆ—

**ತಾ ॥ (೧) ಬಾಲಾಸ್ತು ನ್ಯಾಸಶಬ್ದೇನ ಯತ್ಯಾಶ್ರಮಮೇವ ಸ್ವೀಕೃತ್ಯ ತತ್ಸ್ಥಾನಾಮೇವ ಸಾಂಖ್ಯಶಬ್ದೋದಿತಜ್ಞಾನಾಧಿಕಾರೋ ಗೃಹಸ್ಥಾನಾಮೇವ ಯೋಗಶಬ್ದೋದಿತಕರ್ಮಾಧಿಕಾರ ಇತಿ ಮನ್ಯಂತೇ । ತನ್ನ ಪಂಡಿತಾ ಮನ್ಯಂತೇ ॥ (೨) ಕುತಃ ಯಸ್ಮಾಜ್ಜ್ಞಾನಮಾರ್ಗಂ ಕರ್ಮಮಾರ್ಗಂ ಚ(ವಾ) ಸಮ್ಯಗಾಸ್ಥಿತ ಉಭಯೋರಪಿ ಫಲಂ ಪ್ರಾಪ್ನೋತಿ ॥ ೪ ॥**

ಅ ॥ (೧) ಅವಿವೇಕಿಗಳು ನ್ಯಾಸಶಬ್ದದಿಂದ ಯತ್ಯಾಶ್ರಮವನ್ನೇ ಸ್ವೀಕರಿಸಿ ಯತ್ಯಾಶ್ರಮದಲ್ಲಿದ್ದವರಿಗೇನೇ ಸಾಂಖ್ಯಶಬ್ದದಿಂದ ಹೇಳಲ್ಪಟ್ಟ ಜ್ಞಾನದಲ್ಲಿ ಅಧಿಕಾರವು ಗೃಹಸ್ಥಾಶ್ರಮಿಗಳಿಗೇನೇ ಯೋಗಶಬ್ದದಿಂದ ಹೇಳಲ್ಪಟ್ಟ ಕರ್ಮದಲ್ಲಿ ಅಧಿಕಾರವು, ಎಂದು ತಿಳಿಯುತ್ತಾರೆ ಪಂಡಿತರು ಹಾಗೆ ಅದನ್ನು ತಿಳಿಯುವುದಿಲ್ಲ (೨) ಏಕೆಂದರೆ ಯಾವ ಕಾರಣದಿಂದ ಜ್ಞಾನಮಾರ್ಗವನ್ನು ಕರ್ಮಮಾರ್ಗವನ್ನು ಚೆನ್ನಾಗಿ ಹೊಂದಿದವನು, ಜ್ಞಾನಕರ್ಮಗಳ ಎರಡರ ಫಲವನ್ನೂ ಹೊಂದುತ್ತಾನೋ ॥ ೪ ॥

ಟೀ—ಹಿಂದೆ ಹೇಳಿದ್ದ ರೀತಿಯಿಂದ ಜ್ಞಾನ ಕರ್ಮ ಇವೆರಡೂ ಯತ್ಕಿಂಚಿತ್ ಫಲಕ್ಕೆ ಸ್ವತಂತ್ರ ಸಾಧನಗಳೆಂದು ಹೇಳಲ್ಪಡುತ್ತದೆ. ಯೋಗವು ಜ್ಞಾನಕ್ಕೆ ಕಾರಣವೆಂದು ಸಿಗಲಿಲ್ಲ, ಎಂದರೆ—ಅದರ ಅಭಿಪ್ರಾಯವನ್ನು ತಾನೇ ಸ್ಪಷ್ಟಪಡಿಸುತ್ತಾರೆ—

**ಗೀ ॥ ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥ ೫ ॥**

ಅ ॥ ಸಾಂಖ್ಯೈಃ=ಜ್ಞಾನಿಗಳಿಂದ, ಯತ್ ಸ್ಥಾನಂ=ವೈಕುಂಠಾದಿರೂಪವಾದ, ಯಾವಸ್ಥಾನವು, ಪ್ರಾಪ್ಯತೇ=ಹೊಂದಲ್ಪಡುತ್ತದೋ, ತತ್=ಆ ಸ್ಥಾನವು, ಯೋಗೈರಪಿ=ಕರ್ಮಯೋಗಿಗಳಿಂದಲೂ, ಗಮ್ಯತೇ=ಜ್ಞಾನವನ್ನು ಸಂಪಾದಿಸಿ ಹೊಂದಲ್ಪಡುತ್ತದೆ ಸಾಂಖ್ಯಂ ಚ=ಜ್ಞಾನವನ್ನು, ಯೋಗಂ ಚ=

ಕರ್ಮಯೋಗವನ್ನು, ಏಕಂ=ಒಂದನ್ನಾಗಿ, (ಅಂದರೆ ಕರ್ಮಯೋಗವು ಜ್ಞಾನಕ್ಕೆ ಕಾರಣವನ್ನಾಗಿ) ಯಃ=ಯಾವಾತನು, ಪಶ್ಯತಿ=ನೋಡುತ್ತಾನೋ, ಸಃ=ಆತನೇ, ಪಶ್ಯತಿ=ತಿಳಿಯುತ್ತಾನೆ (ಅತನೇ ಜ್ಞಾನಿಯು) ॥ ೫ ॥

**ಭಾ ॥ ಏಕಮಪೀತ್ಯಸ್ಯಾಭಿಪ್ರಾಯಮಾಹ । ಯತ್ಸಾಂಖ್ಯೈರಿತಿ । ಯೋಗಿಭಿರಪಿ ಜ್ಞಾನ-ದ್ವಾರಾ ಜ್ಞಾನಫಲಂ ಪ್ರಾಪ್ಯತ ಇತ್ಯರ್ಥಃ ॥ ೫ ॥**

ಅ ॥ **ಯತ್ಸಾಂಖ್ಯೈಃ** ಎಂಬುದರಿಂದ ಏಕಮಪಿ ಎಂಬುದರ ಅಭಿಪ್ರಾಯವನ್ನು ಹೇಳುತ್ತಾರೆ **ತರತಿ ಶೋಕಮಾತ್ಮವಿತ್** ಇತ್ಯಾದಿಗಳಿಂದ ಜ್ಞಾನಕ್ಕೆ ಮೋಕ್ಷವು ಫಲ ಎಂದು ಪ್ರಮಿತವಾಗಿದೆ. ಅಂತಹ ಜ್ಞಾನದಫಲವಾದ ಮೋಕ್ಷವು ಕರ್ಮಯೋಗಿಗಳಿಂದಲೂ ಜ್ಞಾನವನ್ನು ಸಂಪಾದಿಸಿ ಹೊಂದಲ್ಪಡುತ್ತದೆ ಎಂದರ್ಥವು ಅಂತೂ ಯೋಗವು ಜ್ಞಾನಕ್ಕೆ ಸಾಧನವೆಂದು ಸಿದ್ಧವಾಯ್ತು. ॥ ೫ ॥

ಪೀ—ಜ್ಞಾನಿಗಳಾದ ಯತಿಗಳು ಹೊಂದತಕ್ಕ ಸ್ಥಾನವನ್ನು ಗೃಹಸ್ಥಾಶ್ರಮಿಗಳು ಹೊಂದುವುದರಿಂದ ಗೃಹಸ್ಥಾಶ್ರಮಿಗಳಿಗೂ ಜ್ಞಾನಾಧಿಕಾರವಿದೆ, ಎಂದು ಪೂರ್ವಾರ್ಧದಿಂದ ಹೇಳಿ ಯತ್ಸಾಂಖ್ಯೈಃ ಎಂಬುವ ಶ್ಲೋಕದ ಉತ್ತರಾರ್ಧದಿಂದ ಹೇಳುತ್ತಾರೆ ಅದರಲ್ಲಿ ಏಕಂಸಾಂಖ್ಯಂ ಎಂಬುವ ಉಪಸಂಹಾರವಾಕ್ಯದಲ್ಲಿ ಜ್ಞಾನಕರ್ಮಗಳಿಗೆ ಐಕ್ಯವನ್ನು ಏಕೆ ಹೇಳಿದ್ದೆಂದರೆ—

**ತಾ ॥ (೧) ತಸ್ಮಾಜ್ಜ್ಞಾನಿನಾಂ ಕರ್ಮಾಪ್ಯನುಷ್ಠೇಯಂ । ಕರ್ಮಿಣಾಮಪಿ ಗೃಹಸ್ಥಾ-(ದೀ)ನಾಂ ಜ್ಞಾತವ್ಯೋ ಭಗವಾನ್ ॥ (೨) ನ ಹಿ ಜ್ಞಾನಂ ವಿನಾ ಕರ್ಮಣಃ ಸಮ್ಯಗನುಷ್ಠಾನಂ ಭವತಿ ॥ (೩) ನಿಷ್ಕಾಮಂ ಜ್ಞಾನಪೂರ್ವಂ ಚ ನಿವೃತ್ತಮಿಹ ಚೋಚ್ಯತೇ । ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಂ ॥ (೪) ಬುದ್ಧ್ವಾ ವಿಹಿಂಸನ್ಪುಷ್ಪೈರ್ವಾ ಪ್ರಣವೇನ ಸಮರ್ಚಯೇತ್ । ವಾಸುದೇವಾತ್ಮಕಂ ಬ್ರಹ್ಮ ಮೂಲಮಂತ್ರೇಣ ವಾ ಯತಿಃ ॥ (೫) ಮುಕ್ತಿರಸ್ತೀತಿ ನಿಯಮೋ ಬ್ರಹ್ಮ-ದೃಗ್ಯಸ್ಯ ವಿದ್ಯತೇ । ತಸ್ಯಾಪ್ಯಾನಂದವೃದ್ಧಿಃ ಸ್ಯಾದ್ಯೈಷ್ಣವಂ ಕರ್ಮ ಕುರ್ವತಃ ॥ (೬) ಕರ್ಮ ಬ್ರಹ್ಮದೃಶಾ ಹೀನಂ ನ ಮುಖ್ಯಮಿತಿ ಕೀರ್ತಿತಂ । ತಸ್ಮಾತ್ಕರ್ಮೇತಿ ತತ್ಪ್ರಾಹುರ್ಯತ್ಕೃತಂ ಬ್ರಹ್ಮದರ್ಶಿನಾ ॥ (೭) ಏತಸ್ಮಾನ್ನ್ಯಾಸಿನಾಂ ಲೋಕಂ ಸಂ-ಯಾಂತಿ ಗೃಹಿಣೋಽಪಿ ಹಿ । ಜ್ಞಾನಮಾರ್ಗಃ ಕರ್ಮಮಾರ್ಗ ಇತಿ ಭೇದಸ್ತತೋ ನ ಹಿ । ತಸ್ಮಾದಾಶ್ರಮಭೇದೋಽಯಂ ಕರ್ಮಸಂಕೋಚಸಂಭವ ಇತಿ ವ್ಯಾಸ-ಸ್ಮೃತೇಃ ॥ ೫ ॥**

ಅ ॥ (೧) ಆದಕಾರಣ ಜ್ಞಾನಿಗಳಾದ ಯತಿಗಳು ಕರ್ಮವನ್ನು ಅವಶ್ಯವಾಗಿ ಮಾಡಬೇಕು ಕರ್ಮಿಗಳಾದ ಗೃಹಸ್ಥಾಶ್ರಮಿಗಳೂ ಶ್ರೀಹರಿಯನ್ನು ತಿಳಿಯಬೇಕು. (೨) (ಕರ್ಮಿಯು ಚೆನ್ನಾಗಿ ಕರ್ಮಗಳನ್ನು ಮಾಡಿಯೇ ಕರ್ಮಫಲವನ್ನು ಹೊಂದುತ್ತಾನೆಂದಾದರೆ ಅವನಿಗೆ ಜ್ಞಾನವು ಏತಕ್ಕೆಂದರೆ—) ಜ್ಞಾನವು ಇಲ್ಲದೆ ಕರ್ಮವನ್ನು ಚೆನ್ನಾಗಿ ಮಾಡಲಿಕ್ಕೆ ಆಗುವುದಿಲ್ಲ (ಹೀಗೆಯೇ ಚೆನ್ನಾಗಿ ಜ್ಞಾನಮಾರ್ಗವನ್ನು ಮಾಡಿಯೇ ಜ್ಞಾನದ ಫಲವನ್ನು ಹೊಂದುತ್ತಾನೆಂದು ಆದರೆ—ಜ್ಞಾನಿಗಳಿಗೆ ಕರ್ಮವು ಏತಕ್ಕೆ ಎಂದು ಶಂಕಾಬಂದರೆ—ಕರ್ಮವಿಲ್ಲದೆ ಜ್ಞಾನಮಾರ್ಗವನ್ನು ಚೆನ್ನಾಗಿ ಮಾಡಲಿಕ್ಕೆ ಆಗುವುದಿಲ್ಲ ಮೋಕ್ಷ

ದಲ್ಲಿ ಆನಂದಾತಿಶಯಕ್ಕಾಗಿ ಕರ್ಮವನ್ನು ಮಾಡಲೇಬೇಕು. ಆದುದರಿಂದ ಕರ್ಮಮಾಡದೆ ಇದ್ದರೆ ಸಂಪೂರ್ಣ ಜ್ಞಾನಫಲವು ದೊರೆಯಲಾರದು.) (೩) (ಈ ವಿಷಯದಲ್ಲಿ ಸ್ಮೃತಿಪ್ರಮಾಣವನ್ನು ಹೇಳುತ್ತಾರೆ-) ಫಲೇಚ್ಛೆಯನ್ನು ತೊರೆದು ಜ್ಞಾನಪೂರ್ವಕವಾದ ಕರ್ಮವು ನಿವೃತ್ತಕರ್ಮವೆನಿಸುತ್ತದೆ. ನಿವೃತ್ತಕರ್ಮವನ್ನು ಮಾಡುವವನು ಸನಾತನನಾದ ಬ್ರಹ್ಮನನ್ನು ಹೊಂದುತ್ತಾನೆ (ಅಂದರೆ ಮುಕ್ತನಾಗುತ್ತಾನೆ.) (ಇದರಿಂದ ಕರ್ಮಿಗಳಿಗೆ ಜ್ಞಾನವು ಆವಶ್ಯಕವೆಂದುಕ್ತವಾಯಿತು) (೪) ಯತಿಯು ತಾನು ಪುಷ್ಪವನ್ನು ಕೊಯ್ಯದೆ ಬುದ್ಧಿಯಿಂದ ಪ್ರಾಪ್ತಗಳಾದ ಮಾನಸಪುಷ್ಪಗಳಿಂದ ಅಥವಾ ಇತರರು ತಂದ ಪುಷ್ಪಗಳಿಂದ, ಪ್ರಣವದಿಂದ ಅಥವಾ ಮೂಲಮಂತ್ರದಿಂದ ವಾಸುದೇವರೂಪಿಯಾದ ಪರಬ್ರಹ್ಮನನ್ನು ಚೆನ್ನಾಗಿ ಪೂಜಿಸಬೇಕು (ಇದರಿಂದ ಜ್ಞಾನಿಗಳಿಗೂ ಕರ್ಮವು ಆವಶ್ಯಕವೆಂದುಕ್ತವಾಯಿತು) (೫) ಯಾರಿಗೆ ಪರಬ್ರಹ್ಮನ ತತ್ವಜ್ಞಾನವು ಇದೆಯೋ ಅವನಿಗೆ ಮುಕ್ತಿಯು ಇದೆ ಎಂದು ನಿಯಮವು ಆ ಜ್ಞಾನಿಯು ವಿಷ್ಣುವಿಗೆ ಪ್ರೀತಿಯನ್ನುಂಟುಮಾಡುವ ಕರ್ಮವನ್ನು ಮಾಡಿದರೆ ಅತನಿಗೂ ಮೋಕ್ಷದಲ್ಲಿ ಆನಂದವೃದ್ಧಿಯಾಗುವದು (೬) ಬ್ರಹ್ಮಜ್ಞಾನವಿಲ್ಲದಿರುವವನು ಮಾಡುವ ಕಾಮ್ಯಕರ್ಮದಿಂದ ಮುಖ್ಯಫಲವಾದ ಮೋಕ್ಷವು ಸಿಗುವುದಿಲ್ಲ ಅಥವಾ ಪರಬ್ರಹ್ಮನ ಅಪರೋಕ್ಷಜ್ಞಾನವಿಲ್ಲದವನು ಮಾಡುವ ನಿವೃತ್ತಕರ್ಮದಿಂದಲೂ ಕೂಡ ಸಾಕ್ಷಾತ್ ಮೋಕ್ಷವು ದೊರೆಯಲಾರದು ಆದಕಾರಣ ಜ್ಞಾನವಿಲ್ಲದ ಕರ್ಮವು ಅಮುಖ್ಯವಾಗಿರುವುದರಿಂದ ಬ್ರಹ್ಮಜ್ಞಾನಿಯು ಯಾವುದನ್ನು ಮಾಡುತ್ತಾನೋ, ಅದನ್ನೇ ಮುಖ್ಯ ಕರ್ಮವೆಂದು ಹೇಳುತ್ತಾರೆ. (೭) ಗೃಹಸ್ಥಾಶ್ರಮಿಗಳಿಗೂ ಜ್ಞಾನವು ಇದ್ದುದರಿಂದ ಗೃಹಸ್ಥಾಶ್ರಮಿಗಳೂ ಕೂಡ ಜ್ಞಾನಿಗಳಾದ ಸನ್ಯಾಸಿಗಳ ಲೋಕವನ್ನು ಹೊಂದುತ್ತಾರೆ ಆದಕಾರಣ ಜ್ಞಾನಮಾರ್ಗ, ಕರ್ಮಮಾರ್ಗವೆಂದು ಭೇದವು ಇಲ್ಲ.(ಜ್ಞಾನಿಗಳಿಗೂ ಕರ್ಮಿಗಳಿಗೂ ಇಬ್ಬರಿಗೂ ಜ್ಞಾನಕರ್ಮಗಳು ಇದ್ದರೆ ಸನ್ಯಾಸಾಶ್ರಮ ಗೃಹಸ್ಥಾಶ್ರಮವೆಂದು, ಆಶ್ರಮಭೇದವು ಹೇಗೆ ಕೂಡುತ್ತದೆಂದರೆ –) ಇಬ್ಬರಿಗೂ ಜ್ಞಾನಕರ್ಮಗಳು ಇವೆ, ಎಂದು ಯುಕ್ತ್ಯಾದಿಗಳಿಂದ ಸಿದ್ಧವಾಗಿರುವುದರಿಂದ ಆಶ್ರಮಭೇದವು ಜ್ಞಾನಕರ್ಮಗಳ ಸಂಕೋಚ ವಿಕಾಸಗಳಿಂದ ಹುಟ್ಟಿದ್ದು (ಅಂದರೆ ಗೃಹಸ್ಥಾಶ್ರಮಿಗಳಿಗೆ ಕರ್ಮವು ಹೆಚ್ಚು ಜ್ಞಾನವು ಕಡಿಮೆ ಸನ್ಯಾಸಾಶ್ರಮಿಗಳಿಗೆ ಜ್ಞಾನವು ಹೆಚ್ಚು ಕರ್ಮವು ಕಡಿಮೆ) ಎಂದು ವ್ಯಾಸಸ್ಮೃತಿಯು ॥ ೫ ॥

ಪೀ—ಸನ್ಯಾಸವು ಯೋಗಕ್ಕಿಂತ ಅಧಮವೆಂದು ಹೇಳಿದರೆ ಸಾಧಕವಿದೆ, ಎಂದು ಹೇಳುತ್ತಾರೆ—

**ಗೀ ॥ ಸನ್ನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ ॥ ೬ ॥**

ಅ ॥ ಮಹಾಬಾಹೋ=ಅರ್ಜುನನೇ, ಅಯೋಗತಃ=ಶ್ರೀಹರಿಗೆ ಪ್ರೀತಿಯಾಗಲಿ, ಎಂಬುವ ಬುದ್ಧಿಯಿಂದ ಕರ್ಮಾನುಷ್ಠಾನರೂಪವಾದ ಯೋಗವು ಇಲ್ಲವಾದರೆ, ಸನ್ನ್ಯಾಸಸ್ತು=ಕಾಮ ಕ್ರೋಧ ಮೊದಲಾದವುಗಳ ಪರಿತ್ಯಾಗರೂಪವಾದ ಸನ್ನ್ಯಾಸವಾದರೂ, ದುಃಖಂ=ದುಃಖವನ್ನು, ಆಪ್ತುಂ=ಹೊಂದುವುದಕ್ಕೇನೇ ಕಾರಣವಾಗುತ್ತದೆ (ಮೋಕ್ಷಕ್ಕೆ ಕಾರಣವಾಗುವುದಿಲ್ಲ ತಮಗೆ ಉಚಿತಗಳಾದ ಕರ್ಮಗಳನ್ನು ಮಾಡದಿದ್ದರೆ ನರಕಾದ್ಯನರ್ಥಪ್ರಾಪ್ತಿಯೂ ಆಗುತ್ತದೆ) ಮುನಿಃ=ಸನ್ನ್ಯಾಸಿಯು, ಯೋಗಯುಕ್ತಃ=ಯೋಗದಿಂದ ಕೂಡಿದವನಾಗಿ, ನ ಚಿರೇಣ=ಶೀಘ್ರವಾಗಿ, ಬ್ರಹ್ಮ=ಪರಬ್ರಹ್ಮನನ್ನು, ಅಧಿಗಚ್ಛತಿ=ಹೊಂದುತ್ತಾನೆ ॥ ೬ ॥

**ಭಾ ॥ (೧) ಇತಶ್ಚ ಸನ್ನ್ಯಾಸಾದ್ಯೋಗೋ ವರ ಇತ್ಯಾಹ । ಸನ್ನ್ಯಾಸಸ್ತ್ವಿತಿ ॥ (೨) ಯೋಗಾಭಾವೇ ಮೋಕ್ಷಾದಿಫಲಂ ನ ಭವತಿ । ಅತಃ ಕಾಮಜಯಾದಿದುಃಖಮೇವ ತಸ್ಯ ॥ (೩) ಮೋಕ್ಷಾದ್ಯೇವ ಹಿ ಫಲಂ ಅನ್ಯತ್ಫಲಮಲ್ಪತ್ವಾದಫಲಮೇವೇತ್ಯಾಶ-**

ಯಃ ॥(೪) ತಚ್ಚೋಕ್ತಂ । ವಿನಾ ಮೋಕ್ಷಫಲಂ ಯತ್ತು ನ ತತ್ಫಲಮುದೀರ್ಯತೇ ಇತಿ ಪಾದ್ಮೇ ॥ (೫) ಯತ್ತು ಮಹಾಫಲಯೋಗ್ಯಂ ತಸ್ಯಾಲ್ಪಂ ಫಲಮೇವ ನ ಭವತಿ । ಯಥಾ ಪದ್ಮರಾಗಸ್ಯ ತಂಡುಲಮುಷ್ಟಿಃ ॥ (೬) ಮಹಾಫಲಸ್ಯ ಯೋಗಯುಕ್ತಶ್ಚೇತ್ಸನ್ನ್ಯಾಸ ಇತ್ಯಾಹ । ಯೋಗಯುಕ್ತ ಇತಿ ॥ (೭) ಮುನಿಃ ಸನ್ನ್ಯಾಸೀ । ತಚ್ಚೋಕ್ತಂ । ಸ ಹಿ ಲೋಕೇ ಮುನಿರ್ನಾಮ ಯಃ ಕಾಮಕ್ರೋಧವರ್ಜಿತ ಇತಿ ॥ ೬ ॥

ಅ ॥ (೧) (ಹಿಂದೆ ಸನ್ನ್ಯಾಸವು ಯೋಗಕ್ಕಿಂತ ನಿಕೃಷ್ಟವೆಂಬುವ ವಿಷಯದಲ್ಲಿ ಬಾಧಕವನ್ನು ಪರಿಹರಿಸಿರುವರು ಈಗ ಸಾಧಕವನ್ನು ಹೇಳುತ್ತಾರೆ ಆದಕಾರಣ) ಬಾಧಕವು ಇಲ್ಲದಿದ್ದು ಸಾಧಕವಿದ್ದ ಪ್ರಯುಕ್ತವೇ ಸನ್ನ್ಯಾಸಕ್ಕಿಂತ ಯೋಗವು ಶ್ರೇಷ್ಠವೆಂದು **ಸನ್ನ್ಯಾಸಸ್ತು** ಎಂಬುವ ಶ್ಲೋಕದಿಂದ ಹೇಳುತ್ತಾರೆ (೨) (ಮೊದಲು ಸನ್ನ್ಯಾಸದಿಂದ ಮೋಕ್ಷವಾಗುತ್ತದೆಂದು ಹೇಳಿದೆ ಈಗ ದುಃಖವುಂಟಾಗುತ್ತದೆಂದು ಹೇಳುವುದು ಹೇಗೆ? ಮತ್ತು ಇದರಿಂದ ಯಾವ ಸಾಧಕವನ್ನು ಹೇಳಿದಂತೆ ಆಯಿತೆಂದರೆ---) ಶ್ರೀಹರಿಗೆ ಪ್ರೀತಿಯಾಗಲಿ, ಎಂಬುವ ಬುದ್ಧಿಯಿಂದ ಕರ್ಮವನ್ನು ಮಾಡದಿದ್ದರೆ (ಸನ್ನ್ಯಾಸ ಮಾತ್ರದಿಂದ) ಜ್ಞಾನವೂ ಮೋಕ್ಷವೂ ದೊರೆಯಲಾರದು ಆದಕಾರಣ ಭಗವಂತನಿಗೆ ಪ್ರೀತಿಯಾಗಲಿ, ಎಂಬುವ ಬುದ್ಧಿಯಿಂದ ಯೋಗವನ್ನು ಮಾಡದಿರುವ ಸನ್ನ್ಯಾಸಿಗೆ ವಿಷಯಾಭಿಲಾಷೆಯನ್ನು ಮಾತ್ರ ತನ್ನ ವಶದಲ್ಲಿ ಇಟ್ಟುಕೊಳ್ಳುವುದು ಇತ್ಯಾದಿಗಳಿಂದ ದುಃಖವೇ ಉಂಟಾಗುವುದು (೩) (ಯೋಗವು ಇಲ್ಲವಾದರೆ ಸನ್ನ್ಯಾಸವು ನಿಷ್ಫಲವೇ ಎಂಬುದು ಕೂಡುವುದಿಲ್ಲ ಏಕೆಂದರೆ ಮೋಕ್ಷಾದಿಗಳು ದೊರೆಯದಿದ್ದರೂ ತತ್ಕಾಲದಲ್ಲಿ ಅಪಮಾನ ಪ್ರಯುಕ್ತ ದುಃಖಾಭಾವರೂಪ ಫಲವಿದೆ ಎಂದರೆ ) ಮುಖ್ಯಫಲವೆಂದರೆ ಮೋಕ್ಷ ಮೊದಲಾದುದೇ, ಬೇರೆ ಫಲವು ದೊರೆತರೂ ಅಲ್ಪವಾಗಿರುವುದರಿಂದ ಮುಖ್ಯ ಫಲವು ದೊರೆಯಲಿಲ್ಲವೆಂದೇ ಅಭಿಪ್ರಾಯವು. (೪) (ಆ ವಿಷಯದಲ್ಲಿ ಪುರಾಣಸಮ್ಮತಿಯನ್ನು ಹೇಳುತ್ತಾರೆ.) ಮೋಕ್ಷರೂಪ ಫಲವು ಹೊರತು ಯಾವುದು ಫಲವೋ ಅದು ಮುಖ್ಯ ಫಲವಲ್ಲವೆಂದು ಪಾದ್ಮದಲ್ಲಿ ಹೇಳಿದೆ (೫) (ಹಾಗಾದರೆ ಮೋಕ್ಷರೂಪಫಲವಿಲ್ಲದಿದ್ದರೂ ಕೃಷ್ಯಾದಿಗಳಿಗೆ ಧಾನ್ಯಾದಿಗಳು ದೊರೆತಲ್ಲಿ ಸಫಲವೆಂದು ಹೇಳುವುದರಿಂದ ಫಲವಿಲ್ಲವೆಂದು ಹೇಳುವುದು ಹೇಗೆಂದರೆ—) ಯಾವುದು ಮಹಾ ಫಲವನ್ನು ಸಾಧಿಸಲಿಕ್ಕೆ ಯೋಗ್ಯವೋ ಅದಕ್ಕೆ ಅಲ್ಪವಾದುದು ಫಲವೇ ಆಗುವುದಿಲ್ಲ. ಏಕೆ ಆಗುವುದಿಲ್ಲವೆಂದರೆ ಯಥೇಷ್ಟ ಹಣವು ಸಿಗುವ ಅನರ್ಘ್ಯವಾದ ಪದ್ಮರಾಗ ಮಣಿಯನ್ನು ಒಬ್ಬನಿಗೆ ಕೊಟ್ಟು ಅವನಿಂದ ಒಂದು ಮುಷ್ಟಿ ಅಕ್ಕಿಯನ್ನು ಮಾತ್ರ ತೆಗೆದುಕೊಂಡರೆ ಹೇಗೆ ಅದು ಪದ್ಮರಾಗ ಮಣಿಗೆ ಯೋಗ್ಯವಾದ ಫಲವಾಗುವುದಿಲ್ಲವೋ, ಹಾಗೆಯೇ ಯೋಗವಿಲ್ಲದ ಸನ್ನ್ಯಾಸದಿಂದ ಸಿಗುವ ದುಃಖಾಭಾವರೂಪವಾದ ಯತ್ಕಿಂಚಿತ್ ಫಲವು ಫಲವೆಂದು ಅನ್ನಿಸಿಕೊಳ್ಳುವುದಿಲ್ಲ (೬) (ಹಾಗಾದರೆ ಸನ್ನ್ಯಾಸಕ್ಕಿಂತ ಯೋಗವು ಶ್ರೇಷ್ಠವೆಂದು ಇದರಿಂದ ಸಾಧಿತವಾಯಿತು ಉತ್ತರಾರ್ಧವು ಏತಕ್ಕೆಂದರೆ—) ಸನ್ನ್ಯಾಸವು ಯೋಗದಿಂದ ಕೂಡಿದ್ದರೆ ಮೋಕ್ಷಾದಿ ರೂಪವಾದ ಮಹಾ ಫಲವು (ಲಭಿಸುತ್ತದೆ) ಎಂದು, **ಯೋಗಯುಕ್ತಃ** ಎಂಬುದರಿಂದ ಹೇಳುತ್ತಾರೆ (೭) (ಹಾಗಾದರೆ ಇಲ್ಲಿ ಸನ್ನ್ಯಾಸವನ್ನು ಹೇಳುವ ಪದವು ಇಲ್ಲ, ಆದಕಾರಣ ಹೀಗೆ ಹೇಳುವುದು ಹೇಗೆಂದರೆ—) ಮುನಿಃ=ಸನ್ನ್ಯಾಸಿಯು (ಮುನಿಶಬ್ದವು ಕಾಮಾದಿಗಳ ಪರಿತ್ಯಾಗಾದಿರೂಪವಾದ ಸನ್ನ್ಯಾಸವನ್ನು ಹೇಳುತ್ತದೆಂದು ಹೇಗೆ ಎಂದರೆ—) ಯಾವನು ಕಾಮ ಕ್ರೋಧಾದಿಗಳನ್ನು ಬಿಟ್ಟವನೋ ಅವನೇ ಲೋಕದಲ್ಲಿ ಮುನಿಃ ಎಂದು ಪ್ರಸಿದ್ಧನು, ಎಂದು ಹೇಳಲ್ಪಟ್ಟಿದೆ ॥ ೬ ॥

ಪೀ—ಯೋಗ ಸನ್ನ್ಯಾಸಗಳೆರಡು ಒಟ್ಟು ಸೇರಿದರೇನೇ ಅವುಗಳಿಂದ ಮೋಕ್ಷವು ಬೇರೆ ಬೇರೆ ಆದರೆ **ಸನ್ನ್ಯಾಸಸ್ತು** ಎಂಬುವ ಶ್ಲೋಕದಿಂದ ಬಾಧಕವನ್ನು ಹೇಳುತ್ತಾರೆ ಅದರ ಅರ್ಥವನ್ನು ಸ್ಮೃತಿಯಿಂದಲೇ ಹೇಳುತ್ತಾರೆ—

ತಾ ॥ (೧) ಮೋಕ್ಷೋಪಾಯೋ ಯೋಗ ಇತಿ ತದ್ರೂಪೋ ನ್ಯಾಸ ಏವ ತು । ವಿಷ್ಣ್ವರ್ಪಿತತಯಾ ಭದ್ರೋ ನಾನ್ಯೋ ನ್ಯಾಸಃ ಕಥಂಚನೇತ್ಯಾಗ್ನೇಯೇ ॥ (೨) ವಿಷ್ಣ್ವರ್ಪಿತತ್ವಾದಿಯೋಗರೂಪತ್ವಂ ವಿನಾ ಕೇವಲಕರ್ಮತ್ಯಾಗೋ ನರಕಫಲ ಏವ ॥ (೩) ಯಂ ಸನ್ನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವೇತಿ ವಕ್ಷ್ಯಮಾಣತ್ವಾತ್ ॥ (೪) ಯೋಗವಿಶೇಷತ್ವಾನ್ನ್ಯಾಸಸ್ಯ ಪೃಥಗುಕ್ತಿಃ ॥ ೬ ॥

ಅ ॥ (೧) ಮೋಕ್ಷಕ್ಕೆ ಸಾಧನವಾದುದು ಯೋಗವೆನಿಸುತ್ತದೆ ಶ್ರೀವಿಷ್ಣುವಿಗೆ ಅರ್ಪಿಸಿದರೇನೇ ಯೋಗರೂಪವಾದ ಸನ್ನ್ಯಾಸವು ಮೋಕ್ಷಕ್ಕೆ ಕಾರಣವಾಗುತ್ತದೆ ಯೋಗದಿಂದ ಕೂಡದಿರುವ ಕೇವಲ ಸನ್ನ್ಯಾಸವು ಹೇಗೂ ಮೋಕ್ಷಕ್ಕೆ ಕಾರಣವಾಗಲಾರದು, ಎಂದು ಆಗ್ನೇಯಪುರಾಣದಲ್ಲಿದೆ (೨) ಶ್ರೀಹರಿಯು ಪ್ರೀತನಾಗಲಿ, ಎಂಬ ಬುದ್ಧಿಯಿಂದ ಕೂಡಿ ಯೋಗರೂಪತ್ವವನ್ನು ಹೊಂದದೆ ಕೇವಲ ಮಾಡಿದ ಕರ್ಮಗಳನ್ನು ಬಿಡುವುದಕ್ಕೂ ಮತ್ತು ಸರ್ಣಾಶ್ರಮಗಳಿಗೆ ಉಚಿತವಾದ ಕರ್ಮಗಳನ್ನು ಶ್ರೀವಿಷ್ಣುವಿನಲ್ಲಿ ಅರ್ಪಿಸಬಾರದು ಎಂಬುವ ಬುದ್ಧಿಯಿಂದ ಮಾಡಿದ ಕರ್ಮತ್ಯಾಗಕ್ಕೂ ನರಕವೇ ಫಲವು (೩) (ಅಯೋಗತಃ ಎಂದು ಸನ್ನ್ಯಾಸಯೋಗಕ್ಕೆ ರೂಪತ್ವವಿಲ್ಲದೆ ಎಂದು ಏಕೆ ಹೇಳುವುದು? ಯೋಗಂ ವಿನಾ=ಯೋಗವನ್ನು ವಿನಹ ಎಂದೇ ಏಕೆ ಹೇಳಬಾರದು ಎಂದರೆ-) ಯಾವುದನು ಸನ್ನ್ಯಾಸವನ್ನಾಗಿ ಹೇಳುತ್ತಾರೋ, ಅದನ್ನು ಯೋಗವನ್ನಾಗಿ ತಿಳಿ ಎಂದು ಮುಂದಕ್ಕೆ ಹೇಳುವರು (ಯಂ ಸನ್ನ್ಯಾಸಂ ಎಂದು ಯೋಗಸನ್ನ್ಯಾಸಗಳಿಗೆ ಐಕ್ಯವನ್ನು ಮುಂದಕ್ಕೆ ಹೇಳುವುದರಿಂದ ಸನ್ನ್ಯಾಸವು ಯೋಗವೆಂದೇ ಹೇಳಬೇಕು) (೪) (ಯೋಗಸನ್ನ್ಯಾಸಗಳು ಒಂದೇ ಆದರೆ ಸನ್ನ್ಯಾಸಃ ಕರ್ಮಯೋಗಶ್ಚ ಎಂದು ಪ್ರತ್ಯೇಕವಾಗಿ ಹೇಳಿದ್ದು ಹೇಗೆ ಕೂಡುತ್ತದೆ? ಎಂದರೆ-) ನ್ಯಾಸವು ಯೋಗದ ಪ್ರಭೇದವಾಗಿರುವುದರಿಂದ ಪ್ರತ್ಯೇಕವಾಗಿ ಹೇಳಿದ್ದು (ಅಂದರೆ ಯೋಗಕ್ಕೂ ನ್ಯಾಸಕ್ಕೂ ಒಂದೇ ಅರ್ಥವು ಆದರೆ ನ್ಯಾಸವು ಯೋಗದ ಅವಾಂತರವಿಶೇಷವು ಪಾಂಡವರು ಕುರುಗಳೇ ಆದಾಗ್ಯೂ ಅವಾಂತರವಿಶೇಷವಿದ್ದ ಪ್ರಯುಕ್ತ ಕುರುಪಾಂಡವರು ಎಂದು ಹೇಳಿದಂತೆಯೇ ಪ್ರತ್ಯೇಕ ಉಕ್ತಿಯು ಕೂಡುತ್ತದೆ) ॥ ೬ ॥

ಪೀ—ಯೋಗಯುಕ್ತವಾದ ಸನ್ನ್ಯಾಸವು ಮೋಕ್ಷಕ್ಕೆ ಕಾರಣವೆಂಬುದನ್ನು ವಿವರವಾಗಿ ಹೇಳುತ್ತಾರೆ-

ಗೀ ॥ ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।
ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥ ೭ ॥

ಅ ॥ ಯೋಗಯುಕ್ತಃ=ಶ್ರೀಹರಿಗೆ ಪ್ರೀತಿಯಾಗಲಿ, ಎಂಬುವ ಬುದ್ಧಿಯಿಂದ ಮಾಡತಕ್ಕ ಕರ್ಮರೂಪವಾದ ಯೋಗದಿಂದ ಕೂಡಿದ, ವಿಶುದ್ಧಾತ್ಮಾ=ಪರಿಶುದ್ಧವಾದ ಸ್ವಭಾವವುಳ್ಳ, ವಿಜಿತಾತ್ಮಾ=ಮನಸನ್ನು ವಶಪಡಿಸಿಕೊಂಡಿರತಕ್ಕ, ಜಿತೇಂದ್ರಿಯಃ=ಎಲ್ಲಾ ಇಂದ್ರಿಯಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುವ, ಸರ್ವಭೂತಾತ್ಮಭೂತಾತ್ಮಾ=ಬ್ರಹ್ಮರುದ್ರ ಮೊದಲಾದವರಿಗೆಲ್ಲರಿಗೂ ಸ್ವಾಮಿಯಾದ ಶ್ರೀಪರಮಾತ್ಮನೇ ನನಗೂ ಸ್ವಾಮಿಯು ಎಂದು ತಿಳಿದುಕೊಂಡ ಮನುಷ್ಯನು, ಕುರ್ವನ್ನಪಿ=ಎಲ್ಲಾ ಕರ್ಮಗಳನ್ನು ಮಾಡುತ್ತಿದ್ದಾಗ್ಯೂ, ನ ಲಿಪ್ಯತೇ=ಕರ್ಮದಿಂದ ಲೇಪಿಸಲ್ಪಡುವುದಿಲ್ಲ (ಅಂದರೆ ಮುಕ್ತನಾಗುತ್ತಾನೆ) ॥ ೭ ॥

ಭಾ॥ (೧) ಏತದೇವ ಪ್ರಪಂಚಯತಿ । ಯೋಗಯುಕ್ತ ಇತಿ ॥ (೨) ಸರ್ವಭೂತಾತ್ಮಭೂತಃ ಪರಮೇಶ್ವರಃ ॥ ಯಚ್ಚಾಪ್ನೋತೀತ್ಯಾದೇಃ । (೩) ಸ ಆತ್ಮಭೂತಃ ಸ್ವಸ್ಯ ಸಮೀಪಂ ಪ್ರತ್ಯಾದಾನಾದಿಕರ್ತಾ ಯಸ್ಯ ಸ ಸರ್ವಭೂತಾತ್ಮಭೂತಾತ್ಮಾ ॥ ೭ ॥

ಅ || (೧) ಯೋಗಯುಕ್ತಃ ಎಂಬುವ ಶ್ಲೋಕದಿಂದ ಯೋಗಯುಕ್ತವಾದ ಸನ್ಯಾಸಕ್ಕೆ ಮೋಕ್ಷ ರೂಪವಾದ ಮಹಾ ಫಲವಿದೆ ಎಂಬುದನ್ನೇ ವಿವರಿಸುತ್ತಾರೆ (೨) (ಸರ್ವಭೂತಾತ್ಮಭೂತಾತ್ಮಾ ಎಂಬುದರಿಂದ ಜೀವನು ಪರಮಾತ್ಮನ ಸ್ವರೂಪನೆಂದು ಹೇಳಲ್ಪಡುತ್ತದೆ, ಎಂಬ ಅನ್ಯಥಾ ಪ್ರತೀತಿಯನ್ನು ನಿರಾಕರಿಸುತ್ತಾರೆ-) ಯಚ್ಚಾಪ್ನೋತಿ ಇತ್ಯಾದಿ ಪ್ರಮಾಣಗಳಿಂದ ಸಮಸ್ತ ಪ್ರಾಣಿಗಳಿಗೆ ಸ್ವಾಮಿಯಾದವನು ಶ್ರೀಪರಮಾತ್ಮನು ಅಂತಹ ಶ್ರೀಹರಿಯೇ ಸ್ವಾಮಿಯಾದವನು ತನ್ನ ಸಮೀಪಕ್ಕೆ ತೆಗೆದು ಕೊಳ್ಳುವನು (ಅಂದರೆ ಜೀವರನ್ನು ತನ್ನ ವಶದಲ್ಲಿ ಇಟ್ಟುಕೊಳ್ಳುವನು ) ಇತ್ಯಾದಿಗಳನ್ನು ಮಾಡುವವನು ಯಾವ ಮನುಷ್ಯನಿಗೋ, ಆ ಮನುಷ್ಯನು ಸರ್ವಭೂತಾತ್ಮ ಭೂತಾತ್ಮಾ ಎನಿಸುತ್ತಾನೆ || ೭ ||

ಪೀ— ಯೋಗಯುಕ್ತನಾದ ಸನ್ಯಾಸದಿಂದ ಮೋಕ್ಷವಾಗುತ್ತದೆಂದು ಹೇಳಿದ್ದನ್ನು ಯೋಗಯುಕ್ತಃ ಎನ್ನುವುದರಿಂದ ವಿವರಿಸುತ್ತಾರೆ ಆದರಲ್ಲಿ ಯೋಗಸನ್ಯಾಸಗಳನ್ನೇ ಹೇಳಬೇಕಾದುದು ಅವುಗಳನ್ನು ಯೋಗಯುಕ್ತಾದಿಪದಗಳಿಂದಲೇ ಹೇಳಿಯಾಯಿತು. ಅದಕಾರಣ ಸರ್ವಭೂತಾತ್ಮಭೂತಾತ್ಮಾ ಎಂಬುದು ಏತಕ್ಕೆಂದರೆ—

ತಾ || (೧) ಸರ್ವಭೂತಾತ್ಮಭೂತಾತ್ಮೇತಿ ಮುಖ್ಯೋ ಯೋಗಃ || (೨) ಆದಾನಾತ್ಸರ್ವ. ಭೂತಾನಾಂ ವಿಷ್ಣುರಾತ್ಮಾ ಪ್ರಕೀರ್ತಿತಃ | ಸರ್ವಭೂತಾತ್ಮಭೂತಾತ್ಮಾ ತತ್ರ ಭೂತಮನಾಃ ಪುಮಾನಿತಿ ಚ || ೭ ||

ಅ || (೧) ಸರ್ವಭೂತಾತ್ಮಭೂತಾತ್ಮಾ ಎಂಬುದು ಮುಖ್ಯ ಯೋಗವು (ಅಂದರೆ ಯೋಗಯುಕ್ತ ಪದದಿಂದ ಕರ್ಮಯೋಗವನ್ನು ಹೇಳಿದ್ದು ಇದರಿಂದ ಧ್ಯಾನಯೋಗವನ್ನು ಹೇಳುವುದು ) (೨) (ಈ ಪದದಿಂದ ಅಧಿಕಾರಿಗಳಿಗೆ ಸಮಸ್ತ ಪ್ರಾಣಿಗಳಿಂದ ಐಕ್ಯವು ಹೇಳಲ್ಪಡುತ್ತದೆ. ಧ್ಯಾನಯೋಗವು ಹೇಳಲ್ಪಡುತ್ತದೆಂಬುವುದು ಹೇಗೆ? ಎಂದರೆ—) ಶ್ರೀವಿಷ್ಣುವು ಸಮಸ್ತ ಪ್ರಾಣಿಗಳನ್ನು ವಶದಲ್ಲಿಟ್ಟುಕೊಳ್ಳುವುದರಿಂದ ಆತ್ಮಾ ಎನಿಸುತ್ತಾನೆ ಅಂತಹ ಶ್ರೀವಿಷ್ಣುವಿನಲ್ಲಿ ಮನಸ್ಸನ್ನು ಸ್ಥಿರವಾಗಿ ಇಟ್ಟಿರುವ ಪುರುಷನು ಸರ್ವಭೂತಾತ್ಮಭೂತಾತ್ಮಾ ಎನಿಸುತ್ತಾನೆ || ೭ ||

ಪೀ— ಜ್ಞೇಯಸ್ಸ ನಿತ್ಯಸನ್ಯಾಸೀ ಎಂಬುದರಿಂದ ಸನ್ಯಾಸವನ್ನು ಸ್ಪಷ್ಟೀಕರಿಸಿದ್ದಾಗ್ಯೂ ಅದನ್ನು ಸಂಕಲ್ಪತ್ಯಾಗವಾಡಬೇಕೆಂಬುವ ಉಕ್ತಿಯಿಂದ ತಿರುಗಿ ಸ್ಪಷ್ಟೀಕರಿಸುತ್ತಾರೆ—

ಗೀ || ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ |
ಪಶ್ಯನ್ ಶೃಣ್ವನ್ಸ್ಪೃಶಞ್ಜಿಘ್ರನ್ನಶ್ನನ್ಗಚ್ಛನ್ಸ್ವಪನ್ಶ್ವಸನ್ || ೮ ||
ಪ್ರಲಪನ್ವಿಸೃಜನ್ಗೃಹ್ಣನ್ನುನ್ಮಿಷನ್ನಿಮಿಷನ್ನಪಿ |
ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ || ೯ ||

ಅ || ಯುಕ್ತಃ= ಕರ್ಮಯೋಗವನ್ನು ಮಾಡುತ್ತಿರುವ, ತತ್ತ್ವವಿತ್=ಶ್ರೀಹರಿಯ ತತ್ತ್ವವನ್ನು ಅರಿತವನು, ಪಶ್ಯನ್= ನೋಡುತ್ತಾ ಇದ್ದಾಗ್ಯೂ, ಶೃಣ್ವನ್= ಕೇಳುತ್ತಿದ್ದಾಗ್ಯೂ, ಸ್ಪೃಶನ್= ಮುಟ್ಟುತ್ತಾ ಇದ್ದಾಗ್ಯೂ, ಜಿಘ್ರನ್ = ಸುವಾಸನೆ ದುರ್ವಾಸನೆಗಳನ್ನು ತೆಗೆದುಕೊಳ್ಳುತ್ತಿದ್ದಾಗ್ಯೂ ಅಶ್ನನ್= ಉಣ್ಣುತ್ತಾ ಇದ್ದಾಗ್ಯೂ, ಗಚ್ಛನ್= ಹೋಗುತ್ತಾ ಇದ್ದಾಗ್ಯೂ, ಸ್ವಪನ್= ನಿದ್ದೆ ಮಾಡುತ್ತಿದ್ದಾಗ್ಯೂ, ಶ್ವಸನ್=

ಉಸಿರಾಡುತ್ತಾ ಇದ್ದಾಗ್ಯೂ, ಪ್ರಲಪನ್=ಸ್ವೇಚ್ಛಾನುಸಾರ ಮಾತನಾಡುತ್ತಿದ್ದಾಗ್ಯೂ, ವಿಸೃಜನ್= ಬಿಡುತ್ತಿದ್ದಾಗ್ಯೂ, ಗೃಹ್ಣನ್=ತೆಗೆದುಕೊಳ್ಳುತ್ತಿದ್ದಾಗ್ಯೂ, ಉನ್ಮಿಷನ್=ಕಣ್ಣನ್ನು ತೆರೆಯುತ್ತಿದ್ದಾಗ್ಯೂ, ನಿಮಿಷನ್=ಕಣ್ಣುಗಳನ್ನು ಮುಚ್ಚಿಕೊಂಡು ಇದ್ದಾಗ್ಯೂ, (ಅಂದರೆ ದರ್ಶನ ಶ್ರವಣ ಸ್ಪರ್ಶನ ಮೊದಲಾದ ಜ್ಞಾನೇಂದ್ರಿಯ ಕರ್ಮೇಂದ್ರಿಯ ವ್ಯಾಪಾರಗಳನ್ನು ಮಾಡುತ್ತಿದ್ದಾಗ್ಯೂ,) ಇಂದ್ರಿಯಾಣಿ=ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು, ಇಂದ್ರಿಯಾರ್ಥೇಷು=ಆಯಾಯ ಇಂದ್ರಿಯ ವಿಷಯಗಳಲ್ಲಿ, ವರ್ತಂತೇ=ಶ್ರೀ ಹರಿಯ ಇಚ್ಛೆಯಿಂದ ತಂತಮ್ಮ ವ್ಯಾಪಾರಗಳನ್ನು ಮಾಡುತ್ತವೆಂದು, ಧಾರಯನ್=ತಿಳಿದುಕೊಂಡವ ನಾಗಿ ಕಿಂಚಿತ್=ಯಾವುದೊಂದು ಕೆಲಸವನ್ನು, ನೈವಕರೋಮಿ ಇತಿ=ನಾನು ಸ್ವತಂತ್ರನಾಗದಿರುವುದ ರಿಂದ ಮಾಡುವವನಲ್ಲವೆಂದು, ಮನ್ಯೇತ=ತಿಳಿದುಕೊಳ್ಳಬೇಕು

ವಿ || ಇಂದ್ರಿಯಗಳೆಲ್ಲವೂ ಶ್ರೀಹರಿಯ ಪ್ರೇರಣಾನುಸಾರವಾಗಿಯೇ ವಿಷಯಗಳಲ್ಲಿ ಪ್ರವರ್ತಿಸು ತ್ತವೆ ಶ್ರೀಹರಿಯೇ ಸರ್ವ ಸ್ವತಂತ್ರನು, ಆ ಶ್ರೀಹರಿಯು ನನ್ನಲ್ಲಿದ್ದು ದರ್ಶನಾದಿ ವ್ಯಾಪಾರಗಳನ್ನು ಮಾಡಿ ಸುತ್ತಾನೆ. ನಾನು ಸ್ವತಂತ್ರವಾಗಿ ಮಾಡುವವನಲ್ಲ, ಎಂದನುಸಂಧಾನ ಮಾಡಿಕೊಳ್ಳಬೇಕು ಈ ರೀತಿ ಯಾಗಿ ಕಾಮಕ್ರೋಧಾದಿ ಪರಿತ್ಯಾಗರೂಪವಾದ ಸನ್ಯಾಸವು ಯೋಗರೂಪವೆಂದು ಸಿದ್ಧವಾಯಿತು.||೮,೯||

**ಭಾ || ಸನ್ಯಾಸಂ ಸ್ಪಷ್ಟಯತಿ ಪುನಃ ಶ್ಲೋಕದ್ವಯೇನ || ೮,೯ ||**

ಅ || ಜ್ಞೇಯಃ ಇತ್ಯಾದಿಗಳಿಂದಲೂ ವಿಶುದ್ಧಾತ್ಮಾ ಇತ್ಯಾದಿಗಳಿಂದಲೂ ಸನ್ಯಾಸವನ್ನು ಸ್ಪಷ್ಟೀ ಕರಿಸಿದಾಗ್ಯೂ ತಿರುಗಿ ಎರಡು ಶ್ಲೋಕಗಳಿಂದ ಸಂಕಲ್ಪತ್ಯಾಗ ಮಾಡಬೇಕೆಂದು ಹೇಳಿ ಸನ್ಯಾಸವನ್ನು ಸ್ಪಷ್ಟೀಕರಿಸುತ್ತಾರೆ || ೮, ೯ ||

**ತಾ || (೧) ಯಥಾ ನ್ಯಾಸಸ್ಯ ಯೋಗರೂಪತ್ವಂ ತಥಾಽಽಹ ನೈವ ಕಿಂಚಿದಿತ್ಯಾದಿನಾ ||**
**(೨) ವಿಷ್ಣುನಾಽರ್ಥೇಷ್ವೀರಿತಾನಿ ಮನಆದೀನಿ ಸರ್ವಶಃ | ವರ್ತಂತೇಽನ್ಯೋ(ನ್ಯಾ)**
**ನ ಸ್ವತಂತ್ರ(ತ್ರಾ) ಇತಿ ಜಾನನ್ವಿ ತತ್ತ್ವವಿದಿತಿ ಚ || ೮,೯ ||**

ಅ || (೧) (ಯೋಗರೂಪವಾದ ಸನ್ಯಾಸವು ಮೋಕ್ಷಕ್ಕೆ ಕಾರಣವೆಂದು ಹೇಳಿದ ಪ್ರಯುಕ್ತ) ಸನ್ಯಾಸಕ್ಕೆ ಯಾವ ಪ್ರಕಾರದಿಂದ ಯೋಗರೂಪತ್ವವು ಬರುವುದೋ, ಹಾಗೆ ನೈವ ಕಿಂಚಿತ್ ಇತ್ಯಾದಿ ಗಳಿಂದ ಹೇಳುತ್ತಾರೆ (೨) (ಅದರಲ್ಲಿ ಇಂದ್ರಿಯಗಳಿಗೇನೇ ಸ್ವತಂತ್ರಕರ್ತೃತ್ವವು ಹೇಳಲ್ಪಡುತ್ತದೆಂಬುವ ಅನ್ಯಥಾ ಪ್ರತೀತಿಯನ್ನು ಸ್ಮೃತಿಪ್ರಮಾಣ ಹೇಳಿ ನಿರಾಕರಿಸುತ್ತಾರೆ—) ಮನಸ್ಸು ಮೊದಲಾದ ಎಲ್ಲಾ ಇಂದ್ರಿಯಗಳು ಶ್ರೀಹರಿಯಿಂದ ಇಂದ್ರಿಯ ವಿಷಯಗಳಲ್ಲಿ ಪ್ರೇರೆಪಿಸಿಕೊಳ್ಳಲ್ಪಟ್ಟವುಗಳಾಗಿಯೇ ಪ್ರವರ್ತಿ ಸುತ್ತವೆ. ಶ್ರೀಹರಿಯ ಹೊರತು ಬೇರೆ ಯಾರೂ ಸ್ವತಂತ್ರನಾದವನು ಇಲ್ಲ. ಹೀಗೆ ತಿಳಿದವನೇ ತತ್ವ ಜ್ಞಾನಿಯು ಎಂದು ಹೇಳಿದೆ || ೮, ೯ ||

ಪೀ—ಸನ್ಯಾಸ ಯೋಗಗಳಿಂದ ಕೂಡಿದವನಿಗೇನೇ ಕರ್ಮಲೇಪವಿಲ್ಲ ಎಂಬ ಸಾಧನ ನಿಯಮ ವನ್ನು ಹೇಳುತ್ತಾರೆ—

**ಗೀ || ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ |**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ || ೧೦ ||**

ಅ ॥ ಸಂಗಂ=ಫಲೇಚ್ಛೆಯನ್ನು, ತ್ಯಕ್ತ್ವಾ=ಬಿಟ್ಟು, ಬ್ರಹ್ಮಣ್ಯಾಧಾಯ=ನನಗೆ (ಜೀವನಿಗೆ) ಶುಭಫಲವು ಸಿಗುವುದಕ್ಕಾಗಿ ಶ್ರೀಹರಿಯು ತನ್ನ ಪೂಜೆಯನ್ನು ನನ್ನಿಂದ ಮಾಡಿಸಿಕೊಳ್ಳುತ್ತಾನೆಂದು ಅನುಸಂಧಾನ ಮಾಡಿಕೊಂಡು, ಕರ್ಮಾಣಿ=ಕರ್ಮಗಳನ್ನು, ಯಃ=ಯಾವನು, ಕರೋತಿ=ಮಾಡುತ್ತಾನೋ, (ಅಂದರೆ ಶ್ರೀಹರಿಯು ಕೊಟ್ಟ ಶಕ್ತಿಯಿಂದಲೇ ಪೂಜಾದಿಗಳನ್ನು ಮಾಡುತ್ತಾನೋ, ಸಃ= ಅತನು, ಅಂಭಸಾ=ನೀರಿನಿಂದ, ಪದ್ಮಪತ್ರಮಿವ=ಕಮಲಪತ್ರದಂತೆ (ಅಂದರೆ ತಾವರೆ ಎಲೆಯು ನೀರಿನಿಂದ ಹೇಗೆ ಸಂಬಂಧವನ್ನು ಹೊಂದುವುದಿಲ್ಲವೊ ಹಾಗೆಯೇ, ಪಾಪೇನ=ಪಾಪದಿಂದ, ನಲಿಪ್ಯತೇ= ಸಂಬದ್ಧನಾಗುವುದಿಲ್ಲ. (ಅಂದರೆ ಜ್ಞಾನವನ್ನು ಸಂಪಾದಿಸಿ ಮುಕ್ತನಾಗುತ್ತಾನೆ) ॥ ೧೦ ॥

ಪೀ—ಯೋಗಯುಕ್ತಃ ಎಂಬುದರಿಂದ ಸನ್ನ್ಯಾಸ ಯೋಗಗಳಿಂದ ಕೂಡಿದವನಿಗೆ ಕರ್ಮಲೇಪ ವಾಗುವುದಿಲ್ಲವೆಂದು ಫಲವನ್ನು ಹೇಳಿದೆ. ಅದನ್ನೇ ಆ ಯುಕ್ತನಿಗೆ ಬ್ರಹ್ಮಣ್ಯಾಧಾಯ ಎಂಬುದರಿಂದ ಮರಳಿ ಏಕೆ ಹೇಳುವುದು ಎಂದರೆ—

ಭಾ ॥ (೧) ಸನ್ನ್ಯಾಸಯೋಗಯುಕ್ತ ಏವ ಚ ಕರ್ಮಣಾ ನ ಲಿಪ್ಯತ ಇತ್ಯಾಹ । ಬ್ರಹ್ಮಣೀತಿ ॥ (೨) ಸಾಧನನಿಯಮಸ್ಯೋಪಚಾರತ್ವನಿವೃತ್ತ್ಯರ್ಥಂ ಪುನಃಪುನಃ ಫಲಕಥನಂ ॥ ೧೦ ॥

ಅ ॥ ಸನ್ನ್ಯಾಸ ಯೋಗಗಳಿಂದೊಡಗೂಡಿದವನೇ ಕರ್ಮದಿಂದ ಲೇಪಿಸಲ್ಪಡುವುದಿಲ್ಲ, ಎಂದು ಬ್ರಹ್ಮಣಿ ಎಂಬುವ ಶ್ಲೋಕದಿಂದ ಹೇಳುತ್ತಾರೆ (ಹಿಂದೆ ಹೇಳಿದುದನ್ನೇ ಇಲ್ಲಿ ನಿಯಮಿಸುತ್ತಾರೆ) (೨) (ಹಾಗಾದರೆ ಸನ್ನ್ಯಾಸಸ್ತು ಎಂಬುವ ಶ್ಲೋಕದಿಂದ ಸನ್ನ್ಯಾಸಯೋಗಗಳು ಒಟ್ಟಿಗೆ ಸೇರಿದರೇನೇ ಫಲವನ್ನು ಹೊಂದಿಸಿ ಕೊಡುತ್ತವೆಂದು ನಿಯಮವೂ ಸಿಕ್ಕಿರುತ್ತದೆ ಹೀಗೆ ಇರಲು ಸನ್ನ್ಯಾಸಯೋಗ ಯುಕ್ತಸ್ಯ, ಕುರ್ವನ್ನಪಿ ನಲಿಪ್ಯತೇ, ಲಿಪ್ಯತೇನ ಸ ಪಾಪೇನ ಎಂದು ಮರಳಿ ಮರಳಿ ಫಲವನ್ನು ಹೇಳುವುದು ಏತಕ್ಕೆಂದರೆ—) ಸನ್ನ್ಯಾಸಯೋಗಗಳು ಒಟ್ಟಿಗೆ ಸೇರಿಯೇ ಮೋಕ್ಷವನ್ನು ಹೊಂದಿಸಿ ಕೊಡುತ್ತವೆ, ಎಂದು ನಿಯಮ ಹೇಳಿದ್ದು ಲೋಕದಲ್ಲಿ ಇದ್ದಂತೆ ಔಪಚಾರಿಕವಲ್ಲವೆಂದು ತಿಳಿಸುವುದಕ್ಕಾಗಿ ಮರಳಿ ಮರಳಿ ಫಲವನ್ನು ಹೇಳುವುದು ॥ ೧೦ ॥

ಪೀ—ಸನ್ನ್ಯಾಸಯೋಗಗಳು ಒಟ್ಟು ಸೇರಿಯೇ ಮೋಕ್ಷಾದಿರೂಪಫಲಕ್ಕೆ ಕಾರಣಗಳು, ಎಂಬುವ ವಿಷಯದಲ್ಲಿ ಶಿಷ್ಟಾಚಾರವೂ ಇದೆ, ಎನ್ನುತ್ತಾರೆ—

ಗೀ ॥ ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।
ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾಽಽತ್ಮಶುದ್ಧಯೇ ॥೧೧॥

ಅ ॥ ಕಾಯೇನ=ದೇಹದಿಂದ, ಮನಸಾ=ಮನಸ್ಸಿನಿಂದ, ಬುದ್ಧ್ಯಾ=ಬುದ್ಧಿರೂಪವಾದ ಇಂದ್ರಿಯದಿಂದ, ಕೇವಲೈಃ=ಕಾಮ ಅಹಂಭಾವಗಳಿಲ್ಲದಿರುವ, ಅಥವಾ ಸ್ವಾತಂತ್ರ್ಯಾಭಿಮಾನವಿಲ್ಲದಿರುವ, ಇಂದ್ರಿಯೈಃ=ಇಂದ್ರಿಯಗಳಿಂದ, ಯೋಗಿನೋಽಪಿ=ಯೋಗಿಗಳೂ ಕೂಡ, ಸಂಗಂ=ಫಲಸ್ನೇಹವನ್ನು, ತ್ಯಕ್ತ್ವಾ=ಬಿಟ್ಟು, ಆತ್ಮಶುದ್ಧಯೇ=ಮನಸ್ಸಿನ ಶುದ್ಧಿಗಾಗಿ, ಅಥವಾ ಜ್ಞಾನವು ಹುಟ್ಟುವುದಕ್ಕಾಗಿ ಅಥವಾ ಪಾಪಸಂಬಂಧವು ಬಾರದಿರುವುದಕ್ಕಾಗಿ ಕರ್ಮ=ಕರ್ಮವನ್ನು, ಕುರ್ವಂತಿ=ಮಾಡುತ್ತಾರೆ ॥ ೧೧ ॥

ಪೀ—ಕಾಯೇನ ಎಂಬುವ ಶ್ಲೋಕದಿಂದಲೂ ಸನ್ನ್ಯಾಸಯೋಗಗಳಿಂದೊಡಗೂಡಿದವನಿಗೆ ಆತ್ಮ ಶುದ್ಧಿರೂಪವಾದ ಪಾಪಾಲೇಪವು ಹೇಳಲ್ಪಡುತ್ತದೆಂದರೆ—

ಭಾ ॥ ಏವಂ ಚಾಽಽಚಾರ ಇತ್ಯಾಹ । ಕಾಯೇನೇತಿ ॥ ೧೧ ॥

ಅ ॥ ಸನ್ನ್ಯಾಸಯೋಗ ಇವು ಎರಡನ್ನು ಒಟ್ಟಿಗೆ ಮಾಡತಕ್ಕ ಶಿಷ್ಟಾಚಾರವಿದೆ, ಎಂದು ಕಾಯೇನ ಎಂಬುವ ಶ್ಲೋಕದಿಂದ ಹೇಳುತ್ತಾರೆ ॥ ೧೧ ॥

ಗೀ ॥ ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಂ ।
ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥ ೧೨ ॥

ಅ ॥ ಯುಕ್ತಃ=ಶ್ರೀಹರಿಗೆ ಪ್ರೀತಿಯಾಗಲಿ, ಎಂಬುವ ಬುದ್ಧಿಯಿಂದ ಕರ್ಮಾನುಷ್ಠಾನರೂಪವಾದ ಯೋಗದಿಂದ ಕೂಡಿದವನು ಕರ್ಮಫಲಂ=ಕರ್ಮಗಳಿಂದುಂಟಾಗುವ ಫಲವನ್ನು, ತ್ಯಕ್ತ್ವಾ=ಬಿಟ್ಟು, ನೈಷ್ಠಿಕೀಂ=ಸ್ವಾಭಾವಿಕವಾದ, ಶಾಂತಿಂ=ಸ್ವರೂಪಾನಂದಾವಿರ್ಭಾವರೂಪವಾದ ಮುಕ್ತಿಯನ್ನು, ಆಪ್ನೋತಿ=ಹೊಂದುತ್ತಾನೆ, ಅಯುಕ್ತಃ=ಅಂತಹ ಯೋಗವಿಲ್ಲದವನು, ಕಾಮಕಾರೇಣ=ಫಲಗಳನ್ನು ಇಚ್ಛಿಸಿ ಕರ್ಮಗಳನ್ನು ಮಾಡುವುದರಿಂದ (ಅಂದರೆ ಸನ್ನ್ಯಾಸಾಭಾವದಿಂದ) ಫಲೇ=ಕ್ಷುದ್ರಫಲದಲ್ಲಿ, ಸಕ್ತಃ=ಆಸಕ್ತನಾಗಿ, ನಿಬಧ್ಯತೇ=ಚೆನ್ನಾಗಿ ಸಂಸಾರ ದುಃಖವನ್ನು ಅನುಭವಿಸುತ್ತಾನೆ. ॥ ೧೨ ॥

ಭಾ ॥ ಪುನರ್ಯುಕ್ತ್ಯಾದಿನಿಯಮಸಾರ್ಥಂ ಯುಕ್ತಾಯುಕ್ತಫಲಮಾಹ । ಯುಕ್ತ ಇತಿ ।
ಯುಕ್ತೋ ಯೋಗಯುಕ್ತಃ ॥ ೧೨ ॥

ಅ ॥ ಮೊದಲು ಸನ್ನ್ಯಾಸಸ್ತು ಇತ್ಯಾದಿಗಳಿಂದ ಸನ್ನ್ಯಾಸಯೋಗಗಳು (ಮಿಲಿತಗಳಾದರೇನೇ ಫಲವನ್ನು ಹೊಂದಿಸುತ್ತವೆ ಎರಡರಲ್ಲಿ ಒಂದನ್ನು ಬಿಟ್ಟರೆ ಫಲವು ದೊರೆಯಲಾರದು, ಎಂಬುವ ನಿಯಮವನ್ನು ತಿಳಿಸಿಕೊಳ್ಳುವುದಕ್ಕಾಗಿ ಬ್ರಹ್ಮಾಧಿಗಚ್ಛತಿ, ಕುರ್ವನ್ನ ಲಿಪ್ಯತೇ ಇತ್ಯಾದಿಗಳಿಂದ ಸನ್ನ್ಯಾಸಯೋಗಗಳಿಗೆ ಫಲವನ್ನು ಹೇಳಿರುತ್ತಾರೆ) ತಿರುಗಿ ಈಗ ಯೋಗ ಸನ್ನ್ಯಾಸಗಳು ಮಿಲಿತಗಳಾಗಿಯೇ ಫಲವನ್ನು ಹೊಂದಿಸುತ್ತವೆ ಆ ಎರಡನ್ನು ಬಿಟ್ಟರೆ ಆಗುವುದಿಲ್ಲ, ಎಂಬುವ ನಿಯಮವನ್ನು ತಿಳಿಸುವುದಕ್ಕಾಗಿ ಯೋಗಸನ್ನ್ಯಾಸಗಳುಳ್ಳವನಿಗೆ ಮೋಕ್ಷರೂಪ ಫಲವೂ ಯೋಗಸನ್ನ್ಯಾಸಗಳೆರಡು ಇಲ್ಲದವನಿಗೆ ಸಂಸಾರರೂಪಫಲವು ಎಂದು ಯುಕ್ತಃ ಎಂಬ ಶ್ಲೋಕದಿಂದ ಹೇಳುತ್ತಾರೆ ಯುಕ್ತಃ=ಭಗವಂತನಿಗೆ ಅರ್ಪಿತವಾಗಲಿ, ಎಂಬುವ ಬುದ್ಧಿಯಿಂದ ಕರ್ಮಾನುಷ್ಠಾನರೂಪವಾದ ಯೋಗದಿಂದ ಕೂಡಿದವನು ॥ ೧೨ ॥

ಪೀ—ಪೂರ್ವದಲ್ಲಿ ನೈವ ಕಿಂಚಿತ್ಕರೋಮಿ ಇತ್ಯಾದಿಗಳಿಂದ ತಾನು ಕರ್ತನೆಂಬುವ ಅಭಿಮಾನವನ್ನು ಬಿಡಬೇಕೆಂದು ಹೇಳಿ ಸನ್ನ್ಯಾಸ ಶಬ್ದಾರ್ಥವನ್ನು ವಿವರಿಸಿರುವರು ಈಗ ತಾನು ಮಾಡಿಸುವವನೆಂಬುವ ಅಭಿಮಾನವನ್ನು ಪರಿತ್ಯಾಗಮಾಡಬೇಕೆನ್ನುತ್ತಾ ಸನ್ನ್ಯಾಸ ಶಬ್ದದ ಅರ್ಥವನ್ನು ಸ್ಪಷ್ಟೀಕರಿಸುತ್ತಾರೆ—

ಗೀ ॥ ಸರ್ವಕರ್ಮಾಣಿ ಮನಸಾ ಸನ್ನ್ಯಸ್ಯಾಽಽಸ್ತೇ ಸುಖಂ ವಶೀ ।
ನವದ್ವಾರೇಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥ ೧೩ ॥

ಅ ॥ ವಶೀ=ಸರ್ವೇಂದ್ರಿಯುಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡಿರುವ, ದೇಹೀ=ಮನುಷ್ಯನು, ಸರ್ವಕರ್ಮಾಣಿ=ತಾನು ಮಾಡುವ ಎಲ್ಲಾ ಕರ್ಮಗಳನ್ನು, ಮನಸಾ=ಮನಸ್ಸಿನಿಂದ, ಸನ್ನ್ಯಸ್ಯ=ಶ್ರೀಹರಿಗೆ ಸಮರ್ಪಣೆ ಮಾಡಿ, ನೈವಕುರ್ವನ್=ತಾನೇ ಸರ್ವಸ್ವತಂತ್ರನಾಗಿ ಸಮಸ್ತ ಕರ್ಮಗಳನ್ನು ಮಾಡುವವನೆಂದು ತಿಳಿಯದವನಾಗಿ, ನ ಕಾರಯನ್=ತಾನೇ ಸ್ವತಂತ್ರನಾಗಿ ಮಾಡಿಸುತ್ತೇನೆಂದೂ ತಿಳಿಯದವನಾಗಿ, ನವದ್ವಾರೇ=ಕಣ್ಣು ಕಿವಿ ಮೂಗು ಇವುಗಳದ್ದು ಆರು ದ್ವಾರಗಳು, ಮುಖ, ಗುದ, ಗುಹ್ಯೇಂದ್ರಿಯ, ಹೀಗೆ ಒಂಭತ್ತು ದ್ವಾರಗಳುಳ್ಳ, ಪುರೀ=ಶರೀರದಲ್ಲಿ, ಸುಖಂ=ಸುಖವು ಆಗುವ ಹಾಗೆ, (ಸುಖವನ್ನೇ ಅನುಭವಿಸಿಕೊಂಡು) ಆಸ್ತೇ=ಇರುತ್ತಾನೆ (ಕರ್ಮಲೇಪವಿಲ್ಲದವನಾಗಿಯೇ ಇರುತ್ತಾನೆ ॥ ೧೩ ॥

ಟೀ—ಸರ್ವಕರ್ಮಾಣಿ ಎಂಬುದಕ್ಕೆ ಸ್ವರೂಪದಿಂದ ಕರ್ಮತ್ಯಾಗವು ಅರ್ಥವು, ಎಂಬುವ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಇಲ್ಲಿ ಅವಶ್ಯಕವಾದ ಅರ್ಥವನ್ನು ಹೇಳುತ್ತಾರೆ—

ಭಾ ॥ ಪುನಃ ಸನ್ನ್ಯಾಸಶಬ್ದಾರ್ಥಂ ಸ್ಪಷ್ಟಯತಿ । ಸರ್ವಕರ್ಮಾಣೀತಿ । ಮನಸೇತಿ ವಿಶೇಷಣಾದಭಿಮಾನತ್ಯಾಗಃ ॥ ೧೩ ॥

ಅ ॥ ತಿರುಗಿ ಸನ್ನ್ಯಾಸಶಬ್ದದ ಅರ್ಥವನ್ನು ಸರ್ವಕರ್ಮಾಣಿ ಎಂಬುದರಿಂದ ಸ್ಪಷ್ಟೀಕರಿಸುತ್ತಾರೆ (ಅಂದರೆ ಮೊದಲು ಕರ್ತೃತ್ವಾಭಿಮಾನವನ್ನು ಬಿಡಬೇಕೆಂದು ಹೇಳಿದ್ದಾರೆ ಈಗ ಮಾಡಿಸುವವನೆಂಬುವ ಅಭಿಮಾನವನ್ನು ಬಿಡಬೇಕೆಂದೂ ಹೇಳುತ್ತಾರೆ) (ಸ್ವರೂಪದಿಂದ ಕರ್ಮತ್ಯಾಗವೇ ಹೇಳಲ್ಪಡುತ್ತದೆ, ಎಂಬುದನ್ನು ನಿರಾಕರಿಸುತ್ತಾರೆ) ಮನಸಾ ಎಂದು ವಿಶೇಷಣವನ್ನು ಕೊಟ್ಟಿರುವುದರಿಂದ ಅಭಿಮಾನತ್ಯಾಗವನ್ನು ಇಟ್ಟುಕೊಳ್ಳಬೇಕು ಕರ್ಮದಲ್ಲಿ ಯಾರಾದರೂ ಮಾಡುವೆನು ಮಾಡಿಸುವವನೆಂಬುವ ಅಭಿಮಾನತ್ಯಾಗವನ್ನು ಒಡಂಬಡದೆ ತಾನು ಸ್ವರೂಪತಃ ಕರ್ಮತ್ಯಾಗವೆಂದು ಅರ್ಥವನ್ನು ಒಡಂಬಟ್ಟರೆ ಮನಸಾ ಎಂಬುದು ವ್ಯರ್ಥವಾಗುವುದು ॥ ೧೩ ॥

ಟೀ—ಯೋಗರೂಪ ಸನ್ನ್ಯಾಸವುಳ್ಳವನಿಗೆ ಮೋಕ್ಷವಾಗುತ್ತದೆಂದ. ಔಪಚಾರಿಕವಲ್ಲವೆಂಬುವ ಅಭಿಪ್ರಾಯದಿಂದ ತಿರುಗಿ ಬ್ರಹ್ಮಣಿ ಎಂಬುದರಿಂದ ಫಲವನ್ನು ಹೇಳುತ್ತಾರೆ ಅದರಲ್ಲಿ ಕರ್ಮಗಳಿಗೆ ಬ್ರಹ್ಮಣ್ಯಾಧಾನವೆಂದರೆ ಕರ್ಮಗಳನ್ನು ಮಾಡದಿರುವುದೇ, ಎಂಬ ಪ್ರತೀತಿಯನ್ನು ಹೋಗಲಾಡಿಸುತ್ತಾರೆ

ತಾ ॥ (೧) ತತ್ಪೂಜಾತ್ಮಕಾನಿ ತತ್ಕೃತಾನಿ ಮಮ ಶುಭಾರ್ಥಮಿತಿ ಬ್ರಹ್ಮಣ್ಯಾಧಾನಂ ॥(೨) ಸ್ವಾತಂತ್ರ್ಯಾಭಾವಾಪೇಕ್ಷಯೈವ ಜೀವಸ್ಯಾಕರ್ತೃತ್ವಂ ॥ (೩) ಸ್ವವಂದನಂ ಯಥಾ ಪಿತ್ರಾ ಕಾರಿತಂ ಶಿಶುಕರ್ತೃಕಂ । ಏವಂ ಪೂಜಾ ವಿಷ್ಣ್ವಧೀನಾ ಭವೇಜ್ಜೀವಕೃತೇತ್ಯಪೀತಿ ಪ್ರವೃತ್ತೇ ॥ (೪) ಅತೋ ಮನಸೈವ ಕರ್ಮನ್ಯಾಸೋಽಸ್ವಾತಂತ್ರ್ಯಾಪೇಕ್ಷಯಾ ॥ ೧೦—೧೩ ॥

ಅ ॥ (೧) ಬ್ರಹ್ಮಣ್ಯಾಧಾನವೆಂದರೆ ನನಗೆ (ಜೀವನಿಗೆ) ಶುಭಫಲಗಳನ್ನು ಹೊಂದಿಸಿಕೊಡುವುದಕ್ಕಾಗಿ ಶ್ರೀಹರಿಯು ತನ್ನ ಪೂಜಾರೂಪಗಳಾದ ಕರ್ಮಗಳನ್ನು ಜೀವನಿಂದ ಮಾಡಿಸುತ್ತಾನೆಂದು ತಿಳಿದುಕೊಳ್ಳುವುದು ಅಂತೂ ಎಲ್ಲವೂ ಶ್ರೀಹರಿಯಿಂದ ಮಾಡಲ್ಪಡತಕ್ಕದು (೨) (ಕರ್ಮಗಳನ್ನು ಶ್ರೀಹರಿಯು ಮಾಡಿದ್ದೆಂದಾದರೆ ಜೀವನಿಗೆ ಕರ್ತೃತ್ವವಿಲ್ಲವೆಂದಾಗುವುದು ಕರೋತಿ ಎಂಬುದೂ ಅಯುಕ್ತವಾಗುವುದೂ

ಮಮ ಕುಧಾರ್ಥಂ ಎಂಬುದೂ ಅಯುಕ್ತವಾಗುವುದೆಂದರೆ—) ಜೀವನಿಗೆ ಸ್ವಾತಂತ್ರ್ಯವಿಲ್ಲದಿರುವುದರಿಂದಲೇ ಜೀವನಿಗೆ ಕರ್ತೃತ್ವವಿಲ್ಲವೆಂದದ್ದು. (ಅಂದರೆ ಜೀವನಿಗೆ ಸ್ವಾತಂತ್ರ್ಯವಿಲ್ಲದಿರುವುದರಿಂದಲೇ ಅಕರ್ತೃತ್ವವನ್ನು ಹೇಳಿದ್ದು ಭಗವಂತನ ಅಧೀನವಾದ ಕರ್ತೃತ್ವವಿದೆ) (೩) (ಜೀವನು ಅಸ್ವತಂತ್ರನಾದರೆ ಶ್ರೀಹರಿಯ ಪೂಜೆಯನ್ನು ಮಾಡುತ್ತಾನೆಂದೂ ಶುಭಫಲವನ್ನು ಹೊಂದುತ್ತಾನೆಂದೂ ಕೂಡಲಾರದು ಅಸ್ವತಂತ್ರನಲ್ಲಿ ಕರ್ತೃಶಬ್ದಪ್ರಯೋಗವೂ ಫಲಸಂಬಂಧವೂ ತೋರಲಿಲ್ಲವೆಂಬುವ ಶಂಕೆಯನ್ನು ಸ್ಮೃತಿಪ್ರಮಾಣ ಹೇಳಿ ಪರಿಹರಿಸುತ್ತಾರೆ—) ತಂದೆಯು ಮಗನಿಂದ ತನಗೆ ನಮಸ್ಕಾರ ಮಾಡಿಸಿಕೊಂಡರೆ ಮಗನು ನಮಸ್ಕಾರ ಮಾಡಿದನೆಂದು ಹೇಗೆ ಆಗುವುದೋ ಹೀಗೆಯೇ ಶ್ರೀವಿಷ್ಣುವಿನ ಅಧೀನನಾದ ಜೀವನು ವಿಷ್ಣುವಿಗೆ ಪೂಜೆಯನ್ನು ಮಾಡಿದರೆ ಜೀವನು ಮಾಡಿದ್ದೆಂದು ಆಗುವುದು, ಎಂದು ಪ್ರವೃತ್ತಗ್ರಂಥದಲ್ಲಿದೆ. (೪) (ಬ್ರಹ್ಮಣ್ಯಾಧಾನವೆಂದರೆ ಕರ್ಮಗಳನ್ನು ಮಾಡುವ ವಿಷಯದಲ್ಲಿ ತನಗೆ ಸ್ವಾತಂತ್ರ್ಯಾಭಿಮಾನ ಪರಿತ್ಯಾಗವೇ. ಕರ್ಮಗಳ ಸ್ವರೂಪ ಪರಿತ್ಯಾಗವಲ್ಲವೆನ್ನುತ್ತಾರೆ—) ಆದಕಾರಣ ಮನಸ್ಸಿನಿಂದಲೇ ಕರ್ಮತ್ಯಾಗವು. ಅಂದರೆ ತಾನು ಅಸ್ವತಂತ್ರನು ಸರ್ವಕರ್ತನು, ಶ್ರೀಪರಮಾತ್ಮನೆಂದು ತಿಳಿದುಕೊಳ್ಳುವುದು.

ವಿ ॥ (1) ಕರ್ಮಗಳ ಸ್ವರೂಪವನ್ನು ಬಿಡಲು ಸಾಧ್ಯವಿಲ್ಲದಿರುವುದರಿಂದಲೇ ಮನಸ್ಸಿನಿಂದಲೇ ಕರ್ಮಗಳ ತ್ಯಾಗವನ್ನು ಹೇಳಿದ್ದು ಆದಕಾರಣ ಇಲ್ಲಿ ಕರ್ಮಗಳ ಸ್ವರೂಪವನ್ನು ಬಿಡುವುದೆಂದು ಅರ್ಥವಲ್ಲ. (2) ಮನಸ್ಸಿನಿಂದಲೇ ಕರ್ಮನ್ಯಾಸವೆಂದರೆ—ಸ್ವಾತಂತ್ರ್ಯಾಭಿಮಾನ ಪರಿತ್ಯಾಗವೇ ಕರ್ಮಗಳ ಸ್ವರೂಪತ್ಯಾಗವಲ್ಲ ಹಾಗೆ ಇದ್ದರೆ ಮನಸಾ ಎಂಬ ವಿಶೇಷಣವು ವ್ಯರ್ಥವಾಗುವುದು. ॥ ೧೦-೧೩ ॥

ಗೀ ॥ ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।
ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥ ೧೪ ॥

ಅ ॥ ಪ್ರಭುಃ=ಜಡಕ್ಕಿಂತ ಸಮರ್ಥನಾದ ಜೀವನು, ಲೋಕಸ್ಯ=ಜನರಿಂದ, ಕರ್ತೃತ್ವಂ=ಕರ್ಮವನ್ನು, ನ ಸೃಜತಿ=ಸ್ವತಂತ್ರವಾಗಿ ಮಾಡಿಸುವುದಿಲ್ಲ ಕರ್ಮಾಣಿ=ಕರ್ಮಗಳನ್ನು, ನ ಸೃಜತಿ=ತಾನೂ ಸ್ವತಂತ್ರವಾಗಿ ಮಾಡುವುದಿಲ್ಲ (ಕರ್ಮದಲ್ಲಿಯೇ ಸ್ವಾತಂತ್ರ್ಯವು ಇಲ್ಲದಿರುವಾಗ ಫಲದಲ್ಲಿ ಸ್ವಾತಂತ್ರ್ಯವಿಲ್ಲವೆಂಬುದು ಸುತರಾಂ ಸಿದ್ಧವಾಗುತ್ತದೆ) ಕರ್ಮಫಲಪ್ರಾಪ್ತಿಂ=ಕರ್ಮಫಲದ ಪ್ರಾಪ್ತಿಯನ್ನು, ಲೋಕಸ್ಯ=ಜನರಿಗೆ, ನ ಸೃಜತಿ=ಕೊಡುವುದಿಲ್ಲ. (ಅಂದರೆ ಜನರಿಗೆ ಫಲವನ್ನು ಕೊಡುವ ವಿಷಯದಲ್ಲಿಯೂ ತಾನು ಫಲವನ್ನು ಹೊಂದುವ ವಿಷಯದಲ್ಲಿಯೂ ತನಗೆ ಸ್ವಾತಂತ್ರ್ಯವು ಇಲ್ಲ.) (ಅಥವಾ ಜೀವರಿಗೆ ಸ್ವತಂತ್ರಕರ್ತೃತ್ವವಿಲ್ಲದಿದ್ದರೂ ಈಶ್ವರನು ಕೊಟ್ಟಿರುವ ಸ್ವಾತಂತ್ರ್ಯವು ಕ್ರಿಯೆಯಲ್ಲಿಯೂ ಕ್ರಿಯಾಜನ್ಯವಾದ ಅದೃಷ್ಟದಲ್ಲಿಯೂ ಕರ್ಮಫಲದ ಪ್ರಾಪ್ತಿಯಲ್ಲಿಯೂ ಇದ್ದೇ ಇದೆ ಆದಕಾರಣ ಬ್ರಹ್ಮಣ್ಯಾಧಾಯ ಕರ್ಮಾಣಿ, ಸರ್ವಾಣಿ ಕರ್ಮಾಣಿ ಸನ್ನ್ಯಸ್ಯ ಎಂಬುವ ಉಕ್ತಿಯು ಹೇಗೆ ಕೂಡುತ್ತದೆ? ಎಂದರೆ—) ಪ್ರಭುಃ=ಸರ್ವಸ್ವತಂತ್ರನಾದ ಶ್ರೀಪರಮಾತ್ಮನು. ಲೋಕಸ್ಯ=ಜೀವರ ಸಮುದಾಯಕ್ಕೆ, ಕರ್ತೃತ್ವಂ=ಅಗ್ನಿಹೋತ್ರ ಮೊದಲಾದ ಕ್ರಿಯೆಗಳಲ್ಲಿ ಸ್ವತಂತ್ರ ಕರ್ತೃತ್ವವನ್ನು, ನ ಸೃಜತಿ=ಕೊಡುವುದಿಲ್ಲ ಕರ್ಮಾಣಿ=ಅಗ್ನಿಹೋತ್ರ ಮೊದಲಾದ ಕ್ರಿಯೆಗಳಿಂದ ಹುಟ್ಟತಕ್ಕ ಅದೃಷ್ಟಗಳನ್ನು, ಲೋಕಸ್ಯ=ಜನರಿಗೆ, ನ ಸೃಜತಿ=ಹುಟ್ಟಿಸುವುದಿಲ್ಲ. (ಅಂದರೆ ಅದೃಷ್ಟಗಳಲ್ಲಿಯೂ ಸ್ವಾತಂತ್ರ್ಯವನ್ನು ಕೊಡುವುದಿಲ್ಲ) ಕರ್ಮಫಲಸಂಯೋಗಂ ಚ=ಕರ್ಮಫಲಗಳ ಸಂಬಂಧವನ್ನೂ, ನ ಸೃಜತಿ=ಹುಟ್ಟಿಸುವುದಿಲ್ಲ (ಅಂದರೆ ಫಲವನ್ನು ಹೊಂದುವ ವಿಷಯದಲ್ಲಿಯೂ ಜನರಿಗೆ ಸ್ವಾತಂತ್ರ್ಯವನ್ನು ಕೊಡುವುದಿಲ್ಲ) (ಕ್ರಿಯೆಯಲ್ಲಿಯೂ ಅದೃಷ್ಟಗಳಲ್ಲಿಯೂ ಫಲಸಂಬಂಧದಲ್ಲಿಯೂ ಜೀವರಿಗೆ ಸ್ವಾತಂತ್ರ್ಯವಿಲ್ಲವಾದರೆ ಕ್ರಿಯಾದಿ

ಗಳು ಹೇಗೆ ಉಂಟಾಗುವವು ಎಂದರೆ—) ಸ್ವಭಾವಸ್ತು — ಪರರ ಅಪೇಕ್ಷೆಯುಲ್ಲದೆ ಇರುವ ಅಥವಾ ಜಗತ್ತನ್ನು ಸೃಷ್ಟಿಸಶಕ್ತ ಸರ್ವಸ್ವತಂತ್ರನಾದ ಶ್ರೀಪರಮಾತ್ಮನು, ಪ್ರವರ್ತತೇ — ಕ್ರಿಯೆಗಳನ್ನು ಮಾಡುವ ವಿಷಯದಲ್ಲಿಯೂ ಅದೃಷ್ಟಗಳನ್ನು ಕೊಡುವುದರಲ್ಲಿಯೂ, ಫಲಕೊಡುವ ವಿಷಯದಲ್ಲಿಯೂ, ತಾನೇ ಸರ್ವಸ್ವತಂತ್ರನಾಗಿ ಪ್ರವರ್ತಿಸುತ್ತಾನೆ (ಯಾವಾಗಲೂ ಎಲ್ಲಿಯೂ ಇತರರಿಗೆ ತನ್ನ ಸ್ವಾತಂತ್ರ್ಯವನ್ನು ಕೊಡುವುದಿಲ್ಲ. ಮತ್ತೆ ಸರ್ವದಾ ಶ್ರೀಹರಿಯೇ ಸ್ವತಂತ್ರನಾಗಿ ಪ್ರವರ್ತಿಸುತ್ತಾನೆ) ॥ ೧೪ ॥

ಟೀ—ಜೀವರಿಗೆ ಪರಾಧೀನವಾದ ಕರ್ತೃತ್ವವು ಉಂಟೇ ಉಂಟು, ಸ್ವಾತಂತ್ರ್ಯವಿಲ್ಲದಿರುವುದರಿಂದಲೇ ಕರ್ತೃತ್ವವಿಲ್ಲವೆಂದು ಹೇಳಿದ್ದು ಹೀಗೆ ಅಂದದ್ದು ಯುಕ್ತವಲ್ಲ, ಏಕೆಂದರೆ ನ ಕರ್ತೃತ್ವಂ ಎಂಬೀ ಸರ್ವದಾ ಕರ್ತೃತ್ವವಿಲ್ಲವೆಂದು ಹೇಳುವ ಮೇಲಿನ ವಾಕ್ಯದಿಂದ ವಿರೋಧವು ಬರುವುದು ಎಂದರೆ—

**ತಾ ॥ (೧) ಯಥಾ ಪಿತೃ(ತ್ರಾ) ದತ್ತಂ ಪಾಲಕತ್ವಂ ರಾಜಪುತ್ರಾಣಾಂ ಏವಂ ಪರಮಾತ್ಮ-ದತ್ತಂ ಕ್ರಿಯಾಸ್ವಾತಂತ್ರ್ಯಲಕ್ಷಣಂ ಕರ್ತೃತ್ವಂ । ಕ್ರಿಯಾನಿಷ್ಪನ್ನಧರ್ಮಾದಿರೂಪ-ಕರ್ಮಣಿ ಸ್ವಾತಂತ್ರ್ಯಂ ಚ ಜೀವಾನಾಮಪ್ಯಸ್ತೀತ್ಯಾಶಂಕಾಂ ಪರಿಹರತಿ । ನ ಕರ್ತೃ-ತ್ವಮಿತ್ಯಾದಿನಾ ॥ (೨) ಕ್ರಿಯಾಯಾಮದೃಷ್ಟೋತ್ಪಾದನೇ ಫಲೇ ಚ ಸ್ವಾತಂತ್ರ್ಯಂ ಲೋಕಸ್ಯ ನ ಸೃಜತೀಶ್ವರ ಇತ್ಯರ್ಥಃ । ಅನ್ಯಥಾ ಲೋಕಸ್ಯೇತಿ ವಿಶೇಷಣಂ ವ್ಯರ್ಥಂ ॥ (೩) ಜನಪದೇ ನಿವಸತಾಂ(ತಾ) ತದ್ವಿತ್ತಭೋಜಿನಾಮಪ್ಯಾಧಿಪತ್ಯಾದಾನಾನ್ನದತ್ತಾ ಜನಪದಾ ರಾಜ್ಞಾ ಸ್ವಪುತ್ರಾಣಾಮಿತಿವತ್ಕರ್ಮಫಲಾದಿಸಂಯೋಗಿನಾಮಪಿ ತತ್ಸ್ವಾ-ತಂತ್ರ್ಯಾದಾನಾನ್ನ ಸೃಜತೀತಿ ಯುಜ್ಯತೇ ॥ (೪) ಸ್ವಯಮೇವ ಭವತಿ ಭಾವಯತಿ ಚೇತಿ ಸ್ವಭಾವೋ ಭಗವಾನ್ । ಸ್ವಭಾವತ್ವಾತ್ಸ್ವಯಮೇವ ಕರ್ತೃತ್ವಾದಿಷು ಪ್ರವರ್ತತೇ ॥ (೫) ಸ್ವಾತಂತ್ರ್ಯಾದ್ಭಗವಾನ್ವಿಷ್ಣುಃ ಸ್ವಭಾವ ಇತಿ ಕೀರ್ತಿತಃ । ತತ್ಸ್ವಾ-ತಂತ್ರ್ಯಂ ಕದಾಽಪ್ಯೇಷ ನಾನ್ಯಸ್ಯ ಸೃಜತಿ ಕ್ವಚಿತ್ । ಸ್ವಾತಂತ್ರ್ಯಾದೇವ ಪಾಪಾದಿ-ಸಂಬಂಧಃ ಕುರ್ವತೋಽಪಿ ನ । ಅಜ್ಞಾನಾವೃತ್ತಬುದ್ಧಿತ್ವಾದೀದೃಶಂ ತಂ ನ ಜಾನತೇ ಇತಿ ಮಹಾವಾ(ವ)ರಾಹೇ ॥ ೧ ॥**

ಅ ॥ (೧) ಹೇಗೆ ರಾಜಪುತ್ರರಿಗೆ ತಂದೆಯಾದ ರಾಜನಿಂದ ಕೊಡಲ್ಪಟ್ಟ ಸಾಮ್ರಾಜ್ಯದ ರಕ್ಷಕತ್ವವಿದೆಯೋ, (ಅಂದರೆ ಹೇಗೆ ರಾಜನು ತನ್ನ ಮಕ್ಕಳಿಗೆ ರಾಜ್ಯಾಧಿಪತ್ಯವನ್ನು ಕೊಡುತ್ತಾನೋ) ಹೀಗೆಯೇ ಜೀವರಿಗೆ ಸ್ವತಂತ್ರ ಕರ್ತೃತ್ವವಿಲ್ಲದಿದ್ದರೂ, ಪರಮಾತ್ಮನಿಂದ ಕೊಡಲ್ಪಟ್ಟ ಕ್ರಿಯೆಗಳಲ್ಲಿ ಸ್ವಾತಂತ್ರ್ಯರೂಪವಾದ ಕರ್ತೃತ್ವವೂ ಕ್ರಿಯೆಗಳಿಂದುಂಟಾಗತಕ್ಕ ಧರ್ಮಾದಿರೂಪವಾದ ಕರ್ಮದಲ್ಲಿ ಸ್ವಾತಂತ್ರ್ಯವೂ ಕೂಡ ಇದೆ, ಎಂಬೀ ಆಶಂಕೆಯನ್ನು ನ ಕರ್ತೃತ್ವಂ ಇತ್ಯಾದಿಗಳಿಂದ ಪರಿಹರಿಸುತ್ತಾರೆ (೨) (ಇಲ್ಲಿ ಕರ್ತೃತ್ವಾದಿಗಳು ಇಲ್ಲವೆಂದೇ ಹೇಳಲ್ಪಡುವುದು. ಅಸ್ವಾತಂತ್ರ್ಯವು ಹೇಳಲ್ಪಡುವುದಿಲ್ಲ, ಆದಕಾರಣ ಈ ಶಂಕೆಯು ಹೇಗೆ ಪರಿಹೃತವಾಗುವುದು? ಎಂದರೆ—) ಶ್ರೀಹರಿಯು (ನ ಕರ್ತೃತ್ವಂ ಎಂಬುವಲ್ಲಿ ಜನರಿಗೆ ಕ್ರಿಯೆಯಲ್ಲಿಯೂ ಅದೃಷ್ಟವನ್ನು ಹುಟ್ಟಿಸುವ ವಿಷಯದಲ್ಲಿಯೂ ಫಲದಲ್ಲಿಯೂ ಸ್ವಾತಂತ್ರ್ಯವನ್ನು ಕೊಡುವುದಿಲ್ಲ, ಎಂದೇ ಹೇಳುವುದು ಸರ್ವಥಾ ಕರ್ತೃತ್ವವಿಲ್ಲವೆಂದು ಹೇಳುವುದಿಲ್ಲ ಆದಕಾರಣ ಹಿಂದೆ ಹೇಳಿದ ಶಂಕೆಗೆ ಅವಕಾಶವಿಲ್ಲ.) (ನ ಕರ್ತೃತ್ವಂ ಎಂಬುವಲ್ಲಿ ಶ್ರೀಹರಿಗೇನೇ ಕರ್ತೃತ್ವವಿಲ್ಲವೆಂದು ಹೇಳಲ್ಪಡುತ್ತದೆಂದು ಏಕೆ ಆಗಲಾರದೆಂದರೆ—) ಇಲ್ಲಿ ಶ್ರೀಹರಿಗೇನೇ ಕರ್ತೃತ್ವವು ಇಲ್ಲವೆಂದು ಹೇಳುವು

ದ್ದಾದರೆ ಲೋಕಸ್ಯ= ಜನರಿಗೆ ಕರ್ತೃತ್ವಾದಿಗಳನ್ನು ಸೃಷ್ಟಿಸುವುದಿಲ್ಲವೆಂದು, ಲೋಕಸ್ಯ ಎಂದು ವಿಶೇಷಣ ಹೇಳಿದ್ದು ವ್ಯರ್ಥವಾಗುವುದು (೩) (ಜೀವರಿಗೆ ಪರಾಧೀನವಾದ ಕರ್ತೃತ್ವಾದಿಗಳು ಇವೆ, ಎಂದು ಹೇಳಿದ್ದು ಯುಕ್ತವಲ್ಲ. ಶ್ರೀಹರಿಯು ಜೀವರಿಗೆ ಕರ್ತೃತ್ವಾದಿಗಳನ್ನು ಕೊಡುವುದಿಲ್ಲವೆಂದು ಹೇಳಿದ್ದಾರೆ, ಅಲ್ಲದೆ ಸ್ವಾತಂತ್ರ್ಯವನ್ನು ಕೊಡುವುದಿಲ್ಲವೆಂದು ಹೇಳಲಿಲ್ಲ, ಎಂದರೆ—) ತನ್ನ ಮಕ್ಕಳಿಗೆ ರಾಜನು ಸ್ವಾತಂತ್ರ್ಯವನ್ನು ಕೊಟ್ಟಂತೆಯೇ ದೇಶದಲ್ಲಿ ಆವಾಸವಮಾಡುತ್ತಿದ್ದು ಅವರ ಹಣವನ್ನೇ ಭೋಗಿಸಿಕೊಂಡು ಇರುವ ಜನರಿಗೆ ಸ್ವಾತಂತ್ರ್ಯವನ್ನು ಕೊಡದಿರುವುದರಿಂದ ನ ದತ್ತಾ ಜನಪದಾ ರಾಜ್ಞಾ ಎಂಬುವ ವ್ಯವಹಾರವು ಇದ್ದಂತೆಯೇ ಕರ್ಮಫಲಾದಿಗಳ ಸಂಬಂಧವುಳ್ಳ ಜೀವರಿಗೂ ಕರ್ಮಫಲಾದಿಗಳ ಸ್ವಾತಂತ್ರ್ಯವನ್ನು ಕೊಡದಿರುವುದರಿಂದ ನ ಸೃಜತಿ= ಸ್ವಾತಂತ್ರ್ಯವನ್ನು ಕೊಡುವುದಿಲ್ಲವೆಂದು ಕೂಡುತ್ತದೆ. (೪) (ಇಲ್ಲಿ ಜೀವರಿಗೂ ಶ್ರೀಹರಿಗೂ ಕರ್ತೃತ್ವವನ್ನು ನಿಷೇಧಿಸುವುದಿಲ್ಲವೆಂದಾದರೆ ಸ್ವಭಾವಸ್ತು ಪ್ರವರ್ತತೇ ಎಂದು ಸ್ವಭಾವದಿಂದಲೇ ಜಗತ್ತಿಗೆ ಪ್ರವೃತ್ತಿಯಾಗುತ್ತದೆಂದು ಹೇಳಿದ್ದು ಕೂಡದೆಹೋಗುವುದು ಎಂದರೆ—) ಶ್ರೀಹರಿಯು ತಾನೇ ಪರರ ಅಪೇಕ್ಷೆಯಿಲ್ಲದೆ ಇರುತ್ತಾನೆ, ಮತ್ತು ತಾನೇ ಜಗತ್ತನ್ನು ಸೃಷ್ಟಿಸುತ್ತಾನೆ, ಆದಕಾರಣ ಶ್ರೀಹರಿಯು ಸ್ವಭಾವಶಬ್ದವಾಚ್ಯನು. ತಾನು ಇರುವ ವಿಷಯದಲ್ಲಿಯೂ ಇತರವಾದ ವಸ್ತುವನ್ನು ಸೃಷ್ಟಿಸುವ ವಿಷಯದಲ್ಲಿಯೂ ಇತರರ ಅಪೇಕ್ಷೆಯಿಲ್ಲದಿರುವುದರಿಂದ ತಾನೇ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವ ವಿಷಯದಲ್ಲಿ ಪ್ರವರ್ತಿಸುತ್ತಾನೆ (೫) (ಸ್ವಭಾವಃ ಎಂಬುವುದಕ್ಕೆ ಶ್ರೀಹರಿಯು ಎಂಬುವ ಅರ್ಥವನ್ನು ಏಕೆ ಕಲ್ಪಿಸಿಕೊಳ್ಳುವುದು. ಜೀವರಂತೆ ಶ್ರೀಹರಿಗೂ ಕರ್ತೃತ್ವಾದಿಗಳು ಇಲ್ಲವೇ ಇಲ್ಲ. ಸ್ವಭಾವದಿಂದಲೇ ಜಗತ್ಪ್ರವೃತ್ತಿಯಾಗುತ್ತದೆಂದು ಏಕೆ ಆಗಲಾರದೆಂದರೆ ಪ್ರಮಾಣವಿರೋಧವು ಬರುತ್ತದೆ ಎನ್ನುತ್ತಾರೆ—) ಸರ್ವಸ್ವಾತಂತ್ರ್ಯವಿದ್ದುದರಿಂದ ಷಡ್ಗುಣಪೂರ್ಣನಾದ ಶ್ರೀವಿಷ್ಣುವು ಸ್ವಭಾವನೆನಿಸುತ್ತಾನೆ ಆ ಸ್ವಾತಂತ್ರ್ಯವನ್ನು ಶ್ರೀಹರಿಯು ಯಾವಾಗಲೂ ಎಲ್ಲಿಯೂ ಮತ್ತೊಬ್ಬನಿಗೆ ಕೊಡುವುದಿಲ್ಲ ಸರ್ವಸ್ವಾತಂತ್ರ್ಯವಿದ್ದುದರಿಂದಲೇ ಕರ್ತೃತ್ವವಿದ್ದರೂ ಶ್ರೀಹರಿಗೆ ಪಾಪ ಮೊದಲಾದುವುಗಳ ಸಂಬಂಧವಿಲ್ಲ (ಅಂದರೆ ಕರ್ಮಲೇಪವಿಲ್ಲವೇ ಇಲ್ಲ) (ಹೀಗೆ ಎಲ್ಲಾ ವಸ್ತುಗಳಲ್ಲಿದ್ದು ಸರ್ವಸ್ವಾತಂತ್ರ್ಯದಿಂದ ಜಗತ್ಕರ್ತನಾದ ಶ್ರೀಹರಿಯು ಇದ್ದಾನೆಂದಾದರೆ ಆತನು ಜನರಿಗೆ ಏಕೆ ಕಾಣಿಸಿಕೊಳ್ಳುವುದಿಲ್ಲ ಎಂದರೆ—) ಜನರು ಅಜ್ಞಾನದಿಂದ ಮರೆಯಾದ ಬುದ್ಧಿಯುಳ್ಳವರಾದುದರಿಂದ ಇಂತಹ ಶ್ರೀಹರಿಯನ್ನು ಕಾಣುವುದಿಲ್ಲ, ಎಂದು ಮಹಾ ವಾರಾಹದಲ್ಲಿದೆ ॥ ೧ ॥

ಪೀ—ಶ್ರೀಹರಿಯು ಜಗತ್ತನ್ನು ತಾನೇ ಸೃಷ್ಟಿಸುತ್ತಾನೆಂದು ಹೇಳಿದ್ದು ಯುಕ್ತವಲ್ಲ ಶ್ರೀಹರಿಗೆ ಕರ್ತೃತ್ವವೇ ಇಲ್ಲ. ಪಕ್ಷೇ ಕರ್ತೃತ್ವವಿದ್ದರೂ ಅದು ಸ್ವಾಭಾವಿಕವಲ್ಲ ಎಂದರೆ—

**ತಾ ॥ (೧) (1) ಅಹಂ ಸರ್ವಸ್ಯ ಪ್ರಭವಃ । (2) ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮಿ ॥ (೨) (1) ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ । (2) ನ ಋತೇ ತ್ವತ್ಕ್ರಿಯತೇ ಕಿಂಚನಾರೇ । (3) ದೇವಸ್ಯೈಷ ಸ್ವಭಾವೋಽಯಂ । (4) ಲೋಕವತ್ತು ಲೀಲಾಕೈವಲ್ಯಮಿತ್ಯಾದೇರ್ನಾಸ್ಯಾಸ್ವಾಭಾವಿಕಂ ಕರ್ತೃತ್ವಮಕರ್ತೃತ್ವಂ ವಾ । ವಿಪರೀತಪ್ರಮಾಣಾಭಾವಾಚ್ಚ ॥ (೩) ಅನಿರ್ವಾಚ್ಯನಿರಾಸಾದೇವ ಚ ನಿರಸ್ತೋಽಯಂ ಪಕ್ಷಃ ॥ (೪) ನ ಚ ಸರ್ವವಿಶೇಷರಾಹಿತ್ಯವಾದಿನಾಂ ಶೂನ್ಯವಾದಾತ್ಕಶ್ಚಿದ್ವಿಶೇಷಃ । ನ ಹಿ ಸರ್ವವಿಶೇಷರಹಿತಮಿತ್ಯುಕ್ತೇ ತದಸ್ತೀತಿ ಸಿದ್ಧ್ಯತಿ ॥ (೫) ವಾಚ್ಯತ್ವಲಕ್ಷ್ಯತ್ವಾಸ್ತಿತ್ವಾದೀನಾಮಪಿ ವಿಶೇಷತ್ವಾತ್ । ಅನ್ಯಥಾಽಸ್ತಿಬ್ರಹ್ಮೇತ್ಯಾದೀನಾಂ(ದಿ)ಶಬ್ದಾನಾಮಪಿ ಪರ್ಯಾಯತ್ವಾದಯೋ ದೋಷಾಃ॥೨॥**

ಅ ॥ (೧) (1) ನಾನು ಎಲ್ಲಾ ಜಗತ್ತಿಗೂ ಉತ್ಪಾದಕನು. (2) ನಾನು ಸೂರ್ಯನಲ್ಲಿದ್ದು ತಾಪವನ್ನುಂಟುಮಾಡುತ್ತೇನೆ. ಮೇಘಗಳಲ್ಲಿದ್ದು ಮಳೆ ಸುರಿಸುತ್ತೇನೆ. ಮಳೆಯನ್ನು ನಿಲ್ಲಿಸುತ್ತೇನೆ. (ಇವೆರಡು ಶ್ರೀಹರಿಗೆ ಕರ್ತೃತ್ವವು ಇದೆ ಎಂಬಲ್ಲಿ ಪ್ರಮಾಣವು) (೨) (1) ಶ್ರೀಹರಿಯ ಶಕ್ತಿಯೂ ಜ್ಞಾನ ಬಲ ಕ್ರಿಯೆಗಳೂ ಉತ್ಕೃಷ್ಟಗಳು, ಬಹು ವಿಧಗಳು, ಸ್ವಾಭಾವಿಕಗಳಾದವುಗಳು (2) ಶ್ರೀಹರಿಯೇ ನೀನು ಹೊರತು ದೂರದಲ್ಲಿಯಾಗಲೀ ಸಮೀಪದಲ್ಲಿ ಆಗಲೀ ಯಾವುದೊಂದನ್ನೂ ಯಾರೂ ಸೃಷ್ಟಿಮಾಡುವವರಿಲ್ಲ. (3) ಜಗತ್ಸೃಷ್ಟ್ಯಾದಿಗಳು ಶ್ರೀಹರಿಯ ಸ್ವಭಾವವು (4) ಮತ್ತನಾದ ಮನುಷ್ಯನ ನರ್ತನ ಗಾನಾದಿ ಪ್ರವೃತ್ತಿಯಂತೆ, ಶ್ರೀಹರಿಯ ಜಗತ್ಸೃಷ್ಟ್ಯಾದಿ ಪ್ರವೃತ್ತಿಯು ಫಲಾಪೇಕ್ಷೆಯಿಲ್ಲದೆ ಕೇವಲ ಕ್ರೀಡಾರೂಪವೇ. (ಇವುಗಳು ಶ್ರೀಹರಿಗೆ ಕರ್ತೃತ್ವವು ಸ್ವಾಭಾವಿಕವೆಂಬುವಲ್ಲಿ ಪ್ರಮಾಣವು) ಇದು ಮೊದಲಾದ ಪ್ರಮಾಣಗಳಿಂದ ಶ್ರೀಹರಿಗೆ ಕರ್ತೃತ್ವವು ಇಲ್ಲವೆಂದಾಗಲೀ, ಅದು ಅಸ್ವಾಭಾವಿಕವೆಂದಾಗಲೀ ಅಲ್ಲ ಮತ್ತು ಶ್ರೀಹರಿಗೆ ಕರ್ತೃತ್ವವೇ ಇಲ್ಲ, ಕರ್ತೃತ್ವವು ಸ್ವಾಭಾವಿಕವೂ ಅಲ್ಲ, ಎಂದು ಹೇಳುವ ವಿರುದ್ಧವಾದ ಪ್ರಮಾಣವೂ ಇಲ್ಲ. (೩) (ಹಾಗಾದರೆ ಶ್ರೀಹರಿಗೆ ಕರ್ತೃತ್ವವು ಅನಿರ್ವಾಚ್ಯವೆನ್ನುತ್ತೇವೆ ಫಲಾಪೇಕ್ಷೆವುಳ್ಳದ್ದು ಪರಾಧೀನವಾದುದು ಎಂದಾಗಲೀ ಹೇಳುವುದಿಲ್ಲ ಆದಕಾರಣ ಯಾವ ಪ್ರಮಾಣ ವಿರೋಧವೂ ಇಲ್ಲ ಎಂದರೆ—) ಶ್ರೀಹರಿಯ ಕರ್ತೃತ್ವವು ಅನಿರ್ವಚನೀಯವೆಂಬುವ ಪಕ್ಷವು ಎರಡನೇ ಅಧ್ಯಾಯದಲ್ಲಿ ಅನಿರ್ವಾಚ್ಯ ವಸ್ತುವನ್ನೇ ನಿರಾಕರಣ ಮಾಡಿದುದರಿಂದಲೇ ನಿರಸ್ತವಾಯಿತು ಮರಳಿ ಇಲ್ಲಿ ನಿರಾಕರಿಸಬೇಕಾಗಿಲ್ಲ (೪) (ಶ್ರೀಹರಿಗೆ ಯಾವುದೊಂದು ವಿಶೇಷವೂ ಇಲ್ಲದಿರುವುದರಿಂದ ಯಥಾರ್ಥವಾಗಿ ಕರ್ತೃತ್ವಾದಿರೂಪ ಧರ್ಮವು ಇದೆ, ಎಂಬುದು ಹೇಗೆ ಕೂಡುತ್ತದೆ ಎಂದರೆ—) ಪರಬ್ರಹ್ಮನಿಗೆ ಯಾವ ವಿಶೇಷವೂ ಇಲ್ಲವೆಂದು ಹೇಳುವವರಿಗೆ ಶೂನ್ಯವಾದಿಗಳ ಮತದಿಂದ ವ್ಯತ್ಯಾಸವು ಏನೂ ಇಲ್ಲ (ಅಂದರೆ ಶ್ರೀಹರಿಗೆ ಯಾವ ವಿಶೇಷವೂ ಇಲ್ಲವೆಂದಾದರೆ ಕರ್ತೃತ್ವವು ಅಪಾರಮಾರ್ಥಿಕವಾಗುತ್ತಿತ್ತು ಅದು ಯುಕ್ತವಲ್ಲ. ಹಾಗಿದ್ದರೆ ಬ್ರಹ್ಮನು ಶೂನ್ಯನೆಂದಾಗಬೇಕಾಗುವನು. ಬ್ರಹ್ಮನಿಗೆ ಶೂನ್ಯತ್ವವನ್ನು ಹೇಳಿದರೆ ಅಂತಹ ಬ್ರಹ್ಮನನ್ನು ಅಂಗೀಕರಿಸುವವರೂ ಶೂನ್ಯವಾದಿಗಳಾಗಬೇಕಾಗುವರು. ನಾವು ಬ್ರಹ್ಮನಿಗೆ ಯಾವ ವಿಶೇಷವನ್ನು ಒಪ್ಪದಿದ್ದರೂ ಅಸ್ತಿತ್ವವನ್ನು ಒಡಂಬಟ್ಟ ಪ್ರಯುಕ್ತ ಶೂನ್ಯವಾದಿಗಳಾಗುವುದಿಲ್ಲ ಎಂದರೆ—) ಬ್ರಹ್ಮನಿಗೆ ಯಾವ ವಿಶೇಷಗಳೂ ಇಲ್ಲವೆಂದು ಹೇಳಿದರೆ ಬ್ರಹ್ಮನಿಗೆ ಅಸ್ತಿತ್ವರೂಪ ವಿಶೇಷವು ಇಲ್ಲವೆಂದೇ ಆಗುತ್ತದೆ (೫) (ಏಕೆಂದರೆ—) ವಾಚ್ಯತ್ವ ಲಕ್ಷ್ಯತ್ವ ಅಸ್ತಿತ್ವ ಮೊದಲಾದವುಗಳು ವಿಶೇಷಗಳೇ ಆಗಿವೆ (ಅಂದರೆ ಬ್ರಹ್ಮನಿಗೆ ಅಸ್ತಿತ್ವವಿದ್ದರೆ ಅಸ್ತಿಶಬ್ದವಾಚ್ಯತ್ವವು ಬರುವುದು. ಅದೇ ವಿಶೇಷವು. ಯಾವುದೊಂದು ವಿಶೇಷವೂ ಇಲ್ಲವೆಂದು ಹೇಳಿದರೆ ಅಸ್ತಿತ್ವವೂ ಕೂಡಲಾರದು) ಅಸ್ತಿತ್ವವು ಬ್ರಹ್ಮನ ವಿಶೇಷವೆನ್ನುವುದಿಲ್ಲ. ಅದು ಬ್ರಹ್ಮಸ್ವರೂಪಮಾತ್ರವೆನ್ನುತ್ತೇವೆ ಎಂದರೆ ಬ್ರಹ್ಮ ಬ್ರಹ್ಮ ಎಂದು ಹೇಳಿದಂತೆಯೇ ಅಸ್ತಿ ಬ್ರಹ್ಮ ಇತ್ಯಾದಿ ಶಬ್ದಗಳಿಗೆ ಪರ್ಯಾಯತ್ವವು ಬರಬೇಕಾಗುವುದು. ಅಲ್ಲದೆ ಅಸ್ತಿ ಬ್ರಹ್ಮೇತಿ ಚೇದ್ವೇದ ಇತ್ಯಾದಿ ಸಹ ಪ್ರಯೋಗವೂ ಕೂಡದೆ ಹೋಗುವುದು ಇದು ಮೊದಲಾದ ದೋಷಗಳು ಬರುವವು. (ತಥಾಚ ಉಪನಿಷತ್ತುಗಳಲ್ಲಿ ಪುನರುಕ್ತಿದೋಷವು ಬಂದು ಉನ್ಮತ್ತವಾಕ್ಯದಂತೆ ಉಪನಿಷದ್ವಾಕ್ಯಗಳು ಅನಾದರಣೀಯವಾಗುವುವು) ॥ ೨ ॥

ಪೀ—ಬ್ರಹ್ಮನಲ್ಲಿ ಅಸ್ತಿತ್ವಾದಿ ವಿಶೇಷಗಳಿಲ್ಲದಿದ್ದರೂ ಸತ್ಯಂ ಜ್ಞಾನಂ ಇತ್ಯಾದಿ ವಾಕ್ಯಗಳಲ್ಲಿ ಅಸತ್ಯತ್ವವ್ಯಾವೃತ್ತಿಯು, ಅಜ್ಞಾತತ್ವವ್ಯಾವೃತ್ತಿಯು, ಹೀಗೆ ಆರೋಪಿತ ಅಸತ್ವಾದಿ ವಿಶೇಷ ವ್ಯಾವೃತ್ತಿಯನ್ನು (ಅಸತ್ವಾಭಾವವನ್ನು ಹೇಳುವುದರಿಂದ ಅಸ್ತಿ ಮೊದಲಾದ ಪದಗಳು ಲಕ್ಷಣಾವೃತ್ತಿಯಿಂದ (ಅಂದರೆ ಅಮುಖ್ಯವೃತ್ತಿಯಿಂದ) ಶ್ರೀಪರಬ್ರಹ್ಮನನ್ನು ತಿಳಿಸುತ್ತವೆ. ಆದಕಾರಣ ಸತ್ಯಂ ಜ್ಞಾನಂ ಇತ್ಯಾದಿ ಶಬ್ದಗಳಿಗೆ ಪರ್ಯಾಯತ್ವಾದಿ ದೋಷಗಳು ಬರುವುದಿಲ್ಲವೆಂದರೆ—

ಟೀ || (೧) ವ್ಯಾವರ್ತ್ಯವಿಶೇಷಶ್ಚ ವ್ಯಾವೃತ್ತವಿಶೇಷನಿಬಂಧನ ಏವ | ಅನ್ಯಥಾ ವೈಯರ್ಥ್ಯಮೇವ ಸ್ಯಾತ್ || (೨) ನ ಚ ಸರ್ವಶಬ್ದಾವಾಚ್ಯಸ್ಯ ಲಕ್ಷ್ಯತ್ವಂ || (೩) ನ ಚ ಸರ್ವಪ್ರಮಾಣಾಗೋಚರಮಸ್ತೀತ್ಯತ್ರ ಕಿಂಚಿನ್ಮಾ(ತ್ರಮಾ)ನಂ || (೪) (ನಾಸ್ತಿತ್ವಂ ತು ಸಪ್ತಮರಸಾದಿವದದರ್ಶನಾತ್ಸಿದ್ಧ್ಯತಿ || (೫) ಸ್ವಪ್ರಕಾಶತ್ವಂ ಚ ಸಾಮಾನಂ ಸಿದ್ಧ್ಯತಿ| ಸ್ವಯಂಪ್ರಕಾಶತ್ವಂ ಚ ತತೋಽತಿರಿಕ್ತಂ ಚೇದ್ವಿಶೇಷಾಂಗೀಕಾರಃ | ನ ಚೇತ್ತದೇವ ಪ್ರಮಾಣಗೋಚರಂ | ತತ್ಪ್ರಮಾಣ(ಣಾ)ಭಾವೇ || (೬) ಪರಪ್ರಕಾಶತ್ವಮಾತ್ರನಿರಾಸೇ ಸ್ವಪ್ರಕಾಶೇ ಪ್ರಮಾಣಾಭಾವಾದಪ್ರಕಾಶತ್ವಮೇವ ಸ್ಯಾತ್ || (೭) ಅರ್ಥತಃ ಸಿದ್ಧಿರಿತ್ಯ(ದ್ಧಿರಪ್ಯ)ರ್ಥಾಪತ್ತಿತಃ ಸಿದ್ಧಿಸ್ತತ್ಪ್ರಮಾಣತಃ ಸಿದ್ಧಿರ್ವಾ| ಉಭಯಥಾಽಪಿ ಪ್ರಮೇಯತ್ವಮೇವಸ್ಯಾತ್ || (೮) ಸ್ವಪ್ರಕಾಶಶಬ್ದೇನ ಚ ಸ್ವಮಿತತ್ವಾನಂಗೀಕಾರಾತ್ಪರಮಿತತ್ವಾನಂಗೀಕಾರಾಚ್ಚಾಸಿದ್ಧಿರೇವ ||(೯)ಪ್ರಕಾಶ ಇತ್ಯುಕ್ತೇಽಪಿ ಸ್ವಮನ್ಯಂ ವಾ ಕಿಂಚಿತ್ಪ್ರಕಾಶ್ಯಂ ವಿನಾ ನ ದೃಷ್ಟ ಏವ ಭೋಜನಾದಿವತ್ | ಕರ್ತೃಕರ್ಮವಿರೋಧಶ್ಚಾನುಭವವಿರುದ್ಧಃ | ಜ್ಞಾನಂ ಚ ಜ್ಞೇಯಂ ಜ್ಞಾತಾರಂ ಚ ವಿನಾ ನ ದೃಷ್ಟಂ | ಅತಃಶೂನ್ಯವಾದಾನ್ನ ಕಶ್ಚಿದ್ವಿಶೇಷಃ | ಅತೋಽನಂತದೋಷದುಷ್ಟತ್ವಾದುಪರಮ್ಯತೇ ||(೧೦) ಹರಿಃ ಸ್ವಭಾವತಃ ಕರ್ತಾ ಸರ್ವಮನ್ಯತ್ತದೀರಿತಂ | ಅತಃ ಸಾ ಕರ್ತೃತಾ ತಸ್ಯ ನ ಕದಾಚಿದ್ವಿನಶ್ಯತೀತಿ ಪೈಂಗಿಶ್ರುತಿಃ || ೩ || || ೧೪ ||

ಅ || (೧) ವ್ಯಾವರ್ತ್ಯವಾದ ಅಸತ್ವ ಮೊದಲಾದ ವಿಶೇಷಗಳ ವ್ಯಾವೃತ್ತಿಗೆ ವ್ಯಾವೃತ್ತವೆಂದಂಗೀಕೃತವಾದ ಬ್ರಹ್ಮನಲ್ಲಿರುವ ಅಸ್ತಿತ್ವ ಮೊದಲಾದ ವಿಶೇಷಗಳು ಕಾರಣಗಳು ಅವುಗಳನ್ನು ನೀನು ಒಪ್ಪಲಿಲ್ಲ (ಅಂದರೆ ಬ್ರಹ್ಮನಲ್ಲಿ ಅಸ್ತಿ ಇತ್ಯಾದಿ ಶಬ್ದಗಳು ಮುಖ್ಯ ವೃತ್ತಿಯಿಂದ ಅಸ್ತಿತ್ವ ಮೊದಲಾದ ಧರ್ಮಗಳನ್ನು ಹೇಳದೆ ಇದ್ದರೆ ಬ್ರಹ್ಮನಿಗೆ ಅಸತ್ಯತ್ವಾದ್ಯಭಾವವೇ ಸಿದ್ಧವಾಗುವುದಿಲ್ಲ.) (ಬ್ರಹ್ಮನಲ್ಲಿ ಅಸ್ತಿತ್ವ ಮೊದಲಾದ ವಿಶೇಷಗಳಿಲ್ಲದಿದ್ದರೂ ಅಸತ್ವಾದಿವ್ಯಾವೃತ್ತಿಯಿದೆ, ಎಂದರೆ ಅಸತ್ತಿಗೂ ಅಸದ್ವ್ಯಾವೃತ್ತಿಯು ಬರಬೇಕಾಗುವುದು ) ಅಸ್ತಿ ಮೊದಲಾದ ಪದಗಳು ಬ್ರಹ್ಮನಿಗೆ ಅಸ್ತಿತ್ವ ಮೊದಲಾದ ವಿಶೇಷಗಳನ್ನು ತಿಳಿಸುವುದಿಲ್ಲವೆಂದು ಹೇಳಿದರೆ ಆ ಪದಗಳು ವ್ಯರ್ಥಗಳೇ ಆಗುವವು (೨) ಬ್ರಹ್ಮನು ಎಲ್ಲಾ ಶಬ್ದಗಳಿಂದಲೂ ವಾಚ್ಯನಲ್ಲವೆಂದು ಹೇಳಿದರೆ ಅವನು ಸತ್ಯ ಮೊದಲಾದ ಶಬ್ದಗಳಿಂದ ಲಕ್ಷ್ಯನು. (ಲಕ್ಷಣಾವೃತ್ತಿಯಿಂದ ಬೋಧ್ಯನು) ಎಂಬುವುದೂ ಕೂಡುವುದಿಲ್ಲ (ತೀರ ಮೊದಲಾದ ಪದಗಳಿಂದ ಹೇಳಲ್ಪಡುವ ತೀರಾದಿಗಳೇ ಗಂಗಾದಿಪದಗಳಿಂದ ಲಕ್ಷ್ಯಗಳಾಗಿ ಕಂಡಿವೆ) (೩) ಮತ್ತು ಬ್ರಹ್ಮನು ಸರ್ವ ಪ್ರಮಾಣಗಳಿಂದಲೂ ಅವೇದ್ಯನೆಂದಾದರೆ ಅಂತಹ ಬ್ರಹ್ಮನಿಗೆ ಅಸ್ತಿತ್ವವಿದೆ, ಎಂಬುವಲ್ಲಿಯೂ ಯಾವ ಪ್ರಮಾಣವೂ ಇರುವುದಿಲ್ಲ. (ಅಂತೂ ಬ್ರಹ್ಮನಿಗೆ ಅಸ್ತಿತ್ವವೇ ಸಿದ್ಧವಾಗಲಾರದು ) (೪) ಬ್ರಹ್ಮನಿಗೆ ನಾಸ್ತಿತ್ವವು (ಅಂದರೆ ಅಸತ್ವವು) ಇದೆ ಎಂಬುವಲ್ಲಿ ಪ್ರಮಾಣವಿಲ್ಲ ಆದುದರಿಂದ ಶೂನ್ಯತ್ವವು ಬರುವುದಿಲ್ಲವೆಂದರೆ ಬ್ರಹ್ಮನಿಗೆ ಅಸ್ತಿತ್ವವಿದೆ, ಎಂಬುವಲ್ಲಿ ಪ್ರಮಾಣವಿಲ್ಲದಿರುವುದರಿಂದಲೇ ಏಳನೇ ರಸಾದಿಗಳಂತೆಯೇ ಅಸತ್ವವು ಸಿದ್ಧವಾಗುವುದು. (ಬ್ರಹ್ಮನಿಗೆ ನಾಸ್ತಿತ್ವ ಹೇಳಲಿಕ್ಕೆ ಬೇರೆ ಪ್ರಮಾಣಗಳು ಬೇಕಾಗಿಲ್ಲ.) (೫) (ಬ್ರಹ್ಮನು ಎಲ್ಲಾ ಪ್ರಮಾಣಗಳಿಂದ ಅವೇದ್ಯನೆಂದಾದರೂ ಬ್ರಹ್ಮನಿಗೆ ನಾಸ್ತಿತ್ವವು ಬರುವುದಿಲ್ಲ ಏಕೆಂದರೆ ಆ ಬ್ರಹ್ಮನಿಗೆ ಸ್ವಪ್ರಕಾಶತ್ವವಿರುವುದರಿಂದಲೇ ಅಸ್ತಿತ್ವವು ಸಿದ್ಧವಾಗುವುದು ಎಂದರೆ–) ಬ್ರಹ್ಮನಿಗೆ ಸ್ವಪ್ರಕಾಶತ್ವವೂ ಕೂಡ ಆ ವಿಷಯದಲ್ಲಿ ಪ್ರಮಾಣವಿಲ್ಲದೆ ಸಿದ್ಧವಾಗಲಾರದು (ಅಂದರೆ ಬ್ರಹ್ಮನಿಗೆ ಸ್ವಪ್ರಕಾಶತ್ವವಿದೆ

ಎಂಬುವಲ್ಲಿ ಪ್ರಮಾಣವು ಉಂಟೋ ಇಲ್ಲವೋ, ಪ್ರಮಾಣವಿಲ್ಲವೆಂದಾದರೆ ಸ್ವಪ್ರಕಾಶತ್ವವೇ ಇಲ್ಲವೆಂದಾಗು ತ್ತದೆ. ಪ್ರಮಾಣವು ಉಂಟು ಎಂದು ಹೇಳುವ ಪಕ್ಷದಲ್ಲಿ ಆ ಪ್ರಮಾಣಸಿದ್ಧವಾದ ಸ್ವಪ್ರಕಾಶತ್ವವು ಬ್ರಹ್ಮನಿಂದ ಭಿನ್ನವೆಂದು ಹೇಳುವುದಾದರೆ ಸ್ವಪ್ರಕಾಶ್ವರೂಪವಿಶೇಷವನ್ನು ಬ್ರಹ್ಮನಲ್ಲಿ ಒಪ್ಪಿದಂತೆಯೇ ಆಗುವುದು. ಹೀಗಾದರೆ ಬ್ರಹ್ಮನಿಗೆ ನಿರ್ವಿಶೇಷತ್ವವು ಕೂಡಲಾರದು. ಆ ಸ್ವಪ್ರಕಾಶತ್ವವು ಬ್ರಹ್ಮನ ಸ್ವರೂಪವೆಂದಾದರೆ ಬ್ರಹ್ಮನೇ ಆ ಪ್ರಮಾಣದಿಂದ ತಿಳಿಯಲ್ಪಡುತ್ತಾನೆಂದಾಗುವುದು ಹೀಗಾದರೆ ಬ್ರಹ್ಮನು ಸರ್ವಪ್ರಮಾಣಗಳಿಂದ ತಿಳಿಯಲ್ಪಡುವವನೆಂಬುದು ಕೂಡಲಾರದು (೬) ಬ್ರಹ್ಮನು ಸ್ವಪ್ರ ಕಾಶನೆಂದಾದರೆ ಪರಪ್ರಕಾಶ್ಯನಲ್ಲವೆಂದೇ ಅರ್ಥವೆಂದು ಹೇಳಿದರೆ ಸ್ವಪ್ರಕಾಶತ್ವದಲ್ಲಿ ಪ್ರಮಾಣವಿಲ್ಲದಿರುವು ದರಿಂದ ಬ್ರಹ್ಮನಿಗೆ ಪ್ರಕಾಶವಿಲ್ಲವೆಂದೇ ಆಗುವುದು (೭) ಬ್ರಹ್ಮನಿದ್ದಾನೆಂಬುವಲ್ಲಿ ಪ್ರಮಾಣವು ಇಲ್ಲ ದಿರುವುದರಿಂದ ನಾಸ್ತಿತ್ವವೇ ಸಿದ್ಧವಾಗುವುದು ಎಂದರೆ-) ಅಸ್ತಿ ಬ್ರಹ್ಮ ಇತ್ಯಾದಿ ವೇದಗಳಿಂದ ಬ್ರಹ್ಮನಿಗೆ ಅಸತ್ತ್ವಾಭಾವವನ್ನು ಹೇಳಿದರೆ ಬ್ರಹ್ಮನಲ್ಲಿ ಅರ್ಥತಃ ಅಸ್ತಿತ್ವವು ಸಿದ್ಧವಾಗುತ್ತದೆ, ಎಂದರೆ – ಅರ್ಥತಃ ಸಿದ್ಧಿಯೆಂದರೆ ಅರ್ಥಾಪತ್ತಿಯೆಂಬ ಪ್ರಮಾಣದಿಂದ ಬ್ರಹ್ಮನು ಸಿದ್ಧನಾಗುತ್ತಾನೆಂದರ್ಥವೋ ಅಥವಾ ಅಸ್ತಿ ಬ್ರಹ್ಮ ಇತ್ಯಾದಿ ವೇದಪ್ರಮಾಣದಿಂದಲೇ ಬ್ರಹ್ಮನು ಸಿದ್ಧನಾಗುತ್ತಾನೆಂದು ಅರ್ಥವೋ, ಎರಡು ಕಲ್ಪಗಳಲ್ಲಿಯೂ ಬ್ರಹ್ಮನು ಪ್ರಮಾಣದಿಂದ ತಿಳಿಯಲ್ಪಡುತ್ತಾನೆಂಬುವುದೇ ಸಿದ್ಧವಾಗುವುದು (ಬ್ರಹ್ಮನು ಪ್ರಮಾಣಗಮ್ಯನೆಂಬುವ ಅದ್ವೈತಿಗಳ ಮತಕ್ಕೆ ಭಂಗವು ಬರುವುದು ) (೮) (ಬ್ರಹ್ಮನು ಯಾವದೊಂದು ಪ್ರಮಾಣದಿಂದಲೂ ವೇದ್ಯನಾಗದಿದ್ದರೂ ಸ್ವಪ್ರಕಾಶತ್ವದಿಂದಲೇ ಬ್ರಹ್ಮನು ಸಿದ್ಧನಾಗುವನು, ಎಂದರೆ ಇದು ವ್ಯಾಹತವು, ಏಕೆಂದರೆ—) ಸ್ವಪ್ರಕಾಶವೆಂಬ ಶಬ್ದದಿಂದ(ಕರ್ತೃಕರ್ಮ ವಿರೋಧವು ಬರುವುದರಿಂದ) ಸ್ವಾತ್ಮಕಜ್ಞಾನ ವಿಷಯತ್ವವನ್ನು ನೀನು ಒಪ್ಪುವುದಿಲ್ಲ (ಅವೇದ್ಯತ್ವವನ್ನು ಒಪ್ಪಿದಕಾರಣ) ಪರಪ್ರಕಾ ಶ್ಯತ್ವವನ್ನು ಒಪ್ಪುವುದಿಲ್ಲ ಅಂತೂ ಬ್ರಹ್ಮನಿಗೆ ಸಿದ್ಧಿಯು ಇಲ್ಲವೆಂದೇ ಆಗುವುದು (೯) ಬ್ರಹ್ಮನು ಜ್ಞಾನ ರೂಪನು ಎಂದು ಹೇಳುತ್ತೇವೆ ಎಂದರೆ ಅದೂ ಕೂಡುವುದಿಲ್ಲ. ಏಕೆಂದರೆ ಭೋಜ್ಯ (ತಿನ್ನುವತಿಂಡಿ) ಉಣ್ಣುವ ಮನುಷ್ಯ ಇಲ್ಲದಿದ್ದರೆ ಹೇಗೆ ಭೋಜನರೂಪ ಕ್ರಿಯೆಯು ಕೂಡುವುದಿಲ್ಲವೋ, ಹಾಗೆಯೇ ಬ್ರಹ್ಮ ರೂಪ ಪ್ರಕಾಶಕರ್ತನೂ ಮತ್ತು ತಾನಾಗಲೀ ತನ್ನಿಂದ ಬೇರೆಯಾದ ಪ್ರಕಾಶ್ಯವಸ್ತುವೇ ಇಲ್ಲದಿರುವುದರಿಂದ ಪ್ರಕಾಶರೂಪತ್ವವೇ ಕೂಡಲಾರದು. ಬ್ರಹ್ಮರೂಪಜ್ಞಾನವು ಬ್ರಹ್ಮನೇ ಕರ್ತನು, ಬ್ರಹ್ಮನೇ ಕರ್ಮನು ಎಂದು ಹೇಳಿದರೆ ಲೋಕದಲ್ಲಿ ಒಂದು ಕ್ರಿಯೆಗೆ ತಾನೇ ಕರ್ತನು ತಾನೇ ಕರ್ಮನು ಎಂದು ಕಾಣದಿರುವು ದರಿಂದ ಈ ಪಕ್ಷವು ಅನುಭವವಿರುದ್ಧವು ಮತ್ತು ಜ್ಞಾನವು ಜ್ಞೇಯವಾದ ವಸ್ತುವನ್ನೂ ಜ್ಞಾನಾಶ್ರಯ ನಾದವನನ್ನೂ ಬಿಟ್ಟು ಇರುವುದಿಲ್ಲ (ಅಂದರೆ ಕರ್ತೃ ಕರ್ಮವಿಲ್ಲದಿರುವ ಜ್ಞಾನವು ಎಲ್ಲಿಯೂ ತೋರಿಬರ ಲಿಲ್ಲ.) ಆದಕಾರಣ ಬ್ರಹ್ಮನಿಗೆ ಯಾವ ಪ್ರಕಾರದಿಂದಲೂ ಅಸ್ತಿತ್ವವೇ ಸಿದ್ಧವಾಗದಿರುವುದರಿಂದ ಅದ್ವೈತ ಮತಕ್ಕೆ ಶೂನ್ಯವಾದಕ್ಕಿಂತ ಯಾವುದೊಂದು ವಿಶೇಷವೂ ಇಲ್ಲ ಆದಕಾರಣ ಬ್ರಹ್ಮನಿಗೆ ಕರ್ತೃತ್ವವೇ ಇಲ್ಲ ಇದೆ, ಎಂದು ಒಡಂಬಟ್ಟರೂ ಕರ್ತೃತ್ವವು ಸ್ವಾಭಾವಿಕವಲ್ಲ, ಎಂಬ ಮತವು ಅನಂತಾನಂತ ದೋಷಗಳಿಂದ ದುಷ್ಟವಾಗಿರುವುದರಿಂದ ಶ್ರೀಹರಿಗೆ ಕರ್ತೃತ್ವವಿಲ್ಲ. ಇತ್ಯಾದಿಗಳ ನಿರಾಕರಣವು ಉಪ ರಮಿಸಲ್ಪಡುತ್ತದೆ (ನಿಲ್ಲಿಸಲ್ಪಡುತ್ತದೆ ) (೧೦) (ಪುನಃ ಶ್ರೀಹರಿಗೆ ಸ್ವಾಭಾವಿಕವಾಗಿಯೇ ಕರ್ತೃತ್ವ ವಿದೆ, ಎಂಬುವ ವಿಷಯದಲ್ಲಿ ಶ್ರುತಿರೂಪ ಪ್ರಮಾಣವನ್ನು ಹೇಳುತ್ತಾರೆ—) ಶ್ರೀಹರಿಯು ಸ್ವಾಭಾವಿಕ ವಾಗಿಯೇ ಸರ್ವ ಜಗತ್ತನ್ನು ಸೃಷ್ಟಿಮಾಡಿದವನು ಬೇರೆ ಎಲ್ಲರೂ ಅವನ ಪ್ರೇರಣಾನುಸಾರವಾಗಿ ಅವನ ಅಧೀನರಾಗಿಯೇ ಕರ್ತೃಗಳಾಗುವರು ಆದಕಾರಣ ಆ ಶ್ರೀಹರಿಯು ಕರ್ತೃತ್ವವು ಯಾವಾಗಲೂ ನಾಶಹೊಂದುವುದಲ್ಲ, ಎಂದು ಪೈಂಗಿಶ್ರುತಿಯು ॥ ೩ ॥ ॥ ೧೪ ॥

ಪೀ—ಫಲಸಂಬಂಧದಲ್ಲಿ ಜೀವನಿಗೆ ಸ್ವಾತಂತ್ರ್ಯವಿಲ್ಲವೆಂಬುದನ್ನು ಪ್ರಕಟೀಕರಿಸುತ್ತಾರೆ—

ಗೀ || ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ |
ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ || ೧೫ ||

ಅ || ವಿಭುಃ=ಜೀವನು, ಕಸ್ಯಚಿತ್ ಪಾಪಂ=ದುರಾಚಾರದಿಂದುಂಟಾಗತಕ್ಕ ಪಾತಕವನ್ನು, ನಾದತ್ತೇ=ಸ್ವತಂತ್ರವಾಗಿ ತೆಗೆದುಕೊಳ್ಳುವುದಿಲ್ಲ ಸುಕೃತಂ=ಸದಾಚಾರ ಪುಣ್ಯವನ್ನು, ನಾದತ್ತೇ=ಸ್ವತಂತ್ರವಾಗಿ ತೆಗೆದುಕೊಳ್ಳುವುದಿಲ್ಲ ಅಥವಾ ವಿಭುಃ=ಸರ್ವಸಮರ್ಥನಾದ ಶ್ರೀಪರಮಾತ್ಮನು, ಕಸ್ಯಚಿತ್=ಯಾವುದೊಂದು ಕರ್ಮದ್ದೆಶೆಯಿಂದಲೂ ಪಾಪವನ್ನು ಅಥವಾ ಪುಣ್ಯವನ್ನು ತೆಗೆದುಕೊಳ್ಳುವುದಿಲ್ಲ (ಅಂದರೆ ಶ್ರೀಹರಿಗೆ ಪುಣ್ಯಪಾಪಗಳ ಲೇಪವು ಬರುವುದಿಲ್ಲ.) ಹಾಗಾದರೆ—ಶ್ರೀಹರಿಯು ಸ್ವತಂತ್ರ ಕರ್ತನಾಗಿ ಎಲ್ಲೆಡೆಯಲ್ಲಿಯೂ ಇದ್ದಾನೆಂದಾದರೆ ಏಕೆ ಕಾಣಿಸಿಕೊಳ್ಳುವುದಿಲ್ಲವೆಂದರೆ-ಅಜ್ಞಾನೇನ=ಅಜ್ಞಾನದಿಂದ, ಜ್ಞಾನಂ=ಬುದ್ಧಿಯು, ಆವೃತಂ=ಮುಚ್ಚಲ್ಪಟ್ಟಿದೆ, ತೇನ=ಬುದ್ಧಿಗೆ ಅಜ್ಞಾನವು ಆವರಕವಾಗಿರುವುದರಿಂದ, ಜಂತವಃ=ಪ್ರಾಣಿಗಳು, ಮುಹ್ಯಂತಿ=ಮೋಹಹೊಂದುತ್ತಾರೆ (ಅಂದರೆ ಶ್ರೀಪರಮಾತ್ಮನನ್ನು ತಿಳಿದುಕೊಳ್ಳುವುದಿಲ್ಲ) || ೧೫ ||

ಭಾ || ನಚ ಕರೋತಿ ವಸ್ತುತ ಇತ್ಯಾಹ | ನ ಕರ್ತೃತ್ವಮಿತಿ | ಪ್ರಭುರ್ಹಿ ಜೀವೋ ಜಡಮಪೇಕ್ಷ್ಯ || ೧೪,೧೫ ||

ಅ || (ದರ್ಶನಾದಿಗಳನ್ನು ಜೀವನು ಮಾಡಿಕೊಂಡು ಇದ್ದಾಗ್ಯೂ ಮಾಡುತ್ತೇನೆಂದು ತಿಳಿಯುವುದಿಲ್ಲ ಎಂದುಕ್ತವಾಗಿದೆ ಹಾಗಾದರೆ ಮಿಥ್ಯಾಜ್ಞಾನಿಯು ಆಗಬೇಕಾಗುವನು, ಎಂಬುವ ಆಶಂಕೆಯನ್ನು ಹೋಗಲಾಡಿಸುವುದಕ್ಕಾಗಿ ಶ್ರೀಹರಿಯ ಪ್ರೇರಣಾನುಸಾರವಾಗಿ ಕರ್ಮಗಳನ್ನು ಮಾಡುವವನಾದಾಗ್ಯೂ ಮಾಡಿಸುವವನಾದಾಗ್ಯೂ) ಸ್ವತಂತ್ರವಾಗಿ ತಾನು ಮಾಡುವುದಿಲ್ಲ (ಮಾಡಿಸುವುದಿಲ್ಲ) ಎಂದು ನ ಕರ್ತೃತ್ವಂ ಎಂಬುದರಿಂದ ಹೇಳುತ್ತಾರೆ (ಇಲ್ಲಿ ಜೀವನನ್ನು ತೆಗೆದುಕೊಂಡರೆ ಪ್ರಭುಃ ಎಂಬುವುದು ಹೇಗೆ ಕೂಡುತ್ತದೆಂದರೆ) ಜಡವಸ್ತುಗಳಿಗಿಂತ ಸಮರ್ಥನಾದವನು ಜೀವನು (ಆದುದರಿಂದ ಜೀವನು ಪ್ರಭು ಎನಿಸುತ್ತಾನೆ) ಸರ್ವಪ್ರಭುವಾಗದಿದ್ದರೂ ಜಡವಸ್ತುಗಳನ್ನು ಶ್ರೀಹರಿಯ ಪ್ರೇರಣಾನುಸಾರ ಮಾಡುವವನಾದುದರಿಂದ ಜಡಕ್ಕೆ ಕಿಂಚಿತ್ಪ್ರಭುವೆನಿಸಿಕೊಳ್ಳುತ್ತಾನೆ || ೧೪, ೧೫ ||

ಗೀ || ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ |
ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಂ || ೧೬ ||

ಅ || (ಸ್ವರೂಪಜ್ಞಾನವು ವೃತ್ತಿರೂಪಜ್ಞಾನವು ಎಂದು ಜ್ಞಾನವು ಎರಡು ವಿಧವು ಯದ್ಯಪಿ ಸ್ವರೂಪಜ್ಞಾನವು ಅಜ್ಞಾನದಿಂದ ಮುಚ್ಚಲ್ಪಟ್ಟಿರುವುದರಿಂದ ಅಜ್ಞಾನವನ್ನು ನಾಶಗೊಳಿಸುವುದಿಲ್ಲ. ಆದಾಗ್ಯೂ) ಆತ್ಮನಃ=ಶ್ರೀಪರಮಾತ್ಮನ, ಜ್ಞಾನೇನ=ಪರೋಕ್ಷವಾದ ವೃತ್ತಿರೂಪಜ್ಞಾನದಿಂದ, ಯೇಷಾಂ=ಯಾವ ಜೀವರ, ಅಜ್ಞಾನಂ=ಅಜ್ಞಾನವು, ನಾಶಿತಂ=ಶಿಥಿಲವಾಗಿಯದೋ, ತೇಷಾಂ=ಅವರ, ಜ್ಞಾನಂ ತು=ಅಪರೋಕ್ಷಜ್ಞಾನವೇ, ತತ್ ಪರಂ=ಆ ಪರಬ್ರಹ್ಮನನ್ನು, ಆದಿತ್ಯವತ್=ಸೂರ್ಯನಂತೆ, ಪ್ರಕಾಶಯತಿ=ಪ್ರಕಾಶಗೊಳಿಸುತ್ತದೆ || ೧೬ ||

ಟೀ—ಹಾಗಾದರೆ—ಜ್ಞಾನವು ಅಜ್ಞಾನವನ್ನು ನಾಶಗೊಳಿಸುತ್ತದೆ ವಸ್ತುವನ್ನು ಪ್ರಕಾಶಪಡಿಸುತ್ತದೆಂದು ಪ್ರಸಿದ್ಧವೇ. ಆದಕಾರಣ ಅದನ್ನು ಏಕೆ ಹೇಳುವುದೆಂದರೆ—

**ಭಾ || ಜ್ಞಾನಮೇವಾಜ್ಞಾನನಾಶಕಮಿತ್ಯಾಹ | ಜ್ಞಾನೇನೇತಿ | ಪ್ರಥಮಜ್ಞಾನಂ ಪರೋಕ್ಷಂ || ೧೬ ||**

ಅ || (ಅಜ್ಞಾನದಿಂದ ಜ್ಞಾನವು ಮುಚ್ಚಲ್ಪಟ್ಟಿದೆ ಎಂದು ಹೇಳಿದೆ. ಹೀಗಾದರೆ ಆವರಕವಾದ ಅಜ್ಞಾನಕ್ಕೆ ವಿನಾಶವಿಲ್ಲವೆಂದೇ ಆಗುವುದು. ಬ್ರಹ್ಮನು ಯಾವಾಗಲೂ ಪ್ರಕಾಶಿಸದೆ ಹೋದಾನು. ಅಂತೂ ಜ್ಞಾನಕ್ಕೆ ಪ್ರಯೋಜಕಗಳಾದ ಸನ್ನ್ಯಾಸಯೋಗಗಳಿಗೆ ವೈಯರ್ಥ್ಯವು, ಎಂದು ಆಶಂಕಿಸಿಕೊಂಡು) ಜ್ಞಾನವೇ ಅಜ್ಞಾನವನ್ನು ನಾಶಗೊಳಿಸುತ್ತದೆ ಆದಕಾರಣ ದೋಷವಿಲ್ಲವೆಂದು ಜ್ಞಾನೇನ ಎಂಬುವ ಶ್ಲೋಕದಿಂದ ಹೇಳುತ್ತಾರೆ (ಆದರೆ ಅಜ್ಞಾನದಿಂದ ಆವೃತವಾದ ಜ್ಞಾನವು ಬೇರೆ, ಅಜ್ಞಾನವನ್ನು ನಾಶಗೊಳಿಸುವ ಜ್ಞಾನವು ಬೇರೆ. ಆದಕಾರಣ ವಿರೋಧವಿಲ್ಲವೆನ್ನುತ್ತಾರೆ—) ಜೀವನಿಗಿದ್ದ ಈಶ್ವರಸ್ವರೂಪವಾದ ಜ್ಞಾನವು ಅವಿದ್ಯೆಯಿಂದ ಮುಚ್ಚಲ್ಪಟ್ಟಿದ್ದರೂ ಶಾಸ್ತ್ರಶ್ರವಣದಿಂದುಂಟಾಗತಕ್ಕ ಮನಃಪರಿಣಾಮರೂಪವಾದ ಶ್ರೀಹರಿವಿಷಯಕವಾದ ಪರೋಕ್ಷಜ್ಞಾನವು ಈಶ್ವರಾಪರೋಕ್ಷಜ್ಞಾನಕ್ಕೆ ಪ್ರತಿಬಂಧಕವಾದ ಜೀವಸ್ವರೂಪಕ್ಕೆ ಆವರಕವಾದ ಅಜ್ಞಾನವನ್ನು ನಾಶಗೊಳಿಸುತ್ತದೆ ಹೀಗೆಯೇ, ಶ್ರವಣದಿಂದ ಅಜ್ಞಾನವು ನಷ್ಟವಾಗಿ ಮನನದಿಂದ ಸಂಶಯ ವಿಪರ್ಯಯಗಳು ನಾಶವಾದ ಮೇಲೆ ಧ್ಯಾನದಿಂದ ಈಶ್ವರಪ್ರಕಾಶಕವಾದ ಅಪರೋಕ್ಷಜ್ಞಾನವು ಹುಟ್ಟುತ್ತದೆ ಇಲ್ಲಿ ಕೆಲವರು ಒಬ್ಬನೇ ಆದಿತ್ಯನು ಅಂಧಕಾರವನ್ನು ನಾಶಗೊಳಿಸುತ್ತಾನೆ, ಭೂಮಂಡಲವನ್ನು ಪ್ರಕಾಶಪಡಿಸುತ್ತಾನೆ, ಹಾಗೆಯೇ ಒಂದೇ ಜ್ಞಾನವು ಅಜ್ಞಾನವನ್ನು ಹೋಗಲಾಡಿಸುತ್ತದೆ. ಪರಬ್ರಹ್ಮನನ್ನು ಪ್ರಕಾಶಗೊಳಿಸುತ್ತದೆ, ಎಂದು ಕೆಲವರು ವ್ಯಾಖ್ಯಾನಮಾಡುತ್ತಾರೆ. ಅದು ಅಯುಕ್ತವೆನ್ನುತ್ತಾರೆ—) ಜ್ಞಾನೇನ ಎಂಬುವ ತೃತೀಯಾ ವಿಭಕ್ತಿಯಿಂದ ಹೇಳಲ್ಪಟ್ಟ ಜ್ಞಾನಪದದಿಂದ ಪರೋಕ್ಷಜ್ಞಾನವು ಆದಿತ್ಯವಜ್ಜ್ಞಾನಂ ಎಂಬುವಲ್ಲಿದ್ದ ಜ್ಞಾನಪದದಿಂದ ಅಪರೋಕ್ಷಜ್ಞಾನವು ಆದಕಾರಣ ಜ್ಞಾನಗಳು ಬೇರೆ ಬೇರೆ (ಏಕೆಂದರೆ (1) **ಶೃಣುಯಾದ್ಧ್ಯಾವದಜ್ಞಾನಂ ಮತಿರ್ಯಾವದಯುಕ್ತತಾ | ಧ್ಯಾನಂ ಚ ತಾವದೀಕ್ಷಾ ಸ್ಯಾತ್,**(2) **ಶ್ರುತ್ವಾ ಮತ್ವಾ ತಥಾ ಧ್ಯಾತ್ವಾ ತದಜ್ಞಾನವಿಪರ್ಯಯೌ | ಸಂಶಯಂ ಚ ಪರಾಣುದ್ಯ ಲಭತೇ ಬ್ರಹ್ಮದರ್ಶನಂ** ಇತ್ಯಾದಿಗಳಲ್ಲಿ ಅಜ್ಞಾನ ನಾಶಕವಾದ ಜ್ಞಾನವೂ ಬ್ರಹ್ಮಪ್ರಕಾಶಕವಾದ ಜ್ಞಾನವೂ ಬೇರೆ ಬೇರೆ ಎಂದು ಹೇಳಿದೆ.) || ೧೬ ||

**ಗೀ || ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ |**
**ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ || ೧೭ ||**

ಅ || ತದ್ಬುದ್ಧಯಃ=(ಒಂದು ಸಲ ಪರೋಕ್ಷಜ್ಞಾನವು ಬಂದರೆ ಸಾಕಾಗದು. ಮತ್ತೆ **ಆವೃತ್ತಿರಸಕೃದುಪದೇಶಾತ್** ಎಂದು ಹೇಳಿದ ಪ್ರಕಾರ, ಪುನಃ ಪುನಃ) ಆ ಶ್ರೀಹರಿಯಲ್ಲಿಯೇ ಮನಸ್ಸನ್ನು ಇಟ್ಟಿರುವ, ತದಾತ್ಮಾನಃ=ಆ ಶ್ರೀಹರಿಯೇ ಸ್ವಾಮಿಯಾಗಿವುಳ್ಳ, ತನ್ನಿಷ್ಠಾಃ=ಶ್ರೀಹರಿಯಲ್ಲಿಯೇ ಸರ್ವದಾ ಸ್ಥಿರವಾದ ಮನಸ್ಸನ್ನು ಇಟ್ಟಿರುವ, ತತ್ಪರಾಯಣಾಃ=ಶ್ರೀಹರಿಯೇ ಮುಖ್ಯವಾಗಿ ಆಶ್ರಯನೆಂದು ತಿಳಿದುಕೊಂಡಿರುವ, ಜ್ಞಾನಿಗಳು, ಜ್ಞಾನನಿರ್ಧೂತಕಲ್ಮಷಾಃ=ಶ್ರೀಹರಿಯ ಅಪರೋಕ್ಷಜ್ಞಾನದಿಂದ ಪಾಪವನ್ನು ಸಂಪೂರ್ಣ ಕಳೆದುಕೊಂಡವರಾಗಿ ಅಪುನರಾವೃತ್ತಿಂ=ಯಾವ ಲೋಕಕ್ಕೆ ಹೋದರೆ ಹಿಂತಿರುಗುವುದಿಲ್ಲವೋ ಅಂತಹ ವೈಕುಂಠ ಮೊದಲಾದ ಸ್ಥಾನಗಳಿಗೆ, ಗಚ್ಛಂತಿ=ಹೋಗುತ್ತಾರೆ || ೧೭ ||

**ಭಾ || ಅಪರೋಕ್ಷಜ್ಞಾನಾವ್ಯವಹಿತಸಾಧನಮಾಹ | ತದ್ಬುದ್ಧಯ ಇತಿ || ೧೭ ||**

ಅ || ಪರೋಕ್ಷಜ್ಞಾನವು ಅಪರೋಕ್ಷಜ್ಞಾನಕ್ಕೆ ಸಾಧನವು. ಆದರೆ ವ್ಯವಹಿತವಾಗಿ ಸಾಧನವು. ಶ್ರವಣಮನನಗಳು ಆದೊಡನೆಯೇ ಅಪರೋಕ್ಷಜ್ಞಾನವು ಹುಟ್ಟುವುದಿಲ್ಲ. ತದ್ಬುದ್ಧಯಃ ಎಂಬುದು ಅಪರೋಕ್ಷಜ್ಞಾನಕ್ಕೆ ಅವ್ಯವಹಿತ ಪೂರ್ವದಲ್ಲಿರುವ ಧ್ಯಾನರೂಪವಾದ ಸಾಧನವನ್ನು ಹೇಳುತ್ತದೆ. || ೧೭ ||

ಗೀ || ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ |
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ || ೧೮ ||

ಅ || ಪಂಡಿತಾಃ=ಪರೋಕ್ಷಜ್ಞಾನಿಗಳು. ವಿದ್ಯಾವಿನಯಸಂಪನ್ನೇ=ವಿದ್ಯೆಯಿಂದಲೂ ವಿನಯದಿಂದಲೂ ಕೂಡಿರುವ, ಬ್ರಾಹ್ಮಣೇ=ಬ್ರಾಹ್ಮಣನಲ್ಲಿಯೂ, ಗವಿ=ಗೋವಿನಲ್ಲಿಯೂ, ಹಸ್ತಿನಿ=ಆನೆಯಲ್ಲಿಯೂ, ಶುನಿ=ನಾಯಿಯಲ್ಲಿಯೂ, ಶ್ವಪಾಕೇ ಚ=ನಾಯಿಯನ್ನು ಬೇಯಿಸಿ ತಿನ್ನುವ ಚಂಡಾಲನಲ್ಲಿಯೂ (ಇಂತಹ ವಿಷಮಪ್ರಾಣಿಗಳಲ್ಲಿರತಕ್ಕ ಶ್ರೀಹರಿಯನ್ನು) ಸಮದರ್ಶಿನಃ=ನೀಚೋಚ್ಚಭಾವವಿಲ್ಲದೆ, ಸರ್ವಗುಣಪರಿಪೂರ್ಣನಾಗಿ ನಿರ್ದೋಷನಾಗಿದ್ದಾನೆಂದೂ, ಲಕ್ಷ್ಮೀಸಮೇತನಾಗಿಯೇ ಇದ್ದಾನೆಂದೂ ನೋಡುತ್ತಾರೆ (ತಿಳಿಯುತ್ತಾರೆ) || ೧೮ ||

ಪೀ—ವಿದ್ಯಾವಿನಯ ಇತ್ಯಾದಿಗಳಿಂದ ಪ್ರಕೃತಕ್ಕೆ ಉಪಯುಕ್ತವಾಗದೆ ಇದ್ದು ಅಯುಕ್ತವಾದುದನ್ನು ಏಕೆ ಹೇಳುವುದೆಂದರೆ—

ಭಾ || ಪರಮೇಶ್ವರಸ್ವರೂಪಾಣಾಂ ಸರ್ವತ್ರ ಸಾಮ್ಯದರ್ಶನಂ ಚಾಪರೋಕ್ಷಜ್ಞಾನಸಾಧನಮಿತ್ಯಾಶಯವಾನಾಹ | ವಿದ್ಯೇತಿ || ೧೮ ||

ಅ || ಬ್ರಾಹ್ಮಣಾದಿಗಳಲ್ಲಿರತಕ್ಕ ಭಗವದ್ರೂಪಗಳಿಗೆ ಗುಣಗಳಲ್ಲಿಯೂ ದೋಷಾಭಾವಗಳಲ್ಲಿಯೂ ತಾರತಮ್ಯವಿಲ್ಲವೆಂದು ತಿಳಿದುಕೊಳ್ಳುವುದೂ ಕೂಡ ಶ್ರೀಹರಿಯ ಅಪರೋಕ್ಷಜ್ಞಾನಕ್ಕೆ ಸಾಧನವು ಎಂದು ಅಭಿಪ್ರಾಯವುಳ್ಳವರಾಗಿ ವಿದ್ಯಾ ಎಂಬುವ ಶ್ಲೋಕದಿಂದ ಹೇಳುತ್ತಾರೆ || ೧೮ ||

ಪೀ—ಸಮದರ್ಶಿಯಾದವನನ್ನು ಸ್ತುತಿಸುತ್ತಾರೆ—

ಗೀ || ಇಹೈವ ತೈರ್ಜಿತಃ ಸ್ವರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ |
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ || ೧೯ ||

ಅ || ಯೇಷಾಂ=ಯಾವ ಜೀವರ, ಮನಃ=ಮನಸ್ಸು ಸಾಮ್ಯೇ=ವಿಷಮರಾದ ಬ್ರಾಹ್ಮಣಾದಿಗಳಲ್ಲಿರುವ ಭಗವದ್ರೂಪಗಳಿಗೆ ನೀಚೋಚ್ಚಭಾವವಿಲ್ಲ ಶ್ರೀಹರಿಯು ಸರ್ವಗುಣ ಪರಿಪೂರ್ಣನ ಎಂಬುವ ವಿಷಯದಲ್ಲಿಯೇ, ಸ್ಥಿತಂ=ಇರುತ್ತದೋ, (ಯಾರು ಶ್ರೀಹರಿಯು ಸರ್ವಗುಣಪೂರ್ಣನು ನಿರ್ದೋಷನು ಎಂದು ತಿಳಿಯುತ್ತಾರೋ) ತೈಃ=ಅಂತಹ ಜೀವರಿಂದ, ಇಹೈವ=ಇದೇ ಜನ್ಮದಲ್ಲಿಯೇ ಸರ್ಗಃ=ಜನನಮರಣಾದಿರೂಪ ಸಂಸಾರವು, ಜಿತಃ=ಜಯಿಸಲ್ಪಟ್ಟಿತು. (ಅಂದರೆ ಈ ಜನ್ಮದಲ್ಲಿಯೆ ಜನನಮರಣಾದಿರೂಪವಾದ ಸಂಸಾರವನ್ನು ಬಿಟ್ಟು ಮುಕ್ತರಾಗುತ್ತಾರೆ.) (ಸಮವಾದ ವಸ್ತುವು ಯಾವುದು ಯಾವುದರಿಂದ ಸಾಮ್ಯವು? ಎಂದರೆ—) ಸಮವಾದ ವಸ್ತುವು ಪರಬ್ರಹ್ಮನು ದೋಷಲೇಶವಿಲ್ಲದವನು (ಅಂದರೆ ವಿಷಮರಾದ ಬ್ರಾಹ್ಮಣಾದಿಗಳಿಗೆ ತಾರತಮ್ಯವಿದ್ದರೂ ಅವರಲ್ಲಿರತಕ್ಕ ಭಗವದ್ರೂಪಗಳಿಗೆ ತಾ

ತಮ್ಯವಿಲ್ಲ ಏಕೆಂದರೆ ಎಲ್ಲಾ ಭಗವದ್ರೂಪಗಳೂ ಗುಣಪರಿಪೂರ್ಣಗಳೂ ನಿರ್ದೋಷಗಳೂ ಆಗಿವೆ. ಆದ ಕಾರಣ ದೋಷಲೇಶಾತ್ಯಂತಾಭಾವದಿಂದ ಸಾಮ್ಯವು )ತಸ್ಮಾತ್=ನಿರ್ದೋಷನು ಗುಣಪರಿಪೂರ್ಣನು ತಾರ ತಮ್ಯವಿಲ್ಲದೆ ಬ್ರಹ್ಮಾದಿ ಎಲ್ಲಾ ವಸ್ತುಗಳಲ್ಲಿ ಇರುವವನು ಬ್ರಹ್ಮನಾದುದರಿಂದ, ತೇ=ಅಂತಹ ಸಮ ವಸ್ತುವನ್ನು ನೋಡುವವರು, ಬ್ರಹ್ಮಣಿ ಸ್ಥಿತಾಃ=ಪರಬ್ರಹ್ಮನಲ್ಲಿ ಮನಸ್ಸನ್ನು ಇಟ್ಟವರು. ಬ್ರಹ್ಮಜ್ಞಾನಿಗಳೇ ॥ ೧೯ ॥

ಭಾ ॥ ತದೇವ ಸ್ತೌತಿ । ಇಹೈವೇತಿ ॥ ೧೯ ॥

ಅ ॥ ಇಹೈವ ಎಂಬುವ ಶ್ಲೋಕದಿಂದ ಸಮದರ್ಶಿತ್ವವನ್ನೇ ಸ್ತುತಿಸುತ್ತಾರೆ, ॥ ೧೯ ॥

ಟೀ—ಜ್ಞಾನೇನ ಎಂಬುದರಿಂದ ಪ್ರಕೃತವಾದ ಜ್ಞಾನಕ್ಕೆ ಸಾಧನಾಂತರವನ್ನು ವಿದ್ಯಾ ಎಂಬುದ ರಿಂದ ಹೇಳುತ್ತಾರೆ ಅದರಲ್ಲಿ ಬ್ರಾಹ್ಮಣರು ಗೋವುಗಳು ಇತ್ಯಾದಿ ವಿಷಯದಲ್ಲಿ ಸಮಬುದ್ಧಿಯುಳ್ಳವ ರಾಗಬೇಕೆಂಬುವುದು ಹೇಳಕೂಡದು ಮತ್ತೆ ಬ್ರಾಹ್ಮಣಾದಿಗಳಲ್ಲಿರತಕ್ಕ ಪರಬ್ರಹ್ಮರೂಪಗಳಲ್ಲಿಯೇ ಸಮಬುದ್ಧಿಯುಳ್ಳವರಾಗಬೇಕು ಬ್ರಾಹ್ಮಣ ಗೋವು ಮೊದಲಾದುವು ವಿಷಮಗಳು (ತಾರತಮ್ಯ ವುಳ್ಳವುಗಳು) ಆಗಿವೆ ಆ ಬ್ರಾಹ್ಮಣಾದಿಗಳಲ್ಲಿರತಕ್ಕ ಪರಬ್ರಹ್ಮನ ರೂಪಗಳಲ್ಲಿ ತಾರತಮ್ಯವಿಲ್ಲ. ಇದ ಕ್ಕಿಂತ ವ್ಯತ್ಯಾಸವಾಗಿ ತಿಳಿದುಕೊಂಡರೆ ತತ್ವಜ್ಞಾನವು ಉಂಟಾಗಲಾರದು, ಎಂಬುವ ಅಭಿಪ್ರಾಯದಿಂದ ಜೀವರಿಗೆ ವೈಷಮ್ಯವಿದೆ, ಎಂಬುವಲ್ಲಿಯೂ ಅವರಲ್ಲಿರುವ ಪರಬ್ರಹ್ಮನಿಗೆ ನೀಚೋಚ್ಚಭಾವವಿಲ್ಲವೆಂಬು ವಲ್ಲಿಯೂ ಪ್ರಮಾಣವನ್ನು ಹೇಳುತ್ತಾರೆ—

ತಾ ॥ ವಿಷಮೇಷ್ವಪಿ ಜೀವೇಷು ಸಮೋ ವಿಷ್ಣುಃ ಸದೈವ ತು । ಯತ್ತೃಣಾದಿಗತಸ್ಯಾಪಿ
ಗುಣಾಃ ಪೂರ್ಣಾ ಹರೇಃ ಸದೇತಿ ಚ ॥ ೧೮,೧೯ ॥

ಅ ॥ ಬ್ರಾಹ್ಮಣ ಗೋವು ಆನೆ ಮೊದಲಾದ ಜೀವರಲ್ಲಿ ನೀಚೋಚ್ಚಭಾವವಿದ್ದರೂ ಅವರಲ್ಲಿರುವ ಶ್ರೀ ಪರಮಾತ್ಮನು ಯಾವಾಗಲೂ ನೀಚೋಚ್ಚಭಾವವಿಲ್ಲದವನು ಏಕೆಂದರೆ ತೃಣಜೀವ ಮೊದಲಾದವರಲ್ಲಿ ರುವ ಶ್ರೀವಿಷ್ಣುವಿನ ಗುಣಗಳೂ ಸದಾ ಪರಿಪೂರ್ಣಗಳೇ ಆಗಿವೆ ॥ ೧೮, ೧೯ ॥

ಟೀ—ತಿರುಗಿ ಸನ್ನ್ಯಾಸವನ್ನು ವಿವರಿಸುತ್ತಾರೆ—

ಗೀ ॥ ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ಪ್ರಾಪ್ಯ ಚಾಪ್ರಿಯಂ ।
ಸ್ಥಿರಬುದ್ಧಿರಸಮ್ಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥ ೨೦ ॥

ಅ ॥ ಬ್ರಹ್ಮವಿತ್=ಪರಬ್ರಹ್ಮನೇ ಸರ್ವಕರ್ತನು. ಸರ್ವಸ್ವತಂತ್ರನೆಂದು ತಿಳಿದ, ಬ್ರಹ್ಮಣಿ ಸ್ಥಿತಃ= ನಿರಂತರದಲ್ಲಿಯೂ ಪರಮಾತ್ಮನನ್ನು ಸ್ಮರಿಸುತ್ತಿರುವ ಯೋಗಿಯು, ಅಸಮ್ಮೂಢಃ=ಸುಖಸಾಧನ ದುಃಖ ಸಾಧನಗಳನ್ನು ಹೊಂದಿಸಲಿಕ್ಕೆ ಲೌಕಿಕ ಜನರೇ ಸ್ವತಂತ್ರರೆಂಬ ಭ್ರಮೆಯಿಲ್ಲದವನಾಗಿ, ಸ್ಥಿರಬುದ್ಧಿಃ= ದೃಢವಾದ ಬುದ್ಧಿಯುಳ್ಳವನಾಗಿ, ಪ್ರಿಯಂ=ಸುಖಕ್ಕೆ ಸಾಧನವಾದ ವಸ್ತುವನ್ನು, ಪ್ರಾಪ್ಯ=ಹೊಂದಿ, ನ ಪ್ರಹೃಷ್ಯೇತ್=ಹೆಚ್ಚು ಸಂತೋಷವನ್ನು ಹೊಂದಬಾರದು ಅಪ್ರಿಯಂಚ ಪ್ರಾಪ್ಯ=ದುಃಖಸಾಧನ ವಸ್ತುವನ್ನು ಹೊಂದಿ ನೋದ್ವಿಜೇತ್=ಕಳವಳ ಹೊಂದಬಾರದು (ಅಂದರೆ ದುಃಖಕಾರಣವು ಒದಗಿ ದಾಗ್ಯೂ ಮನಸ್ಸಿನಲ್ಲಿ ಅಧೈರ್ಯವನ್ನು ಹೊಂದಬಾರದು ) ॥ ೨೦ ॥

ಟೀ—(1) ಇಲ್ಲಿ ಅಧ್ಯಾಯವು ಸಮಾಪ್ತಿಯಾಗುವ ಪರ್ಯಂತ ಜ್ಞಾನಿಗಳಿಗೆ ಕರ್ಮವಿಲ್ಲವೆಂದು ಹೇಳುತ್ತದೆಂದು ಅದ್ವೈತಭಾಷ್ಯದಲ್ಲಿ ಹೇಳಿದೆ (2) ಜ್ಞಾನಸ್ವರೂಪವೂ ಜ್ಞಾನಸ್ವರೂಪಕ್ಕೆ ಸಹಕಾರಿಯಾದ ಸಾಧನವೂ ಹೇಳಲ್ಪಡುತ್ತದೆಂದು ಭಾಸ್ಕರಾಚಾರ್ಯರು ಹೇಳುತ್ತಾರೆ. ಇವೆರಡೂ ಅಯುಕ್ತವೆಂಬುವ ಅಭಿಪ್ರಾಯದಿಂದ ಹೇಳುತ್ತಾರೆ—

ಭಾ ॥ ಸನ್ನ್ಯಾಸಯೋಗಜ್ಞಾನಾನಿ ಮಿಲಿತ್ವಾ ಪ್ರಪಂಚಯತ್ಯಧ್ಯಾಯಶೇಷೇಣ ॥ ೨೦ ॥

ಅ ॥ ಸನ್ನ್ಯಾಸ, ಯೋಗ, ಜ್ಞಾನಗಳನ್ನು, ಅಲ್ಲಿ ಅಲ್ಲಿ ಬಂದ ಶಂಕೆಯನ್ನನುಸರಿಸಿಯೇ ಕೂಡಿಸಿ ಅಧ್ಯಾಯದ ಅವಶಿಷ್ಟಭಾಗದಿಂದ ವಿವರಿಸುತ್ತಾರೆ. ॥ ೨೦ ॥

ಟೀ ಸನ್ನ್ಯಾಸಕ್ಕಿಂತ ಯೋಗವು ಶ್ರೇಷ್ಠವೆಂಬುವುದನ್ನು ತಿರುಗಿ ಹೇಳುತ್ತಾರೆ—

ಗೀ ॥ ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಂ ।
ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ ॥ ೨೧ ॥

ಅ ॥ ಬಾಹ್ಯಸ್ಪರ್ಶೇಷು=ಶ್ರೋತ್ರ ಮೊದಲಾದ ಇಂದ್ರಿಯಗಳಿಗೆ ಗೋಚರಗಳಾಗದಿರುವ ಶಬ್ದ ಸ್ಪರ್ಶ ಮೊದಲಾದ ವಿಷಯಗಳಲ್ಲಿ, ಅಸಕ್ತಾತ್ಮಾ=ಮನಸ್ಸನ್ನು ಇಡದಿರುವ ಸನ್ನ್ಯಾಸಿಯು, ಆತ್ಮನಿ=ತನ್ನಲ್ಲಿ, ಯತ್=ಯಾವ ಸುಖಂ=ಸ್ವರೂಪಸುಖವನ್ನು, ವಿಂದತಿ=ಅನುಭವಿಸುತ್ತಾನೋ, ಸಃ=ಆ ಸನ್ನ್ಯಾಸಿಯು, ಬ್ರಹ್ಮಯೋಗಯುಕ್ತಾತ್ಮಾ=ಪರಬ್ರಹ್ಮನ ಧ್ಯಾನದಿಂದೊಡಗೂಡಿದ ಮನಸ್ಸುಳ್ಳವನಾಗಿ, ಸುಖಂ=ಕಾಮಾದಿಗಳ ಉಪದ್ರವನಾಶರೂಪವಾದ ಸನ್ನ್ಯಾಸದಿಂದ ಅಭಿವ್ಯಕ್ತವಾಗುವ ಸ್ವರೂಪಸುಖವನ್ನು ಅಕ್ಷಯಂ=ಯಾವಕಾಲದಲ್ಲಿಯೂ ಮರಳಿ, ತಿರೋಭಾವವು ಇಲ್ಲದ ಹಾಗೆ, ವಿಂದತಿ=ಹೊಂದುತ್ತಾನೆ ಅಥವಾ ಸಂಸಾರದಲ್ಲಿಯೂ ಶ್ರೀಭಗವಂತನ ಸ್ಮರಣರೂಪವಾದ ಅಲ್ಪ ಯೋಗದಿಂದೊಡಗೂಡಿದ ಸನ್ನ್ಯಾಸಿಯು ಸುಖವನ್ನು ಹೊಂದುತ್ತಾನೆಂದಾಗುವಾಗ ಧ್ಯಾನಮೊದಲಾದ ಮಹಾ ಯೋಗಾದಿಗಳಿಂದೊಡಗೂಡಿದವನು ಮೋಕ್ಷಾದಿಗಳನ್ನು ಹೊಂದುತ್ತಾನೆಂಬುದು ಸುತರಾಂ ಸಿದ್ಧವು ॥ ೨೧ ॥

ಟೀ—ಪೂರ್ವದಲ್ಲಿ ಪ್ರಸ್ತುತನಾದ ಸನ್ನ್ಯಾಸಿಗೇನೇ ಅಕ್ಷಯ್ಯವಾದ ಸುಖವು ಸಿಗುತ್ತದೆ, ಎಂಬ ಪರವ್ಯಾಖ್ಯಾನವು ಅಯುಕ್ತವೆನ್ನುತ್ತಾರೆ—

ಭಾ ॥ (೧) ಪುನರ್ಯೋಗಸ್ಯಾಧಿಕ್ಯಂ ಸ್ಪಷ್ಟಯತಿ । ಬಾಹ್ಯಸ್ಪರ್ಶೇಷ್ವಿತಿ ॥ (೨) ಕಾಮರಹಿತಃ ಆತ್ಮನಿ ಯತ್ಸುಖಂ ವಿಂದತಿ ಸ ಏವ ಬ್ರಹ್ಮಯೋಗಯುಕ್ತಾತ್ಮಾ ಚೇತ್ತದೇವಾಕ್ಷಯಂ ಸುಖಂ ವಿಂದತಿ ॥ (೩) ಬ್ರಹ್ಮವಿಷಯೋ ಯೋಗೋ ಬ್ರಹ್ಮಯೋಗಃ । ಧ್ಯಾನಾದಿಯುಕ್ತಸ್ಯೈವಾತ್ಮಸುಖಮಕ್ಷಯಮನ್ಯಥಾ ನೇತ್ಯರ್ಥಃ ॥ ೨೧ ॥

ಅ ॥ (೧) ಸನ್ನ್ಯಾಸಸ್ತು ಇತ್ಯಾದಿಗಳಿಂದ ಮೊದಲು ಹೇಳಿದ್ದರಿಂದ ಮರಳಿ ಸನ್ನ್ಯಾಸಕ್ಕಿಂತ ಯೋಗವು ಶ್ರೇಷ್ಠವೆಂಬುವುದನ್ನು ಬಾಹ್ಯಸ್ಪರ್ಶೇಷು ಇತ್ಯಾದಿಗಳಿಂದ ಸ್ಪಷ್ಟೀಕರಿಸುತ್ತಾರೆ. (೨) (ಮೊದಲು ಯೋಗವಿಲ್ಲವಾದರೆ ಸನ್ನ್ಯಾಸವು ವ್ಯರ್ಥವೆಂದು ಹೇಳಿದೆ ಅದು ಅಯುಕ್ತವು. ಕಾಮಾದ್ಯುಪದ್ರವವು ನಾಶವಾದರೆ ಸ್ವರೂಪಸುಖವು ಅಭಿವ್ಯಕ್ತವಾಗುತ್ತದೆಂಬ ಆಶಂಕೆಯನ್ನು ನಿರಾಕರಿಸುವುದರಿಂದ

ಸ್ಪಷ್ಟೀಕರಿಸಿದಹಾಗಾಯಿತು. ಇದು ಇಲ್ಲಿ ತೋರುವುದಿಲ್ಲವೆಂದರೆ-) ಕಾಮವಿಲ್ಲದಿರುವ ತನ್ನ ಸ್ವರೂಪದಲ್ಲಿ ಯಾವನು ಸುಖವನ್ನು ಅನುಭವಿಸುತ್ತಾನೋ, ಸ ಏವ= ಕಾಮವಿಲ್ಲದವನೇ, ಬ್ರಹ್ಮಯೋಗದಿಂದ ಕೂಡಿದ ಮನಸ್ಸುಳ್ಳವನಾದರೆ, ತದೇವ= ಆತ್ಮಸುಖವನ್ನೇ ಅಕ್ಷಯವಾಗುವಂತೆ (ಪುನಃ ತಿರೋಭಾವವು ಇಲ್ಲದಹಾಗೆ) ಅನುಭವಿಸುತ್ತಾನೆ. (೩) ಪರಬ್ರಹ್ಮ ವಿಷಯಕವಾದ ಧ್ಯಾನವು ಬ್ರಹ್ಮಯೋಗವು. ಧ್ಯಾನಾದಿಗಳನ್ನು ಮಾಡುವವನಿಗೇನೇ ಅಪರೋಕ್ಷಜ್ಞಾನ ಉಂಟಾಗಿ ಸ್ವರೂಪಸುಖವು ತಿರೋಭಾವವು ಆಗದಹಾಗೆ ಅನುಭೂತವಾಗುತ್ತದೆ. ಕೇವಲ ಸನ್ನ್ಯಾಸದಿಂದ ತಿರೋಭಾವದಿಂದ ಕೂಡಿದ ಸುಖವು ಬರುವ ಪ್ರಯುಕ್ತ ಅದು ಅಲ್ಪವಾದ ಕಾರಣ ಫಲವೆಂದೆನ್ನಿಸಿಕೊಳ್ಳುವುದಿಲ್ಲ. ॥ ೨೧ ॥

ಪೀ—ಯೋಗರೂಪ ಸನ್ನ್ಯಾಸದಿಂದ ಮೋಕ್ಷವಾಗುತ್ತದೆಂದು ಹೇಳಿದ್ದನ್ನು ಬಾಹ್ಯಸ್ಪರ್ಶೇಷು ಎನ್ನುವುದರಿಂದ ಉಪಪಾದಿಸುತ್ತಾರೆ. ಆ ಶ್ಲೋಕದ ಅರ್ಥವನ್ನು ಹೇಳುತ್ತಾರೆ—

**ತಾ ॥ ಇದಾನೀಮಪಿ ಪರಮಾತ್ಮನಿ ಸ್ಮೃತಮಾತ್ರೇ ಸುಖಂ ವಿಂದತೀತಿ ಯತ್ತದಾ ಸ ಏವ ಸಮ್ಯಗ್ಯುಕ್ತಃ ಕಿಮು ॥ ೨೦, ೨೧ ॥**

ಅ ॥ ಸಂಸಾರದಲ್ಲಿಯೂ ಶ್ರೀಹರಿಯನ್ನು ಸ್ಮರಣಮಾತ್ರ ಮಾಡಿದರೆ (ಅಂದರೆ ಶ್ರೀಹರಿಯ ಸ್ಮರಣಾದಿರೂಪವಾದ ಅಲ್ಪಯೋಗದಿಂದ ಕೂಡಿದ ಸನ್ನ್ಯಾಸಿಯೂ) ಸುಖವನ್ನು ಹೊಂದುತ್ತಾನೆಂದಾಗುವಾಗ ಆ ಸನ್ನ್ಯಾಸಿಯೇ ಧ್ಯಾನ ಮೊದಲಾದ ಮಹಾಯೋಗಗಳಿಂದ ಯುಕ್ತನಾದರೆ ಮೋಕ್ಷ ಮೊದಲಾದ ಶ್ರೇಯಸ್ಸನ್ನು ಹೊಂದುತ್ತಾನೆಂದು ಏನು ಹೇಳಬೇಕು (ನಿಶ್ಚಯವಾಗಿಯೂ ಹೊಂದುತ್ತಾನೆ) ॥ ೨೧ ॥

ಪೀ—ಕಾಮಾದಿಗಳ ಪರಿತ್ಯಾಗರೂಪವಾದ ಸನ್ನ್ಯಾಸವನ್ನು ಅವಶ್ಯವಾಗಿ ಹೊಂದುವುದಕ್ಕಾಗಿ ಸ್ವೇಚ್ಛಾನುಸಾರ ಮಾಡತಕ್ಕ ಭೋಗವನ್ನು ನಿಂದಿಸುತ್ತಾರೆ—

**ಗೀ ॥ ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।**
**ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥ ೨೨ ॥**

ಅ ॥ ಕೌಂತೇಯ= ಕುಂತೀಪುತ್ರನಾದ ಅರ್ಜುನನೇ, ಯೇ ಹಿ=ಯಾವವು, ಸಂಸ್ಪರ್ಶಜಾಃ= ವಿಷಯಸಂಬಂಧಗಳಿಂದ ಸಿಗುವ, ಭೋಗಾಃ=ಸುಖಾನುಭವಗಳೋ, ತೇ=ಅವುಗಳು, ಆದ್ಯಂತವಂತಃ=ಉತ್ಪತ್ತಿವಿನಾಶವುಳ್ಳವುಗಳಾದುದರಿಂದ, ದುಃಖಯೋನಯ ಏವ=ದುಃಖಕ್ಕೆ ಕಾರಣಗಳೇ ಆಗುತ್ತವೆ (ಆದಕಾರಣ) ಬುಧಃ=ಜ್ಞಾನಿಯು, ತೇಷು=ಆ ವಿಷಯಭೋಗಗಳಲ್ಲಿ, ನ ರಮತೇ=ಆಸಕ್ತಿಯನ್ನು ಮಾಡುವುದಿಲ್ಲ (ಆ ವಿಷಯಭೋಗಗಳನ್ನು ಇಚ್ಛಿಸುವುದಿಲ್ಲ) ॥ ೨೨ ॥

**ಭಾ ॥ ಸನ್ನ್ಯಾಸಾರ್ಥಂ ಕಾಮಭೋಗಂ ನಿಂದಯತಿ । ಯೇ ಹೀತಿ ॥ ೨೨ ॥**

ಅ ॥ ಕಾಮಾದಿಗಳ ಪರಿತ್ಯಾಗರೂಪವಾದ ಸನ್ನ್ಯಾಸಕ್ಕಾಗಿ ಯೇ ಹಿ ಎಂಬುವ ಶ್ಲೋಕದಿಂದ ಸ್ವೇಚ್ಛಾನುಸಾರ ವಿಷಯಭೋಗವನ್ನು ನಿಂದಿಸುತ್ತಾರೆ ॥ ೨೨ ॥

ಪೀ—ಹಿಂದೆ ಹೇಳಿದ ಸನ್ನ್ಯಾಸಕ್ಕಾಗಿ ವಿಷಯಭೋಗಪರಿತ್ಯಾಗವು ಪ್ರಶಸ್ತವೆನ್ನುತ್ತಾರೆ—

ಗೀ || ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್ |
ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ || ೨೩ ||

ಅ || ಯಃ=ಯಾವಾತನು, ಇಹೈವ=ಮನುಷ್ಯ ಶರೀರದಲ್ಲಿಯೇ, ಶರೀರವಿಮೋಕ್ಷಣಾತ್=ದೇಹ ಪರಿತ್ಯಾಗಕ್ಕಿಂತ, ಪ್ರಾಕ್=ಮೊದಲು, ಕಾಮಕ್ರೋಧೋದ್ಭವಂ=ಕಾಮ ಕ್ರೋಧಗಳಿಂದುಂಟಾಗತಕ್ಕ, ವೇಗಂ=ಮನಸ್ಸಿನ ಚಾಂಚಲ್ಯವನ್ನು, ಸೋಢುಂ=ಸಹಿಸುವುದಕ್ಕಾಗಿ ಶಕ್ನೋತಿ=ಸಮರ್ಥನಾಗುತ್ತಾನೋ, ಸ ನರಃ=ಆ ಮನುಷ್ಯನು, ಯುಕ್ತಃ=ಜ್ಞಾನೋಪಾಯವುಳ್ಳವನು ಸುಖೀ ಚ=ಸುಖವುಳ್ಳವನೂ ಆಗುತ್ತಾನೆ (ಮನುಷ್ಯದೇಹದಲ್ಲಿಯೇ ಕಾಮಾದಿಗಳಿಂದುಂಟಾಗತಕ್ಕ ವೇಗವನ್ನು ಸಹಿಸಿಕೊಳ್ಳುವುದಕ್ಕೆ ಸಾಧ್ಯವು ಬೇರೆ ಶರೀರದಲ್ಲಿ ಅಸಾಧ್ಯವೆಂದು ತಿಳಿಸುವುದಕ್ಕಾಗಿ ಇಹೈವ ಎಂದು ಹೇಳಿರುವರು ಆದಕಾರಣ ಮನುಷ್ಯ ಶರೀರದಲ್ಲಿಯೇ ಕಾಮಾದಿಗಳನ್ನು ಪರಿತ್ಯಾಗಮಾಡಲಿಕ್ಕೆ ಪ್ರಯತ್ನಿಸಬೇಕು) || ೨೩ ||

ಭಾ || (೧) ತತ್ಪರಿತ್ಯಾಗಂ ಪ್ರಶಂಸತಿ | ಶಕ್ನೋತೀತಿ | ಕಾಮಕ್ರೋಧೋದ್ಭವಂ ವೇಗಂ ಸೋಢುಂ ಶಕ್ನೋತಿ | ಶರೀರವಿಮೋಕ್ಷಣಾತ್ಪ್ರಾಕ್ || (೨) ಪ್ರಾಗ್ಯಥಾ ಮನುಷ್ಯಶರೀರೇ ಸೋಢುಂ ಸುಶಕಂ ತಥಾ ನಾನ್ಯತ್ರೇತಿ ಭಾವಃ | ಬ್ರಹ್ಮಲೋಕಾದಿಸ್ತು ಜಿತಕಾಮಾನಾಮೇವ ಭವತಿ . || ೨೩ ||

ಅ || (೧) ಹಿಂದೆ ಹೇಳಿದ ಸನ್ಯಾಸಕ್ಕಾಗಿ ಸ್ತ್ರೀಚಾಪಲ ಸಾರ ವಿಷಯಭೋಗಗಳ ಪರಿತ್ಯಾಗವನ್ನು ಶಕ್ನೋತಿ ಎಂಬುವ ಶ್ಲೋಕದಿಂದ ಸ್ತುತಿಸುತ್ತಾರೆ ಈ ಲೋಕದಲ್ಲಿಯೇ ಶರೀರವನ್ನು ಬಿಡುವುದಕ್ಕಿಂತ ಮೊದಲು ಕಾಮ ಕ್ರೋಧಗಳಿಂದ ಹುಟ್ಟಿದ ವೇಗ (ಮನಸ್ಸು ಒಂದೆಡೆ ನಿಲ್ಲದಿರುವಿಕೆ, ಅಂದರೆ ಮನಸ್ಸಿನ ಚಪಲತೆ)ವನ್ನು ಸಹಿಸಲಿಕ್ಕೆ ಶಕ್ತನಾಗುತ್ತಾನೆ (೨) ಭೂಲೋಕದಲ್ಲಿಯೇ ಮನುಷ್ಯ ಶರೀರದಲ್ಲಿ ಸಹಿಸಲಿಕ್ಕೆ ಹೇಗೆ ಶಕ್ತನಾಗುತ್ತಾನೋ ಹಾಗೆ ಬೇರೆ ಯಾವ ಲೋಕದಲ್ಲಿಯೂ ಯಾವ ಪಶ್ವಾದಿಗಳ ಶರೀರದಲ್ಲಿ ಆಗಲೀ ಶಕ್ತನಾಗುವುದಿಲ್ಲವೆಂದಭಿಪ್ರಾಯವು ಆದಕಾರಣ ಮನುಷ್ಯ ಶರೀರದಲ್ಲಿಯೇ ಕಾಮ ಕ್ರೋಧಗಳ ವೇಗವನ್ನು ಸಹನಮಾಡಿಕೊಳ್ಳಲಿಕ್ಕೆ ಪ್ರಯತ್ನಿಸಬೇಕು ವಿಷಯಾಭಿಲಾಷೆಯನ್ನು ಸಂಪೂರ್ಣ ಬಿಟ್ಟವರಿಗೇನೇ ಬ್ರಹ್ಮಲೋಕ ಮೊದಲಾದ ಲೋಕಪ್ರಾಪ್ತಿಯು ಆಗುತ್ತದೆ || ೨೩ ||

ಪೀ—ಮೇಲಿನ ಶ್ಲೋಕಗಳಿಂದ ಜ್ಞಾನಿಗಳ ಲಕ್ಷಣವನ್ನು ವಿವರಿಸುತ್ತಾರೆ

ಗೀ || ಯೋಽನ್ತಸ್ಸುಖೋಽನ್ತರಾರಾಮಸ್ತಥಾಽನ್ತರ್ಜ್ಯೋತಿರೇವ ಯಃ |
ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ || ೨೪ ||

ಅ || ಅಂತರ್ಜ್ಯೋತಿಃ=ಹೃದಯದೊಳಗೆ ಭಗವತ್ಸ್ವರೂಪಾಭಿವ್ಯಕ್ತಿವುಳ್ಳವನಾದುದರಿಂದ, ಯಃ=ಯಾವಾತನು, ಅಂತಸ್ಸುಖಃ=ಕಾಮಾದ್ಯುಪದ್ರವಗಳ ನಾಶದಿಂದ ಅಭಿವ್ಯಕ್ತವಾದ ಸ್ವರೂಪಸುಖವುಳ್ಳವನೋ, ತಥಾ=ಹಾಗೆಯೇ, ಯಃ=ಯಾವಾತನು, ಅಂತರಾರಾಮಃ=ಭಗವದ್ದರ್ಶನದಿಂದ ಸುಖವನ್ನು ಹೊಂದಿರುತ್ತಾನೋ, ಸಃ ಯೋಗೀ=ಅಂತಹ ಯೋಗಿಯು, ಬ್ರಹ್ಮಭೂತಃ=ಪರಬ್ರಹ್ಮನಲ್ಲಿ ಮನಸ್ಸನ್ನು ಸ್ಥಿರವಾಗಿ ಇಟ್ಟವನಾಗಿ, ನಿರ್ವಾಣಂ=ಪ್ರಾಕೃತ ಶರೀರವಿಲ್ಲದಿರುವ, ಬ್ರಹ್ಮ=ಪರಬ್ರಹ್ಮನನ್ನು, ಅಧಿಗಚ್ಛತಿ=ಹೊಂದುತ್ತಾನೆ (ಮೋಕ್ಷವನ್ನು ಹೊಂದುತ್ತಾನೆ.) || ೨೪ ||

ಪೀ—ಯೋಗಿಗಳಿಗೆ ಬ್ರಹ್ಮಪ್ರಾಪ್ತಿಯಾಗುತ್ತದೆಂದು ಹೇಳಿದ್ದಾರೆ, ಪುನಃ ಹೇಳುವುದು ಏಕೆಂದರೆ-

ಭಾ ॥ (೧) ಜ್ಞಾನಿಲಕ್ಷಣಂ ಪ್ರಪಂಚಯತ್ಯುತ್ತರೈಃ ಶ್ಲೋಕೈಃ ॥(೨)(1)ಆರಾಮಃ ಪರದರ್ಶನಾದಿನಿಮಿತ್ತಂ ಸುಖಂ । ಅತ್ರ ತು ಪರಮಾತ್ಮದರ್ಶನಾದಿನಿಮಿತ್ತಂ ತತ್ ।(2)ಸುಖಂ ತೂಪದ್ರವಕ್ಷಯೇ ವ್ಯಕ್ತಂ । ಅತ್ರ ತು ಕಾಮಾದಿಕ್ಷಯೇ ವ್ಯಕ್ತಮಾತ್ಮಸುಖಂ ॥ (೩) ಸ್ವಯಂ ಜ್ಯೋತಿಷ್ಟ್ವಾದ್ಭಗವತಸ್ತದ್ವ್ಯಕ್ತೇರಂತರ್ಜ್ಯೋತಿಃ । ಸರ್ವೇಷಾಮಂತರ್ಜ್ಯೋತಿಷ್ಟ್ವೇಽಪಿ ವ್ಯಕ್ತೇರ್ವಿಶೇಷಃ ॥ (೪) ಅಸಂಪ್ರಜ್ಞಾತಸಮಾಧೀನಾಂ ಬಾಹ್ಯಾದರ್ಶನಾತ್ । ದರ್ಶನೇಽಪ್ಯಕಿಂಚಿತ್ಕರಾದೇವಶಬ್ದಃ ॥ (೫) ಉಕ್ತಂ ಚೈತತ್ । ದರ್ಶನಸ್ಪರ್ಶನಸಂಭಾಷಾದ್ಯತ್ಸುಖಂ ಜಾಯತೇ ನೃಣಾಂ । ಆರಾಮಸ್ಸತು ವಿಜ್ಞೇಯಃ ಸುಖಂ ಕಾಮಕ್ಷಯೋದಿತಮಿತಿ ನಾರದೀಯೇ ॥ (೬) ಸ್ವಜ್ಯೋತಿಷ್ಟ್ವಾನ್ಮಹಾವಿಷ್ಣೋರಂತರ್ಜ್ಯೋತಿಸ್ತು ತತ್ಸ್ಥಿತ ಇತಿ ಚ । ಅಂತಸ್ಸುಖತ್ವಾದೇಃ ಕಾರಣಮಾಹ । ಬ್ರಹ್ಮಣಿ ಭೂತ ಇತಿ ॥ ೨೪ ॥

ಅ ॥ (೧) (ಪ್ರಜಹಾತಿ ಯದಾ ಕಾಮಾನ್ ಇತ್ಯಾದಿಗಳಿಂದ ಜ್ಞಾನಿಗಳ ಲಕ್ಷಣವನ್ನು ಹೇಳಿರುವುದರಿಂದ ತಿರುಗಿ) ಇನ್ನು ಮುಂದಿನ ಶ್ಲೋಕಗಳಿಂದ ಜ್ಞಾನಿಗಳ ಲಕ್ಷಣವನ್ನು ವಿವರಿಸುತ್ತಾರೆ. (ಹೇಗೆ ಯೋಗವು ಶ್ರೇಷ್ಠವೆಂದು ಹೇಳುವಾಗ ಯೋಗವನ್ನು ನಿರೂಪಿಸಿದಂತೆಯೇ ಆಗುವುದೋ ಸನ್ಯಾಸಕ್ಕಾಗಿ ನಿಂದಾ ಸ್ತೋತ್ರಗಳನ್ನು ಮಾಡಿದರೆ ಸನ್ಯಾಸವನ್ನು ನಿರೂಪಿಸಿದಂತೆಯೇ ಆಗುವುದೋ, ಹಾಗೆಯೇ ಜ್ಞಾನಿಗಳ ಲಕ್ಷಣವನ್ನು ಹೇಳುವಾಗ ಜ್ಞಾನವನ್ನು ನಿರೂಪಿಸಿದಂತೆಯೇ ಆಯಿತು ) (೨) (1) ಆರಾಮಃ= ಇತರರನ್ನು ನೋಡುವುದು, ಮುಟ್ಟುವುದು, ಇತ್ಯಾದಿಗಳಿಂದುಂಟಾದ ಸುಖವು ಇಲ್ಲಿ ಪರಮಾತ್ಮನ ದರ್ಶನಾದಿಗಳಿಂದುಂಟಾದ ಸುಖವು (2) ಸುಖಂ=ಉಪದ್ರವಗಳು ನಾಶವಾದ ಮೇಲೆ ಅಭಿವ್ಯಕ್ತವಾಗುವಸುಖವು. ಇಲ್ಲಿಯಾದರೂ ಕಾಮ ಮೊದಲಾದ ಉಪದ್ರವಗಳು ನಾಶವಾದ ಮೇಲೆ ಅಭಿವ್ಯಕ್ತವಾಗುವ ಜ್ಞಾನಿಯ ಸ್ವರೂಪಸುಖವು, (೩) (ಜ್ಯೋತಿಃಶಬ್ದದ ಅರ್ಥ ಹೇಳುತ್ತಾರೆ-) ಶ್ರೀಹರಿಯು ತಾನು ಪರಾಪೇಕ್ಷೆಯಿಲ್ಲದಿರುವ ಪ್ರಕಾಶಸ್ವರೂಪನಾದುದರಿಂದ ಜ್ಯೋತಿಃ ಎನಿಸಿಕೊಳ್ಳುತ್ತಾನೆ ಅಂತಹ ಜ್ಯೋತಿ ರೂಪನಾದ ಶ್ರೀಹರಿಯನ್ನು ಹೃದಯದೊಳಗೆ ಜೀವನು ತಿಳಿದುಕೊಳ್ಳುವುದರಿಂದ ಅಂತರ್ಜ್ಯೋತಿಃ ಎನಿಸುತ್ತಾನೆ. ಶ್ರೀಹರಿಯು ಎಲ್ಲರ ಹೃದಯದೊಳಗೆ ಪ್ರಕಾಶಸ್ವರೂಪನಾಗಿದ್ದಾಗ್ಯೂ ಜ್ಞಾನಿಗಳಿಗೆ ಮಾತ್ರ ಹೃದಯದಲ್ಲಿ ಅಭಿವ್ಯಕ್ತನಾಗುವುದರಿಂದ ವಿಶೇಷವು ಅಂದರೆ ಜ್ಞಾನಿಯು ಅಂತರ್ಜ್ಯೋತಿಃ ಎನಿಸುತ್ತಾನೆ (೪) ಅಸಂಪ್ರಜ್ಞಾತ ಸಮಾಧಿಯುಳ್ಳವರಿಗೆ ಶ್ರೀಹರಿಯು ಹೊರತು ಬೇರೆ ಯಾವ ವಸ್ತುಗಳ ಜ್ಞಾನವೇ ಇರುವುದಿಲ್ಲ. ಅವರಿಗೇನೇ ಅಸಂಪ್ರಜ್ಞಾತಸಮಾಧ್ಯವಸ್ಥೆಗಿಂತ ಬೇರೆ ಅವಸ್ಥೆಯಲ್ಲಿ ಬೇರೆ ವಸ್ತುಗಳ ಜ್ಞಾನವು ಬಂದರೂ ಆ ಜ್ಞಾನವು ಮನಸ್ಸಿಗೆ ಕಳವಳವನ್ನು ಹುಟ್ಟಿಸುವುದಿಲ್ಲ ಈ ಅಭಿಪ್ರಾಯದಿಂದಲೇ **ಅಂತರ್ಜ್ಯೋತಿರೇವ** ಎಂಬುವಲ್ಲಿ ಏವ ಶಬ್ದವು (೫) (ಆರಾಮ ಸುಖ ಶಬ್ದಗಳಿಗೆ ಹಿಂದೆ ಹೇಳಿದ ಅರ್ಥವನ್ನು ಪ್ರಮಾಣದಿಂದ ದೃಢೀಕರಿಸುತ್ತಾರೆ-) ನೋಡುವುದು ಮುಟ್ಟುವುದು ಮಾತನಾಡುವುದು, ಇತ್ಯಾದಿಗಳಿಂದ ಮನುಷ್ಯರಿಗೆ ಯಾವ ಸುಖವು ಹುಟ್ಟುತ್ತದೋ. ಅಂತಹ ಸುಖವು ಆರಾಮವೆನಿಸುತ್ತದೆ. ಕಾಮಾದ್ಯುಪದ್ರವಗಳು ನಾಶವಾದಮೇಲೆ ಅಭಿವ್ಯಕ್ತವಾಗುವುದು ಸುಖವೆನಿಸುತ್ತದೆ ಎಂದು ನಾರದೀಯ ಪುರಾಣದಲ್ಲಿದೆ. (೬) (**ಅಂತರ್ಜ್ಯೋತಿಃ** ಎಂಬುದಕ್ಕೆ ಹಿಂದೆ ಹೇಳಿದ ಅರ್ಥದಲ್ಲಿ ಪ್ರಮಾಣ ಹೇಳುತ್ತಾರೆ-) ಸರ್ವೋತ್ತಮನಾದ ಶ್ರೀವಿಷ್ಣುವು ತಾನು ಪರಾಪೇಕ್ಷೆಯಿಲ್ಲದೆ ಪ್ರಕಾಶಸ್ವರೂಪನಾದುದ

ರಿಂದ ಜ್ಯೋತಿಃ ಎನಿಸುತ್ತಾನೆ ಆ ಶ್ರೀಹರಿಯಲ್ಲಿಯೇ ಸರ್ವದಾ ಮನಸ್ಸನ್ನು ಇಟ್ಟು ಆ ಶ್ರೀಹರಿಯನ್ನು ಸಾಕ್ಷಾತ್ಕರಿಸಿಕೊಂಡವನು **ಅಂತರ್ಜ್ಯೋತಿಃ** ಎನಿಸುತ್ತಾನೆ ಅಂತಃಸುಖತ್ವಾದಿಗಳಿಗೆ ಕಾರಣವನ್ನು ಹೇಳುತ್ತಾರೆ. **ಬ್ರಹ್ಮಣಿ ಭೂತಃ** ಶ್ರೀಹರಿಯಲ್ಲಿ ಸರ್ವದಾ ಮನಸ್ಸನ್ನು ಇಟ್ಟವನು. ॥ ೨೪ ॥

**ಟೀ – ಯೋಽಂತಸ್ಸುಖಃ** ಎನ್ನುವುದರಿಂದ ಜ್ಞಾನಿಗಳ ಲಕ್ಷಣವನ್ನು ಹೇಳುತ್ತಾರೆ. ಆ ಶ್ಲೋಕದಲ್ಲಿದ್ದ **ಬ್ರಹ್ಮಭೂತಃ** ಎಂಬುದಕ್ಕೆ ಬ್ರಹ್ಮನಿಂದ ಐಕ್ಯಹೊಂದಿದವನೆಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಆ ಪದದ ಅರ್ಥವನ್ನು ಹೇಳುತ್ತಾರೆ—

**ತಾ ॥ (೧)ಬ್ರಹ್ಮಣಿ ಭೂತಃ । ಅನ್ಯಥಾ ಪುನರ್ಬ್ರಹ್ಮ ಗಚ್ಛತೀತಿ ವಿರೋಧಾಚ್ಚ । (೨)ಅಂತಸ್ಸುಖಾದಿಕಂ ಚ ಬ್ರಹ್ಮದರ್ಶನಾತ್ ॥ ೨೪ ॥**

**ಅ ॥** (೧) ಪರಬ್ರಹ್ಮನಲ್ಲಿ ಮನಸ್ಸಿನಿಂದ ಇದ್ದವನು (ಅಂದರೆ ಪರಬ್ರಹ್ಮನಲ್ಲಿಯೇ ಪರಿಪೂರ್ಣ ಮನಸ್ಸನ್ನು ಇಟ್ಟವನು ) (ಜ್ಞಾನಿಗಳಿಗೂ ಪರಬ್ರಹ್ಮನಿಂದ ಭೇದವಿದೆ ಎಂದು **ಮಾ ಕರ್ಮಫಲಹೇತುರ್ಭೂಃ** ಇತ್ಯಾದಿಗಳಿಂದ ಗೀತೆಯಲ್ಲಿಯೇ ಸಾಧಿಸಿದುದರಿಂದ ಆಪಾತತಃ ತೋರುವ ಐಕ್ಯವೆಂಬುವ ಅರ್ಥವನ್ನು ಹೇಳಕೂಡದು ) (ದೋಷಾಂತರವನ್ನು ಹೇಳುತ್ತಾರೆ-) ಈ ಶ್ಲೋಕದಲ್ಲಿ ಜ್ಞಾನಿಗಳಿಗೆ ಬ್ರಹ್ಮೈಕ್ಯವನ್ನು ಹೇಳುವುದಾದರೆ **ಬ್ರಹ್ಮಾಧಿಗಚ್ಛತಿ**=ಬ್ರಹ್ಮನನ್ನು ಹೊಂದುತ್ತಾನೆಂದು ಹೇಳಿದ್ದು ವಿರುದ್ಧವಾಗುವುದು. ಯಾರೊಬ್ಬನೂ ತನ್ನನ್ನು ತಾನೇ ಹೊಂದುವುದಿಲ್ಲವಷ್ಟೆ (೨) (ಈ ಶ್ಲೋಕದಲ್ಲಿದ್ದ ಅಂತಸ್ಸುಖತ್ವಾದಿಗಳು ಜ್ಞಾನಿಗಳ ಲಕ್ಷಣವಾಗಲಿ ಅಂತರ್ಜ್ಯೋತಿಷ್ಟ್ವವು ಬ್ರಹ್ಮಜ್ಞಾನಿಗಳ ಲಕ್ಷಣವು ಹೇಗೆ ಆಗುವುದು? ಏಕೆಂದರೆ ಬ್ರಹ್ಮದರ್ಶಿತ್ವವೇ ಅಂತರ್ಜ್ಯೋತಿಷ್ಟ್ವವು. ಎಂದರೆ) (ಈ ಶ್ಲೋಕದಲ್ಲಿದ್ದ ಅಂತರ್ಜ್ಯೋತಿಷ್ಟ್ವವನ್ನು ಜ್ಞಾನಿಗಳ ಲಕ್ಷಣವೆಂದು ಹೇಳುವುದಿಲ್ಲ ಮತ್ತೆ ಅಂತಸ್ಸುಖತ್ವಾದಿಗಳೇ ಜ್ಞಾನಿಗಳ ಲಕ್ಷಣವು ಅಂತಸ್ಸುಖತ್ವಾದಿಗಳಿಗೆ ಅಂತರ್ಜ್ಯೋತಿಷ್ಟ್ವವು ಕಾರಣವು ಆದಕಾರಣ) ಪರಬ್ರಹ್ಮನ ಸಾಕ್ಷಾತ್ಕಾರದಿಂದ ಅಂತಸ್ಸುಖತ್ವಾದಿಗಳು ಉಂಟಾಗುತ್ತವೆ . ॥ ೨೪ ॥

**ಟೀ**—ಇಂತಹ ಬ್ರಹ್ಮಪ್ರಾಪ್ತಿಯು ಧ್ಯಾನಾದಿಗಳಿಂದ ಮಾತ್ರ ಬರುವುದಲ್ಲ ಮತ್ತೆ ಪಾಪಪರಿಹಾರದಿಂದಲೂ ಆಗುತ್ತದೆನ್ನುತ್ತಾರೆ—

**ಗೀ ॥ ಲಭಂತೇ ಬ್ರಹ್ಮ ನಿರ್ವಾಣಮೃಷಯಃ ಕ್ಷೀಣಕಲ್ಮಷಾಃ ।**
**ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ ॥ ೨೫ ॥**

**ಅ ॥** ಋಷಯಃ=ಜ್ಞಾನಿಗಳು, ಕ್ಷೀಣಕಲ್ಮಷಾಃ=ಪಾಪಗಳನ್ನು ಕಳೆದುಕೊಂಡವರು, ಛಿನ್ನದ್ವೈಧಾಽಽಯತಾತ್ಮಾನಃ=ಸಂಶಯ ವಿಪರ್ಯಯಗಳು ಇಲ್ಲದವರಾಗಿ ಶ್ರವಣಾದಿಗಳಿಂದ ಸಮಸ್ತ ತತ್ವಗಳನ್ನು ತಿಳಿದವರು ಅಥವಾ ಯತಾತ್ಮಾನಃ=ಮನಸ್ಸನ್ನು ತಮ್ಮ ಅಧೀನದಲ್ಲಿ ಇಟ್ಟುಕೊಂಡವರು, ಸರ್ವಭೂತಹಿತೇ ರತಾಃ=ಎಲ್ಲಾ ಪ್ರಾಣಿಗಳಿಗೂ ಹಿತವನ್ನು ಮಾಡುವುದರಲ್ಲಿಯೇ ಆಸಕ್ತರೂ ಆಗಿ, ನಿರ್ವಾಣಂ=ಪ್ರಾಕೃತ ಶರೀರವಿಲ್ಲದಿರುವ, ಬ್ರಹ್ಮ=ಪರಬ್ರಹ್ಮನನ್ನು , ಲಭಂತೇ=ಹೊಂದುತ್ತಾರೆ ॥ ೨೫ ॥

**ಟೀ**—ಮುಂದಿನ ಶ್ಲೋಕದಲ್ಲಿ ಮರಳಿ ಪರಬ್ರಹ್ಮಪ್ರಾಪ್ತಿಯನ್ನು ಏಕೆ ಹೇಳುವುದೆಂದರೆ—

**ಭಾ ॥ (೧) ಪಾಪಕ್ಷಯಾಚ್ಚೈತದ್ಭವತೀತ್ಯಾಹ । ಲಭಂತ ಇತಿ ॥ (೨) ಕ್ಷೀಣಕಲ್ಮಷಾ ಭೂತ್ವಾ ಛಿನ್ನದ್ವೈಧಾಃಽಯತಾತ್ಮಾನಃ । ದ್ವೇಧಾ ಭಾವೋ ದ್ವೈಧಂ ಸಂಶಯೋ**

**ವಿಪರ್ಯಯೋ ವಾ ॥ (೩) ತಚ್ಚೋಕ್ತಂ । ವಿಪರ್ಯಯಃ ಸಂಶಯೋ ವಾ ಯ-ದ್ದ್ವೈಧಂ ತ್ವಕೃತಾತ್ಮನಾಂ। ಜ್ಞಾನಾಸಿನಾ ತು ತಚ್ಛಿತ್ವಾ ಮುಕ್ತಸಂಗಃ ಪರಂ ವ್ರಜೇ-ದಿತಿ ॥ (೪) ಛಿನ್ನದ್ವೈಧಾಸ್ತ ಏವಾಽಽಯತಾತ್ಮಾನೋ ದೀರ್ಘಮನಸಃ ಸರ್ವಜ್ಞಾ ಇತ್ಯರ್ಥಃ ॥ (೫) ತತ ಏವ ಛಿನ್ನದ್ವೈಧಾಃ । ತಚ್ಚೋಕ್ತಂ। ಕ್ಷೀಣಪಾಪಾ ಮಹಾ-ಜ್ಞಾನಾ ಜಾಯಂತೇ ಗತಸಂಶಯಾ ಇತಿ। ಛಿನ್ನದ್ವೈಧಾಃ ಯತಾತ್ಮಾನ ಇತಿ ವಾ ೨೫**

ಅ ॥ (೧) ಪರಬ್ರಹ್ಮನಲ್ಲಿಯೇ ಸಂಪೂರ್ಣ ಮನಸ್ಸನ್ನು ಇಟ್ಟು ಪಾಪವನ್ನು ಕಳೆದುಕೊಂಡದ್ದರಿಂದಲೇ ಹಿಂದೆ ಹೇಳಿದ ಜ್ಞಾನವು ಹುಟ್ಟುತ್ತದೆಂದು **ಲಭಂತೇ** ಎಂಬುವ ಶ್ಲೋಕದಿಂದ ಹೇಳುತ್ತಾರೆ (೨) (ಈ ಮೂರು ಶ್ಲೋಕಗಳು ಜ್ಞಾನಿಗಳ ಲಕ್ಷಣವನ್ನು ವಿವರಿಸಲಿಕ್ಕೆ ಹೊರಟದ್ದೆಂಬುದು ಹೇಗೆ ಕೂಡುತ್ತದೆ? ಎಂದರೆ ಜ್ಞಾನಪ್ರತಿಬಂಧಕವಾದ ಪಾಪದ ಪರಿಹಾರ ರೂಪವಾದ ಅಸಾಧಾರಣ ಕಾರಣವು ಕಾರ್ಯವಾದ ಜ್ಞಾನಕ್ಕೆ ಲಕ್ಷಣವು ಆಗಿಯೂ ಆಗುತ್ತದೆ ಇಲ್ಲಿ ಕಾರ್ಯಕಾರಣಭಾವವು ತೋರುವುದಿಲ್ಲವೆಂದರೆ—) ಪಾಪರಹಿತರೂ ಛಿನ್ನದ್ವೈಧಾಽಽಯತಾತ್ಮರೂ ಆಗಿ (ಆ ಮೇಲೆ ಪರಬ್ರಹ್ಮನನ್ನು ಹೊಂದುತ್ತಾರೆ) ಎರಡರ ಭಾವವು ದ್ವೈಧವು ಸಂಶಯವು, ಅಥವಾ ವಿಪರ್ಯವು (೩) (ಇದೇ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ—) ಶುದ್ಧವಾದ ಅಂತಃಕರಣವಿಲ್ಲದವರಿಗೆ ಉಂಟಾಗುವ ಭ್ರಮೆಯು ಅಥವಾ ಸಂಶಯವು ದ್ವೈಧವೆನಿಸುತ್ತದೆ ಆ ಸಂಶಯ ವಿಪರ್ಯಯಗಳನ್ನು ಜ್ಞಾನವೆಂಬ ವ ಖಡ್ಗದಿಂದ ಛೇದಿಸಿಕೊಂಡು (ಕಳೆದುಕೊಂಡು) ವಿಷಯಾಭಿಲಾಷೆಯನ್ನು ಬಿಟ್ಟವನಾಗಿ ಸನ್ಯಾಸಾಶ್ರಮವನ್ನು ತೆಗೆದುಕೊಳ್ಳಬೇಕು ಎಂದು ಹೇಳಿದೆ (೪) ಸಂಶಯ ಭ್ರಮೆಗಳನ್ನು ಕಳೆದುಕೊಂಡವರೇ (ಆಯತ=) ದೀರ್ಘವಾದ ಮನಸ್ಸುಳ್ಳವರು. ಅಂದರೆ ಸರ್ವವನ್ನು ತಿಳಿದುಕೊಂಡವರು ಅಂದರೆ ಶಾಸ್ತ್ರ ಶ್ರವಣಾದಿಗಳಿಂದ ತಿಳಿಯಲು ಯೋಗ್ಯಗಳಾದ ಬಹುತತ್ವ ವಿಷಯಗಳನ್ನು ತಿಳಿದುಕೊಂಡವರು (೫) ಶಾಸ್ತ್ರಶ್ರವಣಾದಿಗಳಿಂದ ತತ್ವವನ್ನು ತಿಳಿದವರಾದುದರಿಂದಲೇ ಸಂಶಯ ಭ್ರಮೆಗಳು ಇಲ್ಲದವರಾಗಿರುತ್ತಾರೆ (ಇವುಗಳಿಗೆ ಕಾರ್ಯಕಾರಣಭಾವವಿದೆ, ಎಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ–) ಪಾಪಗಳನ್ನು ಕಳೆದುಕೊಂಡವರು ಮಹಾಜ್ಞಾನವುಳ್ಳವರಾಗುತ್ತಾರೆ ಜ್ಞಾನವುಳ್ಳವರು ಸಂಶಯ ಭ್ರಮೆಗಳು ಇಲ್ಲದವರಾಗುತ್ತಾರೆ, ಎಂದು ಹೇಳಿದೆ ಛಿನ್ನದ್ವೈಧಾಃ ಯತಾತ್ಮಾನಃ ಎಂದೂ ಪದಛೇದವು ಯತಾತ್ಮಾನಃ=ಮನಸ್ಸನ್ನು ವಶಪಡಿಸಿಕೊಂಡವರು ॥ ೨೫ ॥

**ಗೀ ॥ ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಂ ।**
**ಅಭಿತೋ ಬ್ರಹ್ಮ ನಿರ್ವಾಣಂ ವರ್ತತೇ ವಿದಿತಾತ್ಮನಾಂ ॥ ೨೬ ॥**

ಅ ॥ ಕಾಮಕ್ರೋಧವಿಯುಕ್ತಾನಾಂ=ಕಾಮ ಕ್ರೋಧಗಳನ್ನು ಬಿಟ್ಟಿರುವ, ಯತೀನಾಂ=ಪ್ರಯತ್ನವುಳ್ಳ, ಯತಚೇತಸಾಂ=ಮನಸ್ಸನ್ನು ವಶಪಡಿಸಿಕೊಂಡಿರುವ, ವಿದಿತಾತ್ಮನಾಂ=ಬ್ರಹ್ಮಜ್ಞಾನಿಗಳಿಗೆ, ನಿರ್ವಾಣಂ=ಪ್ರಾಕೃತಶರೀರವಿಲ್ಲದಿರುವ, ಬ್ರಹ್ಮ=ಪರಬ್ರಹ್ಮನು, ಅಭಿತಃ=ಎಲ್ಲಾ ದೇಶಗಳಲ್ಲಿಯೂ, ಎಲ್ಲಾ ಕಾಲಗಳಲ್ಲಿಯೂ, ವರ್ತತೇ=ರಕ್ಷಕನಾಗಿಯೂ ಜ್ಞಾನಕ್ಕೆ ವಿಷಯನಾಗಿಯೂ ಇರುತ್ತಾನೆ ॥ ೨೬ ॥

**ಪೀ—**ಯತಿಗಳಿಗೆ ಎಲ್ಲವೂ ಬ್ರಹ್ಮರೂಪವಾಗಿಯೇ ತೋರುತ್ತದೆಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ಭಾ ॥ ಸುಲಭಂ ಚ ತೇಷಾಂ ಬ್ರಹ್ಮೇತ್ಯಾಹ । ಕಾಮಕ್ರೋಧೇತಿ । ಅಭಿತಃ ಸರ್ವತಃ॥೨೬॥

ಅ ॥ ಜ್ಞಾನಿಗಳಿಗೆ ಪರಬ್ರಹ್ಮನು ಸುಖದಿಂದ ಹೊಂದಲು ಶಕ್ಯನೆಂದು ಕಾಮ ಕ್ರೋಧವೆಂಬುವ ಶ್ಲೋಕದಿಂದ ಹೇಳುತ್ತಾರೆ ಅಭಿತಃ=ಸರ್ವದೇಶಕಾಲಗಳಲ್ಲಿ (ಇದು ಬ್ರಹ್ಮನಿಗೆ ಸೌಲಭ್ಯವನ್ನು ಹೇಳುವ ಶಬ್ದವು.) ॥ ೨೬ ॥

ಗೀ ॥ ಸ್ಪರ್ಶಾನ್ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ ।
ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ॥ ೨೭ ॥

ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।
ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥ ೨೮ ॥

ಅ ॥ ಬಾಹ್ಯಾನ್=ಬಾಹ್ಯಗಳಾದ (ಅಂದರೆ ವಶಪಡಿಸಿಕೊಳ್ಳಲಿಕ್ಕೆ ಅಶಕ್ಯಗಳಾದ) ಸ್ಪರ್ಶಾನ್=ಶ್ರೋತ್ರಾದಿ ಇಂದ್ರಿಯಗಳಿಗೆ ವಿಷಯಗಳಾದ ಶಬ್ದಸ್ಪರ್ಶಾದಿಗಳನ್ನು, ಬಹಿಃ=ಶ್ರೋತ್ರಾದಿ ಇಂದ್ರಿಯಗಳಿಗೆ ಅಗೋಚರಗಳನ್ನಾಗಿ, ಕೃತ್ವಾ=ಮಾಡಿ (ಅಂದರೆ ಪ್ರತ್ಯಾಹಾರದಿಂದ ಇಂದ್ರಿಯಗಳನ್ನು ತನ್ನ ವಶಪಡಿಸಿಕೊಂಡು) ಭ್ರುವೋಃ=ಹುಬ್ಬುಗಳ, ಅಂತರೇ=ಮಧ್ಯಪ್ರದೇಶದಲ್ಲಿ, ಚಕ್ಷುಶ್ಚ=ಕಣ್ಣನ್ನು, ಕೃತ್ವಾ=ಮಾಡಿಕೊಂಡು (ದೃಷ್ಟಿಯನ್ನು ನಿಲ್ಲಿಸಿ) (ಹುಬ್ಬುಗಳ ಮಧ್ಯವನ್ನು ನೋಡಿಕೊಂಡು.) ಪ್ರಾಣಾಪಾನೌ=ಪ್ರಾಣ ಅಪಾನಾಖ್ಯ ವಾಯುಗಳನ್ನು, ಸಮೌ=ಸಮಾನಗಳನ್ನಾಗಿ, ನಿರ್ವಿಕಾರಗಳನ್ನಾಗಿ, ನಾಸಾಭ್ಯಂತರಚಾರಿಣೌ=ಮೂಗಿನ ಮಧ್ಯದಲ್ಲಿ ಸಂಚಾರಮಾಡುವವರನ್ನಾಗಿ, ಕೃತ್ವಾ=ಮಾಡಿ, (ಕುಂಭಕದಲ್ಲಿ ಇರಿಸಿ) ಯತೇಂದ್ರಿಯಮನೋಬುದ್ಧಿಃ=ಇಂದ್ರಿಯಗಳೂ ಮನಸ್ಸೂ ಬುದ್ಧಿ ಇವುಗಳನ್ನು ವಶಪಡಿಸಿಕೊಂಡಿರುವ, ಮುನಿಃ=ಮನನಶೀಲನಾದ, ಮೋಕ್ಷಪರಾಯಣಃ=ಮೋಕ್ಷದಲ್ಲಿ ಆಸಕ್ತನಾದ,(ಅಂದರೆ ಅಲ್ಪಫಲಗಳನ್ನಿಚ್ಛಿಸದೆ ಮುಕ್ತಿಯನ್ನೇ ಇಚ್ಛಿಸುವವನಾಗಿ.) ಸದಾ=ಯಾವಾಗಲೂ, ವಿಗತೇಚ್ಛಾಭಯಕ್ರೋಧಃ=ಶಾಸ್ತ್ರನಿಷಿದ್ಧವಿಷಯಗಳಲ್ಲಿಚ್ಛೆಯೂ, ಭಯ, ಕ್ರೋಧ ಇವುಗಳನ್ನು ಬಿಟ್ಟಿರುವವನು, ಯಃ=ಯಾವಾತನೋ, ಸಃ=ಆತನು, ಮುಕ್ತ ಏವ=ಮುಕ್ತನೇ (ಇದು ಸ್ತುತಿಯು ಅಥವಾ ಮುಕ್ತನಂತೆ ಅಭಿಮಾನಾದಿಗಳನ್ನು ಬಿಟ್ಟಿರುವುದರಿಂದ ಮುಕ್ತನೇ ಎಂದದ್ದು ) ॥ ೨೭, ೨೮ ॥

ಭಾ ॥ (೧) ಧ್ಯಾನಪ್ರಕಾರಮಾಹ । ಸ್ಪರ್ಶಾನಿತ್ಯಾದಿನಾ ॥ (೨) ಬಾಹ್ಯಾನ್ ಸ್ಪರ್ಶಾನ್ ಬಹಿಃ ಕೃತ್ವಾ । ಶ್ರೋತ್ರಾದೀನಿ ಯೋಗೇನ ನಿಯಮ್ಯೇತ್ಯರ್ಥಃ ॥(೩)ಚಕ್ಷುರ್ಭ್ರುವೋ-ರಂತರೇ ಕೃತ್ವಾ । ಭ್ರುವೋರ್ಮಧ್ಯಮವಲೋಕಯನ್ನಿತ್ಯರ್ಥಃ ॥ (೪) ಉಕ್ತಂ ಚ । ನಾಸಾಗ್ರೇ ವಾ ಭ್ರುವೋರ್ಮಧ್ಯೇ ಧ್ಯಾನೀ ಚಕ್ಷುರ್ನಿಧಾಪಯೇದಿತಿ ॥ (೫)ಪ್ರಾಣಾಪಾನೌ ಸಮೌ ಕೃತ್ವಾ ಕುಂಭಕೇ ಸ್ಥಿತ್ವೇತ್ಯರ್ಥಃ ॥ ೨೭,೨೮ ॥

ಅ ॥ (೧) ಸ್ಪರ್ಶಾನ್ ಇತ್ಯಾದಿಗಳಿಂದ ಧ್ಯಾನಪ್ರಕಾರವನ್ನು ಹೇಳುತ್ತಾರೆ (೨) ಬಾಹ್ಯಾನ್ ಸ್ಪರ್ಶಾನ್ ಬಹಿಃ ಕೃತ್ವಾ ಎಂಬುದಕ್ಕೆ ಶ್ರೋತ್ರ ಮೊದಲಾದ ಇಂದ್ರಿಯಗಳನ್ನು ಯೋಗದಿಂದ ವಿಷಯಗಳಲ್ಲಿ ಹೋಗದಿದ್ದಂತೆ ಮಾಡಿ ಎಂದರ್ಥವು. (೩) ಚಕ್ಷುರ್ಭ್ರುವೋರಂತರಂ ಕೃತ್ವಾ ಎಂಬುದಕ್ಕೆ ಹುಬ್ಬುಗಳ ಮಧ್ಯವನ್ನು ನೋಡಿಕೊಂಡು ಎಂದರ್ಥವು (೪) (ಹೀಗೆ ಹೇಳಿದರೆ ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ಎಂಬ ಮುಂದಿನ ಪ್ರಮಾಣದಿಂದ ವಿರೋಧವು ಬರುವುದು ಎಂದರೆ —) ಧ್ಯಾನಿಯು ಮೂಗಿನ ತುದಿಯಲ್ಲಿ

ಅಥವಾ ಹುಬ್ಬುಗಳ ಮಧ್ಯದಲ್ಲಿ ಚಕ್ಷುಸ್ಸನ್ನು ಇಡಬೇಕು. (೫) (ನ್ಯೂನಾಧಿಕಭಾವವಿಲ್ಲದ ಹಾಗೆ ಮಾಡು ವುದು ಸಮೀಕರಣವು, ಎಂಬೀ ಅನ್ಯಥಾಪ್ರತೀತಿಯನ್ನು ನಿರಾಕರಿಸುವುದಕ್ಕಾಗಿ ಅರ್ಥ ಹೇಳುತ್ತಾರೆ—) ಪ್ರಾಣಾಪಾನೌ ಸಮೌ ಕೃತ್ವಾ ಎಂಬುದಕ್ಕೆ ಕುಂಭಕ ಎಂಬುವ ಪ್ರಾಣಾಯಾಮದಲ್ಲಿ ನಿಲ್ಲಿಸಿ ಎಂದರ್ಥವು. ಪ್ರಾಣಾಪಾನರು ಕುಂಭಕಪ್ರಾಣಾಯಾಮದಲ್ಲಿ ನಿರ್ವಿಕಾರರಾಗಿ ನಿಶ್ಚಲರಾಗಿರುತ್ತಾರೆ ॥ ೨೭,೨೮ ॥

ಪೀ—ಧ್ಯಾನವನ್ನು ಹೇಳಿ ಧ್ಯೇಯನಾದವನನ್ನು ಹೇಳುತ್ತಾರೆ—

**ಗೀ ॥ ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಂ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥೨೯॥**

ಅ ॥ ಯಜ್ಞತಪಸಾಂ=ಜ್ಯೋತಿಷ್ಟೋಮ ಮೊದಲಾದ ಯಜ್ಞಗಳೂ, ಕೃಚ್ಛ್ರ ಚಾಂದ್ರಾಯಣ ಮೊದಲಾದ ತಪಸ್ಸುಗಳೂ ಇವುಗಳನ್ನು, ಭೋಕ್ತಾರಂ=ಭೋಗಿಸುವ, ಸರ್ವಲೋಕಮಹೇಶ್ವರಂ= ಎಲ್ಲಾ ಜಗತ್ತುಗಳಿಗೆ ಮುಖ್ಯಸ್ವಾಮಿಯಾದ, ಸರ್ವಭೂತಾನಾಂ=ಎಲ್ಲಾ ಪ್ರಾಣಿಗಳಿಗೆ, ಸುಹೃದಂ= ಉಪಕಾರಿಯಾದ, ಶಾಂತಿಂ=ಮೋಕ್ಷಕ್ಕೆ ಕಾರಣನಾದ, ಮಾಂ=ನನ್ನನ್ನು, ಜ್ಞಾತ್ವಾ=ತಿಳಿದು, ಋಚ್ಛತಿ=ಪ್ರತ್ಯಕ್ಷೀಕರಿಸಿಕೊಳ್ಳುತ್ತಾನೆ ॥ ೨೯ ॥

**ಗೀ ॥ ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಕರ್ಮಸನ್ನ್ಯಾಸ ಯೋಗೋ ನಾಮ ಪಂಚಮೋಽಧ್ಯಾಯಃ ॥ ೫ ॥**

ಅ ॥ ಹೀಗೆ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ಕರ್ಮಸನ್ನ್ಯಾಸವೆಂಬ ಐದನೇ ಅಧ್ಯಾಯವು ಮುಗಿಯಿತು. ॥ ೫ ॥

**ಭಾ ॥ ಧ್ಯೇಯಮಾಹ । ಭೋಕ್ತಾರಮಿತಿ ॥ ೨೯ ॥**

ಅ ॥ ಭೋಕ್ತಾರಂ ಎಂಬುವ ಶ್ಲೋಕದಿಂದ ಧ್ಯೇಯವಾದ ಭಗವತ್ಸ್ವರೂಪವನ್ನು ಹೇಳುತ್ತಾರೆ. ॥ ೨೯ ॥

**ಭಾ ॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾಭಾಷ್ಯೇ ಪಂಚಮೋಽಧ್ಯಾಯಃ ॥ ೫ ॥**

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾ ಭಾಷ್ಯದಲ್ಲಿ ಐದನೇ ಅಧ್ಯಾಯವು ಮುಗಿಯಿತು. ॥ ೫ ॥

**ತಾ ॥ ಅಮುಕ್ತೋ ಮುಕ್ತಸಾದೃಶ್ಯಾನ್ಮುಕ್ತ ಏವ ಹಿ ತತ್ತ್ವದೃಕ್ । ಕಿಮು ಮುಕ್ತಿಗತಸ್ತಸ್ಮಾಜ್ಜ್ಞಾನಮೇವಾಧಿಕಂ ನರ ಇತಿ ನಾರದೀಯೇ ॥ ೨೭,೨೮,೨೯ ॥**

ಅ ॥ ಭಗವಂತನ ತತ್ವವನ್ನರಿತ ಮೋಕ್ಷವನ್ನು ಹೊಂದದಿರುವ ಜ್ಞಾನಿಯು ಮುಕ್ತನ ಸಾದೃಶ್ಯ ದಿಂದ (ಅಂದರೆ ನಾನೇ ಕರ್ತನು ಇದುಮೊದಲಾದ ಅಭಿಮಾನಾದಿಗಳನ್ನು ಬಿಟ್ಟಿರುವುದರಿಂದ) ಮುಕ್ತ

ನೆಂದೇ ಹೇಳಿಸಿಕೊಳ್ಳುತ್ತಾನೆ ಮೋಕ್ಷದಲ್ಲಿದ್ದವನು ಮುಕ್ತನೆಂದು ಹೇಳಿಸಿಕೊಳ್ಳಲ್ಪಡುತ್ತಾನೆಂದು ಏನು ಹೇಳಬೇಕು. ಜ್ಞಾನಸಾಮರ್ಥ್ಯದಿಂದಲೇ ಫಲವನ್ನು ಹೊಂದುವುದರಿಂದ ಮನುಷ್ಯನಲ್ಲಿ ಜ್ಞಾನವೇ ಶ್ರೇಷ್ಠವಾದುದು, ಎಂದು ನಾರದೀಯ ಪುರಾಣದಲ್ಲಿದೆ. || ೨೭,೨೮ ೨೯ ||

**ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ ಶ್ರೀಭಗವದ್ಗೀತಾತಾತ್ಪರ್ಯನಿರ್ಣಯೇ ಪಂಚಮೋಽಧ್ಯಾಯಃ || ೫ ||**

ಅ || ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾ ತಾತ್ಪರ್ಯದಲ್ಲಿ ಐದನೇ ಅಧ್ಯಾಯವು ಮುಗಿಯಿತು. || ೫ ||

|| ಶ್ರೀಕೃಷ್ಣಾರ್ಪಣಮಸ್ತು ||

---

॥ ಶ್ರೀಃ ॥

# ಆರನೇ ಅಧ್ಯಾಯವು.

---

ಪೀ—(1)ಬುದ್ಧಿರ್ಯೋಗೇ ತ್ವಿಮಾಂ ಶೃಣು ಎಂದು(ಪು.೧೩೧)ಎರಡನೇ ಅಧ್ಯಾಯದಲ್ಲಿ ಯೋಗವನ್ನು ಹೇಳುತ್ತೇನೆಂದು ಪ್ರತಿಜ್ಞೆಮಾಡಿರುತ್ತಾರೆ. ಆ ಯೋಗವು ಭಗವಂತನ ಜ್ಞಾನಕ್ಕೆ ಸಾಧನವು. ಅಂತಹ ಯೋಗವು ಕರ್ಮಯೋಗವು, ಧ್ಯಾನಯೋಗವು ಎಂದು ಎರಡು ವಿಧವು. ಅದರಲ್ಲಿ ಕರ್ಮಯೋಗವು ಜ್ಞಾನಕ್ಕೆ ಅಮುಖ್ಯಸಾಧನವಾಗಿರುವುದರಿಂದ ತ್ರೈಗುಣ್ಯವಿಷಯಾ (ಪು ೧೪೪) ಇತ್ಯಾದಿಗಳಿಂದ ಎರಡನೇ ಅಧ್ಯಾಯದಲ್ಲಿ ಸಂಕ್ಷೇಪವಾಗಿಯೂ ಮೂರನೇ ಅಧ್ಯಾಯದಲ್ಲಿ ವಿಸ್ತರವಾಗಿಯೂ ಹೇಳಿರುತ್ತಾರೆ. (2) ಈಗ ಕರ್ಮಯೋಗದಿಂದ ಸಾಧ್ಯವಾಗಿಯೂ, ಜ್ಞಾನಕ್ಕೆ ಮುಖ್ಯ ಸಾಧನವಾಗಿಯೂ ಇರುವ ಸಮಾಧಿ (ಧ್ಯಾನ) ಯೋಗವನ್ನು ಸ್ಪರ್ಶಾನ್ (ಪು ೩೫೭) ಇತ್ಯಾದಿಗಳಿಂದ ಸಂಕ್ಷೇಪವಾಗಿ ಹೇಳಿದುದನ್ನು ವಿಸ್ತರವಾಗಿ ಈ ಅಧ್ಯಾಯದಲ್ಲಿ ಹೇಳುತ್ತಾರೆ (3) ಉದ್ಧರೇದಾತ್ಮನಾಽಽತ್ಮಾನಂ ಇತ್ಯಾದಿಗಳಿಂದ ಹೇಳುವ ಧ್ಯಾನಯೋಗದಲ್ಲಿ ಸನ್ನ್ಯಾಸಯೋಗದಿಂದ ಕೂಡಿದವನೇ ಅಧಿಕಾರಿಯು, ಎಂದು ತಿಳಿಸುವುದಕ್ಕಾಗಿ ಕಾಮಾದಿಗಳ ಪರಿತ್ಯಾಗರೂಪವಾದ ಸನ್ನ್ಯಾಸವನ್ನೂ ಶ್ರೀಹರಿಯ ಪೂಜಾರೂಪವಾದ ಅವರವರಿಗೆ ವಿಹಿತವಾದ ಕರ್ಮಾನುಷ್ಠಾನರೂಪ ಯೋಗವನ್ನೂ ಹೇಳುತ್ತಾರೆ—

ಗೀ ॥ ॥ ಶ್ರೀಭಗವಾನುವಾಚ ॥

ಓಂ ॥ ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।
ಸ ಸನ್ನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥ ೧ ॥

ಅ ॥ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸುತ್ತಾನೆ ಯಃ=ಯಾವ ಮನುಷ್ಯನು, ಕರ್ಮಫಲಂ=ಕರ್ಮಗಳ ಫಲವನ್ನು, ಅನಾಶ್ರಿತಃ=ಆಶ್ರಯ ಮಾಡದಿರುವವನಾಗಿ (ಅಂದರೆ ಫಲೇಚ್ಛೆಯನ್ನು ತೊರೆದು) ಕಾರ್ಯಂ ಕರ್ಮ=ತಂತಮ್ಮ ವರ್ಣಾಶ್ರಮಗಳಿಗೆ ವಿಹಿತವಾದ ಕರ್ತವ್ಯಕರ್ಮವನ್ನು, ಕರೋತಿ=ಮಾಡುತ್ತಾನೋ, ಸ ಚ=ಅವನೇ, ಸನ್ನ್ಯಾಸೀ=ಸನ್ನ್ಯಾಸಿಯು, ಯೋಗೀ ಚ=ಯೋಗಿಯು (ಅಂದರೆ ಅವನೇ ಧ್ಯಾನಾಧಿಕಾರಿಯು) (ಆಹವನೀಯ ಮೊದಲಾದ ಅಗ್ನಿಗಳನ್ನು ಅಗ್ನಿಹೋತ್ರ ಮೊದಲಾದ ಕ್ರಿಯೆಗಳನ್ನು ಬಿಟ್ಟು ಎಲ್ಲಾ ಸಂಗವನ್ನು ಬಿಟ್ಟಿರುವವನೇ ಧ್ಯಾನಾಧಿಕಾರಿಯು, ಎಂಬುವ ಸಾಂಖ್ಯಮತವನ್ನು ನಿರಾಕರಿಸುತ್ತಾರೆ –) ನಿರಗ್ನಿಃ=ಆಹವನೀಯ ಮೊದಲಾದ ಅಗ್ನಿಗಳನ್ನು ಬಿಟ್ಟವನು, ನ=ಸನ್ನ್ಯಾಸಿ ಯೋಗಿ ಎನಿಸಿಕೊಳ್ಳುವುದಿಲ್ಲ. ಅಕ್ರಿಯಃ=ಅಗ್ನಿಹೋತ್ರ ಮೊದಲಾದ ಕ್ರಿಯೆಗಳನ್ನು ಬಿಟ್ಟವನು, ನ=ಸನ್ನ್ಯಾಸಿ ಯೋಗಿ ಎನಿಸಿಕೊಳ್ಳುವುದಿಲ್ಲ. (ಅಂದರೆ ಧ್ಯಾನಾಧಿಕಾರಿಯೆನಿಸಿಕೊಳ್ಳುವುದಿಲ್ಲ.) ಏಕೆಂದರೆ—ಸನ್ನ್ಯಾಸಿಗೂ ದೈವಮೇವಾಪರೇ ಇತ್ಯಾದಿಗಳಿಂದ ಅವರಿಗೆ ಯೋಗ್ಯಗಳಾದ ಅಗ್ನಿಕ್ರಿಯೆಗಳನ್ನು ಹೇಳಿರುವುದರಿಂದಲೂ ಸನ್ನ್ಯಾಸಾಶ್ರಮವನ್ನು ತೆಗೆದುಕೊಳ್ಳುವ ಕಾಲದಲ್ಲಿ ಮೊದಲಿನ ಆಶ್ರಮದಲ್ಲಿ ಸ್ವೀಕರಿಸಿದ ಅಗ್ನಿಯನ್ನು ತನ್ನಲ್ಲಿಯೇ ಸಮಾರೋಪಿಸಿಕೊಳ್ಳುವುದರಿಂದಲೂ ಯತಿಯೂ ಕೂಡ ಸನ್ನ್ಯಾಸಿ ಯೋಗಿ ಎಂದು ಎನಿಸಿಕೊಳ್ಳುತ್ತಾನೆ ॥ ೧ ॥

**ಭಾ ॥ ಓಂ ॥ (೧) ಜ್ಞಾನಾಂತರಂಗಂ ಸಮಾಧಿಯೋಗಮಾಹಾನೇನಾಧ್ಯಾಯೇನ ॥ (೨) ವಿವಕ್ಷಿತಂ ಸನ್ನ್ಯಾಸಮಾಹ ಯೋಗೇನ ಸಹ । ಅನಾಶ್ರಿತ ಇತಿ ॥ (೩) ಚತುರ್ಥಾ. ಶ್ರಮಿಣೋಽಪ್ಯಗ್ನಿಃ ಕ್ರಿಯಾ ಚೋಕ್ತಾ ದೈವಮೇವೇತ್ಯಾದೌ ॥ (೪) ಅಗ್ನಿರ್ಬ್ರಹ್ಮ ಚ ತತ್ಪೂಜಾ ಕ್ರಿಯಾನ್ಯಾಸಾಶ್ರಮೇಽಸ್ತ್ಯಿತೀತಿ ಚ । ತಸ್ಮಾನ್ನಿರಗ್ನಿರಕ್ರಿಯಃ ಸನ್ನ್ಯಾಸೀ ಯೋಗೀ ಚ ನ ಭವತ್ಯೇವ ॥ ೧ ॥**

ಅ ॥ (೧) ಅವಶ್ಯವಾಗಿ ಹೇಳಬೇಕಾಗಿರುವ ಜ್ಞಾನಕ್ಕೆ ಮುಖ್ಯಸಾಧನವಾದ ಸಮಾಧಿ(ಧ್ಯಾನ)ಯೋಗವನ್ನು ಈ ಅಧ್ಯಾಯದಲ್ಲಿ ಹೇಳುತ್ತಾರೆ. (೨) (ಗೃಹಸ್ಥಾಶ್ರಮಿಗಳನ್ನು ಸ್ತುತಿಸುವುದಕ್ಕಾಗಿ ಅಮುಖ್ಯವಾಗಿ ಅವರಿಗೆ ಸನ್ನ್ಯಾಸಿತ್ವವೂ, ಯೋಗಿತ್ವವೂ ಇದೆ, ಎಂದು ಒಂದನೇ ಶ್ಲೋಕದಿಂದ ಹೇಳಲ್ಪಡುತ್ತದೆಂದು ಪರಕೀಯರು ತಾತ್ಪರ್ಯ ಹೇಳಿದ್ದು ಅಯುಕ್ತವೆನ್ನುತ್ತಾರೆ—) **ಅನಾಶ್ರಿತಃ** ಎಂಬುವ ಶ್ಲೋಕದಿಂದ ಹೇಳಲಿಷ್ಟವಾದ ಸನ್ನ್ಯಾಸವನ್ನು ಯೋಗಸಹಿತವಾಗಿ ಹೇಳುತ್ತಾರೆ. (ಅಂದರೆ—ಸಮಾಧಿಯೋಗವನ್ನು ವಿಧಿಸಲಿಕ್ಕೆ ಆದರಲ್ಲಿ ಅಧಿಕಾರಿಯನ್ನು ತಿಳಿಸುತ್ತಾ, ಸಾಂಖ್ಯಾದಿಗಳು ಹೇಳುವ ಧ್ಯಾನಾಧಿಕಾರಿಯನ್ನು ನಿರಾಕರಿಸುವುದಕ್ಕಾಗಿ ಅಧಿಕಾರಿಗೆ ವಿಶೇಷಣವಾದ, ಕಾಮಾದಿಗಳ ಪರಿತ್ಯಾಗರೂಪ ಸನ್ನ್ಯಾಸವನ್ನೂ, ಶ್ರೀಹರಿಯ ಪೂಜಾರೂಪವಾದ ತಮ್ಮತಮ್ಮ ಕರ್ಮಾನುಷ್ಠಾನರೂಪವಾದ ಯೋಗವನ್ನೂ ಹೇಳುತ್ತಾರೆ) (ಸನ್ನ್ಯಾಸ ಪದದಿಂದ ಕೇವಲ ಯತ್ಯಾಶ್ರಮವನ್ನೂ ಯೋಗಪದದಿಂದ ಗೃಹಸ್ಥಾಶ್ರಮಿಯಲ್ಲಿಲ್ಲದಿರುವ ಯೋಗವನ್ನೂ ಇಟ್ಟುಕೊಂಡಿದ್ದರೆ ಇದು ಗೃಹಸ್ಥಾಶ್ರಮಿಯಲ್ಲಿ ಅಮುಖ್ಯವು. ಅವನನ್ನು ಸ್ತುತಿಸುವುದಕ್ಕಾಗಿ ಹೇಳಿದ್ದು ಎಂದು ಕೂಡಬಹುದಿತ್ತು. ಹೀಗೆ ಹೇಳಿದ್ದಲ್ಲ) (೩) (ನಿರಗ್ನಿಯೂ ಅಕ್ರಿಯನೂ ಕೇವಲ ಸನ್ನ್ಯಾಸಿಯೂ ಯೋಗಿಯೂ ಮಾತ್ರವಲ್ಲ ಮತ್ತೆ **ಅನಾಶ್ರಿತಃ** ಇತ್ಯಾದಿಗಳಿಂದ ಹೇಳಲ್ಪಟ್ಟ ಗೃಹಸ್ಥಾಶ್ರಮಿಯೂ ಆಗುತ್ತಾನೆಂದು ಪರರು ಹೇಳುತ್ತಾರೆ ಅದು ಅಯುಕ್ತವೆನ್ನುತ್ತಾರೆ—) ನಾಲ್ಕನೇ ಆಶ್ರಮವುಳ್ಳ ಸನ್ನ್ಯಾಸಿಗಳಿಗೂ **ದೈವಮೇವ** (ಪು ೩೧೨) ಇತ್ಯಾದಿಗಳಲ್ಲಿ ಅಗ್ನಿಯೂ ಕ್ರಿಯೆಯೂ ಹೇಳಲ್ಪಟ್ಟಿದೆ (೪) (ಈ ವಿಷಯದಲ್ಲಿಯೇ ಸ್ಪಷ್ಟಪ್ರಮಾಣವನ್ನು ಹೇಳುತ್ತಾರೆ—) ಸನ್ನ್ಯಾಸಾಶ್ರಮದಲ್ಲಿ ಬ್ರಹ್ಮನೇ ಅಗ್ನಿಯು (ಅಂದರೆ ಬ್ರಹ್ಮಧ್ಯಾನವೇ ಅಗ್ನ್ಯಾಧಾನ ತುಲ್ಯವು) ಪರಬ್ರಹ್ಮನ ಪೂಜೆಯೇ ಕ್ರಿಯೆಯೆನಿಸುತ್ತದೆ (ಆದಕಾರಣ ಪರರು ಹೇಳಿದ್ದು ಯುಕ್ತವಲ್ಲ) ಆದಪ್ರಯುಕ್ತ ಪರರು ಹೇಳಿದ್ದು ಅಯುಕ್ತವಾಗಿರುವುದರಿಂದ ಸನ್ನ್ಯಾಸಿಯೂ, ಯೋಗಿಯೂ, ನಿರಗ್ನಿಯೂ, ಅಕ್ರಿಯನೂ ಆಗುವುದೇ ಇಲ್ಲ (ಸನ್ನ್ಯಾಸಿಗಳಿಗೆ ಅಗ್ನಿಯೂ ಕ್ರಿಯೆಯೂ ಇಲ್ಲವೆಂದು ಹೇಳುವುದು ಆಹವನೀಯಾದ್ಯಗ್ನಿಯೂ ಅಗ್ನಿಹೋತ್ರಾದಿ ಕ್ರಿಯೆಯೂ ಇಲ್ಲವೆಂಬುವ ಅಭಿಪ್ರಾಯದಿಂದ. ॥ ೧ ॥

**ತಾ ॥ ಓಂ (೧) ಧ್ಯಾನಮತ್ರೋಚ್ಯತೇ ॥ (೨) ಸ ಬ್ರಹ್ಮನಿಷ್ಠಸ್ತು ಯತಿರ್ಮಹಾತ್ಮಾ ಶಾರೀರಮಗ್ನಿಂ ಚ ಮುಖೇ ಜುಹೋತೀತ್ಯಾದೇರ್ನ ಯತೇರಸ್ಯನಗ್ನಿತ್ವಂ । ಆತ್ಮಸಮಾರೋಪಣಾಚ್ಚ ॥ ೧ ॥**

ಅ ॥ (೧) ಐದನೇ ಅಧ್ಯಾಯದಲ್ಲಿ ಸಂಕ್ಷೇಪವಾಗಿ ಧ್ಯಾನಯೋಗ ಪ್ರಕಾರವನ್ನು ಹೇಳಿದೆ. ಈ ಅಧ್ಯಾಯದಲ್ಲಿ ಅದನ್ನೇ ವಿಸ್ತರಿಸಿ ಹೇಳುತ್ತಾರೆ (೨) (ಅಗ್ನ್ಯಾದಿಗಳನ್ನು ಬಿಟ್ಟು ಇರುವ ಮನುಷ್ಯನಿಗೆ ಧ್ಯಾನವು, ಎಂಬುವ ಆಶಂಕೆಯನ್ನು **ಅನಾಶ್ರಿತಃ** ಎಂಬುದರಿಂದ ನಿರಾಕರಿಸುತ್ತಾರೆ. ಆದರಲ್ಲಿ ನಿರಗ್ನಿಗೆ ಸನ್ನ್ಯಾಸಿತ್ವವೂ ಯೋಗಿತ್ವವೂ ಇಲ್ಲವೆಂದು ಹೇಳಿದ್ದು ಕೂಡುವುದಿಲ್ಲ. ಹಾಗೆ ಹೇಳಿದರೆ ಯತ್ಯಾಶ್ರಮವನ್ನೇ ಸ್ವೀಕರಿಸದೆ ಇರಬೇಕಾಗುವುದು. ಯತಿಗೆ ಅಗ್ನಿಯು ಇಲ್ಲದಿರುವುದರಿಂದ ಯೋಗ ಸನ್ನ್ಯಾಸಗಳು

ಇಲ್ಲವೆಂದಾಗಬೇಕಾಗುವುದು. ಯೋಗಸನ್ನ್ಯಾಸಗಳೇ ಶ್ರೇಯಸ್ಸಾಧನಗಳು ಎಂದರೆ—)ಪರಬ್ರಹ್ಮನಲ್ಲಿಯೇ ಆಸಕ್ತನಾದ ಮಹಾನುಭಾವನಾದ ಆ ಸನ್ನ್ಯಾಸಿಯಾದರೂ ಶರೀರದೊಳಗೆ ಇರುವ ವೈಶ್ವಾನರನೆನಿಸಿಕೊಂಡ ಅಗ್ನಿಯನ್ನುದ್ದೇಶಿಸಿ ಕುಂಡಸ್ಥಾನೀಯವಾದ ಮುಖದಲ್ಲಿ ಭಿಕ್ಷಾಟನದಿಂದ ಹೊಂದಿದ ಅನ್ನಾದಿಗಳನ್ನು ಹೋಮಿಸುತ್ತಾರೆ, ಇದುಮೊದಲಾದ ಪ್ರಮಾಣಗಳಿಂದ (ವೈಶ್ವಾನರಮ್ಪೃತಮಾ ಜಾತಮಗ್ನಿಂ ಅಹಂ ವೈಶ್ವಾನರೋ ಭೂತ್ವಾ ಇತ್ಯಾದಿಗಳಿಂದ) ಯತಿಗಳಿಗೂ ಅಗ್ನಿಯು ಇಲ್ಲವೆಂದಲ್ಲ. (ಯತಿಗಳಿಗೆ ಅಗ್ನಿಯು ಇಲ್ಲವೆಂದಾಗಿದ್ದರೆ ಸನ್ನ್ಯಾಸಾಶ್ರಮವನ್ನು ಸ್ವೀಕರಿಸದೆ ಹೋಗಬಹುದಿತ್ತು. ಹಾಗೆ ಇಲ್ಲ. ಸ ಬ್ರಹ್ಮನಿಷ್ಠಃ ಎಂಬುವಲ್ಲಿ ಸನ್ನ್ಯಾಸಿಗಳಿಗೂ ಅಗ್ನಿಯನ್ನು ಹೇಳಿರುತ್ತಾರೆ.) (ಅ) (ಮತ್ತು ಯತ್ಯಾಶ್ರಮವನ್ನು ಸ್ವೀಕಾರಮಾಡುವ ಕಾಲದಲ್ಲಿ ಪೂರ್ವಾಶ್ರಮದಲ್ಲಿ ಸ್ವೀಕಾರ ಮಾಡಿದ್ದ ಅಗ್ನಿಯನ್ನು ಕೈಯಲ್ಲಿಟ್ಟುಕೊಂಡು ಮುಖವನ್ನಾರಂಭಿಸಿ ಹೃದಯ ಪರ್ಯಂತ ಸ್ಪರ್ಶಮಾಡಿಕೊಳ್ಳಬೇಕು, ಈ ರೀತಿಯಾಗಿ ಅಗ್ನಿಯನ್ನು) ತನ್ನಲ್ಲಿ ಆರೋಪಿಸಿಕೊಳ್ಳಬೇಕೆಂದು ಹೇಳಿದಕಾರಣ ಯತಿಗೂ ಅಗ್ನಿಯು ಇಲ್ಲವೆಂದಲ್ಲ.

ವಿ ॥ (1) ಈ ವಿಷಯವನ್ನು ವಿಷ್ಣುತೀರ್ಥೀಯದಲ್ಲಿ ಹೇಳಿದ್ದಾರೆ ಅಥಾಗ್ನಿಮೋಕಹಸ್ತೇನ ಪ್ರತಾಪ್ಯಾಯಂತ ಇತ್ಯೃಚಾ । ಸಂಸ್ಪೃಶೇತ್ ಮುಖಮಾರಭ್ಯ ಯಾವದ್ಧೃದಯಮಂಜಸಾ ॥(2) ಹಾಗೆಯೇ ವಿಷ್ಣುಪುರಾಣದಲ್ಲಿ ಎರಡು ಅಗ್ನಿಗಳನ್ನು ಹೇಳಿದ್ದಾರೆ ಕೃತ್ವಾಽಗ್ನಿಹೋತ್ರಂ ಸ್ವಶರೀರಸಂಸ್ಥಂ ಶಾರೀರಮಗ್ನಿಂ ಸ್ವಮುಖೇ ಜುಹೋತಿ । ವಿಪ್ರಸ್ತು ಭೈಕ್ಷ್ಯೋಪಗತೈರ್ಹವಿರ್ಭಿಃ ಚಿತಾಽಗ್ನಿನಾ ಸ ವ್ರಜತಿ ಸ್ಮ ಲೋಕಾನ್ । ಅಗ್ನಿಹೋತ್ರವನ್ನು ತನ್ನಲ್ಲಿ ಆರೋಪಿಸಿಕೊಂಡು, ಆ ಅಗ್ನಿಯನ್ನೂ ಶರೀರದಲ್ಲಿರತಕ್ಕ ವೈಶ್ವಾನರಾಗ್ನಿಯನ್ನೂ ಉದ್ದೇಶಿಸಿ ಭಿಕ್ಷೆಯಿಂದ ತಂದ ಅನ್ನಾದಿಗಳಿಂದ ತನ್ನ ಮುಖದಲ್ಲಿ ಹೋಮಿಸಿಕೊಂಡು (ಚಿತಾ=) ಜ್ಞಾನಸ್ವರೂಪನಾದ ಅಗ್ನಿಯ ಪ್ರಸಾದದಿಂದ ಸನ್ನ್ಯಾಸಿಯು ಉತ್ತಮ ಲೋಕಗಳನ್ನು ಹೊಂದುತ್ತಾನೆ. ॥ ೧ ॥

**ಗೀ ॥ ಯಂ ಸನ್ನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ ।**
**ನ ಹ್ಯಸನ್ನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥ ೨ ॥**

ಅ ॥ ಪಾಂಡವ=ಅರ್ಜುನನೇ, ಯಂ=ಯಾವುದನ್ನು, ಸನ್ನ್ಯಾಸಮಿತಿ=ಜ್ಞೇಯಃ ಸ ನಿತ್ಯ ಸನ್ನ್ಯಾಸೀ ಇತ್ಯಾದಿಗಳಲ್ಲಿ ಹೇಳಿದ ಪ್ರಕಾರ ಕಾಮ ಕ್ರೋಧ ಮೊದಲಾದವುಗಳ ಪರಿತ್ಯಾಗರೂಪವಾದ ಸನ್ನ್ಯಾಸವನ್ನಾಗಿ, ಪ್ರಾಹುಃ=ಹೇಳುತ್ತಾರೋ, ತಂ=ಅಂತಹ ಸನ್ನ್ಯಾಸಯೋಗವನ್ನು, ಯೋಗಂ=ಮುಖ್ಯ ಯೋಗವನ್ನಾಗಿ, (ಅಂದರೆ ಜ್ಞಾನಕ್ಕೆ ಕಾರಣವಾದ ಕಾಮಾದಿಗಳ ಪರಿತ್ಯಾಗದಿಂದ ಕೂಡಿದ ಆಯಾಯ ವರ್ಣಾಶ್ರಮಗಳಿಗೆ ವಿಹಿತವಾದ ನಿವೃತ್ತ ಕರ್ಮಾನುಷ್ಠಾನರೂಪವಾದ ಯೋಗದಲ್ಲಿ ಅಂತರ್ಭೂತವಾದುದನ್ನಾಗಿ) ವಿದ್ಧಿ=ತಿಳಿ. ಕಶ್ಚನ=ಯಾವನೊಬ್ಬ, ಅಸನ್ನ್ಯಸ್ತಸಂಕಲ್ಪಃ=ಇಂತಹ ಫಲಕ್ಕಾಗಿ ಇಂತಹ ಕರ್ಮವನ್ನು ಮಾಡುತ್ತೇನೆಂಬ ಸಂಕಲ್ಪವನ್ನು ಬಿಡದಿರುವ ಮನುಷ್ಯನು (ಅಂದರೆ ಸನ್ನ್ಯಾಸವಿಲ್ಲದೆ ಕೇವಲ ಕರ್ಮಗಳನ್ನು ಮಾತ್ರ ಮಾಡುವವನು) ಯೋಗೀ=ಜ್ಞಾನೋಪಾಯವುಳ್ಳವನೂ, ನಹಿ=ಆಗುವುದಿಲ್ಲ (ಕಾರ್ಯಸಾಮಗ್ರಿಗಳಲ್ಲಿ ಏಕದೇಶವು ಕಾರ್ಯವನ್ನು ಹುಟ್ಟಿಸಲಾರದಷ್ಟೇ.) ॥ ೨ ॥

ಶೀ—ಕಾಮಾದಿಗಳ ಪರಿತ್ಯಾಗವು ಸನ್ನ್ಯಾಸವು ಶ್ರೀಹರಿಗೆ ಪ್ರೀತಿಯಾಗಲಿ ಎಂಬುವ ಬುದ್ಧಿಯಿಂದ ಕರ್ಮಗಳನ್ನು ಮಾಡುವುದು ಯೋಗವು. ಅದಕಾರಣ ಅವುಗಳ ಲಕ್ಷಣಗಳು ಬೇರೆಬೇರೆಯಾಗಿರುವುದರಿಂದ ಅವುಗಳು ಒಂದೇ ಎಂದು ಹೇಳುವುದು ಹೇಗೆ? ಎಂದರೆ—

**ಭಾ ॥ (೧) ಸನ್ಯಾಸೋಽಪಿ ಯೋಗಾಂತರ್ಭೂತ ಇತ್ಯಾಹ । ಯಂ ಸನ್ಯಾಸಮಿತಿ ॥**
**(೨) ಕಾಮಸಂಕಲ್ಪಾದ್ಯಪರಿತ್ಯಾಗೇ ಕಥಮುಪಾಯವಾನ್ ಸ್ಯಾದಿತ್ಯಾಶಯಃ ॥೨॥**

ಅ ॥ (೧) (ಸನ್ಯಾಸೀ ಚ ಯೋಗೀ ಚ ಎಂಬುವ ಉಕ್ತಿಯಿಂದ ಸನ್ಯಾಸಕ್ಕೂ ಯೋಗಕ್ಕೂ ಅತ್ಯಂತ ಭೇದವು ಎಂದು ಪ್ರಾಪ್ತವಾದ ಶಂಕೆಯನ್ನು ನಿವೃತ್ತಿಗೊಳಿಸುವುದಕ್ಕಾಗಿ) ಅಮುಖ್ಯಯೋಗಕ್ಕಿಂತ (ಶ್ರೀಹರಿಗೆ ಪ್ರೀತಿಯಾಗಲಿ ಎಂಬುವ ಬುದ್ಧಿಯಿಂದ ಕರ್ಮಾನುಷ್ಠಾನರೂಪವಾದ ಯೋಗಮಾತ್ರಕ್ಕಿಂತ ಸನ್ಯಾಸವು ಬೇರೆ ಎಂದು ಹೇಳಿದಾಗ್ಯೂ ಅದು ಮುಖ್ಯಯೋಗ (ಕಾಮಾದಿಗಳನ್ನು ಪರಿತ್ಯಾಗಮಾಡಿಕೊಂಡು ಈಶ್ವರಾರ್ಪಣಬುದ್ಧಿಯಿಂದ ಕರ್ಮಾನುಷ್ಠಾನ)ದಲ್ಲಿ ಅಂತರ್ಭೂತವಾಗುತ್ತದೆಂದು ಯಂ ಸನ್ಯಾಸಂ ಎಂಬ ಶ್ಲೋಕದಿಂದ ಹೇಳುತ್ತಾರೆ– (ಏವಂಚ ಸನ್ಯಾಸವು ಅಮುಖ್ಯಯೋಗದಲ್ಲಿ ಸೇರಿದ್ದರೂ ಮುಖ್ಯಯೋಗದಲ್ಲಿ ಸೇರುವುದರಿಂದ ಅವುಗಳು ಒಂದೇ ಎಂದು ಹೇಳಿದ್ದು ಕೂಡುತ್ತದೆ) (೨) (ಸನ್ಯಾಸವು ಯೋಗದಲ್ಲಿ ಅಂತರ್ಭೂತವಾಗುತ್ತದೆ, ಎಂಬುವುದನ್ನು ನ ಹ್ಯಸಂನ್ಯಸ್ತ ಎಂಬುದರಿಂದ ಹೇಳುತ್ತಾರೆ– (ಅದರ ತಾತ್ಪರ್ಯವನ್ನು ಹೇಳುತ್ತಾರೆ) ಕಾಮಸಂಕಲ್ಪಾದಿಗಳನ್ನು ಬಿಡದಿದ್ದರೆ ಜ್ಞಾನಸಾಧನರೂಪ ಮುಖ್ಯಯೋಗವುಳ್ಳವನು ಹೇಗೆ ಆದಾನು? ಎಂದಭಿಪ್ರಾಯವು. ॥ ೨ ॥

ತಾ ॥ ಯೋಗವಿಶೇಷ ಏವ ಸನ್ಯಾಸ ಇತ್ಯರ್ಥಃ ॥ ೨ ॥

ಅ ॥ ಯೋಗವಿಶೇಷವೇ ಸನ್ಯಾಸವು (ಅಂದರೆ ಕಾಮಾದಿಗಳ ಪರಿತ್ಯಾಗಪೂರ್ವಕವಾಗಿ ಶ್ರೀಕೃಷ್ಣನಿಗೆ ಅರ್ಪಿತವಾಗಲಿ ಎಂಬುವ ಬುದ್ಧಿಯಿಂದ ಕರ್ಮಾನುಷ್ಠಾನರೂಪ ಯೋಗವಿಶೇಷವೇ ಮುಖ್ಯಸನ್ಯಾಸವು.) ॥ ೨ ॥

ಪೀ — ಧ್ಯಾನಯೋಗಕ್ಕೆ ಉಪಯುಕ್ತವಾದ ಕರ್ಮವನ್ನು ಒಂದಾವರ್ತಿ ಮಾಡುವುದೋ, ಫಲವು ಸಿಗುವಪರ್ಯಂತ ಮಾಡಬೇಕೋ, ಎಂದರೆ ಫಲವು ಸಿಗುವಪರ್ಯಂತ ಮಾಡಬೇಕೆನ್ನುತ್ತಾರೆ—

**ಗೀ ॥ ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥ ೩ ॥**

ಅ ॥ ಯೋಗಂ=ಜ್ಞಾನಸಾಧನವನ್ನು, ಆರುರುಕ್ಷೋಃ=ಸಂಪೂರ್ಣ ಹೊಂದಲಿಚ್ಛಿಸುವ ಮುನೇಃ=ಪರೋಕ್ಷಜ್ಞಾನಿಗೆ (ಸಚ್ಛಾಸ್ತ್ರಶ್ರವಣದಿಂದುಂಟಾದ ಜ್ಞಾನವುಳ್ಳವನಿಗೆ) ಕರ್ಮ= ಸನ್ಯಾಸದಿಂದೊಡಗೂಡಿದ ನಿವೃತ್ತಕರ್ಮವು, ಕಾರಣಂ=ಯೋಗಾರೋಹರೂಪ ಭಗವತ್ಸಾಕ್ಷಾತ್ಕಾರಕ್ಕೆ ಕಾರಣವೆಂದು, ಉಚ್ಯತೇ=ಹೇಳಲ್ಪಡುತ್ತದೆ (ಅಂದರೆ ಅಪರೋಕ್ಷಜ್ಞಾನವು ಹುಟ್ಟುವಪರ್ಯಂತ ಅಂತಹ ಕರ್ಮವನ್ನು ಮಾಡಬೇಕು, ಯೋಗಾರೂಢಸ್ಯ=ಆ ಸಂಪೂರ್ಣ ಜ್ಞಾನೋಪಾಯವುಳ್ಳ ಅಪರೋಕ್ಷಜ್ಞಾನಿಗೇನೇ,ಶಮಃ=ಭಗವಂತನಲ್ಲಿಯೇ ಆಸಕ್ತವಾದ ಬುದ್ಧಿರೂಪಧ್ಯಾನ, ಪಾಠಪ್ರವಚನ ಪೂಜಾ ಮೊದಲಾದ ಕರ್ಮವು, ತಸ್ಯೈವ=ಮೋಕ್ಷದಲ್ಲಿರತಕ್ಕ ಆನಂದಾತಿಶಯಕ್ಕೇನೇ, ಕಾರಣಂ=ಕಾರಣವೆಂದು, ಉಚ್ಯತೇ=ಹೇಳಲ್ಪಡುತ್ತದೆ ॥ ೩ ॥

**ಭಾ ॥ (೧) ಕಿಯತ್ಕಾಲಂ ಕರ್ಮ ಕರ್ತವ್ಯಮಿತ್ಯತ ಆಹ । ಆರುರುಕ್ಷೋರಿತಿ ॥ (೨) ಯೋಗಮಾರುರುಕ್ಷೋಃ ಉಪಾಯಸಂಪೂರ್ತಿಮಿಚ್ಛೋಃ । ಯೋಗಾರೂಢಸ್ಯ ಸಂಪೂರ್ಣೋಪಾಯಸ್ಯ । ಅಪರೋಕ್ಷಜ್ಞಾನಿನ ಇತ್ಯರ್ಥಃ ॥ (೩) ಕಾರಣಂ ಪರಮಸುಖ-**

**ಕಾರಣಂ ॥ (೪) ಅಪರೋಕ್ಷಜ್ಞಾನಿನೋಽಪಿ ಸಮಾಧ್ಯಾದಿಫಲಮುಕ್ತಂ ॥ (೫) ತಸ್ಯ ಸರ್ವೋಪಶಮೇನ ಸಮಾಧಿರೇವ ಕಾರಣಂ ಪ್ರಾಧಾನ್ಯೇನೇತ್ಯರ್ಥಃ ॥ (೬) ತಥಾಽಪಿ ಯದಾ ಭೋಕ್ತವ್ಯೋ ಪರಮಸ್ತದೈವ ಸಮ್ಯಗಸಂಪ್ರಜ್ಞಾತಸಮಾಧಿರ್ಜಾಯತೇ । ಅನ್ಯದಾ ತು ಭಗವಚ್ಚರಿತಾದೌ ಸ್ಥಿತಿಃ ॥ (೭) ತಚ್ಚೋಕ್ತಂ । ಯೇ ತ್ವಾಂ ಪಶ್ಯಂತಿ ಭಗವಂಸ್ತ ಏವ ಸುಖಿನಃ ಪರಂ । ತೇಷಾಮೇವ ತು ಸಮ್ಯಕ್ಚ ಸಮಾಧಿರ್ಜಾಯತೇ ನೃಣಾಂ । ಭೋಕ್ತವ್ಯಕರ್ಮಣ್ಯಕ್ಷೀಣೇ ಜಪೇನ ಕಥಯಾಽಪಿ ವಾ । ವರ್ತಯಂತಿ ಮಹಾತ್ಮಾನಸ್ತ್ವದ್ಭಕ್ತಾಸ್ತ್ವತ್ಪರಾಯಣಾ ಇತಿ ॥ ೩ ॥**

ಅ ॥ (೧) ಸಮಾಧಿಯೋಗಕ್ಕೆ ಉಪಯುಕ್ತವಾದ ಕರ್ಮವನ್ನು ಎಷ್ಟುಕಾಲದ ವರೆಗೆ (ಅಂದರೆ ಒಂದು ಸಲ ಮಾಡುವುದೋ, ಫಲವು ಸಿಗುವಪರ್ಯಂತ ಮಾಡಬೇಕೋ ಎಂದಾಶಂಕಿಸಿದರೆ— **ಆರುರುಕ್ಷೋರ್ಮುನೇಃ** ಎಂಬುದರಿಂದ ಅದಕ್ಕೆ ಫಲವು ಸಿಗುವಪರ್ಯಂತ ಮಾಡಬೇಕೆಂದು ಸಮಾಧಾನವನ್ನು ಹೇಳುತ್ತಾರೆ. (೨) ಯೋಗಮಾರುರುಕ್ಷೋಃ= ಜ್ಞಾನಸಾಧನವನ್ನು ಸಂಪೂರ್ಣ ಇಚ್ಛಿಸುವವನಿಗೆ, ಯೋಗಮಾರೂಢಸ್ಯ= ಜ್ಞಾನಸಾಧನವನ್ನು ಸಂಪೂರ್ಣಹೊಂದಿದವನಿಗೆ ಅಂದರೆ ಅಪರೋಕ್ಷಜ್ಞಾನವುಳ್ಳವನಿಗೆ. (೩) (ಅಪರೋಕ್ಷಜ್ಞಾನದಿಂದಲೇ ಮೋಕ್ಷವು ಸಿಗುವುದರಿಂದ ಅಪರೋಕ್ಷಜ್ಞಾನಿಯು ಮಾಡುವ ಧ್ಯಾನವು ಯಾವ ಫಲಕ್ಕೆ ಕಾರಣವಾಗುತ್ತದೆಂದರೆ—) ಮೋಕ್ಷದಲ್ಲಿ ಆಗತಕ್ಕ ಆನಂದಾತಿಶಯಕ್ಕೆ ಕಾರಣವು (೩) ಅಥವಾ ಪೂರ್ವಾರ್ಧದಲ್ಲಿ ಅಪರೋಕ್ಷಜ್ಞಾನವನ್ನು ಇಚ್ಛಿಸುವವನಿಗೆ ಉತ್ತಮ ಅಧಮ ಮಧ್ಯಮರೂಪರಾದ ನಾನಾಜನರ ಸೇವಾರೂಪವಾದ ಕರ್ಮವು ಆವಶ್ಯಕವೆಂದು ಹೇಳುತ್ತದೆ ಉತ್ತರಾರ್ಧದಲ್ಲಿ ಜ್ಞಾನಿಗಳಿಗೆ ನಾನಾಜನರ ಸೇವಾರೂಪವಾದ ಕರ್ಮವನ್ನು ಬಿಡಬೇಕೆಂದು ಶಮಪದದಿಂದ ಹೇಳುತ್ತದೆ (೪) (ಅಪರೋಕ್ಷಜ್ಞಾನಿಗೆ ಮೋಕ್ಷ ಹೊರತು ಬೇರೆ ಫಲವು ಇಲ್ಲದಿರುವುದರಿಂದ ಅಪರೋಕ್ಷಜ್ಞಾನಿಯು ಮಾಡುವ ಧ್ಯಾನವು ಪರಮಸುಖಕ್ಕೆ ಕಾರಣವೆಂದದ್ದು ಹೇಗೆಂದರೆ—) ಅಪರೋಕ್ಷಜ್ಞಾನಿಯು ಮಾಡುವ ಧ್ಯಾನ ಜಪ ಪೂಜಾ ಮೊದಲಾದವುಗಳಿಗೆ ಮೋಕ್ಷದಲ್ಲಿ ಆನಂದಾಭಿವೃದ್ಧಿಯು ಫಲವಿದೆ, ಎಂದು ೨ನೇ ಅಧ್ಯಾಯದಲ್ಲಿ (ಪು· ೧೫೫ರಲ್ಲಿ) ಸುಕೃತಮಪ್ಯತಿಪ್ರಿಯಂ ಇತ್ಯಾದಿಗಳಲ್ಲಿ ಸಮರ್ಥಿಸುವರು. (೫) (ಅಪರೋಕ್ಷಜ್ಞಾನಿಗೆ ಬೇರೆ ಯಾವುದೂ ಪಾಠಪ್ರವಚನ ಜಪ ಪೂಜಾದಿರೂಪವಾದ ಕರ್ತವ್ಯಕರ್ಮವೇ ಇಲ್ಲವೋ ಎಂದರೆ—) ಎಲ್ಲಾ ವಿಷಯಗಳಲ್ಲಿಯೂ ಮನಸ್ಸನ್ನು ಇಡದೆ ಧ್ಯಾನವೇ ಅಪರೋಕ್ಷಜ್ಞಾನಿಗೆ ಮುಖ್ಯವಾಗಿ ಆನಂದಾಭಿವೃದ್ಧಿಗೆ ಕಾರಣವು. (ಶ್ರೀಹರಿಯಲ್ಲಿಯೇ ಆಸಕ್ತವಾದ ಬುದ್ಧಿಯು ಶಮವು. ಶ್ರೀಹರಿಯಲ್ಲಿ ಮನಸ್ಸನ್ನು ಚೆನ್ನಾಗಿ ಇಡುವುದು ಸಮಾಧಿಯು. ಇಂತಹ ಧ್ಯಾನಕ್ಕೆ ವಿರೋಧವಿಲ್ಲದ ಹಾಗೆ ಪಾಠಪ್ರವಚನ ಜಪ ಪೂಜಾ ಮೊದಲಾದ ಕರ್ಮಗಳನ್ನು ಮಾಡಬೇಕು) (೬) (ಜ್ಞಾನಿಗಳಿಗೆ ಧ್ಯಾನವೇ ಆನಂದಾಭಿವೃದ್ಧಿಗೆ ಮುಖ್ಯ ಕಾರಣವೆಂದಾದರೆ–ಅದನ್ನೇ ಜ್ಞಾನಿಗಳು ಏಕೆ ಮಾಡುವುದಿಲ್ಲ. ಪಾಠಪ್ರವಚನಾದಿಗಳಲ್ಲಿ ಏಕೆ ಪ್ರವರ್ತಿಸುತ್ತಾರೆ ಎಂದರೆ–) ಆದಾಗ್ಯೂ ಯಾವಾಗ ಭೋಗಿಸಲಿಕ್ಕೆ ಯೋಗ್ಯವಾದ ಪ್ರತಿಬಂಧಕವಾದ ಪ್ರಾರಬ್ಧಕರ್ಮವು ಮುಗಿಯುತ್ತದೋ, ಆವಾಗಲೇ ಚೆನ್ನಾಗಿ ಅಸಂಪ್ರಜ್ಞಾತ ಸಮಾಧಿಯುಂಟಾಗುತ್ತದೆ ಬೇರೆ ಕಾಲದಲ್ಲಿ (ಅಂದರೆ ಚೆನ್ನಾಗಿ ಸಮಾಧಿಗೆ ಪ್ರತಿಬಂಧಕ ಪ್ರಾರಬ್ಧವಾದ ಕರ್ಮವು ಇರುವ ಕಾಲದಲ್ಲಿ) ಶ್ರೀಭಗವಂತನ ಚರಿತ್ರೆ ಜಪ ಪೂಜಾ ಮೊದಲಾದವುಗಳನ್ನು ಹೇಳುತ್ತಾ ಇರುತ್ತಾರೆ (೭) (ಈ ವಿಷಯದಲ್ಲಿ ಆಗಮಸಮ್ಮತಿಯನ್ನು ಹೇಳುತ್ತಾರೆ—) ಆ ಪ್ರಮೇಯವು ಹೇಳಲ್ಪಟ್ಟಿದೆ. ಎಲೋ ಶ್ರೀಹರಿಯೇ ಯಾರು ನಿನ್ನನ್ನು ಸಾಕ್ಷಾತ್ಕರಿಸುತ್ತಾರೋ, ಅವರೇ ಮುಖ್ಯವಾಗಿ ಮೋಕ್ಷಸುಖವುಳ್ಳವರು. ಅಂತಹ ಅಪರೋಕ್ಷಜ್ಞಾನಿಗಳಿಗೇನೇ ಪ್ರಾರಬ್ಧಕರ್ಮವು ಮುಗಿಯುವ

ಕಾಲದಲ್ಲಿ ಧ್ಯಾನವು ಚೆನ್ನಾಗಿ ಆಗುತ್ತದೆ. ಶ್ರೀಹರಿಯ ಭಕ್ತರಾದ, ಶ್ರೀಹರಿಯಲ್ಲಿಯೇ ಆಸಕ್ತರ ಮಹಾನುಭಾವರು ಭೋಗಿಸಲಿಕ್ಕೆ ಯೋಗ್ಯವಾದ ಪ್ರಾರಬ್ಧಕರ್ಮವು ಕ್ಷೀಣವಾಗದಿರಲು (ಪ್ರಾರಬ್ಧಕ ವಿರುವಾಗ) ಜಪಪೂಜಾದಿಗಳನ್ನು ಮಾಡುತ್ತಾ ಶ್ರೀಹರಿಯ ಚರಿತ್ರೆಗಳನ್ನು ಹೇಳುತ್ತಾ ಇರುತ್ತಾ (ಅಂದರೆ ಕಾಲವನ್ನು ಕಳೆಯುತ್ತಾರೆ) ॥ ೩

ಪೀ-ಆರುರುಕ್ಷೋಃ ಎಂಬ ಈ ಶ್ಲೋಕದಲ್ಲಿದ್ದ ಯೋಗಾರೂಢಪದಕ್ಕೆ ಅರ್ಥ ಹೇಳುತ್ತಾರೆ—

**ಶಾ ॥ (೧) ಸಂಪೂರ್ಣೋಪಾಯೋ ಯೋಗಾರೂಢಃ । ನಾನಾಜನಸ್ಯ ಶುಶ್ರೂಷಾಕರ್ಮ ಖ್ಯಾ ಕರವನ್ನಿತೇಃ । ಯೋಗಾರ್ಥಿನಾ ತು ಸಾ ಕಾರ್ಯಾ ಯೋಗಸ್ಥೇನ ಹ ಸ್ಥಿತಿಃ ॥ (೨) ತೇನಾಪಿ ಸ್ವೋತ್ತಮಾನಾಂ ತು ಕಾರ್ಯಾಽನ್ಯೈರಖಿಲೇಷ್ವಪಿ । ಶಕ್ತಿ ಕರಣೀಯೇತಿ ವಿಶೇಷೋಽಸಿದ್ಧಸಿದ್ಧಯೋಃ ॥ (೩) ಪ್ರಾಪ್ತೋಪಾಯಸ್ತು ಸಿದ್ಧಃ ಸ್ಯಾ ಪ್ರೇಪ್ಸುಃ ಸಾಧಕ ಉಚ್ಯತೇ । ತಸ್ಯ ಪ್ರಾಣ್ಯುಪಕಾರೇಣ ಸಂತುಷ್ಟೋ ಭವತೀಶ್ವರ (೪) ಸಿದ್ಧೋಪಾಯೇನ ವಿಷ್ಣೋಸ್ತು ಧ್ಯಾನವ್ಯಾಖ್ಯಾರ್ಚನಾದಿಕಂ । ಕಾರ್ಯ ನಾನ್ಯತ್ತಸ್ಯ ತೇನ ತುಷ್ಟೋ ಭವತಿ ಕೇಶವ ಇತಿ ಪ್ರವೃತ್ತವಚನಾನ್ನ ವಿರೋಧಃ (೫) ಶಮೋ ಮನ್ನಿಷ್ಠತಾ ಬುದ್ಧೇರ್ದಮ ಇಂದ್ರಿಯನಿಗ್ರಹ ಇತಿ ಭಾಗವತೇ ॥**

ಅ ॥ (೧) ಯೋಗಾರೂಢಃ=ಮೋಕ್ಷಕ್ಕೆ ಸಂಪೂರ್ಣಸಾಧನವಾದ ಅಪರೋಕ್ಷಜ್ಞಾನವುಳ್ಳವ (ಅಪರೋಕ್ಷಜ್ಞಾನಾರ್ಥಿಗೆ ಕರ್ಮವು ಆವಶ್ಯಕವೆಂದು ಹೇಳಿ ಅಪರೋಕ್ಷಜ್ಞಾನವುಳ್ಳವನಿಗೆ ಕರ್ಮವು ಬೇ ವೆಂದು ಹೇಳುತ್ತದೆ ಅಂತೂ ನ ನಿರಗ್ನಿರ್ನಚಾಕ್ರಿಯಃ ಇತ್ಯಾದಿಗಳಲ್ಲಿ ಕ್ರಿಯೆ ಇದೆ ಎಂದು ಹೇ ಪ್ರಮಾಣಗಳಿಂದ ವಿರೋಧವು ಬರುವುದೆಂದರೆ-)ಯೋಗಾರ್ಥಿಯು ಉತ್ತಮ ಮಧ್ಯಮ ಅಧಮ ರೂಪ ನಾನಾಜನರ ಸೇವಾರೂಪವಾದ ಕರ್ಮವನ್ನು ರಾಜಾದಿಗಳಿಗೆ ಕಪ್ಪ ಕೊಡುವಂತೆ ಅವಶ್ಯವಾಗಿ ಪ್ರ ವಾಗಿರುವುದರಿಂದ ಮಾಡಬೇಕು ಯೋಗಸ್ಥನು (ಅಪರೋಕ್ಷಜ್ಞಾನಿಯು) ಶ್ರೀಪರಮಾತ್ಮನಲ್ಲಿ ಸರ್ವ ಮನಸ್ಸನ್ನು ಇಡಬೇಕು. (ಅಂದರೆ ಶ್ರೀಹರಿಯ ಧ್ಯಾನಾದಿಗಳನ್ನು ಸರ್ವದಾ ಮಾಡುತ್ತಾ ಇರಬೇ (೨) (ಯೋಗಸ್ಥನೂ ನಾನಾಜನರ ಸೇವೆ ಮಾಡುವುದಾದರೆ ಯೋಗಾರ್ಥಿಗೂ ಯೋಗಸ್ಥನಿಗೂ ವಿ ವೇನು? ಎಂದರೆ-) ಯೋಗಸ್ಥನು ತನಗಿಂತ ಉತ್ತಮರ ಸೇವೆಯನ್ನು ಮಾತ್ರ ಮಾಡಬೇಕು ಯೋ ರ್ಥಿಗಳು ಎಲ್ಲರ ಸೇವೆಯನ್ನೂ ಶಕ್ತ್ಯನುಸಾರ ಮಾಡಬೇಕು ಹೀಗೆ ಅಸಿದ್ಧಸಿದ್ಧರಿಗೆ ವಿಶೇಷವನ್ನು ತ ಬೇಕು (೩) (ಅಸಿದ್ಧನು ಯಾರು? ಸಿದ್ಧನು ಯಾರು? ಎಂದರೆ—) ಮೋಕ್ಷಕ್ಕೆ ಸಾಧನವಾದ ಅಪರೋ ಜ್ಞಾನವನ್ನು ಹೊಂದಿದವನು ಸಿದ್ಧನೆನಿಸುವನು. ಅಪರೋಕ್ಷಜ್ಞಾನವನ್ನು ಹೊಂದಲಿಚ್ಛಿಸುವ ಅಸಿದ್ಧನೆನಿಸುತ್ತಾನೆ. ಸಾಧಕನು (ಅಪರೋಕ್ಷಜ್ಞಾನವನ್ನು ಹೊಂದಲಿಚ್ಛಿಸುವವನು) ಪ್ರಾಣಿಗ ಉಪಕಾರ ಮಾಡಿದುದರಿಂದ ಶ್ರೀಹರಿಯು ಆತನಿಗೆ ಸಂತುಷ್ಟನಾಗುತ್ತಾನೆ. ಅಪರೋಕ್ಷಜ್ಞಾನಿ ಶ್ರೀವಿಷ್ಣುವಿನ ಧ್ಯಾನ ಪಾಠಪ್ರವಚನ ಪೂಜಾದಿಗಳನ್ನು ಮಾಡಬೇಕು. ಮಧ್ಯಮ ಅಧಮ ರ ಸೇವಾದಿಗಳನ್ನು ಮಾಡುವುದು ಬೇಡ. ಅಪರೋಕ್ಷಜ್ಞಾನಿಯು ಮಾಡುವ ಧ್ಯಾನಾದಿಗಳಿಂದ ಶ್ರೀಹರಿ ಸಂತುಷ್ಟನಾಗುತ್ತಾನೆ (ಅದರಿಂದ ಮೋಕ್ಷದಲ್ಲಿ ಆನಂದಾತಿಶಯವುಂಟಾಗುತ್ತದೆ.) ಹೀಗೆ ಪ್ರ ವೆಂಬುವ ಗ್ರಂಥದಲ್ಲಿ ಹೇಳಿದುದರಿಂದ ವಿರೋಧವಿಲ್ಲ. (ಹೇಗೆಂದರೆ (1) ಕರ್ಮಪದದಿಂದ ನಾ ಜನರ ಸೇವಾದಿರೂಪವಾದ ಕರ್ಮವು ಹೇಳಲ್ಪಡುತ್ತದೆ ಶಮಪದದಿಂದ ಮಧ್ಯಮಾಧಮಜನರ ಸೆ ಭಾವವೂ ಭಗವದ್ಧ್ಯಾನಾದಿಗಳೂ ಹೇಳಲ್ಪಡುತ್ತವೆ ಆದಕಾರಣ ಪೂರ್ವೋತ್ತರ ವಿರೋಧವಿಲ್ಲ.

(ಶಮಪದವು ಶ್ರೀವಿಷ್ಣುವಿನ ಧ್ಯಾನಾದಿಗಳನ್ನು ಹೇಳುತ್ತದೆಂಬುವಲ್ಲಿ ಸ್ಪಷ್ಟ ಸ್ಮೃತಿರೂಪ ಪ್ರಮಾಣವನ್ನು ಹೇಳುತ್ತಾರೆ—) ನನ್ನಲ್ಲಿಯೇ (ಶ್ರೀಹರಿಯಲ್ಲಿಯೇ) ಆಸಕ್ತವಾದ ಬುದ್ಧಿಯು (ಧ್ಯಾನವು) ಶಮವೆನಿಸುತ್ತದೆ. ಎಲ್ಲಾ ಇಂದ್ರಿಯಗಳನ್ನು ತನ್ನ ವಶಪಡಿಸಿಕೊಳ್ಳುವುದು ದಮವೆನಿಸುತ್ತದೆ, ಎಂದು ಭಾಗವತದಲ್ಲಿದೆ. ॥ ೩ ॥

ಪೀ—ಯೋಗಾರೂಢನೆನಿಸಿದ ಅಪರೋಕ್ಷಜ್ಞಾನಿಗೆ ಲಕ್ಷಣವನ್ನು ಹೇಳುತ್ತಾರೆ—

**ಗೀ ॥ ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।**
**ಸರ್ವಸಂಕಲ್ಪಸನ್ನ್ಯಾಸೀ ಯೋಗಾರೂಢಸ್ತದೋಚ್ಯತೇ ॥ ೪ ॥**

ಅ ॥ ಯದಾ=ಯಾವಕಾಲದಲ್ಲಿ, ಇಂದ್ರಿಯಾರ್ಥೇಷು=ಶ್ರೋತ್ರ ಮೊದಲಾದ ಇಂದ್ರಿಯಗಳಿಗೆ, ಗೋಚರಗಳಾದ ಶಬ್ದ ಸ್ಪರ್ಶ ಮೊದಲಾದ ವಿಷಯಗಳಲ್ಲಿಯೂ, ಕರ್ಮಸು ಚ=ಕರ್ಮಗಳಲ್ಲಿಯೂ ಕೂಡ, (ಪ್ರಯತ್ನವಿಲ್ಲದಿದ್ದರೂ) ನಾನುಷಜ್ಜತೇ=ಸಂಬದ್ಧನಾಗುವುದಿಲ್ಲವೋ, ಸರ್ವಸಂಕಲ್ಪ ಸನ್ನ್ಯಾಸೀ=ಸಮಸ್ತಕರ್ಮಗಳಲ್ಲಿ ಇಂತಹ ಫಲಕ್ಕಾಗಿ ಇಂತಹ ಕರ್ಮವನ್ನು ಮಾಡುತ್ತೇನೆಂಬುವ ಸಂಕಲ್ಪವನ್ನು ಬಿಟ್ಟವನಾಗಿ ಕರ್ಮಗಳಲ್ಲಿ ಸಂಬದ್ಧನಾಗುವುದಿಲ್ಲವೋ ತದಾ=ಆಗ, ಯೋಗಾರೂಢ=ಯೋಗಾರೂಢನೆಂದು (ಅಪರೋಕ್ಷಜ್ಞಾನಿಯೆಂದು) ಉಚ್ಯತೇ=ಹೇಳಿಸಿಕೊಳ್ಳಲ್ಪಡುತ್ತಾನೆ.

ವಿ ॥ (1) ಕರ್ಮಗಳಲ್ಲಿ ಸಂಕಲ್ಪತ್ಯಾಗವೆಂದರೆ— ನನ್ನದೆಂಬ ಅಭಿಮಾನವನ್ನು ಬಿಟ್ಟು ಸಂಕಲ್ಪ ಕ್ರಿಯಾದಿಗಳೆಲ್ಲವೂ ಶ್ರೀಹರಿಯ ಅಧೀನವೇ ಎಂದು ತಿಳಿದುಕೊಳ್ಳುವಿಕೆ. (2) ಏವಂಚ ಸಂಕಲ್ಪಾದಿಗಳೆಲ್ಲವೂ ಶ್ರೀಹರಿಯ ಅಧೀನವೇ ಎಂಬುವ ಜ್ಞಾನದಿಂದ ಕರ್ಮಗಳಲ್ಲಿ ಆಸಕ್ತಿಯಿಲ್ಲದವನಾಗಿ ಪ್ರಯತ್ನಪಡದೆ ಶಬ್ದ ಸ್ಪರ್ಶ ಮೊದಲಾದ ವಿಷಯಗಳಲ್ಲಿ ಆಸಕ್ತಿಯಿಲ್ಲದಿರುವಿಕೆಯು ಯೋಗಾರೂಢನ ಲಕ್ಷಣವು. ॥ ೪ ॥

**ಭಾ ॥ (೧) ಯೋಗಾರೂಢಸ್ಯ ಲಕ್ಷಣಮಾಹ । ಯದೇತಿ ॥ (೨) ಸಮ್ಯಗನನುಷಂಗಸ್ತಸ್ಯೈವ ಭವತಿ ॥ (೩) ಉಕ್ತಂ ಚ । ಸ್ವತೋ ದೋಷಲಯೋ ದೃಷ್ಟ್ವಾ ತ್ವಿತರೇಷಾಂ ಪ್ರಯತ್ನತ ಇತಿ ॥ ೪ ॥**

ಅ ॥ (೧) ಯದಾ ಎಂಬುವ ಶ್ಲೋಕದಿಂದ ಅಪರೋಕ್ಷಜ್ಞಾನಿಗೆ ಲಕ್ಷಣವನ್ನು ಹೇಳುತ್ತಾರೆ (೨) (ಅಪರೋಕ್ಷಜ್ಞಾನಿಗೆ ಹೇಳಿದ ಲಕ್ಷಣವು ಅಪರೋಕ್ಷಜ್ಞಾನಾರ್ಥಿಯಲ್ಲಿಯೂ ಇದೆ ಎಂದರೆ—)ಪ್ರಯತ್ನವಿಲ್ಲದೆ ಶಬ್ದಾದಿವಿಷಯಗಳಲ್ಲಿ ಆಸಕ್ತ್ಯಭಾವವು ಅಪರೋಕ್ಷಜ್ಞಾನಿಯಲ್ಲಿರುತ್ತದೆ ಅಪರೋಕ್ಷಜ್ಞಾನವನ್ನು ಅಪೇಕ್ಷಿಸುವವನಿಗೆ ಶಬ್ದಾದಿವಿಷಯಗಳಲ್ಲಿ ಆಸಕ್ತ್ಯಭಾವವು ಪ್ರಯತ್ನಸಾಧ್ಯವಾಗಿರುತ್ತದೆ ಹೀಗೆ ವೈಷಮ್ಯವು ಇದೆ) (೩) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ಯೋಗಾರೂಢನಿಗೆ ಶ್ರೀಪರಮಾತ್ಮನನ್ನು ನೋಡಿದೊಡನೆ ಪ್ರಯತ್ನವಿಲ್ಲದೆ ದೋಷಗಳು ನಾಶ 'ಹೊಂದುತ್ತವೆ (ಅಂದರೆ ವಿಷಯಗಳಲ್ಲಿ ಇಚ್ಛೆಯು ಇಲ್ಲವೆಂದಾಗುತ್ತದೆ.) ಅಪರೋಕ್ಷಜ್ಞಾನವನ್ನು ಹೊಂದಲಿಚ್ಛಿಸುವವರಿಗೆ ಪ್ರಯತ್ನದಿಂದ ವಿಷಯಗಳಲ್ಲಿ ಇಚ್ಛೆಯು ನಿವೃತ್ತವಾಗುತ್ತದೆ ಎಂದು. ॥ ೪ ॥

ಪೀ—ನ ಕರ್ಮಸ್ವನುಷಜ್ಜತೇ ಎಂದು ಜ್ಞಾನಿಗಳಿಗೆ ಕರ್ಮವಿಲ್ಲವೆಂದು ಹೇಳುತ್ತದೆ. ನ ಚಾಕ್ರಿಯಃ ಎಂಬುವಲ್ಲಿ ಕರ್ಮವಿದೆ, ಎಂದು ಹೇಳುತ್ತದೆ. ಪರಸ್ಪರವಿರೋಧವು ಎಂದರೆ—

ತಾ ॥ (೧) ಕಥಂ ಸಾನುಷಜ್ಜತೇ ಸರ್ವಸಂಕಲ್ಪಸನ್ನ್ಯಾಸೀ । ಮಯಿ ಸರ್ವಾಣಿ ಕರ್ಮಾ-
ಣೀತ್ಯುಕ್ತತ್ವಾತ್ ॥ (೨) ಮದಧೀನಮಿದಂ ಜ್ಞಾತ್ವಾ ಮತ್ಸನ್ನ್ಯಾಸೀತಿ ಚೋಚ್ಯತ
ಇತಿ ಚ ॥ ೪ ॥

ಅ ॥ (೧) ಜ್ಞಾನಿಯು ಕರ್ಮಗಳಲ್ಲಿ ಹೇಗೆ ಸಂಬದ್ಧನಾಗುವುದಿಲ್ಲವೆಂದರೆ **ಮಯಿ ಸರ್ವಾಣಿ ಕರ್ಮಾಣಿ** ಎಲ್ಲಾ ಕರ್ಮಗಳನ್ನು ನನ್ನಲ್ಲಿಯೇ (ಶ್ರೀಕೃಷ್ಣನಲ್ಲಿಯೇ) ಸಮರ್ಪಿಸಿ ಎಂದು ಹೇಳಿದ್ದರಿಂದ ಸಂಕಲ್ಪಾದಿಗಳೆಲ್ಲವೂ ಶ್ರೀಹರಿಯ ಅಧೀನವೇ ಎಂದು ತಿಳಿದುಕೊಳ್ಳುವುದು. **ಸಂಕಲ್ಪಸನ್ನ್ಯಾಸ** ಎಂಬ ಪದದ ಅರ್ಥವು. (ಸಂಕಲ್ಪಸ್ವರೂಪ ತ್ಯಾಗವೆಂದರ್ಥವಲ್ಲ) (೩) (ಈ ವಿಷಯದಲ್ಲಿ ಪ್ರಮಾಣಾಂತರ ವನ್ನು ಹೇಳುತ್ತಾರೆ—) ಎಲ್ಲವೂ ನನ್ನ ಅಧೀನವೇ, ಎಂದು ತಿಳಿದವನು ಮತ್ಸನ್ನ್ಯಾಸೀ ಎನಿಸಿಕೊಳ್ಳು ತ್ತಾನೆ ಎಂದೂ ಇದೆ. ॥ ೪ ॥

ಪೀ—ಯಾವ ಧ್ಯಾನಯೋಗಕ್ಕೆ ಕಾಮಾದಿಗಳ ಪರಿತ್ಯಾಗರೂಪವಾದ ಸನ್ನ್ಯಾಸದಿಂದ ಕೂಡಿದ ಆಯಾಯ ವರ್ಣಾಶ್ರಮಗಳಿಗೆ ಉಚಿತವಾದ ಕರ್ಮಗಳನ್ನು ಮಾಡುವವನೇ ಅಧಿಕಾರಿಯೆಂದು ಹೇಳಿ ಯದೋ, ಮತ್ತು ಅಪರೋಕ್ಷಜ್ಞಾನವು ಹುಟ್ಟುವ ಪರ್ಯಂತ ಕರ್ಮಗಳನ್ನು ಮಾಡಬೇಕೆಂದೂ ಹೇಳಿ ಯದೋ, ಅಂತಹ ಧ್ಯಾನಯೋಗವನ್ನೇ ಪ್ರಯತ್ನದಿಂದ ಮಾಡಬೇಕೆನ್ನುತ್ತಾರೆ—

ಗೀ ॥ ಉದ್ಧರೇದಾತ್ಮನಾಽಽತ್ಮಾನಂ ನಾತ್ಮಾನಮವಸಾದಯೇತ್ ।
ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥ ೫ ॥

ಅ ॥ (ಮನುಷ್ಯನು) ಆತ್ಮನಾ=ಮನಸ್ಸಿನಿಂದ ಅಥವಾ ಶ್ರೀಹರಿಯ ಪ್ರಸಾದದಿಂದ, ಆತ್ಮಾನಂ= ತನ್ನನ್ನು (ಜೀವನನ್ನು), ಉದ್ಧರೇತ್=ಮೋಕ್ಷಾದಿ ಪುರುಷಾರ್ಥಗಳಿಗೆ ಭಾಗಿಯನ್ನಾಗಿ ಮಾಡಿಕೊಳ್ಳ ತಕ್ಕದು. ಆತ್ಮಾನಂ=ತನ್ನನ್ನು, ನಾವಸಾದಯೇತ್=ದುಃಖವನ್ನು ಹೊಂದುವಂತೆ ಮಾಡಿಕೊಳ್ಳಬಾರದು. ಹಿ=ಏಕೆಂದರೆ, ಆತ್ಮನಃ=ತನಗೆ (ಜೀವನಿಗೆ), ಆತ್ಮೈವ=ಮನಸ್ಸೇ, ಅಥವಾ ಶ್ರೀಪರಮಾತ್ಮನೇ, ಬಂಧುಃ= ಉಪಕಾರಿಯು, ಆತ್ಮನಃ=ತನಗೆ, ಆತ್ಮೈವ=ಮನಸ್ಸೇ, ಅಥವಾ ಶ್ರೀಹರಿಯೇ, ರಿಪುಃ=ಶತ್ರುಸ್ಥಾನೀ ಯವು ಹಿ=ಪ್ರಸಿದ್ಧವು. ॥ ೫ ॥

ಭಾ ॥ ಸ ಚ ಯೋಗಾರೋಹಃ ಪ್ರಯತ್ನೇನ ಕರ್ತವ್ಯ ಇತ್ಯಾಹ । ಉದ್ಧರೇದಿತ್ಯಾದಿನಾ ॥ ೫ ॥

ಅ ॥ ಆ ಧ್ಯಾನವು ಪ್ರಯತ್ನದಿಂದಲೇ ಆಗಬೇಕೆಂದು **ಉದ್ಧರೇತ್** ಇತ್ಯಾದಿಗಳಿಂದ ಹೇಳುತ್ತಾರೆ. ॥ ೫ ॥

ಪೀ—ಎಂತಹ ಜೀವನಿಗೆ ಎಂತಹ ಮನಸ್ಸು ಬಂಧುವೂ ಶತ್ರುವೂ ಆಗುತ್ತದೆ ಎಂದರೆ—

ಗೀ ॥ ಬಂಧುರಾತ್ಮಾಽಽತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।
ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥ ೬ ॥

ಅ ॥ ಯೇನ=ಯಾವ, ಆತ್ಮನಾ=ಜೀವನಿಂದ, ಅಥವಾ ಬುದ್ಧಿಯಿಂದ ಅಂದರೆ ಭಕ್ತಿಯಿಂದ, ಆತ್ಮಾ= ಮನಸ್ಸು, ಜಿತಃ=ನಿಗ್ರಹಿಸಲ್ಪಟ್ಟದೋ, ತಸ್ಯ ಆತ್ಮನಃ=ಆ ಜೀವನಿಗೆ, ಆತ್ಮಾ=ನಿಗ್ರಹಿಸಲ್ಪಟ್ಟ ಮನಸ್ಸು,

ಅಥವಾ ಪ್ರಸನ್ನನಾದ ಶ್ರೀಹರಿಯು, ಬಂಧುರೇವ=ಉಪಕಾರಿಯೇ ಆಗಿದ್ದಾನೆ (ಭಗವಂತನ ಧ್ಯಾನವನ್ನು ಮಾಡುವಂತೆ ಮಾಡಿ ಮೋಕ್ಷವನ್ನು ಹೊಂದಿಸಿಕೊಡಲಿಕ್ಕೆ ಕಾರಣವು.) ಅನಾತ್ಮನಸ್ತು=ಮನಸ್ಸನ್ನು ವಶಪಡಿಸಿಕೊಳ್ಳದಿದ್ದ ಜೀವನಿಗೆ, ಭಕ್ತಿಯ ಸಾಮರ್ಥ್ಯದಿಂದ ಭಗವತ್ಸ್ವರೂಪವನ್ನು ವಶೀಕರಿಸದಿರುವ ಮನುಷ್ಯನಿಗೆ, ಆತ್ಮೈವ=ಮನಸ್ಸೇ ಅಥವಾ ಶ್ರೀಹರಿಯೇ, ಶತ್ರುವತ್=ಪ್ರಸಿದ್ಧನಾದ ಶತ್ರುವಿನಂತೆಯೇ, ಶತ್ರುತ್ವೇ=ಅಪಕಾರಮಾಡುವ ವಿಷಯದಲ್ಲಿಯೇ, ವರ್ತೇತ=ಇರುತ್ತದೆ ಇರುತ್ತಾನೆ (ಅದಕಾರಣ ಮನಸ್ಸನ್ನು ವಶಪಡಿಸಿಕೊಂಡು ಧ್ಯಾನಯೋಗವನ್ನು ಮಾಡಬೇಕು ) ॥ ೬ ॥

ಭಾ ॥ (೧) ಕಸ್ಯ ಬಂಧುರಾತ್ಮೇತ್ಯಾಹ । ಬಂಧುರಾತ್ಮೇತಿ ॥ (೨) ಆತ್ಮಾ ಮನಃ । ಆತ್ಮನೋ ಜೀವಸ್ಯ ಆತ್ಮನಾ ಮನಸಾ । ಆತ್ಮಾನಂ ಜೀವಂ । ಆತ್ಮೈವ ಮನಃ । ಆತ್ಮನಾ ಬುದ್ಧ್ಯಾ । ಜೀವೇನೈವ ವಾ । ಸ ಹಿ ಬುದ್ಧ್ಯಾ ವಿಜಯತಿ ॥ (೩) ಉಕ್ತಂ ಚ । ಮನಃ ಪರಂ ಕಾರಣಮಾಮನಂತಿ ॥ (೪) ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ । ಉದ್ಧರೇನ್ಮನಸಾ ಜೀವಂ ನ ಜೀವಮವಸಾದಯೇತ್ ॥ (೫) ಜೀವಸ್ಯ ಬಂಧುಃ ಶತ್ರುಶ್ಚ ಮನ ಏವ ನ ಸಂಶಯಃ । ಜೀವೇನ ಬುದ್ಧ್ಯಾ ಹಿ ಯದಾತ್ಮನೋ ಜಿತಂ ತದಾ ಬಂಧುಃ ಶತ್ರುರನ್ಯತ್ರ ಚಾಸ್ಯ । ತತೋ ಜಯೇದ್ಬುದ್ಧಿಬಲೋ ನರಸ್ತದ್ದೇವೇ ಚ ಭಕ್ತ್ಯಾ ಮಧುಕೈಟಭಾರಾವಿತ್ಯಾದಿ ಬ್ರಹ್ಮವೈವರ್ತೇ ॥ (೬) ಅನಾತ್ಮನಃ ಅಜಿತಾತ್ಮನಃ ಪುರುಷಸ್ಯ । ಅಜಿತಮನಸ್ಕಸ್ಯ । ಸದಪಿ ಮನೋಽನುಪಕಾರೀತ್ಯಸಾತ್ಮಾ ॥ (೭) ಸನ್ನಪಿ ಭೃತ್ಯೋ ಯಸ್ಯ ನ ಭೃತ್ಯಪದೇ ವರ್ತತೇ ಸ ಹ್ಯಭೃತ್ಯಃ । ತಸ್ಯಾತ್ಮಾ ಮನ ಏವ ಶತ್ರುವಚ್ಛತ್ರುತ್ವೇ ವರ್ತತೇ ॥ ೬ ॥

ಅ ॥ (೧) ಆತ್ಮನು ಮನಸ್ಸು, ಯಾರಿಗೆ ಬಂಧುವು ಶತ್ರುವು ಎಂದರೆ ಬಂಧುರಾತ್ಮಾ ಎಂಬುದರಿಂದ ಸಮಾಧಾನವನ್ನು ಹೇಳುತ್ತಾರೆ (೨) (ಆತ್ಮ ಶಬ್ದಕ್ಕೆ ಅನೇಕಾರ್ಥಗಳು ಇದ್ದುದರಿಂದ ಅದರ ಅರ್ಥವನ್ನು ಹೇಳುತ್ತಾರೆ—) (೫, ೬ನೇ ಶ್ಲೋಕಗಳಲ್ಲಿದ್ದುದು ) ಆತ್ಮಾ=ಮನಸ್ಸು, ಆತ್ಮನಃ=ಜೀವನಿಗೆ, (೫ನೇ ಶ್ಲೋಕದಲ್ಲಿದ್ದುದು ) ಆತ್ಮನಾ=ಮನಸ್ಸಿನಿಂದ, ಆತ್ಮಾನಂ=ಜೀವನನ್ನು, (ಯೇನಾತ್ಮೈವಾತ್ಮನಾ ಜಿತಃ ಎಂಬುದರಲ್ಲಿದ್ದ ಆತ್ಮಶಬ್ದಗಳಿಗೆ ಅರ್ಥ ಹೇಳುತ್ತಾರೆ—) ಆತ್ಮೈವ=ಮನಸ್ಸು, ಆತ್ಮನಾ=ಬುದ್ಧಿಯಿಂದ, ಅಥವಾ ಜೀವನಿಂದ ಜೀವನು ಬುದ್ಧಿಯಿಂದ ಮನಸ್ಸನ್ನು ಸ್ವಾಧೀನೀಕರಿಸಿಕೊಳ್ಳುತ್ತಾನೆ (೩) (ಹಿಂದೆ ಹೇಳಿದ ಅರ್ಥದಲ್ಲಿ ಪ್ರಮಾಣಗಳನ್ನು ಹೇಳುತ್ತಾರೆ—) ನಿಗೃಹೀತವಾದ ಮನಸ್ಸನ್ನು ಮೋಕ್ಷಕ್ಕೆ ಮುಖ್ಯವಾಗಿ ಕಾರಣವನ್ನಾಗಿ ಹೇಳುತ್ತಾರೆ. (೪) ಮನುಷ್ಯರಿಗೆ ಮನಸ್ಸೇ ಸಂಸಾರಬಂಧಕ್ಕೂ. ಸ್ವರೂಪಾನಂದಾವಿರ್ಭಾವರೂಪ ಮೋಕ್ಷಕ್ಕೂ ಕಾರಣವು ನಿಗ್ರಹಿಸಲ್ಪಡದಿರುವ ಮನಸ್ಸಿನಿಂದ ಸಂಸಾರಬಂಧವು. ನಿಗ್ರಹೀತವಾದ ಮನಸ್ಸಿನಿಂದ ಮೋಕ್ಷವು ಪ್ರಶಸ್ತ ಮನಸ್ಸಿನಿಂದ ಜೀವನನ್ನು ಉದ್ಧರಿಸಬೇಕು (ಜೀವನನ್ನು ಮೋಕ್ಷಕ್ಕೆ ಹೋಗುವಂತೆ ಮಾಡಬೇಕು ) ಜೀವನನ್ನು ದುಃಖಭಾಗಿಯನ್ನಾಗಿ ಮಾಡಬಾರದು (೫) ಜೀವನಿಗೆ ನಿಗೃಹೀತ ಮನಸ್ಸೇ ಉಪಕಾರಿಯು. ನಿಗೃಹೀತವಾಗದಿರುವ ಮನಸ್ಸೇ ಶತ್ರುವು ಆಗಿರುತ್ತದೆ. ಈ ವಿಷಯದಲ್ಲಿ ಸಂಶಯುವಿಲ್ಲ. ಜೀವನಿಂದ ಮನಸ್ಸು ಯಾವಾಗ ಭಕ್ತಿಯಿಂದ ವಶೀಕೃತವಾಗುತ್ತದೋ, ಆಗ ಬಂಧುವು (ಅಂದರೆ ಮೋಕ್ಷಸಾಧನವು) ಆಗ ಬಂಧುವು (ಉಪಕಾರಿಯು) ವಶೀಕೃತವಾಗದಿದ್ದರೆ ಮನಸ್ಸು ಜೀವನಿಗೆ ಶತ್ರುವು. (ಸಂಸಾರಕ್ಕೆ ಕಾರಣವು) ಆದಕಾರಣ ಬುದ್ಧಿವಂತನಾದ ಮನುಷ್ಯನು ಮಧುಕೈಟಭರಿಗೆ ಶತ್ರುವಾದ ಶ್ರೀಹರಿಯಲ್ಲಿ ಸುದೃಢ ಸ್ನೇಹದಿಂದ ಆ ಮನಸ್ಸನ್ನು ತನ್ನ ವಶದಲ್ಲಿ ಇಟ್ಟು

ಕೊಳ್ಳಬೇಕು, ಇತ್ಯಾದಿ ವಿಷಯವು ಬ್ರಹ್ಮವೈವರ್ತದಲ್ಲಿದೆ. (೬) ಅನಾತ್ಮನಃ— ಜಯಿಸಲ್ಪಡದೆ ಇರುವ ಮನಸ್ಸುಳ್ಳ ಪುರುಷನ, ಅಂದರೆ ಮನಸ್ಸನ್ನು ಸ್ವಾಧೀನೀಕರಿಸಿಕೊಳ್ಳದಿರುವ ಪುರುಷನ ಮನಸ್ಸು ಇದ್ದರೂ ನಿಗ್ರಹೀತವಾಗದಿದ್ದರೆ ಆ ಮನಸ್ಸು ಅನುಪಕಾರಿಯು, ಆದಕಾರಣ ಮನಸ್ಸು ಇದ್ದರೂ ಇಲ್ಲದಿದ್ದಂತೆ ಆಗುವುದರಿಂದ ಜೀವವನ್ನು ಅನಾತ್ಮಾ ಎಂದು ಹೇಳಿದ್ದು. (೭) (ಈ ವಿಷಯದಲ್ಲಿ ದೃಷ್ಟಾಂತವನ್ನು ಕೊಡುತ್ತಾರೆ-) ಯಾರಿಗೆ ಭೃತ್ಯನು ಇದ್ದರೂ ಭೃತ್ಯನ ಕಾರ್ಯಗಳಾದ ಸೇವಾದಿಗಳನ್ನು ಭೃತ್ಯನಾದವನು ಮಾಡುವುದಿಲ್ಲವೋ, ಆ ಸ್ವಾಮಿಯು ಭೃತ್ಯನು ಇಲ್ಲದಿದ್ದವನೆನ್ನಿಸುತ್ತಾನೆ ವಶಪಡಿಸಿಕೊಳ್ಳದಿದ್ದ ಮನಸ್ಸುಳ್ಳ ಜೀವನಿಗೆ ಅಂತಹ ಮನಸ್ಸೇ ಪ್ರಸಿದ್ಧ ಶತ್ರುವಿನಂತೆಯೇ ಶತ್ರುಭಾವದಲ್ಲಿಯೇ ಇರುತ್ತದೆ. (ಅಂದರೆ ನರಕಾದ್ಯನರ್ಥಕ್ಕೆ ಸಾಧನವಾಗುತ್ತದೆ.) ॥ ೬ ॥

ಪೀ—ಧ್ಯಾನಕ್ಕೆ ಶ್ರೀಹರಿಯ ಪ್ರಸಾದವೇ ಮುಖ್ಯಸಾಧನವೆಂದು ಉದ್ಧರೇತ್ ಎಂಬುವ ಶ್ಲೋಕದಿಂದ ಹೇಳುತ್ತಾರೆ ಆ ಶ್ಲೋಕದಲ್ಲಿದ್ದ ಆತ್ಮಪದವು ಜೀವಾದಿಗಳನ್ನು ಮಾತ್ರ ಹೇಳುತ್ತದೆ ಶ್ರೀಪರಮಾತ್ಮನನ್ನು ಹೇಳುವುದಿಲ್ಲ, ಎಂಬೀ ಅನ್ಯಥಾಪ್ರತೀತಿಯನ್ನು ನಿರಾಕರಿಸುವುದಕ್ಕಾಗಿ ಸ್ಮೃತಿಯಿಂದಲೇ ಅದರ ಅರ್ಥವನ್ನು ಹೇಳುತ್ತಾರೆ.

ಕಾ ॥ (೧) ಉದ್ಧರೇತ್ಸೈವ ಸಂಸಾರಾಜ್ಜೀವಾತ್ಮಾನಂ ಪರಾತ್ಮನಾ । ವಿಷ್ಣುರ್ಬಂಧುಸ್ಸತಾಂ ನಿತ್ಯಂ ಪರಾತ್ಮಾ ಹ್ಯಸತಾಮರಿಃ ॥ (೨) ತತ್ಪ್ರಸಾದಜಯಾ ಭಕ್ತ್ಯಾ ಜಿತೋ ಯಸ್ಯ ವಶೇ ತ್ವಿವ । ವರ್ತತೇ ತಸ್ಯ ಮಿತ್ರಂ ಸ ತದನ್ಯಸ್ಯ ಚ ಶತ್ರುವದಿತಿ ಚ ॥ (೩) ಪರಮಾತ್ಮಾ ಸಮಾಹಿತ ಇತಿ ವಾಕ್ಯಶೇಷಾತ್(ಚ್ಚ) ॥ ೫,೬ ॥

ಅ ॥ (೧) ಪರಮಾತ್ಮಪ್ರಸಾದದಿಂದ ಸಜ್ಜೀವರು ತಮ್ಮನ್ನು ಜನನ ಮರಣರೂಪ ಸಂಸಾರದಿಂದ ಉದ್ಧರಿಸಿಕೊಳ್ಳಬೇಕು. (ಅಂದರೆ ಸಂಸಾರದಿಂದ ಬಿಡುಗಡೆಮಾಡಿಕೊಂಡು ಮೋಕ್ಷವನ್ನು ಹೊಂದುವಂತೆ ಮಾಡಿಕೊಳ್ಳಬೇಕು) ಶ್ರೀವಿಷ್ಣುವು ಸಜ್ಜನರಿಗೆ ನಿತ್ಯದಲ್ಲಿಯೂ ಬಂಧುವಾಗಿರುತ್ತಾನೆ. ಪರಮಾತ್ಮನು ದುಷ್ಟರಿಗೆ ಶತ್ರುವಾಗಿರುತ್ತಾನೆ (೨) (ಎಂತಹವರು ಸಜ್ಜನರು, ಎಂತಹವರು ಅಸಜ್ಜನರು ಎಂದರೆ—) ಶ್ರೀಹರಿಯ ಪ್ರಸಾದದಿಂದುಂಟಾದ ಭಕ್ತಿಯಿಂದ ಶ್ರೀಹರಿಯು ವಶೀಕೃತನಾಗಿ ಯಾರ ಅಧೀನದಲ್ಲಿದ್ದಾನೋ, ಆ ಶ್ರೀಹರಿಯು ಭಕ್ತಿಯಿಂದ ಶ್ರೀಪರಮಾತ್ಮನನ್ನು ವಶಪಡಿಸಿಕೊಂಡು ಪುರುಷನಿಗೆ ಮಿತ್ರನು. ಭಕ್ತಿಯಿಂದ ಪರಮಾತ್ಮನನ್ನು ವಶಪಡಿಸದಿರುವ ಪುರುಷನಿಗೆ ಆ ಶ್ರೀಹರಿಯು ಪ್ರಸಿದ್ಧನಾದ ಶತ್ರುವಿನಂತೆ. ಶತ್ರುವು (೩) (ಯಾರು ಶ್ರೀಹರಿಯನ್ನು ವಶೀಕರಿಸಿರುವನೋ ಆತನಿಗೆ ಶ್ರೀಹರಿಯು ಬಂಧುವಾಗಿ ಏನು ಮಾಡುತ್ತಾನೆಂದರೆ—) ಭಕ್ತಿಯಿಂದ ವಶೀಕೃತನಾದ ಪರಮಾತ್ಮನು ಆ ಭಕ್ತನ ಹೃದಯದಲ್ಲಿ ಚೆನ್ನಾಗಿ ಸನ್ನಿಹಿತನಾಗಿರುತ್ತಾನೆಂದು ಹೇಳಿದ್ದರಿಂದ (ಪೂರ್ವದಲ್ಲಿಯೂ ಆತ್ಮಪದದಿಂದ ಪರಮಾತ್ಮನನ್ನೇ ಇಟ್ಟುಕೊಳ್ಳಬೇಕೆಂದು ತಿಳಿಯುತ್ತದೆ) ॥ ೫, ೬ ॥

ಪೀ—ಶ್ರೀಹರಿಯನ್ನೂ ಮನಸ್ಸನ್ನೂ ಸ್ವಾಧೀನೀಕರಿಸಿಕೊಂಡರೆ ಆ ಜೀವನಿಗೆ ಮನಸ್ಸು ಬ್ರಹ್ಮ ಇವರು ಬಂಧುಗಳಾಗುತ್ತಾರೆಂದು ಹೇಳಿದೆ ಅವರು ಇಬ್ಬರು ಯಾವ ಉಪಕಾರವನ್ನು ಮಾಡಿ ಬಂಧುಗಳಾಗುತ್ತಾರೆಂದರೆ—

ಗೀ ॥ ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।
ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥ ೭ ॥

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥ ೮ ॥**

ಅ ॥ ಜಿತಾತ್ಮನಃ=ಮನಸ್ಸನ್ನು ವಶಪಡಿಸಿಕೊಂಡ ಮನುಷ್ಯನಿಗೆ, ಮತ್ತು ಭಕ್ತಿಯಿಂದ ಶ್ರೀಪರಮಾತ್ಮನನ್ನು ಒಲಿಸಿಕೊಂಡ ಮನುಷ್ಯನಿಗೆ, (ಮನಸ್ಸಿಗೆ ಶಾಂತಿಯು ಉಂಟಾಗುತ್ತದೆ, ಅಂದರೆ ಮನಸ್ಸು ವಿಷಯಗಳಲ್ಲಿ ಪ್ರವೃತ್ತಿ ಮಾಡುವುದಿಲ್ಲ) ಪ್ರಶಾಂತಸ್ಯ=ರೂಪಾದಿ ವಿಷಯಗಳಲ್ಲಿ ಓಡದಿರುವ ಮನಸ್ಸುಳ್ಳ ಪುರುಷನಿಗೆ, ಪರಮಾತ್ಮಾ=ಪರಮಾತ್ಮನು, ಸಮಾಹಿತಃ=ಹೃದಯದಲ್ಲಿ ಚೆನ್ನಾಗಿ ಸನ್ನಿಹಿತನಾಗುತ್ತಾನೆ. (ಅಂದರೆ ಧ್ಯಾನವಿಷಯನಾಗಿ ಅಪರೋಕ್ಷಜ್ಞಾನಕ್ಕೆ ವಿಷಯನಾಗುತ್ತಾನೆ) (ಯದಾ-ಹಿ ನೇಂದ್ರಿಯಾರ್ಥೇಷು ಇತ್ಯಾದಿಗಳಲ್ಲಿ ಅಪರೋಕ್ಷಜ್ಞಾನಿಗಳಿಗೆ ಲಕ್ಷಣವನ್ನು ಹೇಳಿದ್ದರೂ ತಿರುಗಿ ಇಲ್ಲಿ ಆ ಲಕ್ಷಣವನ್ನು ಸ್ಪಷ್ಟವಾಗಿ ಹೇಳುತ್ತಾರೆ—) ಜ್ಞಾನವಿಜ್ಞಾನತೃಪ್ತಾತ್ಮಾ=ವೇದ ಮೊದಲಾದವುಗಳಲ್ಲಿ ಹೇಳಿದ ಶ್ರೀವಿಷ್ಣು ಸರ್ವೋತ್ತಮತ್ವ ಮೊದಲಾದವುಗಳ ಸಾಮಾನ್ಯ ಜ್ಞಾನವು ಜ್ಞಾನವೆನಿಸುತ್ತದೆ. ಶ್ರೀವಿಷ್ಣುವಿನ ಮಾಹಾತ್ಮ್ಯೆಯ ವಿಶೇಷಜ್ಞಾನವು ವಿಜ್ಞಾನವೆನಿಸುತ್ತದೆ. ಅಥವಾ ಪರೋಕ್ಷಜ್ಞಾನವು ಜ್ಞಾನವೆನಿಸುತ್ತದೆ ಅಪರೋಕ್ಷಜ್ಞಾನವು ವಿಜ್ಞಾನವೆನಿಸುತ್ತದೆ ಅವುಗಳಿಂದ ತೃಪ್ತಿ ಹೊಂದಿದ ಮನಸ್ಸುಳ್ಳ (ಅಂದರೆ ರೂಪಾದಿವಿಷಯಗಳಲ್ಲಿ ಅಲಂಬುದ್ಧಿಯುಳ್ಳ,) ವಿಜಿತೇಂದ್ರಿಯಃ=ಚಕ್ಷುರಾದೀಂದ್ರಿಯಗಳನ್ನು ವಶಪಡಿಸಿಕೊಂಡಿರುವ, ಶೀತೋಷ್ಣಸುಖದುಃಖೇಷು=ಶೀತೋಷ್ಣ ಮೊದಲಾದ ದ್ವಂದ್ವಧರ್ಮಗಳಿಂದುಂಟಾಗುವ ಸುಖದುಃಖಗಳಲ್ಲಿಯೂ, ತಥಾ=ಹಾಗೆಯೇ, ಮಾನಾ-ಪಮಾನಯೋಃ=ಮಾನ ಅಪಮಾನಗಳಲ್ಲಿಯೂ, ಕೂಟಸ್ಥಃ=ಆಕಾಶದಂತೆಯೇ ಉತ್ಕರ್ಷಾಪಕರ್ಷರೂಪ ವಿಕಾರವಿಲ್ಲದಿರುವ, ಸಮಲೋಷ್ಟಾಶ್ಮಕಾಂಚನಃ=ಮಣ್ಣಿನ ಹೆಂಟೆ ಕಲ್ಲು ಚಿನ್ನ ಇವುಗಳನ್ನು ಒಂದೇ ರೀತಿಯಾಗಿ ತಿಳಿದುಕೊಂಡಿರುವ (ಅಂದರೆ ಮಣ್ಣಿನ ಹೆಂಟೆಯಂತೆ ಚಿನ್ನದಲ್ಲಿಯೂ ಮಮತೆಯಿಲ್ಲದಿರುವ) ಯೋಗೀ=ಧ್ಯಾನವನ್ನು ಮಾಡಿಕೊಂಡಿರುವವನು, ಯುಕ್ತಃ ಇತಿ=ಯೋಗದಿಂದ ಪರಿಪೂರ್ಣನೆಂದು (ಅಪರೋಕ್ಷಜ್ಞಾನಿಯೆಂದು) ಉಚ್ಯತೇ=ಹೇಳಲ್ಪಡುತ್ತಾನೆ ॥ ೭, ೮ ॥

**ಭಾ ॥ (೧) ಜಿತಾತ್ಮನಃ ಫಲಮಾಹ । ಜಿತಾತ್ಮನ ಇತಿ ॥ (೨) ಜಿತಾತ್ಮಾ ಹಿ ಪ್ರಶಾಂತೋ ಭವತಿ । ನ ತಸ್ಯ ಮನಃ ಪ್ರಾಯೋ ವಿಷಯೇಷು ಗಚ್ಛತಿ ॥ (೩) ತದಾ ಚ ಪರಮಾತ್ಮಾ ಸಮ್ಯಕ್ ಹೃದ್ಯಾಹಿತಃ ಸನ್ನಿಹಿತೋ ಭವತಿ । ಅಪರೋಕ್ಷಜ್ಞಾನೀ ಸ ಭವತೀತ್ಯರ್ಥಃ ॥ (೪) ಅಪರೋಕ್ಷಜ್ಞಾನಿನೋ ಲಕ್ಷಣಂ ಸ್ಪಷ್ಟಯತಿ । ಶೀತೋಷ್ಣೇತ್ಯಾದಿನಾ । ಶೀತೋಷ್ಣಾದಿಷು ಕೂಟಸ್ಥಃ ॥ (೫) ಜ್ಞಾನವಿಜ್ಞಾನತಪ್ತಾತ್ಮಾ ವಿಜಿತೇಂದ್ರಿಯ ಇತಿ ಕೂಟಸ್ಥತ್ವೇ ಹೇತುಃ ॥ ೧ ॥**

ಅ ॥ (೧) (ಉಪಕಾರ ಮಾಡಿದವನು ಬಂಧು ಎನಿಸುತ್ತಾನೆ ಮನಸ್ಸನ್ನು ಜಯಿಸಿದರೆ ಯಾವ ಉಪಕಾರವನ್ನು ಮಾಡುತ್ತದೆ ಬಂಧವಾಗುವುದು ಹೇಗೆ? ಜೀವನನ್ನುದ್ಧರಿಸುತ್ತದೆಂದರೆ – ಆ ಆತ್ಮೋದ್ಧಾರವೇ ಯಾವುದು? ಎಂದಾಶಂಕಿಸಿಕೊಂಡು) ಜಿತಾತ್ಮನಃ ಎಂಬುವ ಶ್ಲೋಕದಿಂದ ಮನಸ್ಸನ್ನು ವಶಪಡಿಸಿಕೊಂಡವನಿಗೆ ಫಲವನ್ನು ಹೇಳುತ್ತಾರೆ (೨) (ಮನಸ್ಸನ್ನು ಸ್ವಾಧೀನೀಕರಿಸಿಕೊಂಡವನಿಗೆ ಫಲ ಹೇಳಬೇಕಾದರೆ ಪ್ರಶಾಂತಸ್ಯ ಎಂಬ ಅನುವಾದವು ಏತಕ್ಕೆಂದರೆ—) ಮನಸ್ಸನ್ನು ನಿಗ್ರಹಿಸಿಕೊಂಡವನು ಶಬ್ದಾದಿವಿಷಯಗಳಲ್ಲಿ ಮನಸ್ಸು ಹೋಗದಿರುವವನಾಗುತ್ತಾನೆ ಮನಸ್ಸನ್ನು ನಿಗ್ರಹಿಸಿಕೊಂಡವನಿಗೆ ಅನಾಯಾಸದಿಂದಲೇ ಶಬ್ದಾದಿವಿಷಯಗಳಲ್ಲಿ ಪ್ರಾಯಶಃ ಮನಸ್ಸು ಹೋಗುವುದಿಲ್ಲ. (೩) ಚೆನ್ನಾಗಿ ಶಾಂತ

ಚಿತ್ತನಾದರೆ ಪರಮಾತ್ಮನು ಚೆನ್ನಾಗಿ ಆಹಿತನಾಗುತ್ತಾನೆ (ಅಂದರೆ ಹೃದಯದಲ್ಲಿ ಸನ್ನಿಹಿತನಾಗುತ್ತಾನೆ.) (ಶ್ರೀಹರಿಯು ಸರ್ವರ ಹೃದಯದಲ್ಲಿಯೂ ಸನ್ನಿಹಿತನಾಗಿರುವಾಗ ಪ್ರಶಾಂತಚಿತ್ತನಿಗೆ ಮಾತ್ರ ವಿಶೇಷವೇನ.? ಎಂದರೆ–) ಪ್ರಶಾಂತಚಿತ್ತನಾದವನು ಅಪರೋಕ್ಷಜ್ಞಾನಿಯಾಗುತ್ತಾನೆ. (೩) (ಯೋಗಾರೂಢನಿಗೆ (ಅಪರೋಕ್ಷಜ್ಞಾನಿಗೆ,) ಲಕ್ಷಣವನ್ನು ಹೇಳಿದ್ದರಿಂದ ತಿರುಗಿ ಏಕೆ ಹೇಳುವುದು ಎಂದರೆ–) ಶೀತೋಷ್ಣ ಇತ್ಯಾದಿಗಳಿಂದ ಅಪರೋಕ್ಷಜ್ಞಾನಿಯ ಲಕ್ಷಣವನ್ನು ಸ್ಪಷ್ಟೀಕರಿಸುತ್ತಾರೆ ಶೀತೋಷ್ಣಾದಿಗಳಿಂದ ಸುಖದುಃಖಾದಿಗಳು ಬಂದರೂ ಅದರಿಂದ ವಿಕಾರಹೊಂದದಿರುವವನು (ಅಂದರೆ ದ್ವಂದ್ವಸಹಿಷ್ಣುವಾಗಬೇಕು) (೪) (ಶೀತೋಷ್ಣಾದಿ ದ್ವಂದ್ವ ಸಹಿಷ್ಣುವಿಗೆ ಮನಸ್ತೃಪ್ತಿಯೂ ಜಿತೇಂದ್ರಿಯತ್ವವೂ ಸಿದ್ಧವೇ ಆಗಿರುತ್ತದೆ ಮರಳಿ ಹೇಳುವುದು ಏತಕ್ಕೆಂದರೆ—) ಜ್ಞಾನವಿಜ್ಞಾನತೃಪ್ತಾತ್ಮಾ, ವಿಜಿತೇಂದ್ರಿಯಃ ಇವು ಎರಡೂ ವಿಕಾರ ಬಾರದಿರಲಿಕ್ಕೆ ಕಾರಣವು. ॥ ೧ ॥

ಪೀ—ಮೋಕ್ಷೇ ಧೀಜ್ಞಾನಮನ್ಯತ್ರ ವಿಜ್ಞಾನಂ ಶಿಲ್ಪಶಾಸ್ತ್ರಯೋಃ ಎಂದು ಹೇಳಿದ್ದರಿಂದ ಶಿಲ್ಪಾದಿವಿಷಯಕವಾದ ಬುದ್ಧಿಯಿಂದ ವಿಷಯಗಳಲ್ಲಿ ಅಲಂಬುದ್ಧಿಯು ಹೇಗೆ ಬರುವುದು? ಎಂದರೆ—

ಭಾ ॥ (೧) ವಿಜ್ಞಾನಂ ವಿಶೇಷಜ್ಞಾನಂ । ಅಪರೋಕ್ಷಜ್ಞಾನಂ ವಾ ॥ (೨) ತಚ್ಚೋಕ್ತಂ । ಸಾಮಾನ್ಯೈರ್ಯೇ ತ್ವವಿಜ್ಞೇಯಾ ವಿಶೇಷಾ ಮಮ ಗೋಚರಾಃ । ದೇವಾದೀನಾಂ ತು ತಜ್ಜ್ಞಾನಂ ವಿಜ್ಞಾನಮಿತಿ ಕೀರ್ತಿತಂ ॥ (೩) ಶ್ರವಣಾನ್ಮನನಾಚ್ಚೈವ ಯಜ್ಜ್ಞಾನಮುಪಜಾಯತೇ । ತಜ್ಜ್ಞಾನಂ ದರ್ಶನಂ ವಿಷ್ಣೋರ್ವಿಜ್ಞಾನಂ ಶಂಭುರಬ್ರವೀತ್। ವಿಜ್ಞಾನಂ ಜ್ಞಾನಮಂಗಾದೇರ್ವಿಶಿಷ್ಟಂ ದರ್ಶನಂ ತಥೇತ್ಯಾದಿ ॥ (೪) ಕೂಟಸ್ಥೋ ನಿರ್ವಿಕಾರಃ । ಕೂಟವತ್ ಸ್ಥಿತ ಇತಿ ವ್ಯುತ್ಪತ್ತೇಃ । ಕೂಟಮಾಕಾಶಃ । ಕೂಟಂ ಖಂ ವಿದಲಂ ವ್ಯೋಮ ಸಂಧಿರಾಕಾಶ ಉಚ್ಯತ ಇತ್ಯಭಿಧಾನಾತ್ ॥ (೫) ಯೋಗೀ ಯೋಗಂ ಕುರ್ವನ್ । ಯುಕ್ತೋ ಯೋಗಸಂಪೂರ್ಣಃ ಏವಂಭೂತೋ ಯೋಗಾನುಷ್ಠಾತಾ ಯೋಗಸಂಪೂರ್ಣ ಉಚ್ಯತ ಇತ್ಯರ್ಥಃ ॥ ೨ ॥ ॥ ೭,೮ ॥

ಅ ॥ (೧) ವಿಜ್ಞಾನಂ= ಶ್ರೀಹರಿಯ ಮಹಿಮಾತಿಶಯವಿಷಯಕವಾದ ವಿಶೇಷಜ್ಞಾನವು ವಿಜ್ಞಾನವೆನಿಸುತ್ತದೆ ಅಥವಾ ಅಪರೋಕ್ಷಜ್ಞಾನವೂ ವಿಜ್ಞಾನವೆನಿಸುತ್ತದೆ (೨) ಆ ಪ್ರಮೇಯವು ಹೇಳಲ್ಪಟ್ಟಿದೆ ಸಾಧಾರಣ ಪುರುಷರಿಗೆ ಇರುವ ವಿಷ್ಣುಸರ್ವೋತ್ತಮತ್ವಾದಿ ಸಾಮಾನ್ಯವಿಷಯಕವಾದ ಜ್ಞಾನವು, ಅಥವಾ ಪರೋಕ್ಷಜ್ಞಾನವು ಜ್ಞಾನವೆನಿಸುತ್ತದೆ ಯಾವುವು ನನ್ನ ವಿಶೇಷಮಹಿಮೆಗಳು ಸಾಮಾನ್ಯ ಜನರಿಗೆ ತಿಳಿಯಲಶಕ್ಯಗಳೋ, ದೇವಾದಿಗಳಿಗೇನೇ ಗೋಚರಗಳಾಗಿವೆಯೋ, ಅಂತಹ ಜ್ಞಾನವು ವಿಜ್ಞಾನವೆನಿಸುತ್ತದೆ (೩) ಶ್ರವಣಮನನಗಳಿಂದುಂಟಾಗತಕ್ಕ ಜ್ಞಾನವು ಜ್ಞಾನವೆನಿಸುತ್ತದೆ ಶ್ರೀಹರಿಯ ದರ್ಶನವು ಅಪರೋಕ್ಷಜ್ಞಾನವು ಯಾವುದಿದೆಯೋ ಅದನ್ನು ವಿಜ್ಞಾನವೆಂದು ರುದ್ರನು ಹೇಳಿರುವನು. ಹಾಗೆಯೇ ವ್ಯಾಕರಣಾದಿಗಳದ್ದು ಶಿಲ್ಪಶಾಸ್ತ್ರದ್ದೂ ಯಾವುದು ಜ್ಞಾನವೋ, ಅದೂ ವಿಜ್ಞಾನವು, ಹಾಗೆಯೇ ಇತರ ಶಾಸ್ತ್ರಗಳಿಂದ ವಿಲಕ್ಷಣವಾದುದು ಯಾವುದು ವೈಷ್ಣವ ಶಾಸ್ತ್ರವೋ, ಅದೂ ವಿಜ್ಞಾನವೆನಿಸುತ್ತದೆ, ಇತ್ಯಾದಿ ವಿಷಯವು ಇದೆ (೪) ಕೂಟಸ್ಥಃ= ಆಕಾಶದಂತೆ ಇದ್ದಾನೆಂಬ ವ್ಯುತ್ಪತ್ತಿಯಿಂದ ವಿಕಾರವಿಲ್ಲದವನು. ಕೂಟ ಖ ವಿದಲ ವ್ಯೋಮ ಸಂಧಿ ಈ ಶಬ್ದಗಳಿಂದ ಆಕಾಶವು ಹೇಳಲ್ಪಡುತ್ತದೆ, ಎಂಬುವ ಕೋಶದಿಂದ ಕೂಟವೆಂದರೆ ಆಕಾಶವು (೫) (ಯುಕ್ತಃ ಯೋಗೀ ಎಂದು ಪುನರುಕ್ತವಾಯಿತೆಂದರೆ –) ಯೋಗೀ= ಧ್ಯಾನ

ಯೋಗವನ್ನು ಮಾಡುವವನು. ಯುಕ್ತಃ=ಧ್ಯಾನಯೋಗದಿಂದ ಸಂಪೂರ್ಣನಾದವನು. ಈ ರೀತಿಯಾಗಿದ್ದು ಧ್ಯಾನಯೋಗವನ್ನು ಮಾಡುವವನು ಯೋಗಸಂಪೂರ್ಣ (ಅಪರೋಕ್ಷಜ್ಞಾನಿಯೆಂದು) ಅನಿಸುತ್ತಾನೆ. ॥ ೨ ॥ ॥ ೭, ೮ ॥

ಸೀ—ಈ ಶ್ಲೋಕದಲ್ಲಿದ್ದ ಜ್ಞಾನ ವಿಜ್ಞಾನ ಶಬ್ದಗಳಿಗೆ ಇರುವ ಬೇರೆಬೇರೆ ಅರ್ಥವನ್ನು ಸ್ಮೃತಿಯಿಂದಲೇ ಹೇಳುತ್ತಾರೆ—

ತಾ ॥ ಸರ್ವತ್ರ ವಿಷ್ಣೋಃ ಉತ್ಕರ್ಷಜ್ಞಾನಂ ಜ್ಞಾನಮಿತೀರ್ಯತೇ । ತದ್ವಿಶೇಷಪರಿಜ್ಞಾನಂ ವಿಜ್ಞಾನಮಿತಿ ಗೀಯತ ಇತಿ ಚ ॥ ೭,೮ ॥

ಅ ॥ ವೇದ ಮೊದಲಾದವುಗಳಲ್ಲಿ ಹೇಳತಕ್ಕ ವಿಷ್ಣು ಸರ್ವೋತ್ತಮತ್ವಜ್ಞಾನವು ಜ್ಞಾನವೆನಿಸುತ್ತದೆ ವೇದಾದಿಗಳಲ್ಲಿ ಹೇಳಲ್ಪಡತಕ್ಕ ವಿಷ್ಣು ಸರ್ವೋತ್ತಮತ್ವ ಸರ್ವಜ್ಞತ್ವ ಸರ್ವಕರ್ತೃತ್ವ ಮೊದಲಾದ ಮಹಿಮೆಗಳ ವಿಶೇಷಪರಿಜ್ಞಾನವು ವಿಜ್ಞಾನವೆನಿಸುತ್ತದೆ ॥ ೭, ೮ ॥

ಗೀ ॥ ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧುಷು ।
ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ ೯ ॥

ಅ ॥ ಸುಹೃತ್ ಮಿತ್ರ ಅರಿ ಉದಾಸೀನ ಮಧ್ಯಸ್ಥ ದ್ವೇಷ್ಯ ಬಂಧುಗಳಲ್ಲಿಯೂ ಸಾಧುಗಳಲ್ಲಿಯೂ ಪಾಪಿಷ್ಠರಲ್ಲಿಯೂ ಸಮನಾದ ಶ್ರೀಹರಿಯನ್ನು ವಿಷಯಾಕರಿಸಿಕೊಂಡಿರುವ ಬುದ್ಧಿಯುಳ್ಳ ಯೋಗಾರೂಢನು (ಅಪರೋಕ್ಷಜ್ಞಾನಿಯು) ವಿಶಿಷ್ಯತೇ=ಎಲ್ಲಾ ಯೋಗಿಗಳಿಂದಲೂ ಉತ್ಕೃಷ್ಟನಾಗಿರುತ್ತಾನೆ.

ವಿ ॥ ಸಹೃತ್ ಮೊದಲಾದವರಲ್ಲಿರತಕ್ಕ ಭಗವದ್ರೂಪಗಳಿಗೆ ಗುಣಾದಿಗಳಲ್ಲಿ ತಾರತಮ್ಯವಿಲ್ಲವೆಂಬ ಬುದ್ಧಿಯು ಸಮಬುದ್ಧಿಯು. ಅಥವಾ ಸುಹೃತ್ ಮಿತ್ರ ಮೊದಲಾದವರಲ್ಲಿ ಸುಹೃತ್ತ್ವ ಮಿತ್ರತ್ವ ಮೊದಲಾದವುಗಳು ಶ್ರೀಹರಿಯಿಂದಲೇ ಮಾಡಲ್ಪಟ್ಟವುಗಳು ಶ್ರೀಹರಿಯ ಅಧೀನಗಳೇ. ಸ್ವತಂತ್ರಗಳಲ್ಲ, ಎಂದು ಭಗವದ್ವಿಷಯದಲ್ಲಿರತಕ್ಕ ಬುದ್ಧಿಯು ಸಮಬುದ್ಧಿಯೆನಿಸುತ್ತದೆ. ಅಥವಾ ಸುಹೃದಾದಿಗಳ ವಿಷಯದಲ್ಲಿ ಶಾಸ್ತ್ರಗಳಲ್ಲಿ ಯಾವ ರೀತಿಯಾಗಿ ಇರಬೇಕೆಂದು ಹೇಳಿಯದೋ, ಆ ರೀತಿಯಾಗಿ ಇರಬೇಕೆನ್ನುವ ಜ್ಞಾನವು ಸಮಬುದ್ಧಿಯೆನಿಸುತ್ತದೆ. ॥ ೯ ॥

ಭಾ ॥ (೧) ಸ ಏವ ಚ ಸರ್ವಸ್ಮಾದ್ವಿಶಿಷ್ಯತೇ । ಸಾಧುಪಾಪಾದಿಷು ಸಮಬುದ್ಧಿಃ ॥ (೨) ಜೀವಚಿತಃ ಪರಮಾತ್ಮನಃ ಸರ್ವಸ್ಯ ತನ್ನಿಮಿತ್ತಕತ್ವಸ್ಯ ಚ ಸರ್ವತ್ರೈಕರೂಪ್ಯೇಣ ॥ (೩) ಚಿದ್ರೂಪಾ ಏವ ಹಿ ಜೀವಾಃ । ವಿಶೇಷಸ್ತ್ವಂತಃಕರಣಕೃತಃ ॥ (೪) ಸರ್ವೇಷಾಂ ಸಾಧುತ್ವಾದಿಕಂ ಸರ್ವಮೀಶ್ವರಕೃತಮೇವ ಸ್ವತೋ ನ ಕಿಂಚಿದಪಿ ॥ (೫) ಉಕ್ತಂ ಚೈತತ್ಸರ್ವಂ । ಸ್ವತಃ ಸರ್ವೇಽಪಿ ಚಿದ್ರೂಪಾಃ ಸರ್ವದೋಷವಿವರ್ಜಿತಾಃ । ಜೀವಾಸ್ತೇಷಾಂ ತು ಯೇ ದೋಷಾಸ್ತ ಉಪಾಧಿಕೃತಾ ಮತಾಃ । ಸರ್ವಂ ಚೇಶ್ವರತಸ್ತೇಷಾಂ ನ ಕಿಂಚಿತ್ ಸ್ವತ ಏವ ತು । ಸಮಾ ಏವ ಹ್ಯತಸ್ಸರ್ವೇ ವೈಷಮ್ಯಂ ಭ್ರಾಂತಿಸಂಭವಂ ॥ (೬) ಏವಂ ಸಮಾನಜೀವಾಸ್ತು ವಿಶೇಷೋ ದೇವತಾದಿಷು । ಸ್ವಾಭಾವಿಕಸ್ತು ನಿಯಮಾದೇವ ಏವ ಸನಾತನಃ ॥ (೭) ಅಸುರಾದೇಸ್ತಥಾ ದೋಷಾ ನಿತ್ಯಾಃ

**ಸ್ವಾಭಾವಿಕಾ ಅಪಿ । ಗುಣದೋಷೌ ಮನುಷ್ಯಾಣಾಂ ನಿತ್ಯೌ ಸ್ವಾಭಾವಿಕೌ ಮತಾ ।**
**ಗುಣೈಕಮಾತ್ರರೂಪಾಸ್ತು ದೇವಾ ಏವ ಸದಾ ಮತಾ ಇತಿ ಬ್ರಾಹ್ಮೇ ॥ ೧ ॥**

ಅ ॥ (೧) ಸದ್ಧರ್ಮವುಳ್ಳ ಸಜ್ಜನರು, (ಮೋಕ್ಷಯೋಗ್ಯರು) ಪಾಪವುಳ್ಳವರು(ದುರ್ಜನರು, ತಮೋ ಯೋಗ್ಯರು)ಇದುಮೊದಲಾದವರಲ್ಲಿರತಕ್ಕ ಭಗವದ್ರೂಪಗಳಿಗೆ ಜ್ಞಾನಾನಂದಾದಿ ಗುಣಾದಿಗಳ ವಿಷಯದಲ್ಲಿ ತಾರತಮ್ಯವಿಲ್ಲವೆಂದು ತಿಳಿದಿರುವ ಯೋಗಾರೂಢನೇ (ಅಪರೋಕ್ಷಜ್ಞಾನಿಯೇ) ಎಲ್ಲಾ ಯೋಗಿಗಳಿಗಿಂತ ಉತ್ಕೃಷ್ಟನೇ ಆಗಿರುತ್ತಾನೆ (೨) ಸಮಬುದ್ಧಿತ್ವವೆಂದರೆ ಪೂಜಾದಿಗಳಿಂದ ಸಾಮ್ಯವು (ಅಂದರೆ ಸುಹೃತ್ ಮಿತ್ರಾದಿಗಳಿಗೆ ಒಂದೇರೀತಿ ಪೂಜಿಸಬೇಕು ಎಂಬುವ) ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ.) 1) ಸುಹೃತ್ ಮೊದಲಾದ ಜೀವಚೈತನ್ಯಕ್ಕೂ, (2) ಹಾಗೆಯೇ ಸುಹೃತ್ ಮಿತ್ರ ಮೊದಲಾದವುಗಳಲ್ಲಿ ನಿಯಾಮಕನಾಗಿರುವ ಪರಮಾತ್ಮನಿಗೂ, (೩) ಸುಹೃತ್ ಮಿತ್ರಾದಿಗಳಲ್ಲಿರತಕ್ಕ ಸುಹೃತ್ತ್ವ, ಮಿತ್ರತ್ವ ಮೊದಲಾದ ಧರ್ಮಗಳಿಗೆ ಶ್ರೀಹರಿಯೇ ಕಾರಣನು ಎಂಬುವುದಕ್ಕೂ, ಸರ್ವತ್ರ ಒಂದೇ ಪ್ರಕಾರದಿಂದ ಕಾಣುವವನು ಸಮಬುದ್ಧಿಯೆನಿಸುತ್ತಾನೆ (೩) (ಸರ್ವ ಜೀವರೂ ಚಿದ್ರೂಪರೇ ಆಗಿರುವುದರಿಂದ ಅವರಲ್ಲಿ ಚೇತನತ್ವವೆಂಬ ಒಂದು ಧರ್ಮವನ್ನು ತಿಳಿಯುವವನು ಸಮಬುದ್ಧಿಯೆನಿಸುತ್ತಾನೆ ಅವರಲ್ಲಿ ಸುಹೃತ್ತ್ವ ಮಿತ್ರತ್ವಾದಿಗಳನ್ನು ಸ್ವಾಭಾವಿಕವೆಂದು ತಿಳಿಯಬಾರದು) ಸರ್ವರೂ ಚಿದ್ರೂಪರೇ ಆಗಿರುತ್ತಾರೆ. ಎಂದೇ ತಿಳಿಯಬೇಕು. ಇದರಿಂದ ಜೀವರು, ಮೂರು ವಿಧರು ಎಂದು ಹೇಳುವ ಪ್ರಮಾಣಗಳಿಂದ ವಿರೋಧವಿಲ್ಲವೆಂದು ತಿಳಿಯಬೇಕು ಅಂದರೆ ಸುಹೃತ್ ಮಿತ್ರ ಮೊದಲಾದ ಮನುಷ್ಯರಲ್ಲಿರುವ ಸುಹೃತ್ತ್ವ ಮಿತ್ರತ್ವ ಮೊದಲಾದ ಧರ್ಮಗಳು ಜೀವರ ಸ್ವರೂಪಾಂತರ್ಗತಗಳಲ್ಲ. ಮತ್ತೆ ಚಿದ್ರೂಪ ತ್ವಾದಿಗಳೇ ಜೀವಸ್ವರೂಪಾಂತರ್ಗತಗಳು.) ಸುಹೃತ್ತ್ವ ಮೊದಲಾದ ಧರ್ಮವಿಶೇಷಕ್ಕೆ ಅಂತಃಕರಣವೇ ಉಪಾದಾನಕಾರಣವು. (ಅಂದರೆ ಮೋಕ್ಷದಲ್ಲಿ ಉಳಿಯುವ ಜೀವಸ್ವರೂಪವು **ತ್ರಿವಿಧಾ ಜೀವಸಂಘಾಸ್ತು ದೇವಮಾನುಷದಾನವಾಃ** ಇದುಮೊದಲಾದ ಪ್ರಮಾಣಗಳಿಂದ ವಿಷಮಗಳೇ ಆಗಿವೆ ಆದರೆ ದೇಹ ಇಂದ್ರಿಯ ಅಂತಃಕರಣಧರ್ಮನಿಮಿತ್ತಕವಾದ ಸುಹೃತ್ತ್ವಮಿತ್ರತ್ವಾದಿರೂಪವಾದ ಯಾವುದು ವೈಷಮ್ಯ ವೋ. ಅದು ಸುಹೃದಾದಿ ಚೇತನಸ್ವರೂಪಾಂತರ್ಗತವೆಂಬ ಆರೋಪರೂಪವಾದ ವಿಷಮಬುದ್ಧಿತ್ವವು ಇತರರಿಗೆ ಇದ್ದರೂ ಯೋಗಾರೂಢನಿಗೆ ಇಲ್ಲ) (ಎರಡನೇ ಪ್ರಕಾರವು—ಸುಹೃದಾದಿಗಳಲ್ಲಿರತಕ್ಕ ಶ್ರೀ ಹರಿಯು ಏಕರೂಪನಾಗಿದ್ದಾನೆಂಬುವುದು ಆ ಭಗವದ್ರೂಪಗಳಿಗೆ ತಾರತಮ್ಯವಿಲ್ಲವೆಂದು) ಮೊದಲೇ ಹೇಳ ಲ್ಪಟ್ಟಿದೆ ) (೪) (ಇನ್ನೊಂದನ್ನು ಅಂದರೆ ಸುಹೃದಾದಿಗಳಲ್ಲಿರತಕ್ಕ ಸುಹೃತ್ತ್ವಾದಿಗಳಿಗೆ ಶ್ರೀಹರಿಯು ಕಾರ ಣನು, ಎಂಬುವ ಪ್ರಕಾರವನ್ನು ವಿವರಿಸುತ್ತಾರೆ—) ಸರ್ವರಿಗೆ ಸಾಧುತ್ವಮೊದಲಾದುದೆಲ್ಲವೂ ಶ್ರೀಹರಿ ಯಿಂದಲೇ ಮಾಡಲ್ಪಟ್ಟದ್ದು ಸ್ವತಂತ್ರವಾದುದು ಯಾವುದೂ ಇಲ್ಲ (೫) (ಈ ವಿಷಯದಲ್ಲಿ ಪ್ರಮಾಣ ವನ್ನು ಹೇಳುತ್ತಾರೆ—) ಈ ಪ್ರಮೇಯವೆಲ್ಲವೂ ಹೇಳಲ್ಪಟ್ಟಿದೆ ಎಲ್ಲಾ ಜೀವರು ಚಿದ್ರೂಪರು. ಸ್ವರೂಪತಃ ಅರಿತ್ವ (ಶತ್ರುತ್ವ) ಮೊದಲಾದ ದೋಷಗಳಿಂದಲೂ ಸುಹೃತ್ತ್ವ ಮೊದಲಾದ ಗುಣಗಳಿಂದಲೂ ವಿರಹಿತ ರಾಗಿರುತ್ತಾರೆ. (ಅರಿತ್ವ ಸುಹೃತ್ತ್ವ ಮೊದಲಾದ ಧರ್ಮಗಳು ಆಗಂತುಕಧರ್ಮಗಳು ಸ್ವರೂಪಾಂತರ್ಗತ ಗಳಲ್ಲ) ಆ ಜೀವರದ್ದು ಅರಿತ್ವ ಮೊದಲಾದ ಯಾವ ದೋಷಗಳೋ. ಮಿತ್ರತ್ವ ಮೊದಲಾದ ಯಾವ ಗುಣ ಗಳೋ, ಅವುಗಳೆಲ್ಲವೂ ಅಂತಃಕರಣಾದಿಗಳಿಂದ ಮಾಡಲ್ಪಟ್ಟವುಗಳು ಸುಹೃತ್ತ್ವ ಮೊದಲಾದುದೆಲ್ಲವೂ ಶ್ರೀಪರಮಾತ್ಮನ ಅಧೀನವೇ ಜೀವರಿಗೆ ಸುಹೃತ್ತ್ವಾದಿಗಳು ಸ್ವಾಭಾವಿಕವಾಗಿ ಇಲ್ಲವೇ ಇಲ್ಲ. ಆದಕಾರಣ ಎಲ್ಲರೂ ಚಿದ್ರೂಪತ್ವದಿಂದ ಸಮಾನಿಕರೇ ಅವರಲ್ಲಿರುವ ವೈಷಮ್ಯವು (ಅಂದರೆ ಆತ್ಮಸ್ವರೂಪಾಂತರ್ಗತ ವಲ್ಲದ ಧರ್ಮಗಳನ್ನು ಜೀವರ ಸ್ವರೂಪಾಂತರ್ಗತವೆಂದು ತಿಳಿದುಕೊಳ್ಳುವುದು ಅಥವಾ ಶ್ರೀಹರಿಯ ಅಧೀನ ವಲ್ಲವೆಂದು ತಿಳಿದುಕೊಳ್ಳುವುದು) ಇವೆರಡೂ ಭ್ರಾಂತಿಪರಿಕಲ್ಪಿತವು (೬) ಹೀಗೆ ಯೋಗಾರೂಢನಿಗೆ

ಸಮಬುದ್ಧಿತ್ವವನ್ನೇ ಹೇಳಿದ್ದು ಮನುಷ್ಯವಿಷಯಕವು. ಹೀಗೆಯೇ ಮನುಷ್ಯಜೀವರೇ ಯೋಗಾರೂಢನಿಂದ ಏಕರೂಪರೆಂದು ತಿಳಿಯಲ್ಪಡತಕ್ಕವರು. ಯೋಗಿಯನ್ನು ಕುರಿತು ದೇವತೆಯೇ ಮೊದಲಾದವರಿಗೆ ಸುಹೃತ್ತ್ವ ಮೊದಲಾದ ಧರ್ಮಗಳು ತೋರುವುದು ಸ್ವಾಭಾವಿಕವೇ ಆದ ವಿಶೇಷವು.ಅನಾದಿಕಾಲದಿಂದಲೂ ಶ್ರೀಪರಮಾತ್ಮನಿಂದಲೇ ನಿಯತವಾಗಿ ಮಾಡಲ್ಪಟ್ಟದ್ದು (೭) (ಅದನ್ನೇ ವಿವರಿಸುತ್ತಾರೆ—)ಅಸುರ ಮೊದಲಾದವರಿಗೆ ಹಾಗೆಯೇ ಭಗವದ್ಧ್ಯಾನಮಾಡುವ ಯೋಗಿಯನ್ನು ಕುರಿತು ಶತ್ರುತ್ವಮೊದಲಾದ ದೋಷಗಳು ನಿತ್ಯಗಳೂ ಸ್ವಾಭಾವಿಕಗಳೂ ಆಗಿವೆ ನಿತ್ಯಸಂಸಾರಿಗಳಾದ ಮನುಷ್ಯರಿಗೆ ಸುಹೃತ್ತ್ವ ಮಿತ್ರತ್ವಾದಿ ಗುಣ ದೋಷಗಳು ನಿತ್ಯಗಳೂ ಸ್ವಾಭಾವಿಕಗಳೂ ಆಗಿವೆ. ಕೇವಲ ಗುಣಮಾತ್ರಸ್ವರೂಪರಾದವರು ದೇವತೆಗಳೇ ಎಂದು ಸಮ್ಮತರು ಎಂದು ಬ್ರಹ್ಮಾಂಡಪುರಾಣದಲ್ಲಿದೆ ॥ ೧ ॥

ಪೀ—ಸುಹೃನ್ಮಿತ್ರ ಎಂಬುವ ಶ್ಲೋಕಕ್ಕೆ ಸಾಮಾನ್ಯವಾಗಿ ತೋರಿದ ಅರ್ಥವೇ ಏಕೆ ಆಗಬಾರದು ಎಂದರೆ—

ಭಾ ॥ (೧) ನ ತು ಸಾಧುಪಾಪಾದೀನಾಂ ಪೂಜಾದಿಸಾಮ್ಯಂ । ತತ್ರ ದೋಷಸ್ಸ್ಮೃತೇಃ । ಸಮಾನಾಂ ವಿಷಮಾ ಪೂಜಾ ವಿಷಮಾಣಾಂ ಸಮಾ ತಥಾ । ಕ್ರಿಯತೇ ಯೇನ ದೇವೋಽಪಿ ಸ್ವಪದಾದ್ಭ್ರಶ್ಯತೇ ಪುಮಾನಿತಿ ಪಾದ್ಮೇ ॥ (೨) ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಚೈವ ತು ಪಂಚಮೀ । ಏತಾನಿ ಮಾನ್ಯಸ್ಥಾನಾನಿ ಗರೀಯೋ ಹ್ಯುತ್ತರೋತ್ತರಮಿತಿ ವಾಮನೇ(ಮಾನವೇ) ॥ (೩) ಗುಣಾನುಸಾರಿಣೀಂ ಪೂಜಾಂ ಸಮಾಂ ದೃಷ್ಟಿಂ ಚ ಯೋ ನರಃ । ಸರ್ವಭೂತೇಷು ಕುರುತೇ ತಸ್ಯ ವಿಷ್ಣುಃ ಪ್ರಸೀದತಿ ॥ (೪) ವೈಷಮ್ಯಮುಕ್ತಮತ್ಸಂ ತು ದದಾತಿ ನರಸಂಚಯಾತ್ । ಪೂಜಾ ಯಾ ವಿಷಮಾ ದೃಷ್ಟಿಃ ಸಮಾ ಸಾಮ್ಯಂ ವಿದುಃಖಜಮಿತಿ ಬ್ರಹ್ಮವೈವರ್ತೇ ॥ (೫) ಸುಹೃದಾದಿಷು ಶಾಸ್ತ್ರೋಕ್ತಪೂಜಾದಿಕೃತಿರನ್ಯೂನಾಽನಧಿಕಾ ಯಾ ಸಾಽಪಿ ಸಮಾ ॥ (೬) ತದಪ್ಯಾಹ । ಯಥಾ ಸುಹೃತ್ಸು ಕರ್ತವ್ಯಂ ಪಿತೃಶತ್ರುಸುತೇಷು ಚ । ತಥಾ ಕರೋತಿ ಪೂಜಾದಿ ಸಮಬುದ್ಧಿಃ ಸ ಉಚ್ಯತ ಇತಿ ಗಾರುಡೇ ॥ ೨ ॥

ಅ ॥ (೧) ಸಜ್ಜನರಿಗೂ ಪಾಪಿಷ್ಠರಿಗೂ ಎಲ್ಲರಿಗೂ ಪೂಜಾದಿಗಳಿಂದ ಸಾಮ್ಯವೆಂದು ಹೇಳಕೂಡದು ಸಜ್ಜನರಿಗೂ ಪಾಪಿಷ್ಠರಿಗೂ ಸಮಾನ ಪೂಜೆಯನ್ನು ಮಾಡಿದರೆ ದೋಷವದೆ, ಎಂದು ಸ್ಮೃತಿಗಳಲ್ಲಿ ಹೇಳಿದ್ದಾರೆ(ಅದನ್ನೇ ವಿವರಿಸುತ್ತಾರೆ–) ಗುಣಾದಿಗಳಿಂದ ಸಮಾನಿಕರಿಗೆ ವಿಷಮ (ವ್ಯತ್ಯಾಸ)ವಾದ ಪೂಜೆಯೂ ಹಾಗೆಯೇ ವಿಷಮರಿಗೆ ಸಮಾನ ಪೂಜೆಯೂ, ಯಾರಿಂದ ಮಾಡಲ್ಪಡುತ್ತದೋ, ಅಂತಹ ಪೂಜಿಸುವ ದೇವತೆಯೂ ಕೂಡ ತನ್ನ ಪದವಿಯಿಂದ ಭ್ರಷ್ಟನಾಗುತ್ತಾನೆ ಸಮಾನಿಕರಿಗೆ ವಿಷಮವಾಗಿ ಪೂಜೆಯನ್ನು ಮಾಡುವ ಮನುಷ್ಯನು ಭ್ರಷ್ಟನಾಗುತ್ತಾನೆಂಬುವುದು ಸುತರಾಂ ಸಿದ್ಧವು, ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ. (೨) (ವಿಷಮರಿಗೆ ಸಮಪೂಜೆಯನ್ನು ಮಾಡಿದರೆ ದೋಷವಿದೆ, ಎಂಬುವುದು ಮಾತ್ರವಲ್ಲ. ವಿಷಮವಾಗಿಯೇ ಪೂಜಿಸಬೇಕೆಂದು ವಿಧಿಯೂ ಇದೆ, ಎನ್ನುತ್ತಾರೆ—) ಹಣವಿದ್ದವನಿಕ್ಕಿಂತ ಬಾಂಧವನು ಶ್ರೇಷ್ಠನು. ಅವನಿಗಿಂತ ವಯಸ್ಸು ಜಾಸ್ತಿಯಾದವನು ಶ್ರೇಷ್ಠನು. ಅವನಕ್ಕಿಂತ ಕರ್ಮಠನು (ಸದಾಚಾರ ಸಂಪನ್ನನು) ಶ್ರೇಷ್ಠನು. ಅವನಕ್ಕಿಂತ ವಿದ್ಯಾವಂತನು(ತತ್ವಜ್ಞಾನಿಯು)ಶ್ರೇಷ್ಠನು ವಿದ್ಯೆಯು ಐದನೇದ್ದು· ಇವುಗಳು ಪೂಜ್ಯತ್ವಕ್ಕೆ ಕಾರಣಗಳು ಇವುಗಳಲ್ಲಿ ಮೇಲು ಮೇಲಿನದ್ದು ಶ್ರೇಷ್ಠವೆಂದು ಮಾನವಧರ್ಮ ಶಾಸ್ತ್ರದಲ್ಲಿ ಹೇಳಿದೆ. (೩) (ಜೀವಚಿತಃ ಇತ್ಯಾದಿಗಳಲ್ಲಿ ಹೇಳಿದಪ್ರಕಾರ ಸಮದರ್ಶಿಯಾಗಬೇಕು ಪೂಜೆ

ಯಾದರೂ ಜ್ಞಾನಾದಿಗುಣಗಳಿಂದ ವಿಷಮರಿಗೆ ವಿಷಮಪೂಜೆಯನ್ನೇ ಮಾಡಬೇಕು, ಎಂಬುವಲ್ಲಿ ಪ್ರಮಾಣಾಂತರವನ್ನು ಹೇಳುತ್ತಾರೆ-)ಯಾವ ಮನುಷ್ಯನು ಎಲ್ಲಾ ಪ್ರಾಣಿಗಳಲ್ಲಿ ಅವರವರ ಗುಣಗಳನ್ನನುಸರಿಸಿ ಪೂಜೆಯನ್ನು ಮಾಡುತ್ತಾನೋ, ಮತ್ತು ಜೀವಚಿತಃ ಇತ್ಯಾದಿಗಳಲ್ಲಿ ಹೇಳಿದ ಪ್ರಕಾರ ಸಾಮ್ಯದೃಷ್ಟಿಯನ್ನು ಸಮಸ್ತ ಜೀವರಾಶಿಯಲ್ಲಿ ಮಾಡುತ್ತಾನೋ,ಅಥವಾ ಎಲ್ಲರಲ್ಲಿರುವ ಭಗವದ್ರೂಪಗಳಿಗೆ ತಾರತಮ್ಯವಿಲ್ಲವೆಂದು ತಿಳಿಯುತ್ತಾನೋ, ಅತನಿಗೆ ಶ್ರೀವಿಷ್ಣುವು ಸಂತುಷ್ಟನಾಗುತ್ತಾನೆ (೪)(ಶ್ರೀವಿಷ್ಣುವಿನ ಪ್ರಸಾದ ಮಾತ್ರ ಫಲವಲ್ಲ ಇಂತಹ ಸಮಪೂಜೆಗೆ ಬೇರೆ ಫಲವೂ ಇದೆ ಎನ್ನುತ್ತಾರೆ) ಗುಣಾನುಸಾರಿಯಾದ ಪೂಜಾರೂಪವಾದ ವಿಷಮವಾದ ಪೂಜೆಯು ಮನುಷ್ಯರ ಸಮೂಹದ್ದೆಶೆಯಿಂದ ಪೂಜಿಸುವವನಿಗೆ ಇತರರಿಗಿಂತ ವೈಲಕ್ಷಣ್ಯವನ್ನು (ಅಂದರೆ ಉತ್ತಮತ್ವವನ್ನು ಕೊಡುತ್ತದೆ ಜೀವಚಿತಃ ಇತ್ಯಾದಿಗಳಲ್ಲಿ ಹೇಳಿದಪ್ರಕಾರ ಯಾವುದು ಸಮವಾದ ದೃಷ್ಟಿಯಿದೆಯೋ, ಅದು ದುಃಖಾಭಾವವೇ ನಿಮಿತ್ತವಾಗಿ ಉಳ್ಳ ಸಾಮ್ಯವನ್ನು ಹೀಗೆ ತಿಳಿದವನಿಗೆ ಕೊಡುತ್ತದೆ (೫)) ಸಮಬುದ್ಧಿತ್ವವನ್ನು ಪ್ರಕಾರಾಂತರದಿಂದ ವ್ಯಾಖ್ಯಾನಮಾಡುತ್ತಾರೆ. ಸುಹೃತ್ ಮಿತ್ರ ಮೊದಲಾದವರಲ್ಲಿ ಶಾಸ್ತ್ರದಲ್ಲಿ ಹೇಳಿದಪ್ರಕಾರ ಪೂಜಾದಿಗಳನ್ನು ಮಾಡಬೇಕು ನ್ಯೂನವೂ ಆಗದೆ ಅಧಿಕವೂ ಆಗದೆ ಅವರವರ ಯೋಗ್ಯತೆಗೆ ಅನುಗುಣವಾದ ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಪೂಜಾದಿಗಳನ್ನು ಮಾಡುವುದು ಸಮಬುದ್ಧಿಯೆಂದು ಶಾಸ್ತ್ರಸಮ್ಮತವಾಗಿದೆ (೬) (ಆ ವಿಷಯದಲ್ಲಿ ಪ್ರಮಾಣವನ್ನು ಹೇಳಿರುತ್ತಾರೆ-) ಹೇಗೆ ಸುಹೃದಾದಿಗಳಲ್ಲಿ ಅವರವರ ಯೋಗ್ಯತಾನುಸಾರ ಪೂಜೆಯನ್ನು ಮಾಡಬೇಕೋ, ಹಾಗೆಯೇ ಪಿತೃಗಳು ಶತ್ರುಗಳು ಮಕ್ಕಳು ಇವರಲ್ಲಿಯೂ ಅವರವರ ಯೋಗ್ಯತಾನುಸಾರ ಪೂಜಾದಿಗಳನ್ನು ಮಾಡುವವನು ಸಮಬುದ್ಧಿಯೆನಿಸುತ್ತಾನೆ (ಇದು ಯೋಗಾರೂಢನ ವಿಷಯಕವಾಗದಿರುವುದರಿಂದ ಹಿಂದೆ ಹೇಳಿದ್ದಕ್ಕೆ ವಿರೋಧವಿಲ್ಲ ಆದಕಾರಣ ಈ ಪ್ರಮಾಣವನ್ನು ಮೊದಲು ಹೇಳಲಿಲ್ಲ.) ಎಂದು ಗಾರುಡದಲ್ಲಿದೆ ॥ ೨ ॥

ಪೀ—ಸುಹೃತ್ ಮಿತ್ರ ಶಬ್ದಗಳಿಗೂ ಅರಿ ದ್ವೇಷ್ಯ ಶಬ್ದಗಳಿಗೂ ಉದಾಸೀನ ಮಧ್ಯಸ್ಥ ಶಬ್ದಗಳಿಗೂ ಬೇರೆಬೇರೆ ಅರ್ಥಗಳನ್ನು ಹೇಳುತ್ತಾರೆ—

ಭಾ ॥ (೧) ಪ್ರತ್ಯುಪಕಾರನಿರಪೇಕ್ಷಯೋಽಪಕಾರಕೃತ್ಸುಹೃತ್ । ಕ್ಲೇಶಸ್ಥಾನಂ ನಿರೂಪ್ಯ ಯೋ ರಕ್ಷಾಂ ಕರೋತಿ ಸ ಮಿತ್ರಂ । ಅರಿರ್ವಧಾದಿಕರ್ತಾ । ಕರ್ತವ್ಯೇ ಉಪಕಾರೇ ಅಪಕಾರೇ ಚ ಯ ಉದಾಸ್ತೇ ಸ ಉದಾಸೀನಃ । ಕರ್ತವ್ಯಮುಭಯಮಪಿ ಯಃ ಕರೋತಿ ಸ ಮಧ್ಯಸ್ಥಃ । ಅವಾಸಿತಕೃದ್ದ್ವೇಷ್ಯಃ ॥ (೨) ಆಹ ಚೈತತ್ । ದ್ವೇಷ್ಯೋಽವಾಸಿತಕೃತ್ಕಾರ್ಯಮಾತ್ರಕಾರೀ ತು ಮಧ್ಯಮಃ । ಪ್ರಿಯಕೃತ್ಪ್ರಿಯೋ ನಿರೂಪ್ಯಾಪಿ ಕ್ಲೇಶಂ ಯಃ ಪರಿರಕ್ಷತಿ । ಸ ಮಿತ್ರಮುಪಕಾರಂ ತು ಹ್ಯನಪೇಕ್ಷ್ಯೋಽಪಕಾರಕೃತ್ । ಯಸ್ತತಃ ಸ ಸುಹೃತ್ಪ್ರೋಕ್ತಃ ಶತ್ರುಶ್ಚಾಪಿ ವಧಾದಿಕೃದಿತಿ ॥ ೩ ॥ ॥ ೯ ॥

ಅ ॥ (೧) (1) ಇನ್ನೊಬ್ಬನಿಂದ ತನಗೆ ಉಪಕಾರವಾಗಬೇಕೆಂಬುವುದನ್ನು ಅಪೇಕ್ಷಿಸದೆ ಇನ್ನೊಬ್ಬನಿಗೆ ಉಪಕಾರವನ್ನು ಮಾಡುವವನು ಸುಹೃತ್ ಎನಿಸುತ್ತಾನೆ. (2) ಇಂತಹ ಕಾರ್ಯದಿಂದ ದುಃಖವು ಉಂಟಾದೀತೆಂದು ತಿಳುಹಿಸಿ ಆ ದುಃಖದಿಂದ ರಕ್ಷಣೆಯನ್ನು ಮಾಡುವವನು ಮಿತ್ರನು (3) ಸಂಹಾರ ಮೊದಲಾದವುಗಳನ್ನು ಮಾಡುವವನು ಅರಿಯು (ಶತ್ರುವು) (4) ಮಾಡಲರ್ಹವಾದ ಉಪಕಾರದಲ್ಲಿಯೂ ಅಪಕಾರದಲ್ಲಿಯೂ ಯಾವನು ಉದಾಸೀನನಾಗುತ್ತಾನೋ, (ಅಂದರೆ ಎರಡನ್ನೂ ಮಾಡುವುದಿಲ್ಲವೋ) ಅತನು ಉದಾಸೀನನು. (5) ಮಾಡಲರ್ಹವಾದ ಉಪಕಾರ ಅಪಕಾರ ಎರಡನ್ನು ಮಾಡುವವನು

ಮಧ್ಯಮನು. (ಮಧ್ಯಸ್ಥನು) (6) ಇಷ್ಟವಾಗದಿದ್ದುದನ್ನು ಮಾಡುವವನು ದ್ವೇಷ್ಯನು. (೨) ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ ಅಪ್ರಿಯ (ಅನಿಷ್ಟ) ವನ್ನು ಮಾಡುವವನು ದ್ವೇಷ್ಯನು ಉಪಕಾರ ಅಪಕಾರರೂಪ ಎಲ್ಲಾ ಕಾರ್ಯಗಳನ್ನು ಮಾಡುವವನು ಮಧ್ಯಮನು. ಪ್ರಿಯ (ಇಷ್ಟ) ವನ್ನು ಮಾಡುವವನು ಪ್ರಿಯನು. (ಅಂದರೆ ಬಂಧುವು) ಕ್ಲೇಶಕಾರಣವನ್ನು ತಿಳಿಸಿ ಯಾರು ಆ ಕ್ಲೇಶದಿಂದ ಕಾಪಾಡುತ್ತಾನೋ, ಅವನು ಮಿತ್ರನು. ತನ್ನಿಂದ ಉಪಕೃತನಾದ ಪುರುಷನಿಂದ ಉಪಕಾರವನ್ನು ಅಪೇಕ್ಷಿಸದೆ ಯಾವನು ಉಪಕಾರವಮಾಡುವವನೋ, ಅವನು ಸುಹೃತ್ ಎನಿಸುತ್ತಾನೆ. ಸಂಹಾರ ಮೊದಲಾದುದನ್ನು ಮಾಡುವವನು ಶತ್ರು ಎನಿಸುತ್ತಾನೆ. ॥ ೩ ॥ ॥ ೯ ॥

ಪೀ—ಸುಹೃದಾದಿಗಳು ವಿಷಮರಾದುದರಿಂದ ಅವರಲ್ಲಿ ಜ್ಞಾನಿಗಳಿಗೆ ಸಮಬುದ್ಧಿತ್ವವು ಹೇಗೆ ಎಂಬ ಆಶಂಕೆಯನ್ನು ಸ್ಮೃತಿಯಿಂದಲೇ ಪರಿಹರಿಸುತ್ತಾರೆ—

ತಾ ॥ (೧) ಯಸ್ಯ ಯತ್ರ ಯಥಾ ವೃತ್ತಿರ್ವಿಹಿತಾ ವರ್ತನಂ ತಥಾ । ಜ್ಞಾನಂ ವಾಽಪಿ ಸಮತ್ವಂ ತದ್ವಿಷಮತ್ವಮತೋಽನ್ಯಥೇತಿ ಮಹಾವಿಷ್ಣುಪುರಾಣೇ ॥ (೨) ಅನಿಮಿತ್ತ-ಸ್ನೇಹವಾಂಸ್ತು ಸುಹೃಜ್ಜ್ಞೇಯೋ ಕ್ಲೇಶೋಪಕಾರಕೃತ್ । ಮಿತ್ರಂ ವಧಾದಿಕೃದರಿರ್ದ್ವೇಷ್ಯ-ಸ್ತ್ವಪ್ರಿಯಮಾತ್ರಕೃತ್। ಉದಾಸೀನಃ ಸ್ನೇಹವತೋಽಪ್ಯಸ್ನೇಹೀ ತತ್ಕೃತಾನುಕೃತ್। ಮಧ್ಯಸ್ಥ ಇತಿ ವಿಜ್ಞೇಯಃ ಸುಹೃದೇಷು ವಿಶಿಷ್ಯತ ಇತಿ ನಾರದೀಯೇ ॥ ೯ ॥

ಅ ॥ (೧) ಸುಹೃತ್ ಮಿತ್ರಮೊದಲಾದವರ ವಿಷಯದಲ್ಲಿ ಶಾಸ್ತ್ರಗಳಲ್ಲಿ ಯಾರುಯಾರಲ್ಲಿ ಯಾವ ಯಾವ ಪ್ರಕಾರ ಇರಬೇಕೆಂದು ಹೇಳಿಯದೋ, ಆವಾವ, ಪ್ರಕಾರ ಇರುವಿಕೆಯು ಅಥವಾ ಇರಬೇಕೆಂಬುವ ಜ್ಞಾನವು ಸಮಬುದ್ಧಿತ್ವವೆನಿಸುತ್ತದೆ ಇದಕ್ಕಿಂತ ಬೇರೆ ಪ್ರಕಾರ ಇರುವುದು ವಿಷಮಬುದ್ಧಿತ್ವವೆನಿಸುತ್ತದೆ, ಎಂದು ಮಹಾವಿಷ್ಣುಪುರಾಣದಲ್ಲಿದೆ (೨) (ಸುಹೃದಾದಿ ಶಬ್ದಗಳ ಅರ್ಥವನ್ನು ಪ್ರಮಾಣವನ್ನು ಉದಾಹರಿಸಿಕೊಂಡು ದೃಢೀಕರಿಸುತ್ತಾರೆ—) ನಿರ್ನಿಮಿತ್ತವಾಗಿ ಸ್ನೇಹವುಳ್ಳವನು ಸುಹೃತ್ ಎನಿಸುತ್ತಾನೆ ತಾನೇ ಕ್ಲೇಶಕಾರಣವನ್ನು ತಿಳುಹಿಸಿ ಉಪಕಾರಮಾಡುವವನು ಮಿತ್ರನು. ಸಂಹಾರಾದಿಗಳನ್ನು ಮಾಡುವವನು ಅರಿ (ಶತ್ರು) ಎನಿಸುತ್ತಾನೆ ಅಪ್ರಿಯ(ಅನಿಷ್ಟ)ವಾದುದನ್ನು ಮಾತ್ರ ಮಾಡುವವನು ದ್ವೇಷ್ಯನು ತನ್ನಲ್ಲಿ ಸ್ನೇಹಮಾಡುವವನಲ್ಲಿಯೂ ತಾನು ಸ್ನೇಹಮಾಡದಿರುವವನು ಉದಾಸೀನನು. ಅವನು ಮಾಡಿದ್ದನ್ನು ಅನುಸರಿಸಿ ಮಾಡುವವನು ಮಧ್ಯಸ್ಥನು ಹೀಗೆ ತಿಳಿಯಬೇಕು ಇವರೆಲ್ಲರಿಗಿಂತ ಸುಹೃತ್ ಶ್ರೇಷ್ಠನೆಂದು ನಾರದೀಯ ಪುರಾಣದಲ್ಲಿದೆ. ॥ ೯ ॥

ಪೀ—ಧ್ಯಾನಯೋಗವನ್ನು ಮಾಡುವ ಪ್ರಕಾರವನ್ನು ಹೇಳುತ್ತಾರೆ—

ಗೀ ॥ ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।
ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥ ೧೦ ॥

ಅ ॥ ಯೋಗೀ=ಜ್ಞಾನಸಾಧನವನ್ನು ಮಾಡುವವನು, ಸತತಂ=ನಿರಂತರದಲ್ಲಿಯೂ, ರಹಸಿ=ಏಕಾಂತದಲ್ಲಿ, ಸ್ಥಿತಃ=ಇದ್ದವನಾಗಿ, ಏಕಾಕೀ=ದುರ್ಜನರ ಸಂಗರಹಿತನಾಗಿ, ಯತಚಿತ್ತಾತ್ಮಾ=ನಿಗ್ರಹೀತವಾದ ಮನಸ್ಸೂ ದೇಹವೂ ಉಳ್ಳವನಾಗಿ, ನಿರಾಶೀಃ=ವಿಷಯಗಳಲ್ಲಿ ಇಚ್ಛೆಯಿಲ್ಲದವನಾಗಿ, ಅಪರಿಗ್ರಹಃ=ಪ್ರತಿಗ್ರಹವನ್ನು ಬಿಟ್ಟವನಾಗಿ, (ಬೇರೆಯವರಿಂದ ದ್ರವ್ಯಾದಿಗಳನ್ನು ತೆಗೆದುಕೊಳ್ಳದಿದ್ದವನಾಗಿ) ಆತ್ಮಾನಂ=ಮನಸ್ಸನ್ನು, ಯುಂಜೀತ=ಶ್ರೀಹರಿಯಲ್ಲಿಯೇ ಇಡಬೇಕು. (ಧ್ಯಾನಮಾಡುತ್ತಿರಬೇಕು) ॥೧೦॥

ಭಾ ॥ ಸಮಾಧಿಯೋಗಪ್ರಕಾರಮಾಹ । ಯೋಗೀ ಯುಂಜೀತೇತ್ಯಾದಿನಾ । ಯುಂಜೀತ ಸಮಾಧಿಯೋಗಯುಕ್ತಂ ಕುರ್ಯಾತ್ । ಆತ್ಮಾನಂ ಮನಃ ॥ ೧೦ ॥

ಅ ॥ ಧ್ಯಾನಯೋಗಕ್ಕೆ ಉಪಯುಕ್ತಗಳಾದ ಆಸನಾದ್ಯಂಗಗಳನ್ನು ಹೇಳುವುದಕ್ಕಾಗಿ ಉದ್ಧರೇತ್ ಎಂಬುವ ಶ್ಲೋಕದಿಂದ ವಿಹಿತವಾದ ಯೋಗಪ್ರಕಾರವನ್ನು ಯೋಗೀ ಎಂಬುವ ಶ್ಲೋಕದಿಂದ ಹೇಳುತ್ತಾರೆ. ಯೋಗಿಯು, ಆತ್ಮಾನಂ=ಮನಸ್ಸನ್ನು. ಯುಂಜೀತ=ಧ್ಯಾನಯೋಗದಿಂದ ಯುಕ್ತವನ್ನಾಗಿ ಮಾಡಬೇಕು ॥ ೧೦ ॥

ಗೀ ॥ ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।
ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಂ ॥ ೧೧ ॥

ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।
ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥ ೧೨ ॥

ಅ ॥ ಆತ್ಮನಃ=ತನಗಾಗಿ, ಶುಚೌ ದೇಶೇ=ಮನಸ್ಸಿನ ನೈರ್ಮಲ್ಯಕ್ಕೆ ಕಾರಣವಾದ ಪ್ರದೇಶದಲ್ಲಿ, ಚೈಲಾಜಿನಕುಶೋತ್ತರಂ=ಭೂಮಿಯ ಮೇಲೆ ದರ್ಭೆ, ಅದರ ಮೇಲೆ ವ್ಯಾಘ್ರಾದಿಗಳ ಚರ್ಮ, ಅದರ ಮೇಲೆ ಶುಭ್ರವೂ ಮೃದುವೂ ಆದ ವಸ್ತ್ರ, ಇವುಗಳುಳ್ಳ, ನಾತ್ಯುಚ್ಛ್ರಿತಂ=ಬಹಳ ಎತ್ತರವಾಗಿ ಇಲ್ಲದಿರುವ, ನಾತಿ ನೀಚಂ=ಬಹಳ ತಗ್ಗೂ ಆಗದಿರುವ (ಇಂತಹ)ಆಸನಂ=ಆಸನವನ್ನು, ಸ್ಥಿರಂ=ಸ್ಥಿರವಾಗುವ ಹಾಗೆ, ಪ್ರತಿ ಷ್ಠಾಪ್ಯ=ಇಟ್ಟುಕೊಂಡು, ತತ್ರ ಆಸನೇ=ಆ ಆಸನದಲ್ಲಿ ಉಪವಿಶ್ಯ=ಕೂತುಕೊಂಡು, ಯತಚಿತ್ತೇಂದ್ರಿಯ ಕ್ರಿಯಃ=ಮನಸ್ಸಿನ ವ್ಯಾಪಾರ ಇಂದ್ರಿಯವ್ಯಾಪಾರಗಳನ್ನು ವಶೀಕರಿಸಿಕೊಂಡವನಾಗಿ, ಏಕಾಗ್ರಂ ಮನಃ ಕೃತ್ವಾ=ಮನಸ್ಸನ್ನು ಏಕತ್ರ ಇಟ್ಟುಕೊಂಡು (ಅಂದರೆ ಶ್ರೀಹರಿಯಲ್ಲಿಯೇ ಇರುವಂತೆ ಮಾಡಿಕೊಂಡು) ಆತ್ಮವಿಶುದ್ಧಯೇ=ತನ್ನ ಮನಸ್ಸಿನ ಎಲ್ಲಾ ದೋಷಗಳನ್ನು ಕಳೆದುಕೊಳ್ಳುವುದಕ್ಕಾಗಿಯೂ, ತನ್ನ ಸಂಸಾರಮಲವನ್ನು ನಿವೃತ್ತಿಗೊಳಿಸುವುದಕ್ಕಾಗಿಯೂ, ಯೋಗಂ=ಧ್ಯಾನಯೋಗವನ್ನು, ಯುಂಜ್ಯಾತ್= ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಮಾಡಬೇಕು ॥ ೧೧,೧೨ ॥

ಗೀ ॥ ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥ ೧೩ ॥

ಅ ॥ ಕಾಯಶಿರೋಗ್ರೀವಂ=ಮಧ್ಯದೇಹ ಶಿರಸ್ಸು ಕುತ್ತಿಗೆ ಇವುಗಳನ್ನು, ಸಮಂ=ಸರಳ(ಋಜು) ವಾಗಿ, ಧಾರಯನ್=ಧರಿಸಿಕೊಂಡವನಾಗಿ, ಅಚಲಂ=ಚಲಿಸದಂತೆ, ಸ್ಥಿರಃ=ದೃಢನಾಗಿ ಕುಳಿತುಕೊಂಡು, ಸ್ವಂ=ತನ್ನದ್ದಾದ, ನಾಸಿಕಾಗ್ರಂ=ಮೂಗಿನ ತುದಿಯ ಭಾಗವನ್ನು, ಸಂಪ್ರೇಕ್ಷ್ಯ=ನೋಡಿಕೊಂಡು, ದಿಶಶ್ಚ=ದಿಕ್ಕುಗಳನ್ನೂ, ಅನವಲೋಕಯನ್=ನೋಡದಿರುವವನಾಗಿ, (ಧ್ಯಾನಿಸಬೇಕು) ॥ ೧೩ ॥

ಗೀ ॥ ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।
ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥ ೧೪ ॥

ಅ ॥ ಪ್ರಶಾಂತಾತ್ಮಾ=ಸ್ವಾಭಾವಿಕವಾಗಿ ವಿಷಯಗಳಲ್ಲಿ ಮನಸ್ಸನ್ನು ಹೋಗದಂತೆ ಮಾಡಿಕೊಂಡ ವನಾಗಿ, ವಿಗತಭೀಃ=ವ್ಯಾಘ್ರ ಚೋರ ಮೊದಲಾದವರಿಂದ ಭಯವನ್ನು ಹೊಂದದಿರುವವನಾಗಿ,

ಬ್ರಹ್ಮಚಾರಿವ್ರತೇ=ಬ್ರಹ್ಮಚರ್ಯವ್ರತದಲ್ಲಿ, ಸ್ಥಿತಃ=ಇರುವವನಾಗಿ, (ಅಂದರೆ ಸ್ತ್ರೀಸಂಪರ್ಕಾದಿಗಳ ಆಲೋಚನೆಯಿಲ್ಲದವನಾಗಿ) ಮನಃ=ಮನಸ್ಸನ್ನು, ಸಂಯಮ್ಯ=ಚೆನ್ನಾಗಿ ಸೆಳೆದುಕೊಂಡು, (ವಿಷಯಗಳಲ್ಲಿ ಹೋಗದಿದ್ದಂತೆ ಮಾಡಿಕೊಂಡು) ಮಚ್ಚಿತ್ತಃ=ನನ್ನಲ್ಲಿಯೇ ಮನಸ್ಸನ್ನಿಟ್ಟವನಾಗಿ, ಮತ್ಪರಃ=ನಾನೇ ಸರ್ವೋತ್ತಮನೆಂದು ತಿಳಿದವನಾಗಿ, ಯುಕ್ತಃ=ಧ್ಯಾನರೂಪ ಉಪಾಸನೆಯಿಂದ ಕೂಡಿದವನಾಗಿ, ಆಸೀತ=ಇರಬೇಕು (ಅಂದರೆ ಉಪಾಸನೆಯನ್ನು ಮಾಡುತ್ತಿರಬೇಕು.) ॥ ೧೪ ॥

ಭಾ ॥ ಯೋಗಂ ಸಮಾಧಿಯೋಗಂ ಯುಂಜ್ಯಾತ್ ॥ ೧೧,೧೨,೧೩,೧೪ ॥

ಅ ॥ ಯೋಗಂ=ಧ್ಯಾನಯೋಗವನ್ನು, ಯುಂಜ್ಯಾತ್=ಮಾಡಬೇಕು ॥ ೧೧, ೧೨, ೧೩, ೧೪ ॥

ಪೀ—ಧ್ಯಾನದ ಫಲವನ್ನು ಹೇಳುತ್ತಾರೆ—

**ಗೀ ॥ ಯುಂಜನ್ನೇವಂ ಸದಾಽಽತ್ಮಾನಂ ಯೋಗೀ ನಿಯತಮಾನಸಃ ।**
**ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥ ೧೫ ॥**

ಅ ॥ ನಿಯತಮಾನಸಃ=ಮನಸ್ಸನ್ನು ವಶಪಡಿಸಿಕೊಂಡಿರುವ, ಯೋಗೀ=ಧ್ಯಾನ ಮಾಡುವವನು, ಏವಂ=ಹಿಂದೆ ಹೇಳಿದಪ್ರಕಾರ, ಸದಾ=ಯಾವಾಗಲೂ, ಆತ್ಮಾನಂ=ಶ್ರೀಪರಮಾತ್ಮನನ್ನು, ಯುಂಜನ್=ಧ್ಯಾನಮಾಡುವವನಾಗಿ, ಅಥವಾ ಆತ್ಮಾನಂ=ಮನಸ್ಸನ್ನು, ಯುಂಜನ್=ಶ್ರೀಪರಮಾತ್ಮನಲ್ಲಿಯೇ ಇಡುವವನಾಗಿ, ನಿರ್ವಾಣಪರಮಾಂ=ಶರೀರತ್ಯಾಗಮಾಡಿದ ಮೇಲೆ ಆಗತಕ್ಕ, ಮತ್ಸಂಸ್ಥಾಂ=ನನ್ನಲ್ಲಿ ಸ್ಥಿತಿರೂಪವಾದ, (ನನ್ನ ವೈಕುಂಠಾದಿ ಲೋಕಪ್ರಾಪ್ತಿರೂಪವಾದ) ಶಾಂತಿಂ=ಮೋಕ್ಷವನ್ನು, ಅಧಿಗಚ್ಛತಿ=ಹೊಂದುತ್ತಾನೆ ॥ ೧೫ ॥

ಭಾ ॥ ನಿರ್ವಾಣಪರಮಾಂ ಶರೀರತ್ಯಾಗೋತ್ತರಕಾಲೀನಾಂ ॥ ೧೫ ॥

ಅ ॥ ನಿರ್ವಾಣಪರಮಾಂ=ಶರೀರ ಬಿಟ್ಟಮೇಲೆ ಆಗತಕ್ಕ. ॥ ೧೫ ॥

ಪೀ—ಧ್ಯಾನಯೋಗದಲ್ಲಿ ಆಸಕ್ತನಾದವನಿಗೆ ಆಹಾರಾದಿ ನಿಯಮಗಳನ್ನು ಹೇಳುತ್ತಾರೆ—

**ಗೀ ॥ ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ ।**
**ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥ ೧೬ ॥**

ಅ ॥ ಅರ್ಜುನ=ಅರ್ಜುನನೇ, ಅತ್ಯಶ್ನತಸ್ತು=ಹೆಚ್ಚು ಉಣ್ಣುವವನಿಗೆ, ಯೋಗಃ=ಧ್ಯಾನವು, ನಾಸ್ತಿ=ಶಕ್ಯವಾಗುವುದಿಲ್ಲ ಏಕಾಂತಮನಶ್ನತಃ=ಸರ್ವಥಾ ಉಣ್ಣದೆ ಇದ್ದವನಿಗೂ, (ಉಪವಾಸವನ್ನು ಮಾಡುವವನಿಗೂ) ನ=ಧ್ಯಾನವು ಶಕ್ಯವಾಗುವುದಿಲ್ಲ. ಅತಿಸ್ವಪ್ನಶೀಲಸ್ಯ=ಹೆಚ್ಚು ನಿದ್ದೆಯಲ್ಲಿಯೇ ಆಸಕ್ತನಾದವನಿಗೂ, ನಚ=ಶಕ್ಯವಲ್ಲ, ಜಾಗ್ರತಃ=ಸರ್ವಥಾ ನಿದ್ದೆಮಾಡದಿದ್ದವನಿಗೂ ನೈವ=ಆಗುವುದೇ ಇಲ್ಲ. (ಇಲ್ಲಿ ಅಶಕ್ತನಿಗೇನೇ ಅನಶನವನ್ನೂ ಜಾಗರಣವನ್ನೂ ನಿಷೇಧಿಸಿದ್ದು. ಶಕ್ತನು ಭೋಜನಾದಿಗಳನ್ನು ಮಾಡದಿದ್ದರೂ ಧ್ಯಾನಕ್ಕೆ ಕೆಡಕು ಇಲ್ಲ.) ॥ ೧೬ ॥

ಭಾ ॥ ಅನಶನಾದಿನಿಷೇಧೋಽಶಕ್ತಸ್ಯ । ಉಕ್ತಂ ಹಿ । ನಿದ್ರಾಽಶನಭಯಶ್ವಾಸಚೇಷ್ಟಾತಂದ್ರ್ಯಾದಿವರ್ಜನಂ । ಕೃತ್ವಾ ನಿಮೀಲಿತಾಕ್ಷಸ್ತು ಶಕ್ತೋ ಧ್ಯಾಯನ್ ಪ್ರಸಿದ್ಧ್ಯತೀತಿ ನಾರದೀಯೇ ॥ ೧೬ ॥

ಅ ॥ ಅಶಕ್ತನಿಗೇನೇ ಅನಶನಾದಿಗಳನ್ನು ನಿಷೇಧ ಮಾಡಿದ್ದು (ಸರ್ವರಿಗೆ ಅಲ್ಲ) (ಅಂದರೆ ಅಶಕ್ತನು ದೇಹಧಾರಣೆಗೆ ಉಪಯುಕ್ತವಾದ ಆಹಾರವನ್ನು ಸ್ವೀಕರಿಸಬೇಕು) ಈ ಪ್ರಮೇಯವು ನಾರದೀಯ ಪುರಾಣದಲ್ಲಿ ಹೇಳಿದೆ ಶಕ್ತನಾದವನು ನಿದ್ದೆ ಭೋಜನ ಭಯ ಶ್ವಾಸ ಚೇಷ್ಟಾ ಆಲಸ್ಯ ಮೊದಲಾದವುಗಳ ಪರಿತ್ಯಾಗವನ್ನು ಮಾಡಿ ಸ್ವಲ್ಪ ಕಣ್ಣುಗಳನ್ನು ಮುಚ್ಚಿಕೊಂಡವನಾಗಿ ಶ್ರೀಹರಿಯನ್ನು ಧ್ಯಾನ ಮಾಡುವವನು ಶಾಂತಚಿತ್ತನಾಗುತಾನೆಂದು ನಾರದೀಯ ಪುರಾಣದಲ್ಲಿ ಹೇಳಿದೆ (ಶಕ್ತನು ಭೋಜನ ಬಿಡಬೇಕೆಂದು ಹೇಳಿದ್ದು ಅಶಕ್ತನಾದವನು ದೇಹಧಾರಣೋಪಯುಕ್ತವಾಗಿ ಅಶನಾದಿಗಳನ್ನು ಮಾಡಬಹುದು.) ॥ ೧೬ ॥

ಪೀ—ಎಂತಹವನಿಗೆ ಧ್ಯಾನವು ಪ್ರಶಸ್ತವಾಗುತ್ತದೆಂದರೆ—

ಗೀ ॥ ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।
ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥ ೧೭ ॥

ಅ ॥ ಯುಕ್ತಾಹಾರವಿಹಾರಸ್ಯ=ಯೋಗಯುಕ್ತಗಳಾದ ಭೋಜನ ಸಂಚಾರಗಳುಳ್ಳ, (ಅಂದರೆ ಎಷ್ಟು ಆಹಾರಾದಿಗಳಿಂದ ಶ್ರಮಾದಿಗಳು ಆಗುವುದಿಲ್ಲವೋ, ಅಷ್ಟೇ ಭೋಜನ ಸಂಚಾರಗಳನ್ನು ಮಾಡುವ) ಕರ್ಮಸು=ಕರ್ಮಗಳಲ್ಲಿ, ಯುಕ್ತಚೇಷ್ಟಸ್ಯ=ಶ್ರಮವು ಆಗದಂತೆ ಕಾರ್ಯಮಾಡುವ, ಯುಕ್ತಸ್ವಪ್ನಾವಬೋಧಸ್ಯ=ಎಷ್ಟು ನಿದ್ದೆಯೂ ಪ್ರಬೋಧವೂ (ಜಾಗರಣ) ಧ್ಯಾನಯೋಗಕ್ಕೆ ಕೆಡುಕು ಆಗುವುದಿಲ್ಲವೋ, ಅಷ್ಟೇ ನಿದ್ದೆಯನ್ನು ಜಾಗರಣವನ್ನು ಮಾಡುತ್ತಿರುವ ಮನುಷ್ಯನಿಗೆ, ಯೋಗಃ=ಧ್ಯಾನಯೋಗವು (ಸಮಾಧಿಯು) ದುಃಖಹಾ ಭವತಿ=ಸಂಸಾರ ದುಃಖವನ್ನು ಪರಿಹರಿಸುತ್ತದೆ. ॥ ೧೭ ॥

ಭಾ ॥ ಯುಕ್ತಾಹಾರವಿಹಾರಸ್ಯ । ಸೋಪಾಯಾಹಾರಾದೇಃ । ಯಾವತಾ ಶ್ರಮಾದ್ಯಭಾವೋ ಭವತಿ ತಾವದಾಹಾರಾದೇರಿತ್ಯರ್ಥಃ ॥ ೧೭ ॥

ಅ ॥ ಯುಕ್ತಾಹಾರವಿಹಾರಸ್ಯ=ಧ್ಯಾನದಿಂದ ಕೂಡಿದ ಆಹಾರಾದಿಗಳುಳ್ಳ ಅಂದರೆ ಎಷ್ಟು ಆಹಾರಾದಿಗಳಿಂದ ಶ್ರಮ, ಇಂದ್ರಿಯಗಳಿಗೆ ವಿಷಯಗಳಲ್ಲಿ ಆತುರತೆ, ಆಲಸ್ಯ, ಮೊದಲಾದವುಗಳು ಬರುವುದಿಲ್ಲವೋ, ಅಷ್ಟು ಆಹಾರಾದಿಗಳುಳ್ಳ (ಅಂತೂ ಧ್ಯಾನಕ್ಕೆ ಅವಿರೋಧಿಯಾದ ಆಹಾರಾದಿಗಳುಳ್ಳವನು ಎಂದರ್ಥವು.) ॥ ೧೭ ॥

ಪೀ—ಧ್ಯಾನಯೋಗದ ಸಂಪೂರ್ಣ ಸ್ವರೂಪವನ್ನು ಹೇಳುತ್ತಾರೆ—

ಗೀ ॥ ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।
ನಿಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥ ೧೮ ॥

ಅ ॥ ಯದಾ=ಯಾವಾಗ, ವಿನಿಯತಂ=ವಿಶೇಷವಾಗಿ ಶಬ್ದಾದಿ ವಿಷಯಗಳದ್ದೆಶೆಯಿಂದ ಹಿಂತೆರಳಿಸಿದ ಚಿತ್ತಂ=ಮನಸ್ಸು, ಆತ್ಮನ್ಯೇವ=ಪರಮಾತ್ಮನಲ್ಲಿಯೇ, ಅವತಿಷ್ಠತೇ=ಇರುತ್ತದೋ, ಸರ್ವಕಾಮೇಭ್ಯಃ=ಎಲ್ಲಾ ಕಾಮ್ಯ ವಸ್ತುಗಳಲ್ಲಿ, ನಿಸ್ಪೃಹಃ=ಇಚ್ಛೆಯಿಲ್ಲದವನು, ಯಾವಾಗ ಆಗುತ್ತಾನೋ, ತದಾ=ಆಗ, ಯುಕ್ತ ಇತಿ=ಧ್ಯಾನಯೋಗವು ಸಂಪೂರ್ತಿವುಳ್ಳವನೆಂದು, ಉಚ್ಯತೇ=ಹೇಳಿಸಿಕೊಳ್ಳಲ್ಪಡುತ್ತಾನೆ ॥ ೧೮ ॥

ಭಾ ॥ ಆತ್ಮನಿ ಭಗವತಿ ॥ ೧೮ ॥

ಅ ॥ ಆತ್ಮನಿ= ಭಗವಂತನಲ್ಲಿ (ತನ್ನಲ್ಲಿ ಎಂದರ್ಥವಲ್ಲ) ॥ ೧೮ ॥

ಪೀ— ಧ್ಯಾನಯೋಗಸಂಪನ್ನನು ಹೇಗೆ ಇರುತ್ತಾನೆಂದರೆ—

**ಗೀ ॥ ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥ ೧೯ ॥**

ಅ ॥ ಆತ್ಮನಃ ಯೋಗಂ=ಭಗವದ್ವಿಷಯಕವಾದ ಧ್ಯಾನವನ್ನು, ಯುಂಜತಃ=ಮಾಡುತ್ತಿರುವ, ಯತಚಿತ್ತಸ್ಯ= ಮನಸ್ಸನ್ನು ವಶಪಡಿಸಿಕೊಂಡಿರುವ, ಯೋಗಿನಃ= ಧ್ಯಾನಯೋಗವುಳ್ಳವನಿಗೆ, ನಿವಾತಸ್ಥಃ= ಗಾಳಿ ಇಲ್ಲದ ದೇಶದಲ್ಲಿರತಕ್ಕ, ದೀಪಃ= ದೀಪವು, ಯಥಾ=ಹೇಗೆ, ನೇಂಗತೇ=ಕದಲುವುದಿಲ್ಲವೋ, ಸಾ ಉಪಮಾ= ಆ ದೃಷ್ಟಾಂತವು, ಸ್ಮೃತಾ=ಆಗುತ್ತದೆ. ॥ ೧೯ ॥

**ಭಾ ॥ ಆತ್ಮನೋ ಯೋಗಂ ಭಗವದ್ವಿಷಯಂ ಯೋಗಂ ॥ ೧೯ ॥**

ಅ ॥ ಆತ್ಮನಃ= ಭಗವದ್ವಿಷಯಕವಾದ, ಧ್ಯಾನವನ್ನು. ॥ ೧೯ ॥

**ಗೀ ॥ ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾಽಽತ್ಮನಾಽಽತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥ ೨೦ ॥**

ಅ ॥ ಯೋಗಸೇವಯಾ=ಧ್ಯಾನಯೋಗವನ್ನು ಮಾಡುತ್ತಿರುವುದರಿಂದ, ನಿರುದ್ಧಂ=ತಡೆಯಲ್ಪಟ್ಟ, ಚಿತ್ತಂ=ಮನಸ್ಸು, ಯತ್ರ=ಯಾವ ಧ್ಯಾನಾವಸ್ಥೆಯಲ್ಲಿ, ಉಪರಮತೇ= ಬಾಹ್ಯ ವ್ಯಾಪಾರಗಳಿಲ್ಲದ ಹಾಗೆ ಆಗುತ್ತದೋ, ಯತ್ರ ಚೈವ= ಯಾವ ಧ್ಯಾನಯೋಗದ ಅವಸ್ಥೆಯಲ್ಲಿಯೇ, ಆತ್ಮನಾ= ಮನಸ್ಸಿನಿಂದ, ಆತ್ಮಾನಂ= ಶ್ರೀಪರಮಾತ್ಮನನ್ನು, ಪಶ್ಯನ್= ನೋಡುವವನಾಗಿ, ಆತ್ಮನಿ= ದೇಹದಲ್ಲಿ, ತುಷ್ಯತಿ= ಸಂತೋಷಗೊಳ್ಳುತ್ತಾನೋ, (ಅದನ್ನು ಯೋಗವೆಂದು ಹೆಸರುಳ್ಳದ್ದನ್ನಾಗಿ ತಿಳಿಯಬೇಕು ) ॥ ೨೦ ॥

**ಭಾ ॥ ಆತ್ಮನಾ ಮನಸಾ । ಆತ್ಮನಿ ದೇಹೇ । ಆತ್ಮಾನಂ ಭಗವಂತಂ ಪಶ್ಯನ್ ॥ ೨೦ ॥**

ಅ ॥ ಆತ್ಮನಾ= ಮನಸ್ಸಿನಿಂದ, ಆತ್ಮನಿ= ದೇಹದಲ್ಲಿ, ಆತ್ಮಾನಂ= ಪರಮಾತ್ಮನನ್ನು, ನೋಡಿಕೊಂಡು ಇರುವವನು ॥ ೨೦ ॥

**ತಾ ॥ ಆತ್ಮಾನಂ ವಿಷ್ಣುಂ । ಆತ್ಮನಾ ತತ್ಪ್ರಸಾದೇನ (ತತ್ಪ್ರಸಾದಾದೇವ) ॥ ೨೦ ॥**

ಅ ॥ ಆತ್ಮಾನಂ= ವಿಷ್ಣುವನ್ನು , ಆತ್ಮನಾ= ಶ್ರೀಹರಿಯ ಪ್ರಸಾದದಿಂದ. ॥ ೨೦ ॥

**ಗೀ ॥ ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಂ ।**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥ ೨೧ ॥**

ಅ ॥ ಯತ್ರ=ಯಾವ ಧ್ಯಾನದ ಅವಸ್ಥೆಯಲ್ಲಿ, ಸ್ಥಿತಃ= ಇದ್ದವನಾಗಿ, ಬುದ್ಧಿಗ್ರಾಹ್ಯಂ=ಅನುಭವೈಕವೇದ್ಯವಾದ, ಅತೀಂದ್ರಿಯಂ=ಇಂದ್ರಿಯಗಳಿಂದ ತಿಳಿಯಲ್ಪಡದಿರುವ, ಆತ್ಯಂತಿಕಂ ಸುಖಂ=ಬಹಳ ಸುಖವನ್ನು, ವೇತ್ತಿ=ಅನುಭವಿಸುತ್ತಾನೋ, ಯತ್ರ=ಯಾವ ಯೋಗದಲ್ಲಿ, ಸ್ಥಿತಃ=ಇರುವ, ಅಯಂ=ಈ ಧ್ಯಾನ ಮಾಡುವವನು, ತತ್ತ್ವತಃ=ಧ್ಯೇಯವಾದ ಭಗವದ್ರೂಪದಿಂದ, ನ ಚಲತಿ=ಕದಲುವುದಿಲ್ಲವೋ, (ತಂ ಯೋಗಸಂಜ್ಞಿತಂ ವಿದ್ಯಾತ್) ॥ ೨೧ ॥

ಗೀ ॥ ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।
ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಽಪಿ ವಿಚಾಲ್ಯತೇ ॥ ೨೨ ॥

ಅ ॥ ಯಂ=ಯಾವ ಧ್ಯಾನಯೋಗವನ್ನು, ಲಬ್ಧ್ವಾ ಚ=ಹೊಂದಿಯೇ ತತಃ=ಅದಕ್ಕಿಂತ, ಅಪರಂ ಲಾಭಂ=ಬೇರೆ ಲಾಭವನ್ನೇ, ಅಧಿಕಂ=ಹೆಚ್ಚಾದುದನ್ನಾಗಿ, ನ ಮನ್ಯತೇ=ತಿಳಿಯುವುದಿಲ್ಲವೋ, ಯಸ್ಮಿನ್=ಯಾವ ಧ್ಯಾನದಲ್ಲಿ, ಸ್ಥಿತಃ=ಇರುವ ಧ್ಯಾನಿಯು, ಗುರುಣಾಽಪಿ ದುಃಖೇನ=ದುಃಖಕಾರಣವು ಬಹಳವಾಸ್ತಿ ಇದ್ದರೂ ಅದರಿಂದಲೂ ಕೂಡ, ನ ವಿಚಾಲ್ಯತೇ=ಚಲಿಸುವುದಿಲ್ಲವೋ. (ತಂವಿದ್ಯಾತ್) ॥ ೨೨ ॥

ಭಾ ॥ ತತ್ತ್ವತೋ ಭಗವದ್ರೂಪಾತ್ ॥ ೨೧,೨೨ ॥

ಅ ॥ ತತ್ತ್ವತಃ=ಭಗವದ್ರೂಪದಿಂದ (ತತ್ತ್ವತಃ ಬ್ರಹ್ಮಭಾವದೆಶೆಯಿಂದ ಎಂಬ ಪರರ ವ್ಯಾಖ್ಯಾನವು ಪ್ರಮಾಣವಿರುದ್ಧವೆಂದುಕ್ತವಾಯ್ತು) ॥ ೨೧, ೨೨ ॥

ಗೀ ॥ ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಂ ।
ಸ ನಿಶ್ಚಯೇನ ಯೋಕ್ತವ್ಯೋ ಯೋಗೋ ನಿರ್ವಿಣ್ಣಚೇತಸಾ ॥ ೨೩ ॥

ಅ ॥ ತಂ=ಆದಾವ ಧ್ಯಾನಯೋಗವನ್ನು, ದುಃಖಸಂಯೋಗವಿಯೋಗಂ=ದುಃಖ ಸಂಬಂಧವನ್ನೇ ಕಳೆಯುವ, ಯೋಗಸಂಜ್ಞಿತಂ=ಯೋಗವೆಂದು ಹೇಳಿಸಿಕೊಳ್ಳುವುದನ್ನಾಗಿ, ವಿದ್ಯಾತ್=ತಿಳಿಯಬೇಕು (ಸಂಯೋಗಪದದಿಂದ ಹುಟ್ಟಿದ ದುಃಖವನ್ನು ಮಾತ್ರ ಈ ಧ್ಯಾನವು ನಾಶಗೊಳಿಸುವುದಲ್ಲ, ಮತ್ತೆ ದುಃಖವನ್ನು ಹುಟ್ಟದಿದ್ದಂತೆಯೇ ಮಾಡುತ್ತದೆಂದು ಸೂಚಿತವಾಯ್ತು.) ಸಃ ಯೋಗಃ=ಆ ಸಮಾಧಿಯು, ನಿರ್ವಿಣ್ಣಚೇತಸಾ=ವಿಷಯಗಳಲ್ಲಿ ವೈರಾಗ್ಯವಿರುವ (ಪ್ರವರ್ತಿಸದಿರುವ) ಮನಸ್ಸಿನಿಂದ, ನಿಶ್ಚಯೇನ ಯೋಕ್ತವ್ಯಃ=(ಮೋಕ್ಷೇಚ್ಛುವಿನಿಂದ) ಮಾಡಲ್ಪಡಲೇಬೇಕು (ಅಂದರೆ ಮೋಕ್ಷವನ್ನು ಇಚ್ಛಿಸುವವನು ಧ್ಯಾನವನ್ನು ಮಾಡಲೇಬೇಕು) ॥ ೨೩ ॥

ಭಾ ॥ (೧) ದುಃಖಸಂಯೋಗೋ ಯೇನ ವಿಯುಜ್ಯತೇ ಸ ದುಃಖಸಂಯೋಗವಿಯೋಗಃ ॥ (೨) ನ ಕೇವಲಮುತ್ಪನ್ನಂ ದುಃಖಂ ನಾಶಯತಿ ಉತ್ಪತ್ತಿಮೇವ ನಿವಾರಯತೀತಿ ದರ್ಶಯತಿ ಸಂಯೋಗಶಬ್ದೇನ । ನಿಶ್ಚಯೇನ ಯೋಕ್ತವ್ಯಃ ಯೋಕ್ತವ್ಯ ಏವ ಬುಭೂಷುಣೇತ್ಯರ್ಥಃ ॥ ೨೩ ॥

ಅ ॥ (೧) ದುಃಖಸಂಬಂಧವು ಯಾವುದರಿಂದ ನಾಶಹೊಂದುತ್ತದೋ, ಅದು ದುಃಖಸಂಯೋಗವಿಯೋಗವು ಎನಿಸುತ್ತದೆ (೨) ಹುಟ್ಟಿದ್ದ ದುಃಖವನ್ನು ಮಾತ್ರ ನಾಶಗೊಳಿಸುವುದಲ್ಲ, ಮತ್ತೆ ದುಃಖೋತ್ಪತ್ತಿಯನ್ನೇ ನಾಶಗೊಳಿಸುತ್ತದೆ, ಎಂದು ಸಂಯೋಗಶಬ್ದದಿಂದ ತೋರಿಸುತ್ತಾರೆ ಮೋಕ್ಷವನ್ನು ಇಚ್ಛಿಸುವವನು ಹಿಂದೆ ಹೇಳಿದಪ್ರಕಾರ ಧ್ಯಾನವನ್ನು ಮಾಡಲೇಬೇಕು. ಮುಮುಕ್ಷುವು ಧ್ಯಾನವನ್ನು ಮಾಡದಿರಬಾರದು. ॥ ೨೩ ॥

ಗೀ ॥ ಸಂಕಲ್ಪಪ್ರಭವಾನ್ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।
ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥ ೨೪ ॥

ಅ || (ಮೋಕ್ಷವನ್ನು ಹೊಂದಲಿಚ್ಛಿಸುವ ಮನುಷ್ಯನು) ಸಂಕಲ್ಪಪ್ರಭಾವಾನ್=ಇಂತಹ ಫಲವು ಲಭಿಸುವುದಕ್ಕಾಗಿ ಈ ಕರ್ಮವನ್ನು ಮಾಡುತ್ತೇನೆ, ಎಂಬುವ ಸಂಕಲ್ಪಪೂರ್ವಕವಾದ ಕರ್ಮಾನುಷ್ಠಾನದಿಂದ ಹುಟ್ಟಿರುವ, ಸರ್ವಾನ್ ಕಾಮಾನ್=ಎಲ್ಲಾ ವಿಷಯಭೋಗಗಳನ್ನು, ಅಶೇಷತಃ=ನಿಃಶೇಷವಾಗಿ, ತ್ಯಕ್ತ್ವಾ=ಬಿಟ್ಟುಬಿಟ್ಟು, ಇಂದ್ರಿಯಗ್ರಾಮಂ=ಇಂದ್ರಿಯಗಳ ಸಮೂಹವನ್ನು, ಸಮಂತತಃ=ಸಮಸ್ತ ವಿಷಯಗಳಿಂದಲೂ, ಮನಸೈವ=ಮನಸ್ಸಿನಿಂದಲೇ, ವಿನಿಯಮ್ಯ=ನಿಗ್ರಹಿಸಿಕೊಂಡು (ಧ್ಯಾನಿಸಬೇಕು) ||೨೪||

ಭಾ || ಸರ್ವಾನ್ ಸರ್ವವಿಷಯಾನ್ | ಅಶೇಷತಃ ಏಕವಿಷಯೋಽಪಿ ಕಾಮಃ ಸ್ವಲ್ಪಃ ಕಾದಾಚಿತ್ಕೋಽಪಿ ನ ಕರ್ತವ್ಯ ಇತ್ಯರ್ಥಃ | ಮನಸೈವ ನಿಯಂತುಂ ಶಕ್ಯತೇ | ನಾನ್ಯೇನೇತ್ಯೇವಶಬ್ದಃ || ೨೪ ||

ಅ || ಸರ್ವಾನ್=ಸರ್ವವಿಷಯಕಗಳಾದ, ಅಶೇಷತಃ=ನಿಶ್ಶೇಶವಾಗಿ. ಅಂದರೆ ಒಂದೊಂದೊದನ್ನು ವಿಷಯೀಕರಿಸುವ ಇಚ್ಛೆಯನ್ನು ಕೆಲವು ವೇಳೆಯಲ್ಲಿಯೂ ಸ್ವಲ್ಪವನ್ನೂ ಮಾಡಕೂಡದು ಮನಸ್ಸಿನಿಂದಲೇ (ಇಂದ್ರಿಯ ಸಮೂಹವು) ವಶಪಡಿಸಿಕೊಳ್ಳಲಿಕ್ಕೆ ಶಕ್ಯವಾಗುತ್ತದೆ. ಬೇರೆ ಯಾವುದರಿಂದಲೂ ಶಕ್ಯವಲ್ಲ, ಎಂಬ ಅಭಿಪ್ರಾಯದಿಂದ ಎಂದು ತಿಳಿಸುವುದಕ್ಕಾಗಿ ಏವ ಶಬ್ದವು. ಹೀಗೆ ತಿಳಿಸುವುದಕ್ಕಾಗಿ ಮನಸೈವ ಎಂಬುವಲ್ಲಿ ಏವ ಶಬ್ದವು. || ೨೪ ||

ಗೀ || ಶನೈಶ್ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ |
ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ || ೨೫ ||

ಮನಶ್ಚ=ಅಂತಹ ಮನಸ್ಸನ್ನು, ಧೃತಿಗೃಹೀತಯಾ=ಧೈರ್ಯದಿಂದ ವಶೀಕರಿಸಲ್ಪಟ್ಟ ಅಥವಾ ಧಾರಣೆಯಿಂದ ವಶೀಕೃತವಾದ, ಬುದ್ಧ್ಯಾ=ಬುದ್ಧಿಯಿಂದ, ಶನೈಃಶನೈ=ಮೆಲ್ಲಗೆಮೆಲ್ಲಗೆ, ಉಪರಮೇತ್=ವಿಷಯಗಳ ಕಡೆಯಿಂದ ಹಿಂತೆರಳಿಸಬೇಕು. ಅಥವಾ ಶ್ರೀಹರಿಯಲ್ಲಿಯೇ ಅತ್ಯಾಸಕ್ತವನ್ನಾಗಿ ಮಾಡಬೇಕು. (ಮತ್ತು ಬುದ್ಧಿಯಿಂದ) ಮನಃ=ಮನಸ್ಸನ್ನು, ಆತ್ಮಸಂಸ್ಥಂ=ಶ್ರೀಹರಿಯಲ್ಲಿಯೇ ಆಸಕ್ತವನ್ನಾಗಿ, ಕೃತ್ವಾ=ಮಾಡಿ, ಕಿಂಚಿದಪಿ=ಶ್ರೀಹರಿಯಿಂದ ಬೇರೆ ಯಾವ ವಸ್ತುವನ್ನೂ ಕೂಡ, ನ ಚಿಂತಯೇತ್=ಆಲೋಚಿಸಕೂಡದು. || ೨೫ ||

ಭಾ || ಬುದ್ಧೇಃ ಕಾರಣತ್ವಂ ಮನೋನಿಗ್ರಹೇ ಆತ್ಮರಮಣೇ ಚ || ೨೫ ||

ಅ || ಮನಸ್ಸನ್ನು ವಿಷಯಗಳಿಂದ ವಶಪಡಿಸಿಕೊಳ್ಳುವ ವಿಷಯದಲ್ಲಿಯೂ, ಮನಸ್ಸನ್ನು ಶ್ರೀಹರಿಯಲ್ಲಿಯೇ ಇಡುವ ವಿಷಯದಲ್ಲಿಯೂ, ಸರ್ವದಾ ಭಗವಧ್ಧ್ಯಾನಾದಿಗಳಲ್ಲಿಯೂ ಬುದ್ಧಿಯು ಕಾರಣವು. || ೨೫ ||

ಗೀ || ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಂ |
ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ || ೨೬ ||

ಅ || ಯತಃ ಯತಃ=ಯಾವ ಯಾವ ವಿಷಯಗಳಲ್ಲಿ, ಸ್ವತಃ=ಸ್ವಾಭಾವಿಕವಾಗಿ, ಚಂಚಲಂ=ಚಪಲವಾದ, ಮನಃ=ಮನಸ್ಸು, ಅಸ್ಥಿರಂ=ಒಂದುಕಡೆ ನಿಲ್ಲದೆ, ನಿಶ್ಚರತಿ=ಸಂಚರಿಸುತ್ತದೋ, ತತಸ್ತತಃ=ಆಯಾವ ವಿಷಯಗಳಿಂದ, ಏತತ್=ಈ ಮನಸನ್ನು, ನಿಯಮ್ಯ=ಸೆಳೆದು, (ವಿಷಯಗಳಲ್ಲಿ ಹೋಗದಿದ್ದಂತೆ

ಮಾಡಿ.) ಆತ್ಮನ್ಯೇವ= ಶ್ರೀಪರಮಾತ್ಮನಲ್ಲಿಯೇ, ವಶಂ= ಅಧೀನವನ್ನಾಗಿಯೇ (ಶ್ರೀಹರಿಯ ಅಧೀನವನ್ನಾಗಿಯೇ ಶ್ರೀಹರಿಯಲ್ಲಿಯೇ ಇರುವಂತೇ) ಕುರ್ಯಾತ್= ಮಾಡತಕ್ಕದು. || ೨೬ ||

ಪೀ—ಹೀಗೆ ಅಂಗಗಳಿಂದೊಡಗೂಡಿದ ಧ್ಯಾನಯೋಗವನ್ನು ಹೇಳಿ, ಅದನ್ನು ಮಾಡುವವನಿಗೆ ಫಲವನ್ನು ವಿವರಿಸಿ ಹೇಳುತ್ತಾರೆ—

**ಗೀ || ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಂ |**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಂ || ೨೭ ||**

ಅ || ಪ್ರಶಾಂತಮನಸಂ= ಸ್ವಾಭಾವಿಕವಾಗಿ ವಿಷಯಗಳಲ್ಲಿ ಪ್ರವರ್ತಿಸದಿರುವ ಮನಸ್ಸುಳ್ಳ, ಶಾಂತರಜಸಂ= ರಜೋಗುಣದ ಕಾರ್ಯವಿಲ್ಲದಿರುವ, ಅಕಲ್ಮಷಂ= ಕಾಮ ಕ್ರೋಧ ಮೊದಲಾದ ದೋಷಗಳು ಇಲ್ಲದಿರುವ, ಬ್ರಹ್ಮಭೂತಂ=ಪರಬ್ರಹ್ಮನಲ್ಲಿಯೇ ಸಂಪೂರ್ಣ ಮನಸ್ಸನ್ನು ಇಟ್ಟಿರುವ, ಏನಂ ಯೋಗಿನಂ= ಈ ಸಮಾಧಿಯೋಗವುಳ್ಳ ಜ್ಞಾನಿಯನ್ನು, ಉತ್ತಮಂ ಸುಖಂ= ಅತ್ಯುತ್ತಮವಾದ ಸುಖವು, ಉಪೈತಿ= ಹೊಂದುತ್ತದೆ ಹಿ= ಶ್ರುತ್ಯಾದಿಗಳಲ್ಲಿ ಪ್ರಸಿದ್ಧವೇ ಆಗಿದೆ || ೨೭ ||

**ಭಾ || (೧) ಯತೋ ಯತಃ ಯತ್ರಯತ್ರ | ಯತೋಯತೋ ಧಾವತೀತ್ಯಾದಿಪ್ರಯೋಗಾತ್ || (೨) ಆತ್ಮನ್ಯೇವ ವಶಂ ನಯೇತ್ | ಆತ್ಮವಿಷಯ ಏವ ವಶೀಕುರ್ಯಾದಿತ್ಯರ್ಥಃ || ೨೬,೨೭ ||**

ಅ || (೧) ಯತಃ ಯತಃ ಎಲ್ಲಿ ಎಲ್ಲಿ, ಎಂದರ್ಥವು, ಯತೋ ಯತೋ ಧಾವತಿ, ಎಲ್ಲಿ ಎಲ್ಲಿಗೆ ಓಡುತ್ತಾನೋ ಇದುಮೊದಲಾದ ಪ್ರಯೋಗಗಳಿಂದ (ಆ ರೀತಿಯಾಗಿ ಅರ್ಥವು ತಿಳಿಯುತ್ತದೆ) (೨) ಆತ್ಮನ್ಯೇವ ವಶಂ ನಯೇತ್= ಶ್ರೀಹರಿಯ ವಿಷಯದಲ್ಲಿಯೇ ವಶೀಕರಿಸಬೇಕು ಅಂದರೆ ಭಗವದ್ಧ್ಯಾನವನ್ನು ಮಾಡಿಕೊಂಡಿರಬೇಕು. || ೨೬, ೨೭ ||

**ಟಾ || ಬ್ರಹ್ಮಣಿ ಭೂತಂ || ೨೭ ||**

ಅ || ಬ್ರಹ್ಮನ ಅಧೀನನಾಗಿರುವ || ೨೭ ||

ಪೀ—ಯೋಗಿಗೆ ಸುಖವು ಅನಾಯಾಸದಿಂದಲೇ ಉಂಟಾಗುತ್ತದೆಂದು ಹೇಳುತ್ತಾರೆ—

**ಗೀ || ಯುಂಜನ್ನೇವಂ ಸದಾಽಽತ್ಮಾನಂ ಯೋಗೀ ವಿಗತಕಲ್ಮಷಃ |**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ || ೨೮ ||**

ಅ || ವಿಗತಕಲ್ಮಷಃ= ರಾಗಾದಿದೋಷಗಳು ಇಲ್ಲದಿರುವ, ಯೋಗೀ= ಯೋಗಿಯು, ಏವಂ= ಹಿಂದೆ ಹೇಳಿದ ಪ್ರಕಾರ, ಸದಾ= ಯಾವಾಗಲೂ, ಆತ್ಮಾನಂ= ಪರಮಾತ್ಮನನ್ನು, ಯುಂಜನ್= ಧ್ಯಾನಿಸುವವನಾಗಿ, ಸುಖೇನ= ಕ್ಲೇಶವಿಲ್ಲದೆ, (ಅನಾಯಾಸದಿಂದ) ಬ್ರಹ್ಮಸಂಸ್ಪರ್ಶಂ= ಶ್ರೀಹರಿಯ ಸಂಸರ್ಗದಿಂದ ಪ್ರಕಟವಾಗುವ, ಅತ್ಯಂತಂ= ಅತ್ಯಧಿಕವಾದ ಸುಖಂ= ಆನಂದವನ್ನು, ಅಶ್ನುತೇ= ಹೊಂದುತ್ತಾನೆ, (ಅನುಭವಿಸುತ್ತಾನೆ) || ೨೮ ||

**ಭಾ ॥ ಪೂರ್ವಶ್ಲೋಕೋಕ್ತಂ ಪ್ರಪಂಚಯತಿ । ಏವಂ ಯುಂಜನ್ನಿತಿ ॥ ೨೮ ॥**

ಅ ॥ ಏವಂ ಯುಜನ್ ಎಂಬುವ ಶ್ಲೋಕದಿಂದ ಹಿಂದಿನ ಶ್ಲೋಕದಲ್ಲಿ ಹೇಳಿದವಿಷಯವನ್ನೇ ವಿವರಿಸುತ್ತಾರೆ ॥ ೨೮ ॥

ಪೀ— ಧ್ಯೇಯವಾದ ಭಗವದ್ರೂಪವನ್ನು ಹೇಳುತ್ತಾರೆ—

**ಗೀ ॥ ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾಽಽತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ ೨೯ ॥**

ಅ ॥ ಸರ್ವತ್ರ= ಚತುರ್ಮುಖನನ್ನಾರಂಭಿಸಿ ತೃಣಪರ್ಯಂತ ಜೀವರಲ್ಲಿ, ಸಮದರ್ಶನಃ= ಐಶ್ವರ್ಯಾದಿಗಳಿಂದ ಶ್ರೀಪರಮಾತ್ಮನು ಸಮನಾಗಿಯೇ ಇದ್ದಾನೆಂದು ತಿಳಿಯುವ, ಯೋಗಯುಕ್ತಾತ್ಮಾ= ಧ್ಯಾನಯೋಗದಿಂದ ಕೂಡಿದ ಮನಸ್ಸುಳ್ಳ ಯೋಗಿಯು, ಆತ್ಮಾನಂ= ಶ್ರೀಪರಮಾತ್ಮನನ್ನು, ಸರ್ವಭೂತಸ್ಥಂ= ಚತುರ್ಮುಖನನ್ನಾರಂಭಿಸಿ ತೃಣಪರ್ಯಂತ ಸಮಸ್ತ ಪ್ರಾಣಿಗಳಲ್ಲಿಯೂ ನಿಯಾಮಕನಾಗಿ ಇರುವವನನ್ನಾಗಿಯೂ, ಆತ್ಮನಿ= ಪರಮಾತ್ಮನಲ್ಲಿ, ಸರ್ವಭೂತಾನಿ= ಸಮಸ್ತ ಪ್ರಾಣಿಗಳೂ ಆಶ್ರಯಿಸಿಕೊಂಡಿರುತ್ತವೆ ಎಂದೂ, ಈಕ್ಷತೇ= ತಿಳಿಯುತ್ತಾನೆ ॥ ೨೯ ॥

**ಭಾ ॥ (೧) ಧ್ಯೇಯಮಾಹ । ಸರ್ವಭೂತಸ್ಥಮಿತಿ । ಸರ್ವಭೂತಸ್ಥಮಾತ್ಮಾನಂ ಪರಮೇಶ್ವರಂ । ಸರ್ವಭೂತಾನಿ ಚಾತ್ಮನಿ ಪರಮೇಶ್ವರೇ ॥ (೨) ತಂ ಚ ಪರಮೇಶ್ವರಂ ಬ್ರಹ್ಮಕೃಣಾದಾವೈಶ್ವರ್ಯಾದಿನಾ ಸಾಮ್ಯೇನ ಪಶ್ಯತಿ ॥ (೩) ತಚ್ಚೋಕ್ತಂ । ಆತ್ಮಾನಂ ಸರ್ವಭೂತೇಷು ಭಗವಂತಮವಸ್ಥಿತಂ । ಅಪಶ್ಯತ್ಸರ್ವಭೂತಾನಿ ಭಗವತ್ಯಪಿ ಚಾತ್ಮನೀತಿ । ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮಿತಿ ಚ ॥ ೨೯ ॥**

ಅ ॥ (೧) ಸರ್ವಭೂತಸ್ಥಂ ಎಂಬುದರಿಂದ ಮಚ್ಚಿತ್ತಃ ಯುಕ್ತ ಇತ್ಯಾದಿಗಳಿಂದ ಧ್ಯೇಯವಸ್ತುವನ್ನು ಹೇಳಿದ್ದರೂ ಉತ್ತಮಾಧಿಕಾರಿಗಳಿಗೆ ಧ್ಯಾನಿಸುವುದಕ್ಕಾಗಿ ಧ್ಯೇಯಭಗದ್ರೂಪವನ್ನು ಹೇಳುತ್ತಾರೆ ಸಮಸ್ತ ಪ್ರಾಣಿಗಳಿಗೆ ನಿಯಾಮಕನಾಗಿರುವ, ಆತ್ಮಾನಂ= ಶ್ರೀಪರಮಾತ್ಮನನ್ನು. ಬ್ರಹ್ಮಾದಿ ಸಮಸ್ತಪ್ರಾಣಿಗಳು, ಆತ್ಮನಿ= ಪರಮಾತ್ಮನಲ್ಲಿ (ಆಶ್ರಿತಗಳಾಗಿವೆ) (೨) ಚತುರ್ಮುಖಬ್ರಹ್ಮನನ್ನಾರಂಭಿಸಿ ತೃಣಪರ್ಯಂತ ಎಲ್ಲಾ ವಸ್ತುಗಳಲ್ಲಿದ್ದ ಅಂತಹ ಶ್ರೀಪರಮಾತ್ಮನನ್ನು ಐಶ್ವರ್ಯ ಮೊದಲಾದ ಗುಣಗಳಿಂದ ಸಾಮ್ಯದಿಂದ (ನೀಚೋಚ್ಚಭಾವವಿಲ್ಲದವನನ್ನಾಗಿ) ತಿಳಿಯುತ್ತಾನೆ (೩) ಆ ಪ್ರಮೇಯವು ಹೇಳಲ್ಪಟ್ಟಿದೆ ಬ್ರಹ್ಮಾದಿ ಸಮಸ್ತ ಪ್ರಾಣಿಗಳಲ್ಲಿ ನಿಯಾಮಕನಾಗಿರುವ, ಷಡ್ಗುಣಪೂರ್ಣನಾದ ಶ್ರೀಪರಮಾತ್ಮನನ್ನು ತಿಳಿದನು ಸಮಸ್ತಪ್ರಾಣಿಗಳೂ ಗುಣಪೂರ್ಣನಾದ ಶ್ರೀಪರಮಾತ್ಮನಲ್ಲಿ ಆಶ್ರಿತಗಳಾಗಿವೆ. ಹೀಗೆ ಸಮಸ್ತಪ್ರಾಣಿಗಳಲ್ಲಿ ಇರುವ ಶ್ರೀಪರಮಾನನ್ನು ಐಶ್ವಾರ್ಯಾದಿಗುಣಗಳಿಂದ ಸಮನನ್ನಾಗಿ (ತಾರತಮ್ಯವಿಲ್ಲದವನನ್ನಾಗಿಯೂ) ತಿಳಿದನು. ॥ ೨೯ ॥

**ತಾ ॥ ಸರ್ವಭೂತೇಷು ಸ್ಥಿತಂ ಪರಮಾತ್ಮಾನಂ ॥ ೨೯ ॥**

ಅ ॥ ಸಮಸ್ತ ಪ್ರಾಣಿಗಳಲ್ಲಿರತಕ್ಕ ಶ್ರೀಪರಮಾತ್ಮನನ್ನು. ॥ ೨೯ ॥

ಪೀ—ಶ್ರೀಪರಮಾತ್ಮನು ಸಮಸ್ತ ಜೀವರಾಶಿಯಲ್ಲಿಯೂ ನಿಯಾಮಕನಾಗಿದ್ದಾನೆಂಬುವ ಧ್ಯಾನ ವಿಶೇಷಕ್ಕೆ ಫಲವನ್ನು ಹೇಳುತ್ತಾರೆ—

**ಗೀ ॥ ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ ೩೦ ॥**

ಅ ॥ ಸರ್ವತ್ರ=ಚತುರ್ಮುಖನನ್ನಾರಂಭಿಸಿ ತೃಣಪರ್ಯಂತ ಜೀವರಾಶಿಗಳಲ್ಲಿರತಕ್ಕ, ಮಾಂ=ನನ್ನನ್ನು, ಯಃ=ಯಾವಾತನು, ಪಶ್ಯತಿ=ತಿಳಿಯುತ್ತಾನೋ, ಸರ್ವಂ ಚ=ಬ್ರಹ್ಮಾದಿ ಜೀವರಾಶಿಗಳನ್ನು, ಮಯಿ=ನನ್ನ ಅಧೀನರಗಳನ್ನಾಗಿ, ಪಶ್ಯತಿ=ತಿಳಿಯುತ್ತಾನೋ, ತಸ್ಯಾಹಂ ನ ಪ್ರಣಶ್ಯಾಮಿ=ಆ ಜ್ಞಾನಿಗೆ ನಾನು ನಾಶಕನಾಗುವುದಿಲ್ಲ. (ಅಂದರೆ ಸರ್ವದಾ ನಾನು ಅವರ ಯೋಗಕ್ಷೇಮಗಳನ್ನು ಮಾಡಿಕೊಂಡು ಇರುತ್ತೇನೆ) ಸ ಚ ಮೇ ನ ಪ್ರಣಶ್ಯತಿ=ಆ ಜ್ಞಾನಿಯು ನನಗೆ ನಾಶಕನಾಗುವುದಿಲ್ಲ. (ಅಂದರೆ ಸದಾ ನನ್ನ ಭಕ್ತನೇ ಆಗುತ್ತಾನೆ) ॥ ೩೦ ॥

**ಭಾ ॥ (೧) ಫಲಮಾಹ । ಯೋ ಮಾಮಿತಿ । ತಸ್ಯಾಹಂ ನ ಪ್ರಣಶ್ಯಾಮೀತಿ ಸರ್ವದಾ ಯೋಗಕ್ಷೇಮವಹಃ ಸ್ಯಾಮಿತ್ಯರ್ಥಃ । ಸ ಚ ಮೇ ನ ಪ್ರಣಶ್ಯತಿ ಸರ್ವದಾ ಮದ್ಭಕ್ತೋ ಭವತಿ ॥ (೨) ಸತ್ಯಪಿ ಸ್ವಾಮಿನ್ಯರಕ್ಷತ್ಯನಾಥಃ । ಏವಂ ಭೃತ್ಯೇಽಪ್ಯಭಜತ್ಯಭೃತ್ಯ ಇತಿ ಹಿ ಪ್ರಸಿದ್ಧಿಃ ॥ (೩) ಉಕ್ತಂ ಚ । ಸರ್ವದಾ ಸರ್ವಭೂತೇಷು ಸಮಂ ಮಾಂ ಯಃ ಪ್ರಪಶ್ಯತಿ । ಅಚಲಾ ತಸ್ಯ ಭಕ್ತಿಃ ಸ್ಯಾದ್ಯೋಗಕ್ಷೇಮಂ ವಹಾಮ್ಯಹಮಿತಿ ಗಾರುಡೇ ॥ ೩೦ ॥**

ಅ ॥ (೧) **ಯೋ ಮಾಂ** ಎಂಬುವ ಶ್ಲೋಕದಿಂದ (ಈ ಧ್ಯಾನವಿಶೇಷಕ್ಕೆ) ಫಲವನ್ನು ಹೇಳುತ್ತಾರೆ—**ತಸ್ಯಾಹಂ ನ ಪ್ರಣಶ್ಯಾಮಿ** ಎಂಬುದಕ್ಕೆ ಸರ್ವದಾ ಯೋಗಕ್ಷೇಮಗಳನ್ನು ಮಾಡಿಕೊಂಡಿರುವೆನೆಂದರ್ಥವು. **ಸ ಚ ಮೇ ನ ಪ್ರಣಶ್ಯತಿ** ಎಂಬುದಕ್ಕೆ ಸರ್ವದಾ ನನ್ನ ಭಕ್ತನಾಗುತ್ತಾನೆಂದರ್ಥವು (೨) (ತಸ್ಯಾಹಂ ನ ಪ್ರಣಶ್ಯಾಮಿ, **ಸ ಚ ಮೇ ನ ಪ್ರಣಶ್ಯತಿ** ಎಂಬುವ ಪದಗಳಿಂದ ಈ ಅರ್ಥವು ಹೇಗೆ ಸಿಗುವುದೆಂದರೆ—) ಪ್ರಭುವು ಇದ್ದರೂ ಭೃತ್ಯನನ್ನು ರಕ್ಷಣಮಾಡದಿದ್ದರೆ ಈ ಭೃತ್ಯನಿಗೆ ನಾಥನು (ಸ್ವಾಮಿಯು) ಇಲ್ಲವೆಂದೇ ಪ್ರಸಿದ್ಧಿಯಿದೆ. ಹೀಗೆಯೇ ಭೃತ್ಯನು ಇದ್ದರೂ ಪ್ರಭುವಿನ ಸೇವಾದಿಗಳನ್ನು ಭೃತ್ಯನು ಮಾಡದಿದ್ದರೆ ಈ ಸ್ವಾಮಿಗೆ ಭೃತ್ಯನಿಲ್ಲವೆಂದು ಪ್ರಸಿದ್ಧಿಯು ಇದೆ (ಅಂದರೆ ಇದ್ದರೂ ತಂತಮಗೆ ಯೋಗ್ಯಗಳಾದ ಕಾರ್ಯಗಳನ್ನು ಮಾಡದಿದ್ದರೆ ಇಲ್ಲವೆಂದೇ ಪ್ರಸಿದ್ಧಿಯು) (೩) (ಈ ವಿಷಯದಲ್ಲಿ ಪುರಾಣ ಸಮ್ಮತಿಯನ್ನು ಹೇಳುತ್ತಾರೆ—) ಯಾವಾತನು ಸರ್ವದಾ ನನ್ನನ್ನು ಸಮಸ್ತ ಪ್ರಾಣಿಗಳಲ್ಲಿ ಐಶ್ವರ್ಯಾದಿ ಗುಣಗಳಿಂದ ಸಮನನ್ನಾಗಿ ತಿಳಿಯುತ್ತಾನೋ, ಆತನಿಗೆ ಅಚಲವಾದ ಭಕ್ತಿಯು ಇದೆ. ಆತನ ಯೋಗಕ್ಷೇಮವನ್ನು ನಾನು ನೋಡಿಕೊಳ್ಳುತ್ತೇನೆ, ಎಂದು ಗಾರುಡದಲ್ಲಿ ಹೇಳಿದೆ ॥ ೩೦ ॥

**ಗೀ ॥ ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥ ೩೧ ॥**

ಅ ॥ ಏಕತ್ವಂ ಅಸ್ಥಿತಃ=ಎಲ್ಲೆಡೆಯಲ್ಲಿಯೂ ಶ್ರೀಪರಮಾತ್ಮನೇ ನಿಯಾಮಕನಾಗಿದ್ದಾನೆಂದು ತಿಳಿದಿರುವ, ಯಃ=ಯಾವಾತನು, ಸರ್ವಭೂತಸ್ಥಿತಂ=ಸಮಸ್ತ ಪ್ರಾಣಿಗಳಲ್ಲಿ ನಿಯಾಮಕನಾಗಿದ್ದಾ

ನೆಂದು, ಮಾಂ=ನನ್ನನ್ನು, ಭಜತಿ=ಸೇವಿಸುತ್ತಾನೋ. ಸಃ ಯೋಗೀ=ಆ ಯೋಗಿಯು, ಸರ್ವಥಾ ವರ್ತಮಾನೋಽಪಿ=ನ್ಯಾಯಮಾರ್ಗದಿಂದ ಆಗಲೀ ಅನ್ಯಾಯಮಾರ್ಗದಿಂದವಾಗಲೀ ಇದ್ದರೂ, ಮಯಿ= ನನ್ನಲ್ಲಿ, ವರ್ತತೇ=ಇರುತ್ತಾನೆ. (ಜ್ಞಾನಿಯು ಕದಾಚಿತ್ ಅನ್ಯಾಯಕಾರ್ಯದಲ್ಲಿ ಪ್ರವೃತ್ತಿಸಿದರೂ ಅವನಿಗೆ ಮೋಕ್ಷವು ನಿಶ್ಚಿತವೇ) ॥ ೩೧ ॥

ಭಾ ॥ (೧) ಏತದೇವ ಸ್ಪಷ್ಟಯತಿ । ಸರ್ವಭೂತಸ್ಥಿತಮಿತಿ॰। ಏಕತ್ವಮಾಸ್ಥಿತಃ ಸರ್ವತ್ರೈಕ ಏವೇಶ್ವರ ಇತಿ ಸ್ಥಿತಃ । ಸರ್ವಪ್ರಕಾರೇಣ ವರ್ತಮಾನೋಽಪಿ ಮಯ್ಯೇವ ವರ್ತತೇ ॥ (೨) ಏವಮಪರೋಕ್ಷಂ ಪಶ್ಯತೋ ಜ್ಞಾನಫಲಂ ನಿಯತಮಿತ್ಯರ್ಥಃ । ತಥಾಽಪಿ ಪ್ರಾಯೋ ನಾಧರ್ಮಂ ಕರೋತಿ । ಕುರ್ವತಸ್ತು ಮಹಚ್ಚೇದ್ದುಃಖಸೂಚಕಂ ಭವತೀತ್ಯುಕ್ತಂ ಪುರಸ್ತಾತ್ ॥ (೩) ಆಹ ಚ । ಕದಾಚಿದಪಿ ನಾಧರ್ಮೇ ಬುದ್ಧಿರ್ವಿಷ್ಣುದೃಶಾಂ ಭವೇತ್ । ಪ್ರಮಾದಾತ್ತು ಕೃತಂ ಪಾಪಂ ಸ್ವಲ್ಪಂ ಭಸ್ಮೀಭವಿಷ್ಯತಿ । ಆದಿರಾಜೈಸ್ತಥಾ ದೇವೈರ್ಋಷಿಭಿಃ ಕ್ರಿಯತೇ ಕಿಯತ್ । ಬಾಹುಲ್ಯಾತ್ ಕರ್ಮಣಸ್ತೇಷಾಂ ದುಃಖಸೂಚಕಮೇವ ತದಿತಿ ॥ ೩೧ ॥

ಅ ॥ (೧) (1) ಯೋ ಮಾಂ ಎಂಬುವ ಶ್ಲೋಕದಲ್ಲಿ ಹೇಳಿದುದನ್ನೇ ಸರ್ವಭೂತಸ್ಥಿತಂ ಎಂಬುವ ಶ್ಲೋಕದಿಂದ ಸ್ಪಷ್ಟೀಕರಿಸುತ್ತಾರೆ (2) (ಏಕತ್ವಮಾಸ್ಥಿತಃ ಎಂಬುದಕ್ಕೆ ಬ್ರಹ್ಮೈಕ್ಯವನ್ನು ಹೊಂದಿದವನೆಂಬುವ ಅರ್ಥಾಂತರಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಯೋಗ್ಯವಾದ ಅರ್ಥವನ್ನು ಹೇಳುತ್ತಾರೆ—) ಎಲ್ಲಾ ಜೀವರಾಶಿಗಳಲ್ಲಿಯೂ ದೇಶಗಳಲ್ಲಿಯೂ ಎಲ್ಲಾ ಕಾಲಗಳಲ್ಲಿಯೂ ಸರ್ವನಿಯಾಮಕನಾಗಿರುವವನು ಶ್ರೀಹರಿಯು ಒಬ್ಬನೇ ಎಂದು ತಿಳಿದವನು (3) (ಮಯಿ ಎಂಬುವುದಕ್ಕೆ ನನ್ನಲ್ಲಿ ಅಥವಾ ನನ್ನ ವಿಕಾರವಾದ ದೇಹಾದಿಗಳಲ್ಲಿ ಇದ್ದರೂ, ಎಂಬ ವ್ಯಾಖ್ಯಾನವು ಅಯುಕ್ತವೆಂಬ ಅಭಿಪ್ರಾಯದಿಂದ ಹೇಳುತ್ತಾರೆ—) ನ್ಯಾಯಮಾರ್ಗದಿಂದ ಇದ್ದರೂ ಅನ್ಯಾಯಮಾರ್ಗದಿಂದ ಇದ್ದರೂ ನನ್ನ ಅಧೀನನಾಗಿಯೇ ಇರುತ್ತಾನೆ (೨) (ಶ್ರೀಹರಿಯನ್ನು ಭಜಿಸುವವನಿಗೆ ಅಧರ್ಮಾಚರಣೆಯು ಸರ್ವಥಾ ಯಾವ ಹಾನಿಕರವೂ ಆಗುವುದಿಲ್ಲ, ಎಂಬ ಪ್ರತೀತಿಯನ್ನು ನಿರಾಕರಿಸುವುದಕ್ಕಾಗಿ ಹೇಳುತ್ತಾರೆ—) ಹಿಂದೆ ಹೇಳಿದಪ್ರಕಾರ (ಅಧರ್ಮವನ್ನಾಚರಿಸಿದರೂ) ಅಪರೋಕ್ಷಜ್ಞಾನಿಗೆ ಜ್ಞಾನಫಲವಾದ ಮೋಕ್ಷವು (ಲಿಂಗದೇಹಭಂಗವು) ನಿಶ್ಚಿತವೇ (ಆದರೂ ಅಧರ್ಮಾಚರಣದಿಂದ ಜ್ಞಾನಿಗೂ ಆನಂದಹ್ರಾಸಾದಿಗಳು ಆಗಿಯೇ ಆಗುತ್ತವೆ) ಆದಾಗ್ಯೂ ಹೆಚ್ಚಾಗಿ ಅಪರೋಕ್ಷಜ್ಞಾನಿಯು ಅಧರ್ಮವನ್ನು ಮಾಡುವುದಿಲ್ಲ. ಕದಾಚಿತ್ ಅಧರ್ಮವನ್ನು ಮಾಡುವವನಿಗಾದರೂ ಆ ಅಧರ್ಮವು ಅತಿಮಹತ್ತಾದರೆ ದುಃಖಸೂಚಕವಾಗುತ್ತದೆ ಈ ವಿಷಯವನ್ನು ಮೊದಲೇ ಹೇಳಿದೆ. (೩) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ಅಪರೋಕ್ಷಜ್ಞಾನಿಗಳಿಗೆ ಯಾವಾಗಲೂ ಕೂಡ ಪ್ರಾಯಶಃ ಅಧರ್ಮದಲ್ಲಿ ಬುದ್ಧಿಯುಂಟಾಗುವುದಿಲ್ಲ. ಪ್ರಮಾದದಿಂದ ಕದಾಚಿತ್ ಮಾಡಿದ ಪಾಪವು ಸ್ವಲ್ಪವಾದುದು ಸುಟ್ಟುಹೋಗುವುದು (ಅಂದರೆ ಪಾಪಪರಿಹಾರವಾಗುವುದು) ಆದಿರಾಜರೂ, ಹಾಗೆಯೇ ದೇವತೆಗಳೂ, ಋಷಿಗಳೂ ಇವರು ಎಷ್ಟೆಷ್ಟು ಹೆಚ್ಚು ಅಧರ್ಮವನ್ನು ಮಾಡುತ್ತಾರೋ, ಅವರ ಪ್ರಾರಬ್ಧಕರ್ಮವು ಅಷ್ಟು ಹೆಚ್ಚು ಇದ್ದ ಪ್ರಯುಕ್ತ ಅವೆಲ್ಲವೂ ಅವರಿಗೆ ದುಃಖಸೂಚಕವೇ ಆಗುತ್ತದೆ. ಅಥವಾ ಜನರು ಮಾಡತಕ್ಕ ಮೈಥುನಾದಿ ಕರ್ಮಗಳನ್ನು ನೋಡಿ ಮನಸ್ಸಿನಲ್ಲಿ ಕಳವಳ ಉಂಟಾಗಿ ಜ್ಞಾನಿಗಳೂ ಸೌಭರ್ಯಾದಿಗಳಂತೆ ಮಾಡಿದರೂ ಅದೂ ಅವರಿಗೆ ದುಃಖಸೂಚಕವೇ ಆಗುತ್ತದೆ ॥ ೩೧ ॥

ಪೀ—ಏಕತ್ವಮಾಸ್ಥಿತಃ ಎಂಬುವುದಕ್ಕೆ ಐಕ್ಯವನ್ನು ಹೊಂದುತ್ತಾನೆಂಬುವ ಅನ್ಯಥಾಪ್ರತೀತಿ ಯನ್ನು ಹೋಗಲಾಡಿಸುತ್ತಾರೆ—

ಟಾ || ಸರ್ವತ್ರ ವಿಷ್ಣುರೇಕ ಇತಿ ಸ್ಥಿತಃ || ೩೧ ||

ಅ || ಎಲ್ಲಾ ಪ್ರಾಣಿಗಳಲ್ಲಿಯೂ ಪರಮಾತ್ಮನೊಬ್ಬನೇ ನಿಯಾಮಕನಾಗಿದ್ದಾನೆಂದು ತಿಳಿದವನು. ಹೀಗೆ ಅರ್ಥವನ್ನು ಹೇಳದೆ ಪರರು ಹೇಳಿದಂತೆ ಅರ್ಥವನ್ನು ಇಟ್ಟುಕೊಂಡರೆ ಸರ್ವಭೂತಸ್ಥಿತಂ ಎಂದು ಹೇಳಿದ್ದು ವಿರುದ್ಧವಾಗುವುದು ) || ೩೧ ||

ಪೀ—ಭಗವದ್ಭಕ್ತರಲ್ಲಿ ತನ್ನ (ತಿಳಿದುಕೊಳ್ಳುವವನ) ಸಾಮ್ಯವನ್ನು ತಿಳಿಯಬೇಕೆನುತ್ತಾರೆ—

ಗೀ || ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ |
ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ||೩೨||

ಅ || ಅರ್ಜುನ=ಅರ್ಜುನನೇ, ಯಃ=ಯಾವಾತನು, ಆತ್ಮೌಪಮ್ಯೇನ=ತನ್ನ ದೃಷ್ಟಾಂತದಿಂದ, ಸುಖಂ ವಾ=ಸುಖವನ್ನಾಗಲೀ, ದುಃಖಂ ವಾ=ದುಃಖವನ್ನಾಗಲೀ, ಹೇಗೆ ಸುಖವು ತನಗೆ ಇಷ್ಟವೋ, ದುಃಖವು ಅನಿಷ್ಟವೋ, ಹಾಗೆಯೇ ಬೇರೆ ಭಗವದ್ಭಕ್ತರಿಗೂ ಸುಖವು ಪ್ರಿಯವು, ದುಃಖವು ಅಪ್ರಿಯವು, ಹೀಗೆ ತನ್ನ ದೃಷ್ಟಾಂತದಿಂದ,) ಸರ್ವತ್ರ=ಎಲ್ಲಾ ಭಗವದ್ಭಕ್ತರಲ್ಲಿಯೂ, ಸಮಂ=ಸಾಮ್ಯವನ್ನು, ಯಃ=ಯಾವಾತನು, ಪಶ್ಯತಿ=ತಿಳಿಯುತ್ತಾನೋ, (ಅಂದರೆ ಭಗವದ್ಭಕ್ತರಿಗೆಲ್ಲರಿಗೂ ತನ್ನಂತೆಯೇ ಸುಖವೇ ಆಗಬೇಕೆಂದು ಯಾವಾತನು ಇಚ್ಛಿಸುತ್ತಾನೋ,) ಸ ಯೋಗೀ=ಆ ಯೋಗಿಯು, ಪರಮಃ=ಉತ್ತಮನೆಂದು, ಮತಃ=ಸಮ್ಮತನು, (ವಿಷ್ಣುಭಕ್ತರ ಸ್ನೇಹವನ್ನು ಮಾಡುವವನು ಶ್ರೇಷ್ಠನು ) || ೩೨ ||

ಭಾ || ಸಾಮ್ಯಂ ಪ್ರಕಾರಾಂತರೇಣ ವ್ಯಾಚಷ್ಟೇ | ಆತ್ಮೌಪಮ್ಯೇನೇತಿ || ೩೨ ||

ಅ || ಆತ್ಮೌಪಮ್ಯೇನ ಎಂಬುವ ಶ್ಲೋಕದಿಂದ ಪ್ರಕಾರಾಂತರದಿಂದ ಸಾಮ್ಯದರ್ಶನವನ್ನು ವ್ಯಾಖ್ಯಾನ ಮಾಡುತ್ತಾರೆ. (ಅಂದರೆ ಸಮದರ್ಶನಃ ಎಂದು ಹೇಳಿದರೆ ಗೋಗವಯಾದಿಗಳಂತೆ ಸಾಮ್ಯವನ್ನು ಕಾಣುವುದೋ, ಎಂದರೆ—ಹಾಗಲ್ಲವೆಂದು ಏಕತ್ವಮಾಸ್ಥಿತಃ ಎಂದು ತಾವೇ ವ್ಯಾಖ್ಯಾನ ಮಾಡಿರುವರು ಈಗ ಭಗವದ್ಭಕ್ತರ ವಿಷಯವಾಗಿ ಸಾಮ್ಯದರ್ಶನವೆಂದು ತಾನೇ ವ್ಯಾಖ್ಯಾನ ಮಾಡು ತ್ತಾರೆ ) || ೩೨ ||

ಪೀ—ಎಲ್ಲಾ ಪ್ರಾಣಿಗಳಲ್ಲಿ ಸಾಮ್ಯದರ್ಶನವೆಂಬುವ ಅನ್ಯಥಾಪ್ರತೀತಿಯನ್ನು ನಿರಾಕರಿಸುವುದ ಕ್ಕಾಗಿ ವ್ಯಾಖ್ಯಾನ ಮಾಡುತ್ತಾರೆ—

ಟಾ || ಅತೋ ವಿಷ್ಣ್ವನುವರ್ತಿಷು ಸ್ವವತ್ಸ್ನೇಹಃ ಕರ್ತವ್ಯಃ || ೩೨ ||

ಅ || ವಿಷ್ಣುಭಕ್ತರಲ್ಲಿಯೇ ತನ್ನಲ್ಲಿ ಮಾಡುವಂತೆಯೇ ಸ್ನೇಹವನ್ನು ಮಾಡಬೇಕು (ಎಂದು ಹೇಳುತ್ತಾರೆ ಅವೈಷ್ಣವರಲ್ಲಿ ಹಾಗೆ ಮಾಡಕೂಡದು ಬಂಧುರಾತ್ಮಾ ಎಂಬುದರಿಂದ ವೈಷ್ಣವರಿಗೇನೇ ಭಗವತ್ಪ್ರಿಯತ್ವವನ್ನು ಹೇಳಿರುತ್ತಾರೆ ಅನಾತ್ಮನಃ ಎಂದು ಅವೈಷ್ಣವರು ಶ್ರೀಹರಿಗೆ ಅಪ್ರಿಯರೆಂದು ಹೇಳಿದೆ ) || ೩೨ ||

ಪೀ—ಶ್ರೀಕೃಷ್ಣನು ಹೇಳಿದ ಯೋಗವನ್ನು ಮಾಡಲಸಾಧ್ಯವೆಂದು ಶಂಕಿಸುತ್ತಾನೆ—

ಗೀ ॥ ॥ ಅರ್ಜುನ ಉವಾಚ ॥

ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ ।
ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಂ ॥ ೩೩ ॥

ಅ ॥ ಅರ್ಜುನಃ=ಅರ್ಜುನನು, ಉವಾಚ=ಪ್ರಶ್ನೆ ಮಾಡುತ್ತಾನೆ, ಮಧುಸೂದನ=ಮಧುನಾಮಕ ದೈತ್ಯನಾಶಕನಾದ ಶ್ರೀಕೃಷ್ಣನೇ, ಸಾಮ್ಯೇನ=ಶ್ರೀಪರಮಾತ್ಮರೂಪಗಳು ಎಲ್ಲಾ ಜೀವರಲ್ಲಿಯೂ ನಿರ್ದೋಷಗಳಾಗಿಯೂ ಗುಣಪೂರ್ಣಗಳಾಗಿಯೂ ಆಗಿವೆ, ಎಂದು ಭಗವದ್ರೂಪಗಳಿಗೆ ಐಕ್ಯದಿಂದಲೂ, ಹಾಗೆಯೇ ಭಗವದ್ಭಕ್ತರಲ್ಲಿ ತನ್ನ ಸಾಮ್ಯದಿಂದಲೂ, ಮನಸ್ಸಿಗೆ ಏಕಾಗ್ರತ್ವದಿಂದಲೂ, ಯೋಽಯಂ-ಯೋಗಃ=ಯಾವ ಈ ಧ್ಯಾನಯೋಗವು, ತ್ವಯಾ=ನಿನ್ನಿಂದ, ಪ್ರೋಕ್ತಃ=ಹೇಳಲ್ಪಟ್ಟದೋ, ಏತಸ್ಯ=ಈ ಯೋಗಕ್ಕೆ, ಸ್ಥಿರಾಂ=ದೃಢವಾಗಿ, ಸ್ಥಿತಿಂ=ಇರುವಿಕೆಯನ್ನು, ಚಂಚಲತ್ವಾತ್=ಮನಸ್ಸು ಅತಿ ಚಪಲವಾಗಿರುವುದರಿಂದ-ಅಹಂ=ನಾನು, ನ ಪಶ್ಯಾಮಿ=ನೋಡುವುದಿಲ್ಲ. (ಅಂದರೆ ಇಂತಹ ಯೋಗಾನುಷ್ಠಾನವು ಅಸಾಧ್ಯವೆಂದು ತಿಳಿಯುತ್ತೇನೆ) ॥ ೩೩ ॥

ಭಾ ॥ ಏತಸ್ಯ ಯೋಗಸ್ಯ ಸ್ಥಿರಾಂ ಸ್ಥಿತಿಂ ನ ಪಶ್ಯಾಮಿ ಮನಸಶ್ಚಂಚಲತ್ವಾತ್ ॥ ೩೩ ॥

ಅ ॥ ಮನಸ್ಸು ಅತಿ ಚಂಚಲವಾದ ಕಾರಣ, ಏತಸ್ಯ=ಈ ಯೋಗಕ್ಕೆ, ಬಹುಕಾಲಪರ್ಯಂತ ನಿಂತಿರುವುದನ್ನು ನೋಡುವುದಿಲ್ಲ (ಅಂದರೆ ಬಹುಕಾಲ ಪರ್ಯಂತ ಯೋಗವನ್ನು ಮಾಡುವುದಸಾಧ್ಯವು) ॥ ೩೩ ॥

ಪೀ—ಮನಸ್ಸನ್ನು ವಶಪಡಿಸಿಕೊಂಡು ಯೋಗವನ್ನು ದೃಢೀಕರಿಸಿಕೊಳ್ಳಬಹುದಷ್ಟೆ ಎಂದರೆ—

ಗೀ ॥ ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಂ ।
ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ ॥ ೩೪ ॥

ಅ ॥ ಕೃಷ್ಣ=ಶ್ರೀಕೃಷ್ಣನೇ, ಮನಃ=ಮನಸ್ಸು, ಚಂಚಲಂ ಹಿ=ಅತಿ ಚಪಲವಾದುದೆಂದು ಪ್ರಸಿದ್ಧವಷ್ಟೆ. ಪ್ರಮಾಥಿ=ದೇಹ ಮತ್ತು ಇಂದ್ರಿಯ ಇವುಗಳಿಗೆ ಕ್ಷೋಭವನ್ನುಂಟುಮಾಡುವಂತಾದ್ದು, ಬಲವತ್=ಬಹು ವಿವೇಕಿಗೂ ಜಯಿಸಲು ಅಶಕ್ಯವಾದುದು. ದೃಢಂ=ವಿಷಯಸಂಸ್ಕಾರದಿಂದ ಅಯೋಗ್ಯ ವಿಷಯಗಳಲ್ಲಿಯೇ ಅತ್ಯಾಸಕ್ತವಾಗಿದ್ದುದರಿಂದ ಅವುಗಳಲ್ಲಿ ನಿಗ್ರಹಿಸಿಕೊಂಡು ಸದ್ವಿಷಯಗಳಲ್ಲಿ ಹೋಗಲಿಕ್ಕೆ ಅಶಕ್ಯವಾದುದು ತಸ್ಯ=ಅಂತಹ ಮನಸ್ಸಿನ, ನಿಗ್ರಹಂ=ನಿಗ್ರಹವನ್ನು, ವಾಯೋರಿವ ಸುದುಷ್ಕರಂ=ಆಕಾಶದಲ್ಲಿ ಬೀಸುವಂತಹ ಗಾಳಿಯನ್ನು ಹಿಡಿದು ನಿಗ್ರಹಿಸುವುದಕ್ಕೆ ಹೇಗೆ ಸರ್ವಥಾ ಶಕ್ಯವಲ್ಲವೋ, ಹಾಗೆಯೇ, ಸುದುಷ್ಕರಂ=ವಶಪಡಿಸಿಕೊಳ್ಳುವುದು ಅಸಾಧ್ಯವೆಂದು, ಅಹಂ=ನಾನು, ಮನ್ಯೇ=ತಿಳಿಯುತ್ತೇನೆ. ॥ ೩೪ ॥

ಪೀ—ಅರ್ಜುನನು ಹೇಳಿದ ಮನಸ್ಸಿನ ಚಾಂಚಲ್ಯಾದಿಗಳನ್ನು ಒಡಂಬಟ್ಟು ಮನಸ್ಸನ್ನು ವಶಪಡಿಸಿಕೊಳ್ಳಲಿಕ್ಕೆ ಬೇಕಾದ ಉಪಾಯವನ್ನು ಶ್ರೀಕೃಷ್ಣನು ಹೇಳುತ್ತಾನೆ—

ಗೀ ॥ ॥ ಶ್ರೀಭಗವಾನುವಾಚ ॥

ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಂ ।
ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥ ೩೫ ॥

ಅ ॥ ಶ್ರೀಭಗವಾನ್=ಶ್ರೀಕೃಷ್ಣನು ಉಪದೇಶಿಸುತ್ತಾನೆ. ಹೇ ಮಹಾಬಾಹೋ=ಜಾನುಪರ್ಯಂತ ಭುಜಗಳುಳ್ಳ, ಕೌಂತೇಯ=ಕುಂತೀಪುತ್ರನೇ, ಚಲಂ=ಸ್ವಭಾವತಃ ಚಂಚಲವಾಗಿರುವ (ಒಂದು ಕಡೆ ನಿಲ್ಲದಿರುವ), ಮನಃ=ಮನಸ್ಸು, ಅಸಂಶಯಂ=ನಿಸ್ಸಂಶಯವಾಗಿ (ಅಂದರೆ ನಿಶ್ಚಯವಾಗಿಯೂ), ದುರ್ನಿಗ್ರಹಂ=ವಶಪಡಿಸಿಕೊಳ್ಳಲಿಕ್ಕೆ ಅತ್ಯಶಕ್ಯವಾದುದು ತು=ಆದಾಗ್ಯೂ, ಅಭ್ಯಾಸೇನ=ಗುರುಗಳಿಂದುಪದೇಶ ತೆಗೆದುಕೊಂಡು ಮಾಡಿದ ಯೋಗಾಭ್ಯಾಸಬಲದಿಂದಲೂ, ಶಾಸ್ತ್ರಾಭ್ಯಾಸಬಲದಿಂದಲೂ, ವೈರಾಗ್ಯೇಣ ಚ=ರೂಪಾದಿ ವಿಷಯಗಳಲ್ಲಿ ಸ್ನೇಹಪರಿತ್ಯಾಗದಿಂದಲೂ, ಗೃಹ್ಯತೇ=ವಶಪಡಿಸಿಕೊಳ್ಳಲಿಕ್ಕೆ ಶಕ್ಯವಾಗುತ್ತದೆ ॥ ೩೫ ॥

ಭಾ ॥ ಉಕ್ತಂ ಚ । ಮನಸಶ್ಚಂಚಲತ್ವಾದ್ಧಿ ಸ್ಥಿತಿರ್ಯೋಗಸ್ಯ ವೈ ಸ್ಥಿರಾ । ವಿನಾಽಭ್ಯಾ-
ಸಾನ್ನ ಶಕ್ಯಾ ಸ್ಯಾದ್ವೈರಾಗ್ಯಾದ್ವಾ ನ ಸಂಶಯ ಇತಿ ವ್ಯಾಸಯೋಗೇ ॥ ೩೪,೩೫ ॥

ಅ ॥ ಮನಸ್ಸು ನಿಂತಕಡೆ ಸರ್ವಥಾ ನಿಲ್ಲದಿರುವುದರಿಂದ ಅಭ್ಯಾಸವಿಲ್ಲದೆ, ಅಥವಾ ವೈರಾಗ್ಯವಿಲ್ಲದೆ ಯೋಗವು ಬಹುಕಾಲಪರ್ಯಂತ ನಿಲ್ಲುವುದು ಸರ್ವಥಾ ಶಕ್ಯವಲ್ಲ, ಈ ವಿಷಯದಲ್ಲಿ ಸಂದೇಹವಿಲ್ಲ, ಎಂದು ವ್ಯಾಸಯೋಗದಲ್ಲಿ ಹೇಳಿದೆ ॥ ೩೪, ೩೫ ॥

ಪೀ—ಮದೋನ್ಮತ್ತವಾದ ಆನೆಯು ಬಳಲಿ ಕೊನೆಗೆ ತಾನೇ ಶಾಂತವಾಗುವಂತೆಯೇ ಮನಸ್ಸೂ ವಿಷಯಗಳಿಂದ ತೃಪ್ತಿಹೊಂದಿ ತನ್ನಷ್ಟಕ್ಕೇನೇ ವಶವಾಗುವುದು, ಅಭ್ಯಾಸಾದಿಗಳು ಏತಕ್ಕೆ ಎಂದರೆ—

ಗೀ ॥ ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।
ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥ ೩೬ ॥

ಅ ॥ ಅಸಂಯತಾತ್ಮನಾ=ಅಭ್ಯಾಸ ವೈರಾಗ್ಯಗಳಿಂದ ಮನಸ್ಸನ್ನು ವಶಪಡಿಸಿಕೊಳ್ಳದಿರುವ ಮನುಷ್ಯನಿಂದ ಯೋಗಃ=ಧ್ಯಾನವು, ದುಷ್ಪ್ರಾಪಃ=ಹೊಂದಲಸಾಧ್ಯವು, ಇತಿ=ಹೀಗೆ, ಮೇ=ನನ್ನ, ಮತಿಃ=ಬುದ್ಧಿಯು, ವಶ್ಯಾತ್ಮನಾ=ಅಭ್ಯಾಸ ವೈರಾಗ್ಯಗಳಿಂದ ಮನಸ್ಸನ್ನು ವಶಪಡಿಸಿದ, ಯತತಾ ತು=ಹಿಂದೆ ಹೇಳಿದ ಉಪಾಯದಿಂದ ಪ್ರಯತ್ನ ಮಾಡುವ ಪುರುಷನಿಂದ, ಯೋಗಃ=ಧ್ಯಾನವು, ಉಪಾಯತಃ=ಅಭ್ಯಾಸ ವೈರಾಗ್ಯರೂಪ ಉಪಾಯಗಳಿಂದಲೇ, ಅವಾಪ್ತುಂ=ಹೊಂದಲಿಕ್ಕೆ, ಶಕ್ಯಃ=ಸಾಧ್ಯವಾಗುವುದು. ಹೀಗೆ ನನ್ನ ನಿಶ್ಚಯವು ॥ ೩೬ ॥

ಭಾ ॥ (೧) ನಚ ಕದಾಚಿತ್ ಸ್ವಯಮೇವ ಮನೋ ನಿಯಮ್ಯತೇ ॥ (೨) ಶುಭೇಚ್ಛಾ-
ರಹಿತಾನಾಂ ಚ ದ್ವೇಷಿಣಾಂ ಚ ರಮಾಪತೌ । ನಾಸ್ತಿಕಾನಾಂ ಚ ವೈ ಪುಂಸಾಂ
ಸದಾ ಮುಕ್ತಿರ್ನ ಜಾಯತ ಇತಿ ನಿಷೇಧಾದ್ಬ್ರಹ್ಮೇ ॥ ೩೬ ॥

ಅ || (೧) (ಹೇಗೆ ಮತ್ತವಾದ ಆನೆಯು ತಾನೇ ಶ್ರಾಂತವಾಗಿ ಶಾಂತವಾಗುತ್ತದೋ, ಹಾಗೆಯೇ ಯತೇಷ್ಟ ವಿಷಯಭೋಗಗಳಿಂದ ತೃಪ್ತವಾದ)ಮನಸ್ಸು ಕದಾಚಿತ್ ತನ್ನ ಸ್ವೇಚ್ಛೆಯಿಂದಲೇ ವಶೀಕೃತವಾಗುತ್ತದೆ. (ಅಭ್ಯಾಸಾದಿಗಳು ಏತಕ್ಕೆ ಎಂದು) ಸರ್ವಥಾ ಹೇಳಕೂಡದು (೨) (ಏಕೆಂದರೆ—) ಯಾವಾಗಲೂ ಸತ್ಕರ್ಮಗಳಲ್ಲಿ ಇಚ್ಛೆಯಿಲ್ಲದವರೂ ಯಾವಾಗಲೂ ಲಕ್ಷ್ಮೀಪತಿಯಾದ ಶ್ರೀಪರಮಾತ್ಮನಲ್ಲಿ ದ್ವೇಷಿಸುತ್ತಿರುವವರೂ, ಯಾವಾಗಲೂ ನಾಸ್ತಿಕರಾದವರೂ ಇಂತಹ ಮನುಷ್ಯರಿಗೆ ಸರ್ವಥಾ ಮನೋನಿಗ್ರಹವಾಗುವುದಿಲ್ಲ ಮನಸ್ಸನ್ನು ನಿಗ್ರಹಿಸಿಕೊಳ್ಳದೆ ಮುಕ್ತಿಯಾಗುವುದಿಲ್ಲವೆಂದು ಬ್ರಾಹ್ಮಪುರಾಣದಲ್ಲಿ ನಿಷೇಧಮಾಡಿಯದೆ (ತಥಾಚ ಅಭ್ಯಾಸ, ವೈರಾಗ್ಯ, ಸತ್ಕರ್ಮಗಳನ್ನು ಮಾಡಬೇಕೆಂಬ ಇಚ್ಛೆ, ಶ್ರೀಪರಮಾತ್ಮನಲ್ಲಿ ಭಕ್ತಿ, ಆಸ್ತಿಕ್ಯ ಬುದ್ಧಿ, ಇವುಗಳಿಂದ ಮನಸ್ಸನ್ನು ವಶಪಡಿಸಿಕೊಳ್ಳಬೇಕೆಂದು ಉಕ್ತವಾಯಿತು )||೩೬||

ಗೀ || || ಅರ್ಜುನ ಉವಾಚ ||

ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ |
ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ || ೩೭ ||

ಅ || ಅರ್ಜುನಃ=ಅರ್ಜುನನು, ಉವಾಚ=(ಅಭ್ಯಾಸಾದಿಗಳಿಲ್ಲದವನಿಗೆ ಫಲವೇನಿದೆ? ಎಂದು) ಪ್ರಶ್ನಿಸುತ್ತಾನೆ. ಕೃಷ್ಣ=ಶ್ರೀಕೃಷ್ಣನೇ, ಅಯತಿಃ=ಚೆನ್ನಾಗಿ ಪ್ರಯತ್ನಮಾಡದಿರುವ, ಶ್ರದ್ಧಯಾ=ಆಸ್ತಿಕ್ಯ ಬುದ್ಧಿಯಿಂದ, ಉಪೇತಃ=ಕೂಡಿದ ಮನುಷ್ಯನು, ಯೋಗಾತ್=ಧ್ಯಾನರೂಪ ಉಪಾಯದೆಶೆಯಿಂದ, ಚಲಿತಮಾನಸಃ=ಚಂಚಲವಾದ ಮನಸ್ಸುಳ್ಳವನಾಗಿ (ಅಂದರೆ ಯೋಗವನ್ನು ಬಿಟ್ಟು ವಿಷಯಗಳಲ್ಲಿಯೇ ಮನಸ್ಸುಳ್ಳವನಾಗಿ) ಯೋಗಸಂಸಿದ್ಧಿಂ=ಧ್ಯಾನಸಂಪೂರ್ತಿಯನ್ನು (ಅಂದರೆ ಧ್ಯಾನಫಲವಾದ ಜ್ಞಾನವನ್ನು) ಅಪ್ರಾಪ್ಯ=ಹೊಂದದೆ, ಕಾಂ ಗತಿಂ=ಯಾವ ಗತಿಯನ್ನು, ಗಚ್ಛತಿ=ಹೊಂದುತ್ತಾನೆ. || ೩೭ ||

ಪೀ—ಹಿಂದೆ ಕೇಳಿದ್ದನ್ನೇ ತಿರುಗಿ ಸ್ಪಷ್ಟವಾಗಿ ಪ್ರಶ್ನಿಸುತ್ತಾನೆ—

ಗೀ || ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ |
ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ || ೩೮ ||

ಅ || ಮಹಾಬಾಹೋ=ಶ್ರೀಕೃಷ್ಣನೇ, ಉಭಯವಿಭ್ರಷ್ಟಃ=ಸ್ವರ್ಗ ಅಪವರ್ಗ ಫಲಗಳಿಂದ ಭ್ರಷ್ಟನಾದ, ಅಥವಾ ಐಹಿಕ ಆಮುಷ್ಮಿಕ ಪುರುಷಾರ್ಥಗಳಿಂದ ಭ್ರಷ್ಟನಾದ, ಅಥವಾ ಸ್ವರ್ಗಾದಿ ಫಲಗಳಿಗೆ ಸಾಧನವಾದ ಕಾಮ್ಯಕರ್ಮಗಳನ್ನು ಮಾಡದಿರುವುದರಿಂದ ಸ್ವರ್ಗೋಪಾಯದಿಂದಲೂ, ಮೋಕ್ಷಕ್ಕೆ ಸಾಧನವಾದ ಧ್ಯಾನವು ಸಂಪೂರ್ಣವಾಗದಿರುವುದರಿಂದ ಮೋಕ್ಷೋಪಾಯದಿಂದಲೂ ಭ್ರಷ್ಟನಾದ, ಅಪ್ರತಿಷ್ಠಃ=ನಿರಾಶ್ರಯನಾದ, ಬ್ರಹ್ಮಣಃ=ಪರಮಾತ್ಮನನ್ನು, ಪಥಿ=ಹೊಂದುವ ಸಾಧನದಲ್ಲಿ, ವಿಮೂಢಃ=ಮೂಢನಾಗಿ, (ಪರಬ್ರಹ್ಮನನ್ನು ಹೊಂದಲಿಕ್ಕೆ ಉಪಾಯವಿಲ್ಲದವನಾಗಿ) ಛಿನ್ನಾಭ್ರಮಿವ=ಗಾಳಿಯಿಂದ ಛಿನ್ನಭಿನ್ನವಾಗಿ ಮಾಡಲ್ಪಟ್ಟ ಮೇಘದಂತೆ, ನಶ್ಯತಿ ಕಚ್ಚಿತ್=ನರಕಾದ್ಯನರ್ಥವನ್ನು ಹೊಂದುತ್ತದೋ, ಇಲ್ಲವೋ. || ೩೮ ||

ಪೀ—೩೭ನೇ ಶ್ಲೋಕದಲ್ಲಿದ್ದ ಅಯತಿಪದಕ್ಕೆ ಗೃಹಸ್ಥಾದಿಗಳೆಂದರ್ಥವು ಎಂಬೀ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುತ್ತಾರೆ—

**ತಾ ॥ (೧) ಅಯತಿರಪ್ರಯತ್ನಃ । ಪ್ರಯತ್ನಾದ್ಯತಮಾನಸ್ತ್ವಿತಿ ವಾಕ್ಯಶೇಷಾತ್ ॥ (೨) ಯೋಗಶಬ್ದಸ್ಯೋಪಾಯಾರ್ಥತ್ವೇಽಪ್ಯತ್ರೋಪಾಯವಿಶೇಷ ಏವ ಧ್ಯಾನಯೋಗಾದಿರ್ವಿವಕ್ಷಿತ ಇತಿ ನ ವಿರೋಧಃ ॥ ೩೭–೩೮ ॥**

**ಅ ॥ (೧) ಪ್ರಯತ್ನಾದ್ಯತಮಾನಸ್ತು** ಎಂಬುವ ಮುಂದಿನ ವಾಕ್ಯಾನುಸಾರವಾಗಿ, **ಅಯತಿಃ**= ಪ್ರಯತ್ನವಿಲ್ಲದವನೆಂದರ್ಥವು (ಗೃಹಸ್ಥಾಶ್ರಮಿಗಳೆಂದರ್ಥವಲ್ಲ) ಪ್ರಯತ್ನ ಮಾಡದೆ ಅದರಲ್ಲಿ ಶ್ರದ್ಧೆಯಿದ್ದವನಿಗೆ ಯಾವ ಗತಿಯೆಂದು ಪ್ರಶ್ನೆ ಮಾಡೋಣ ಜನ್ಮಾಂತರದಲ್ಲಿ ಪ್ರಯತ್ನವುಳ್ಳವನಾಗುತ್ತಾನೆಂದು ಪರಿಹಾರವನ್ನು ಹೇಳಿದಕಾರಣ **ಅಯತಿಃ** ಎಂಬುವುದಕ್ಕೆ ಪ್ರಯತ್ನವಿಲ್ಲದವನೆಂದೇ ಅರ್ಥವೆಂದು ತಿಳಿಯುತ್ತದೆ ಹೀಗೆ ಅಲ್ಲದಿದ್ದರೆ ಜನ್ಮಾಂತರದಲ್ಲಿ ಶ್ರದ್ಧೆಯಿಂದ ಸನ್ಯಾಸಿಯಾಗುತ್ತಾನೆಂದು ಪರಿಹಾರವನ್ನು ಹೇಳಬೇಕಿತ್ತು (೨) (ಯೋಗಶಬ್ದಕ್ಕೆ ಜ್ಞಾನೋಪಾಯವೆಂದರ್ಥವಿದೆ. **ಶ್ರದ್ಧಾವಾಂಲ್ಲಭತೇ ಜ್ಞಾನಂ** ಇತ್ಯಾದಿ ಪ್ರಮಾಣಗಳಿಂದ ಶ್ರದ್ಧೆಯು ಜ್ಞಾನೋಪಾಯವಾಗಿದೆ. ಆದಕಾರಣ ಶ್ರದ್ಧೆಯೂ ಜ್ಞಾನೋಪಾಯವಾಗಿರುವುದರಿಂದ **ಶ್ರದ್ಧಯೋಪೇತಃ ಯೋಗಾಚ್ಚಲಿತಮಾನಸಃ** ಎಂಬುವುದು ಪರಸ್ಪರ ವಿರದ್ಧವಾಯ್ತು, ಎಂದರೆ—) ಯೋಗಶಬ್ದಕ್ಕೆ ಉಪಾಯವೆಂದು ಅರ್ಥವಿದ್ದರೂ ಇಲ್ಲಿ ಉಪಾಯವಿಶೇಷವಾದ ಧ್ಯಾನಯೋಗಾದಿಗಳನ್ನೇ ಇಟ್ಟುಕೊಳ್ಳಬೇಕು (ಅಂದರೆ ಯೋಗಶಬ್ದದಿಂದ ಸಾಮಾನ್ಯತಃ ಜ್ಞಾನೋಪಾಯವನ್ನೇ ಇಟ್ಟುಕೊಂಡಿದ್ದರೆ ವಿರೋಧವು ಬರುತ್ತಿತ್ತು. ಅದನ್ನು ಇಟ್ಟುಕೊಳ್ಳುವುದಿಲ್ಲ. ಮತ್ತೆ ಇಲ್ಲಿ ಧ್ಯಾನವನ್ನೇ ಇಟ್ಟುಕೊಳ್ಳುತ್ತೇವೆ ಆದಕಾರಣ (ವಿರೋಧವಿಲ್ಲ.) ॥ ೩೮ ॥

**ಗೀ ॥ ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।**
**ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥ ೩೯ ॥**

**ಅ ॥** ಕೃಷ್ಣ= ಕೃಷ್ಣನೇ, ಮೇ= ನನ್ನ, ಏತತ್ ಸಂಶಯಂ= ಈ ಸಂಶಯವನ್ನು, ಅಶೇಷತಃ= ಸಂಪೂರ್ಣವಾಗಿ, ಛೇತ್ತುಂ= ಕಳೆಯುವುದಕ್ಕೆ, ಅರ್ಹಸಿ= ಯೋಗ್ಯ (ಸಮರ್ಥ)ನಾಗಿರುತ್ತಿ. ತ್ವದನ್ಯಃ= ನೀನು ಹೊರತು ಇನ್ನೊಬ್ಬನು, ಅಸ್ಯ ಸಂಶಯಸ್ಯ= ಈ ಸಂಶಯವನ್ನು, ಛೇತ್ತಾ= ಕಳೆಯುವವನು, ನ ಹ್ಯುಪಪದ್ಯತೇ= ಇಲ್ಲವಷ್ಟೆ ॥ ೩೯ ॥

**ಗೀ ॥ ॥ ಶ್ರೀಭಗವಾನುವಾಚ ॥**
**ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನ ಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥ ೪೦ ॥**

**ಅ ॥** ಶ್ರೀಭಗವಾನ್= ಶ್ರೀಕೃಷ್ಣನು, ಉವಾಚ=(ಅರ್ಜುನನ ಪ್ರಶ್ನೆಗೆ ಉತ್ತರವನ್ನು) ಹೇಳಿದನು. ಪಾರ್ಥ= ಕುಂತೀಪುತ್ರನೇ, ತಸ್ಯ= ಆ ಯೋಗಭ್ರಷ್ಟನಾದ ಮನುಷ್ಯನಿಗೆ, ಇಹ= ಈ ಲೋಕದಲ್ಲಿ, ವಿನಾಶಃ= ತಿರ್ಯಗಾದಿಯೋನಿಪ್ರಾಪ್ತಿರೂಪವಾದ ದುರ್ಗತಿಯು, ನೈವ= ಆಗುವುದೇ ಇಲ್ಲ. ಅಮುತ್ರ= ಪರಲೋಕದಲ್ಲಿ, ವಿನಾಶಃ= ನರಕಪ್ರಾಪ್ತಿಯೂ, ನ ವಿದ್ಯತೇ= ಆಗುವುದಿಲ್ಲ ಕಲ್ಯಾಣಕೃತ್= ಶ್ರದ್ಧೆಯಿಂದ ಅಲ್ಪಕಾಲದಲ್ಲಿ ಆಗಲೀ ಧ್ಯಾನಾದಿಗಳನ್ನು ಮಾಡಿದವನು, ಕಶ್ಚಿತ್= ಯಾರೊಬ್ಬನೂ. ತಾತ= ಅರ್ಜುನನೇ, ದುರ್ಗತಿಂ=ಕೆಟ್ಟಸ್ಥಿತಿಯನ್ನು (ನರಕಾದ್ಯನರ್ಥಗಳನ್ನು) ನ ಹಿಗಚ್ಛತಿ=ಹೊಂದುವುದಿಲ್ಲವಷ್ಟೆ.

ವಿ ॥ ಯೋಗಭ್ರಷ್ಟನಾದವನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಅನರ್ಥಗಳನ್ನು ಹೊಂದದೆ ಪರಬ್ರಹ್ಮನನ್ನು ಧ್ಯಾನಿಸಿ ಕ್ರಮದಿಂದ ಮುಕ್ತನಾಗುತ್ತಾನೆ. ॥ ೪೦ ॥

**ಗೀ ॥ ಪ್ರಾಪ್ಯ ಪುಣ್ಯಕೃತಾಂ ಲೋಕಾನುಷಿತ್ವಾ ಶಾಶ್ವತೀಸ್ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥ ೪೧ ॥**

ಅ ॥ ಯೋಗಭ್ರಷ್ಟಃ = ಧ್ಯಾನಯೋಗವನ್ನು ಮಾಡಿಕೊಂಡು ಇದ್ದು ಆ ಧ್ಯಾನವನ್ನು ಬಿಟ್ಟಿರುವ ಮನುಷ್ಯನು, ಪುಣ್ಯಕೃತಾನ್ = ಪುಣ್ಯದಿಂದ ಸಂಪಾದಿಸಲ್ಪಟ್ಟ, ಲೋಕಾನ್ = ಸ್ವರ್ಗಾದಿ ಲೋಕಗಳನ್ನು, ಪ್ರಾಪ್ಯ = ಹೊಂದಿ, (ಅವುಗಳಲ್ಲಿ) ಶಾಶ್ವತೀಃ ಸಮಾಃ = ಅನೇಕ ಸಂವತ್ಸರಗಳ ಪರ್ಯಂತ, ಉಷಿತ್ವಾ = ಅವಾಸಮಾಡಿ, ಶುಚೀನಾಂ = ಪರಿಶುದ್ಧರಾದ, ಶ್ರೀಮತಾಂ = ಸಂಪನ್ನರಾಹವರ, ಗೇಹೇ = ಮನೆಯಲ್ಲಿ ಅಭಿಜಾಯತೇ = ಹುಟ್ಟುತ್ತಾನೆ. ॥ ೪೧ ॥

**ಗೀ ॥ ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಂ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಂ ॥ ೪೨ ॥**

ಅ ॥ ಅಥವಾ = ಅಲ್ಲವಾದರೆ, ಧೀಮತಾಂ = ಜ್ಞಾನಿಗಳಾದ, ಯೋಗಿನಾಂ = ಯೋಗಿಗಳ, ಕುಲೇ-ಏವ = ವಂಶದಲ್ಲಿಯೇ, ಭವತಿ = ಹುಟ್ಟುತ್ತಾನೆ, ಲೋಕೇ = ಲೋಕದಲ್ಲಿ ಈದೃಕ್ = ಇಂತಹಜನ್ಮ ಉತ್ಪತ್ತಿಯು, ಯತ್ = ಯಾವುದಿದೆಯೋ, ಏತತ್ = ಈ ಜನ್ಮವು, ದುರ್ಲಭತರಂ = ಸುಲಭಸಾಧ್ಯವಲ್ಲವೇ ಅಲ್ಲ. ಹಿ = ಪ್ರಸಿದ್ಧವು. ॥ ೪೨ ॥

**ಗೀ ॥ ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಂ ।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ॥ ೪೩ ॥**

ಅ ॥ ಕುರುನಂದನ = ಕುರವಂಶಕ್ಕೆ ಸಂತೋಷೋತ್ಪಾದಕನಾದ ಅರ್ಜುನನೇ, ತತ್ರ = ಎರಡು ರೀತಿಯಾಗಿ ಹೇಳಿದ ಉತ್ಪತ್ತಿಯಲ್ಲಿಯೂ, ಪೌರ್ವದೇಹಿಕಂ = ಪೂರ್ವದೇಹದಲ್ಲಿ ಮಾಡಿದ್ದ, ತಂ = ಆ ಬುದ್ಧಿಸಂಯೋಗಂ = ಶ್ರೀಪರಮಾತ್ಮನಲ್ಲಿ ಮನೋಯೋಗವನ್ನು (ಅಂದರೆ ಧ್ಯಾನವನ್ನು) ಲಭತೇ = ಹೊಂದುತ್ತಾನೆ. ಆ ಮೇಲೆ, ತತೋಭೂಯಃ = ಹಿಂದಿನ ಶರೀರದಲ್ಲಿ ಮಾಡಿದ ಧ್ಯಾನಕ್ಕಿಂತಲೂ, ಹೆಚ್ಚಾಗಿ, ಸಂಸಿದ್ಧೌ = ಧ್ಯಾನ ಸಂಪೂರ್ತಿಯಾಗುವುದಕ್ಕಾಗಿ, ಯತತೇ ಚ = ಪ್ರಯತ್ನವಮಾಡುತ್ತಾನೆ. ॥ ೪೩ ॥

**ಭಾ ॥ ಅಯತಿರಪ್ರಯತ್ನಃ ॥ ೩೭-೪೩ ॥**

ಅ ॥ ಅಯತಿಃ = ಪ್ರಯತ್ನವಿಲ್ಲದವನು ॥ ೩೭-೪೩ ॥

**ಗೀ ॥ ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥ ೪೪ ॥**

ಅ ॥ ಸಃ = ಪೂರ್ವಜನ್ಮದಲ್ಲಿ ಯೋಗಭ್ರಷ್ಟನಾದ ಮನುಷ್ಯನು, ತೇನೈವ ಪೂರ್ವಾಭ್ಯಾಸೇನ = ಹಿಂದಿನ ಜನ್ಮದಲ್ಲಿ ಮಾಡಿದ ಅಭ್ಯಾಸದಿಂದಲೇ, ಅವಶೋಽಪಿ = ಧ್ಯಾನಾದಿಗಳನ್ನು ಮಾಡುವ ವಿಷಯದಲ್ಲಿ

ಬುದ್ಧಿಪೂರ್ವಕವಾಗಿ ಪ್ರವೃತ್ತಿ ಇಲ್ಲದವನಾದರೂ (ಮೊದಲು ಮಾಡಿದ ಅಭ್ಯಾಸಾನುಸಾರವಾಗಿ) ಹ್ರಿಯತೇ= (ವಿಷಯಾಸಕ್ತಿಯನ್ನು ಬಿಟ್ಟು ಬಲಾತ್ಕಾರದಿಂದ ಧ್ಯಾನಾದಿಗಳನ್ನು ಮಾಡುವ ವಿಷಯದಲ್ಲಿ ಪ್ರವೃತ್ತಿ) ಮಾಡುತ್ತಾನೆ ಯೋಗಸ್ಯ=ಧ್ಯಾನಯೋಗವನ್ನು, ಜಿಜ್ಞಾಸುರಪಿ=ತಿಳಿಯಬೇಕೆಂದು ಇಚ್ಛಿಸುವವನೂ ಕೂಡ, ಶಬ್ದಬ್ರಹ್ಮ=ವಿಧಿನಿಷೇಧರೂಪವಾದ ವಾಕ್ಯವನ್ನು, ಅತಿವರ್ತತೇ=ಅತಿಕ್ರಮಿಸುತ್ತಾನೆ. ಹಿ= ನಿಶ್ಚಿತವು (ಅಂದರೆ ವಿಧಿನಿಷೇಧಗಳನ್ನು ಅತಿಕ್ರಮಿಸುತ್ತಾನೆ ಮುಕ್ತನಾಗುತ್ತಾನೆ)

ವಿ || ಧ್ಯಾನಯೋಗವನ್ನು ತಿಳಿಯಲಿಚ್ಛಿಸುವವನಿಗೆ ಮೋಕ್ಷವಾಗುತ್ತದೆಂದಾಗುವಾಗ ಕೆಲವು ಕಾಲ ದಲ್ಲಿ ಆಗಲೀ ಧ್ಯಾನಿಸಿದವನಿಗೆ ಪುಣ್ಯಲೋಕಾದಿ ಪ್ರಾಪ್ತಿಯಾಗಿ ಮೋಕ್ಷವಾಗುತ್ತದೆಂಬುವುದು ಸುತರಾಂ ನಿಶ್ಚಿತವು || ೪೪ ||

ಭಾ || ಯೋಗಸ್ಯ ಜಿಜ್ಞಾಸುರಪಿ ಜ್ಞಾತವ್ಯೋ ಮಯಾ ಯೋಗ ಇತಿ ಯಸ್ಯಾತೀವೇಚ್ಛಾ ಸೋऽಪಿ ಶಬ್ದಬ್ರಹ್ಮಾತಿವರ್ತತೇ ಪರಂ ಬ್ರಹ್ಮ ಪ್ರಾಪ್ನೋತೀತ್ಯರ್ಥಃ || ೪೪ ||

ಅ || ಯೋಗವನ್ನು ತಿಳಿಯಲಿಚ್ಛಿಸುವವನೂ ಕೂಡ, ಅಂದರೆ ನನ್ನಿಂದ ಧ್ಯಾನಯೋಗವು ತಿಳಿಯ ಲ್ಪಡಬೇಕೆಂದು ಯಾರಿಗೆ ಅತ್ಯಂತ ಇಚ್ಛೆಯಿದೆಯೋ, ಅವನೂ ಕೂಡ ವೇದದಲ್ಲಿರತಕ್ಕ ವಿಧಿನಿಷೇಧ ಗಳನ್ನು ಅತಿಕ್ರಮಿಸುತ್ತಾನೆ ಅಂದರೆ ಪರಬ್ರಹ್ಮನನ್ನು ಹೊಂದುತ್ತಾನೆ ಮುಕ್ತನಾಗುತ್ತಾನೆಂದಭಿ ಪ್ರಾಯವು. (ಆದಕಾರಣ ಶಬ್ದಬ್ರಹ್ಮಾತಿವರ್ತತೇ ಎಂಬುವುದಕ್ಕೆ ವೇದಗಳಲ್ಲಿ ಹೇಳಿದ ಕರ್ಮಗಳನ್ನು ಮಾಡುವವರಿಗಿಂತ ಉತ್ಕೃಷ್ಟನಾಗುತ್ತಾನೆಂಬುವ ವ್ಯಾಖ್ಯಾನವು ಅಯುಕ್ತವೆಂದುಕ್ತವಾಯ್ತು) || ೪೪ ||

ತಾ || ಮೋಕ್ಷೋಪಾಯಸ್ಯ ಜಿಜ್ಞಾಸುರಪಿ ಕೇವಲಪಾಠಕಾತ್ | ವಿಶಿಷ್ಟಃ ಕಿಮು ತದ್ವಿ- ದ್ವಾನ್ ಕಿಂ ಪುನರ್ಯಸ್ತದಾಸ್ಥಿತ ಇತಿ ಪರಮಯೋಗೇ || ೪೪ ||

ಅ || ಮೋಕ್ಷೋಪಾಯವನ್ನು ತಿಳಿಯಲಿಚ್ಛಿಸುವವನೂ ಕೂಡ ಕೇವಲ ವೇದಪಾಠಕನಿಗಿಂತ ಶ್ರೇ ಷ್ಠನು ಅದನ್ನು ತಿಳಿದವನು ಶ್ರೇಷ್ಠನೆಂದು ಸುತರಾಂ ಸಿದ್ಧವು ಹೀಗೆ ಇರಲು ಮೋಕ್ಷೋಪಾಯದಲ್ಲಿ ಸ್ವಲ್ಪಕಾಲದಲ್ಲಾಗಲೀ ಅಲ್ಪವಾಗಿ ಪ್ರವೃತ್ತಿಮಾಡಿದವನು ಮುಕ್ತನಾಗುತ್ತಾನೆಂಬುವುದು ಏನಾಶ್ಚರ್ಯವು.

ವಿ || ಯೋಗವನ್ನು ತಿಳಿಯಬೇಕೆಂದು ಇಚ್ಛೆಯಿದ್ದವನೂ ಕೂಡ ಸಾಮಾನ್ಯವಾಗಿ ವೇದವು ಭಗ ವಂತನನ್ನು ಪ್ರತಿಪಾದಿಸುತ್ತದೆಂದು ತಿಳಿದ ಕಾರಣ ವೇದವು ಭಗವತ್ಪರವೆಂದು ತಿಳಿಯದ ಕೇವಲ ವೇದ ಪಾಠಕನಿಗಿಂತ ಉತ್ತಮನಾಗುತ್ತಾನೆ ಆಗ ಚೆನ್ನಾಗಿ ಭಗವತ್ತತ್ತ್ವವನ್ನು ತಿಳಿದವನು ತಿಳಿಯಬೇಕೆಂದು ಇಚ್ಛಿಸುವವನಿಗಿಂತ ಶ್ರೇಷ್ಠನೆಂಬುವುದು ಸುತರಾಂ ಸಿದ್ಧವು ಇನ್ನು ಚೆನ್ನಾಗಿ ತಿಳಿದು ಅಲ್ಪ ಕಾಲದಲ್ಲಿ ಧ್ಯಾನಮಾಡಿದವನು ಅವನಿಗಿಂತ ಉತ್ತಮನೆಂಬುವಲ್ಲಿ ಆಶ್ಚರ್ಯವೇನು? || ೪೪ ||

ಹೀ— ಧ್ಯಾನಯೋಗವನ್ನು ತಿಳಿಯಬೇಕೆಂಬುವ ಇಚ್ಛಾಮಾತ್ರದಿಂದ ಮೋಕ್ಷವಾಗುವುದಾದರೆ ಧ್ಯಾನ ವನ್ನು ಮಾಡುವುದು ವ್ಯರ್ಥವೆಂದರೆ—

ಗೀ || ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ |
ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಂ || ೪೫ ||

ಅ ॥ (ಯೋಗವನ್ನು ತಿಳಿದುಕೊಳ್ಳಬೇಕೆಂಬ ಇಚ್ಛಿಸುವವನೂ ಕೂಡ ಧ್ಯಾನೋಪಾಯವನ್ನು ತಿಳಿದುಕೊಂಡು) ಯತಮಾನಃ=ಧ್ಯಾನಕ್ಕಾಗಿ ಪ್ರಯತ್ನ ಮಾಡುವವನಾಗಿ, (ಆಮೇಲೆ) ಪ್ರಯತ್ನಾತ್=ಧ್ಯಾನಾನುಕೂಲ ಶ್ರವಣಮನನರೂಪ ಪ್ರಯತ್ನದಿಂದ, ಯೋಗೀ=ಧ್ಯಾನಯೋಗವುಳ್ಳವನಾಗಿ, ಸಂಶುದ್ಧಕಿಲ್ಬಿಷಃ=ಧ್ಯಾನಸಾಮರ್ಥ್ಯದಿಂದ ಪಾಪಗಳನ್ನೆಲ್ಲಾ ಕಳೆದುಕೊಂಡವನಾಗಿ, ಹೀಗೆ ಅನೇಕಜನ್ಮಸಂಸಿದ್ಧಃ=ಬಹುಜನ್ಮಗಳಲ್ಲಿ ಧ್ಯಾನಮಾಡಿ ಆ ಧ್ಯಾನಸಾಮರ್ಥ್ಯದಿಂದ ಅಪರೋಕ್ಷಜ್ಞಾನವನ್ನು ಹೊಂದಿದವನಾಗಿ, ತತಃ=ಅಪರೋಕ್ಷಜ್ಞಾನದೆಶೆಯಿಂದ, ಪರಾಂ ಗತಿಂ=ಉತ್ತಮವಾದ ಗತಿಯನ್ನು (ಮೋಕ್ಷವನ್ನು), ಯಾತಿ=ಹೊಂದುತ್ತಾನೆ ॥ ೪೫ ॥

ಭಾ ॥ (೧) ನೈಕಜನ್ಮನೀತ್ಯಾಹ । ಪ್ರಯತ್ನಾದಿತಿ । ಜಿಜ್ಞಾಸುರ್ಜ್ಞಾತ್ವಾ ಪ್ರಯತ್ನಂ ಕರೋತಿ । ಏವಮನೇಕಜನ್ಮಭಿಃ ಸಂಸಿದ್ಧೋ ಽಪರೋಕ್ಷಜ್ಞಾನೀ ಭೂತ್ವಾ ಪರಾಂ ಗತಿಂ ಯಾತಿ ॥ (೨) ಆಹ ಚ । ಅತೀವ ಶ್ರದ್ಧಯಾ ಯುಕ್ತೋ ಜಿಜ್ಞಾಸುರ್ವಿಷ್ಣುತತ್ಪರಃ । ಜ್ಞಾತ್ವಾ ಧ್ಯಾತ್ವಾ ತಥಾ ದೃಷ್ಟ್ವಾ ಜನ್ಮಭಿರ್ಬಹುಭಿಃ ಪುಮಾನ್ । ವಿಶೇನ್ನಾರಾಯಣಂ ದೇವಂ ನಾನ್ಯಥಾ ತು ಕಥಂಚನೇತಿ ನಾರದೀಯೇ ॥ ೪೫ ॥

ಅ ॥ (೧) (ಯೋಗವನ್ನು ತಿಳಿಯಬೇಕೆಂಬುವ ಇಚ್ಛಾಮಾತ್ರದಿಂದ ಮೋಕ್ಷವಾಗುವುದಾದರೆ ಯೋಗಾನುಷ್ಠಾನವೇ ವ್ಯರ್ಥವೆಂದರೆ-) ಒಂದೇ ಜನ್ಮದಲ್ಲಿ ಧ್ಯಾನ ಮಾಡಿದ್ದರಿಂದ ಮೋಕ್ಷವಾಗಲಾರದೆಂದು ಪ್ರಯತ್ನಾತ್ ಎಂಬುವ ಶ್ಲೋಕದಿಂದ ಹೇಳುತ್ತಾನೆ (ಜಿಜ್ಞಾಸುವು ಕೂಡ ಅನೇಕ ಜನ್ಮಗಳಲ್ಲಿ ಧ್ಯಾನ ಮಾಡಿ ಅಪರೋಕ್ಷಜ್ಞಾನವನ್ನು ಹೊಂದಿಯೇ ಮೋಕ್ಷವನ್ನು ಹೊಂದುತ್ತಾನೆ) (ಅಂದರೆ ಯೋಗವನ್ನು ತಿಳಿಯಬೇಕೆಂಬುವ ಇಚ್ಛಾಮಾತ್ರದಿಂದ ಆಗಲಾರದು) ಹೀಗೆ ಅನೇಕ ಜನ್ಮಗಳಲ್ಲಿ ಧ್ಯಾನಮಾಡಿ ಸಂಸಿದ್ಧಃ=ಅಪರೋಕ್ಷಜ್ಞಾನಿಯಾಗಿ ಮೋಕ್ಷವನ್ನು ಹೊಂದುತ್ತಾನೆ (೨) (ಈ ಅರ್ಥದಲ್ಲಿಯೇ ಪುರಾಣಸಮ್ಮತಿಯನ್ನು ಹೇಳುತ್ತಾರೆ—) ತಿಳಿಯಲಿಚ್ಛಿಸುವ ಪುರುಷನು ಅತ್ಯಂತ ಶ್ರದ್ಧಾಯುಕ್ತನಾಗಿ ಶಾಸ್ತ್ರಶ್ರವಣಾದಿಗಳಿಂದ ವಿಷ್ಣುಸರ್ವೋತ್ತಮತ್ವಜ್ಞಾನವುಳ್ಳವನಾಗಿ, ಬಹುಜನ್ಮಗಳಿಂದ ಭಗವತ್ತತ್ವವನ್ನು ತಿಳಿದುಕೊಂಡು ಶ್ರೀಪರಮಾತ್ಮನನ್ನು ಧ್ಯಾನಮಾಡಿ ಹಾಗೆಯೇ ಅಪರೋಕ್ಷೀಕರಿಸಿಕೊಂಡು ಶ್ರೀನಾರಾಯಣದೇವನನ್ನು ಹೊಂದುತ್ತಾನೆ (ಅಂದರೆ ವೈಕುಂಠಾದಿ ಲೋಕಕ್ಕೆ ಹೋಗುತ್ತಾನೆ) ಹೀಗೆ ಶ್ರವಣಮನನಧ್ಯಾನ ಅಪರೋಕ್ಷಜ್ಞಾನಗಳಿಲ್ಲದೆ ಸರ್ವಥಾ ಮೋಕ್ಷವಾಗಲಾರದು. ಎಂದು ನಾರದೀಯ ಪುರಾಣದಲ್ಲಿದೆ ॥ ೪೫ ॥

ಪೀ—ಯೋಗವನ್ನು ಸ್ತುತಿಸುತ್ತಾರೆ—

ಗೀ ॥ ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।
ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥ ೪೬ ॥

ಅ ॥ ಅರ್ಜುನ=ಅರ್ಜುನನೇ, ಯೋಗೀ=ಭಗವದ್ಧ್ಯಾನವನ್ನು ಮಾಡುವವನು, ತಪಸ್ವಿಭ್ಯಃ=ಕೃಚ್ಛ್ರಚಾಂದ್ರಾಯಣ ಮೊದಲಾದ ತಪಸ್ಸನ್ನು ಮಾಡುವ ಜನರಿಗಿಂತ, ಅಧಿಕಃ=ಶ್ರೇಷ್ಠನು ಜ್ಞಾನಿಭ್ಯೋಽಪಿ ಧ್ಯಾನವನ್ನು ಮಾಡದೆ ಧ್ಯಾನೋಪಾಯವನ್ನು ಮಾತ್ರ ತಿಳಿಯುವವರಿಂದ ಅಧಿಕಃ=ಶ್ರೇಷ್ಠನು, ಯೋಗೀ=ಧ್ಯಾನಮಾಡುವವನು, ಕರ್ಮಿಭ್ಯಶ್ಚ=ಯಜ್ಞಮೊದಲಾದ ಕರ್ಮಗಳನ್ನು ಮಾಡುವವರಿಗಿಂತಲೂ, ಅಧಿಕಃ=ಶ್ರೇಷ್ಠನೆಂದು. ಮತಃ=ಸಮ್ಮತನು, ತಸ್ಮಾತ್=ಯೋಗವು ಎಲ್ಲವುಗಳಿಗಿಂತಲೂ ಶ್ರೇಷ್ಠವಾದಪ್ರಯುಕ್ತವೇ, ಯೋಗೀ=ಭಗವದ್ಧ್ಯಾನಮಾಡುವವನು, ಭವ=ಆಗು ॥ ೪೬ ॥

ಪೀ—ಧ್ಯಾನಮಾಡುವವರಲ್ಲಿಯೂ ತಾರತಮ್ಯವನ್ನು ಹೇಳುತ್ತಾರೆ—

ಗೀ || ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ |
ಶ್ರದ್ಧಾವಾನ್ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ||೪೭||

ಅ || ಸರ್ವೇಷಾಂ ಯೋಗಿನಾಮಪಿ=ಎಲ್ಲಾ ಯೋಗಿಗಳ ಮಧ್ಯದಲ್ಲಿಯೂ, ಯಃ=ಯಾವಾತನು, ಶ್ರದ್ಧಾವಾನ್=ಶ್ರದ್ಧಾಪೂರ್ವಕ ಭಕ್ತಿಯುಳ್ಳವನಾಗಿ, ಮಾಂ=ನನ್ನನ್ನು, ಭಜತಿ=ಸೇವಿಸುತ್ತಾನೋ, ಸಃ=ಅವನು, ಯುಕ್ತಃ=ಯೋಗಯುಕ್ತನೆನಿಸುತ್ತಾನೆ (ಭಕ್ತಿಯುಳ್ಳವರಲ್ಲಿಯೂ) ಯಃ=ಯಾವಾತನು, ಮಾಂ ಭಜತೇ=ನನ್ನನ್ನು ವಿಶೇಷವಾಗಿ ಸೇವಿಸುತ್ತಾನೋ, (ಅವನು ಯುಕ್ತತರನು) (ಅವರಲ್ಲಿಯೂ) ಮದ್ಗತೇನ=ನನ್ನಲ್ಲಿಯೇ ಇಟ್ಟಿರುವ, ಅಂತರಾತ್ಮನಾ=ಅಂತಃಕರಣದಿಂದ (ಫಲಕಾಮನೆಯನ್ನು ತೊರೆದು) ಭಜತೇ=ಪೂಜಾದಿರೂಪವಾದ ಸೇವೆಯನ್ನು ಮಾಡುತ್ತಾನೋ, (ಅವನು) ಯುಕ್ತತಮಃ=ಯೋಗಿಗಳಲ್ಲಿ ಪರಮಶ್ರೇಷ್ಠನು ಎಂದು, ಮೇ=ನನಗೆ, ಮತಃ=ಸಮ್ಮತನು

ವಿ || ಯಮನಿಯಮಾದ್ಯಷ್ಟಾಂಗಾನುಷ್ಠಾನ ತತ್ಪರರಾದ ಯೋಗಿಗಳಿಗಿಂತಲೂ ತನ್ನಲ್ಲಿ ಭಕ್ತಿಯಿಟ್ಟು ಧ್ಯಾನಿಸುವ ಭಗವದ್ಭಕ್ತನು ಶ್ರೇಷ್ಠನು, ಎಂದುಕ್ತವಾಯ್ತು || ೪೭ ||

ಗೀ || ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಅಭ್ಯಾಸಯೋಗೋನಾಮ ಷಷ್ಠೋಽಧ್ಯಾಯಃ || ೬ ||

ಅ || ಹೀಗೆ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ಅಭ್ಯಾಸಯೋಗವೆಂಬ ಆರನೇ ಅಧ್ಯಾಯವು ಮುಗಿಯಿತು || ೬ ||

ಭಾ || (೧) ಜ್ಞಾನಿಭ್ಯೋ ಯೋಗಜ್ಞಾನಿಭ್ಯಃ | ತಪಸ್ವಿಭ್ಯಃ ಕೃಚ್ಛ್ರಾದಿಚಾರಿಭ್ಯಃ || (೨) ಉಕ್ತಂ ಚ | ಕೃಚ್ಛ್ರಾದೇರಪಿ ಯಜ್ಞಾದೇರ್ಧ್ಯಾನಯೋಗೋ ವಿಶಿಷ್ಯತೇ | ತತ್ರಾಪಿ ಶೇಷಶ್ರೀಬ್ರಹ್ಮಶಿವಾದಿಧ್ಯಾನತೋ ಹರೇಃ | ಧ್ಯಾನಂ ಕೋಟಿಗುಣಂ ಪ್ರೋಕ್ತಮಧಿಕಂ ವಾ ಮುಮುಕ್ಷುಣಾಮಿತಿ ಗಾರುಡೇ || (೩) ಅಜ್ಞಾತ್ವಾ ಧ್ಯಾಯಿನೋ ಧ್ಯಾನಾಜ್ಜ್ಞಾನಮೇವ ವಿಶಿಷ್ಯತೇ | ಜ್ಞಾತ್ವಾ ಧ್ಯಾನಂ ಜ್ಞಾನಮಾತ್ರಾದ್ಧ್ಯಾನಾದಪಿ ತು ದರ್ಶನಂ | ದರ್ಶನಾಚ್ಚೈವ ಭಕ್ತೇಶ್ಚ ನ ಕಿಂಚಿತ್ಸಾಧನಾಧಿಕಮಿತಿ ನಾರದೀಯೇ || || ೪೬,೪೭ ||

ಅ || (೧) ಜ್ಞಾನಿಭ್ಯಃ=ಯೋಗಿಜ್ಞಾನಿಗಳಿಗಿಂತ. ತಪಸ್ವಿಭ್ಯಃ=ಕೃಚ್ಛ್ರಚಾಂದ್ರಾಯಣ ಮೊದಲಾದ ತಪಸ್ಸನ್ನು ಮಾಡುವವರಿಗಿಂತ. (೨) (ಎರಡು ಶ್ಲೋಕಗಳ ಅರ್ಥವನ್ನು ಪುರಾಣವಾಕ್ಯದಿಂದ ಹೇಳುತ್ತಾರೆ—) ಕೃಚ್ಛ್ರಚಾಂದ್ರಾಯಣ ಮೊದಲಾದ ತಪಸ್ಸುಗಳಿಂದಲೂ ಯಾಗಾದಿರೂಪ ಕರ್ಮಗಳಿಂದಲೂ ಧ್ಯಾನಯೋಗವು ಶ್ರೇಷ್ಠವು. ಅದರಲ್ಲಿಯೂ ಶೇಷ ಲಕ್ಷ್ಮೀಚತುರ್ಮುಖ ರುದ್ರಾದಿಗಳನ್ನು ಧ್ಯಾನಮಾಡುವುದಕ್ಕಿಂತ ಶ್ರೀಪರಮಾತ್ಮನ ಧ್ಯಾನವು ಮೋಕ್ಷೇಚ್ಛುಗಳಿಗೆ ಅತ್ಯಧಿಕವಾದುದು, ಅನಂತಾ

ನಂತಫಲವು ಅಧಿಕವೆಂದು ಹೇಳಲ್ಪಟ್ಟಿದೆ, ಎಂದು ಗಾರುಡಪುರಾಣದಲ್ಲಿ ಹೇಳಿದೆ. (೩)(**ಜ್ಞಾನಿಭ್ಯೋಽಪಿ ಮತೋಽಧಿಕಃ** ಎಂಬುವುದು ಯೋಗಜ್ಞಾನವಿಷಯಕವೇ ಪರಬ್ರಹ್ಮಜ್ಞಾನವಿಷಯಕವಲ್ಲ ಎಂಬುದನ್ನು ಪುರಾಣವಾಕ್ಯದಿಂದ ದೃಢೀಕರಿಸುತ್ತಾರೆ–)ಯೋಗರೂಪ ಧ್ಯಾನಸ್ವರೂಪವನ್ನು ಸರಿಯಾಗಿ ತಿಳಿಯದೆ ಧ್ಯಾನಮಾಡುವವನ ಧ್ಯಾನಕ್ಕಿಂತ ಯೋಗರೂಪ ಧ್ಯಾನಸ್ವರೂಪಜ್ಞಾನವೇ ಶ್ರೇಷ್ಠವು ಯೋಗರೂಪ ಧ್ಯಾನ ಸ್ವರೂಪಜ್ಞಾನಮಾತ್ರಕ್ಕಿಂತ ಯೋಗರೂಪ ಧ್ಯಾನಸ್ವರೂಪವನ್ನು ಚೆನ್ನಾಗಿ ತಿಳಿದುಕೊಂಡು ಮಾಡುವ ಧ್ಯಾನವು ಶ್ರೇಷ್ಠವು ಅಂತಹ ಧ್ಯಾನಕ್ಕಿಂತಲೂ ಅಪರೋಕ್ಷಜ್ಞಾನವು ಶ್ರೇಷ್ಠವು ಅಂತಹ ಅಪರೋಕ್ಷಜ್ಞಾನಕ್ಕಿಂತಲೂ ನಿರವಧಿಕ ಭಕ್ತಿಯು ಶ್ರೇಷ್ಠವು ಅಂತಹ ಪರಮಪ್ರಸಾದ ಸಾಧನವಾದ ನಿರವಧಿಕ ಭಕ್ತಿಗಿಂತಲೂ ಅಧಿಕಾರಿಗಳಲ್ಲಿರುವ ಮೋಕ್ಷಸಾಧನಗಳಲ್ಲಿ ಶ್ರೇಷ್ಠವಾದುದು ಸಾಧನವು ಯಾವುದೊಂದೂ ಇಲ್ಲವೇ ಇಲ್ಲ, ಎಂದು ನಾರದೀಯ ಪುರಾಣದಲ್ಲಿ ಹೇಳಿದೆ. || ೪೬, ೪೭ ||

**ಭಾ || ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾಭಾಷ್ಯೇ ಷಷ್ಠೋಽಧ್ಯಾಯಃ || ೬ ||**

**ಅ** || ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾಭಾಷ್ಯದಲ್ಲಿ ಆರನೇ ಅಧ್ಯಾಯವು ಮುಗಿಯಿತು || ೬ ||

**ಪೀ**— ತಪಸ್ವಿಭ್ಯಃ ಎಂಬುವ ಶ್ಲೋಕದಿಂದ ಯೋಗವು ಸ್ತುತಿಸಲ್ಪಡುತ್ತದೆ ಅದರಲ್ಲಿ ಯೋಗವು ಜ್ಞಾನಕ್ಕೆ ಉಪಯುಕ್ತವಾಗಿರುವುದರಿಂದ ಜ್ಞಾನಕ್ಕಿಂತ ಉತ್ತಮವು ಹೇಗೆ ಎಂದರೆ ಅದಕ್ಕೆ ಸ್ಮೃತಿಯಿಂದಲೇ ಸಮಾಧಾನ ಹೇಳುತ್ತಾರೆ—

**ತಾ || (೧) ತಪಸಶ್ಚೈವ ಯಜ್ಞಾದೇರ್ಧ್ಯಾನಮೇವ ವಿಶಿಷ್ಯತೇ । ಅಜ್ಞಾನಿಧ್ಯಾನತೋ ಜ್ಞಾನಂ ಧ್ಯಾನಂ ಸಜ್ಞಾನಮುಚ್ಯತೇ || (೨) ತತ್ರಾಪಿ ಮಯ್ಯಭಕ್ತಸ್ಯ ನಾನ್ಯಧ್ಯಾನಂ ಪ್ರಯೋಜಕಂ । ಅನ್ಯಸಾಮ್ಯಾನ್ಯವಿದ್ಯೋ ಮೇ ಯಶ್ಚಾನ್ಯಂ ನೇತಿ ಪಶ್ಯತಿ । ಅವರತ್ವದೃಗುದಾಸೀನೋ ವಿದ್ವೇಷೀ ಚೇತ್ಯಭಕ್ತಯಃ || (೩) ಮದ್ಭಕ್ತೋಽಪಿ ಹಿ ಕಾರ್ಯಾರ್ಥಂ ಯೋ ಧ್ಯಾಯೇದನ್ಯದೇವತಾಂ(ತಾಃ) । ಪರಿವಾರತಾಮೃತೇ ತಸ್ಮಾತ್ಕೇವಲಂ ಮದುಪಾಸಕಃ । ವರೋಽನ್ಯಾನ್ಮದಧೀನಾಂಶ್ಚ ಸರ್ವಾನ್ ಜಾನನ್ವಿ(ನ್ಸು)ಶುದ್ಧಧೀರಿತಿ ಚ ದತ್ತಾತ್ರೇಯವಚನಂ || ೪೬,೪೭ ||**

**ಅ** || (೧) ಕೃಚ್ಛ್ರಚಾಂದ್ರಾಯಣ ಮೊದಲಾದ ತಪಸ್ಸಿಗಿಂತಲೂ ಜ್ಯೋತಿಷ್ಟೋಮಾದಿ ಕರ್ಮಗಳಿಗಿಂತಲೂ ಧ್ಯಾನವೇ ಶ್ರೇಷ್ಠವಾಗಿದೆ ಚೆನ್ನಾಗಿ ಧ್ಯಾನಪ್ರಕಾರವನ್ನು ತಿಳಿಯದಿರುವ ಮನುಷ್ಯನ ಧ್ಯಾನಕ್ಕಿಂತ ಚೆನ್ನಾಗಿ ಧ್ಯಾನಪ್ರಕಾರಜ್ಞಾನವೇ ಶ್ರೇಷ್ಠವು ಧ್ಯಾನಪ್ರಕಾರಜ್ಞಾನ ಸಹಿತವಾದ ಧ್ಯಾನವು ಧ್ಯಾನಪ್ರಕಾರಜ್ಞಾನ ಮಾತ್ರಕ್ಕಿಂತ ಶ್ರೇಷ್ಠವು (೨) (ಧ್ಯಾನಿಗಳಲ್ಲಿಯೂ ತಾರತಮ್ಯವನ್ನೇ ಹೇಳುತ್ತಾರೆ—) ಅವರಲ್ಲಿಯೂ ನನ್ನಲ್ಲಿ ಭಕ್ತಿಯಿಲ್ಲದವನಿಗೆ ದೇವತೆಗಳ ಧ್ಯಾನವು ಮೋಕ್ಷಕ್ಕೆ ಕಾರಣವಾಗುವುದಿಲ್ಲ (ಎಂತಹವನು ನನ್ನ ಅಭಕ್ತನೆಂದರೆ) ಯಾವನು ನನಗೆ ಬೇರೆ ದೇವತೆಗಳ ಸಾಮ್ಯವನ್ನೇ ತಿಳಿಯುವುದಿಲ್ಲವೋ ಯಾವನು ರುದ್ರಾದಿದೇವತೆಗಳಿಂದ ನಾನು ಭಿನ್ನನಲ್ಲವೆಂದು ತಿಳಿಯುತ್ತಾನೋ, ನನ್ನನ್ನು ಚತುರ್ಮುಖಬ್ರಹ್ಮರುದ್ರಾದಿಗಳಿಗಿಂತ ಅಧಮನೆಂದು ತಿಳಿದವನೂ, ನನ್ನ ಸರ್ವೋತ್ತಮತ್ವಾದಿ ವಿಷಯದಲ್ಲಿ ಉದಾ